ಶ್ರೀಃ

# ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ



ಪುಟ ೧೬]   ಪ್ರಜೋತ್ಪತ್ತಿ ಸಂವತ್ಸರ ಆಶ್ವಯುಜ ಮಾಸ   [ಸಂಚಿಕೆ ೩

ಅಕ್ಟೋಬರ್ ೧೯೩೧





ವಾರ್ಷಿಕ ಚಂದಾ ರೂ. ೪]   [ಬಿಡಿ ಸಂಚಿಕೆ ರೂ. ೧-೮-೦

ಅಕ್ಟೋಬರ್ ೧೯೩೧

202_32 ಬೆಂಗಳೂರು ಪ್ರೆಸ್, ಮೈಸೂರು ರೋಡ್, ಬೆಂಗಳೂರು ಸಿಟಿ

## ವಿಷಯ ಸೂಚಿಕೆ




ಶ್ರೀಃ

# ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ



ಸಂಪುಟ ೧೬] ಪ್ರಜೋತ್ಪತ್ತಿ ಸಂ॥ ಆಶ್ವಯುಜ ಮಾಸ [ಸಂಚಿಕೆ ೩

## ರೇವಾಕೋಟ್ಯಾಚಾರ್ಯ

ಮೈಸೂರಿನ ಪ್ರಾಚ್ಯ ಪುಸ್ತಕ ಭಂಡಾರದಲ್ಲಿ **ವೊಡ್ಡಾರಾಧಣ**[1] ಎಂಬ ಹೆಸರುಳ್ಳ (K. No. 415 ಸಂಖ್ಯೆಯುಳ್ಳ) ಒಂದು ಓಲೆಯ ಪುಸ್ತಕವಿರುವುದು. ಈ ಗ್ರಂಥವನ್ನು ಪ್ರತಿ ಮಾಡಿದಾತನು ಮಲ್ಲರಸನೆಂಬವನು. ಆತನು ಆ ಪುಸ್ತಕದ ಕೊನೆಯ ಭಾಗದಲ್ಲಿ ಹೀಗೆಂದು ಬರೆದಿರುವನು:—

"ಈ ಪೇಟ್ಟಿ ಪತ್ತೊಂಭತ್ತು ಕಥೆಗ * * * * ಟ್ಯಾಚಾರ್ಯರು ಪೇೞ್ದ ...ಡ್ಡಾರಾಧಣಂ ಸಂಪೂರ್ಣಂ. ಶುಭಮಸ್ತು. ಆನಂದ ಸಂವತ್ಸರದ ಕಾರ್ತೀಕ ಬಹುಳ ಪಾಡ್ಯ ...ೀಮವಾರದಲು ಮಲ್ಲರಸನು ಬರೆದ ವೊಡ್ಡಾರಾಧನೆ ಸಮಾಪ್ತಂ."

ಇಲ್ಲಿ ಹೇಳಿರುವ ಆನಂದ ಸಂವತ್ಸರವು ಯಾವ ಆನಂದ ಸಂವತ್ಸರವೊ ಅದು ...ತವಾಗಿ ಗೊತ್ತಾಗುವುದಿಲ್ಲ. ಆದರೆ ಡಾ॥ ಸ್ವಾಮಿಕಣ್ಣು ಪಿಳ್ಳೆಯವರ ಪಂಚಾಂಗದ ...ರ (Indian Ephemeris) ಗುಣಿಸಿ ನೋಡಿದಲ್ಲಿ, ಆನಂದ ಸಂವತ್ಸರ ಕಾರ್ತಿಕ ...ಳ ಪಾಡ್ಯ ಸೋಮವಾರವು ಕೆಳಗೆ ಕಾಣಿಸಿರುವ ವರ್ಷಗಳಲ್ಲಿ ಪ್ರಾಪ್ತ ...ುವುದು[2]:—

(೧) ಕ್ರಿ. ಶ. ೧೪೩೪ನೆಯ ಅಕ್ಟೋಬರ್ ೧೮ನೆಯ ತಾರೀಕು ಸೋಮವಾರ,

(೨) ಕ್ರಿ. ಶ. ೧೬೧೪ನೆಯ ನವೆಂಬರ್ ೭ನೆಯ ತಾರೀಕು ಸೋಮವಾರ.

ಮಲ್ಲರಸನು ಈ ಗ್ರಂಥವನ್ನು ಸಂಪ್ರತಿಸಿದ ಕಾಲವು ಈ ಎರಡು ಇಸವಿಗಳಲ್ಲಿ ...ವುದೋ ಒಂದಾಗಿರಬೇಕು. ಅದು ಇಂತಹುದೇ ಎಂಬುದನ್ನು ನಿರ್ಧರಿಸಿ ಹೇಳಲು ...ಕಾದಷ್ಟು ಆಧಾರವಿಲ್ಲವಾದರೂ ಕೆಳಗೆ ತೋರಿಸಿರುವ ಎರಡು ಕಾರಣಗಳಿಂದ ಆ ...ಲವು ಕ್ರಿ. ಶ. ೧೪೩೪ನೆಯ ವರ್ಷವೇ ಆಗಿರಬೇಕೆಂಬುದರಲ್ಲಿ ಸಂಶಯವಿಲ್ಲ.—

---

1 ಇದು ಸಂಸ್ಕೃತದ 'ವೃದ್ಧಾರಾಧನ', ಅಥವಾ 'ಬೃಹದಾರಾಧನ' ಎಂಬುದರ ಪ್ರಾಕೃತ ...ಪವಿರಬಹುದು. [ಆರಾಧನ-(ಧಾತು) ರಾಧ=ಸಾಧ, ಸಂಸಿದ್ಧೌ=ಸಿದ್ಧಿ, ಪ್ರಾಪ್ತಿ, ಸಾಧನೆ—ಇತ್ಯಾದಿ.]

2 ಈ ವಿಷಯವನ್ನು ದಯವಿಟ್ಟು ತಿಳಿಸಿದ ಶಾಸನದ ಇಲಾಖೆಯ ಶ್ರೀಮಾನ್ ಆರ್. ರಾಮರಾಯರು, ...ಎ. ಅವರಿಗೆ ಕೃತಜ್ಞನಾಗಿದ್ದೇನೆ.

(೧). ಈ ಪ್ರತಿಯಲ್ಲಿರುವ ಅಕ್ಷರಗಳು ವಿಜಯನಗರದ ದೊರೆಗಳ ಕ. ಶಾಸನಾಕ್ಷರಗಳನ್ನು ಬಹುಮಟ್ಟಿಗೆ ಹೋಲುತ್ತವೆ. ತೆಲುಗು ವರ್ಣಮಾ. 'ಉ'ಕಾರವೂ, 'ತ'ಕಾರವೂ, 'ಹ'ಕಾರವೂ ಇಲ್ಲಿ ದೊರೆಯುತ್ತವೆ.

(೨) ಈ ಪ್ರತಿಯಲ್ಲಿ 'ಐ'ಕಾರವು ನಿಯತವಾದೆಡೆಗಳಲ್ಲಿ, ಒಂದು ಸ ತಪ್ಪಾಗದ ಹಾಗೆ, ಉಪಯೋಗಿಸಲ್ಪಟ್ಟಿದೆ.

ಆದುದರಿಂದ, ಮಲ್ಲರಸನು ಕ್ರಿ. ಶ. ೧೪೩೪ರಲ್ಲಿ ಈ ಗ್ರಂಥವನ್ನು ಸಂಪ್ರತಿಸಿರಬೇಕ ಗ್ರಂಥ ರಚನಾ ಕಾಲವಾದರೊ ೧೪೩೪ಕ್ಕಿಂತ ಹಿಂದಿನದೆಂದು ಸ್ಪಷ್ಟವಾಗಿದೆ.

ಈ ಗ್ರಂಥವನ್ನು ರಚಿಸಿದವನು ಯಾರೆಂಬುದನ್ನು ಇನ್ನು ಕಂಡುಹಿಡಿಯಬೇಕಾಗಿದೆ. ಓಲೆಯ ಪ್ರತಿಯಲ್ಲಿ ೪ ಅಕ್ಷರಗಳಷ್ಟು ಭಾಗವು ಒಡೆದುಹೋಗಿರುವುದರಿಂದ ಗ್ರಂಥವನ್ನು ಹೇಳಿದವನ ಹೆಸರು ಪೂರ್ತಿಯಾಗಿ ತಿಳಿದುಬರುವುದಿಲ್ಲ. 'ಟ್ಯಾಚಾ' ಎಂದು ಮಾತ್ರ ಹೆಸರಿನ ಕೊನೆಯ ಭಾಗವು ಕಂಡುಬರುತ್ತದೆ. ಈತನ ಪೂರ್ಣವಾ ಹೆಸರು ಯಾವುದಿರಬೇಕು?

ಗತಿಸಿದ ಡಾ॥ ಫ್ಲೀಟ್ ಅವರು ತಮ್ಮ ಒಂದು ಲೇಖನದಲ್ಲಿ[3], 'ನಿಸಿಧಿ' ಮತ್ತು 'ಗುಡ್ಡ' ಎಂಬೆರಡು ಕನ್ನಡ ಪದಗಳ ಅರ್ಥವನ್ನು ಚರ್ಚಿಸಿರುತ್ತಾರೆ. ಲೇಖನದಲ್ಲಿ, ಪ್ರೊ॥ ಕೆ. ಬಿ. ಪಾಠಕರವರು 'ನಿಸಿಧಿ' ಎಂಬ ಶಬ್ದವು ಪ್ರಯುಕ್ತಗಿರುವ ಒಂದು ವಾಕ್ಯವನ್ನು ತಮ್ಮ ದೃಷ್ಟಿಗೆ ತಂದರೆಂದೂ, ಆ ವಾಕ್ಯವು "ಉಪಸ ಕೇವಲಿಗಳ ಕಥೆ" ಎಂಬ ಗ್ರಂಥದಲ್ಲಿ ದೊರೆಯುವುದೆಂದೂ ಡಾ॥ ಫ್ಲೀಟ್ ಅ ಬರೆದಿರುವರು. ಆ ವಾಕ್ಯವು ಹೀಗಿದೆ:—

"ರಿಸಿ ಸಮುದಾಯಮೆಲ್ಲಂ ದಕ್ಷಿಣಾ ಪಥದಿಂ ಬಂದು ಭಟಾರರ ನಿಸಿಧಿಯನೆಯ್ದಿದಾಗಳ್"

ಈ ವಾಕ್ಯವು **ವೊಡ್ಡಾರಾಧಣ**ದಲ್ಲಿರುವ 'ಭದ್ರಬಾಹು ಭಟ್ಟಾರರ ಕಥೆ'ಯಲ್ಲಿ ದೊರೆಯುತ್ತದೆ. ಆ ವಾಕ್ಯವನ್ನು ಅದರ ಹಿಂದೆ ಮುಂದೆ ಇರುವ ಭಾಗಗಳೊಡನೆ ಇಲ್ಲಿ ಬರೆಯಬಹುದು:—

"ಬಡಗ ನಾಡ ಪಸವು ತಿಳಿದುದೆಂಬುದನಾ ನಾಡಿಂದಂ ಬಂದರ್ ಪೇೞೆ ಕೇಳ್ದು ಸಾದು ಭಟಾರರ ನಿಸಿಧಿಗೆಯಂ ಬಂದಿಸಿ ಪೋಪಮೆಂದು ವಿಶಾಖಾಚಾರ್ಯರ್ ಮೊದಲಾಗೊಡೆಯ ರಿಸಿ ಸಮುದಾಯಮೆಲ್ಲಂ ದಕ್ಷಿಣಾ ಪಥದಿಂದಂ ಬಂದು ಭಟಾರರ ನಿಸಿಧಿಯನೆಯ್ದಿದಾಗಳ್ ಚಂದ್ರಗುಪ್ತ ಮುನಿಯುಂ ರಿಸಿಯರ್ಕಳ ಬರವಂ ಕಂಡಿದಿರಂ ಬಂದು ರಿಸಿ ಸಮುದಾಯಮೆಲ್ಲಮಂ ಬಂದಿಸಿದೊಡೆ ರಿಸಿಯರ್ಕಳಿಂತೆಂದು ಬಗೆದರ್."

ಇದರಿಂದ, **ವೊಡ್ಡಾರಾಧಣ**ಕ್ಕೆ 'ಉಪಸರ್ಗ ಕೇವಲಿಗಳ ಕಥೆ' ಎಂಬ ಮತ್ತೊಂದು ಹೆಸರು ಇದ್ದಿತೆಂಬುದು ಸ್ಪಷ್ಟವಾಗದೆ ಇರಲಾರದು. ಅಲ್ಲದೆ, ಆ. ರೇನೂ ಈ ಗ್ರಂಥಕ್ಕೆ ಅನುಚಿತವಲ್ಲ. ಪ್ರತಿಯೊಂದು ಕಥೆಯ ನಾಯಕ ಒಬ್ಬೊಬ್ಬ ಜೈನ ಸಂನ್ಯಾಸಿಯೂ ಯಾವುದೋ ಒಂದು ವಿಧವಾದ ಉಪಸಗ

[3] *The Indian Antiquary*, Vol. XII, p. 99.

[4] 'ಉಪಸರ್ಗ' ಎಂಬುದು ಜೈನ ಧರ್ಮದ ಪಾರಿಭಾಷಿಕ ಶಬ್ದ. ದೇವ ನಾರಕ ತಿರ್ಯಗ್ಜ ರಿಂದುಂಟಾಗುವ ಹಿಂಸೆ, ತೊಂದರೆ, ಕೇಡು, ಅಟ್ಟುಳಿ ಎಂದು ಈ ಪದಕ್ಕೆ ಅರ್ಥ.

ಷ್ಟಪಿದ್ದು ಅದರಿಂದಲೇ ಸತ್ತು ಸ್ವರ್ಗಸುಖವನ್ನು ಸಂಪಾದಿಸುವನು. ಆ ...ತ್ರೆಯು ಈ ಕಥೆಗಳಲ್ಲಿ ಅಡಗಿರುವುದರಿಂದ ಇದನ್ನು 'ಉಪಸರ್ಗ ಕೇವಲಿಗಳ ಕಥೆ' ...ಂದು ಕರೆದಿರುವುದು ಉಚಿತವಾಗಿಯೇ ಇರುವುದು.

ಪ್ರೊ॥ ಕೆ. ಬಿ. ಪಾಠಕರವರು ತೊಱೆಗಲ್ಲಿನ ಒಂದು ಕನ್ನಡ ಶಾಸನವನ್ನು ...ರಿತು ಒಂದು ಲೇಖನವನ್ನು[5] ಬರೆದಿದ್ದಾರೆ. ಈ ಲೇಖನದಲ್ಲಿ ಅವರು 'ಪಂಚ ಮಹಾ ಶಬ್ದ' ಎಂಬ ಪದದ ಅರ್ಥದ ವಿಚಾರವಾಗಿ ಸ್ವಲ್ಪ ವಿವರಣೆಯನ್ನು ಬರೆದಿರುವರು. ಹಾಗೆ ಬರೆಯುವಂದು ರೇವಾಕೋಟ್ಯಾಚಾರ್ಯನ ಗ್ರಂಥದಲ್ಲಿಯ ಈ ಕೆಳಗೆ ಕಾಣಿಸಿರುವ ಭಾಗವನ್ನು ಎತ್ತಿ ಬರೆದಿರುತ್ತಾರೆ:—

"ಪೆಂಡವಾಸದ ಸೂಳೆಯರ್ ಪೆಱಗನೇಱೆ ಇಕ್ಕೆಲದೊಳಂ ಚಾಮರಂಗಳನಿಕ್ಕುತುಂ ಬರೆ ಬೆಳ್ಗೊಡೆಗಳುಂ[6] ಪಾಳಿಕೇತನ ಧ್ವಜಂಗಳುಂ ಚಂದ್ರಾದಿತ್ಯರ್ಕಳುಂ ಸಿಂಹ ವ್ಯಾಘ್ರ ಮಕರ ಮತ್ಸ್ಯ ಧ್ವಜಂಗಳುಂ ಮೊದಲಾಗೊಡೆಯ ರಾಜಚಿಹ್ನಂಗಳುಂ ಮುಂದೆ ಪರಿಯೆ ಪಂಚ ಮಹಾ ಶಬ್ದಂಗಳುಂ ಬದ್ದವಣದ ಪಱೆಗಳುಂ ಬಾಜಿಸೆ ವಂದಿ ಮಾಗಧ ಯಾಚಕ ಪ್ರಭೃತಿ ಜನಂಗಳ್ಗಂ ದೀನಾನಾಥರ್ಕಳ್ಗಂ ತುಷ್ಟಿ ದಾನಮಂ ...ುಡುತ್ತುಂ ಪೋಗಿ ಸಹಸ್ರ ಕೂಟ ಚೈತ್ಯಾಲಯಮನೆಯ್ದಿ ಪಟ್ಟವರ್ಧನದಿಂದಿೞಿದು ಬಸದಿಯಂ ತ್ರಿಪ್ರದಕ್ಷಿಣಂ ಗೆಯ್ದು ದೇವರಂ ಬಂದಿಸಿ * * * ಇಂತೆಂದಂ" (ವಿದ್ಯುಚ್ಚೋರಂ).

ಈ ಭಾಗವನ್ನೇ ಕವಿಚರಿತೆಕಾರರು ತಮ್ಮ ಗ್ರಂಥದಲ್ಲಿ ಸೇರಿಸಿಕೊಂಡಿರುವರು. ಆದರೆ ಪ್ರೊ॥ ಪಾಠಕರವರು ಆ ಗ್ರಂಥದ ಹೆಸರೇನೆಂಬುದನ್ನು ಇಲ್ಲಿ ಹೇಳಿಲ್ಲ. ಅವರು ...ುದ್ಧರಿಸಿರುವ ವಾಕ್ಯವು **ವೊಡ್ಡಾರಾಧಣ**ದಲ್ಲಿಯ ಹತ್ತೊಂಬತ್ತು ಕಥೆಗಳಲ್ಲಿ ಒಂದಾದ 'ವಿದ್ಯುಚ್ಚೋರನೆಂಬ ರಿಸಿಯ ಕಥೆ'ಯಲ್ಲಿ ಈ ರೀತಿ ಇದೆ:—

"ಪೆಂಡವಾಸದ ಸೂಳೆಯರಿರ್ಬರ್ ಪೊಱಗೇಱಿರ್ಕೆಲದೊಳಂ ಚಾಮರಂಗಳನಿಕ್ಕುತ್ತಂ ಬೆಳ್ಗೊಡೆಗಳುಂ ಪಾಳಿಧ್ವಜಂಗಳುಂ ತಜಿನೆ ವಳಯಿಗೆಗಳುಂ ಚಂದ್ರಾದಿತ್ಯರ್ಕಳುಂ ಸಿಂಹ ವ್ಯಾಘ್ರ ಮಕರ ಮತ್ಸ್ಯಂಗಳೆಂದಿವು ಮೊದಲಾಗೊಡೆಯ ರಾಜ ಚಿಹ್ನಂಗಳುಂ ಮುಂದೆ ಪಂಚ ಮಹಾ ಶಬ್ದಂಗಳುಂ ಬದ್ದವಣದ ಪಱೆಗಳುಂ ಬಾಜಿಸೆ ವಂದಿ ಮಾಗಧ ಯಾಚಕ ಪ್ರಭೃತಿಗಳ್ಗಂ ದೀನಾನಾಥಾಂಧರ್ಕಳ್ಗಂ ತುಷ್ಟಿ ದಾನಮಂ ಕೊಡುತ್ತಂ ಪೋಗಿ ಸಹಸ್ರ ಕೂಟ ಚೈತ್ಯಾಲಯಮನೆಯ್ದಿ ಪಟ್ಟವರ್ಧನದಿಂದಿೞಿದು ಬಸದಿಯಂ ತ್ರಿಪ್ರದಕ್ಷಿಣಂ ಗೆಯ್ದು ದೇವರಂ ನಿವೇದಿಸಿ ಗುಣಧರರೆಂಬಾಚಾರ್ಯರಂ ಗುರು ಭಕ್ತಿಗೆಯ್ದು ಬಂದಿಸಿ ಇಂತೆಂದಂ ಭಟಾರಾ ಸಂಸಾರಮೆಂಬ ಸಮುದ್ರದೊಳ್ ಮುೞುಗುತ್ತಿರ್ದೆನ್ನಂ ಮುೞುಗಲೀಯದೆತ್ತಿಂ" ಇತ್ಯಾದಿ.

ಇದರಿಂದ, ರೇವಾಕೋಟ್ಯಾಚಾರ್ಯನು ಬರೆದ ಗ್ರಂಥವು **ವೊಡ್ಡಾರಾಧಣ**ವೇ ಆಗಿರಬೇಕೆಂದು ಸ್ಪಷ್ಟವಾಗುತ್ತದೆ.

ಒಟ್ಟಿನಲ್ಲಿ, **ವೊಡ್ಡಾರಾಧಣ**ವೆಂಬ ಕೃತಿಗೆ 'ಉಪಸರ್ಗ ಕೇವಲಿಗಳ ಕಥೆ' ಎಂಬ ಹೆಸರಿದ್ದಿತೆಂದೂ ಅದನ್ನು ರಚಿಸಿದವನು ರೇವಾಕೋಟ್ಯಾಚಾರ್ಯನೆಂದೂ ಸಿದ್ಧವಾಯಿತು. ಇದನ್ನೇ **ವೊಡ್ಡಾರಾಧಣ**ದ ಪ್ರತಿಯ ಅಂತ್ಯದಲ್ಲಿರುವ * * * ಟ್ಯಾಚಾರ್ಯ ಎಂಬ ಅಸಂಪೂರ್ಣವಾದ ಹೆಸರೂ ಸಮರ್ಥಿಸುತ್ತದೆ.

5 The *Indian Antiquary*, Vol. XII, p. 96.

6 ಕವಿಚರಿತೆಯಲ್ಲಿ (1. 282) 'ಬೆಳ್ಗೊಡೆಗೆ' ಎಂದು ತಪ್ಪಾಗಿ ಅಚ್ಚಾಗಿದೆ.





ಇನ್ನು, ರೇವಾಕೋಟ್ಯಾಚಾರ್ಯನು ಯಾವ ಕಾಲದಲ್ಲಿ ಜೀವಿಸುತ್ತಿದ್ದನೆಂಬುದನ್ನು ವಿಚಾರಿಸಬೇಕಾಗಿದೆ. ಇವನು ತನ್ನ ವಿಷಯವಾಗಿ ಏನನ್ನೂ ಹೇಳಿಕೊಂಡಿಲ್ಲ. ಇವನು ಇಂತಹ ಕಾಲದಲ್ಲಿದ್ದನೆಂದು ಹೇಳುವುದಕ್ಕೆ ಪ್ರಬಲವಾದ ಆಧಾರವಾವುದೂ ಇಲ್ಲ. ಕವಿಚರಿತೆಕಾರರು ಇವನ ಕಾಲವು ಸು. ೧೧೮೦ ಆಗಿರಬಹುದೆಂದು ಅಭಿಪ್ರಾಯ ಪಟ್ಟಿರುವರು. ಇವರಿಗೆ ಆಧಾರ ಪ್ರೊ॥ ಕೆ. ಬಿ. ಪಾಠಕರವರು ಬರೆದಿರುವ ಈ ವಾಕ್ಯ:—

"I will now quote a passage from a Jaina author who lived in times when the expression panchamahasabda was still in use in a living language."

ಇವರು ಪ್ರಕಟಿಸಿರುವ ತೊಱಿಗಲ್ಲು ಶಾಸನದ ಕಾಲ, ಕ್ರಿ. ಶ. ೧೧೮೮. ಈ ಶಾಸನದ ಎರಡನೆಯ ಪಙ್ಕ್ತಿಯಲ್ಲಿ 'ಪಂಚಮಹಾಶಬ್ದ' ಎಂಬುದು ಕಂಡು ಬರುತ್ತದೆ. ಆದುದರಿಂದ ಕವಿಚರಿತೆಕಾರರು ರೇವಾಕೋಟ್ಯಾಚಾರ್ಯನ ಕಾಲವನ್ನು ಸು. ೧೧೮೦ ಎಂದು ಕೊಟ್ಟಿರುವುದಾಗಿ ನಮಗೆ ತೋರುತ್ತದೆ. ವಿಚಾರಿಸಿ ನೋಡಿದಲ್ಲಿ, ಇದೇನೂ ಪ್ರಬಲವಾದ ಆಧಾರವಲ್ಲ. ರೇವಾಕೋಟ್ಯಾಚಾರ್ಯನು ೧೧೮೦ಕ್ಕಿಂತ ಹಿಂದೆಯಾಗಲಿ, ಆ ಕಾಲಕ್ಕಿಂತ ಈಚೆಗಾಗಲಿ ಇದ್ದಿರಬಹುದೆಂಬುದಾಗಿ ಹೇಳುವುದಕ್ಕೆ ಯಾವ ಅಭ್ಯಂತರವೂ ತೋರುವುದಿಲ್ಲ. ಆತನು ೧೪೩೪ಕ್ಕಿಂತ ಹಿಂದಿನವನಾಗಿರಬೇಕೆಂದು ಮಾತ್ರ ಧಾರಾಳವಾಗಿ ಹೇಳಬಹುದು. ಹೀಗಿರುವಲ್ಲಿ, ಇವನ ಕಾಲವು ಯಾವುದಿರಬಹುದು?

ಈ ಕವಿಯ ಕಾಲವನ್ನು ಸ್ವಲ್ಪ ಹೆಚ್ಚು ಕಡಿಮೆ ಊಹಿಸಿ ಹೇಳುವುದಕ್ಕೆ ಆಧಾರವು ಇವನ ಗ್ರಂಥದಲ್ಲಿ ದೊರೆಯುವ ಕೆಲವು ಪ್ರಾಚೀನ ಪ್ರಯೋಗಗಳು. ೧೪೩೪ರಲ್ಲಿ ಲಿಖಿತವಾದ ಈ ಪ್ರತಿಯಲ್ಲಿಯೇ ಅಂತಹ ಹಳೆಯ ಪ್ರಯೋಗಗಳಿರುವುವೆಂಬುದನ್ನು ನೋಡಿದರೆ, ರೇವಾಕೋಟ್ಯಾಚಾರ್ಯನ ಬಾಯಿಂದ ಹೊರಟ ಭಾಷೆಯ ಸ್ವರೂಪವು ಹೇಗಿದ್ದಿರಬೇಕೆಂದು ವಾಚಕರೇ ಊಹಿಸಿಕೊಳ್ಳಬಹುದಾಗಿದೆ. ಅಂತಹ ಕೆಲವು ಹಳೆಯ ಪ್ರಯೋಗಗಳನ್ನು ಇಲ್ಲಿ ಕೊಟ್ಟಿದೆ:—

(೧) ಹಳಗನ್ನಡದಲ್ಲಿ ಪ್ರಥಮ ಪುರುಷ ಪುಂಸ್ತ್ರೀಲಿಂಗಗಳ ಆಖ್ಯಾತ ವಿಭಕ್ತಿ ಪ್ರತ್ಯಯಗಳು—(ಏಕ.) 'ಅಂ,' 'ಅಳ್'; (ಬಹು.) 'ಅರ್' ಇವು ಕೆಲವು ವೇಳೆ 'ಒಂ,' 'ಒಳ್' ಮತ್ತು 'ಒರ್' ಎಂಬ ರೂಪಗಳನ್ನು ಕ್ರಮವಾಗಿ ಧರಿಸುತ್ತವೆ. 'ಅಱಿವೊಂ, ಕೆಯ್ವೊಂ, ಸಲ್ವೊಂ' ಎಂಬ ರೂಪಗಳು ಕ್ರಿ. ಶ. ೬೮೦–೬೯೬ನೆಯ ಒಂದು ಶಾಸನದಲ್ಲಿಯೂ, 'ಕಿಡಿಪೊಂ' ಎಂಬ ರೂಪವು ೭೦೭ನೆಯ ಒಂದು ಶಾಸನದಲ್ಲಿಯೂ, 'ಅಪ್ಪೊರ್, ಉಳ್ಳೊರ್' ಎಂಬ ರೂಪಗಳು ೭೫೦–೮೧೪ನೆಯ ಒಂದು ಶಾಸನದಲ್ಲಿಯೂ, 'ಎಂಬೊಳ್' ಎಂಬ ರೂಪವು ೭೭೮ನೆಯ ಒಂದು ಶಾಸನದಲ್ಲಿಯೂ ಇವೆ ಎಂದು ತಿಳಿದುಬರುತ್ತದೆ[8]. ನಪುಂಸಕ ಲಿಂಗದಲ್ಲಿಯೂ ಕೂಡ 'ಒದು' ಪ್ರತ್ಯಯವಿದೆ (ಶಾಸನ ಪದ್ಯ ಮಂಜರಿ, ಪು. ೨, ಪದ್ಯ ೬). ಈ ಒಕಾರ ಯುಕ್ತವಾದ ರೂಪಗಳು ಪೊನ್ನನ (ಸು. ೯೫೦) ಶಾಂತಿಪುರಾಣದಲ್ಲಿಯೂ, ಚಾವುಂಡರಾಯ

8 Kittel's Kannada Grammar, p. 119.

ಪುರಾಣದಲ್ಲಿಯೂ (೯೩೮) ವಿಪುಲವಾಗಿ ದೊರೆಯುತ್ತವೆ. ಈ ಕಾಲವಾದ ಮೇಲೆ ಹುಟ್ಟಿದ ಚಂಪೂಗ್ರಂಥಗಳಲ್ಲಿ ಈ ಒಕಾರಯುಕ್ತವಾದ ರೂಪಗಳು ದೊರೆಯುವುದು ಅಪೂರ್ವ[8]. ಹತ್ತನೆಯ ಶತಮಾನದ ಚಂಪೂಕಾವ್ಯಗಳಲ್ಲಿ ಕೂಡ ಇಂತಹ ರೂಪಗಳು ಗದ್ಯ ಭಾಗಗಳಲ್ಲಿ ವಿಶೇಷವಾಗಿ ದೊರೆಯುವುವೇ ಹೊರತು ಪದ್ಯ ಭಾಗಗಳಲ್ಲಿ ಹೆಚ್ಚಾಗಿ ದೊರೆಯುವಂತಿಲ್ಲ. ಆದುದರಿಂದ ಈ ಒಕಾರಯುಕ್ತವಾದ ಪ್ರಯೋಗಗಳು ದೊರೆಯುವುದು ಗದ್ಯ ಗ್ರಂಥಗಳ ವೈಲಕ್ಷಣ್ಯವಿರಬಹುದೆಂದು ತೋರುತ್ತದೆ. **ವೊಡ್ಡಾರಾಧಣ**ದಲ್ಲಿಯಾದರೂ ಇಂತಹ ರೂಪಗಳು ಹೆಚ್ಚಾಗಿ ದೊರೆಯುತ್ತವೆ. ಈ ಗ್ರಂಥದಿಂದ ಮುಂದೆ ತೆಗೆದು ಬರೆದಿರುವ ಮೂರು ಕಥೆಗಳಿಂದ ಈ ವಿಷಯವು ಸ್ಪಷ್ಟವಾಗುತ್ತದೆ.

(೨) 'ಇರ್ದನ್, ಪೊರ್ದಿದನ್' ಎಂಬ ಪದಗಳ ರೂಪಗಳು **ವೊಡ್ಡಾರಾಧಣ**ದಲ್ಲಿ 'ಇಱ್ದೊನ್, ಪೊಱ್ದಿದೊನ್' ಎಂದಾಗಿವೆ. ಇವುಗಳನ್ನು ನೋಡಿದರೆ, 'ಇರ್, ಪೊರ್ದು' ಎಂಬ ಧಾತುಗಳ ರೂಪಗಳು 'ಇಱ್, ಪೊಱ್ದು' ಎಂದಿರಬೇಕೆಂದು ತೋರುತ್ತದೆ. ಆದರೆ ಈ ರೂಪಗಳು ಎಲ್ಲಿಯೂ ಪ್ರಯೋಗವಾಗಿರುವಂತೆ ಕಂಡುಬರುವುದಿಲ್ಲ. ಹತ್ತನೆಯ ಶತಮಾನಕ್ಕೆ ಹಿಂದೆ ಹುಟ್ಟಿದ ಕೆಲವು ಶಾಸನಗಳಲ್ಲಿ[9] 'ಇಱ್' ಧಾತುವಿನಿಂದ ಜನ್ಯವಾದ ಕೆಲವು ರೂಪಗಳಿವೆ. ರೇಫೆಪರಸಿದ ಕೆಲವು ದಡ್ಡಕ್ಕರಗಳು ಮೊದಲು ಱಕಾರಯುಕ್ತವಾಗಿದ್ದುವು. ಉದಾ.—ಕರ್ಚು, ಕಱ್ಚು, ಇತ್ಯಾದಿ. ಇಂತಹ ಕೆಲವು ಶಬ್ದಗಳ ಮಾದರಿಯ ಮೇಲೆ 'ಇರ್ದು' ಎಂಬ ಪದವನ್ನು 'ಇಱ್ದು' ಎಂದಿರಬೇಕೆಂದು ಲೇಖಕರು ಭಾವಿಸಿದ ಹಾಗೆ ತೋರುತ್ತದೆ[10]. ಈ ವಿಧವಾದ ಪ್ರಯೋಗಗಳು ಹತ್ತನೆಯ ಶತಮಾನದಲ್ಲಿ ಪ್ರಚುರವಾಗಿದ್ದುವು.

(೩) 'ಅಮ್ಮ' ಎಂಬ ಪದವು 'ಅಪ್ಪ' ಎಂಬ ಅರ್ಥದಲ್ಲಿ ಹಲವು ಕಡೆ ಪ್ರಯೋಗಿಸಲ್ಪಟ್ಟಿದೆ.—

(೧) ಇದಲ್ತಿದಱಿಮ್ಮನುಮೆನ್ನನಾಂಪುದೇ (ಪಂಪ ಭಾರತ, xi. ೩೩)

(೨) ತಾನಕ್ಕೆ ತಮ್ಮಮ್ಮನಕ್ಕೆಸಲಂಬಂ ತಿರುವಾಯ್ಗೆ ತಂದಱಿವರೇ
(ಗದಾಯುದ್ಧ, ii. ೧೧)

(೩) ಗುರುಸೂನು ತಾನುಮಣಮಮ್ಮನಲಂಪುಮದೆತ್ತವೋದುದೊ (ಗ. ಯು., iv. ೫೦)

(೪) ಎಮ್ಮಮ್ಮನಪ್ಪ ಶಂತನುಗಂ ಯೋಜನಗಂಧಿಯೆನಿಸಿದ ಸತ್ಯವತಿಗಂ ಚಿತ್ರಾಂಗದನುಂ ವಿಚಿತ್ರವೀರ್ಯನುಮೆಂಬಿರ್ವರ್ತನೂಜರಾದರ್ (ಗ. ಯು., v. ೪೪ ವ.)

ಇಂತಹ ಪ್ರಯೋಗವು ಹತ್ತನೆಯ ಶತಮಾನದ ಗ್ರಂಥಗಳಲ್ಲಿ ಕಂಡುಬರುತ್ತದೆ. **ವೊಡ್ಡಾರಾಧಣ**ದಲ್ಲಿರುವ ಸುಕುಮಾರ ಸ್ವಾಮಿಯ ಕಥೆಯಲ್ಲಿ ಬರುವ ನಾಗಶ್ರೀಯ ವೃತ್ತಾಂತದಲ್ಲಿ ಈ ಪ್ರಯೋಗವು ಹಲವು ಬಾರಿ ಬಂದಿದೆ.

---

8 'ಆವನ್' ಎಂಬುದಕ್ಕೆ 'ಆವೊನ್' ಎಂಬ ರೂಪವನ್ನು ನಾಗಚಂದ್ರನ (ಸು. ೧೧೦೦) "ಆವೊಂ ವಾದಿ ಕಥಾತ್ರಯ ಪ್ರವಣದೊಳ್ . . . ." ಎಂಬಲ್ಲಿ ನೋಡಬಹುದು.

9 ಶ್ರವಣಬೆಳಗೊಳ, (ಪ್ರಥಮ ಮುದ್ರಣ), 26, 98, 108 (ಕಾಲ, ಸು. ೭೦೦)

10 'ಇರ್ದ' ಎಂಬ ಪದಕ್ಕೆ 'ಇಱ್ದ, ಇಳ್ದ' ಎಂಬ ರೂಪಗಳಿದ್ದ ಹಾಗೆ ತಿಳಿದುಬರುತ್ತದೆ: ಶ್ರವಣಬೆಳಗೊಳ ೫೯ನೆಯ ಶಾಸನ—"ನುಡಿದನೆ ಕಾವುದನೇ ಇಱ್ದಿಗಿಡದಿರು . . . . . ."—ಶಬ್ದಮಣಿದರ್ಪಣದಲ್ಲಿ ಉದಾಹೃತವಾಗಿರುವ ಈ ಪದ್ಯದಲ್ಲಿಯೇ 'ಇರ್ದ' ಎಂಬ ಪಾಠಭೇದವಿದೆ.

(೪) **ವೊಡ್ಡಾರಾಧಣವು** ರಚನೆಯಲ್ಲಿಯೂ ಶೈಲಿಯಲ್ಲಿಯೂ ಚಾವುಂಡರಾಯ ಪುರಾಣವನ್ನು ಹೋಲುತ್ತದೆ. ಆದರೆ ಇದರಲ್ಲಿ ಚಾವುಂಡರಾಯ ಪುರಾಣದಲ್ಲಿರುವಷ್ಟು ಸಂಸ್ಕೃತ ಪದ ಪ್ರಯೋಗವಿಲ್ಲ.

(೫) ಹರಿಷೇಣನೆಂಬವನು 'ಬೃಹತ್ಕಥಾ ಕೋಶ' ಎಂಬ ಒಂದು ಕಾವ್ಯವನ್ನು ಬರೆದಿದ್ದಾನೆ. ಆತನ ಕಾಲ ಕ್ರಿ. ಶ. ೯೩೧[11]. ಇದರಲ್ಲಿ ಭದ್ರಬಾಹುವಿನ ಚರಿತ್ರೆಯು ಹೇಳಿದೆ. ಇಲ್ಲಿ ಹೇಳಿರುವ ಕಥೆಗೂ **ವೊಡ್ಡಾರಾಧಣ**ದಲ್ಲಿ ಹೇಳಿರುವ 'ಭದ್ರಬಾಹು ಭಟಾರ'ರ ಕಥೆಗೂ ವಿಶೇಷ ಸಾಮ್ಯವಿದೆ. ಒಂದು ವೇಳೆ ರೇವಾಕೋಟ್ಯಾಚಾರ್ಯನು ಹರಿಷೇಣನ ಸಂಸ್ಕೃತ ಗ್ರಂಥದ ಆಧಾರದ ಮೇಲೆ ಈ ಕಥೆಯನ್ನು ಕನ್ನಡದಲ್ಲಿ ಬರೆದಿರಬಹುದು. ಹೀಗಿದ್ದಲ್ಲಿ ಅವನು ಕ್ರಿ. ಶ. ೯೩೧ರಿಂದ ಈಚೆಗೆ ಇದ್ದಿರಬೇಕೆಂದು ತೋರುತ್ತದೆ.

ಈ ಎಲ್ಲ ವಿಷಯಗಳನ್ನೂ ಪರಿಶೀಲಿಸಿ ನೋಡಿದರೆ **ವೊಡ್ಡಾರಾಧಣವು** ಚಾವುಂಡರಾಯ ಪುರಾಣದಷ್ಟೇ ಪ್ರಾಚೀನವಾಗಿರಬೇಕೆಂದು ತೋರುತ್ತದೆ. ಎರಡೂ ಸಮಕಾಲಿಕ ಕೃತಿಗಳೆಂದು ಹೇಳುವುದಕ್ಕೆ ಪ್ರತಿಬಂಧಕವೇನೂ ತೋರುವುದಿಲ್ಲ. ಒಂದು ವೇಳೆ **ವೊಡ್ಡಾರಾಧಣವು** ಇನ್ನೂ ಸ್ವಲ್ಪ ಪ್ರಾಚೀನವಾಗಿರಬಹುದೆಂದು ತೋರುತ್ತದೆ. ಪೂರ್ವದ ಹಳಗನ್ನಡವು ಹಳಗನ್ನಡದ ಸ್ವರೂಪವನ್ನು ಧರಿಸಿಕೊಳ್ಳುವುದಕ್ಕೆ ಮೊದಲುಮಾಡಿದಾಗ ಈ ಗ್ರಂಥವು ಬರೆಯಲ್ಪಟ್ಟಿರಬಹುದು. **ವೊಡ್ಡಾರಾಧಣವು** ಹೆಚ್ಚು ಪ್ರಾಚೀನವಲ್ಲವೆಂದು ಹೇಳುವುದಾದರೆ ಅದು ಸುಮಾರು ಹತ್ತನೆಯ ಶತಮಾನದ ಆದಿಯಲ್ಲಿ ಹುಟ್ಟಿರಬೇಕೆಂದು ಹೇಳಬೇಕಾಗುತ್ತದೆ. ಆದುದರಿಂದ, ಇದರ ಕಾಲವು ಸು. ೯೨೦ ಆಗಿರಬಹುದೆಂದು ಸದ್ಯಕ್ಕೆ ಊಹಿಸಬಹುದಾಗಿದೆ. ಹೀಗಿದ್ದಲ್ಲಿ, ನಮಗೆ ದೊರೆತಿರುವ ಗದ್ಯ ಗ್ರಂಥಕಾರರಲ್ಲಿ ರೇವಾಕೋಟ್ಯಾಚಾರ್ಯನೇ ಮೊದಲನೆಯವನಾಗುತ್ತಾನೆ.

**ವೊಡ್ಡಾರಾಧಣವು** ಗದ್ಯ ರೂಪದಲ್ಲಿರುವ ಕಥೆಗಳ ಗೊಂಚಲು. ಇದೊಂದು ಹೊಸ ಮಾದರಿಯ ಗ್ರಂಥ. ಇದನ್ನು 'ಗದ್ಯ ಕಥೆ' ಎಂದು ಕರೆಯಬಹುದು. ನೃಪತುಂಗನು 'ಗದ್ಯ ಕಥೆ'ಯ ಸ್ವರೂಪವನ್ನು ಹೀಗೆ ನಿರೂಪಿಸಿದ್ದಾನೆ:—

ಕಂ|| ಮಿಗೆ ಕನ್ನಡ ಕಬ್ಬಂಗಳೊ |
ಳಗಣಿತ ಗುಣ ಗದ್ಯ ಪದ್ಯ ಸಮ್ಮಿಶ್ರಿತಮಂ ||
ನಿಗದಿಸುವರ್ ಗದ್ಯಕಥಾ |
ಪ್ರಗೀತಿಯಿಂ ತಚ್ಚಿರಂತನಾಚಾರ್ಯರ್ಕಳ್ || (ಕ. ರಾ. ಮಾ., i. ೨೭)

ಈ ಲಕ್ಷಣವು **ವೊಡ್ಡಾರಾಧಣ**ಕ್ಕೆ ಬಲು ಚೆನ್ನಾಗಿ ಅನ್ವಯಿಸುತ್ತದೆ. ಇದರಲ್ಲಿ 'ಅಗಣಿತ ಗುಣ'ವುಳ್ಳ ಗದ್ಯದ ನಡುನಡುವೆ ಪದ್ಯಗಳೂ ಹಲವು ಬಾರಿ ಬಂದಿವೆ. ನಾಗವರ್ಮನು ಕಥೆ, ಅಥವಾ ಆಖ್ಯಾಯಿಕೆಯ ಲಕ್ಷಣವನ್ನು ಹೀಗೆ ಹೇಳಿದ್ದಾನೆ:—

ಗದ್ಯದೊಳೆ ಸಮೆದುಮಂತವು |
ಹೃದ್ಯ ವಚಃಪ್ರೌಢಿಗಳ್ ಕಥಾಖ್ಯಾಯಿಕೆಯೊಳ್ || (ಕಾ. ಲೋ., ೯೪೯)

11 ಶ್ರವಣಬೆಳಗೊಳದ ಶಾಸನಗಳು, (ದ್ವಿತೀಯ ಮುದ್ರಣ), ಪುಟ ೭೭.

**ವೊಡ್ಡಾರಾಧಣ**ದಲ್ಲಿಯ ಹಲವು ಕಥೆಗಳಲ್ಲಿ ಬರಿಯ ಗದ್ಯವೇ ಇದೆ. ಆದುದರಿಂದ ನಾಗವರ್ಮನು ಹೇಳುವ ಲಕ್ಷಣವೂ ಇದಕ್ಕೆ ಅನ್ವಯಿಸುತ್ತದೆ. ಚಾವುಂಡರಾಯ ಪುರಾಣದಲ್ಲಿಯೂ ಈ ಲಕ್ಷಣಗಳು ಕಂಡುಬರುತ್ತವೆ. ಆದುದರಿಂದ ಇವೆರಡೂ 'ಗದ್ಯ ಕಥೆ'ಗಳ ಜಾತಿಗೆ ಸೇರಿವೆ. **ವೊಡ್ಡಾರಾಧಣ**ವನ್ನು ಬರೆದಾತನೇ ಕೆಲವು ಕಥೆಗಳನ್ನು 'ಚಿತ್ರಕಥೆ' ಎಂದು ಕರೆದಿದ್ದಾನೆ.

ನೃಪತುಂಗನು ವಿಮಲೋದಯಾದಿ ಗದ್ಯಗ್ರಂಥಕಾರರೊಡನೆ ರೇವಾಕೋಟ್ಯಾಚಾರ್ಯನ ಹೆಸರನ್ನು ಸೇರಿಸದೆ ಹೋದರೂ ಆ 'ಚಿರಂತನಾಚಾರ್ಯರ್ಕಳ' ಗುಂಪಿನಲ್ಲಿ ಈತನೇಕೊಬ್ಬನಾಗಿರಬಾರದು? ಈತನ ಕಾಲವೊಂದು ನಿಷ್ಕೃಷ್ಟವಾಗಿ ನಿರ್ಣೀತವಾದರೆ "ಗದ್ಯಾಶ್ರಮ ಪದ ಗುರುತಾ ಪ್ರತೀತಿಯಂ ಕೈಕೊಂಡ" ಪೆಂಪು ನಮಗೆ ತಿಳಿದಿರುವ ಮಟ್ಟಿಗೆ ಈಗ ರೇವಾಕೋಟ್ಯಾಚಾರ್ಯನಿಗೆ ಸಂದರೂ ಸಲ್ಲಬಹುದು.

## ವೊಡ್ಡಾರಾಧಣ

ಕಥೆಗಳನ್ನು ಬರೆಯಲು ತೊಡಗುವುದಕ್ಕೆ ಮೊದಲು ರೇವಾಕೋಟ್ಯಾಚಾರ್ಯನು ತನ್ನ ಗ್ರಂಥಕ್ಕೆ ಪೀಠಿಕಾ ರೂಪವಾಗಿ ಹೀಗೆ ಬರೆದಿದ್ದಾನೆ:—

"ನಮಃ ಶ್ರೀ ವರ್ಧಮಾನಾಯ ನಿರ್ಧೂತ ಕಲಿಲಾತ್ಮನೇ ।
ಸಾಲೋಕಾನಾಂ ತ್ರಿಲೋಕಾನಾಂ ಯದ್ವಿದ್ಯಾ ದರ್ಪಣಾಯತೇ ॥

.............ಂತರ್ಗೆ ನಮಸ್ಕಾರಂ ಗೆಯ್ದು ದೇವೋಪಸರ್ಗ ಮನುಷ್ಯೋಪಸರ್ಗ ತಿರಿಕೋಪಸರ್ಗ ಚೇತನೋಪಸರ್ಗಮೆಂದಿಂತು ಚತುರ್ವಿಧಮಪ್ಪುಪಸರ್ಗಮು..........ವುಂ ನೀರಟಿಕ್ಕೆ ಮೊದಲಾಗೊಡೆಯಯಿಪ್ಪತ್ತೆರಡು ಪರೀಷಹಂಗಳಂ ಸೈರಿಸಿ ಅಯ್ದುಮಿಂದ್ರಿಯಂಗಳಂ ಗೆಲ್ದು ಬಾಹ್ಯಾಭ್ಯಂತರ........ಪರಿಗ್ರಹಂಗಳಂ ತೋಱಿ ದ್ವಾದಶ ವಿಧಮಪ್ಪ ತಪದೊಳ್ನೆಗೞ್ದು ಪ್ರಾಯೋಪಗಮನದಿಂ ಸನ್ಯಸನಂ ಗೆಯ್ದು ಕರ್ಮಕ್ಷಯಂ ಗೆಯ್ದು ಮೋಕ್ಷಕ್ಕೆ ವೋದರ್. ಮತ್ತಂ........ ಸರ್ವಾರ್ಥಸಿದ್ಧಿಯೊಳ್ ಪುಟ್ಟಿದ ಮಹಾಪುರುಷರ್ಕಳ ಕಥೆಗಳಂ ಪೇೞ್ವಲ್ಲಿ ಮುನ್ನ ಸುಕುಮಾರಸ್ವಾಮಿಯ ಕಥೆಯಂ ಪೇೞ್ವೆಂ".

ಇದರಲ್ಲಿ ಹೇಳಿರುವ ಹತ್ತೊಂಬತ್ತು ಕಥೆಗಳು ಯಾವುವೆಂದರೆ:—

(೧) ಸುಕುಮಾರಸ್ವಾಮಿಯ ಕಥೆ, (೨) ಸುಕೌಶಳ ಸ್ವಾಮಿಯ ಕಥೆ, (೩) ಗಜಕುಮಾರನ ಕಥೆ, (೪) ಸನತ್ಕುಮಾರ ಚಕ್ರವರ್ತಿಯ ಕಥೆ, (೫) ಭದ್ರಬಾಹು ಭಟಾರರ ಕಥೆ, (೬) ಅಂಣಿಕಾ ಪುತ್ರನ ಕಥೆ, (೭) ಲಲಿತ ಘಂಟೆಯ ಕಥೆ, (೮) ಧರ್ಮಘೋಷ ಭಟಾರರ ಕಥೆ, (೯) ಸಿರಿದಿಂಣ ಭಟಾರರ ಕಥೆ, (೧೦) ವೃಷಭಸೇನ ಭಟ್ಟಾರರ ಕಥೆ, (೧೧) ಕಾರ್ತಿಕ ರಿಸಿಯ ಕಥೆ, (೧೨) ಅಭಯ ಘೋಷರೆಂಬ ರಿಸಿಯ ಕಥೆ, (೧೩) ವಿದ್ಯುಚ್ಚೋರನೆಂಬ ರಿಸಿಯ ಕಥೆ, (೧೪) ಗುರುದತ್ತ ಭಟ್ಟಾರರ ಕಥೆ, (೧೫) ಚೇಲಾತಾ ಪುತ್ರನ ಕಥೆ, (೧೬) ದಂಡಕನೆಂಬ ರಿಸಿಯ ಕಥೆ, (೧೭) ಮಹೇಂದ್ರದತ್ತಾಚಾರ್ಯರ್ ಮೊದಲಾದ ಐನೂಱು ರಿಸಿಗಳ ಕಥೆ, (೧೮) ಚಾಣಕ್ಯ ರಿಸಿಯ ಕಥೆ, (೧೯) ವೃಷಭಸೇನರೆಂಬ ರಿಸಿಯ ಕಥೆ.

ಪ್ರತಿಯೊಂದು ಕಥೆಯ ಆದಿಯಲ್ಲಿಯೂ ಒಂದೊಂದು ಗಾಹೆಯು ಬರುತ್ತದೆ. ಇದು ಆ ಕಥೆಯ ಸಾರಾಂಶವನ್ನು ನಿರೂಪಿಸುತ್ತದೆ. ಈ ಗಾಹೆಗಳು ಷಟ್ಪದೀ ಕಾವ್ಯಗಳ ಪ್ರತಿಯೊಂದು ಸಂಧಿಯ ಆದಿಯಲ್ಲಿರುವ ಸೂಚನೆಗಳಿದ್ದ ಹಾಗೆ. ಈ ಗಾಹೆಗಳಾದ ಮೇಲೆ ಅವುಗಳ ಅರ್ಥ ವಿವರಣೆಯು ಬರುತ್ತದೆ. 'ಅದೆಂತೆಂದೊಡೆ' ಎಂದಾದ ಮೇಲೆ ಕಥೆಯು ಮೊದಲಾಗುತ್ತದೆ. ಪ್ರತಿಯೊಂದು ಕಥೆಯೂ 'ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ' ಎಂದು ಮುಗಿಯುತ್ತದೆ.

**ವೊಡ್ಡಾರಾಧಣ**ವು ಆ ಕಾಲದ ಭಾಷಾ ಸ್ವರೂಪವನ್ನು ತಿಳಿದುಕೊಳ್ಳುವುದಕ್ಕೆ ಸಹಾಯವನ್ನು ಮಾಡುವುದಲ್ಲದೆ ಆ ಕಾಲದ ಜನ ಜೀವನವನ್ನೂ ತಿಳಿಯಲು ವಿಪುಲವಾದ ಸಹಾಯವನ್ನು ಮಾಡುತ್ತದೆ. ಗ್ರಾಮ ಸಂರಕ್ಷಣೆ, ನಾಗರ ಪೂಜೆ, ಕಳ್ಳತನವನ್ನು ಮಾಡುವ ರೀತಿ—ಇಂತಹ ವಿಷಯಗಳು ಈ ಗ್ರಂಥದಲ್ಲಿ ಬರುತ್ತವೆ. ಜನಗಳ ನಂಬಿಕೆ, ಆಚಾರ ವ್ಯವಹಾರಗಳು, ನಡೆ ನುಡಿಗಳು—ಇವೆಲ್ಲವನ್ನೂ ಈ ಗ್ರಂಥದಿಂದ ತಿಳಿದುಕೊಳ್ಳಬಹುದಾಗಿದೆ. **ವೊಡ್ಡಾರಾಧಣ**ದಲ್ಲಿ ಅನೇಕ ಸಂಸ್ಕೃತ ಪ್ರಾಕೃತ ಕನ್ನಡ ಪದ್ಯಗಳು ಉದಾಹರಿಸಲ್ಪಟ್ಟಿವೆ. ಆ ಸಂಸ್ಕೃತ ಶ್ಲೋಕಗಳಲ್ಲಿ ಒಂದೆರಡು ಭರ್ತೃಹರಿಯ ನೀತಿ ಶತಕದಲ್ಲಿ ದೊರೆಯುತ್ತವೆ. ಪ್ರಾಕೃತ ಗಾಹೆಗಳಿಗೆ ಆಕರವು ಗೊತ್ತಾಗುವುದಿಲ್ಲ. ಕನ್ನಡ ಪದ್ಯಗಳನ್ನು ರೇವಾಕೋಟ್ಯಾಚಾರ್ಯನು ತಾನೇ ಬರೆದನೊ, ಇನ್ನಾವ ಗ್ರಂಥದಿಂದಾದರೂ ಎತ್ತಿ ಬರೆದನೊ ಎಂಬುದನ್ನು ನಿಶ್ಚಯಿಸಿ ಹೇಳಲಾಗುವುದಿಲ್ಲ. ಮುಂದೆ ಉದ್ಧರಿಸಿರುವ ಕಥೆಗಳಲ್ಲಿ ಬರತಕ್ಕ ಕನ್ನಡ ಪದ್ಯಗಳನ್ನು ಬಿಳಿದು ಉಳಿದುವುಗಳನ್ನು ಇಲ್ಲಿ ಬರೆಯಬಹುದು. ಇವು ಗುರುದತ್ತ ಭಟಾರರ ಕಥೆಯಲ್ಲಿ ದೊರೆಯುತ್ತವೆ.—

(೧) ಸಾವನಿತೊಂದವಸ್ಥೆ ತನಗಾವೆಡೆಯೊಳ್ ತಱಿಸಂದು ತತ್ತ್ವಮಂ ।
ಭಾವಿಸಿ ಬಾಹ್ಯ ವಸ್ತುಗಳೊಳೊಂದದೆ ತನ್ನೊಳೆ ನಿಂದು ಕರ್ಮನಿ ॥
ಶ್ರಾವಣೆಯಿಂ ವಿಶೋಧಿ ದೊರೆಕೊಂಡೊಡೆ ಗೆಲ್ದು ಪರೀಷಹಂಗಳಂ ।
ಜೀವಮನಿಂತು ಸಂತ ಮೊದಲಿಂ ಕಳೆಯೆಂಬುದು ಜೈನ ಶಾಸನಂ ॥

(೨) ಆರೊಳಮಿಲ್ಲ ಮೋಹಮೆನಗೆಂಗೆ ಜಿನೇಂದ್ರ ಪದಂಗಳುಗ್ರ ಸಂ ।
ಸಾರ ಹರಂಗಳೆಂಗೆ ಪೆಱದಿಲ್ಲೆನಗೆನ್ನಱಿವಲ್ಲದೆಂಗೆ ನಿಂ ॥
ದಾರಯೆ ಧರ್ಮಮೊಂದೆ ಶರಣೆಂಗೆ ಪಲಾಲಮನೊಲ್ಲೆ ನೀಂ ನಮ ।
ಸ್ಕಾರಮೆ ಸಾಲ್ಗುಮೆಂಬಿನಿತನೆಂಗೆನಲಾರ್ಪಡೆ ಜೀವಿತಾಂತ್ಯದೊಳ್ ॥

ಈ ಗ್ರಂಥದಿಂದ ಮೂರು ಕಥೆಗಳನ್ನು ಉದ್ಧರಿಸಿ ಬರೆದಿದೆ. ಮಾತೃಕೆಯಲ್ಲಿ 'ಱ' ಕಾರವಿಲ್ಲ. ಅದನ್ನು ಉಚಿತವಾದೆಡೆಗಳಲ್ಲಿ ಸೇರಿಸಿ ಬರೆದಿದೆ. ಇನ್ನುಳಿದುವೆಲ್ಲವೂ ಮಾತೃಕೆಯಲ್ಲಿದ್ದ ಹಾಗೆಯೇ ಇದೆ. (ಇಲ್ಲಿ ಕೊಟ್ಟಿರುವ ಕಥೆಗಳ ಪಾಠವನ್ನು ಸಂಪೂರ್ಣವಾಗಿ ಪರಿಷ್ಕರಿಸಿಲ್ಲ; ಸಾಮಾನ್ಯವಾಗಿ, ಪ್ರಯೋಗಗಳನ್ನು ತಿದ್ದುವ ಸ್ವಾತಂತ್ರ್ಯವನ್ನು ವಹಿಸಿಲ್ಲ; ಅಲ್ಲಲ್ಲಿ ವಾಚಕರ ಸೌಕರ್ಯಕ್ಕಾಗಿ ವಿರಾಮ ಚಿಹ್ನೆಗಳನ್ನು ಹಾಕಿದೆ. ಕಥೆಗಳನ್ನು ಬೇರೆ ಬೇರೆ ಭಾಗಗಳಾಗಿ ವಿಭಾಗಿಸಿದೆ.)

**ಡಿ. ಎಲ್. ನರಸಿಂಹಾಚಾರ್, ಎಂ.ಎ.**

# ಸುಕುಮಾರ ಸ್ವಾಮಿಯ ಕಥೆ

ಗಾಹೆ ॥ ಭಲ್ಲುಂಕಿಯೇ ಣಿಣಿಂಚಂ ಖಂಜಂತೋ ಘೋರವೇದಣಂತೋಪಿ ।
ಆರಾಧಣಂ ಪವಂಣೊ ಝೂಣೇಣ ಅವಂತಿ ಸುಕುಮಾರೊ ॥

ಭಲ್ಲುಂಕಿಯೆ—ಮುನ್ನಿನ ಜನ್ಮಾಂತರ * * * * * *
ಯಿಂದಂ ಣಿಂಚಂ ಕಂಜಂತೊ—ಮೂಱು ದಿವಸಂ ನಿರಂತರಮಿರುಳುಂ ಪಗಲುಂ, ತಿ * *
* * * *

ಅದೆಂತೆಂದೊಡೆ—

* * * * * ಪೊಟಿಲ್. ಅದನಾಳ್ವೊಂ ಅತಿಬಳನೆಂಬರಸಂ. ಆತನ ಮಹಾದೇವಿ ಮನೋಹರಿಯೆಂಬೊಳ್ * * * * * * ಲಾವಣ್ಯ ಸೌಭಾಗ್ಯ ಕಾಂತಿ ಹಾವ ಭಾವ ವಿಲಾಸ ವಿಭ್ರಮಂಗಳನೊಡೆಯಳ್. ಅಂತವರ್ಗಳಿಷ್ಟ ವಿಷಯ ಕಾಮ ಭೋಗಂಗಳನನುಭವಿಸುತ್ತಿರೆ * * * * ಆತನ ಭಾರ್ಯೆ ಕಾಶ್ಯಪಿಯೆಂಬಳ್. ಆ ಇರ್ವರ್ಗ್ಗಂ ಮಕ್ಕಳಗ್ನಿಭೂತಿ ವಾಯು ಭೂತಿ ಯೆಂಬವರ್ಗಳ್. ತಾಯ್ ತಂದೆವಿರ ಕೇಳ್ವಿಯಂಗೆಯ್ಯದಾವೇದಂ ಮೊದಲಾಗೊಡೆಯ * * * * * ದೆ ಪಡೆದ ಕಡವರಮಂ * * ಂ ಗೆಯ್ಯುತ್ತುಂ ಸಪ್ತ ವ್ಯಸನಾಭಿಭೂತರಾಗಿ ನೆಗೞುತ್ತಿರೆಯಿರೆ, ಪಲ ಕಾಲದಿಂ ತಂದೆ ಕೞಿದೊಡೆ ಮಕ್ಕಳೊಳಾರಿ * * * * * * ಂದು ಪೇೞ್ದೊಡವರ್ಗೆ ಬೞಿಯಟ್ಟಿ ಬರಿಸಿ ಮಜ್ಜನಂ ಮಾಡಿಸಿ ಉಡಿಸಿ ತುಡಿಸಿ ಊಡಿ ತಂಬುಲಂಗೊಟ್ಟುಬ್ಬೆಗಂಬಡದಿರಿಮೆಂದು ನುಡಿದವರ್ಗ್ಗಳು * * * * * * * * ವು ದಿವಸದಿಂ ಬೞಿಯಟ್ಟಿ ವರಿಸಿ—ನೀವಾವಾ ಓದುಗಳಂ ಬಲ್ಲಿರೆಂದಿರ್ವರುಮಂ ಬೆಸಗೊಂಡೊಡವರ್ಗ್ಗಳ್ ತಲೆಯಂ ಬಾಗಿ ಮಱು ಮಾತು * * * * * * * ಸಭೆಯೊಳಿರ್ದವರ್ಗ್ಗಳೆಲ್ಲಂ—ಇವರ್ ಮೂರ್ಖರೇಸು [ಂ] ಓದುಗಳನಱಿಯರ್ ಸಪ್ತ ವ್ಯಸನಾಭಿಭೂತರೆಂದರಸಂಗೆ ಪೇೞ್ದೊಡೆ ಅರಸಂ * * * * * * * * ಪದವಿಯಂ ಬಾೞುವಂ ಪ್ರತಿಪತ್ತಿಯುಮಂ ಕೊಟ್ಟುದಂ ಕೇಳ್ವಿರ್ವರುಮುಜ್ಜಗಂಬಟ್ಟು ವೈರಾಗ್ಯ ಪರಾಯಣರಾಗಿ ಕಪ್ಪಡಮುಟ್ಟು * * * * * ಮಂತ್ರಿಯೆಮ್ಮಣ್ಣಂ ಸೂರ್ಯಮಿತ್ರನೆಂಬೊಂ. ಎಲ್ಲಾ ಓದುಗಳುಮಂ ಬಲ್ಲಂ. ಆತ [ಂ] ನಿಮ್ಮನೋದಿಸಿ ಯೋಗ್ಯರಂ ಮಾಡುವಂತಿರೆ ನೀವೋದಿಸಿ ಕಲ್ಪಿಸಿಯೋಲೆಯಂ ಬರೆಯಿಸಿ * * ಕಯ್ಯೊ * * * * ಗಿ ನಿಮ್ಮ ಮಾವನ ಪಕ್ಕದಳೋದಿಮೆಂದೋಲೆಯಂ ಬರೆಯಿಸಿ ಕೊಟ್ಟೊಡವರ್ಗ್ಗಳುಂ ತಾಯಂ ಬೀೞ್ಕೊಂಡು ಕತಿಪಯ ದಿವಸಂಗಳಿಂ ರಾಜಗೃಹಮನೆಯ್ದಿ ಸೂರ್ಯಮಿತ್ರ * * * * * ಪೋಗಿ ಕಂಡು ಓಲೆಯನಿಕ್ಕಿದೊಡೆ ಸೂರ್ಯಮಿತ್ರಂ—ಎಲ್ಲಿಂ ಬಂದಿರಾರೋಲೆಯೆಂದು ಬೆಸಗೊಂಡೊಡೆ—ಕೌಸಂಬಿಯಿಂ ಬಂದೆವು. ನಿಮ್ಮ ತಂಗಿಯಪ್ಪ ಕಾಶ್ಯಪಿಯಟ್ಟಿದೊಡೆ * * * * * * *

ಬಾಜಿಸಿ ನೋಡಿ ಸೋಮಶರ್ಮಂಗಱಿದುದುಮಂ ಮಂತ್ರಿ ಪದವಿ ಪೆಱಗಾರ್ದುದು
ದುಮಂ ಮಕ್ಕಳ್ ಸಪ್ತ ವ್ಯಸನಾಭಿಭೂತರಾಗಿ ಬಾೞಂ ಕೆಟ್ಟುದುಮಂ ಶಾಸ್ತ್ರಜ್ಞರುಂ
ಬುದ್ಧಿಯೊಡೆಯ * * * * ತು ಮಾಡಿಮೆಂದು ಮಕ್ಕಳಂ
ತಸಗೆಸಿತೊಪ್ಪಿಸಿಯಟ್ಟಿದುದುಮನಿಂತಿವೆಲ್ಲಮಂ ಬಾಜಿಸಿ ನೋಡಿ—ಇವಂದಿರ್ಗೆ ಪಸರಂ
ಗೊಟ್ಟಪ್ಪೊಡೆ ಮುನ್ನಿನಂತುಕ್ಕಿ ಕಿಡುವರೆ * * * * *
ಅಗ್ನಿಭೂತಿ ವಾಯುಭೂತಿಗಳ್ಗಿಂತೆಂದಂ—ಕಾಶ್ಯಪಿಯೆಂಬಳೆಸಗೆ ತಂಗೆಯಿಲ್ಲ. ಸೋಮ
ಶರ್ಮನೆಂಬ ಮಯ್ದುನನುಮಿಲ್ಲ. ಸೂರ್ಯಮಿತ್ರನೆಂಬ ಪೆಸರೆನಗುಂಟು. ನಿಮ್ಮ ಮಾವ
ನೆಂದವರ್ಗೆ ನುಡಿದುಂ * *
* * * * * * * * * * *
* * * * * * * * * * *
* * * * * * * * * * *
ಅನುಕೂಲದೊಳೋಜರ್ಗೆಱಗಿ ಪೊಡೆವಟ್ಟು ವಿದ್ಯಾ ಪ್ರಾರಂಭಂ ಗೆಯ್ದರ್. ಸೂರ್ಯ
ಮಿತ್ರನುಮವರನಿರುಳುಂ ಪಗಲುಂ ನಿರಂತರಂ ನಿರ್ಬಂಧದಿಂದೋದಿಸಿ ಪದಿನೆಂಟು
ವರುಷ * * * * ಮುಂ ಮೂಱಂಗಮುಂ ಪದಿನೆಂಟು
ಧರ್ಮಶಾಸ್ತ್ರಂಗಳುಂ ಮೀಮಾಂಸಾ ನ್ಯಾಯವಿಸ್ತರಂ ವ್ಯಾಕರಣಂ ಪ್ರಮಾಣಂ
ಛಂದಮಲಂಕಾರ ನಿಘಂಟು ಕಾವ್ಯ ನಾಟಕಂ * * * * *
ಸಾಮುದ್ರಿಕಂ ಶಾಲಿಹೋತ್ರಂ ಪಾಳಕಾಪ್ಯಂ ಹಾಸಿತಂ ಚರಕಾಶ್ವಿನಿಮತಂ
ಬಾಹಲಂ ಸುಸ್ರುತಂ ಕ್ಷಾರಪಾಸೀಯಂ ಮೊದಲಾಗೊಡೆಯ ನರವೈದ್ಯಂಗಳುಂ
ಜ್ಯೋತಿಷ * * * * * * * ಮೊದಲಾಗೊಡೆಯ
ಶಾಸ್ತ್ರಂಗಳೆಲ್ಲಮಂ ನೆಱೆಯೆ ಕಲ್ಪಿಸಿ ಯೋಗ್ಯರ್ ಮಾಡಿದೊಡವರ್—ನಿಮ್ಮ ಪ್ರಸಾದ
ದಿಂದೆಲ್ಲಾ ಶಾಸ್ತ್ರಮುಂ ಕಲ್ತು ಪಂಡಿತರೆಮಾದೆಮೆಂದಾದಮಾನುಂ * * *
* * * * * ನಾಡ್ಗೆ ಪೋದಪೆಮೆಂದೋಜರ್ಗೆಱಗಿ ಪೊಡೆವಟ್ಟು
ಪೋಪೆಕ್ಕೊಂಡಾಗಳೋಜರೆಂದರ್—ನೀಮೆಮ್ಮ ತಂಗಿಯ ಮಕ್ಕಳಿರ್. ಸೋದರಳಿಯಂದಿ
ರಪ್ಪಿರ್. ನಿಮಗಾಂ ಪಸರಂಗೊಟ್ಟು ನಿಲೆ ಕೆಂ * * * * *
* * ತಂದೆಯಲ್ಲಿಯುಕ್ಕಿಕೆಟ್ಟಂತಿರಿಲ್ಲಿಯುಮೆತ್ತಾನುಮುಕ್ಕಿ ಕಿಡುವಿರೆಂದಾಂ
ನಿಮ್ಮ ಯೋಗ್ಯರಂ ಮಾಡುವ ಕಾರಣಮಾಗಿ ನಿಮಗೆ ಪಸರಂಗೊಟ್ಟು ನಿಲ್ಲದಕ್ಕೆ
* * * ಯಳಿಯ * * * * * *
ನುಡಿದುದಲುಂ ತುಡಲುಂ ಸಂಬಳಮುಮಂ ಕೊಟ್ಟು ಕಳಿಪಿದಾಗಳ್ ಪಿರಿಯಾತನಗ್ನಿ
ಭೂತಿಯೆಂಬೊಂ—ಮಾವನೆಮಗೆ ಪಸರಂಗುಡದಿರ್ದರುಮಂ ಯೋಗ್ಯರಂ * *
* * * ಆದಮಾನುಂ ಸಂತೋಷಂಬಟ್ಟಂ. ಕಿಱಿಯಾತಂ ವಾಯು
ಭೂತಿ ಸೂರ್ಯಮಿತ್ರಂಗೆಯ್ದುದೆಲ್ಲಮುಪಕಾರಮೆಂದು ಬಗೆದು * * *
ಜೈಕಂದಿರಿಸ. ತಂಡ ಕೂೞ್ಗೆ ನೆರೆನೊಣ್ಣೆಯುನಕ್ಕುಪ್ಪನಕ್ಕೆ ಕಟಿಯುನಕ್ಕೆಂದಪ್ಪುದ
ಮಿಕ್ಕಿಯುಮೆಱೆಯಿಸಿಮುಱಿಯುಂ. ಕೆಱೆವೋಗಿ ಮಿಾವಾಗಳ್ ತಲೆಯುಂ ಪೂಸ
ಲೆಣ್ಣೆಯುನಪ್ಪೊಡಂ ಎಱೆಯಿಸಿಮುಱಿಯುಂ. ತಾಂ ದಿವ್ಯಮಪ್ಪಾಹಾರಂಗಳಂ
ದಿವಸ ದಿವಸಕ್ಕಂ ಪಲಂಬರ್ ಸಂಟಕ್ಕರ್ಗಳುಂ ಅಗ್ಗಳುಂ ಬೆರಸುಣ್ಬುಂ ಪರ್ವ ದಿವಸ

ದೊಳಪ್ಪೊಡಮೆಂದಾನುಮಿವಗ್ಗುಣಲಿಕ್ಕಿಮೆಂದಱಿಯಂ. * * ಪಂಚ ಮಹಾ ಪಾತಕನೆಮ್ಮನೇೞೆಂಟು ವರುಷಂ ಪಗೆವರಂ ಬಗೆವಂತೆ ದಂಡಿಸಿದನೆಂದು ಮನ ದೊಳ್ ಮುಳಿಸಂ ಭಾವಿಸಿ ಪೊಱಮಟ್ಟು ಪೋದರ್.

ಅಂತಿರ್ವರುಂ ಪೋಗಿ ಕತಿಪಯ ದಿವಸಂಗಳಿಂ ಕೌಶಂಬಿಯನೆಯ್ದಿ ತಮ್ಮ ಮನೆಯಂ ಪೊಕ್ಕು ತಾಯಂ ಕಂಡು ತುೞಿಲ್ಗೆಯ್ದು ತಮ್ಮ ಪಂಡಿತರಾಗಿ ಬಂದುದಂ ಪೇೞ್ದು ಮಿಂದುಂಡುಪಶ್ರಮಿಸಿಯೊಳ್ಳಿತಪ್ಪ ದಿವಸ ವಾರ ನಕ್ಷತ್ರ ಮುಹೂರ್ತ ದೊಳತಿಬಳ ಮಹಾರಾಜನಂ ಕಂಡಿರ್ವರುಂ ಬೇಱೆ ಬೇಱುಪಶ್ಲೋಕಿಸಿ ಕ್ರಿಯಾಕಾರ ಸಂಬಂಧದಿಂದಂ ವಖ್ಖಾಣಿಸಿ ತಮ್ಮ ಪಂಡಿತಿಕೆಯಂನಱಿಪಿದೊಡೆ, ಸಭೆಯೊಳಿರ್ದ ಪಂಡಿತ ಜನಮೆಲ್ಲಂ ಮೆಚ್ಚಿ ಬಿಚ್ಚಳಿಸಿ ಪೊಗೞ್ದೊಡರಸಂ ಸಂತುಷ್ಟಚಿತ್ತನಾಗಿ ಒಸೆದು—ನಿಮ್ಮ ತಂದೆಯ ಮಂತ್ರಿಪದಮುಂ ಬಾೞುಮಂ ಕೈಕೊಳ್ಳಿಮೆಂದು ಕೊಟ್ಟೊಡೆ, ಮಹಾ ಪ್ರಸಾದಮೆಂದೆಱಗಿ ಪೊಡೆವಟ್ಟು ಕೈಕೊಂಡು ಸುಖದೊಳ್ ಬಾೞುತ್ತುಂ ಪಲಂಬರ್ ಪಂಡಿತರ್ಕಳ್ ಓದುಗಳಂ ವಖ್ಖಾಣಿಸುತ್ತ[ಂ] ಲೋಕದೊಳಂ ಅರಮನೆಯೊಳಂ ಪೂಜ್ಯರಾಗಿ ಸುಖ ಸಂಕಥಾ ವಿನೋದದಿಂದೊಳು ಕಾಲಂ ಸಲೆ—

ಮತ್ತಿತ್ತ ರಾಜಗೃಹದೊಳ್ ಸೂರ್ಯಮಿತ್ರಂ ಸುಬಲ ಮಹಾರಾಜನ ತೊಟ್ಟ ಸರ್ಘ್ಯಮಪ್ಪ ಮಾಣಿಕದುಂಗುರಮಂ ಕಳೆದು ತನಗೆ ತುಡಲ್ಕೆಂದು ಕೊಟ್ಟೊಡೊಂದು ದಿವಸಂ ಸಂಜೆವಾಸಲೆಂದು ಪೋದಲ್ಲಿ ಆದಿತ್ಯಂಗರ್ಘ್ಯಮಂಗುಡುವಾಗಳ್ * * * ಸು ಸೂಸಿ ತಾಮರೆಯೊಳುಂಗುರಂ ಬಿರ್ದ್ದತ್ತು. ತಾನುಂ ನೋಡದೆ ಬಗೆಯದೆ ಕೆಮ್ಮನೆ ಕಿಱಿದಂತರಮಂ ಪೋಗಿ ಕೈಯಂ ನೋಡಿ ಬೆರಲುಂಗುರಮಂ ಕಾಣದೆಲ್ಲಿ ಕೆಟ್ಟಿತ್ತೆಂದು ಪ್ರಮಾಣಮಱಿಯದೆ ಮಲ್ಕಲಂ ಮಱುಗಿ ಭಯಂಗೊಂಡು ದೆಸೆಗಳಂ ನೋೞ್ಪನ್ನೆಗಂ, ದೂರಾಂತರದೊಳಿರ್ದ್ದ ಸುಧರ್ಮರೆಂಬಾಚಾರ್ಯರಂ ದಿವ್ಯ ಜ್ಞಾನಿಗಳಂ ಕಂಡಿವರೇನಾನುಮಂ ಬಲ್ಲರಪ್ಪೊಡೆ ಬೆಸಗೊಂಡು ನೋೞ್ಪೆನೆಂದು ಪೋಗಿ ಭಟ್ಟಾರರಂ ಕಂಡು ಪಕ್ಕದೊಳಿರ್ದ್ದಾಗಳ್ ಈತಂ ಭವ್ಯನೆಂದಱಿದು—ಏನಯ್ಯ ಅರಸರ ವಾರಕರ ಮಾಣಿಕದುಂಗುರಮಂ ಕಿಡಿಸಿ ಬಂದಿರೆ ಎಂದಾಗಳ್, ಎಱಗಿ ಪೊಡೆವಟ್ಟಿಂತಂತಿರು ಮೊಳರೆ ಎಂದು ಪೊಗೞ್ದು ಯೆರ್ದ್ದಿಂತು ಬೆಸಗೊಂಡಂ—ಭಟ್ಟಾರಾ ಬೆಸಸಿಂ—ಆ ವುಂಗುರಮಂ ಕಾಣಲಕ್ಕುಮೆ ಎಂದಂಗೆ ಭಟಾರರ್—ಕಾಣಲಕ್ಕುಮೆಂದರ್. ನಿನ್ನೆ ನೀನಾದಿತ್ಯಂಗೆ ನೀರಂ ಸೂಸಿ ಪೊಡೆಮಡುವಾಗಳ್ ನೀರ್ವೆರಸು ಸೂಸಿ ತಾಮರೆಯೊಳಗೆ ಮುೞುಗಿರ್ದ ಮುಗುಳ ಮೇಲೆ ತಗುಳ್ದಿರ್ದುದು. ನಾಳೆ ನೇಸರ್ಮೂಡುವಾಗಳ್ ನೀರಿಂದ ಮೇಗೆ ನೆಗೆದಿರ್ದ್ದುಂಗುರಮಂ ಕಾಣಲಕ್ಕುಮೆಂದೊಡೆ ಸಂತೋಷಂಬಟ್ಟು ಪೊಡೆಮಟ್ಟು ಪೋಗಿ ಕೊಳಕ್ಕೆ ಮಾನಸರಂ ಕಾಪಿಟ್ಟು ಮಱು ದಿವಸಂ ಸಂಜೆಯೊಳ್ಬಂದು ನೋೞ್ಪನ್ನೆಗಂ ತಾಮರೆ * * * * * * * * ಕಂಡು ಕೊಂಡರಸುಗೊಪ್ಪಿಸಿ ತುರಿಪದಿಂದರಮನೆಯುಂ ಪೊಱಮಟ್ಟು ಪೋಗಿ ಮನ ದೊಳಿಂತೆಂದು ಬಗೆದಂ: ಈ ಲೋಕದೊಳಿರ್ದ ಸೂಕ್ಷ್ಮಾಂತರಿತ ದೂರ ಪದಾರ್ಥ ವಸ್ತು ಗಳೆಲ್ಲಮನಱಿವಂತಪ್ಪ ಸವಣಂ ಜೋೞಿಸಮನೆಂತಪ್ಪೊಡಂ ಕ್ಷಪಣಕನಂ ಮಿಥ್ಯಾ ವಿನಯದಿಂದೆಳಿಸಿ ಕಲ್ತಪೆನೆಂಬುದೊಂದು ಬುದ್ಧಿಯಿಂದಂ ಮನೆಗೆ ಬಂದು ಸುದೇವಿಯೆಂಬ

ತನ್ನ ಪಾರ್ವಂತಿಗೆ ಶಾಭಪ್ರಾಯಮೆಲ್ಲಮಂ ಪೇೞ್ದು ಜ್ಯೋತಿಷ ನಿಮಿತ್ತಂ ಮನೆಯುಂ
ಪೊಱಮಟ್ಟು ಸುಧರ್ಮಾಚಾರ್ಯರಲ್ಲಿಗೆ ಪೋಗಿ ಪೊಡೆವಟ್ಟು—ಭಟ್ಟಾರಾ ನಿಮ್ಮ
ಪಕ್ಕದೆ ಜ್ಯೋತಿಷಮಂ ಕಲ್ವೆನೆಂಬುದೊಂದಟ್ಟಿಯಿಂ ಬಂದೆಂ. ಎನ್ನಂ ಜ್ಯೋತಿಷಮಂ
ಕಲ್ಪುವುದೆಂದೊಡೆ, ಭಟಾರರೆಂದರ್—ತವಮ್ಮ ಎಮ್ಮ ಜೋಯಿಸಮೆಂಬಂತಪ್ಪ
ರೂಪಿನ ಋಷಿಯರ್ಗಲ್ಲದೆ ಪೇೞಲುಂ ಕಲಲುಮಾಗ[ದೆಂ]ದೊಡೆ, ಅಂತಪ್ಪ ದೀಕ್ಷೆಯುಂ
ದಯೆಗೆಯ್ಯಿಮೆಂದು ಬೇಡಿದೊಡೊಳ್ಳಿತಪ್ಪ ಮುಹೂರ್ತದೊಳ್ದೀಕ್ಷೆಯುಂ ಕೊಟ್ಟು
ಪಂಚಮಹಾ ಬ್ರತಂಗಳನೇಱಿಸಿ ಪಡಿಕಮಣಂ ಪೇೞ್ದು ತದನಂತರಮಿನ್ನು ಕಲ್ಪಿಸಿ
ಮೆಂದೊಡೆ ನಮಸ್ಕಾರಂಗಳುಮಾಳೋಚನೆಗಳಂ ನಿಯ[ಮ]ಮುಮನೋದಿದೊಡಲ್ಲದೆ
ಪೇೞಲಾಗದೆಂದೊಡೆಲ್ಲಮಂ ಬೇಗವೇಗಂ ಪಾಠಂಗೊಂಡು—ಭಟ್ಟಾರಾ ಇನ್ನು ಪೇೞಿ
ಮೆನೆ ಭಟ್ಟಾರರೆಂದರ್—ತ್ರಿಷಷ್ಠಿ ಶಲಾಕಾ ಪುರುಷರ್ಕಳ ಚರಿತಂಗಳುಮನಾಚಾರ
ಮಾರಾಧನೆ ಮೊದಲಾಗೊಡೆಯ ಶ್ರವಣ ಗ್ರಂಥ[ಂ]ಗಳುಮಂ ಲೋಕಾಣಿ ಸಂಗ್ರಾಣಿ
ಮೊದಲಾಗೊಡೆಯ ಕರಣ ಗ್ರಂಥಂಗಳುಮಂ ನೀವೆಲ್ಲಮಂ ಕಲ್ತಡಲ್ಲದೆ ಪೇೞಲಾಗದೆಂ
ದೊಡೆ ಸೂರ್ಯಮಿತ್ರಂ ಪಂಡಿತನಪ್ಪುದಱಿಂದವೆಲ್ಲಮಂ ಕಿಱಿದೆ ಕಾಲದಿಂದೋದಿ
ಕಲ್ತು—ಭಟ್ಟಾರಾ ನಿಮ್ಮ ಪೇೞ್ದೋದುಗಳೆಲ್ಲಮಂ ಗ್ರಂಥಾರ್ಥ ಸ್ವರೂಪದಿಂದೋದಿ
ಕಲ್ತೆಂ. ಇಂ ಜ್ಯೋತಿಷಮಂ ವಖ್ಖಾಣಿಸಿಮೆಂದೊಂಗೆ ಭಟ್ಟಾರರೆಂದರಾ—ಇನ್ನೊಂ
ದಧಿಕಾರಮುಂಟು, ದ್ರವ್ಯಾನುಯೋಗಮೆಂಬುದಂ ಕೇಳ್ದ ಬೞಿಕ್ಕೆ ಜ್ಯೋತಿಷ ಶಾಸ್ತ್ರ
ಮಂ ವಖ್ಖಾಣಿಸುವೆನೆಂದೊಡೆ ಮನದೊಳಾದಮಾನುಮೊಸೆದೊಂದಧಿಕಾರಮೆಂಬುದೇ
ನೆನಗೆ ಮುಟ್ಟಿದಾಗಳೆ ಕಲ್ವೆನೆಂದು ಬಗೆದು ಒಳ್ಳಿತಪ್ಪ ದಿವಸಮಂ ನಕ್ಷತ್ರ ಮುಹೂರ್ತ
ದೊಳ್ ಸಿದ್ಧಾಂತಮಂ ತೊಡಗಿಸಿ ಎಂತೆಂತು ಕೇಳ್ದುಮಂತಂತೆ ಮಿಥ್ಯಾತ್ವ
ಮಿನಿಸಿಸಿಸು ಪಿಂಗಿ ಬಂದಂ ಬಂಧ ಕಾರಣ ಮೋಕ್ಷಂ ಮೋಕ್ಷ ಕಾರಣಮಾ ಎರಡಱ
ಫಲಮುಮೆಂದಿಂತು ಸಿದ್ಧಾಂತದೊಳ್ ಪೇೞ್ದ ವಸ್ತುಗಳೆಲ್ಲಮಂ ಕೇಳ್ದು ಜೀವಾ
ಜೀವ ಪುಣ್ಯ ಪಾಪಾಸ್ರವ ಸಂವರ ನಿರ್ಜರ ಬಂಧ ಮೋಕ್ಷಮೆಂದಿಂತು ನವ ಪದಾರ್ಥಂ
ಗಳಂ ಪಂಚಾಸ್ತಿ ಕಾಯ ಷಡ್ದ್ರವ್ಯಂಗಳುಂ ಎಂದಿವಱೊಳಾದಮಾನುಮಱಿತಮುಂ
ಕುಶಲಿಕೆಯುಂ ನಂಬುಗೆಯುಂ ಆಗಿ ಅರ್ಹದ್ಭಟ್ಟಾರಕರ ಸಿದ್ಧ ಸ್ವರೂಪಮಂ
ಗುಣಂಗಳುಮನಱಿದು ಶಂಕಾದ್ಯಷ್ಟ ಮಲಂಗಳುಂ ಅಷ್ಟ ಮದಂಗಳುಂ ಮೂಱು
ಮೂಢ ಮೂಱನಾಯತನ ಸೇವೆಗಳುಮೆಂದಿಂತು ಇಪ್ಪತ್ತೈದು ದೋಷಂಗಳಂ ಗೆಲ್ದು
ಸಮ್ಯಕ್ತ್ವಮನೊಡೆಯನಾಗಿ ಸಂಸಾರ ಭೋಗ ವೈರಾಗ್ಯ ಪರಾಯಣನುಮಾಗಿಯೆಂ
ಮುಕ್ತಿ ಕಾರಣಮಪ್ಪ ಸನ್ಮಾರ್ಗ್ಗಮಂ ಪತ್ತೆನೆಂಡತ್ಯಂತ ಹರ್ಷ ಚಿತ್ತನಾಗಿ ಗುರುಗಳ್ಗೆ
ತಮ್ಮಕ್ಕೆಪದಿಂ ತಪಂಬಟ್ಟುದನಾಳೋಚಿಸಿ ಪ್ರಾಯಶ್ಚಿತ್ತಂಗೊಂಡು ಪಡಿಕಮಣಂ
ಕೇಳ್ದು ಪರಮಾರ್ಥ ಯತಿವರರಾಗಿ ಪನ್ನೆರಡು ವರ್ಷಂಬರಂ ಗುರುಗಳನಗಲದೆ
ತಪಂಗೆಯ್ದಾಚಾರ್ಯರಾಗಿ ಗುರುಗಳನುಮತದಿಂದೇಕ ವಿಹಾರಿಯಾಗಿ ಗ್ರಾಮಮೇಕ
ರಾತ್ರಂ ನಗರ[ಂ] ಪಂಚರಾತ್ರಂ ಕಾನನಂ ದಶರಾತ್ರಂ ಎಂಬೀ ಕ್ರಮದಿಂದಂ ಗ್ರಾಮ
ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗ[ಳೊಳ್ ವಿಹಾರಿ
ಸುತ್ತಂ]

ಕೌಸಂಬಿಗೆ ವಂದುದಯಾವತ ಪರ್ವತದೊಳ್ ಸಿದ್ಧಕ್ಷೇತ್ರಂಗಳೆಲ್ಲಮಂ ಬಂದಿಸಿ ತೀರ್ಥೋಪವಾಸಂಗೆಯ್ದು ಭೈಕ್ಷಕ್ಕೆಂದು ಕೌಶಂಬಿ ನಗರಮಂ ಪೊಕ್ಕು ಕಿಱುಮನೆ ಪೆರ್ಮನೆ * * * * * * * * ಚರಿಗೆದೊಳಲುತ್ತಂ ಅಗ್ನಿಭೂತಿ ಬ್ರಾಹ್ಮಣನ ಮನೆಯಂ ಪೊಕ್ಕೊಡಾತನುಂ ಕಂಡಿದಿರಂ ಪರಿತಂದಾದಮಾನುಂ ಭಕ್ತಿಯಿಂದಂ ನಿಱಿಸಿ ಕಾಲಂ ಕರ್ಚಿ ಪಡಿಗಹ ಮುಚ್ಚತ್ಥಾಣಮೆಂದೀವೊಂಬತ್ತು ತೆಱದಿಂದಂ ಪುಣ್ಯಮಂ ಕೈಕೊಂಡು ಶ್ರದ್ಧೆ ವೊದಲಾಗೊಡೆಯ ಏೞುಂಗುಣಗಳಿಂ ಕೂಡಿ ಪ್ರಾಸುಕಮಪ್ಪಾಹಾರಮನಾದಮಾನುಂ ಭಕ್ತಿಯಿಂದಂ ಬಡ್ಡಿಸೆಯುಂಡಿಂಬೞಿಕ್ಕಕ್ಷಯ ದಾನಮೆಂದು ಪರಸಿ ಪೋಪಾಗಳ್—ಭಟ್ಟಾರಾ ನಿಮ್ಮ ಕಿಱಿಯ ಗುಡ್ಡನಂ ಪರಸಿ ಪೋಗಲ್ವೇೞ್ಕುಮೆಂದು ವಾಯುಭೂತಿಯ ಮನೆಗೆ ಒಡಗೊಂಡು ಪೋದೊಡಾತನುಂ ಪಿರಿಯ ಲೋಹಾಸನಮನೇಱಿ ಪಲಂಬರುಂ ಪಾರ್ವರ್ಗ್ಗೆ ವಖ್ಖಾಣಿಸುತ್ತಿರ್ದ ಮನದ ಗರ್ವದಿಂದಿ[ದಿ]ರಂ ಬಂದು ವಂದಿಸದಿರ್ದ್ದೊನಂ ಅಗ್ನಿಭೂತಿ ಪೋಗಿ ವಾಯುಭೂತಿಯುಂ ಕೈಯಂ ಪಿಡಿದೆಂಗುಂ—ಭಟ್ಟಾರರ್ ನಮಗೆ ಸ್ವಾಮಿಗಳ್. ಭಟ್ಟಾರರ ಪ್ರಸಾದದಿಂದಂ ನಮಗಿನಿರಿದು ಶ್ರೀಯುಂ ಸಂಪತ್ತುಂ ವಿಭವಮುಮಾದುದಱಿಂದಮೆೞ್ದು ಭಟ್ಟಾರರಂ ಪೋಗಿ ವಂದಿಸೆಂದೊಡವನಿಂತೆಂದಂ—ಇದೇನೊಳ್ಳಿದರ್ಗ್ಗೆನ್ನಂ ಪೊಡೆವಡಿಸಿದಪ್ಪೈ ಪೇೞೆಂದುಮಶುಚಿಗಳ್ ಮಲಗ್ರಸ್ತರೆಂದಪ್ಪೊಡಂ ಮಿಂದಱಿಯದವರ ಕಾಲ್ಗೆಱಗುವೆಂಗಡಮೆಂದು ಪಾರ್ವರ ಸಭೆಯ ನಡುವಿರ್ದು ಕನಿಷ್ಠ ನಿಷ್ಠುರ ವಚನಂಗಳಿಂ ನಾನಾ ಪ್ರಕಾರದಿಂದಂ ನಿರಾಕರಿಸಿ ನುಡಿದು ಪೊಲ್ಲದಂ ಪೇೞ್ದಿಟ್ಟಿ ಕಳೆಯೆ ಅಗ್ನಿಭೂತಿಯೆಂದಂ—ಕಾಯ್ದೆಲೆಯಾಧಮಾ ನೀಚಾ ಸ್ವಾಮಿಯನಿಂತೆಂಬಾ—ಎಂದವನಂ ಬೈದೊಡೆ ಭಟ್ಟಾರರೆಂಗುಂ—

ಗಾಹೆ॥ ಣಿಂದಂತ್ತಂ ಸತ್ತುಂ ಮಿತ್ತುಂ ತಪೋ ವಸುಹ ದುಂಖಂ ।
ಜೋಸಮುಭಾವೈ ಪೆಚ್ಛೈ ಸೋಸಮುಣೊ ಸೋಯಪಂ ವಯಿಓ॥

ವೃತ್ತ॥ ಆಕೃಷ್ಟಯೇವ ವಚಸಾ ನ ತು ತೋದಿತೋಸ್ಮಿ * * ಮೇ ಹೃತಮುತ್ತಮಾಂಗಂ ।
ಪ್ರಾಣಾಹ್ವತೋ ಮಮಪರೈರ್ನ[ᡕ]ತು ಮೇ ಸಮಾಧಿರಿತ್ಯಾತ್ಮಚಿಂತನ ಪರಂ ಪರಯಾ ಕ್ಷಮೇ ತಂ ॥

ಎಂದಿಂತು ಕ್ಷಮೆಯಂ ಭಾವಿಸಿದರ್. ಅಗ್ನಿಭೂತಿಯುಂ ಭಟ್ಟಾ * * * ಯಾವತ ಪರ್ವತಕ್ಕೆ ಪೋಗಿ ಇಂತೆಂದಂ—ಭಟ್ಟಾರಾ ನಿಮ್ಮಂ ಪಂಚ ಮಹಾ ಪಾತಕನ ಮನೆಗೊಡಗೊಂಡು ಪೋಗಿ ಬೈಸಿದೆಂ. ಅದನಾತಂ ಬೈದನಲ್ಲನಾಂ ಬೈದೆಂ. ಈಯಪರಾಧಕೆ ಸೈರಿಸುವುದು ಬೈ * * * * * ಪೋಗದೆನಗೆ ದೀಕ್ಷೆಯಂ ದಯೆಗೆಯ್ಯಿಮೆಂದು ಸೆಱಗೆ ಕೇಱಿ ಬೇಡಿದೊಡೆ ಭಟ್ಟಾರರೊಳ್ಳಿತಪ್ಪ ಮುಹೂರ್ತದೊಳ್ ದೀಕ್ಷೆಯಂ ಕೊಟ್ಟೊಡಾತನುಂ ತಪಂಬಟ್ಟು ಕ್ರಿಯೆಗಳೆಲ್ಲಮಂ ಕಲ್ತು * * * * * ತಮ್ಮ ಗುರುಗಳೊಡನೆ ವಿಹಾರಿಸುತಿರ್ದರ್.

ಇತ್ತಲಗ್ನಿಭೂತಿಯ ಪಾರ್ವಂತಿ ಸೋಮದತ್ತೆಯೆಂಬೊಳ್ ತನ್ನೊಂದು ಸಲುಗೆಯಿಂದಂ ಅೞಲಿಂದಂ ವಾಯುಭೂತಿಯನಿಂತೆಂದಳ್—ಸೂರ್ಯಮಿತ್ರ ಭಟ್ಟಾರಕರ್

ಸುಬ್ರಾಹ್ಮಣರ್ ನಿಮ್ಮ ಸೋದರಮಾವಂಗಳಿರ್ಗಳ್ ಮಹಾತಪೋಧನರ್ ಗುಣವಂತ
ರಪ್ಪರ್ ನಿಮ್ಮ ಮನೆಗೆ ವಂದೊಡೆ ಮಣೆಯುಮನಿದಿರಂ ಪೋಗಿ ಪೊಡೆವಟ್ಟಿತ್ತಿಲ್ಲ. ಬಾಯುಂ
ಸಂಪತ್ತುಂ ಶ್ರೀಯುಮುಂ ಎಂಬುದು ಅವರ ಪ್ರಸಾದದಿಂದನಾದುದು. ಅಂತಪ್ಪ ಮಹಾ
ರಿಷಿಯರಂ ನಿಮಗೆ ಪೞಿಯುಮಂ ಬೈಯುಮಂ ತಿರಸ್ಕರಿಸಿ ನುಡಿಯಲಕ್ಕುಮೆ.
ಅಧಮರಂ ಪೊಲ್ಲಮಾನಸರಂ ದುರ್ಜನರಂ ಜಾರಜಾತರಂ ವಿಜಾತಿಗಳ್
ಮಪ್ಪಯೋಗ್ಯರುಮಂ ಗೆಯ್ದಿರೆಂದು ಪಾರ್ವರ ಸಭೆಯ ನಡುವೆ ನುಡಿದೊಡೆ ವಾಯು
ಭೂತಿಯುಂ ಮುಳಿದು ಬೈದು ಜಡಿದು ಕಾಲಿಂದಂ ತಲೆಯನೊದೆದು ಮನೆಯೊಳುಳ್ಳು
ದೆಲ್ಲಮುಂ ಕವರ್ದುಕೊಂಡು—ನಿಮ್ಮ ಸವಣನಾಗಿದ್ದಾರ್ಣ್ಮನ ಪೋದಲ್ಲಿಗೆಂದಟ್ಟಿ ಕಳೆ
ದೊಡಾಕೆಯುಂ ಮುಳಿದು ಕ್ರೋಧಾಗ್ನಿಯಿಂ ಪೆರ್ಚಿ ದುರಾತ್ಮಾ ಎನ್ನನೊದೆದ ನಿನ್ನ
ಕಾಲ್ಗಳಂ ಜನ್ಮಾಂತರದೊಳಂ ನಾಯುಂ ನರಿಯುಂ ಆಗಿಯುಪ್ಪೊಡಂ ಕೊಂದು ಮಕ್ಕ
ಳ್ವೆರಸು ತಿಂಬೆನಕ್ಕೆಂದು ನಿದಾನಂಗೆಯ್ದು ಮನೆಯಿಂದಂ ಮಕ್ಕಳ್ವೆರಸು ಪೊಱಮಟ್ಟು
ಪೋಗಿ ಕೆಲವು ಕಾಲದಿಂ ಬೞಿಕ್ಕೆ ಸತ್ತು ತಾನುಂ ಮಕ್ಕಳುಂ ಸಂಸಾರದೊಳ್
ತಿರಿಯುತ್ತಿರ್ದರ್.

ಇತ್ತ ವಾಯುಭೂತಿಯುಮತಿಮಾನದಿಂದಂ ಋಷಿಯರಂ ಪರಿಭವಿಸಿ ಬಯ್ದು
ನುಡಿದು ಜಿನಧರ್ಮಮಂ ಪೞಿದು ಪಾಪದ ಫಲದಿಂದಮೇೞುಂ ದಿವಸದಿಂ
ದೊಳಗುದುಂಬರ ಕುಷ್ಠಿಯಾಗಿ ಪುೞಿತು ನವೆದು ಸತ್ತು ಕೌಸಂಬಿಯೆಂಬ
ಪೊೞಲೊಳ್ ಬಿದಿರ ಮೆಳೆಯ ಮೇಲೇೞ ಆಕಾಶದೊಳಾ * *
* * * ಮನೆಯೊಳ್ ಪೆಣ್ಗತ್ತೆಯಾಗಿ ಪುಟ್ಟಿ ಪಿರಿಯಪ್ಪ ಪೊಱೆಗಳಂ
ಪೊತ್ತು ಪೋಗಿ ಬೆನ್ನೊಳ್ ನಾಳಿಪರ್ದು ಕಱುವೆಯಾಗಿ ಪುೞಿತು ನವೆ ನವೆದು ಸತ್ತು
ಮತ್ತಮಾ ಪೊೞಲೊಳ್ಕಂದಿ * * * * ಚಂಪಾನಗರದೊಳ್
ಪ[ಣ್ಣಾ]ಯಾಗಿ ಮಾದರ ಮನೆಯೊಳ್ ಪುಟ್ಟಿ ಸತ್ತು ಮತ್ತಮಾ ಪೊೞಲೊಳ್
ಮಾದೆ * * * * * * ದಾಸನಪ್ಪ ನೀಳನೆಂಬ ಮಾದೆರಂಗಂ
ಕೇಶಿಯೆಂಬ ಮಾದೆಗಂ ಮಗಳ್ ರೂಪು ದುರ್ವರ್ಣೆ ದುರ್ಗಂಧೆ ದುಸ್ವರೆ ಪುಟ್ಟುಂ
ಗುರುಡು ಪೊಲತಿಯಾಗಿ ಪುಟ್ಟಿ ವ್ಯಾಧಿ ಪೀಡಿತೆ ಕ್ಷುಧಾಗ್ನಿಯಿಂ ಬರ್ದಿದೊಳೊಂದಿನಂ
ಉದ್ಯಾನವನಕ್ಕೆ ಪೋಗಿ ನೇರಿಲ ಪಣ್ಗಳಂ ತಡವರಿಸಿಯಾಯ್ದಾಯ್ದು ತಿನುತ್ತಿರ್ಪಳ್.

ಅನ್ನೆಗಮಿತ್ತ ಸೂರ್ಯಮಿತ್ರಾಚಾರ್ಯರ್ ಅಗ್ನಿಭೂತಿ ಮುನಿಯುಂ ಗ್ರಾಮ
ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ ವಿಹಾರಿಸುತ್ತಂ
ಚಂಪಾನಗರಮನೆಯ್ದಿ ವಾಸುಪೂಜ್ಯ ಭಟ್ಟಾರಕರ್ ಸಿದ್ಧಿಗೆ ಸಂದ ತೀರ್ಥಸ್ಥಾನಮ
ನಾದಮಾನುಂ ಶುದ್ಧ ಪರಿಣಾಮದಿಂದಂ ವಂದಿಸುತಿರ್ದ ಸೂರ್ಯಮಿತ್ರಾಚಾರ್ಯ
ಗ್ಗಮವಧಿಜ್ಞಾನಂ ಪುಟ್ಟಿತ್ತು. ಮತ್ತೆ ಬಯಿರುದ್ಯಾನದೊಳ್ ನೇರಿಲಮರದ ಕೆಳಗೆ
ನೇರಿಲ ಪಣ್ಗಳಂ ತಡವರಿಸಿ ಆಯ್ದಾಯ್ದು ತಿಂಬ ಜಾತ್ಯಂಧೆಯಪ್ಪ ಪೊಲೆಯರ ಕೂಸಂ
ಕಂಡತ್ಯಂತ ಸ್ನೇಹಮಾಗಿ ಪರವಸದಿಂದಂ ಕಣ್ಣೀರ್ಗಳಂ ಸೂಸಿಯುತ್ತುಂ ಮುನ್ನ
ಮಿಕ್ಕು ಕರುಣದಿಂದೆ ಕುಂಚದ ಕೋಲೊಳ್ ಪರೆದಿರ್ದ ಪಣ್ಗಳಂ ಕೂಸಿನ ಮುಂದೆ
ಸಾರ್ಚುತ್ತುಂ ನಿಂದುಂ ಬೆಗಸಿಂದು ಇದೇಂ ಪಾಪದ ಫಲಮೊ ಎಂದು ಸಂಸಾರ

ನೀರ್ವೇಗಮಾಡಿಯುಂದಿನ ದಿವಸಮುಲಾಭಂ ಮಾಡಿ ತಮ್ಮಾವಾಸಕ್ಕೆ ಪೋದೊಡೆ ಭಟ್ಟಾರರೆಂದರ್—ಏನ ಲಾಭಮಾದುದೆ ಎಂದು ಬೆಸಗೊಂಡೊಡೆ ಭಟ್ಟಾರ[ರಿ]ಂತೆಂದು ಪೇೞ್ದರ್: ಚರಿಗೆವುಗುತ್ತಂ ಬಂದೆಡೆಯೊಳುದ್ಯಾನ ವನದೊಳ್ ನೇಱಿಲ ಮರದ ಕೆಳಗೆ ತಡವರಿಸಿ ನೇಱಿಲ ಪಣ್ಗಳಂ ತಿಂಬ ಜಾತ್ಯಂಧೆಯಪ್ಪ ಪೊಲೆಯರ ಕೂಸಂ ಕಂಡಾದಮಾನುಂ ಸ್ನೇಹಮಾಗಿ ಕರುಣದಿಂದಂ ಮನ್ಯುಮಿಕ್ಕು ಪರವಸದಿಂದಂ ಕಣ್ಣೀರ್ಗಳ್ ಬಂದು ನಾಡೆ ನೀಡುಂ ಬೇಗಮಿರ್ದು ನೋಡಿ ಅಹೋ ವಿಧಾತ್ರಾ ಸಂಸಾರಮೆಂದಲಾಭಂ ಮಾಡಿ ಬಂದೆನೆನೆ ಭಟ್ಟಾರರೆಂದರ್—ಆ ಕೂಸೆಂಬಳ್ ನಿಮ್ಮ ತಮ್ಮನಪ್ಪ ವಾಯುಭೂತಿಯಪ್ಪ ಜೀವಮೆನೆ,—ಅದೆಂತು ಭಟ್ಟಾರಾ ಎಂದು ಬೆಸ ಗೊಂಡೊಡೆ ಭಟ್ಟಾರರಿಂತೆಂದು ಪೇೞ್ದರ್: ವಾಯುಭೂತಿ ತನ್ನೊಂದು ಮಾಸ ಗರ್ವದಿಂದೆಮ್ಮಂ ಪೞಿದು ಬೈದೊನಾಗಿ * * * * * ದ ಏೞು ದಿವಸದಿಂದೊಳಗುದುಂಬರ ಕುಷ್ಠಿಯಾಗಿ ಪುೞಿತು ನಮೆದು ಸತ್ತಾ ಪೊೞಲೊಳೆಲಂಕಿಗರ ಮನೆಯೊಳೆ ಪೆಣ್ಗತ್ತೆಯಾಗಿ ಪುಟ್ಟಿ ನಮೆದು ಸತ್ತು ಹಂದಿಯಾಗಿ ಪುಟ್ಟಿ ಸತ್ತು ಪೆಣ್ನಾಯಾಗಿ ಪುಟ್ಟಿ ಸತ್ತೀಗಳ್ ಜಾತ್ಯಂಧಿ ಪೊಲೆಯರ ಮಗಳಾಗಿ ಪುಟ್ಟಿದಳ್. ಅದಱಿಂ ಮುನ್ನಿನ ಸ್ನೇಹಂ ಕಾರಣಮಾಗಿ ಕೂಸಿನ ಮೇಗೆ ನಿಮಗೆ ಕೂರ್ಮೆಯಾದುದೆನೆ,—ಭಟ್ಟಾರಾ ಅದೇಂ ಭವ್ಯನೊ ಅಭವ್ಯ ಜೀವನೊ ಎಂದು ಬೆಸ ಗೊಂಡೊಡೆ ಭವ್ಯ ಜೀವಮೆಂದರ್. ನಿಮ್ಮ ಪೇೞ್ದ ಬ್ರತಂಗಳಂ ಕೈಕೊಳ್ಗುಮೆಂದೊಡೆ ಭಟ್ಟಾರರನುಮತದಿಂದಗ್ನಿಭೂತಿ ರುಷಿಯರ್ ಪೋಗಿ ತಮ್ಮ ಮುನ್ನಿನ ಜನ್ಮಾಂತರ ಸಂಬಂಧಮುಮಂ ಋಷಿಯರ ಏಳಿದು ನುಡಿದ ಪಾಪದ ಫಲದಿಂದೆಯ್ದಿದ ದುಃಖ[ಂ] ಗಳುಮನಾ ಕೂಸಿಂಗಱಿವಂತು ತಿಳಿಯೆ ಪೇೞ್ದು ಮತ್ತಮಿಂತೆಂದರ್—ಮುನ್ನೆ ನೀನೀ ಭವದಿಂ ತೊಟ್ಟೈದನೆಯ ಭವದೊಳ್ ವಾಯುಭೂತಿಯಪ್ಪಂದು ಮಾನ ಗರ್ವದಿಂ ಋಷಿಯರಂ ಬಯ್ದು ಪಾಪದ ಫಲದಿಂದಿಂತಪ್ಪ ದುಃಖಗಳನೆಯ್ದಿದೆ. ಇನ್ನು ಮತ್ತಂ ಮಧು ಮದ್ಯ ಮಾಂಸಂಗಳಂ ಭಕ್ಷಿಸಿ ನರಕ ತಿರಿಕ ಮಾನುಷ್ಯ ಪ್ರೇತಾವಾಸಂಗ ಳೊಳಪ್ಪ ದುಃಖಂಗಳನೆಯ್ದಲ್ ಬಗೆದಪ್ಪಾ ಎಂದು ಪ್ರತಿಬೋಧನಾರ್ಥದಿಂ ಸಂಕ್ಷೇಪ ದಿಂದಂ ಸದ್ಧರ್ಮಮನಾಕೆಗಿಂತೆಂದು ಪೇೞ್ದರ್: ಪ್ರಾಪದ ಫಲದಿಂದಂ ಜೀವಂ ನರಕ ತಿರಿಕ ಮನುಷ್ಯ ಭವಂಗಳೊಳಪ್ಪ ದುಃಖ[ಂ]ಗಳ[ನ]ನಂತಾನಂತ ಕಾಲಮನುಭವಿಸಿ ನೀಡಱಿಂದೆಚ್ಚತ್ತುಮೆತ್ತಾನುಮಲ್ಲದೆ ಮನುಷ್ಯ ಭವಮುಂ ಪೆಱದು. ಪೆತ್ತೊಡ ಮಿಂತಾಗಿ ಪುಟ್ಟುಗುಂ:—

ವೃತ್ತ॥ ವೈರೂಪ್ಯಂ ದುರ್ಭಗತ್ವಂ ಕುಮತಿ ಕುಜನತಾಂ ಕುತ್ಸಿತತ್ವಂ ಕು ಜಾತಿಂ।
* * ನಿರಸ ವಿಕಳತಾಂ ವ್ಯಾಧಿತಾಂ ಚಾ * *ಂ॥
* * ಪ್ರೇಷಣತ್ವಂ ಲಘುತರ ಮರಣಂ ಶೋಕ ಕಾಂಕ್ಷಾಯ ತತ್ತ್ವಂ।
ಮಾ * * ಶಿ ಪ್ರಾಣಿ ಘಾತ್ಯೇಷ್ವರು ಭವತಿ ಚಿರಂ ಪ್ರಾಪ್ಯಮಾನಾ *॥

* * * * * * *।
* * ಮನಸಗ್ಗಂಧ ಕುಬ್ಜ ಕಂಜ ಬಳೋವಾ।
ಜಡ ಬಧಿರ ಮೂಕ ಖಬಳಾಷ್ಕ ಶಲೋಮ ವಕ್ರ ನಿಬಿಡಾಳಿಸ್ತೇ॥



ವಸಂತತಿಲಕಂ || ಉಧ್ಥಂತ ದಂತ ಕುಣಿಕುಂಡ ಕರಾಳ ಕಾಣಾಃ ।
ಸಂ * * ಸ್ಥೂಲ ದಿಗ್ಪ ಕ್ರಿಪರೋಪ ಸುರೂಕ್ಷವಾಪಾಃ ॥
ಕುಷ್ಟಾದ್ಧಿತಾಸ್ಕೃಪಣ ವಾಮನ ಪಾಮನಾಶ್ಚ ।
ಪಾಪೇನ ಪೂರ್ವ ಭವಿತೇನ ನರೋ ಭವಂತಿ ॥

ವೃ || ಕುಲ ಹೀನಂ ದೀನ ಮಾನಂ ಪರಿಭವ ನಿಭವಂ ದುಷ್ಕೃತಂ ಪಾಪ ಕರ್ಮಂ ।
ಮಲಿನಂ ದುರ್ಗಂಧ ಗಂಧಂ ಜಡಮತಿ ಕಿವುಡಂ ಪಂಗು ಮೂಕಂ * ತಂನಾ ॥
ಣಿಲಿ ಪಾಣ್ಬಂ ಪಂದೆ ಲೋಭಂ ಖಳನಳಿಕಮನಂ ವಂಚಕಂ ನಿತ್ಯರೋಗಾ ।
ಕುಳನೆಂಬೀ ನಾಮ ನಾಮಾವಳಿಗೆ ನಿಳಯನಕ್ಕುಂ ವ್ರತ ವ್ರಾತ ಹೀನಂ ॥

ಇಂತು ಪೂರ್ವಕೃತ ಪಾಪದ ಫಲದಿಂದಂ ವ್ರತಂಗಳಂ ಕೈಕೊಂಡಿರದುದರಿಂದಂ ಮನುಷ್ಯಜನ್ಮದೊಳ್ ಪುಟ್ಟಿಯುಂ ದುಃಖಂಗಳನೆ ಗೆಯ್ವರ್. ಜೀವಂ ಮತ್ತೆ ಧರ್ಮದ ಫಲದಿಂದಂ—

ವೃ|| ಶ್ರೀವಕ್ಷಚ್ಚಾರು ರೂಪಂ ಕುಲ ಚಲ ವಿನಯಂ ಖ್ಯಾತಿ ದೀರ್ಘಾಯುಷತ್ವಂ ।
ಪೂಜ್ಯಂ ದೇವಾಸುರೇಂದ್ರಸ್ಸುರವರ ವನಿತಾ ಪ್ರೀತಿಮಷ್ಟಾಂಗ ಭೋಗಂ ॥
ಸ್ವರ್ಗೇ ಮರ್ತ್ಯಾ ಲಭಂತೇ ದ್ಯುತಿ ಮತಿ ಪಟುತಾಂ ರಾಜ ರಾಜಾಶ್ರಿಯಾಚ ।
ಸೌಭಾಗ್ಯಂ ಪೂಜ್ಯ ವಾಕ್ಯಂ ಜಗತಿ ಮಧು ಸುಧಾ ಮಾಂಸ * * ನಿವೃತ್ತಾಃ ॥

ಪುಣ್ಯಾದುತ್ಪಾದ್ಯಂತೇ ಜೀವಾ ವಿಖ್ಯಾತ ವಿಪುಳ ವಂಶೇದ್ಯೋ ।
ದ್ಯುತಿ ಮತಿ ಧೃತಿ ಕಾಂತಿ ಶ್ರೀ ಹ್ರೀ ರೂಪ್ಯಾರೋಗ್ಯ ಸತ್ವ ಬಳ ಸಂಪನ್ನಾಂ ॥

ಆಜ್ಞಾ ಯಶೋ ಧೃತಿ ಮತಿ ದ್ಯುತಿ ಕಾಂತಿಲಕ್ಷ್ಮೀ ।
ಶೌರ್ಯ ಪ್ರತಾಪ ಪರಿವಾರ ಧನೋಪಭೋಗಾಃ ॥
ತೇ ಲೋಕ ವೇದ ಸಮಯೇಷು ಸುನಿಶ್ಚಯೇನ ।
ಪುಣ್ಯೋದಯೇನ ಸುಲಭಾ ಇತಿ ವರ್ಣಯಂತಿ ॥

ವರ ಯುವತಿ ಭವನ ವಾಹನ ನಾಟಕ ಧನ ಕನಕ ರಜತ ಮಣಿ ಸುರಥಾ[ಃ] ।
ಅತಿ ಲಲಿತ ತುರಗ ಮದ ಗಳಿತ ನಾಗ ಭೃತ್ಯಾಶ್ಚ ಭವ[ಂ]ತಿ ಧರ್ಮೇಣ ॥

ಇಂತು ಧರ್ಮದ ಫಲದಿಂದಂ ದೇವಲೋಕದ ಮನುಷ್ಯಲೋಕದ ಸುಖಂಗಳನನುಭವಿಸಿ ಬಳಿಕ್ಕೆ ನಿರ್ವಾಣ ಸುಖಮನೆಯ್ದುಗುಂ ಜೀವಂ. ಇನ್ನಾ ಧರ್ಮಮೆಂಬುದೆಂತೆಂದೊಡೆ—

ಗಾಹೆ|| ಸೊಧಂಮೊ ಜಂಥದಯಾ ಸೋವಿತ ಒವಿಸಯಣಿಂಗ ಹೋಜಂಥ ।
ದಸ ಅಂತಾ ದೋಸರಹಿಯೊ ಸೊದೇವೊಣಂದಿಸಂದೇಹೊ ॥

ಎಂದಿಂತು ಮೊದಲಾಗಿ ಒಡೆಯನಿಲ್ಲದೊಂ ದೇವಂ. ಅಂತಪ್ಪ ದೇವನ ಪೇಳ್ದುದಾಗಮಮೆಂಬುದಕ್ಕುಂ. ಆ ಆಗಮ[ಂ] ಪೇಳ್ದಂತು ಬಾಹ್ಯಾಭ್ಯಂತರ ಪರಿಗ್ರಹಂಗಳೆಲ್ಲಮಂ ತೊರೆದು ದಶವಿಧಮಪ್ಪ ತಪದೊಳ್ನೆಗಳ್ದು ಅಯ್ದುಮಿಂದ್ರಿಯಂಗಳಂ ಗೆಲ್ದು ಪಸಿವುಂ ನೀರಳ್ಕೆ ಮೊದಲಾಗೊಡೆಯ ಯಿಪ್ಪತ್ತೆರಡು ಪರೀಷಹಂಗಳಂ ಸೈರಿಸಿ ಯಮ ನಿಯಮ ಸ್ವಾಧ್ಯಾಯ ಧ್ಯಾನಾನುಷ್ಠಾನ ನಿರತರಾಗಿ ತಪಂಗೆಯ್ದು ಋಷಿಯರ್ಕಳ್ ತಪೋಧನರ್. ಕೊಲ್ಲದುದೆ ಧರ್ಮಮೆಂದಿಂತು ನಂಬಿ ವ್ರತಂಗಳಂ ಕೈಕೊಂಡು

ನೆಗೞ್ವುದು ಧರ್ಮಮೆಂಬುದಕ್ಕುಂ. ಎಂದಿಂತಗ್ನಿಭೂತಿ ರಿಸಿಯರ್ ತಿಳಿಯೆ ಧರ್ಮಮಂ ಪೇೞ್ದೊಡೆರ್ದೆಯೊಳ್ ಮೆಲ್ಲಿದಳಾಗಿ ತನ್ನ ಭವಾಂತರಂಗಳುಂ ಧರ್ಮಮುಮಂ ಕೇಳ್ದಱಿದು ಸಂಸಾರ ಶರೀರ ವೈರಾಗ್ಯಮಾದಮಾಸುಂ ಪೆರ್ಚೆ ತನ್ನ ತಾಂ ಪೞಿದು ನಿಂದಿಸಿ ಪಾಪಕ್ಕಂಜಿ ಅಣುವ್ರತಂ ಮೊದಲಾಗೊಡೆಯ ಶ್ರಾವಕ ಬ್ರತಂಗಳಂ ಕೈಕೊಂಡಾಗಳ್ ಭಟ್ಟಾರರುಂ—ದೃಢವ್ರತೆಯಾಗು ಕರ್ಮಕ್ಷಯಮಕ್ಕೆಂದು ಪರಸಿ ತಮ್ಮಾವಾಸಕ್ಕೆ ಪೋದರ್. ಇತ್ತ ಜಾತ್ಯಂಧಿಯಪ್ಪ ಕೂಸುಮಹಿಂಸಾವ್ರತಂಗಳಂ ಮೇಲ್ಕೊಂಡು ತಮ್ಮ ಮನೆಗೆ ಪೋದಳ್.

ಅನ್ನೆಗಂ ಎಡೆಯೊಳರಸನ ಪುರೋಹಿತಂ ಸೋಮಶರ್ಮನೆಂಬೊಂ ತನ್ನ ಪರಿವಾರಂ ಬೆರಸು ಮಹಾ ವಿಭೂತಿ ವಿಸ್ತಾರದಿಂದಂ ಪಿರಿದು ಪೂಜೆಯುಂ ಕೊಂಡು ಮಕ್ಕಳಂ ಬೇಡಿ ಸಂಬರನಾಗ ಠಾಣಕ್ಕೆ ಪರಕೆಗುಡಲ್ವೋಪುದುಂ ತನ್ನೊಡವೋಪ ಪೊಲೆಯರ ಕೂಸುಗಳ್ ಕಂಡು ತನಗೆ ವ್ಯಾವರ್ಣಿಸಿ ಪೇೞಿತಿ ಕೇಳ್ದದಱಿತೊಳ್ ಮನಮಿಟ್ಟುಮವರ್ಗೆ ಸತ್ತು ಪುಟ್ಟುವೆಸಕ್ಕೆಂದು ಭೋಗಾ * ಕಿಯಾಗಿ ನಿದಾನಂಗೆಯ್ದು ಮನೆಗೆ ಪೋಗಿ ಇರ್ಪನ್ನೆಗಂ ಆ ಇರುಳೊಳೆ ಪಾವು ಕೊಳೆ ಸತ್ತು, ಚಂಪಾನಗರಮ ನಾಳ್ವೊಂ ಚಂದ್ರವಾಹನನೆಂಬರಸಂ, ಆತನ ಮಹಾದೇವಿ ಚಂದ್ರಮತಿಯೆಂಬೊಳ್ * * * * * * ನೆಂಬೊಂ ಭಟ್ಟಂ. ಆತನ ಪಾರ್ವಂತಿ ತ್ರಿವೇದಿಯೆಂಬೊಳ್. ಆಯಿರ್ವರ್ಗ್ಗಂ ನಾಗಶ್ರೀಯೆಂಬೊಳ್ ಮಗಳಾಗಿ ಪುಟ್ಟಿದೊಡತ್ಯಂತ ರೂಪ ಲಾವಣ್ಯ ಸೌಭಾಗ್ಯ ಕಾಂತಿ [ಹಾವ ಭಾವ ವಿಲಾಸ ವಿಭ್ರಮಗಳಿಂದಾದಮಾಸುಂ] ಸೊಗಯಿಸುವಳ್. ನಾಗರ್ಗೆ ಪರಸಿ ಪೆತ್ತರಪ್ಪುದಱಿಂ ನಾಗಶ್ರೀಯೆಂದು ಪೆಸರನಿಟ್ಟು ಮತ್ತಂ ಸೂರ್ಯಮಿತ್ರಾಚಾರ್ಯಂ ಅಗ್ನಿಭೂತಿ ರುಷಿಯರುಮಂತಿರ್ವರುಂ ಚಂಪಾನಗರದಿಂ ಪೊಱಮಟ್ಟು ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಏೞೆಂಟು ವರ್ಷದಿಂ ಮಗುೞ್ದು ಚಂಪಾನಗರಕ್ಕೆ ವಂದು ಪೊಱವೊೞಲೊಳುದ್ಯಾನ ವನದೊಳ್ ಕಂಬಳನಾಗಂ ಶಂಬರ * * * ಗನಾಗಮೆಂದೀ ಪೆಸರನೊಡೆಯ ಮುನ್ನಿರ್ದ ನಾಗಠಾಣದೊಳ್ ಬಂದಿರ್ದರ್.

ಅನ್ನೆಗಂ ನಾಗಶ್ರೀಯುಂ ಪಂಚಮಿಯುಂದು ಮಂತ್ರಿಯರ್ಕಳ ಪೆರ್ಗಡೆಗಳ ರಾಜಶ್ರೇಷ್ಠಿಯರ ಪ್ರಧಾನರಪ್ಪ ನಿಯೋಗಿಗಳ್ವಲಂಬರ್ * * * * ಗಳ್ವೆರಸು ಪಿರಿದು ಮರ್ಚನೆಯುಮಂ ಕೊಂಡು ನಾಗಠಾಣಕ್ಕೆ ಪೋಗಿ ನಾಗರನರ್ಚಿಸಿ ಪೊಡೆವಟ್ಟು ಸೂರ್ಯಮಿತ್ರಾಚಾರ್ಯರಗ್ನಿಭೂತಿ ರುಷಿಯರುಮಂ ಕಂಡು ಜಾತಿಸ್ಮರಣೆಯಾಗಿ ತನ್ನ ಮುನ್ನಿನ ಪೊಲತಿ [ಯಾಗಿ] ಪುಟ್ಟಿದ ಭವಮನಱಿದು ಭಟ್ಟಾರರ ಕಾಲ್ಗೆಱಗಿ ಪೊಡೆವಟ್ಟು ಕುಳ್ಳಿರ್ದಾಗಳಾ ಕೂಸಂ ಕಂಡು ಅಗ್ನಿಭೂತಿ ರುಷಿಯರ್ಗತಿ ಸ್ನೇಹಮಾಗಿ ತಮ್ಮ ಗುರುಗಳಂ ಸೂರ್ಯಮಿತ್ರಾಚಾರ್ಯರನಿಂತೆಂದು ಬೆಸಗೊಂಡರ್: [ಭಟ್ಟಾರಾ] ಈ ಕೂಸಿನ ಮೇಗೆ ಸಮಗಾದಮಾಸುಂ ಮೋಹಮಾದುದರ್ಕೆ ಕಾರಣಮೇನೆಂದು ಬೆಸಗೊಂಡೊಡೆ ಭಟ್ಟಾರರವಧಿಜ್ಞಾನಮುಂ ಪ್ರಯೋಗಿಸಿ ಇಂತೆಂದು ಪೇೞ್ದರ್—ಈ ಕೂಸೆಂಬುದು ನಿಮ್ಮ ತಮ್ಮನಪ್ಪ ವಾಯುಭೂತಿಯ ಜೀವಂ. ಅಭಿಮಾನಂ ಕಾರಣ

ಪಾಗೆನ್ನುನಂದೆ ಸಂಘಮಿ ಬಾಯ್ಗೆ ಬಂದುದನೆ ಪೊಲ್ಲಮೆಯ ಬೈಗುಳಂ ಬೈದು ಪಾ ಪಾಪದ ಫಲದಿಂದಮೇೞು ದಿವಸದಿಂದೊಳಗುದುಂಬರ ಕುಷ್ಠೆಯಾಗಿ ಪುಟ್ಟಿ ಸತ್ತು ಕೌಶಂಬಿಯೊಳೆಲಂಕಿಗರ ಮನೆಯೊಳ್ ಪೆಣ್ಗತ್ತೆಯಾಗಿ ಪಿರಿಯ ಪೊಱೆಗಳಂ ಪೊತ್ತು ಪೋಗಿ ಬೆನ್ನೊಳ್ಕುನುಮೆಯಾಗಿ ಸಾಳೆ ಬಿರ್ದು ಪುಟ್ಟಿ ನಮೆದು ಸತ್ತು ಪಂದಿಯಾಗಿ ಪುಟ್ಟಿ ಸತ್ತು ಪೆಣ್ನಾಯಾಗಿ ಪುಟ್ಟಿ ಸತ್ತು ಚಂಪಾ ನಗರದೊಳ್ ಮಾದೆಗರ್ಗೆ ಪ್ರಧಾನನಪ್ಪ ಸೀಳನೆಂಬ ಮಾದೆಗಗಂ ಕೇಶಿಯೆಂಬ ಮಾದಗಿಗಂ ದುರೂಪೆ ದುರ್ಗಂಧೆ ದುಸ್ವರೆ ಜಾತ್ಯಂಧೆ ಪೋೞೆಯರ್ಗೆ ಮಗಳಾಗಿ ಪುಟ್ಟಿ ನೀವು ಪ್ರತಿಬೋಧಿಸೆ ವ್ರತಂಗಳಂ * * * ಸಂಗೆಯ್ದು ಪಾಪ್ರ ಕೊಳೆ ಸತ್ತು ಪುರೋಹಿತಂ [ಸೋ]ಮಶರ್ಮಂಗಂ ತ್ರಿವೇದಿಗಂ ಪುಟ್ಟಿದ ನಾಗಶ್ರೀಯೆಂಬೊಳ್ ಮಗಳಾದಳ್. ಅದಱಿಂ ನಿಮಗೀ ಕೂಸಿನ ಮೇಗತಿ ಸ್ನೇಹಮಾದುದೆಂದು ಪೇೞ್ದೆಲ್ಲಮ[ಂ] ನಾಗಶ್ರೀ ಕೇಳ್ದು ಕೞಿದಯ್ದು ಭವಂಗಳಂ ಪ್ರತ್ಯಕ್ಷಮಾದಂತಱಿದು ಭಟ್ಟಾರರ ಕಾಲ್ಗೆಱಗಿ ಪೊಡೆವಟ್ಟು ಧರ್ಮಮುಂ ಬೆಸಗೊಂಡು ಕೇಳ್ದಣುವ್ರತಂ ಮೊದಲಾಗೊಡೆಯ ಶ್ರಾವಕ ವ್ರತಂಗಳಂ ಸಮ್ಯಕ್ತ್ವ ಪೂರ್ವಕಂ ಕೈಕೊಂಡು ವಂದಿಸಿ ಮನೆಗೆ ಪೋಪಾಗಳ್, ಭಟ್ಟಾರರ್—ಎಲೆ ಮಗಳೆ ಎಮ್ಮ ಕೊಟ್ಟ ಬ್ರತಂಗಳಂ ನಿಮ್ಮಮ್ಮಂ ಬಿಸುಡಲ್ವೇೞ್ದನಪ್ಪೊಡೆ ಪೆಱವುಳಿ ಬಿಸುಡದಿರಾ, ಎಮ್ಮಲ್ಲಿಗೆ ವಂದೆಮ್ಮ ಕೊಟ್ಟ ಬ್ರತಂಗಳನೆಮಗೊಪ್ಪಿಸುವುದೆನೆ ಕೇಳ್ವಂತೆಗೆಯ್ವೆನೆಂದು ಮನೆಗೆ ಪೋದೊಡೊಡ * ಮಗಳ್ ಸೋಮಶರ್ಮಂಗೆ ಭಟ್ಟಂಗೆ—ನಿಮ್ಮ ಮಗಳ್ ರಿಸಿಯರ ಪಕ್ಕದೆ ಶ್ರಾವಕ ಬ್ರತಂಗಳಂ ಕೈಕೊಂಡು ಬಂದಳೆನೆ ಭಟ್ಟಂ ಕೇಳ್ದು—ಮಗಳೆ ನಾಗಶ್ರೀ ನಾಮುಂ ಪಾರ್ವರೆಮುಂ ಲೋಕಕ್ಕೆಲ್ಲಮಗ್ಗಳಂ ಲೋಕದಿಂದಂ ಪೂಜಿತ[ರೆ]ಮುಮೆಮ್ಮಿಂದಗ್ಗಳಂ ಪೆಱರಿಲ್ಲದಱಿಂದಂ ಸವಣರ ಧರ್ಮಮುಂ ನಮಗೆ ಕೊಳಲಾಗ, ಬಿಸುಡು ಮಗಳೆ ಎನೆ ನಾಗಶ್ರೀಯೆಂದಳ್—ಅಮ್ಮಾ ವ್ರತಂಗಳಂ ಕೊಟ್ಟ ರಿಸಿಯರ್ಗೆ ಪೋಗಿ ಒಪ್ಪಿಸಿ ಬಿಸುಡ್ವೆನೆನೆ ನಿಮ್ಮಂತೆಗೆಯ್ವೆಂದು ಮಗಳ ಕೈಯಂ ಪಿಡಿದಿರ್ವರುಂ ರಿಸಿಯರಲ್ಲಿಗೆ ವ್ರತಂಗಳನೊಪ್ಪಿಸಲೆಂದು ಪೋಪನ್ನೆಗಮೆಡೆಯೊಳ್ ಬಟ್ಟೆಯೊಳೊರ್ವನಂ ಪೆಡಗೈಯುಮಡಿಯುಂ ಕಟ್ಟಿ ಒಂದೆಸಕ್ಕೆಗುಟ್ಟಿ ಪೊೞಲ ಜನಂಗಳ್ ಮುಸುಱಿಕೊಂಡು ನೋ * * ಸ್ವಮರೇಸಕ್ಕಂತು ಕೊಲಲುಯ್ವ ಪುರುಷನಂ ಯವ್ವನನುಂ ತೇಜಸ್ವಿಯುಂ ಕಂಡು ನಾಗಶ್ರೀ ತಮ್ಮಮ್ಮನಂ ಬೆಸಗೊಳ್ಗುಂ—ಈ(?)ತನನೇಕೆ ಕೊಲಲುಯ್ವಪ್ಪರಮ್ಮಾ ಬೆಸಗೊಳ್ಳೆನೆ ಸೋಮಶರ್ಮನುಂ ಕೊಲಲುಯ್ವ ತಳಾಱನಂ ಬೆಸಗೊಂಡು ತದ್ವೃತ್ತಾಂತಮನೆಲ್ಲಮನಱಿದು ನಾಗಶ್ರೀಗಿಂತೆಂದು ಪೇೞ್ಗುಂ:—

ಈ ಪೊೞಲ ಪ್ರಧಾನನಪ್ಪ ಶ್ರೇಷ್ಠಿ ಇಂದ್ರದತ್ತನೆಂಬೊಂ ಪದಿನಾಱುಂ ಕೋಟಿ ಕನವರಮನೊಡೆಯೊಂ * * * * * * * ರಸೇನನೆಂಬೊಂ ಬೂಡಾಟ ಪಕ್ಷದ್ಯೂತನೆಂಬೊಂಗೆ ಸಾಸಿರ ದೀನಾರಮುಂ ಸೋಲ್ತು ಕೊಲಿಸನುಂ [illegible] ಅರಸನಾಣೆಯುಂ ಮಿಕ್ಕು ಪೋಪನ ಮುಂದಡ್ಡವಾಗಿದೋ[illegible] * * * ನನುಂದೆ ಅರಸನೀತನಂ ಕೊಲಲ್ವೇೞ್ದಂ.

ಅದಱಿಂ ಕೊಲಲುಯ್ವಪರ್ ಮಗಳೆ ಎಂದು ಪೇೞ್ದೊಡೆ ನಾಗಶ್ರೀಯೆಂದಳ್—ಅಂತ
ಪ್ಪೊಡಂ ಆನುಂ ರಿಸಿಯರ ಪಕ್ಕದೆ ಬ್ರತಮಂ ಸಾಪಿಂಗಂಜಿ ಜೀವಂಗಳಂ ಕೊಲ್ಲೆನೆಂ [ಬ]
ಬ್ರತಮಂ ಕೊಂಡೆಂ. ಆ ಬ್ರತಮನವರ್ಗೊಪ್ಪಿಸಿದೊಡಾನುಮಮೋಘಂ ಜೀವಂಗಳಂ
ಕೊಲಲ್ವೇೞ್ಕುಂ. ಆ ಜೀವಂಗಳಂ ಕೊಂದೊಡೆನ್ನುಮನೀತನಂತೆ ಪೆಡಗೆಯ್ಯುಡಿಯೆ
ಕಟ್ಟಿಯೊಂದೆವಱೆಗುಟ್ಟಿ ನೀವೆಲ್ಲ ನಂಟರ್ ನೋಡೆ ಶ್ಮಶಾನಕ್ಕುಯ್ದು ಸೂಲದೊಳಿಕ್ಕಿ
ಕೊಲ್ವರೆನೆ—ಅಂತಪ್ಪೊಡೆಯೀಯೊಂದು ಕೊಲ್ಲದ ಬ್ರತಂ ನಿನಗಿಕ್ಕೆ ಮಗಳೆ ಉೞಿದ
ಬ್ರತಂಗಳೆಲ್ಲಮಂ ಪೋಗಿಯಾ ಕ್ಷಪಣಕಂಗೊಪ್ಪಿಸುವಮೆಂದು ಕಿಱಿದಂತರಮಂ
ಪೋಪನ್ನೆಗಂ, ಮತ್ತೊರ್ವನಂ ಮುನ್ನಿನಂತೆ ಕೊಲಲ್ಕೊಂಡುಪೋಪ ಪುರುಷನಂ
ಕಂಡು ನಾಗಶ್ರೀ ತನ್ನಮ್ಮನಂ ಬೆಸಗೊಳಲ್ವೇೞ್ದೊಡಾತನುಂ ಬೆಸಗೊಂಡೆಲ್ಲ
ಮನಱಿದು ಮಗಳ್ಗಿಂತೆಂದು ಪೇೞ್ಗುಂ: ಕೇಳ್ ಮಗಳೆ ವೈಸೈಕ್ಯನೆಂಬೊನೊರ್ವ
ಪುರುಷಂ ತನ್ನಯ ಬಂಟನ ವೃದ್ಧಸ್ತ್ರೀಯ ಮೂವರ ಚಿತ್ರಕಥೆಗಳಂ ಪಟದೊಳ್
[ಬ]ರೆದು ತೋಱಿ ಪೇೞ್ದು ಲೋಗರಂ ಡಂಬಿಸಿ ಮಾಱಿಕೊಳ್ವ ಬತ್ತಮಂ ಕಳ್ವೊನಾ
ಮೂಱುಂ ಕಥೆಗಳೊಳಗೆ ಕನ್ನೆಯ ಕಥೆಯಂ ಪೇೞ್ವೆನದೆಂತೆಂದೊಡೆ:—

ಕೌಶಂಬಿಯೆಂಬ ಪೊೞಲೊಳ್ ಸುಮಿತ್ರನೆಂಬೊಂ ಶ್ರೇಷ್ಠಿ ಕೋಟಿ ಕಸವರಮ
ನೊಡೆಯೊಂ ಆತನ ಮಗಂ ಸುಮಿತ್ರನೆಂಬೊಂಗೆ ಸರ್ಪದಷ್ಟಮಾದೊಡೆ ಸತ್ತನೆಂದು
ಶ್ಮಶಾನಕ್ಕೆ ಕೊಂಡುಪೋಗಿ ಇೞಿಪಿದೊಡಲ್ಲಿ ಗರುಡನಾಭಿಯೆಂಬ ಮಂತ್ರವಾದಿ
ಪೋಗಿ ನೋಡಿ ಈತನನಾಂ ನಾಳೆಯಭಿಮಂತ್ರಿಸಿ ಬಾೞಿಸುವೆನಂಜದಿರಿಮಿಲ್ಲಿಯೆ
ಇರುಳೀ ದಾಷ್ಟಿಕಂಗೆ ಜಾವಮಿರಿಮೆಂದು ಪೇೞ್ದು ಪೋದಂ. ಸುಮಿತ್ರಸೆಟ್ಟಿ
ನಾಲ್ವರೊಳ್ಳಿದರಪ್ಪ ಸುಭಟರಂ ಜಾವಮಿರಿಸಿ ಪೋದಂ. ನಾಲ್ವರುಂ ಜಾವಮಿರ್ದ
ಭಟರಾಗಳೊರ್ವನಿರುಳ್ ಕುಱಿಯಂ ಕಳ್ದು ತರಲ್ ಪೋದಂ. ಮತ್ತೊರ್ವಂ
ಪುಳ್ಳಿಯಂ ತರಲ್ ಪೋದಂ. ಮತ್ತೊರ್ವಂ ಕಿಚ್ಚಂ ತರಲ್ ಪೋದಂ. ಮತ್ತೊರ್ವಂ
ದಾಷ್ಟಿಕನಾ ಪಕ್ಕದೆ ಕಾಪಿರ್ದನಂ * * * * * *
ಕುಱಿಯಂ ಕೊಂದು ಸುಟ್ಟು ತಿಂಬರೆಂಬ ಕಥೆಯುಮಂ ಪೊತ್ತಱನೆ ನೇಸರ್ಮೂಡಿ
ಗರುಡನಾಭಿಯೆಂಬ ಮಂತ್ರವಾದಿ ಬಂದು ಪಱೆಗುಟ್ಟಿ ಮಂತ್ರಿಸಿ ದಾಷ್ಟಿಕನ
ನೆತ್ತಿದಂ. ಸುಮಿತ್ರಸೆಟ್ಟಿಯುಮೀ * * * * ರ್ದ
ನಾಲ್ವರ್ಸುಭಟರ್ಗೆ ಓರೊರ್ವರ್ಗೆ ಸಾಸಿರ ದೀನಾರದ ಪೊಟ್ಟಳಿಗೆಗಳಂ ಪ್ರಾಸಾದದ
ಮೇಗಿರ್ದು ಜನಸಂಕೀರ್ಣದ ನಡುವೆ ನಾಲ್ಕು ಪೊಟ್ಟಳಿಗೆಯನೀಡಾಡಿದೊಡಾ
ನಾಲ್ವರೊಳಗೊರ್ವಂ ಪೊಟ್ಟಳಿಗೆ * * * * * *
ನೆಂದು ಕಳೆದೊಡಾ ಸೆಟ್ಟಿಯುಮರಸರ್ಗೆ ಪೋಗಿ ಬಿನ್ನಪಂ ಗೆಯ್ದನ್. ಎನ್ನ ಸಾಸಿರ
ದೀನಾರದ ಪೊಟ್ಟಳಿಗೆ ಕೆಟ್ಟುದದಂ ದೇವರಾರೈವುದೆಂದು ಪೇೞ್ದೊಡೆ ತಳಾಱನಂ
ಕರೆದು ಬೇಗಂ ಕಳ್ಳನನಾರೈಯಲ್ಲದಾಗಳಮೋಘಂ ಕಳ್ಳಂಗೆ ತಕ್ಕ ನಿಗ್ರಹಮಂ ನಿನಗೆ
ಮಾಡುವೆನೆಂದರಸನಾತನಂ ಬಗ್ಗಿಸಿ ನುಡಿದೊಡಾತನುಮಱಿಸಿ ಕಳ್ಳನನಾರಯ್ಯ
ಲಾಱದೆ ನಾಲ್ವರ್ ಸುಭಟರುಮಂ ಮನೆಗೊಡಗೊಂಡು ಬಂದು ಭೀತನಾಗಿ ಬಿನ್ನನೆ
ಮೊಗಂಬಾಡಿ ಚಿಂತಿಸುತ್ತಿರ್ದೊಡಾತನ ಮಗಳ್ ಸುಮತಿಯೆಂಬಳಿಂತೇಕೆ ಬಿನ್ನನಾಗಿ

ಚಿಂತಿಸುತ್ತಿರ್ದ್ದಪ್ಪುದುಮನ್ನಾ ಎಂದು ತಂದೆಯುಂ ಬೆಸಗೊಂಡೊಡಾತನುಂ ತನ್ನ ವೃತ್ತಾಂತ ಮೆಲ್ಲಮುಂ ಮಗಗ್ಗೆ ಪೇಳೆ ಕೇಳ್ದು ತಂಜಲ್ವೇಡಿದನೆಲ್ಲಮನಾನಾರ್ಗ್ಗೈದು ಕನಕಮುಮಂ ಕನಪರಮುಮಂ ನಾಳೆ ನಿಮಗೊಪ್ಪಿಸುವೆ[ಂ.] ನೀವುಂ ನಿಶ್ಚಿಂತಮಿರಿಮೆಂದು ತಂದೆಯು ನೇಕಾಂತದೊಳ್ ನುಡಿದು ತಂದೆಯುಂ ಸಂತಪಿಸಿದಾಗಳ್ ಸುಮತಿಯುಮಿರುಳ್ಕಳ್ಳನಂ ಪರೀಕ್ಷಿಸಲ್ವೇಡಿಮಾ ನಾಲ್ವರುಂ ಸುಭಟರ ಪಕ್ಕದಿರ್ದೇನೆಂದವಗ್ಗೆ ಕಥೆಯುಂ ಪೇಳ್ವಂ:—

ಪಾಟಳೀಪುತ್ರಮೆಂಬ ಪುರದಲ್ಲಿ ಶ್ರೇಷ್ಠಿ ಸುದತ್ತನೆಂಬೊಂ. ಆತನ ಮಗಳ್ ಸುದಾಮೆಯೆಂಬ ಕನ್ನೆಯೊಂದು ದಿವಸಂ ಗಂಗೆಯಂ ಮಿಂದುಯಲ್ವೋಗಿ ಮಿಂದಲ್ಲಿ ನೆಗಳ್ ಪಿಡಿದೊಡಾದಮಾನುಮಂಜಿ ತಡಿಯೊಳಿರ್ದ ಜಿನದತ್ತನೆಂಬೊಂ ಸೋದರ ಮೈದುನನಂ ಕಂಡೆನ್ನಂ ಬೇಗಂ ಬಿಡಿಸೆಂದೊಡಾತನಿಂತೆಂದಂ: ಬೇಡಿದುದನೀವೊಡೆ ನಿನ್ನ ಕಾವೆನೆಂದೊಡಾಕೆಯುಂ ಈವೆನೆಂದು ಪೂಣ್ದೊಡೆ ಬೇಗಂ ನೀರಂ ಪೊಕ್ಕು ನೆಗಳಂ ಬಡಿಸಿದ ಬಳಿಕ್ಕ ಪೇಳಿನೆಂ ಬೇಡುವಯ್ ನಿನ್ನ ಬೇಡಿದು ದೆಲ್ಲಮನೀವೆನೆಂದು ಕನ್ನೆ ನುಡಿದೊಡಾತನಿಂತೆಂದಂ: ನಿನ್ನ ಮದುವೆಯಂದು ಪ್ರಥಮ * * * * ನ ಮನೆಗೆ ವಂದು ತೋಱಲ್ವೇಳ್ಕುಮೆಂದು ಬೇಡಿ ದೊಡಾಕೆಯುಮಂತೆಗೆಯ್ವೆನೆಂದು ಪೂಣ್ದಳಿಂತು ಕಾಲಂ ಸಲೆ ಮತ್ತಾ ಕನ್ನೆಗೆ ಯೌವನಂ ನೆಱೆದಂದು ಮದುವೆಯಾದೊಡೆ ತನ್ನ ಪೂಣ್ಕೆ * * * * * * ಅಲಂಕಾರ ಭೂಷಿತೆಯಾಗಿಯಾದಮಾನುಂ ಕೈಗೆಯ್ದು ಚೆಲ್ವೆ ಯಾಗಿ ನಟ್ಟನಡುವಿರುಳ್ ಮನೆಯಿಂದಂ ಪೊಱಮಟ್ಟು ಮೈದುನನಿರ್ದ್ದೋವಣಕ್ಕೆ ಪೋಪನ್ನೆಗಮೆಡೆಯೊಳ್ಕಳ್ಳನೊರ್ವಂ ಕಂಡು ನಿನ್ನ ತೊಟ್ಟಾಭರಣ * * * ಗಲ್ಲದಾಂ ಪೋಗಲೀಯೆನೆಂದೊಡೀಗಳೆ ಪೋಗಿ ಬಂದು ನಿನಗೆನ್ನ ತುಡುಗೆ ಯೆಲ್ಲಮಂ ಕುಡುವೆನನ್ನೆಗಮಿಲ್ಲಿ ಎನ್ನ ಬರ್ಪನ್ನೆಗಮಿತ್ತಂ ಪೋಗದಿರೆಂದು ನಂಬೆ ನುಡಿದು ಸಂತೈಸಿ ಕಿಱಿದಂತರಮಂ ಪೋ * * * * ಱಂ ಕಂಡೀ ಪೊತ್ತಿತ್ತ ಪೋಪಪ್ಪ ಪೊಲ್ಲ ಮಾನಸಿಯೆ ಎಂದಾತಂ ಪಿಡಿದು ಕಾಡೆ ನಿಬಿದೊಂದು ಮನೆ ವಾರ್ತೆಯುಂಟೆನ್ನಂ ಕಾಡದೆ ಪೋಗಲೀಯಾನೀಗಳ್ ಪೋಗಿ ನಿನ್ನಲ್ಲಿಗೆ ಬಂದಪ್ಪೆಂ ಬಂದೊಡೆ ನಿನ್ನ ಮನಕ್ಕೆಗೆಯ್ವೆನೆಂದು ನಂಬೆ ನುಡಿದು * ಕಿಱಿ ದಂತರಮಂ ಪೋಪನ್ನೆಗಂ ಎಡೆಯೊಳ್ ಬ್ರಹ್ಮರಾಕ್ಷಸಂ ಕಂಡು ತನ್ನಂ ತಿನಲ್ಬಗೆದೊಡೆ ಬ್ರಹ್ಮರಾಕ್ಷಸನಂಗಿಂತೆಂದಳ್: ನಿಜದೊಂದು ಮನೆವಾರ್ತೆಯುಂಟೀಗಳೆ ಪೋಗಿ ಬಂದಪ್ಪೆಂ ಬಂದ ಬಳಿಕ್ಕೆನ್ನ ಮೆಚ್ಚೆ[ದಂತೆ ಮಾ]ಡೆಂದು ನಚ್ಚುಗೊಟ್ಟು ನಂಬಿಸಿ ಪೋದೊಡಾ ಕಳ್ಳನುಂ ತಳಾಱನುಂ ಬ್ರಹ್ಮರಾಕ್ಷಸನುಮಂತುಮಾಕೆಯಿಾ ಪೊೞ್ತು ತುಱಿಪದಿಂದ ಸ್ತ್ರೀ ಜೊಂದೆತ್ತ ಪೋದಪ್ಪಳೆಂದು ಬೞಿವಿಡಿದು ನೋಡುತ್ತಂ ಪೋಪರನ್ನೆಗಂ ಮೆಯ್ಯು ನನು * * ಗೆಯ್ದುದಾವಾಸಕ್ಕೆ ಪೋಗಿ ಬಾಗಿಲಂ ತೆಱೆಯಿಮೆಂದಾಗಳ್ ಆವರಾರೆಂದು ಬೆಸಗೊಂಡಾಗಳಾನಲ್ತೆ ಸುದಾಮೆಯೆನೆಂದೊಡೆ ಬಾಗಿಲಂ ತೆಱೆದಾವಣ ದೊಳಗಂ ಪೊಕ್ಕಳನೀ ಪೊೞ್ತು * * ದು ಬೆಸಗೊಂಡೊಡೆ ನೀನಲ್ತೆ ಎನ್ನ ನಚ್ಚಿಗೊಂಡೈ: ಎನ್ನ ಮದುವೆಯಂದು ಪ್ರಥಮ ದಿವಸದ ಸಮದನಮನೆನಗೆ

ತೋಱಲ್ವೇೞ್ಕುಮೆಂದು ಬೇಡಿದೊಡಾಂ ಪ್ರತಿಜ್ಞೆಯಂ ನೆಱಪಲ್ ಬಂದೆನೆಂದು ತನ್ನಂ
ತೋಱಿದೊಡಾತನುಂ ಆಕೆಯಂ * * ಮೆಚ್ಚಿ ವಿದ್ಯಾಧರಿಯ ದೇವಗಣಿ
ಕೆಯ ರೂಪನೆ ಪೋಲ್ತೆ ಎಂದು ಪೊಗೞ್ದು ಮತ್ತಮಿಂತೆಂದಂ ಪ್ರತಿಜ್ಞೆಯಂ ನೆಱಪಿದೆ
ಒಳ್ಳಿತಾಯ್ತಾ ಪೋೞ್ತು ಪೊಲ್ಲದುವಂದೀ ನಟ್ಟನಡುವಿರುಳ್ ಕಳ್ಳರುಂ ತಳಾಱರುಂ
ಕಾಡುವರ್ ಬೇಗಂ ಪೋ * * * * ಪೋಗಲ್ ವೇೞ್ದೊಡ
ದೆಲ್ಲಮಂ ಆ ಮೂವರುಂ ಪೊಱಗೆ ಕೇಳ್ದು ಮತ್ತಂ ಬೇಗ ವೇಗಂ ಪೋಗಿ ತಮ್ಮಿರ್ದೆಡೆ
ಗಳೊಳಿರ್ದರನ್ನೆಗಂ ಆ ಮದವಳ್ ರಕ್ಕಸನಲ್ಲಿಗೆ ಬಂದೇನೆನ್ನಂ ನೀ ಮೆಚ್ಚಿದಂತಂ
ಮಾಡೆಂದು ತನ್ನಂ ತೋಱಿದೊಡಾ ಬ್ರಹ್ಮರಾಕ್ಷಸನಿಂತೆಂದಂ: ನೀನುಂ ಸತ್ಯವಾದಿಯೆ
ಯಾದಮಾನುಂ ರೂಪು ಲಾವಣ್ಯ ಸೌಭಾಗ್ಯ ಕಾಂತಿ ಹಾವ ಭಾವ ವಿಲಾಸ ವಿಭ್ರಮಂ
ಗಳನೊಡೆಯಯ್. ನಿನ್ನಂ ತಿಂದಾನಾವ ಗತಿಗೆ ಪೋಪೆ[ಂ]. ನಿನ್ನ ರೂಪನೞಿಯ
ಲಾಱೆನಿ * * * ಗೆಂದು ಪೋಗಲ್ವೇೞ್ದೊಡೆ ಬರ್ಪಳನ್ನೆಗಂ
ತಳಾಱನಂ ಕಂಡೇನೆನ್ನಂ ನೀ ಮೆಚ್ಚುಗೆಯ್ಯೆಂದು ನುಡಿದೊಡಾತನಿಂತೆಂದಂ: ನೀಂ
ಪೊಲ್ಲಮಾನಸಿಯೆ ಎಂದು ಮನದೊಳ್ ಬಗೆದೆಂ. ನಿನ್ನಂತೊಳ್ಳಿದರಾರು [ಮಿಲ್ಲೆಂದು]
ನುಡಿದು ನನ್ನಿಯಂ ತಪ್ಪದೆ ಬಂದೆ. ಸತ್ಯವಾದಿಯೈ ಪೋಗವ್ವಾ ಎಂದು ಪೋಗ
ಲ್ವೇೞ್ದೊಡೆ ಬಪ್ಪಳನ್ನೆಗಂ ಕಳ್ಳನಂ ಕಂಡು ತನ್ನ ತೊಟ್ಟಾಭರಣಮನೆಲ್ಲಮಂ
ಕಳೆದೊಪ್ಪಿಸೆಯಾತನಿಂತೆಂದಂ: ಎ * * * ದೆ ಭವವೆ ನಿನ್ನ
ಕೈಯುದಂ ಕೊಂಡಾನೇನಾಚಂದ್ರಾರ್ಕ ತಾರಾಂಬರಂ ಬರ್ದಪ್ಪೆನೆ ಎಂದುಮೆಣಿ
ಕೊಂಡ ಕನವರಂ ತವನಿಧಿಯಂತೆ ತವೆದಿರ್ದಪ್ಪುದೆ ನಿನ್ನ ಕೈಯಿಂದಂ ಕೊಳ್ಳೆ ಪೋಗಬ್ಬಾ
ಎಂದು ಪೋಗಲ್ವೇೞ್ದನಂತಾ ಮೂವರುಂ ಮದೆವಳಂ ಪೋಗಲ್ವೇೞ್ದು ಪೂಜಿಸಿ
ಕಳಿಪಿದೊಡಾಕೆಯುಂ ತನ್ನ ಮನೆಗೆ ಪೋದಳಿಂತವರೊಳಗೊಳ್ಳಿದರಾರಣ್ಣಂಗಳಿರಾ
ಪೇೞಿಮೆಂದು ಸುಮತಿಯೆಂಬ ಕನ್ನೆ ಬೆಸಗೊಂಡಾಗಳಾ ಸುಭಟರೊಳೊರ್ವ
ನಿರುಳ್ಕುಱಿಯಂ ಕೊಂಡವಂ ಬೊಮ್ಮರಾಕ್ಷಸನಾಕೆಯಂ ತಿನ್ನದೆ ಕಳುಪಿದೊಡಾತ
ನೊಳ್ಳಿದನೆಂದಂ. ಸರ್ಪದಷ್ಟನ ಕಾದಿರ್ದಾತಂ ತಳಾಱಂ ಕಾಡದೆ [ಕಳುಪಿದುದ
ಱಿಂದಾ] ತನೊಳ್ಳಿದಂ. ಕಿಚ್ಚಂ ತರಲ್ ಪೋದಾತನಿಂತೆಂದಂ: ಮದೆವಳಂ ಸೋದರ
ಮಯ್ದುನನತ್ಯಂತ ರೂಪ ಲಾವಣ್ಯ ಸೌಭಾಗ್ಯ ಕಾಂತಿ ಹಾವ ಭಾವ ವಿಲಾಸ
ವಿಭ್ರಮಂಗಳನೊಡೆಯಳಂ ಸೋದರಮಾವನ ಮಗಂ * * *
ನೇಕಾಂತಂ ಸಮನಿಸಿದೊಡಾಕೆಗಳುಪದೆ ಪೋಗವೇೞ್ದ ಧನದತ್ತನೊಳ್ಳಿದನೆಂದಂ.
ಪುಳ್ಳಿಯಂ ತರಲ್ ಪೋದಾತಂ ಸಾಸಿರ ದೀನಾರದ ಪೊಟ್ಟಳಿಗೆಯಂ ಕದ್ದಾತನಿಂತೆಂದಂ:
ಮದೆವಳ್ ತೊಟ್ಟುದೆಲ್ಲಮಂ * * * * * ವಾತ
ನೊಳ್ಳಿದನೆಂದೊಡಾತನ್ ಕಳ್ಳನಪ್ಪುದನಱಿದು ಬೇಗಮಿರ್ದಾ ನುಡಿಗಳೆಲ್ಲಮಂ
ಮಱೆಯಿಸಿ ಎಲ್ಲರುಮಂ ಮಱಲುಂದಿಸಿದ ಬೞಿಕ್ಕಮಾ ಕಳ್ಳನನೆೞ್ಬಿ ಏಕಾಂತ
ದೊಳಿಂತೆಂದು ನುಡಿಗುಂ: ನಿನಗಾನಾಟಿಸಿದೆನೆನಗೆ ನೆಱೆಯೆ ತುಡಿಗೆಯಂ ಮಾಡಿಸಲ್
ಭಾಗಸಮುಳ್ಳೊಡೆ ನಿನಗಾಂ ಪೆಂಡತಿಯೆನಾಗಿ ನಿನ್ನೊಡವರ್ಪೆನೆಂಬನನುರ್ಕೆಪ
ದಿಂದಂ ಮನಂಗೊಳೆ ನಂಬೆ ನುಡಿದೊಡಾತನುಂ ಮೆಯ್ಮಱೆಯದೆ ದೀನಾರದ ಸಹಸ್ರದ

ಪೊಟ್ಟಳಿಗೆಯುಂ ತೆಗೆದುಕೊಟ್ಟಾಸಿದಱೊಳಗೆ ನಿನಗೆ ತುಡಿಗೆಯುಂ ಮಾಡಿಸುವೆಂ ಬಾ ಪೋಪಮಿರ್ವರುಮೆಂದೊಡಂತೆಗೆಯ್ವೆನೆಂದು ಪೊನ್ನ ಪೊಟ್ಟಳಿಗೆಯುಂ ತಂದೆಯ ಮಱಲುಂದಿದಲ್ಲಿಗೆ ಪೋಗಿ ಬೆರಂಟೆ ಎೞ್ಬಿ ಪೊಟ್ಟಳಿಗೆಯುಂ ತಂದೆಗೆ ಕೊಟ್ಟಳ್. ಕೊಟ್ಟೊಡಾತನುಂ ಕಳ್ಳನುಮಂ ದೀನಾರದ ಸಹಸ್ರದ ಪೊಟ್ಟಳಿಗೆಯುಮಂ ಕೊಂಡು ಪೋಗಿಯರಸಂಗೊಪ್ಪಿಸಿದನೆಂಬೀ ಚಿತ್ರಕಥೆಗಳುಮಂ ಜನಂಗಳ್ಗೆ ಪೇೞ್ದು ಬತ್ತ್ರಮಂ ಕಳ್ಳೊಂ ವೈಸೈಕನೆಂಬೊಂ ಕಳ್ಳನಿನ್ನುಮಾತನ್ ಪೇೞ್ದ ಕಥೆಗಳಂ ಪೇೞ್ವೆಂ ಕೇಳ್ಮಗಳೆ ಎಂದು ಸೋಮಶರ್ಮ ಭಟ್ಟಂ ನಾಗಶ್ರೀಗಿಂತೆಂದು ಪೇೞ್ಗುಂ:—

ಧರ್ಮಪುರಮೆಂಬುದು ಪೊೞಲ್ ಅಲ್ಲಿ ನಾಗದತ್ತನೆಂಬೊಂ ಶ್ರೇಷ್ಠಿಗಾತನ ಬಂಟಂ ವೈಸಾಕನೆಂಬೊಂ ಆತನೊಂದು ದಿವಸಂ ಕಬ್ಬಿನ ಕೈಯುನಾಳ್ವೊಂ ನಿದಾನಮಂ ಕಂಡದಂ ಮಱಿಸಲ್ವೇಡಿ ತನ್ನ ಪೆಂಡತಿಯ ಮನಮುಂ ಪರೀಕ್ಷಿಸಲ್ವೇಡಿ ಕೃತಕ ಗರ್ಭಮಂ ತಾಳ್ದಿರೆ ಪೆಂಡತಿ ಕಂಡಿದೇನ್ ಬಸಿಱೊಳಿರ್ದುದೆಂದೊಡಾತನ ಮಾತಿನೊಳೇನೊ ಕೆಂಮಗಿರಲೆಂದೊಡಾಕೆ ನಿರ್ಬಂಧದಿಂ ಕೇಱಿ ಬೆಸಗೊಳೆಯಾರ್ಗಂ ಪೇೞ್ವೆಯಪ್ಪೊಡೆ ನಿನಗೆ ಪೇೞ್ವೆನೆಂದಿಂತೆಂದು ಪುರುಷರ್ಕಳ್ಗಾಗದುದೇನಾಗದೆಂದು ಪೇೞ್ದೊಡದಂ ಕೇಳ್ದು ಸೈರಿಸಲಾಱದೆ ಪೊೞಲ ಜನಂಗಳೆಲ್ಲಮಱಿವಂತು ಪೇೞ್ದಳೆಂಬೆರಡನೆಯ ಬಂಟನ ಕಥೆಯುಂ ಪೇೞ್ದು ಮೂಱನೆಯ ವೃದ್ಧ ಸ್ತ್ರೀಯ ಕಥೆಯುಂ
*   *   ಂದು ಪೇೞಲ್ತೊಡಗಿದಂ:—

ಹರಿಪುರಿಯೆಂಬ ಪುರದೊಳ್ ಗಂಭೀರೆಯೆಂಬಳೊರ್ವಳ್ ಬೞ್ದಿಯಾಕೆಯ ಮಗಳ್ ಹರಿಣಿಯೆಂಬೊಳಾಕೆಯುಂ ಜಯಂತಮೆಂಬ ಪೊೞಲೊಳ್ ವಸುದತ್ತನೆಂಬ ಪರದಂಗೆ ಕೊಟ್ಟೊಡಾಕೆಗೆ ಗರ್ಭಮಾಗಿ ಮೋದ(ಱ)ಗೆಯ ಮೇಲೆ ಬಯಕೆಯಾದೊಡೆ ತಾಯ್ ಪಲವುಂ ತೆಱದ ಲಡ್ಡುಗೆಗಳುಮಂ ಮಂಡಗೆಗಳುಂ ಮೊದಲಾಗೊಡೆಯ ಪಲವುಂ ಭಕ್ಷ್ಯರೂಪಂಗಳುಮಂ ಕೊಂಡು ಗಂಭೀರೆಯೆಂಬ ಬೞ್ದಿ ಹರಿಪುರದಿಂ ಪೊಱಮಟ್ಟು ಮಗಳಿಪ್ಪೂರ್ಗೆ ಪೋಪಳನ್ನೆಗಮೆಡೆಯೊಳ್ ಎಣ್ಬರ್ ಕಳ್ಳರಂ ಕಂಡವರೊಳಗೊರ್ವನಂ ಪಿಡಿದೞ್ತ್ತಿನ್ನ ಮಗಂ ನಿನ್ನನೆ ಪೋಲ್ಕು[ಂ] ಪನ್ನೆರಬ್ಬರಿಸಂ * ದೊವತ್ತೆ ಪೋದನೆಂದಱಿಯೆಂ ಆತನಂ ಕಾಣದಿರುಳುಂ ಪಗಲುಂ ನೆನೆದೞ್ತು ಕಣ್ಗಳ್ ಬಾತಿರ್ಪುವಿಂದೆನಗೆ ಆತಂ ಬಂದಂತಿರೆ ನಿನ್ನಂ ಕಂಡು ಸಂತಸಮಾಯ್ತು ಮಗನೆ ನೀಮೆಲ್ಲಂ ಬನ್ನಿಂ ಪೋಪಂ ಸಾರೆಯೂರುಂ ಮಿಂದುಂಡು ವಿಶ್ರಮಿಸಿ ನಾಳೆ ಪೋಪಿರೆಂದೊಡಗೊಂಡು ಪೋಗಿ ಮಗಳ ಮನೆಯನೆಯ್ದಿ ಅವರ್ಗೆಲ್ಲಂ ನೀರನಿಡಿಸಿ ತಲೆಯುಂ ಪೂಸಿಸಿಯೊಲ್ಲಣಿಗೆಯನುಡಿಸಿ ತಲೆಯೊಳ್ ಕೞಿಯುಂ ಪೊಯ್ದಾಗಳ್ ಬಿದ್ದಿನ ಮನೆಯ ಮೇಗೇಱಿ ಕಳ್ಳರೆಂದು ಪುಯ್ಯ[ಲಿ]ಟ್ಟಾಗಳನಿಬರುಂ ತ್ರಸ್ತ ಭೀತರಾಗಿ ಪಟ್ಟನೆ ಪಾಱಿಯೋಡಿ * ಟ್ಟೊಳ್ಳಿತ್ತೆಮ್ಮಂ ಬೞ್ದಿಗಿತ್ತಿ ಛಿದ್ರಿಸಿದಳೆಂದು ಪಗೆಸಾಱಿದ್ದರ್. ಇತ್ತ ಮುಂ ನೆಟ್ಟನೊರ್ವನೊಂದಿರುಳೊಳ್ಕಳ್ಳರ್ಬರ್ಪರೆಂದಱಿದು ಕೂರಿತಪ್ಪ ಬಾಳಂ ಪಿಡಿದಿರ್ದಳನ್ನೆಗಂ ಇರುಳ್ ಕಳ್ಳರ್ ಬಂದಾಕೆಯ ಉಂದಿದ ಮನೆಯೊಳ್ ಕನ್ನವಿಕ್ಕಿದೊಡೆ ಕನ್ನದ ಬಾಗಿಲೊಳ್ ಬಾಳನಡ್ಡಮಿಟ್ಟು ಪಿಡಿದಿರ್ದು ಪುಗುವ ಕಳ್ಳನ ಮೂಗನರಿದಡಮಂ ಪೊಱಮಟ್ಟು ತನಗೆ ಪುಗಲ್ ಪಾಂಗಿಲ್ಲ ನೀಂ ಪುಗೆಂದು ಪೆಱನೊರ್ವನಂ

ಪುಗಿಸಿದಂ ಆತನ ಮೂಗುಮಂ ಕೊಱೆ[ದೊಡಾತ]ನುಂ ಪೆಱನೊರ್ವನಂ ಪುಗಿಸೆ ಇಂತನಿಬರುಂ ಸೂೞು ಸೂೞೊಳೆ ಪೊಕ್ಕೊಡನಿಬರ ಮೂಗುಮಂ ಕೊಱೆದಿಕ್ಕಿದೊಡನಿಬರುಂ ಮೂಗರಿಯೆಪಟ್ಟು ಪೊಱಮಟ್ಟು ಪೋಗಿಯೊರ್ವನಿಂದ್ರಜಾಲಿಗನ ಮನೆಯೊಳ್ ಕನ್ನಮಿಕ್ಕಿ ಪುಡುಕೆಯಂ ತೆಗೆದು ಪೊತ್ತು ಪೋಗಿ ಪೊಱವೊೞಲೊಳಾ ಶ್ಮಶಾನದೊಳಿೞಿಪಿ ಕುಱಿಯ ಕಳ್ದು ತಂದ ಅಱುವರ್ ಕಳ್ಳರುಂ ಮಱಲುಂದಿದ ಒರ್ವನಾ ಕುಱಿಯಂ ಕೊಂದು ಜಾವಮಿರ್ದು ಮಸಣದ ಕಿಚ್ಚಿನೊಳ್ ಪಿಶಿತಮಂ ಮಾಡುತ್ತಿೞ್ದು ಪುಡುಕೆಯಂ ತೆಱೆದು ನೋೞ್ಪನ್ನೆಗಂ ಅದಱೊಳಗಿರ್ದ * * * * * * ನಿಗರ ಪಾವೆಗಳುಂ ಸೀರೆಗಳುಂ ಝುಣಂಕೃತಮಂ ಕೊಂಡೊಂದು ಪ್ರತಿಮುಖಮಂ ಕೊಂಡು ತನ್ನ ಮುಖದೊಳಿಟ್ಟು ಪುಲಿಯ ಝುಣಂಬಮುಮಂ ತೊಟ್ಟು ಶ್ಮಶಾನದೊಳಿರೆ * * * * * ರ್ದನನ್ನೆಗ ಮೆಚ್ಚಿತ್ತು ಕಂಡಱುವರುಂ ಕಳ್ಳರುಂ ಬೇತಾಳನೆಂದಂಜಿ ಪ್ರಾಣಭಯದಿಂದೋಡಿ ಕೆಟ್ಟರಾತನುಮವರೋಡುವುದಂ ಕಂಡು ಪಿಶಿತಮಂ ಕೊಂಡು ಬೞಿಯಂ ತಗುಳೆ ಎನಿತನೀತಾತನ ಕಾಣ್ಬರನಿತನಿತೆ ಬೇತಾಳಂ ಬೞಿಯಂ ತಗುಳ್ದನೆಂದೊಡೆ ಪ್ರತಿಮುಖಮುಂ ಝುಣಂಬಮುಮಂ ಕಳೆದೀಡಾಡಿ ತನ್ನ ಪೆಸರಂ ಪೇೞ್ದವರಂ ಮಾಣಿಸಿಯೊಡಗೂಡಿ ತನ್ನ ಮಾಡಿದ ಪಿಶಿತಮನವರ್ಗೆಲ್ಲಂ ಪರ್ಚಿಗೊಟ್ಟುಮನಿಬರುಮೊಂದಾಗಿ ಪೋಪನ್ನೆಗಮ್—

ಇತ್ತ ಗಂಭೀರೆಯೆಂಬ ಬಿೞ್ದು ಬೈಗಿರುಳಿನೊಂದು ಜಾವಮುಂಟೆನೆ ಎೞ್ದು ಪೊೞಲಿಂ ಪೊಱಮಟ್ಟು ತನ್ನೂರ್ಗೆ ಪೋಪಳ್ ನೆರಂಬಡದಂಜಿ ಒಂದಾಲದ ಮರನನೇಱಿರ್ದಳನ್ನೆಗಮಾ ಕಳ್ಳರಾಕೆಯೇಱಿರ್ದ ಮರಕ್ಕೆ ವಂದು ಅವರೊಳೊರ್ವಂ ಬಟ್ಟೆಯೊಳ್ಬರ್ಪ ಜನಮುಂ ನೋಡಲ್ವೇಡಿ ಮರದ ತುತ್ತತುದಿಯನೇಱಿ ನೋೞ್ಪನ್ನೆಗಂ ಮರದ ಮೇಗಿರ್ದ ವೃದ್ಧಸ್ತ್ರೀಯಂ ಕಂಡು ನೀನಾರ್ಗೆಂದಾತಂ ಬೆಸಗೊಂಡೊಡಾಕೆ ಯಾನೀ ಮರದೊಳಿಪ್ಪ ಯಕ್ಷದೇವತೆಯೆನೆಂದೊಡೆ ಆತ[ನೆ]ನಗೆ ಪೆಂಡತಿಯಪ್ಪಾ ಎಂದು ಬೆಸಗೊಂಡೊಡೊಂದು ಪಾಂಗಿನೊಳಪ್ಪೆನೀ ಪಿಶಿತದ ಖಂಡಮಂ ನಾಲಗೆಯಿಂ ಪಿಡಿದೆನ್ನ ಬಾಯೊಳಿಡುವೊಡೆ ನಿನಗಾಂ ಪೆಂಡತಿಯಪ್ಪೆನೆಂದು ನುಡಿದೊಡಾತನುಂ ನಾಲಗೆಯಿಂದಂ ಪಿಶಿತದ ಖಂಡಮಂ ಬಾಯೊಳಿಡೆ ನಾಲಗೆಯಂ ಪಱಿಯೆ ಕಚ್ಚಿದೊಡವಂ ಪುಯ್ಯಲಿಟ್ಟಂ; ಬೀಱೆ ಅನಿಬರುಂ ಭಯದಿಂದೋಡೆ ವೃದ್ಧಸ್ತ್ರೀಯೆಂದಳ್ : ಎನಗೆ ನಿಮ್ಮ ಕಳ್ವಲ್ಲಿಮೆಂಟನೆಯ ಭಾಗಮಂ ತಂದೀ ಮರದ ಪೋೞೊಳಿಟ್ಟು ಪೋಪೊಡೆ ಬಾೞ್ವಿರಿಲ್ಲದಾಗಳ್ ಸತ್ತಿರ್ ನಿಮ್ಮೆಲ್ಲರುಮಂ ತಿಂದಪ್ಪೆನೆಂದೊಡಂಜಿ ಕಳ್ಳರಂತೆಗೆಯ್ವೆಮೆಂದೊಡಂಬಟ್ಟು ಕಳ್ವಲ್ಲಿಯೆ ಎಲ್ಲಮೆಂಟನೆಯ ಭಾಗಮಂ ಮರದ ಪೋೞೊಳಿಟ್ಟು ದಿವಸಕ್ಕಂ ಪೋಪರಾ ವೃದ್ಧಸ್ತ್ರೀಯುಂ ತನ್ನೂರಿಂದಂ ಬಂದು ಕಸವರಮಂ ಕೊಂಡುಪೋಕುಮಿಂತಾ ಎಣ್ಬರ್ಕಳ್ಳರನಾ ವೃದ್ಧಸ್ತ್ರೀ ಪಿಡಿದಾಳ್ದಳೆಂಬ ಕಥೆಗಳುಮಂ ಇಂತಿವು ಮೊದಲಾಗೊಡೆಯ ಚಿತ್ರಕಥೆಗಳಂ ಪಟದೊಳ್ ಬರೆದು ಜನಂಗಳ್ಗೆ ತೋಱಿ ಪೇೞ್ದು ಬತ್ತಮಂ ಕಳಿಪೊಸೀತನೊರ್ವಂ ವೈನೈಕನೆಂಬೊಂ ಕಳ್ಳಂ, ಮತ್ತೊರ್ವಂ ವೈನೈಕನೆಂಬೊವಾನ್ಯೆಕಸಂತೆಯಾಸಕ್ತರಾಗಿ ಜನಂಗಳ ಧಾನ್ಯಮಂ ಸಱುವತ್ತು ಬಳ್ಳಮ

ನಿಪ್ಪತ್ತು ಬಳ್ಳಮೆಂದಳೆದು ಪಿರಾತನೊರ್ವಂ ವೈಸ್ಯಕನೆಂಬೊಂ ಕಳ್ಳಂ ಮತ್ತೊರ್ವಂ ವ್ಯೋಮುಕನೆಂಬೊಂ ವೈಸ್ಯಕನ ಕಳ್ಪ ಧಾನ್ಯಮನಲ್ಲಿಯುಲ್ಲಿ ಮನೆಯೊಳಗಿರ್ದು ಕಿಱಿದಾನುಮೊಂದು ಛಿದ್ರ ದ್ವಾರದೊಳಗಣ್ಗೆ ಬತ್ತಮುಂ ಬರೆ ಕೊಳ್ವಂ ಪೊಱಗಣೆಱೆದ ಬತ್ತಮಂ ನೋಟಕ್ಕೆ ಕಿಱಿದಪ್ಪಂತಿರೆ ಇಂತು ಮೂವರುಮೊಂದಾಗಿ ಬತ್ತಮುಂ ಮಾಱುವರಾ ಬತ್ತಂಗಳಂ ಕಳ್ದುಕೊಳ್ವರೀ ಪ್ರಕಾರದಿಂ ಮೂವರ್ಗ್ಗಂ ಕಾಲಂ ಸಲೆ ಮತ್ತಮೊಂದು ದೆವಸಂ ಕೌಶಳಮೆಂಬೂರ ಗಾವುಂಡಂ ಜಗದ್ಗೃಹನೆಂಬೊಂ ತನ್ನ ಬತ್ತಮಂ ಚಂಪಾ ನಗರಕ್ಕೆ ಮಾಱಲೆಂದು ಕೊಂಡುಪೋಗಿ ಬತ್ತಮನಳೆವಲ್ಲಿಯಾ ಮೂವರ ದೋಷಂಗಳಂ ಪ್ರಕಟಮಾಗರಸುವರೆಗಮಾದೊಡೆ ಅರಸನಿವರ ಕಳವಿನ ಪುಸಿಯ ದೋಷಂ ಕಾರಣಮಾಗಿ ಮೂವರುಮಂ ಕೊಲಲ್ ಉಯ್ದುಪ್ಪರ್ ಮಗಳೆ ಎಂದು ಪೇೞ್ದೊಡೆ ನಾಗಶ್ರೀಯುಮೀ ತೆಱದಪ್ಪ ದುಃಖಕ್ಕಂಜಿ ಪುಸಿಯಂ ಕಳವುಮಂ ನಿವೃತ್ತಿಗೆಯ್ದನಮ್ಮಾ ಎಂದೊಡಂತಪ್ಪೊಡಾ ಎರಡುಂ ಬ್ರತಂಗಳ್ ನಿನಗಿರ್ಕೆ ಮಗಳೆ ಎಂದೊಡಂತೆಗೆಯ್ವೆನೆ ಮತ್ತಂ ಕಿಱಿದಂತರಮಂ ಪೋಪನ್ನೆಗಂ ಗಂಡನುಮಂ ಪೆಣ್ಡತಿಯುಮನೊಡಗೂಡಿ ಇರ್ವರುಮಂ ಪೆಡಂಗೈಯುಡಿಯೆ ಕಟ್ಟಿ ಕೊಂಡುಪೋಪುದಂ ಕಂಡು ಇದಾವ ದೋಷಂ ಗೆಯ್ದುರವರಂ ಬೆಸಗೊಳ್ಳಿಮೆಂದು ತಂದೆಗೆ ಪೇೞ್ದೊಡಾತನುಮದೆಲ್ಲಮಂ ಬೆಸಗೊಂಡು ಮಗಳ್ಗಿಂತೆಂದು ಪೇೞ್ಗುಂ:—

ಚಂಪಾ ನಗರದ ಸಾರೆ ಶ್ವೇತಪುರಮೆಂಬ ಪೊೞಲ್. ಅಲ್ಲಿ ಮತ್ಸ್ಯನೆಂಬ ಪರದನಾತನ ಪೆಂಡತಿ ಜೈಸೆಯೆಂಬೊಳಾ ಇರ್ವರ್ಗ್ಗಂ ಮಕ್ಕಳ್ ನಂದನೆಂಬ ಬೋದನೆಂಬವರ್ಗಳ್ * * * * * ಮಡಿದರಿಂತು ಕಾಲಂ ಸಲೆ ನಂದನನೊಂದು ದಿವಸಂ ದ್ರವ್ಯಂ ಬಡೆವುದು ಕಾರಣಮಾಗಿ ಸ್ವರ್ಣದ್ವೀಪಕ್ಕೆ ಪೋಗುತ್ತಂ ಮಾವಂಗೆಂದಂ: ಪನ್ನೆರಡು ವರುಷಕ್ಕಾಂ ಬಾರದಾಗಳ್ * * * * ಕೂಸಂ ಕುಡಿಮೆಂದು ಪೇೞ್ದು ಪೋದಂ. ಇಂತು ಕಾಲಂ ಸಲೆ ಪನ್ನೆರಡು ವರುಷಂ ನೆಱೆದಂದು ನಂದಂ ಬಂದಂದು ಕೂಸಂ ಬೋದಂಗೆ ಕೈನೀರೆಱೆದು ಕುಡುವ ಪ್ರಸ್ತಾವಕ್ಕಾಗಳ್ ನಂದಂ ಬಂದಡಾತಂಗೆ ಕುಡಲ್ತ * * ಡೆ ತಮ್ಮನ ಪೆಂಡತಿಯುನೆಮಗೆ ಕೊಳಲಕ್ಕುಮೆ ಎಂದು ಕೊಂಡನಿಲ್ಲ. ಇಂತಿರ್ವರುಂ ಬಿಸುಟ್ಟೊಡೆ ಮದಾಳಿ ತನ್ನ ತವರ್ಮನೆಯೊಳಿರ್ದಳ್. ಮತ್ತಮಾ ಪೊೞಲೊಳ್ ನಾಗದತ್ತನೆಂಬೊಂ ಪರದನಾತನ ಭಾರ್ಯೆ ಗಂಗೆಯೆಂಬೊಳಾ ಇರ್ವರ್ಗ್ಗಂ ಮಗಂ ನಾಗಸೂರನೆಂಬೊಂ. ಆತಂಗೆಣ್ಬರ್ ಪೆಂಡಿರ್ ತನ್ನ ಪೆಂಡಿರೊಳ್ ಸಂತೋಸಂ ಬಡೆಯದೆ ಮದಾಳಿಯೊಳು[ಂ] ಮಱೆವಾಳುತ್ತಿರ್ಕುಂ. ಇಂತು ಕಾಲಂ ಸಲೆ ಮತ್ತೊಂದು ದಿವಸಂ ನಾಗಸೂರಂ ಮದಾಳಿಯುನೊಡಗೊಂಡು ಚಂಪಾ ನಗರಕ್ಕೆ ವಂದೊಡೆ ತಳಾಱಂ ಕಂಡಾಯಿರ್ವರುಮಂ ಪಿಡಿದು ಕೊಂಡುಪೋಗಿ ಅರಸಂಗೆ ತೋಱಿದೊಡರಸನುಮಿರ್ವರುಮನೆರಡು ಕಾಯ್ದು ಕಬ್ಬೊನ್ನ ಪ್ರತಿಮೆಗಳನಪ್ಪಪೇೞಿಮೆಂದು ತಳಾಱಂಗೆ ಬೆಸವೇೞ್ದೊಡವರಿರ್ವರುಮಂ ಕೊಲಲ್ಕೊಂಡು ಪೋಪರ್ ಮಗಳೆ ಎಂದು ಪೇೞ್ದೊಡಾತನುಮಿಂತಪ್ಪ ಭಯಕ್ಕಂಜಿ ಪರ ಪುರುಷ ಪ್ರಸಂಗಮಂ

ತೊಱೆದೆನೆಂದೊಡಂತಪ್ಪೊಡಾ ಬ್ರತಮುಂ ನಿನಗಿಕ್ಕೆ ಮಗಳೆ ಎಂದೊಡೆ ಉೞಿದ ಬ್ರತಂಗಳಂ ಜಸುೞ್ವುದೆಂದು ಪೇೞ್ದು ಕಿಱಿದಂತರಮಿರ್ವರ್ಪೋಪರನ್ನೆಗಂ ಮತ್ತೊರ್ವನಂ ಕೊಲಲ್ ಕೊಂಡುಪೋಪ ಪುರುಷನಂ ಕಂಡೀತನೇದೋಷಂ ಗೆಯ್ದನಾಗಿ ಕೊಲಲ್ ಕೊಂಡುಪೋಪಿರಿ ಎಂದು ಬೆಸಗೊಳಿಯಮ್ಮಾ ಎಂದು ಪೇೞ್ದೊಡಾತನುಮದೆಲ್ಲಮಂ ಬೆಸಗೊಂಡು ಮಗಳ್ಗಿಂತೆಂದು ಪೇೞ್ಗುಂ:—

ಈ ಕೊಲೆಪಡುವಾತಂ ಅರಸರ ಗೋಮಂಡಳಮಂ ಕಾವೊಂ ವೀರಪೂರ್ಣನೆಂಬೊಂಗರಸನೊಂದು ದಿವಸಮೀತಂಗೊಸೆದು ತನ್ನ ಗೋಮಂಡಳದೊಳಗೊಳ್ಳಿ * * * ಪತ್ತು ಪಯನುಮಂ ಮೂಸಾಸಿರಗಂಡುಗ ಬತ್ತಮುಮಂ ಪ್ರಮಾಣಂ ಮಾಡಿ ಕೊಟ್ಟೊಡಾ ಪಸರದೊಳರಸಂ ದಾಯಂಗೊಟ್ಟನೆಂದು ಸಾಮಂತರ ನಿಯೋಗಿಗಳ ಅರಸಿಯರ ಗೋವುಗಳೊಳ್ಳಿದವಪ್ಪ ಎಮ್ಮೆಯುಂ ಪಸು * * * * * * ಮಂಗಳದೊಳಗೆ ಪುಗಿಸಿ ಯುಣುತ್ತಂತು ಮತ್ತಂ ಲೋಭಾಭಿಭೂತಂ ಪೊಱಲ ಪಸುಗಳನರಸರ ಗೋಮಂಡಳಮಂ ಪೊಕ್ಕವಲ್ಲೆಮುಂ ಬಂಡಾರಂ ಪೊಕ್ಕವೆಂದುಂ ಪೊಱಮಡವೆಂದು[ಂ] ಜಡಿದು ಬಗ್ಗಿಸಿ * * * * * ಹೊದವಿಯ ಗೋಮಂಡಳದೊಳ್ ಅಗ್ಗ * * * * * ದನಾವನಾಯ್ದು * * * * ಒಂದು ದಿವಸಂ ವೀರಪೂರ್ಣನಂ ಮೂದಲಿಸಿ ಮಹಾದೇವಿಯರಸಂಗೆನ್ನ ಕಾಮಧೇನುವಂ ವೀರಪೂರ್ಣಂ ಕೊಂಡೊಯ್ದು [ನಲ್ಲದೆ] ಲೋಗರ ಪಶುಗಳಂ ಕೊಳಲ್ತಗುಳ್ದೊನ್ ಮಹಾಲೋಭಾಭಿಭೂತನಸಂತುಷ್ಟಚಿತ್ತನಿವನಂ ಕೊಲ್ಲಿಮೆಂದು ತಳಾಱಂಗೆ ಬೆಸವೇೞ್ದೊಡೆ ಸೂಲದೊಳಿಕ್ಕಲೊಯ್ದಪ್ಪರ್ ಮಗಳೆ ಎಂದು ಪೇೞ್ದೊಡೆ ನಾಗಶ್ರೀ ಎಂದಳ್: ಕೊಲ್ಲದ ಪುಸಿಯದ ಕಳ್ಳದ ಸ್ವದಾರಸಂತೋಷಂ ಪರಿಮಿತ ಪರಿಗ್ರಹಮಿಂತಯ್ದುಮಣುವ್ರತಂಗಳಂ ಕೊಂಡೆನೀ ಬ್ರತಂಗಳಂ ರಿಸಿಯರ್ಗ್ಗೊಪ್ಪಿಸಿದೊಡಾನುಮೀಯಯ್ದುಂ ಪಾಪಂಗಳೊಳ್ ಅಪ್ಪ ಸೇದೆಯ * ವಡುವುದುಂ ಕೊಲೆಯುಮನಿವರಂತೆಯ್ದಲ್ವೇೞ್ಕುಮೆಂದೊಡೆ ಸೋಮಶರ್ಮನೆಂದನೀನಯ್ದುಮಣುಬ್ರತಮಂ ಕೈಕೊಂಡು ದೃಢಬ್ರತೆಯಾಗು ಸುವ್ರತೆಯಾಗು ಮಗಳೆ ಅವರ್ಗ್ಗೊಪ್ಪಿಸಲ್ವೇಡ ಎಂ[ತು] ನಿಚ್ಚಂ ಬತ್ತಲಿಗನಪ್ಪ ಸವಣನಲ್ಲಿಗೆ ಪೋಗಿ ಕಂಡು ನುಡಿದು ಕಾಡಿ ಬರ್ಪರ್ ಮಗಳೆ ಎಂದು ಮಗಳನೊಡಗೊಂಡು ರಿಸಿಯರಲ್ಲಿಗೆ ಪೋಗಿ ಕಂಡು ಗೆಂಟಱ್ತೊಳ್ ಕಂಡಿರ್ದ್ದಿಂತೆಂಗುಂ: ಎಲೆ ತಪಸ್ವಿ ಎನ್ನ ಮಗಳ್ಗೆ ನಿಮ್ಮ ಬ್ರತಂಗಳನೇಕೆ ಕೊಟ್ಟಿರೆನೆ ಸೂರ್ಯಮಿತ್ರ ಭಟ್ಟಾರರೆಂದರ್: ನಿಮ್ಮ ಮಗಳ್ಗೇಕಕ್ಕುಮೆಮ್ಮ ಮಗ[ಳಿ]ಂಗೆಮ್ಮ ಬ್ರತಂಗಳನಾಮುಂ ಕೊಟ್ಟೊಡೆ ನಿನಗೆ ಬೇನೆ ಮೂಡಿತ್ತೆ ಎಂದು ನುಡಿದು ಇತ್ತ ಬಾ ನಾಗಶ್ರೀ ಎಂದು ಕರೆದೊಡಾಕೆಯುಂ ಪೋಗಿ ಇರ್ವರ್ ಭಟ್ಟಾರಕರ ಕಾಲ್ಗಳಂ ಪಿಡಿದು ಎಱಗಿ ಪೊಡೆವಂಟವರ ಕೆಲದೊಳಿರ್ದೊಡೆ ಸೋಮಶರ್ಮಭಟ್ಟಂ ಬೆಱಗಾಗಿರೆ ಇರಿಸಿದಂತಿರ್ದೊನಂ ಭಟ್ಟಾರರೆಂದರ್: ಈ ಎಡೆಯಿಂದಂ * * * * * * * * * ದುಷ್ಟ ಬ್ರಾಹ್ಮಣಾ ಅರಸರ್ಗೆ ಪೇೞ್ದು ನೀನಬೀೞ್ಕಾಡದನ್ನೆಗಂ ಎಂದೊಡಲ್ಲಿಂದಮೆೞ್ದುಪೋಗಿ ಸೋಮಶರ್ಮಭಟ್ಟಂ * * * * *

ಯೊಳಗಣಿಂದಮನ್ಯಾಯಂ ಭೋ ಅನ್ಯಾಯಂ ಭೋ * * * * ಬ್ರಾಹ್ಮನ್ಯಂ ಭೋ ಎಂದೞುತ್ತುಂ ಅಂಗಡಿಯ * * * * ಜನಂಗಳ್ಗೆ ಪುಯ್ಯಲಿಡುತಂ ಅರಮನೆಗೆ ಪೋಗಿ ಚಂದ್ರವಾಹನನೆಂಬರಸನಂ ಕಂಡು ಇಂತೆಂದು ಬಿನ್ನಪಂ ಗೆಯ್ದುಂ: ಮಹಾರಾಜಾ ಆಂ ಬತ್ತಲೆ ಸವಣರಿಂದಂ ಕೋಳ್ಪಟ್ಟೆ ನೆನ್ನ ಮಗಳ್ ನಾಗಶ್ರೀಯಂ ತನ್ನ ಮಗಳೆಂದು ಕೈಕೊಂಡಿರ್ದರ್ ಮತ್ತವರ್ ಕೂಸಂ ಕೊಂಡೋಡದನ್ನೆಗಂ ಪೋಪಂ ಬನ್ನಿಮೆಂದರಸನನೊಡಗೊಂಡು ಪೋಗೆ ಸಾಮಂತ ಮಹಾಸಾಮಂತ ಶ್ರೇಷ್ಠಿ ಸೇನಾಪತಿ ತಳಾಱ ದಂಡನಾಯಕ ಪ್ರಭೃತಿ ಚಂಪಾನಗರದ ಸಬಾಳ ವೃದ್ಧ ಜನಮೆಲ್ಲರುಂ ಅರಸನೊಡನೆ ನಾಗರ ತಾಣಕ್ಕೆ ಪೋಗಿ ಸೂರ್ಯಮಿತ್ರಾಚಾರ್ಯರ್ ಅಗ್ನಿಭೂತಿ ರಿಸಿಯರನರಸಂ ಕಂಡವರ ಪಕ್ಕದೆ ಕುಳ್ಳಿರ್ದಿ ದೇನ್ ಸಂಬಂಧಂ ಪೇೞಿಮೆಂದು ಮುನೀಂದ್ರನಂ ಬೆಸಗೊಂಡೊಡೆ ಸೂರ್ಯಮಿತ್ರ ಭಟ್ಟಾರಕರೀ ಕೂಸೆಂಬುದು ನಮ್ಮ ಮಗಳೆಂದೊಡೆ ಸೋಮಶರ್ಮಭಟ್ಟನ್ ನಾಗಶ್ರೀ ಎನ್ನ ಮಗಳ್ ನಾಗರಿತ್ತರೆಂದೊಡೆ ಭಟ್ಟಾರರಿಂತೆಂದರ್: ನಿನ್ನ ಮಗಳಪ್ಪೊಡೆ ನಾಲ್ಕು ವೇದಮುಂ ಮೂಱಂಗಮುಂ ಪದಿನೆಂಟು ಧರ್ಮಶಾಸ್ತ್ರಂಗಳುಂ ಮೀಮಾಂ[ಸಾ] ನ್ಯಾಯಶಾಸ್ತ್ರಂ ವ್ಯಾಕರಣಂ ಪ್ರಮಾಣಂ ಕಾಬ್ಯಂ ನಾಟಕಂ ಛಂದಂ ಅಲಂಕಾರಂ ಅಭಿಧಾನಂ ಸಾಮುದ್ರಿಕಂ ಶಾಳಿಹೋತ್ರಂ ಪಾಲಕಾಪ್ಯಂ ಹಾನಿತಂ ಚರಕಮಶ್ವಿನೀ ಮತಂ ಬಾಹಳಂ ಶುಶ್ರುತಮುಮೆಂದಿವು ಮೊದಲಾದ ಸರವೈದ್ಯಮುಮಂ ಚಾಣಾಕ್ಯಂ ಜ್ಯೋತಿಷಂ ಮಂತ್ರವಾದಂ ಮೊದಲಾಗೊಡೆಯ ಶಾಸ್ತ್ರಂಗಳೆಲ್ಲಮನೀನೀ ಕೂಸ ನೋದಿಸಿದಾ ಎಂದೊಡಾತನಿಲ್ಲೋದಿಸಿದೆನೆಂದಂ. ಮತ್ತಿನಿತುಮನಾ ಕೂಸನಾವೋದಿ ಸಿದೆಮದಱಿಂದೆಮ್ಮ ಕೂಸೆಂದೊಡೆ ಅರಸನೋದಿಸಿ ತೋಱಿಮೆಂದೊಡೆ ವಾಯು ಭೂತಿಯಂ ಓದಿಸಿದ ವೇದಮಂ ಈ ಪೊೞಲ ನೆರೆದ ನೆರವಿಯ ನಡುವೆ ಓದಿ ತೋಱು ಮಗಳೆ ಎಂದೊಡೆ ಆ ನಾಗಶ್ರೀಯುಮಂತೆ ಗೆಯ್ವೆನೆಂದು ಪ್ರಣಮನನುಚ್ಚರಿಸಿ ಸ್ವರವರ್ಣ ಭೇದದಿಂದಂ ಪ್ರಥಮಂ ಚತುಃಷಷ್ಟಿ ಸಂಹತಿಗಳಂ ಪದಕ್ರಮ ಭೇದದಿಂ ಬ್ರಾಹ್ಮಣ ಆರಣ ಸೂತ್ರಂ ಮೊದಲಾಗೊಡೆಯವನೋದಿ ಋಗ್ಯಜು ಸ್ಸಾಮವೇದಂ ಗಳಂ ಸ್ವರವರ್ಣ ಭೇದದಿಂ ಮಂತ್ರ ಸಹಿತ ಪಾಳಿ ಪದ ಕ್ರಮ ಜದಿ ಭೇದದಿಂದಂ ಶತ ಸೂತ್ರಂ ಮೊದಲಾಗೆಲ್ಲವಂ ಯಥಾ ಕ್ರಮದಿಂದುಚ್ಚರಿಸಿ ಪದಿನೆಂಟು ಪುರಾಣಂಗಳುಂ ಪದಿನೆಂಟು ಧರ್ಮ ಸಂಹತಿಗಳುಂ ಮೀಮಾಂಸಾ ನ್ಯಾಯ ಸೂತ್ರಮಿವೆಲ್ಲಮನೋದಿ ವ್ಯಾಕರಣ ಪ್ರಮಾಣಂ ಮೊದಲಾಗಿ ಮುಂ ಪೇೞ್ದೋದುಗಳೆಲ್ಲಮನೋದಿ ಕ್ರಿಯಾ ಕಾರಕ ಸಂಬಂಧದಿಂದೆಲ್ಲಮಂ ವಖ್ಯಾಣಿಸಿ ತೋಱಿದೊಡರಸಂ ಮೊದಲಾಗಿ ನೆರೆದ ನೆರವಿಯುಂ ಪಂಡಿತರ್ಕಳೆಲ್ಲಂ ವಿಸ್ಮಯಂಬಟ್ಟು ಪೊಗೞ್ದು ಮತ್ತಮರಸನಿಂತೆಂದಂ: ಈ ಕೂಸಿನಿತು ಶಾಸ್ತ್ರಂಗಳನೆಂತು ಕಲ್ತಳೆಂದು ಭಟಾರಾ [ಅ]ನಿದನಱಿಯೆ ಬೆಸಸಿಮೆನೆ ಸೂರ್ಯಮಿತ್ರ ಭಟ್ಟಾರರಿಂತೆಂದರ್: ಈ ಯಿರ್ದ ರಿಸಿಯರ ಸಹೋದರಂ ವಾಯು ಭೂತಿಯೆಂಬನುಂ ಅವನೋದಿಸಿದೆಮ್ಮಮ್ಮೊಳಪ್ಪ ಮಾನ ಕಷಾಯಂ ಕಾರಣಮಾಗಿ ಸತ್ತು ಬೆಳ್ಗತ್ತೆಯುಂ ಪೇಪಂದಿಯುಂ ನಾಯುಂ ಪೊಲೆಯರ ಕೂಸುಮಾಗಿಯಿರೆ ರಿಸಿ ಯರ ಪ್ರಬೋಧನೆಯಿಂದಂ ಬ್ರತಂಗಳಂ ಕೈಕೊಂಡೀಗಳ್ ನಾಗಶ್ರೀಯಾದಳೆಂದು

ಮುನ್ನಿನ ಭವದ ಸಂಬಂಧಮೆಲ್ಲಮಂ ಸವಿಸ್ತರಂ ಪೇೞ್ದು ಮತ್ತಮಿಂತೆಂದರ್: ಮಿಥ್ಯಾತ್ವ ಸಂಯಮ ಕಷಾಯ ಯೋಗ ಕಾರಣಮಾಗಿ ಸಂಸಾರ ಸಮುದ್ರದೊಳ್ ತೊೞಲ್ದುಗ್ಗಮೆಂದು ಸವಿಸ್ತರ ಧರ್ಮಮಂ ಪೇೞೆ ಕೇಳ್ದು ಚಂದ್ರವಾಹನನೆಂಬರಸಂಗೆ ವೈರಾಗ್ಯಂ ಪುಟ್ಟಿ ಮಗಂಗರಸುಗೊಟ್ಟು ಪಲಂಬರರಸುಮಕ್ಕಳ್ವೆರಸು ಭಟಾರರ ಪಕ್ಕದೆ ತಪಂಬಟ್ಟಂ * * * * * * ಗಳಂ ಕೆಲಂಬರ್ ಸಮ್ಯಕ್ತ್ವಮಂ ಕೈಕೊಂಡರ್. ಆಗಳಾ ಸೋಮಶರ್ಮಭಟ್ಟಂ ರಿಸಿಯರೊಳಾದ ಮಾನಗರ್ವದ ದೋಷದಿಂದೆಯ್ದಿದ ದುಃಖಂಗಳಂ ಕೇಳ್ದಱಿದು * * ತಪಂಬಟ್ಟಂ. ನಾಗಶ್ರೀಯುಂ ನಾಗಶ್ರೀಯ ತಾಯ್ ತ್ರಿವೇದಿಯುಂ ಬ್ರಹ್ಮಿಲೆಯೆಂಬ ಕಂತಿಯರ ಪಕ್ಕದೆ ತಪಂಬಟ್ಟರ್. ಮತ್ತೆ ಸೂರ್ಯಮಿತ್ರ ಭಟ್ಟಾರರ್ ಅಗ್ನಿಭೂತಿ ಭಟ್ಟಾರರುಮಿರ್ವರುಂ ಪಲ ಕಾಲಂ ತಪಂಗೆಯ್ದು ಅಗ್ರಮಂದಿರಮೆಂಬ ಪರ್ವತದೊಳ್ ಮೋಕ್ಷವನೆಯ್ದಿದರ್. ಮತ್ತಂ ಸೋಮಶರ್ಮ ರಿಸಿಯರುಮುಗ್ರೋಗ್ರ ತಪಶ್ಚರಣಂಗೆಯ್ದು ಸಂನ್ಯಸನ ವಿಧಿಯಿಂದಂ ಮುಡಿಪಿ ಅಚ್ಯುತ ಕಲ್ಪದೊಳಿಪ್ಪತ್ತೆರಡು ಸಾಗರೋಪಮಾಯುಷ್ಯಮನೊಡೆಯೊಂ ಸಾಮಾನಿಕ ದೇವನಾಗಿ ಪುಟ್ಟಿದೊಂ. ಮತ್ತೆ ನಾಗಶ್ರೀಯುಂ ಭುಕ್ತ ಪ್ರತ್ಯಾಖ್ಯಾನ ವಿಧಿಯಿಂ ರತ್ನತ್ರಯಮಂ ಸಾದಿಸಿ ಆರಣ ಕಲ್ಪದೊಳ್ ದೇವನಾಗಿ ಪುಟ್ಟಿದೊಳ್. ಮತ್ತಾ ಸ್ವರ್ಗದೊಳ್ ತ್ರಿವೇದಿಯುಂ ನಾಗಶ್ರೀಎನಗೆ ಜನ್ಮಾಂತರದೊಳಪ್ಪೊಡಂ ಮಗನಕ್ಕೆಂದು ನಿದಾನಂಗೆಯ್ದು ಮುಡಿಪಿ ದೇವನಾದೊಳಿಂತಾಯಿರ್ವರುಂ ಇಪ್ಪತ್ತೆರಡು ಸಾಗರೋಪಮಾಯುಷ್ಯಮನೊಡೆಯೊರಾಗಿ ದೇವರಾಗಿ ಪುಟ್ಟಿದರ್.

ಮತ್ತಂ ಸೋಮಶರ್ಮನಪ್ಪ ದೇವಂ ಪಲ ಕಾಲಂ ದೇವಲೋಕದ ಭೋಗಮನನುಭವಿಸಿ ಬಂದಿಲ್ಲಿ ಈ ಜಂಬೂದ್ವೀಪದ ದಕ್ಷಿಣ ಭರತದೊಳ್ ಅವಂತಿಯೆಂಬುದು ನಾಡುಜ್ಜೇನಿಯೆಂಬುದು ಪೊೞಲ್ ಅಲ್ಲಿ ಇಂದ್ರದತ್ತನೆಂಬೊಂ ಪರದನಾತನ ಭಾರ್ಯೆ ಗುಣವತಿಯೆಂಬಳ್ ಆಯಿರ್ವರ್ಗ್ಗಂ ಸೂರದತ್ತನೆಂಬೊಂ ಮಗನಾಗಿ ಪುಟ್ಟಿದೊಂ. ಮತ್ತಮಾ ಪೊೞಲೊಳ್ ಮೂವತ್ತೆರಡು ಕೋಟಿ ಕಸವರಮನೊಡೆಯೊಂ ಸುಭದ್ರನೆಂಬೊಂ ಸೆಟ್ಟಿಯಾತನ ಭಾರ್ಯೆ ಸರ್ವಯಶಿಯೆಂಬೊಳಾಯಿರ್ವರ್ಗ್ಗಂ ತ್ರಿವೇದಿಯಪ್ಪ ದೇವಂ ಬಂದು ಯಶೋಭದ್ರೆಯೆಂಬೊಳ್ ಮಗಳಾಗಿ ಪುಟ್ಟಿದೊಳಾ ತ್ರಿವೇದಿ ತಪಶ್ಚರಣ ಫಲದಿಂದಂ ದೇವತ್ವಮನೆಯ್ದಿಯುಂ ನಿನ್ನ ನಿದಾನ ಕಾರಣವಾಗಿಯುಂ ಮಿಥ್ಯಾತ್ವಕ್ಕೆ ಸಂದು ಸ್ತ್ರೀತ್ವಮನೆಯ್ದಿದಳಾ ಯಶೋಭದ್ರೆಯುಂ ಸೂರದತ್ತಂಗೆ ಕೊಟ್ಟೊರಾಯಿರ್ವರ್ಗಂ ನಾಗಶ್ರೀಯಪ್ಪ ದೇವಂ ಬಂದು ಸುಕುಮಾರ ಸ್ವಾಮಿಯೆಂಬೊಂ ಮಗನಾಗಿ ಪುಟ್ಟಿದೊಂ. ಆತಂ ಪುಟ್ಟಿದಂದೆ ವೈರಾಗ್ಯ ಕಾರಣಮಾಗಿ ಸೂರದತ್ತ ಸೆಟ್ಟಿ ಸುಕುಮಾರ ಸ್ವಾಮಿಗೆ ಸೆಟ್ಟಿವಟ್ಟಂಗಟ್ಟಿ ತಪಂಬಟ್ಟಂ. ಸುಕುಮಾರ ಸ್ವಾಮಿಯುಂ ಯೌವನನಾಗಿಯುಂ ಅತ್ಯಂತ ರೂಪ ಲಾವಣ್ಯ ಸೌಭಾಗ್ಯ ಕಾಂತಿಯಿಂದಂ ಕೂಡಿದೊನಾತಂಗೆ ಮೂವತ್ತೆರಡು ಬಳ್ಳಿಮಾಡಂಗಳ್ ಅತ್ಯಂತ ರೂಪ ಲಾವಣ್ಯ ಸೌಭಾಗ್ಯ ಕಾಂತಿ ಹಾವ ಭಾವ ವಿಲಾಸ ವಿಭ್ರಮಂಗಳನೊಡೆಯ ದೇವ ಗಣಿಕೆಯರನೆ ಪೋಲ್ಪ ಮೂವತ್ತೆರಡು ನಾಟಕಂಗಳ್ ಮೂವತ್ತಿರ್ವರ್ ದಿವ್ಯ

ಸ್ತ್ರೀಯರ್ಕಳ್ ಮೂವತ್ತೆರಡು ಕೋಟಿ ಕಸವರಮುಂ ಪಂಚ ರತ್ನಂಗಳೆಂಬಿಸಿತ ಱತೊಳಂ ಕೂಡಿ ಭೋಗೋಪಭೋಗ ಸುಖಂಗಳನನುಭವಿಸುತ್ತುಮಿರೆಯಿರೆ—

ಮತ್ತೊಂದು ದಿವಸಮೊರ್ವ ನೈಮಿತ್ತಿಕನಿಂತೆಂದಂ: ' ಸುಕುಮಾರಸ್ವಾಮಿ ಆವುದೊಂದು ಕಾಲದೊಳ್ ರಿಸಿಯರ ರೂಪಂ ಕಾಣ್ಬಮಂದೀತನುಂ ತಪಂಬಡುಗುಮೆಂದೊಡಾ ಮಾತಂ ತಾಯಿ ಕೇಳ್ದು ತನ್ನ ಮನೆಯಂ ರಿಸಿಯರಂ ಪುಗಲೀಯದಂತು ಬಾಗಿಲ ಕಾಪಿನವರಂ ಕಲ್ಪಿಸಿದೊಳ್. ಅಂತು ಕಾಲಂ ಸಲೆ ಮತ್ತೊಂದು ದಿವಸಂ ರತ್ನದ್ವೀಪದಿಂದೊರ್ವ ಪರದಂ ಸರ್ವ ಲಕ್ಷ ಕಂಬಳಂಗಳಂ ಲಕ್ಷ ದೀನಾರಂಗಳ್ ಬೆಲೆಯಪ್ಪವನುಜ್ಜೇನಿಗೆ ಮಾಱಲ್ಕೊಂಡುಬಂದನಾ ಪೊೞಲನಾಳ್ವೊಂ ವೃಷಭಾಂಕನೆಂಬರಸಂಗಂ ಜ್ಯೋತಿರ್ಮಾಲೆಯೆಂಬ ಮಹಾದೇವಿಗಂ ಇಂತಿರ್ವರ್ಗ್ಗಂ ತೋಱಿದೊಡೆ ಅವೞ ಬೆಲೆಯಂ ಬೆಸಗೊಂಡೊಡೆ ಲಕ್ಷ ದೀನಾರಂಗಳ್ಬೆಲೆಯೆಂದು ಪೇೞ್ದೊಡೆ ಕೊಳಲಾಱದರಸಂ ಪೋಗಲ್ವೇೞ್ದನಂತು ಪೊೞಲೊಳಗೆಲ್ಲಂ ತೋಱಿಯಾರುಂ ಕೊಳಲಾಱದಿರ್ದೊಡೆ ರತ್ನಕಂಬಳಂಗಳಂ ಕೊಂಡುಪೋಗಿ ಯಶೋಭದ್ರೆಗೆ ತೋಱಿದೊಡೆ ಲಕ್ಷ ದೀನಾರಂಗಳಂ ಕೊಟ್ಟು ರತ್ನಕಂಬಳಂಗಳಂ ಕೊಂಡೊರೊಂದಱೊಳಂ ನಾಲ್ಕು ಖಂಡಂ ಆಗಿ ಮೂವತ್ತೆರಡು ಖಂಡಂಗಳಂ ಮಾಡಿ ಮೂವತ್ತಿರ್ವರ್ ಸೊಸೆವಿರ್ಕಳ್ಗೆ ಪಚ್ಚುಗೊಟ್ಟೊಡವರುಂ ತಂತಮ್ಮ ಕೆರ್ಪುಗಳೊಳ್ ತಗುಳ್ಚಿದ[ರೆ]ಂಬ ಮಾತನರಸಂ ಕೇಳ್ದು ಚೋದ್ಯಂಬಟ್ಟವರ ವಿಭೂತಿಯಂ ನೋೞ್ಪೆನೆಂದು ಮನೆಗೆ ವರ್ಪುದಂ ಯಶೋಭದ್ರೆ ಕೇಳ್ದರಸರ ಬಟ್ಟೆಯೊಳೆಲ್ಲಂ ಪಂಚ ರತ್ನಂಗಳಿಂ ರಂಗವಲ್ಲಿಯನಿಕ್ಕಿ ನೇತ್ರವಟ್ಟು ದುಕೂಲ ಚೀನಾದಿ ದಿವ್ಯ ವಸ್ತ್ರಂಗಳಂ ಪಾಸಿ ಮಣಿಭದ್ರಮಪ್ಪ ಹೇಮ ಮುಕ್ತಾಹಾರಂಗಳಿಂ ತೋರಣಂಗಟ್ಟಿಯರಸರ ಬರವಂ ಪಾರುತ್ತಿರೆ ನೃಪಂ * * * * * *
ಸುರೇಂದ್ರ ಭವನೋಪಮುಮಪ್ಪ ಮಹಾ ಪ್ರಾಸಾದಮಂ ಪೊಕ್ಕು ವಿಸ್ಮಯ ಚಿತ್ತನಾಗಿ ಸುರಲೋಕಂಬೊಕ್ಕ ಪುಣ್ಯವಂತಂಬೊಲಾಗಳ್ಮಹಾ ವಿಭೂತಿಯಿಂ ಶಯ್ಯಾತಳದೊಳಿರ್ದು * * * * ಬೆಸಗೊಂಡೊಡೆ ಸ್ವಾಮಿ ಆತಂ ಕರಂ ಸಾದು. ನಿಮ್ಮ ಬರವನಱಿಯಂ ಪ್ರಾಸಾದದ ಮೇಗಣ ನೆಲೆಯೊಳಿರ್ದನೆಂದೊಡರಸಂ ಬೞಿಯನಟ್ಟಿಮನೆ ತಾಯಿ ಪೋಗಿ ಮಗನೆ ಅರಸರ್ಬಂದರ್ ಬಾ ಪೋಪಮೆನೆ ಅರಸರೆಂಬರಾರೆನೆ ತಾಯೆಂದಳ್: ನಿಮ್ಮನಾಳ್ವೊರೆಂದೊಡೆ ನಮ್ಮನಾಳ್ವರುಮೊಳರೆ ಎಂದು ವಿಸ್ಮಯಂಬಟ್ಟು ತಾಯ ವಚನಮಂ ಮಾರ್ಕೊಳಲಾಱದೆ ಬರ್ಪೊನ ನರೇಶ್ವರಂ ಕಂಡು ಕಣ್ಬೆತ್ತ ಫಲಮನಿಂದು ಪೆತ್ತೆನೆಂದು ಪ್ರತ್ಯಕ್ಷ ಕಾಮದೇವನನಪ್ಪಿಕೊಳ್ವಂತಪ್ಪಿಕೊಂಡು ದಿವ್ಯ ಶಯ್ಯಾತಳದ ಮೇಗೊಡನಿರಿಸಿದಾಗಳ್ ಸ್ವಜನ ಪರಿಜನಂಗಳ್ ಸಿದ್ಧಾರ್ಥಂಗಳಂ ಮಾಂಗಲ್ಯಮೆಂದಿರ್ವರ್ಗ್ಗಂ ಸೇಸೆಯನಿಕ್ಕಲಾಗಳಾ ಸಿದ್ಧಾರ್ಥಂಗಳ್ ಸುಕುಮಾರ ಸ್ವಾಮಿಯಾಸನಮನೊತ್ತೆ ಕಟಿರಮನಲ್ಲಿಯಲುಗಿಸುವುದುಮಂ ಸೊಡರಂ ನೋಡಿದಾಗಳ್ ಕಣ್ಣೀರ್ಗಳ್ ಸುರಿವುದುಮಂ ಕಂಡೀಗಳೀತಂಗೆ ಬ್ಯಾದಿಗಳೆಂದು ಬಗೆದಿಪ್ಪಿನಂ ಮಜ್ಜನಕ್ಕೇೞ್ನಿಮೆಂದಡಂತೆಗೆಯ್ವೆಮೆಂದು ಮಜ್ಜನಂಗೊಂಡಮರ ಸನ್ನಿಭ ಮಣಿಕುಟ್ಟಿಮಮಪ್ಪ ಬಾವಿಯಂ ಪೊಕ್ಕು ಮಿಂದಲ್ಲಿಯನರ್ಘ್ಯಮಪ್ಪ ತನ್ನ ಬೆರಲ ಮಾಣಿಕದುಂಗುರಂ ಬಿರ್ದುದನಱಸಲ್ವೇಡಿ ಛಿದ್ರಕದ ದ್ವಾರದ ತೂಂತನುರ್ಚಿ

ನೀರಂ ಕಳೆದಾಗಳಿಂದ್ರನ ಭಂಡಾರಂ ತೆಱೆದಂತಪ್ಪ ಲೇಸಪ್ಪ ನಾನಾ ಮಣಿಯ ವಿಚಿತ್ರ ಭೂಷಣಂಗಳಂ ಪಲವುಮಂ ಕಂಡು ಮಹಾಶ್ಚರ್ಯಭೂತನಾಗಿ ನೋಡುತ್ತಿಪ್ಪನ್ನೆಗಂ ಆರೋಗಿಸಲೇೞ್ತನ್ನಿಮೆಂದಾಗಳ್ ಪರಿಯಾಣದ ಮೊದಲೊಳ್ ಸುಕುಮಾರಂ ಬೆರಸು ನಾನಾ ಪ್ರಕಾರದಿಂದಿನಿಯವಪ್ಪ ಉಣಿಸುಗಳನುಣುತಂ ಸುಕುಮಾರಸ್ವಾಮಿ ಅರ್ಧಾ ಹಾರಮ ನುಂಗುಗುಂ ಅರ್ಧಾಹಾರಮನುಗುೞ್ಗುಂ ಅದಂ ನೋಡಿ ಇದುವೊಂದು ಕುತ್ತ[ಂ] ಆಹಾರದಮೇಗರುಚಿಯೆಂದು ಬಗೆದುಣಿಸು ಸಮೆದ ಬೞಿಕ್ಕೆ ತಾಂಬೂಲ ಮಾಲ್ಯ ವಸ್ತ್ರಾಭರಣಂಗಳಂ ತಂದು ಕೊಟ್ಟಾವಗಂ ತೊಟ್ಟುಟ್ಟು ಪಸದನಂಗೊಂಡು ಸುಖ ಸಂಕಥಾ ವಿನೋದದಿಂದಿರ್ದೊಡೆ ಯಶೋಭದ್ರೆಯನರಸನಿಂತೆಂದು ಬೆಸ ಗೊಂಡನಬ್ಬಾ ಎಮ್ಮ ತಮ್ಮನ ಕಟೀ ಪ್ರದೇಶ ಭಾಗಕ್ಕಂ ಕಣ್ಣನೀರ್ಬಪ್ಪುದರ್ಕಂ ಅರುಚಿಗಮೇಕೆ ಮದ್ದಂ ಮಾಡಿಸಿದರಿಲ್ಲೆನೆ ದೇವಾತಂಗಿವು ಕುತ್ತಮಲ್ಲವು ಸೇಸೆ ಯಿಕ್ಕಿದ ಸರುಸಪಂಗಳೊತ್ತೆ ಸೈರಿಸಲಾಱಂ ಮತ್ತೆ ಆವ ಕಾಲಮುಂ ಮಾಣಿಕದ ಬೆಳಗಿನೊಳಿರ್ಪುದಱಿಂದಂ ಸೊಡರ ಬೆಳಗಿಂಗೆ ಸೈರಿಸದೆ ಕಣ್ಣ ನೀರ್ ಬರ್ಕುಂ ಮತ್ತಂ ಕಮಳ ನೀಳೋತ್ಪಳದೊಳ್ ವಾಸಿಸಿದ ಅಕ್ಕಿಯೊಳ್ ಪೆಱವಕ್ಕಿಯುಂ ನೀವುಂ ಬಂದೊಡೆ ಬೆರಸಿಯಟ್ಟುದು ಕೂೞುಮಪ್ಪುದಱಿಂ ವಾಸಿಸಿದಕ್ಕಿಯ ಕೂೞ ನುಂಗುಗುಮುೞಿದ ಕೂೞನುಗುೞ್ಗುಮದಱಿಂದೀತಂಗೀಯವಸ್ಥೆಗಳಾದುವೆನೆ ಕೇಳ್ದು ವಿಸ್ಮಯಂಬಟ್ಟು ಈತನ ಕ್ಷಣ ಮಾತ್ರದ ಭೋಗಕ್ಕಂ ಸುಖಕ್ಕಂ ಎಮ್ಮೆಮ್ಮೆಲ್ಲಾ ಕಾಲಮರಸುತನಂ ಗೆಯ್ವಲ್ಲಿಯೊಳಪ್ಪ ಭೋಗಂಗಳ್ದೊರೆಯಲ್ಲವಱಿಂದೀ ಲೋಕದೊಳೀತನೆ ಪರಮಾರ್ಥಂ ಸುಖಿಯೆಂದೊಸೆದರಸನವಂತಿ ಸುಕುಮಾರನೆಂದು ಪೆಸರನಿಟ್ಟಂ.

ಯಶೋಭದ್ರೆಯುಮರಸನನನೇಕ ವಸ್ತು ವಾಹನಂಗಳಿಂದಂ ಪೂಜಿಸಿ ಕಳಿಪಿ ದೊಡಿಂತು ಸುಕುಮಾರಸ್ವಾಮಿಗೆ ಸುಖದಿಂದಂ ಕಾಲಂ ಸಲೆ ಮತ್ತೊಂದು ದಿವಸಂ ಯಶೋಭದ್ರೆಯ ಭ್ರಾತರರಪ್ಪ ದಯಾಭದ್ರರೆಂಬ ರಿಸಿಯರ್ ಮುನ್ನಮವರ ಪಕ್ಕದೆ ಸೂರದತ್ತಂ ಧರ್ಮಂಗೇಳ್ದು ವೈರಾಗ್ಯಮಾಗಿ ಪುತ್ರಮುಖಂಗಂಡು ತಪಂಬಟ್ಟ ನಾತನ ಮಗನುಂ ರಿಸಿಯರಂ ಕಂಡಾಗಳೆ ತಪಂಬಡುಗುಮೆಂಬುದಂ ಮುನ್ನ ನೈಮಿತ್ತಿಕ ರಾದೇಶಂ ಗೆಯ್ದಿರ್ದರ್ ಮತ್ತಂ ದಯಾಭದ್ರರೆಂಬ ರಿಸಿಯರ್ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಬರ್ಪ ದಿವ್ಯ ಜ್ಞಾನಿಗಳ್ ಸುಕುಮಾರಸ್ವಾಮಿಗೆ ನಾಲ್ಕು ತಿಂಗಳುಮೈದು ದಿವಸಮಾಯುಷ್ಯ ಪ್ರಮಾಣಮನಱಿದುಪಕಾರಾರ್ಥಮುಜ್ಜೇನಿಗೆ ವಂದು ಸುಕುಮಾರಸ್ವಾಮಿಯ ಮಾಡದ ಪೆಱಗಣ ನಂದನ ವನದೊಳಗಣ ಜಿನಾಲಯದೊಳಾಷಾಢ ಮಾಸದ ಚತುರ್ದಶಿಯು ದಿವಸದಂದು ಪರಿವೃತ್ತ ಬಂದು ಜೋಗುಗೊಂಡಿರ್ದರನ್ನೆಗಂ ವನ ಪಾಲಂ ಪೋಗಿ ಯಶೋಭದ್ರೆಗೆ ರಿಸಿಯರ ಬರವಂ ಪೇೞ್ದೊಡಾಕೆಯುಂ ಬಂದು ದೇವರುಮಂ ರಿಸಿಯರುಮಂ ಬಂದಿಸಿ ಭಟ್ಟಾರಾ ನೀಮಿಲ್ಲಿಗೇಕೆ ಬಂದಿರಿಲ್ಲಿಂದ ಪೊಱ ವೊೞಲೊಳ್ ಪೆಱ ಉಳಿ ಬಸದಿಯಿಲ್ಲಾ ಎಂದೊಡೆ ಭಟ್ಟಾರರೆಂದರಬ್ಬಾ ನಿಡುವಯಣಂ ಬಂದು ಸೇದೆಗಟ್ಟಿಂತಾನುಮಿಲ್ಲಿಗೆಯಾಸರುಗೆಟ್ಟು ಜೋಗಿನ ಪೊೞ್ತರೊಳೆಯ್ದಿ ಬಂದು ಜೋಗುಗೊಂಡಿರ್ದೆಮತ್ತಲುಂ ಪೋಗಲಾಗದೆನೆ ಅಂತಪ್ಪೊಡೆ ಭಟಾರಾ ನಿಮ್ಮ

ನೊಂದಂ ಬೇಡಿದಪ್ಪೆಂ: ನಾಲ್ಕು ತಿಂಗಳುಮೋನಮುನೋದದೆ ಮೋನಂಗೊಂಡು ಬಸದಿಯಿಂ * * * * * ಪಾಡದೊಳಗಣಡಂಗಿರ್ದು ಜೋಗು ನೆಱೆದಂದು ಜಿಜಯಂಗೆಯ್ವೆಮೆಂದೊಡಂತೆ ಗೆಯ್ವಮೆಂದು ಭಟಾರರಿರ್ದರ್.

ಮತ್ತಿತ್ತಲ್ ಸುಕುಮಾರಸ್ವಾಮಿಯುಂ ಸರ್ವತೋಭದ್ರಮೆಂಬ ಉತ್ತುಂಗ ವಿಚಿತ್ರಮಾಗಿರ್ದ ಪ್ರಾಸಾದದ ಮೇಗಳೇೞನೆಯ ನೆಲೆಯೊಳ್ ಕಾರ್ತಿಕ ಮಾಸದ ಪುಣ್ಣಮಿಯಂದು ಸುಖದಿಂದೆ ಲುಂದಿರ್ಪನನ್ನೆಗಂ ಇತ್ತ ದಯಾಭದ್ರ ಭಟಾರರ್ಗೆ ಜೋಗು ನೆಱೆದು ಯಶೋಭದ್ರೆಯ ಬೇಡಿದ ಮೋನದ ದಿವಸಂ ಪ್ರಮಾಣಾವಸಾನದೊಳ್ ಬೈಗಿರುಳಿನ ಪಂಚಮಹಾ ಶಬ್ದದ ಪೊೞ್ತಱೊಳ್ ತ್ರಿಲೋಕ ಪ್ರತಿಜ್ಞೆಯೆಂಬುದು ಮೃದು ಮಧುರ ಗಂಭೀರ ಸ್ವರದಿಂ ಭಟ್ಟಾರರ್ ಪರಿವಡಿಗೆಯ್ವಾಗಳ್ ಅಧೋಲೋಕ ತಿರ್ಯಗ್ಲೋಕಂಗಳಿರ್ದ ಸ್ವರೂಪಮಂ ಪ್ರಮಾಣಮುಮಂ * ಊರ್ಧ್ವಲೋಕ ವ್ಯಾವರ್ಣನೆಯಂ ಪೇೞ್ವಾಗಳ್ ಆರಣ ಕಲ್ಪದ ಪದ್ಮಗುಲ್ಮ ವಿಮಾನಮಂ ವ್ಯಾವರ್ಣಿಸುವುದಂ ಸುಕುಮಾರಸ್ವಾಮಿ ಕೇಳ್ದು ಜಾತಸ್ಮರನಾಗಿಯಾನಿಲ್ಲಿ ಪುಟ್ಟಿರ್ದ್ದೆನೆಂಬುದನಱಿದು ಅಹೋ ಸುರಲೋಕ ಸುಖಮುಂ ಅಮೃತ ಸಮುದ್ರದ ನೀರೆಲ್ಲಮಂ ಕುಡಿದು ತಣಿಯದನೀ ಮನುಷ್ಯ ಭವದ ಸುಖಮೆಂಬ ಪುಲ್ಪನಿಯೊಳ್ ಸಿಲ್ಕಿ ಶಿವ ಸುಖನನೆಯ್ದುವ ಸಚ್ಚಾರಿತ್ರದಿಂ ಬೞ್ದೆನೆಂದು ತನ್ನಂ ತಾಂ ನಿಂದಿಸುತ್ತಂ ಮಂಚದಿಂದಿೞಿದು ಮಾಡದೊಳಗಿರ್ದ ವಸ್ತ್ರಂಗಳಂ ತೆಗೆದುಕೊಂಡು ಪ್ರಾಸಾದದ ಪೆಱಗಣ ಗವಾಕ್ಷ ಜಾಳದೊಳ್ ಕಟ್ಟಿಕೊಂಡೊಂದೊಂದಱ ತುದಿಯೊಳ್ ತುದಿಯೊಳೊಂದೊಂದು ವಸ್ತ್ರಮಂ ತಗುಳ್ಚಿ ಪಿಡಿದಿೞಿದು ಜಿನಾಲಯಮನೆಯ್ದಿ ದೇವರ್ಗೆ ನಮಸ್ಕಾರಂ ಗೆಯ್ದು ಉದಯಾಭದ್ರ ಭಟಾರರ್ಗೆಱಗಿ ಪೊಡೆವಟ್ಟು ದೀಕ್ಷೆಯಂ ಪ್ರಸಾದಂ ಗೆಯ್ದೆನ್ನಂ ಸಂಸಾರಾರ್ಣವದತ್ತಣಿಂದೆನ್ನನೆತ್ತಿಮೆಂದೊಡೆ ಭಟಾರರ್ ಮೂಱು ದಿವಸಂ ನಿನಗಾಯುಷ್ಯಮೆಂದೊಡೀಗಳೆ ನಿಸ್ಸಾರಮಪ್ಪ ದೇಹದ ಸಾರಮಪ್ಪ ತಪಮಂ ಕೈಕೊಂಡು ಪಲ ಕಾಲಂ ನೆಗೞ್ವಿತ್ತೆನಿಲ್ಲ ನಿಸ್ಸಾರಮಪ್ಪ ಭೋಗದೊಳ್ ಸಿಕ್ಕಿ ಅಮೇಧ್ಯದೊಳ್ ಕ್ರೀಡಿಸುವ ಬಾಳಕಂಬೊಲ್ ಕಾಲಮಂ ಬಱಿದೆ ಕೞಿಪಿದೆನೆಂದು ತನ್ನನಾದಮಾನುಂ ನಿಂದಿಸಿ ತತ್ಪಾದ ಮೂಲದೊಳ್ ತಪಂಬಟ್ಟು ಪಂಚ ಮಹಾ ಬ್ರತಂಗಳನೇಱಿಸಿಕೊಂಡು ಪಡಿಕಮಣಂಗೇಳ್ದ ತದನಂತರಂ ನಿಶ್ಚಯ ಸಮ್ಯಕ್ತ್ವಮಂ ಕೈಕೊಂಡಿಂಬೞಿಕ್ಕೆ ಮಹಾ ಕಾಳಮೆಂಬ ಶ್ಮಶಾನಕ್ಕೆ ಪೋಗಿ ಯಾವಜ್ಜೀವಮಾಹಾರಕ್ಕೆ ನಿವೃತ್ತಿಗೆಯ್ದು ಪ್ರಾಯೋಪ ಗಮನ ವಿಧಾನದಿಂ ಪುತ್ಸನ್ನಮಪ್ಪೆಡೆಯೊಳ್ ಮೃತಕ ಸೆಜ್ಜೆಯೊಳಿರ್ದು ಸಂನ್ಯಸನಂ ಗೆಯ್ದು ಧರ್ಮ ಧ್ಯಾನ ಶುಕ್ಲ ಧ್ಯಾನಂಗಳಂ ಧ್ಯಾನಿಸುತ್ತಿರ್ಪನ್ನೆಗಂ—

ಇತ್ತ ವಾಯು [ಭೂತಿಯು]ಮಪ್ಪ ಭವದಂದಿನತ್ತಿಗೆಯುಮಪ್ಪ ಸೋಮದತ್ತೆಯೆಂಬೊಳ್ ನಿದಾನಂಗೆಯ್ದು ತನ್ನ ನಾಲ್ವರ್ ಮಕ್ಕಳುಂ ತಾನುಂ ಸಂಸಾರ ಸಮುದ್ರದೊಳ್ ನೀಡುಂ ತಿಱುನೆ ತಿರಿದು ಬಂದು ಪೆಣ್ಣರಿಯಾಗಿ ಪುಟ್ಟಿ ತನ್ನ ನಾಲ್ಕು ಮಱಿಗಳ್ವೆರಸು ಆಹಾರಮನಱಸಿ ತೊೞಲುತ್ತಂ ಬರ್ಪನ್ನೆಗಂ ಸುಕುಮಾರ ಸ್ವಾಮಿಯುಂ ಮಹಾ ಕಾಳಕ್ಕೆ ಪೋಪಸನೆಲ್ಲಾ ಕಾಲಮುಂ ಮುನ್ನ ಮಣಿಕುಟ್ಟಿಮ

ಭೂಮಿಕೆಯೊಳ್ ಪಾಸಿದ ನೇತ್ರ ಪಟ್ಟಿಯ ಮೇಗೆ ನಡೆದ ಕೆಂದಾವರೆಯವೊಲ್ ಮೃದು ಲಲಿತಮಪ್ಪ ಚರಣ ದ್ವಯದೊಳ್ ಮುನ್ನೆಂದುಂ ನೆಲನ ಮೆಟ್ಟಿಯಱಿಯದಂ ಕಠಿಣ ಭೂಮಿಯೊಳ್ ನಡೆದೊಡೆ ಕಿಱುಗಲ್ಲುಗಳುಂ ಪೆಟ್ಟಿಗಳು ಮಗುಬ್ಬಿ ಪುಗು ಳೊಡೆದು ಪೊಱಮಟ್ಟು ಕರಗದ ದಾರೆಯೊಲ್ ಎಡೆವಱಿಯದೆ ಮಹಾ ಕಾಳ ಶ್ಮಶಾನಂಬರೆಗಂ ಒಕ್ಕ ನೆತ್ತರ ದಾರೆಯ ಗಂದದಿಂದಂ ನರಿಗಳ್ ಬಂದು ಕಂಡು ರಾಗಿಸಿ ಮಱಿಗಳ್ವೆರಸಡಿಯಿಂದಂ ತೊಟ್ಟೆರಡುಂ ಕಾಲ್ಗಳಂ ಮೊಣಕಾಲ್ವರೆಗವೊಂದು ದಿವಸಂ ತಿಂದತ್ತು. ಎರಡನೆಯ ದಿವಸಂ ಮೊಣಕಾಲಿಂ ತೊಟ್ಟು ಕಟಿವರೆಗಂ ತಿಂದತ್ತು. ಮೂಱನೆಯ ದಿವಸಂ ಬಸಿಱಂ ಪೋೞ್ದು ಕರುಳಂ ತೋಡಿ ತಿನೆ ಪೃಥಕ್ತ್ವ ವಿತರ್ಕ ವಿಚಾರಮೆಂಬ ಪ್ರಥಮ ಶುಕ್ಲ ಧ್ಯಾನಂಗಳ್ಕೂಡಿಯುಪಶಾಂತ ಗುಣ ಸ್ಥಾನದೊಳಿರ್ದ ರತ್ನ ತ್ರಯಮಂ ಸಾದಿಸಿ ಸರ್ವಾರ್ಥಸಿದ್ಧಿಯೊಳ್ ಸಯಸತ್ತಮ ದೇವನಾಗಿ ಪುಟ್ಟಿದೊಂ.

ಮತ್ತಿತ್ತ ತಾಯುಂ ಪೆಂಡಿರುಂ ಪರಿವಾರಮುಂ [ಎಬ್ಬಿ] ದೆಸೆಗಳೊಳಂ ಪರಿವರಿದು ಪೋಗಿ ಸುಕುಮಾರಸ್ವಾಮಿಯನೆರಡ್ದಿವಸಮಿರುಳುಂ ಪಗಲುಮಱಸಿ ಕಾಣದೆ ಮೂಱನೆಯ ದಿವಸದಂದು ಬೈಗಿನ ಪೊೞ್ತಱೊಳ್ ದೇವರ್ಕಳ್ ಬಂದು ಸುಕುಮಾರಸ್ವಾಮಿಯಂ * * * * ಅಹೊ ಮಹಾಪುರುಷ ಅಹೊ ಧೈರ್ಯವಂತ ಅಹೊ ಸಂಸಾರ ಭೀರು ನಿನ್ನಂತುಪ ಸರ್ಗಮನಾರಪ್ಪೊಡಂ ಸೈರಿಸಿ ರತ್ನ ತ್ರಯಮಂ ಸಾದಿಸಿದೊರಿಲ್ಲೆಂದು ದೇವತೆಗಳ್ ಪೊಗೞ್ವ ಕಳಕಳದ * * * * * ಯಶೋಭದ್ರೆ ನೋಡಿ ದೇವ ಸಂಘಾತಮಂ ಕಂಡು ಮಗನ ಸಾವನಱಿದು ಬಯ್ಗಿರುಳಾದಾಗಳ್ ಮೂವತ್ತಿರ್ವರ್ ಸೊಸೆವಿರ್ಕಳುಮಂ ಪೇೞ್ದಟ್ಟಿ ಸುಕುಮಾರಸ್ವಾಮಿ ನಿಮಗೆಲ್ಲರ್ಗೆ ಮುಳಿದು ಪೋಗಿಯಡಂಗಿರ್ದುದನಾನಱಿವೆಂ ನೀವೆಲ್ಲಂ ನೆಱೆಯ ತೊಟ್ಟುಟ್ಟು ಪಸ ದನಂಗೊಂಡು ಚೆಲ್ವೆಯರಾಗಿ ಬನ್ನಿಂ ಪೋಪಂ ತಿಳಿಪಿ ಕೊಂಡುಬರ್ಪಮಿಂತು ಸ್ವಾಮಿಯನೆಂದಡವರ್ಗಳ್ ಅನಿಬರುಂ ರಾಗಿಸಿ ಕೈಗೆಯ್ದುತ್ತೆಯೊಡನೆ ಪರಿವಾರ ಸಹಿತಂ ಮಹಾಕಾಳಕ್ಕೆ ಪೋಗಿ ನೋೞ್ಪರನ್ನೆಗಂ ನಮೇರು ಮಂದಾರ ಸಂತಾನಕ ಪಾರಿಯಾತ್ರಮೆಂಬ ದೇವರ್ಕಳ್ ಸುರಿದ ಪುಷ್ಪ ವೃಷ್ಟಿಯಿಂದಂ ಮುಚ್ಚೆಪಟ್ಟನಾಗಿ ಕಂಪಿಂಗೆಱಗಿದ ತುಂಬಿಯ ಸಮೂಹಮಂ ಮೇಗೆ ಸುೞಿವುದಂ ಕಂಡಿಲ್ಲಿರ್ದನೆಂದು ಯಶೋಭದ್ರೆ ತೋಱಿದೊಡೆ ಪೋಗಿ ತೆಱೆದು ನೋರ್ಪರನ್ನೆಗಂ ಮೃತಕಮಂ ಕಂಡ ನಿಬರುಂ ಮೂರ್ಛೆಯೋಗಿ ನೀಡಱಿಂದೆಚ್ಚತ್ತು ತಮ್ಮ ಬಸಿಱುಮಂ ತಲೆಯುಮಂ ಬಡಿದುಕೊಂಡು ಸುಕುಮಾರಸ್ವಾಮಿಯ ರೂಪಮಂ ತೇಜಮುಮಂ ಯೌವನಮಂ ಲಾವಣ್ಯಮಂ ಸೌಭಾಗ್ಯಮಂ ಯಶಮಂ ಮೆಲ್ಪಂ ನುಡಿಯ ಬಲ್ಮೆಯಂ ಶುಚಿತ್ವಮಂ ಶೌಚಮಂ ಶ್ರೀಯಂ ಸಂಪತ್ತಂ ಸೊಬಗಂ ಬಲ್ಮೆಯಂ ಧೈರ್ಯಮಂ ಎಂದಿವು ಮೊದಲಾ ಗೊಡೆಯವಾತನೊಳ್ನೆಲಸಿರ್ದ ಗುಣಂಗಳಂ ನೆನೆನೆನೆದನಿಬರುಂ ಪ್ರಲಾಪಂ ಗೆಯ್ಯುತ್ತಂ ಸೈರಿಸಲಾಱದೆ ನಿರಂತರಂ ಮೂರ್ಛೆವೋಗುತ್ತಂ ನೀಡುಂ ಬೇಗಂ ದುಃಖಂ ಗೆಯ್ದುೞ್ತು ನೀರಿೞಿದು ಎಣ್ಬರ್ ಬಸಿಱ ಪೆಂಡಿರುೞಿಯೆ ಇಪ್ಪತ್ತು ನಾಲ್ವರ್ ಪೆಂಡಿರುಂ ಮತ್ತಂ

ಪೆಱರ್ ನಂಟರ್ಕಳುಂ ಪರಿವಾರಮುಂ ಯಶೋಭದ್ರೆಯೊಡನೆ ದಯಾಭದ್ರರ್ ಗುರು ಗಳಾಗೆ ಕಮಳ ಶ್ರೀಕಂತಿಯರ್ ಕಂತಿಯರಾಗೆ ತಪಂಬಟ್ಟು ಉಗ್ರೋಗ್ರ ತಪಂ ಗೆಯ್ದುನಿಬರುಂ ಸೌಧರ್ಮ ಕಲ್ಪ ಮೊದಲಾಗೊಡೆಯ ಕಲ್ಪಂಗಳೊಳ್ ಪುಟ್ಟಿದರ್. ಮತ್ತಿಂತಪ್ಪುದಂ ಚಿಂತಿಸಲ್ ಸೈರಿಸಲಾಗದ ತಿರಿಕೋಪಸರ್ಗಮನವಂತಿ ಸುಕುಮಾರ ಸ್ವಾಮಿ ಮೂಱು ದಿವಸಮಿರುಳುಂ ಪಗಲುಂ ಸೈರಿಸಿ ರತ್ನ ತ್ರಯಮನೆಂತು ಸಾದಿಸಿದ ನಂತೆ ಸಂನ್ಯಸನಂ ಗೆಯ್ದಿರ್ದಾರಾಧಕರಪ್ಪ ಮಹಾ ಪುರುಷರುಮವಂತಿ ಸುಕುಮಾರ ಸ್ವಾಮಿಯ ಪರಮ ಸುಖಿಯಪ್ಪುಪಸರ್ಗಮುಂ ವಿಜಯ ವಿಧಾನಮುಂ ಮನದೊ ಳನವರತಂ ಚಿಂತಿಸುತ್ತಂ ಆಪ್ತಾಗಮ ಪದಾರ್ಥರ್ಧಿಗಳೊಳತಿ ವಿಸ್ತಾರರಾಗಿ ಪರಮ ಸಹಜ ನಿಜ ರತ್ನತ್ರಯದೊಳ್ ಕೂಡಿ ಅಭೇದವಾಗೆಯ್ದೆ ಕೂಡಿ ಶರೀರಂ ಮೊದಲಾ ಗೊಡೆಯ ಸಮಸ್ತ ಬಾಹ್ಯಾಭ್ಯಂತರ ಪರಿಗ್ರಹಂಗಳಂ ನೆಱೆದೊಱೆದು ಪೂರ್ವಾಪ ವರ್ಗ ಸುಖಂಗಳನೆಯ್ದುಗೆ. ಮತ್ತುಜ್ಜೇನಿಯ ತೆಂಕಣ ದೆಸೆಯೊಳ್ ಅವಂತಿ ಸುಕುಮಾರ ಸ್ವಾಮಿಯ ಕಾಲಂ ಗೆಯ್ದೆಡೆ ಈಗಳುಂ ಪುಣ್ಯಮುಂ ಪವಿತ್ರಮು ಮಾದುದು. ಮತ್ತ[ಂ] ಮಹಾಪುರುಷನ ಶರೀರಮಂ ಚತುರ್ನಿಕಾಯಾಮರ ತತಿಗಳ್ ಭಕ್ತಿಯಿಂದಗರು ಕಾಳಾಗರು ಗೋಶೀರ್ಷ ಚಂದನಂ ಮೊದಲಾಗೊಡೆಯ ಅನೇಕ ಸುಗಂಧ ದ್ರವ್ಯಂಗಳಿಂ ಪೂಜಿಸಿದ ದಿವ್ಯ ವಸ್ತುಗಳ್ ಕಾಲಾಂತರದಿಂ ಕರಗಿ ಬಿದ್ದುದಾ ಸ್ಥಾನಕ್ಕಂ ಗಂಧವಂತಿಯೆಂಬ ತೊಱೆಯಾದುದು. ದೇವರ್ಕಳ್ ಪೊಗೞ್ದ ಕಳಕಳ ಧ್ವನಿಯಿಂ ಪೆಂಡಿರ್ಕಳ ಪ್ರಳಾಪಂ ಗೆಯ್ದೞ್ತ ಕಳಕಳ ಧ್ವನಿಯಿಂದಂ ಕಳಕಳಾಯತ ಮೆಂದು ಸಿದ್ಧಾಯಮಾದುದು.

---

## * ಭದ್ರಬಾಹು ಭಟ್ಟಾರರ ಕಥೆ

ಗಾಹೆ ॥ ಓಮೋದರಿಯೆ ಘೋರಾಯೇಪಿ ಭಂದಬಾಹು ಅಸೌಕಿಳಿಂಠಮದಿ ।
ಘೋರಾಯೇ ತಿಗಿಂಬಾಯೆ ಪಡಿವಂಣೊ ಉಂತಮಂ ಅಂಠಂ ॥

[ಓಮೋದರಿಯೆ—ಅರೆ ಉಣಿಸಿನಿಂದಂ, ಘೋರಾಯೇಪಿ—ಆದಮಾನುಂ ಕಡಿದಪ್ಪುದಱಿಂದಂ, ಭಂದಬಾಹು—ಭದ್ರಬಾಹು ಭಟ್ಟಾರರ್, ಅಸೌಕಿಳಿಂಠಮದಿ—ಸಂಕ್ಲೇಶ ಪರಿಣಾಮಮಿಲ್ಲದೊನಾಗಿ, ಘೋರಾಯೇ—ಕಡಿದಪ್ಪ, ತಿಗಿಂಬಾಯೆ—ಪಸಿವಿನಿಂದಂ, ಅಪಿ—ಮತ್ತೆ, ಪಡಿವಂಣೊ—ಪೊರ್ದಿದೊಂ, ಉಂತಮಂ ಅಂಠಂ—ಮಿಕ್ಕ ದರ್ಶನ ಜ್ಞಾನ ಚಾರಿತ್ರಾರಾಧನೆಯಂ.]

ಅದೆಂತೆಂದೊಡೆ:—ಈ ಜಂಬೂದ್ವೀಪದ ಭರತ ಕ್ಷೇತ್ರದೊಳ್ ಪುರವರ್ಧನ ಮೆಂಬುದು ನಾಡು. ಅಲ್ಲಿ ಕೌಂಡಿನೀ ನಗರಮೆಂಬುದು ಪೊೞಲ್. ಅದನಾಳ್ವೊಂ ಪದ್ಮ

* ಈ ಕಥೆಯು ಐತಿಹಾಸಿಕ ದೃಷ್ಟಿಯಿಂದ ನಿಜವಿರಬಹುದೆ? ಎಂಬ ವಿಷಯವಾಗಿ ತಿಳಿಯಲಪೇಕ್ಷೆಯುಳ್ಳವರು ಈ ಕೆಳಗಿನ ಗ್ರಂಥಗಳನ್ನು ನೋಡಬಹುದು :—

(೧) ಶ್ರವಣಬೆಳಗೊಳದ ಶಾಸನಗಳು (*Epigraphia Carnatica*, 2nd Ed., pp. 35-42).
(೨) *The Indian Antiquary*, Vol. XXI, 156.
(೩) V. A. Smith.—*Early History of India* (Oxford).

ರಥನೆಂಬೊನರಸಂ. ಆತನ ಮಹಾದೇವಿ ಪದ್ಮಶ್ರೀಯೆಂಬೊಳ್. ಅಂತವರ್ಗಳಿಷ್ಟ ವಿಷಯ ಕಾಮ ಭೋಗಂಗಳನನುಭವಿಸುತ್ತಯಿರೆ ಮತ್ತಾ ಅರಸನ ಪುರೋಹಿತಂ ನಾಲ್ಕು ವೇದಮುಂ ಮೂಱಂಗಮುಂ ಪದಿನೆಂಟು ಧರ್ಮಶಾಸ್ತ್ರಂಗಳುಮುಂ ಬಲ್ಲ ಸೋಮ ಶರ್ಮನೆಂಬ ಪಾರ್ವನಾತನ ಭಾರ್ಯೆ ಪ್ರತ್ಯಕ್ಷ ಶ್ರೀಯಾ ದೇವತೆಯನೆ ಪೋಲ್ವ ಸೋಮಶ್ರೀಯೆಂಬೊಳಾ ಇರ್ವರ್ಗ್ಗಂ ಮಗಂ ಪುಟ್ಟಿದೊಂ. ತಾಯಿಗಂ ತಂದೆಗ ಮೆಲ್ಲಾ ನಂಟರ್ಗೆಯುತ್ಸಾಹಮುಂ ಸುಖಮುಂ ವಿಭವಮುಂ ಪಡೆವುದಱಿಂದಮಾ ಕೂಸಿಂಗೆ ಭದ್ರಬಾಹುವೆಂಬ ಪೆಸರನೆಲ್ಲರುಂ ನೆರೆದಿಟ್ಟೊಡಾತನುಂ ಬಿದಿಗೆಯ ಚಂದ್ರ ನಂತೆ ಕ್ರಮ ಕ್ರಮದಿಂ ಸುಖದಿಂ ಬೆಳೆದು ಮುಂಜಿಗಟ್ಟುವ ಪ್ರಾಯಮಾದೊಡೆ ಪ್ರಶಸ್ತ ದಿವಸ ವಾರ ನಕ್ಷತ್ರ ಮುಹೂರ್ತದೊಳ್ ಮುಂಜಿಗ ಬಧ್ನ ಕ್ರಿಯೆಗಳಂ ಮಾಡಿದ ಬೞಿಕ್ಕೆ ತನ್ನೋರಗೆಗಳಪ್ಪ ಪಲಂಬರ್ ಮಾಣಿಗಳ್ವೆರಸು ಪೊಱವೊಬಲೊಳ್ ಬಟ್ಟಾಡು ತ್ತಿರೆಯಿರೆ ಭದ್ರಬಾಹುವೆಂಬ ಮಾಣಿ ಒಂದು ಬಟ್ಟಿನ ಮೇಲೆ ಪದಿನಾಲ್ಕು ಬಟ್ಟ ನೊಂದೊಂದಱಮೇಗೋಳಿಯೊಳಿಟ್ಟಾಡುತಿರ್ಪನ್ನೆಗಂ ಇತ್ತ ವರ್ಧಮಾನ ಭಟ್ಟಾರರ್ ಮೋಕ್ಷಕ್ಕೆ ಪೋದ ಬೞಿಕ್ಕೆ ಚತುರ್ದಶ ಪೂರ್ವಧಾರಿಗಳಪ್ಪ ಶ್ರುತಕೇವಳಿಗಳ್ ನಾಲ್ಕ ನೆಯವರ್ ಗೋವರ್ಧರೆಂಬರ್ ಭಟಾರರುಜ್ಜಯಂತಮುಂ ವಂದಿಸಲೆಂದು ವಿಹಾರಿ ಸುತ್ತಂ ಬರ್ಪೊರಾ ಕೌಂಡಿನೀ ನಗರಕ್ಕೆ ವಂದು ಪೊಱವೊಬಲೊಳೊಂದು ಬಟ್ಟಿನ ಮೇಗೆ ಪದಿನಾಲ್ಕುಂ ಬಟ್ಟನೊ[ಂದೊಂ]ದಱ ಮೇಗೋಳಿಯೊಳಿಟ್ಟಾ[ಡು]ತ್ತಿರ್ಪ ಭದ್ರ ಬಾಹು ಮಾಣಿಯಂ ಗೋವರ್ಧನ ಭಟ್ಟಾರರ್ ಪಿರಿದು ಬೇಗಂ ನೋಡುತ್ತಿರ್ದಿಂ ತೆಂದುದ್ದೇಶಂ ಗೆಯ್ದೊರ್: ಈತನೆಮ್ಮಿಂಬೞಿಕ್ಕೆ ಚತುರ್ದಶ ಪೂರ್ವಧಾರಿಯಪ್ಪ ಮಹಾತ್ಮನೊಡೆಯೊಂ ಭದ್ರಬಾಹು ಭಟ್ಟಾರರೆಂಬೊರಪ್ಪೊರೆಂದು ಬಗೆದಾತನವರ ಮನೆಗೊಂಡು ಪೋಗಿ ಅವರ ತಾಯ್ ತಂದೆಗವಿಂತೆಂದರ್—ಈತನನೆಮಗೊಪ್ಪಿಸಿಂ. ಎಲ್ಲಾ ಶಾಸ್ತ್ರಂಗಳುಮುಂ ಕಲ್ಪಿಸಿ ಪಂಡಿತನಂ ಮಾಡಿ ನಿಮಗೊಪ್ಪಿಸುವೊಮೆಂದೊಡ ವರುಮಂತೆ ಗೆಯ್ವಮೆಂದೊಡಾತನನೊಡಗೊಂಡು ಪೋಗಿ ಕೆಲವು ದಿವಸದಿಂದೊಳಗೆ ವ್ಯಾಕರಣ ಪ್ರಮಾಣಂ ಛಂದಮಲಂಕಾರ ನಿಘಂಟು ಕಾಬ್ಯ ನಾಟಕ ಮೊದಲಾ ಗೊಡೆಯ ಲೋಕದೊಳುಳ್ಳ ಶಾಸ್ತ್ರಂಗಳೆಲ್ಲಮುಂ ಕಲ್ಪಿಸಿದೊಡಧಿಗಮ ಸಮ್ಯಗ್ದೃಷ್ಟಿ ಯಾಗಿ ಆಗಮದೊಳಱಿದು ಸಂಸಾರ ಶರೀರ ಭೋಗ ವೈರಾಗ್ಯ ಪರಾಯಣನಾಗಿ— ಭಟ್ಟಾರಾ ಎನಗೆ ದೀಕ್ಷೆಯಂ ದಯೆಗೆಯ್ವುಮೆನೆ ಭಟಾರರೆಂದರ್—ಎಮಗಿಂತು ಕುಡ ಲಾಗದು ಮಗನೆ ನಿಮ್ಮ ಪೊೞಲ್ಗೆ ನೀಂ ಪೋಗಿ ನೀಂ ಕಲ್ತ ವಿದ್ಯೆಯುಮುಂ ಪಂಡಿ ತಿರ್ಕೆಯುಮುಂ ಆ ಪೊಬಲೊಳ್ ನೆಗಬ್ದ ನೆಗಬ್ದ ಪಂಡಿತರ್ಕಳೊಡನೆ ವಾದುಗೆ ಯ್ದವರಂ ಗೆಲ್ದು ದಶ ದಿಶೆಗಳೊಳೆಲ್ಲಂ ನಿನ್ನ ಪಾಂಡಿತ್ಯದ ಯಶಮುಂ ಪಸರಿಸಿ ನಿಮ್ಮ ನಾವೊಡಗೊಂಡು ಬಂದುದರ್ಕೆ ತಾಯ್ತಂದೆಗಂ ಸಂತೋಸಂ ಮಾಡಿಯುವರಿಂ ಬಿಡಿಸಿ ಯೊಡಂಬಡಿಸಿ ಬಂದೊಡೆ ತಪಮುಂ ಕುಡಲಕ್ಕುಮಂತೆಯಾಗದೆಂದೊಡೆ ಭದ್ರಬಾಹು ಮಾಣಿಯುಂ ಭಟ್ಟಾರರಂ ವಂದಿಸಿ ಪೊಬಲ್ಗೆ ಪೋಗಿ ತಾಯುಂ ತಂದೆಯುಮುಂ ಕಂಡು ಪೊಬಲೊಳ್ ನೆಗಬ್ದ ಪಂಡಿತರ್ಕಳೊಡನೆ ವಾದು ಗೆಯ್ದು ಗೆಲ್ದು ದಶ ದಿಶೆಗಳೊಳೆಲ್ಲಂ ತನ್ನ ಪಾಂಡಿತ್ಯದ ಯಶಮುಂ ಪಸರಿಸಿ ತಾಯ್ತಂದೆಗಂ ಸಂತಸಮುಂ ಮಾಡಿಯುವರ

ನೊಡಂಬಡಿಸಿ ಬಂದು ಗೋವರ್ಧನ ಭಟ್ಟಾರರ ಪಕ್ಕದೆ ಕುಮಾರ ಬ್ರಹ್ಮಚಾರಿಯಾಗಿ ಭದ್ರಬಾಹು ತಪಂಬಟ್ಟು ಕೆಲವು ದಿವಸದಿಂದೊಳಗೆ ದ್ವಾದಶಾಂಗ ಚತುರ್ದಶ ಪೂರ್ವಕಮಪ್ಪಾಗಮಮೆಲ್ಲಮುಂ ಗ್ರಂಥಾರ್ಥ ಸ್ವರೂಪದಿಂ ಕಲ್ತು ಸಕಲ ಶಾಸ್ತ್ರ ಪಾರಾವಾರಗನಾಗಿ ಎಲ್ಲಾ ವೋದುಗಳುಮಂ ನೆಱೆಯೋದಿ ಕಲ್ತು ಶ್ರುತದೊಳಪ್ಪ ಭಕ್ತಿ ಕಾರಣಮಾಗಿ ಪ್ರತಿಮಾ ಯೋಗಂ ನಿಂದೊರ[೦] ದೇವರ್ಕಳುಂ ಮನುಷ್ಯರ್ಕಳುಂ ಬಂದು ಪಿರಿದಪ್ಪ ಪೂಜೆಯಂ ಮಾಡಿ ಅರ್ಚಿಸಿ ಪೂಜಿಸಿ ಬಂದಿಸಿದಡೆಲ್ಲಾ ರಿಸಿ ಸಮುದಾಯಮುಮಂ ಪ್ರತಿಪಾಲಿಸಲ್ಕೆ ಸಮರ್ಥರಾಗಿರ್ಪನ್ನೆಗಂ ಗೋವರ್ಧನ ಭಟ್ಟಾರರ್ ಸಮಾಧಿ ಮರಣದಿಂದಂ ರತ್ನತ್ರಯಮಂ ಸಾದಿಸಿ ಮುಡುಪಿ ದೇವ ಲೋಕಕ್ಕೆ ವೋದರ್.

ಇತ್ತ ಭದ್ರಬಾಹು ಭಟ್ಟಾರರ್ ಚತುರ್ದಶ ಪೂರ್ವಧಾರಿಗಳುಂ ಕಡವಾರಿಸಿಯಯ್ದನೆಯ ಶ್ರುತ ಕೇವಳಿಗಳವಧಿಜ್ಞಾನಿಗಳುಂ ಪಲವುಂ ಋದ್ಧಿಗಳಿಂ ಕೂಡಿದರೆಲ್ಲಾ ರಿಸಿ ಸಮುದಾಯಮುಮಂ ಪ್ರತಿಪಾಳಿಸುತ್ತಂ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಿರ್ಪನ್ನೆಗಂ, ಮತ್ತಿತ್ತ ಮಗಧೆಯೆಂಬುದು ನಾಡು. ಅಲ್ಲಿ ಪಾಟಳೀಪುರವೆಂಬುದು ಪೊೞಲ್. ಅದನಾಳ್ವೊಂ ನಂದನೆಂಬರಸಂ ಪಲ ಕಾಲಮರಸು ಗೆಯ್ಯುತ್ತಿರೆ ಮತ್ತೊಂದು ದಿವಸಂ ಚಾಣಾಕ್ಯನೆಂಬ ಭಟ್ಟನಂ ನಂದಂ ಪರಿಭವಿಸಿ ನೂಂಕಿಯಟ್ಟಿ ಕಳೆಯಿಸಿದೊಡಾತನುಂ ಮುಳಿದು ನಂದನಂ ಕಿಡಿಸಿ ನಂದನನ ರಾಜ್ಯಸ್ಥಾನದೊಳ್ ಪೆಱನೊರ್ವ ಚಂದ್ರಗುಪ್ತನೆಂಬೊನಂ ನಿಱಿಸಿದೊಡಾತನುಂ ಪಲ ಕಾಲಮರಸುಗೆಯ್ದು ಕೞಿದೊಡಾತನ ಮಗಂ ಬಿಂದುಸಾಗರನೆಂಬೊಂ ಅರಸು ಗೆಯ್ದು ಕೞಿದ ಬೞಿಕ್ಕೆಯಾತನ ಮಗನಶೋಕನೆಂಬೊಂ ಅರಸು ಗೆಯುತ್ತಿರೆ ಆತನ ಮಗಂ ಪ್ರತಾಪದಿಂ ತೇಜದಿಂದಾದಿತ್ಯನೊಳೋರನ್ನನಪ್ಪೊಂ ಕುಣಾಳನೆಂಬೊನಂತವರ್ಗಳಿಷ್ಟ ವಿಷಯ ಕಾಮ ಭೋಗಂಗಳನನುಭವಿಸುತ್ತಂ ಕಾಲಂ ಸಲೆ ಮತ್ತೊಂದು ದಿವಸಂ ಅಶೋಕ ಮಹಾರಾಜಂ ಪರ ಚಕ್ರದ ಮೇಗೆ ಪೋಗಿ ಅಲ್ಲಿಂದಂ ಮಂತ್ರಿ ಪುರೋಹಿತ ತಳವಱಾದಿಗಳ್ಗಿಂತೆಂದೋಲೆಯನಟ್ಟಿದೊನ್: ಉಪಾಧ್ಯಾಯಂಗೆ ಕೞವೆಯ ಕೂೞುಂ ತುಪ್ಪಮುಂ ತೋಯಮನುಣಲ್ಕೊಟ್ಟು ಕುಮಾರನನೋದಿಸುಗೆಂದು ಓಲೆಯನಟ್ಟಿದೊಡೆ ವಾಚಕನೋಲೆಯರ್ಥಮನಱಿಯದೆ ವಿಪರೀತಮಾಗಿಂತೆಂದು ಬಾಚಿಸಿದನ್:—

ಉಪಾಧ್ಯಾಯಂ ಶಾಳಿ ಕೂರಂ ಚ ಮಶೀಂ ಘೃತಂ ದತ್ವಾ ಕುಮಾರಮಂ[ಧಾ]ಪಯೇತ್

ಎಂದಿಂತು ವಿಪರೀತಮಾಗಿ ಲೇಖಾರ್ಥಮಂ ಬಾಚಿಸಿದೊಡನಿಬರುಂ ಕೇಳ್ದು ಅಪ್ರತಿಹತ ಶಾಸನನಪ್ಪ ನೃಪತಿಯಾಜ್ಞೆಗೆ ಭಯಸ್ತರ್ಕಳಾಗಿ ಉಪಾಧ್ಯಾಯಂಗೆ ಕೞವೆಯ ಕೂೞುಂ ಮಸಿಯುಂ ತುಪ್ಪಮುಮನುಣಲ್ಕೊಟ್ಟು ಕುಣಾಳನೆಂಬ ಕುಮಾರನೆರಡುಂ ಕಂಗಳುಮನೊಡೆದು ಕುರುಡಂ ಮಾಡಿದ ಕೆಲವು ದಿವಸದಿಂದರಸಂ ಪರ ಚಕ್ರಮಂ ಸಾಧಿಸಿ ಬಂದು ಮಗಂ ಕುರುಡಾದುದಂ ಕಂಡಾದಮಾನುಂ ಉದ್ವೆಗಂಬಟ್ಟು ಸೈರಿಸಲಾಱದೆ ಕುಣಾಳನರಸಿ ಚಂದ್ರಾನನೆಯೆಂಬೊಳ್ಗೆ ಮಗಂ ಪುಟ್ಟಿದೊಡಾತಂಗೆ ಸಂಪ್ರತಿ ಚಂದ್ರಗುಪ್ತನೆಂದು ಪೆಸರನಿಟ್ಟು ರಾಜ್ಯಾಭಿಷೇಕಂ ಗೆಯ್ದು ಪಟ್ಟಂಗಟ್ಟಿ

ಸಮಸ್ತ ರಾಜ್ಯಭಾರಮೆಲ್ಲಮಂ ನಿರೂಪಿಸಿ ಕುಣಾಳನುಮನೆಂದಂ: ಮಗನೆ ಬೇಡು ನೀನೆಂದೊಡಾತನುಂ ಕಾಕಿಣೀ ರತ್ನಮಂ ಬೇಡಿದೊಡಾ ರತ್ನಂ ಚಕ್ರವರ್ತಿಗಲ್ಲ ದಿಲ್ಲೆಂದು ಮಗಂಗೆ ಮಱು ಮಾತುಗೊಟ್ಟು ಸಂಸಾರ ವೈರಾಗ್ಯಮಾದಮಾನುಂ ಪೆರ್ಚಿ ಸುವ್ರತರೆಂಬ ಭಟ್ಟಾರರ ಪಕ್ಕದೆ ಜಿನ ದೀಕ್ಷೆಯಂ ಕೈಕೊಂಡು ಪರತ್ರಯಮಂ ಸಾದಿಸಿದ[ಂ]. ಮತ್ತಿತ್ತ ಸಂಪ್ರತಿ ಚಂದ್ರಗುಪ್ತ ಮಹಾರಾಜನರಸುಗೆಯ್ಯುತ್ತಿರೆ ಸಮಾಧಿ ಗುಪ್ತರೆಂಬಾಚಾರ್ಯರವಧಿ ಜ್ಞಾನಿಗಳ್ ವಿಹಾರಿಸುತ್ತಂ ಬರ್ಪ್ಪರಾ ಪಾಟಳೀ ಪುರಕ್ಕೆ ವಂದು ಪೊಱವೊೞಲ ಬಹಿರುದ್ಯಾನ ವಸದೊಳಿರ್ದೊರಂ ಸಂಪ್ರತಿ ಚಂದ್ರಗುಪ್ತಂ ಪೋಗಿ ವಂದಿಸಿ ಧರ್ಮಮಂ ಕೇಳ್ದು ತದನಂತರಂ ತನ್ನ ಭವಾಂತರಂಗಳಂ ಬೆಸಗೊಂಡೊಡೆ ಭಟಾರರ್ ಪೇೞಲ್ ತೊಡಗಿದರ್:—

ಈ ಜಂಬೂ ದ್ವೀಪದ ಭರತ ಕ್ಷೇತ್ರದೊಳವಂತಿಯೆಂಬುದು ನಾಡು. ಅಲ್ಲಿ ವೈದಿಶಮೆಂಬುದು ಪೊೞಲ್. ಅದನಾಳ್ವೊಂ ಜಯವರ್ಮನೆಂಬೊನರಸಂ. ಆತನ ಮಹಾದೇವಿ ವಾರಿಣಿಯೆಂಬೊಳ್. ಅವರ್ಗಳಿಷ್ಟ ವಿಷಯ ಕಾಮ ಭೋಗಂಗಳನನು ಭವಿಸುತ್ತಿರೆ ಮತ್ತಾ ಪೊೞಲ ಸಾರೆ ಪರಾಳಕೂಟಮೆಂಬೂರೊಳ್ ದೇವಿಲನೆಂಬೊಂ ಶಾಕದಿಕ ಪರದಂ. ಆತನ ಭಾರ್ಯೆ ಪೃಥ್ವಿಶ್ರೀಯೆಂಬೊಳ್. ಆಕೆಯ ಗರ್ಭದೊಳ್ ಪಾಪ ಕರ್ಮ ಜೀವಂ ನೆಲಸಿದೊಡೇನುಂ ನೆವಮಿಲ್ಲದೆ ಕಸವರಮೆಲ್ಲಂ ಕೆಟ್ಟತ್ತು. ಮತ್ತೊಂದುದಿವಸಂ ಪಲಂಬರುಂ ಶಾಕದಿಕ ಪರದರುಂ ಬೆರಸು ಬಂಡಿಗಳೊಳ್ಪಱ್ತಿಯುಂ ಧಾನ್ಯಮುಂ ತೀವಿಕೊಂಡು ಪೊೞಲ್ಗೆ ಮಾರಲೆಂದು ಪೋಪನ್ನೆಗಂ ಎಡೆಯೊಳಡವಿಯೊಳ್ ಬೇಡರುಂ ಬಟ್ಟೆಗಟ್ಟಿ ಮೇಲ್ವಾಯ್ದುಱಿಗಿದೊಡೆ ದೇವಿಲಂ ಮೊದಲಾಗಿ ಪಲಂಬರುಂ ಪರದರುಂ ಸತ್ತುೞಿದರೆಲ್ಲಮೋಡಿ ಕೆಟ್ಟೊಡೆ ಬಂಡಮುಂ ಎಱ್ತುಗಳುಂ ಮೊದಲಾ ಗೆಲ್ಲಮಂ ಕಳ್ಳರ್ ಕೊಂಡುಪೋದರ್. ಆ ಪ್ರಸ್ತಾವದೊಳ್ ಪೃಥ್ವಿಶ್ರೀ ಬೆಸಲೆಯಾಗಿ ನಂದಿಮಿತ್ರನೆಂದಾ ಕೂಸಿಂಗೆ ಪೆಸರನಿಟ್ಟು ಎರಡುಮೂಱು ತಿಂಗಳಿಂಗೆ ತಾಯುಂ ಕೞ್ ದೊಡೆ ಬಡ ನಂಟರುಂ ಕೞಿದು ಕುಲ ಕ್ಷಯಮಾದೊಡೂರವರೆಲ್ಲಮಿಂತೆಂದರ್—ಈ ತರುವಲಿ ನಮ್ಮೂರೊಳಿರೆ ನಮಗೆ ಸಾವುಂ ಕೇಡುಂ ಅಮೋಘಮಕ್ಕುಂ. ಇವನನಟ್ಟಿ ಕಳೆಯಿಮೆಂದು ಊರಿಂದನಿಬರುಂ ಅಟ್ಟಿ ಕಳೆದೊಡಾತನ್ ಕೆಲದೂರ್ಗಳುಮಂ ನಾಡ್ಗಳು ಮಂ ತೊೞಲ್ದು ಬೈಕಂದಿರಿದೆಲ್ಲಿಪೂನುಂ ಪೆತ್ತುಂ ಪೆಱದೆಯುಮಿಂತು ಬಾೞುತ್ತಂ ಪದಿನೈದು ಪದಿನಾಱು ವರುಷದ ಪ್ರಾಯದಾತನಾಗಿ ವೈದಿಶಮೆಂಬ ಪೊೞಲ್ಗೆ ವರ್ಪೊನನ್ನೆಗಂ ಕಾಷ್ಠಕೂಟನೆಂಬ ಬೆಸದನಂ ಪುಳ್ಳಿಯ ಪೊಱೆಯುಂ ಪೊತ್ತು ಪೋಗಲ್ಕೆ ಬರ್ಪೊನಂ ಕಂಡಾತನೊಡನೆ ಗೋಷ್ಠಿಯೊಳ್ ಬಂದು ಪೊಱವೊೞಲೊಳಾರವೆಯೊಳ್ ಪುಳ್ಳಿಯಂ ಮಾಱೆ ಮನೆಗೊಡಗೊಂಡು ಪೋಗಿಯೂಡಿ ನಿನಗೀ ಪೊೞಲೊಳಾರಾನುಂ ನಂಟರುಳ್ಳರೆಯೆಂದು ಬೆಸಗೊಂಡೊಡಾರುಮಿಲ್ಲೆಂದೊಂ. ಅಂತಪ್ಪೊಡೆ ನೀನೆನ್ನೊಡ ನಿರ್ ಎತ್ತಲುಂ ಪೋಗದಿರೆಂದು ತಾಂಗಿ ತಾನುಮಾತನುಮಿಂತಿರ್ವರುಂ ದಿವಸಕ್ಕಂ ಪುಳ್ಳಿಯಂ ತರೆ ಪದಿಂಬರ್ ತಪ್ಪ ಪೊಱೆಯನೊರ್ವನೆ ತಪ್ಪಂ. ಅಂತು ಪಲವು ದಿನಸಮುಂ ತರೆ ಕಾಷ್ಠಕೂಟಂ ತನ್ನ ಪೆಂಡತಿ ಜಯಘಂಟೆಯೆಂಬೊಳನಿಂತೆಂದು ಕಲ್ಪಿಸಿದಂ— ಈತಂಗೆ ನೀಂ ಬಸಿಱಂ ತೀವಿ ಬಡ್ಡಿಸದಿರ್. ಎಣ್ಣೆಯಂ ತಿಣ್ಣಮೆ ಱೆಯದಿರ್. ಏಕಾಯಲ್

ಬೇಡಿದೊಡಮೆಱೆಯದಿರೆಂದು ಕಲ್ಪಿಸಿದೊಡಾಕೆಯುಮಾ ಪಾಂಗಿನೊಳ್ ದಿವಸಕ್ಕಂ ಬಡ್ಡಿಸೆ ನಂದಿಮಿತ್ರನುಂ ಪಿರಿಯ ಪುಳ್ಳಿಯ ಪೊಱೆಗಳಂ ದಿವಸಕ್ಕಂ ತಂದು ಕುಡಲವಂ ಮಾಱಿ ಕಾಷ್ಠಕೂಟನೊಡೆಯೊನಾದಂ. ಇಂತು ದಿವಸಂಗಳ್ ಸಲೆ ಮತ್ತೊಂದು ದಿವಸಂ ಜಯಘಂಟೆ ಕರುಣಿಸಿ ತಣಿಯೆ ಬಡ್ಡಿಸಿದೊಡುಂಡು ಮಱು ದಿವಸಮಿರ್ವರುಂ ಪುಳ್ಳಿಗೆವೋದಲ್ಲಿ ನಂದಿಮಿತ್ರನೆಂದಂ—ಅಯ್ಯಾ ಎನಗುಡಲಿಲ್ಲೇನುಮೊಂದು ದಮ್ಮಕ್ಕಾದೊಡಂ ಸೀರೆಯಂ ಕುಡಿಯಿಮೆಂದಂತೆ ಗೆಯ್ವೆನೆಂದು ಮಱು ಮಾತುಗೊಟ್ಟಿರ್ವರುಂ ಪುಳ್ಳಿಯ ಪೊಱೆಯಂ ಮನೆಗೆ ತಂದ ಬೞಿಕ್ಕೆ ಪೆಂಡತಿಯನೆಂದನ್: ಈತಂಗೆ ನೀಂ ಬ[ಸಿಱ್ ತೀ]ವಿಯುಣಲಿಕ್ಕಿದಾ ಎಂದೊಡೆ, ಕರುಣಿಸಿ ಪರ್ವಮೆಂದು ತಣಿಯೆಯುಣಲಿಕ್ಕಿದೆನೆಂದೊಡೆ ಮುಳಿದು ಸಾಯೆಬಡಿದು ಮನೆಯಿಂ ಪೆಂಡತಿಯನಟ್ಟಿ ಕಳೆದೊಡೆ ನಂದಿಮಿತ್ರಂ ಪೋಗಿ ಜಯಘಂಟೆಯಂ ಬೆಸಗೊಂಡನ್: ನಿನ್ನನೇಕೆ ಕಾಷ್ಠಕೂಟಂ ಬಡಿದನಬ್ಬಾ ಎಂದು ಬೆಸಗೊಂಡೊಡೆ, ನಿನಗೆ ನಿನ್ನೆ ತಣಿಯೆಯುಣಲಿಕ್ಕಿದೆನೆಂದು ಬಡಿದಟ್ಟಿ ಕಳೆದನೆಂದೊಡೆ, ಇಂತಪ್ಪ ಪಂಚಮಹಾಪಾತಕನ ಮನೆಯೊಳ್ ಮಾರಿಯಿರ್ಕೆಂದು ಕಾಷ್ಠಕೂಟನಂ ಬಿಸುಟ್ಟು ಪೋಗಿ ಬೇಱೆ ತನಗೆ ಪುಳ್ಳಿಗಳಂ ದಿವಸಕ್ಕಂ ತಂದು ಮಾಱಿಲ್ಲುಗುಳ್ದೊಡೆಂಟು ದಮ್ಮದ ಪುಳ್ಳಿಯಂ ತಂದದೊಂದು ಪಣಮನಪ್ಪೊಡಂ ಪೆಱದೆ ಬಸಿಕರ್ೞಿಂಬಲಿಗಮೆಣ್ಣೆಗಂ ಕೞಿಗಂ ಕೊಟ್ಟು ಪೋಕುಂ. ಇಂತು ಬಾೞುತ್ತುಮಿರೆ ಮತ್ತೊಂದು ದಿವಸಂ ಪುಳ್ಳಿಗೆ ಪೋಗಿ ಪುಳ್ಳಿಯ ಪೊಱೆಯಂ ಪೊತ್ತು ಬರ್ಪನ್ನೆಗಮೆಡೆಯೊಳ್ ಶಿವಗುಪ್ತಾಚಾರ್ಯರಷ್ಟಾಂಗ ನಿಮಿತ್ತಂಗಳಂ ಬಲ್ಲೊರಡವಿಗೆ ಪೋಗಿ ಸಿದ್ಧಾಂತಮಂ ಪರಿವಿಡಿದಂದಿನ ದಿವಸಮಲ್ಲಿಯೆ ದೇವರಂ ವಂದಿಸಿ ಪಕ್ಷೋಪವಾಸದ ಪಾರಣೆಗೆಂದು ಪೊೞಲ್ಗೆ ಚರಿಗೆವುಗುತ್ತಂದೋದ ನಂದಿಮಿತ್ರಂ ಕಂಡು ಆಶ್ಚರ್ಯಭೂತನಾಗಿ ನೀಡುಂ ನೋಡಿ, ಇವರೆಲ್ಲಿಗೆ ಪೋದಪ್ಪರೊ ಎಂದು ಬೞಿವೞಿಯನೆ ವಂದು ಪೊಱವೊಳಲ ಬಸದಿಯಂ ಪ್ರಾಕಾರದಿಂದೊಳಗೆ ಪುಳ್ಳಿಯ ಪೊಱೆಯನಿಕ್ಕಿ ನೋೞ್ಪನನ್ನೆಗಂ ಇವರನೆಂದವರಂ ಬೞಿವೞಿಯನೆ ಬರ್ಪನ್ನೆಗಮಾ ದಿವಸಮರಸಂ—ಶಿವಗುಪ್ತಭಟ್ಟಾರಕರ್ಗ್ಗಂ ಪಾರಣೆಯಂ ಮಾಡಿಸುವೆಂ ಪೆಱರಾರುಂ ನಿಱಿಸಲ್ ಸಲ್ಲೆಂದು ಪೊೞಲೊಳಗೆಲ್ಲಂ ಘೋಷಣೆಯಂ ತೊೞಲ್ಚಿದೊಡಂಜಿ ಯಾರುಂ ನಿಲಿಸುವರಿಲ್ಲದೆ ಭಟಾರರುಂ ಕಿಱುಮನೆ ಪೆರ್ಮನೆಯೆನ್ನದೆ ಯೋಗ್ಯಮಪ್ಪ ಮನೆಗಳೊಳ್ ಚರಿಗೆವುಗುತ್ತಂ ಬರ್ಪೊರರಮನೆಯುಂ ಪೊಕ್ಕಾಗಳ್ ಕಂಡರಸನುಂ ಮಹಾದೇವಿಯುಂ ಸುವರ್ಣಪೂರ್ಣಕಳಶಮುಂ ಕನ್ನಡಿಯುಂ ಪೂವುಮಕ್ಕಿಯುಂ ಮಾದು ಫಲಮುಂ ಮೊದಲಾಗೊಡೆಯನೇಕಾರ್ಚನೆಯಿಂದಿದಿರಂ ಬಂದು ನಿಲಿಸಿ ಬಲಗೊಂಡು ಬಂದು ಭಟಾರರ ಕಾಲಂ ಮಹಾದೇವಿ ನೀರ್ವೊಯ್ಯೆ ಅರಸಂ ತಾನೆ ಪ್ರಕ್ಷಾಳಿಸಿ ಬೞಿಕ್ಕೊಡಪೋದ ಬೋೞಿದಲೆಯ ದೇಸಿಗನ ಕಾಲಂ—ಬ್ರಹ್ಮಯ್ಯಾ ನೀಡಿ ನಿಮ್ಮ ಕಾಲಂ ತೊಳೆವಮೆಂದು ಮಹಾದೇವಿ ತಾನೆ ಕಾಲಂ ಕರ್ಚಿ ಭಟಾರಕರ್ಗೆಱಗಿ ಕುಳ್ಳಿರಿಸಿ ಪಿರಿಯ ಪೊನ್ನ ತಳಿಗೆಯುಮುಚ್ಚಮಪ್ಪಷ್ಟಣಿಗೆಯುಮನಿಟ್ಟು ಬ್ರಹ್ಮಚಾರಿಗಂ ಪೊನ್ನ ತಳಿಗೆಯುಮಷ್ಟಣಿಗೆಯುಮನಿಟ್ಟು ಭಟಾರಕರ್ಗರಸಂ ತಾನೆ ಬಡ್ಡಿಸಲ್ತಗುಳ್ದ ಬೞಿಯಂ ರಾಜಾನ್ನದ ಕೂೞುಂ ಪೆಸಱ ತೊವೆಯುಂ ಬೆಣ್ಣೆಗಾಸಿದಾಮೋದ ಸುಗಂಧ ಪರಿಮಳಂ

ನಾರ್ಪ ತುಪ್ಪಮುಂ ಪಲವುಂ ತೆ[ಱ]ದ ಬಾಡುಗಳುಂ ತುಯ್ಯಲುಂ ಪೂರಿಗೆ ಯಿಡ್ಡಲಿಗೆ ಸೋದಿಗೆ ಲಾವಣಿಗೆ ಘೃತಪೂರಂ ಲಡ್ಡುಗೆ ಮಂಡಗೆ ಮೊದಲಾಗೊಡೆಯ ಪದಿನೆಂಟುಂ ತೆಱದ ಭಕ್ಷ್ಯರೂಪಂಗಳುಮಂ ನಾನಾ ಪ್ರಕಾರದ ಪಾಸಂಗಳುಮಂ ಭಟ್ಟಾರರ್ಗೆ ಬಡ್ಡಿಸಿದಂತೆ ಬ್ರಹ್ಮಯ್ಯಂಗೆ ಮಹಾದೇವಿ ಬಡ್ಡಿಸಿದೊಡೆ ದೇಸಿಗಂ ಕಂಡು ಬೆಱಗಾಗಿ ಪುಟ್ಟಿದಂದಿಂ ತೊಟ್ಟಿಂತಪ್ಪುಣಿಸಂ ಕನಸಿನೊಳಪ್ಪೊಡಂ ಕಂಡಱಿಯದ ಮಗಂ ಚೋದ್ಯಂಬಟ್ಟಿಂದಪ್ಪೊಡಂ ತಣಿಯೆಯುಣಲ್ಬಡೆಯದ ದೇಸಿಗಂ ನಾನಾ ಪ್ರಕಾರ ದುಣಿಸಂ ಸುಗಂಧಮಪ್ಪಾ ದಿವ್ಯಾಹಾರಮನಾಕಂಠ ಪ್ರಮಾಣಂಬರೆಗಂ ತಣಿಯುಂಡು ಬಱಿಕ್ಕೆ ಕರ್ಪೂರ ಸಮ್ಮಿಶ್ರಮಪ್ಪ ನೆಲವತ್ತಿಯಡಕೆಯ ಪೋೞ್ಗಳುಮಂ ಕೈಯಂ ತೀವಿ ಬ್ರಹ್ಮಯ್ಯಂಗೆ ಕೊಟ್ಟು ಭಟಾರರ್ ಚರಿಗೆ ಮಾಡಿದ ಬಱಿಕ್ಕರಸನುಮಂ ಮಹಾ ದೇವಿಯುಮಂ ಕರ್ಮಕ್ಷಯಮುಮಕ್ಷಯ ದಾನಮುಮಕ್ಕೆಂದು ಪರಸಿ ಪೊಱ ಮಟ್ಟು ಬಸದಿಗೆ ಪೋಪಾಗಳ್ ಭಟ್ಟಾರರ ಬಱಿವಱಿಯನೆ ಪೋದಂ. ಭಟ್ಟಾರರ್ ಬಸದಿಯಂ ಬಲಗೊಂಡು ಕಾಲಂ ಕರ್ಚೊಳಗಂ ಪೊಕ್ಕೀರ್ಯಾಪತಿಯಂ ಬಿಡಿಸಿ ಗೋಚಾರ ನಿಯಮಗೆಯ್ವುದಂ ಸಂದಿಮಿತ್ರಂ ನೋಡುತ್ತ ಇರ್ದ್ದಿಂತೆಂದು ಮನದೊಳ್ ಬಗೆದಪ್ಪನ್ : ಇಂತಪ್ಪ ರೂಪುಮಂ ಕೈಕೊಂಡೊಡೆ ದೇವ ಲೋಕದೊಳ್ ಗೌರವಮುಂ ಪೂಜೆಯುಮಂ ಪೆಱಲಕ್ಕುಮೆಂದು ಕ್ಲೇಶಮಿಲ್ಲದೆ ದಿವ್ಯಾಹಾರಂಗಳೆಲ್ಲಾ ಕಾಲಮುಣ ಲ್ಪೆಱಲಕ್ಕುಮೆಂದು ಬಗೆದು ಭಟಾರರ್ ನಿಯಮಂ ಗೆಯ್ದು ಸಮೆದಿರ್ದ ಬಱಿಕ್ಕೆ ಬಂದು ಮುಂದೆ ನಿಂದು ಕೈಗಳಂ ಮುಗಿದು ಇಂತೆಂದನ್ : ಎನ್ನಂ ನಿಮ್ಮಂತೆ ಮಾಡಿಮೆಂದೊಡೆ ಭಟಾರರಾತನಂ ನೋಡಿಯಲ್ಪಾಯುಷ್ಯನುಮಾಸನ್ನ ಭವ್ಯನಪ್ಪುದ ನಱಿದೊಳ್ಳಿತಪ್ಪ ಮುಹೂರ್ತದೊಳ್ ತಪಂಬಡಿಸಿದರಾತನುಂ ತಪಂಬಟ್ಟು ದೀಕ್ಷೋಪ ವಾಸಂ ಗೆಯ್ದಿರ್ದನ್.

ಅನ್ನೆಗಂ ಅರಸನುಮರಸಿಯುಂ ಭಟ್ಟಾರರೊಡವಂದ ಬ್ರಹ್ಮಚಾರಿ ತಪಂಬಟ್ಟ ನೆಂಬುದಂ ಕೇಳ್ದೊಸೆದು—ಮುನ್ನೆಮ್ಮ ಮನೆಯೊಳುಂಡು ತಪಂಬಟ್ಟನ್. ಇನ್ನು ನಾಳೆ ನಮ್ಮ ಮನೆಯೊಳ್ ಪಾನಿಗಟ್ಟುವಮೆಂದು ಬಗೆದಿರ್ದು ಮಱು ದಿವಸಂ ಸಾಮಂತ ಮಹಾ ಸಾಮಂತರ್ಕಳುಂ ರಾಜ ಚಿಹ್ನಂಗಳುಂ ಬೆರಸು ಮಹಾ ವಿಭೂತಿಯಿಂದರಸ[ಂ] ಪೊೞ್ತ್ತಡಿನ ಬೇಗಂ ಬಸದಿಗೆ ಬಂದು ವಾಹನಂಗಳಿಂದಿೞಿದು ಬಲಗೊಂಡು ಬಂದು ಗಂಧ ಪುಷ್ಪ ದೀಪ ಧೂಪಾಕ್ಷತೆಗಳಿಂ ದೇವರನರ್ಚಿಸಿ ಕ್ರಿಯಾ ಪೂರ್ವಕಂ ದೇವರ ವಂದಿಸಿ ಭಟ್ಟಾರರ್ಗೆ ಗುರು ಭಕ್ತಿಗೆಯ್ದು ಮುಷ್ಟಿಯಿಂ ವಂದಿಸಿ ಅಂತೆ ಕಿಱ್ತಿಯ್ಯಂಗಳು ಮನಾ ಮಾರ್ಗದಿಂ ವಂದಿಸಿ ಭಟಾರರಲ್ಲಿಗೆ ವಂದು ಕುಳ್ಳಿರ್ದು ಧರ್ಮಮಂ ಕೇಳ್ದ ತದನಂತರಮೆರ್ದು—ಭಟ್ಟಾರಾ ಬಿನ್ನಪಂ. ಕಿಱ್ತಿಯ್ಯಂಗಳನಿಂದೆಮಗೆ ಕಾರುಣ್ಯಂ ಗೆಯ್ವುದು. ಆವು ನಿಱಿಸಿ ಪಾನ್ಯಗಟ್ಟಿ ಪುಣ್ಯಮಂ ನೆಱಪಿಕೊಳ್ವಮೆಂದೊಡಂತೆ ಗೆಯ್ಯಿಮೆಂದಾ ನುಡಿಯಂ ಕಿಱ್ತಿಯ್ಯಂಗಳ್ ಕೇಳ್ದು ಸಾಮಂತ ಮಹಾ ಸಾಮಂತರ್ಗೆ ಸ್ವಾಮಿಯಪ್ಪೀ ಪೃಥ್ವೀಶ್ವರಂ ಬಂದೆಸ್ನುಮನರ್ಚಿಸಿ ಬಂದಿಸಿ ನೀಚ ವೃತ್ತಿಯಿಂ ಕಿಂಕುರ್ವಾಣಂ ಗೆಯ್ದಪ್ಪಂ. ಅಹೋ ಆಶ್ಚರ್ಯಮಿಾ ತಪದ ಧರ್ಮದ ಫಲ ಮಿಲ್ಲಿಯೆ ಪ್ರತ್ಯಕ್ಷಮಾಯ್ತಿನ್ನು ಮುಂದೆ ಪಿರಿದಾಗದೆ ಪಾಣದೆಂದು ತನ್ನೊಳ

ತಱಿಸಂದು ಮತ್ತಮಾ ದಿವಸಂ ಉಪವಾಸಮುಂ ಕೈಕೊಂಡರ್. ಇತ್ತಲ್ ಜಯವರ್ಮ ಮಹಾರಾಜಂ ಭಟಾರರುಮಂ ಕಿಬ್ತಿಯ್ಯಂಗಳುಮಂ ಬಂದಿಸಿದುದಂ ಭಟಾರರಱಿದೆ ಕಿಬ್ತಿಯ್ಯಂಗಳಿಗೆ ಏಷಣಾ ಸಮಿತಿ ಮೊದಲಾಗೊಡೆಯ ಬ್ರತಂಗಳಂ ಮತ್ತಂ ಸಂಕ್ಷೇಪದಿಂ ಪೇೞ್ದು—ಕಿಬ್ತಿಯ್ಯಂಗಳಿರಾ ನಿಮಗೆ ಶ್ರಮಮಾದಪ್ಪುದು ದೇವರಂ ಬಂದಿಸಿ ಚರಿಗೆ ಪೊಱಮಡುವುದೆನೆ ಮತ್ತಂ ತಾವು ಕೊಂಡುಪವಾಸಮುಂ ಗುರುಗಳಿಗೆ ಪ್ರಕಟಿಸಿದರ್. ಅದಂ ಅರಸಂ ಜಯವರ್ಮ ಮಹಾರಾಜಂ ಕೇಳ್ದು ಬಿನ್ನನೆ ಮೊಗಂ ಮಾಡಿ ಭಟಾರರುಮಂ ಕಿಬ್ತಿಯ್ಯಂಗಳುಮಂ ಬಂದಿಸಿ ತನ್ನರಮನೆಗೆ ಪೋಗಿ ಮಹಾದೇವಿಗೆಂದನ್—ಇಂದೆನಗೆ ರಿಸಿಯರಂ ನಿಱಿಸಿ ಪುಣ್ಯಂಗೊಳ್ಸ ಭಾಗ್ಯಮಿಲ್ಲೆಂದೊಡೆ ಮಹಾದೇವಿ—ಅಂತಪ್ಪೊಡೆ ನಾಳೆಯಾಂ ನಿಱಿಸಿ ಪುಣ್ಯಮಂ ಕೈಕೊಳ್ವೆನೆಂದೊಡರಸನೆಂದಂ—ನಿನಗಮೆನಗಂ ಸಮ ಭಾಗಂ ಪುಣ್ಯಮೆಂದು ಸುರೆ, ನೀಮೆನಗಿಂದು ಸಮ ಭಾಗಮಾಯುದಾವಗಂ ಪುಣ್ಯಮನಾಗಿಂದು ನಿಱಿಸಿ ಕೈಕೊಳ್ವೆಂ. ನೀಂ ನಾಳೆ ನಿಱಿಸೆಂದು ನುಡಿದು ಬಸದಿಗೆ ಪೋಗಿರೆನ್ನ ಭಾಗ್ಯಮೇಂ ಕಿಡಿಸುಗುಮೆ ನಾಳೆಯುಂ ನಿಱಿಸಿ ಯಾವಗಂ ಪುಣ್ಯಮಂ ಕೈಕೊಳ್ವೆನೆಂದರಸಂಗೆ ಮಱು ಮಾತುಗೊಟ್ಟು ಮಱು ದಿವಸಂ ಧಾರುಣಿ ಮಹಾದೇವಿಯಯ್ನೂರ್ವರರಸಿಯರ್ಕಳುಂ ಪೆಂಡವಾಸದಗ್ಗಳದ ಸೂಳೆಯರ್ಕಳುಂ ಬೆರಸು ವೇಸರಿಗತ್ತೆಗಳುಂ ಪಿಡಿಗಳುಂ ಸಿಬಿಗೆಗಳುಮನೇಱಿ ಸೀಗುರಿಗಳುಮಂ ಕೊಡೆಗಳುಮಂ ಎಕ್ಕಮದ್ದಳೆಯ ಕೊಱಿಲ ಝುಂಕಾರ ಪಱೆಗಳ್ ಮುಂದೆ ಬಾಜಿಸುತ್ತಂ ಬಳಸಿಯುಂ ಕಾಪಿನವರ್ ವರೆ ಮುಂದಣ ಮಾಸಸರ್ ಪಡಿಯಱರ್ ತೊಲಗಿಸುತ್ತಂ ವಿದ್ಯಾಧರಿಯರ್ಕಳ್ ಬರ್ಪಂತೆ ಬಂದು ಬಾಗಿಲ್ಮಾಡದ ಪೆಱಗಣ ದೆಸೆಯೊಳ್ ತಮ್ಮ ವಾಹನಂಗಳಿಂದಿೞಿದು ಪೊಕ್ಕು ಬಸದಿಯಂ ಬಲಗೊಂಡು ಬಂದೊಳಗಂ ಪೊಕ್ಕು ದರ್ಶನ ವಂದನೆಗಳುಮಂ ಪೇೞೆಯರ್ಪತ್ತಿಯುಂ ಬಿಡಿಸಿ ಗಂಧ ಪುಷ್ಪ ದೀಪ ಧೂಪಾಕ್ಷತಂಗಳಿಂ ದೇವರನರ್ಚಿಸಿ ಕ್ರಿಯಾ ಪೂರ್ವಕಂ ದೇವರಂ ಬಂದಿಸಿ ಶಿವಗುಪ್ತ ಭಟ್ಟಾರರುಮನರ್ಚಿಸಿ ಗುರು ಭಕ್ತಿಗೆಯ್ದು ಬಂದಿಸಿ ಶ್ರಾವಕ ಬ್ರತಂಗಳನೇಱಿಸಿಕೊಂಡು ಬೞಿಕಿಂತೆಂದಳ್: ಭಟ್ಟಾರಾ ಇಂದೆಮ್ಮಲ್ಲಿ [ನೀ]ಮುಂ ಕಿಬ್ತಿಯ್ಯಂಗಳನೊಡಗೊಂಡು ಬಂದು ಪಕ್ಕದಿರ್ದು ಪಾನಿಗಟ್ಟಿ ಮಾರ್ಗಮಂ ತೋಱಿ ಮಗುೞ್ತೆ ಬಿಜಯಂಗೆಯ್ಯಿಮೆನೆ, ಕಿಬ್ತಿಯ್ಯಂಗಳ ನೀವೆ ಬೆಸಗೊಳ್ಳಿಮೆನೆ ಅವರೊಡಂಬಟ್ಟೊಡಾಮೊಡಗೊಂಡು ಬರ್ಪೆಮೆಂದೊಡೆ ಮಹಾದೇವಿ ಕಿಬ್ತಿಯ್ಯಂಗಳಲ್ಲಿಗೆ ಪೋಗಿ ಕಾಲಂ ಪಿಡಿದು ವಂದಿಸಿ ಇಂತೆಂದಳ್: ಕಿಬ್ತಿಯ್ಯಾ ನಿಮಗಿಂದು ನಾಮ್ ಪಾನೆಗಟ್ಟುವೆಮೆಮ್ಮ ಮನೆಗೇೞ್ತರವೇೞ್ಪುದೆಂದು ಕಾಲಂ ಪಿಡಿದು ಪೊಡೆವಟ್ಟಿರ್ದಾಗಳರಸಿಯ ಮೊಗಮಂ ನೋಡಿ ನೆಱೆಯೆ ತೊಟ್ಟುಟ್ಟು ಪಸದನಂಗೊಂಡಿರ್ದ ದೇವಗಣಿಕೆಯರನೆ ಪೋಲ್ವ ಅಯ್ನೂರ್ವರರಸಿಯರ್ಕಳಿಂದಂ ಪರಿವೇಷ್ಟಿತೆಯಾಗಿರ್ದ ಶಚೀ ಮಹಾದೇವಿಯನೆ ಪೋಲ್ವ ಧಾರುಣಿ ಮಹಾದೇವಿ ಎನ್ನ ಕಾಲ್ಗೆಱಗಿ ಪೊಡೆವಟ್ಟಿರ್ದಳ್. ಇದೆಲ್ಲಮಿ ತಪದ ಫಲಮುಂಟೆಂದು ಬಗೆದು ಅರಸಿಗೆಂದರ್—ಅಬ್ಬಾ ಇಂದೆಮಗುಣಲ್ಕೆ ಬಗೆಯಿಲ್ಲ. ಉಪವಾಸಂ ಗೆಯ್ದಪ್ಪೆವೆಂದು ಪರಿಚ್ಛೇದಿಸಿ ನುಡಿದೊಡೆ ಬಿನ್ನನೆ ಮೊಗಂ ಬಾಡಿ ಭಟಾರರಂ

ವಂದಿಸಿ ಪೋಗಿ ಕಿಱ್ತಿಯ್ಯಂಗಳಿಂದುಪವಾಸಂ ಗೆಯ್ದೊರೆಂದು ಪೇಱ್ದಿರ್ದರ್. ಮತ್ತಿರುಳಿನ ಕರಣ ವೇಳೆಯೊಳ್ ವಜ್ರಸೇನನೆಂಬ ಮಂತ್ರಿಯರಸಂಗಿಂತೆಂದು ಬಿನ್ನಪಂ ಗೆಯ್ದಂ—ದೇವಾ ನಾಳೆಯಾಂ ನಿಱಿಸಿ ಕಿಱ್ತಿಯ್ಯಂಗಳ್ಗೆ ಪಾರಣೆಯಂ ಮಾಡುವೆನೆನೆ ಅಂತೆಗೆಯ್ಯೆಂದೊಡಂ ಮಱು ದಿವಸಂ ಬಸದಿಗೆ ವಂದು—ಭಟ್ಟಾರಾ ಕಿಱ್ತಿಯ್ಯಂಗಳನೆಮ್ಮಲ್ಲಿಗೊಡಗೊಂಡು ಬಂದು ಚರಿಗೆದೋಱಿ ನೀಮುಂ ಬಿಜಯಂ ಗೆಯ್ಯಿಮೆನೆ ಕಿಱ್ತಿಯ್ಯಂಗಳೊಡಂಬಟ್ಟೊಡೊಡಗೊಂಡು ಬರ್ಪೆಮವರನೊಡಂಬಡಿಸಿ ಮೆಂದೊಡೆ ಕಿಱ್ತಿಯ್ಯಂಗಳಲ್ಲಿಗೆ ಪೋಗಿ—ಕಿಱ್ತಿಯ್ಯಾ ಇಂದೆಮ್ಮ ಮನೆಯೊಳ್ ಎಮ್ಮಂ ಪರಸಲ್ವೇಱ್ಕುಮೆಂದು ಕಾಲಂ ಪಿಡಿದು ಪೊಡೆಮಟ್ಟಿರ್ದೊಸಂ ನೋಡಿ 'ರಾಜೋ ವಾ ರಾಜ ಮತ್ರ್ಯೋ ವಾ' ಎಂದು ಸಾಮಂತ ಮಹಾ ಸಾಮಂತರ್ಕಳಿಂ ಪರಿವೇಷ್ಟಿತನಾಗಿರ್ದ ಮಂತ್ರಿ ಎನಗೆ ಪೊಡೆಮಟ್ಟಂ. ಇವೆಲ್ಲಂ ತಪದ ಮಾಹಾತ್ಮ್ಯಂ. ಇನ್ನುಂ ಮುಂದೆ ಪಿರಿದುಂಟೆಂದು ಬಗೆದಿಂತೆಂದರ್—ಆಮಿಂದುಪವಾಸಂ ಗೆಯ್ದೆ ಮೆಂದೊಡಾತನೆನಗೆ ಪುಣ್ಯಮಿಲ್ಲದಾಗದೆ ನುಡಿದು ಭಟ್ಟಾರರಂ ವಂದಿಸಿ ಪೋದಂ. ಮತ್ತ ಮಿರುಳಿನ ಕರಣ ವೇಳೆಯೊಳ್ ಅರ್ಹದ್ದಾಸನೆಂಬೊಂ ರಾಜ ಶ್ರೇಷ್ಠಿ ಅರಸಂಗೆ ಬಿನ್ನಪಂ ಗೆಯ್ದಂ: ನಾಳೆಯಾಂ ಕಿಱ್ತಿಯ್ಯಂಗಳ್ಗೆ ಪಾರಣೆಯಂ ಮಾಡುವೆನೆ ಎಂದೊಡೆ ಅರಸನಂತೆ ಗೆಯಿಮೆಂದೊಡಾತನುಂ ಬಸದಿಗೆ ಪೋಗಿ ಭಟ್ಟಾರರಂ ವಂದಿಸಿ ಕಿಱ್ತಿಯ್ಯಂಗಳುಮಂ ವಂದಿಸಿ ಗುರುಗಳಸುಮತದಿಂದೆಮ್ಮ ಮನೆಗೆ ಚರಿಗೆ ವರಲ್ವೇಱ್ಕುಮೆಂದು ನುಡಿ ದೊಡುಪವಾಸಂ ಗೆಯ್ದೆನೆಂದೊಡಾತನುಂ ಭಟ್ಟಾರರಂ ವಂದಿಸಿ ಪೋದಂ.

ನಂದಿಮಿತ್ರ ಕಿಱ್ತಿಯ್ಯಂಗಳ್ಗೆ ಶ್ರಮಮಂ ಭಟಾರರಱಿದು—ಕಿಱ್ತಿಯ್ಯಾ ಪಂಚ ನಮಸ್ಕಾರಮಂ ಮಾಣದಿರುಳುಂ ಪಗಲುಂ ಓದುತ್ತಮಿರಿಮೆಂದು ಕಲ್ಪಿಸಿದೊಡವರುಂ ಇರುಳುಂ ಪಗಲುಂ ಓದುತ್ತಿರೆ ಮತ್ತಿತ್ತಯಿರುಳಿನೋಲಗದೊಳ್ ನೆರೆದಿರ್ದ ನೆರವಿಯೊ ಳರಸನುಂ ಮಹಾ ದೇವಿಯುಂ ಕಿಱ್ತಿಯ್ಯಂಗಳ ತಪಮುಂ ಗುಣಮುಮಂ ಪೊಗೞುತ್ತ ತಪಂಬಟ್ಟ ದಿವಸದಿಂ ತಗುಳ್ದಿಂದೀಗಯ್ದು ದಿವಸಮುಣ್ಬುದಿಲ್ಲ ಕುಡಿವುದಿಲ್ಲ ಉಪವಾಸಂ ಗೆಯ್ದಿರ್ದರ್. ಆಮೆನಿತುಂ ಕೇಱಿ ನುಡಿದೊಡಂ ಚರಿಗೆ ಮಾಡಲೊಲ್ಲರ್. ಇನ್ನವು ಸಾಹಸಮುಂ ಸತ್ರಮುಮಾರ್ಗಮೊಳವೆಯೆಂದರಸನುಂ ಅರಸಿಯುಂ ಪೊಗೞ್ವುದಂ ಕೇಳ್ದು ಯುವರಾಜನೆರ್ದು ಬಿನ್ನಪಂ ಗೆಯ್ದಂ: ದೇವಾ ಕಿಱ್ತಿಯ್ಯಂಗಳ್ಗೆ ನಾಳೆಯಾಂ ಪಾರಣೆಯಂ ಮಾಡಿಸುವೆನೆಂದೊಡೆ ಅರಸನಂತೆಗೆಯ್ಯೆಂದೊಡೆ ಮಱು ದಿವಸಂ ಯುವರಾಜಂ ಮಹಾ ವಿಭೂತಿವೆರಸು ಬಸದಿಗೆ ಪೋಗಿ ದೇವ [ರಂ] ಭಟಾರರು ಮನರ್ಚಿಸಿ ಬಂದಿಲ್ಲಿ—ಭಟಾರಾ ಕಿಱ್ತಿಯ್ಯಂಗಳಿಂದೆಮ್ಮ ಮನೆಯೊಳ್ ಪರಸುವಂತಿರೆ ಬೆಸಸಿಮೆನೆ ಕಿಱ್ತಿಯ್ಯಂಗಳನೊಡಂಬಡಿಸಿ ನಿಱಿಸಿಮೆನೆ ಕಿಱ್ತಿಯ್ಯಂಗಳ ಕಾಲಂ ಪಿಡಿದು ಪೊಡೆಮಟ್ಟು—ಕಿಱ್ತಿಯ್ಯಾ ಎಮ್ಮ ಮನೆಯೊಳಿಂದು ನೀಮುಂ ಪರಸಲ್ವೇಱ್ಕು ಮೆಂದೊಡೆ ಕಿಱ್ತಿಯ್ಯಂಗಳಾತನ ಶ್ರೀಯುಂ ವಿಭೂತಿಯುಂ ತೇಜಮುಮಂ ಕಂಡು ಇಂತಪ್ಪ ಕ್ಷತ್ರಿಯ ಪುತ್ರಾದಿಗಳೆಲ್ಲಂ ಎನಗೆಱಗಿ ಪೊಡೆಮಟ್ಟು ಕಿಂಕುರ್ವಾಣಂ ಗೆಯ್ದಪ್ಪರ್. ಉಣ್ಬುದರ್ಕೆ ಈಗಳ್ ಸಂಕಟಮಿಾ ತಪದ ಫಲಮಿನ್ನುಂ ಮುಂದೆ ಬಗೆದಿಂದುಪವಾಸಂ ಗೆಯ್ದವೆಂದು ಮಱು ಮಾತುಗೊಟ್ಟೊಡೆ ವಿರಾಗನಾಗಿ

ಯುವರಾಜಂ ಭಟಾರರಂ ವಂದಿಸಿ ಪೋದಱಿಂತಾಱು ದಿವಸಂ ಪೋದ ಬೞಿಕ್ಕೇೞನೆಯ ದಿವಸದಂದು ನೇಸಮರ್ಡಿದೊಡೆ ಭಟಾರರಲ್ಲಿಗೆ ವಂದು ಬಂದಿಸಿ ಇಂತೆಂದರ್: ಭಟಾರಾಱನಿತು ಕಾಲಮುಂಡುಣಸು ಸಾಲ್ಗುಮೆಮಗೆ ಯಾವಜ್ಜೀವಂ ಬಾೞ್ವನ್ನೆಗಂ ಉಪವಾಸ ಪಚ್ಚಕ್ಖಾಣಂಗುಡುವುದೆಂದೊಡೆ ಭಟಾರರೆಂದರ್: ನೀಮುಂ ಮಹಾಪುರುಷರೀ ನಿಮ್ಮಂತು ಧೈರ್ಯವಂತರುಂ ಸತ್ವವಂತರುಂ ಆರುಮಿಲ್ಲಂ. ಇನಿತು ಕಾಲಂ ತಪಂಗೆಯ್ವಪ್ಪೆಮಗಪ್ಪೊಡಂ ಇನಿತು ಧೈರ್ಯಮುಂ ಸತ್ವಮುಮಿಲ್ಲೆಂದು ಗುರುಗಳ್ ಪೊಗೞ್ದೊಡೆ ಗುರುಗಳ ಪೊಗೞ್ತೆಗೆ ರಾಗಿಸಿ ಸಂತೋಸಂ ಬಟ್ಟಿರ್ದೊಡೆ ಭಟಾರರೆಂದರ್: ನಿಮಗಿಂದಿನ ದಿವಸದನಿತೆಯಾಯುಷ್ಯಮೆಂದು ಪೇೞ್ದೊಡೆ ಜಾವಜ್ಜೀವಂ ಚತುರ್ವಿಧಮಪ್ಪಾಹಾರಕ್ಕಂ ಶರೀರಕ್ಕಂ ನಿವೃತ್ತಿಗೆಯ್ಯೆಮ್ಮ ಎಮ್ಮ ಪಚ್ಚಕ್ಖಾಣಂಗೊಟ್ಟು ಬಸದಿಯೊಳೊಂದು ಕೋಣೆಯೊಳೀಯೆಡೆಯೊಳ್ ನೀಮೊಂದು ಕೆಲದೊಳ್ ಮಗುೞದೆ ತಳರದೆ ಕೈಯುಂ ಕಾಲ್ಗಳುಮನುಡುಗದೆ ನೀಡದೆ ಬಾೞ್ವನ್ನೆಗಂ ಪಟ್ಟಿರ್ದು ಪಂಚ ನಮಸ್ಕಾರಂ ಮನದೊಳೋದುತ್ತಿರಿಮೆಂದು ಕಲ್ಪಿಸಿ ಪಟ್ಟಿರಿಸಿ ಆರಾಧನೆಯನರ್ಚಿಸಿ ಭಟಾರರಾರಾಧನೆಯಂ ವಕ್ಖಾಣಿಸುವುದಂ ಕೇಳುತ್ತಿರ್ದುಂ ಮತ್ತಿತ್ತ ಕಿಱ್ತಿಯ್ಯಂಗಳ್ ಸಂನ್ಯಸನಂ ಗೆಯ್ದರೆಂಬ ಮಾತ ನರಸನಾದಿಯಾಗಿ ಪೊೞಲ ಜನಂಗಳೆಲ್ಲಂ ಕೇಳ್ದು ಪಿರಿದುಂ ಸಂಭ್ರಮಮಾಗಿ ಅರಸನುಂ ಮಹಾದೇವಿಯುಂ ಮಂತ್ರಿಯುಂ ರಾಜಶ್ರೇಷ್ಠಿಯುಂ ಯುವರಾಜಂ ಮೊದಲಾಗಿ ಪೊೞಲ ಜನಮೆಲ್ಲಮಿಪ್ಪೊತ್ತುಮರ್ಚನೆಯಂ ಕೊಂಡುಬಂದರ್ಚಿಸಿ ಕಿಱಿದು ಬೇಗಮಿರ್ದು ಆರಾಧನೆಯಂ ವಕ್ಖಾಣಿಸುವುದಂ ಕೇಳ್ದು ಮಿಥ್ಯಾದೃಷ್ಟಿಗಳಪ್ಪವರ್ ಶ್ರಾವಕ ಬ್ರತಂಗಳಂ ಕೈಕೊಂಡರ್. ಶ್ರಾವಕರುಂ ದೃಢ ಸಮ್ಯಕ್ ದೃಷ್ಟಿಗಳಾಗಿ ಬಂದಿಸಿ ಪೋದರ್.

ಇತ್ತ ನೇಸಱ್ ಪಟ್ಟೊಡೆ ಕಿಱ್ತಿಯ್ಯಂಗಳ್ಗೆ ಆಸನ್ನ ಕಾಲಮಾದುದೆಂಬುದಂ ಭಟಾರರಱಿದಿಂತೆಂದರ್: ಕಿಱ್ತಿಯ್ಯಾ ನಿಮಗೀಗಳ್ ಪ್ರಾಣಂ ಪೋಗಲ್ ಬಗೆದಪ್ಪುದು. ದೇವರಂ ಜಾನಿಸುವುದು. ಪಂಚ ನಮಸ್ಕಾರಮನೋದುತ್ತಮುಚ್ಚಾರಿಸುವುದಂ ಕೇಳುತ್ತಮಿರ್ಕೆಂದು ಕಲ್ಪಿಸಿ ಭಟಾರರ್ ಪಂಚ ನಮಸ್ಕಾರಮಂ ಪಿರಿದು ಬೇಗಂ ಪೇೞೆ ಪ್ರಾಯೋಪಗಮನದಿನೆಂತಂತೆ ಶುಭ ಪರಿಣಾಮದಿಂ ಸಹಜ ದರ್ಶನ ಜ್ಞಾನ ಚಾರಿತ್ರಂಗಳಂ ಸಾದಿಸಿ ಮುಡುಪಿ ಸೌಧರ್ಮ ಕಲ್ಪದೊಳ್ ಎರಡು ಸಾಗರೋಪಮಾಯುಷ್ಯಮನೊಡೆಯೊಂ ಕನಕಧ್ವಜನೆಂಬ ದೇವನಾಗಿ ಪುಟ್ಟಿಯವಧಿ ಜ್ಞಾನದಿಂ ತನ್ನ ಭವಮನಱಿದಾ ಶರೀರದಿಂದಮಿಂತಪ್ಪ ದಿವ್ಯ ಶರೀರಮುಂ ದೇವ ಲೋಕದೊಳಪ್ಪ ಸುಖಮೈಶ್ವರ್ಯಮುಮಾದುದೆಂದು ತನ್ನ ಶರೀರಮಂ ಪೂಜಿಸಲೆಂದು ಮೂರು ಕೋಟಿ ಪರಿವಾರ ದೇವರ್ಕಳುಂ ಮೂಱು ಲಕ್ಕೆ ದೇವಿಯರಪ್ಪರಸಿಯರ್ಕಳುಂ ಗಣಿಕೆಯರ್ಕಳುಂ ಬೆರಸು ಸುರತ್ನಮಪ್ಪ ದಿವ್ಯ ವಿಮಾನಂಗಳಂ ಘಂಟಾಜಾಳ ಮುಕ್ತಾಜಾಳ ಹೇಮಜಾಳಂಗಳಿಂದೊಪ್ಪುವ ವಿಮಾನಮನೇಱಿ ಮಹಾ ವಿಭೂತಿಯಿಂ ತಗುಳ್ದಾಗಾಮರಂ ಬೆರಸು ಪಾಡುತ್ತಂ ಬರ್ಪನ್ನೆಗಂ; ಇತ್ತ ವೈದಿಸ ಮೆಂಬ ಪೊೞಲೊಳ್ ಸಂದಿಸುತ್ರ ಕಿಱ್ತಿಯ್ಯಂಗಳ್ ಮುಡಿಪಿದರೆಂಬುದಂ ಕೇಳ್ದರಸನುಂ

ಮಹಾ ದೇವಿಯುಂ ಪೆರ್ಗಡೆಯುಂ ಮೊದಲಾಗಿ ಪೊೞಲೊಳಗುಳ್ಳ ಜನಮೆಲ್ಲ ಮರ್ಚನೆಗಳಂ ಕೊಂಡು ಬಂದರಸಂ ತಾಂ ಪಕ್ಕದಿೞ್ದು ಕ್ಷಪಣಕನುಯ್ವ ವಿಮಾನ ಮುಮಂ ಮತ್ತಂ ಶೋಭೆಗೆಂದು ಪಲವು ವಿಮಾನಂಗಳುಮನೇಳಿದವಾಗಿ ಮಾಡಿಸಿ ಪಲವು ನೇತ್ರದ ಪೞಿವುಲ್ಲವಂಗಳ್ ಧ್ವಜ ಪತಾಕೆಗಳುಮನೆತ್ತಿಸಿ ಚಾತುರ್ವರ್ಣ ಶ್ರವಣ ಸಂಘ ಸಹಿತಂ ಪಟು ಪಟಹ ಪಣವ ತು*ವ ಭಂಭಾ ಮರ್ದಳೆಯುಲ್ಲರಿ ಮುಕುಂದಾಳ ಕಹಳ ಶಂಖ ವಂಶ ವೀಣಾ ಸ್ವರಂಗಳೆಸೆಯೆ ಕವಿ ವರಮಂ ಪೆಂಡವಾಸದ ಪೆಂಡಿರ್ಕಳುಂ ವಿಮಾನಂಗಳ ಮುಂದೆಯಾಡುತ್ತಂ ಧರ್ಮಮುಮಂ ಪೊನ್ನುಮಂ ಕೇಳಿ ಮಾಡಿ ಮುಂದೆ ಸೂಸುತ್ತುಮೊಯ್ವುದಂ ಕನಕಧ್ವಜನೆಂಬ ದೇವಂ ಕಂಡೆನ್ನ ದೇಹಕ್ಕೆ ಇವರೆಲ್ಲಮಿನಿವಿರಿದರ್ಚನೆಯುಮಂ ಪೂಜೆಯುಂ ವಿಭವಮುಂ ಪ್ರಭಾವನೆಯುಮಂ ಮಾಡಿದಪ್ಪರೆಂದೊಡಾನೆನ್ನ ದೇಹಕ್ಕೆ ಮಾಡದಿರ್ಪೆನೆ ಎಂದು ಪಲವು ವಿಮಾನಂಗಳಂ ವಿಗುರ್ವಿಸಿ ಕ್ಷಪಣಕನ ವಿಮಾನದ ಮುಂದೆ ಬಳಸಿಯುಂ ಪೋಪಂತು ಮಾಡಿಯಾಕಾಶ ಮೆಲ್ಲಂ ವಿಮಾನಮಾಗೆ ವಿಗುರ್ವಿಸಿ ದೇವಲೋಕದ ಪಱೆಗಳಂ ಬಾಜಿಸುತ್ತಂ ನಮೇರು ಮಂದಾರ ಪಾರಿಜಾತಂಗಳೆಂಬ ಪೂಗಳಂ ಸುರಿಯುತ್ತಂ ದೇವರ್ಕಳ ದೇವಿಯರ್ಕಳ್ ಸಹಿತಂ ಕ್ಷಪಣಕನ ವಿಮಾನದ ಮುಂದೆ ಇಂತೆಂದು ಪೇಱ್ದಾಡಿದಂ:

ಗಾಹೆ॥ ಪೆಂಛಹ ಪೆಂಛಹ [ಓ]ದಣಮುಂಡಂ । ಅಂಛವಮಂ ಝುಗಯಂ ರಮಣೀಯಂ ॥
ಜಂಜೆಣ ಮಂತೆಣ ಕಾರಣ ಯೇಣ । ಪಂಚ ಇಯಂ ಮಂ ಹೊ ಯೆಣರೇಣ ॥

ಎಂದು ಛಂದ ಛಂದದಿಂ ಪೇಱ್ದಾಡುವುದಂ ಕಂಡರಸಂ ಮೊದಲಾಗಿ ಪೊೞಲ ಜನಮೆಲ್ಲಂ ಚೋದ್ಯಂಬಟ್ಟು ಬೆಱಗಾಗಿ ನೋಡುತ್ತಿರ್ದಿಂತೆಂದರಸಂ ಬೆಸಗೊಂಡಂ: ನೀಮಾರ್ಗೆನೆಂಬಿರಿ ಎಲ್ಲಿಂ ಬಂದಿರಿ ಇಂತೇಕೆ ಪೇಱ್ದಾಡಿದಪ್ಪಿರೆಂದು ಬೆಸಗೊಂಡೊಡಾನಲ್ತೆ ನಂದಿಮಿತ್ರನಪ್ಪ ಕಿೞ್ತಿಯ್ಯನೆನ್ [ವಾ]ಸಿಂಗೆಂದು ತಪಂಬಟ್ಟಾಱು ದಿವಸ ಮುಪವಾಸಂ ಗೆಯ್ದು ಮುಡಿಪಿ ದೇವಲೋಕದೊಳ್ ಕನಕಧ್ವಜನೆಂಬೊಂ ದೇವನಾಗಿ ಪುಟ್ಟಿ ಎನ್ನ ದೇಹಮಂ ಪೂಜಿಸಲುಂ ನಿಮಗೆನ್ನ ವಿಭವಮಂ ತೋಱಲ್ ಬಂದೆನೆಂದು ಪೇೞ್ದು ತನ್ನ ಶರೀರಮಂ ದಿವ್ಯ ಗಂಧಮುಪ್ಪ ಪುಷ್ಪ ದೀಪ ಧೂಪಾಕ್ಷತೆಗಳಿಂದರ್ಚಿಸಿ ತನ್ನ ಗುರುಗಳಪ್ಪ ಶಿವಗುಪ್ತರೆಂಬಾಚಾರ್ಯರುಮಂ ಪೂಜಿಸಿ ನಿಮ್ಮ ಪ್ರಸಾದದಿಂ ದೆನಗಿನಿವಿರಿದು ಶ್ರೀಯುಂ ಮಹಾ ವಿಭೂತಿಯುಂ [ಐ]ಶ್ವರ್ಯಮುಂ ದೇವತ್ವಮುಮಾದುದೆಂದು ಪೇೞ್ದು ಬಂದಿಸಿ ತನ್ನ ದೇವಲೋಕಕ್ಕೆ ಪೋದನ್.

ಇತ್ತ ಅರಸನುಮದೆಲ್ಲಮಂ ಕಂಡು ಸಂಸಾರ ಶರೀರ ಭೋಗ ವೈರಾಗ್ಯ ಪರಾಯಣನಾಗಿ ಶ್ರೀವರ್ಮನೆಂಬ ತನ್ನ ಪಿರಿಯ ಮಗಂಗೆ ರಾಜ್ಯಪಟ್ಟಂಗಟ್ಟಿ ಪಲಂಬರರಸು ಮಕ್ಕಳ್ ಮಹಾದೇವಿ ಮೊದಲಾಗಿ ಪಲಂಬರರಸಿಯರ್ಕಳುಂ ಪರಿವಾರದವರುಂ ಪೊೞಲ ಪಲಂಬರ್ ಜನಂಗಳೆಲ್ಲಂ ಶಿವಗುಪ್ತ ಭಟ್ಟಾರರ ಪಕ್ಕದೆ ತಪಂಬಟ್ಟು ದರ್ಶನ ಚಾರಿತ್ರಂಗಳೊಳಗೊಳ್ಳಿತಾಗಿ ನೆಗೞ್ದು ಪಶ್ಚಾತ್ಕಾಲದೊಳ್ ಸಂನ್ಯಸನಂ ಗೆಯ್ದು ಮುಡಿಪಿ ಅನಿಬರುಂ ದೇವಲೋಕಕ್ಕೆಪೋದರ್. ಮತ್ತಂ ಕನಕಧ್ವಜನೆಂಬ ದೇವಂ ಪಲಕಾಲದಿಂ ದೇವ ಲೋಕದ ಸುಖಮನನುಭವಿಸಿ ಬಂದಿಲ್ಲ ನೀಂ ಸಂಪ್ರತಿ

ಚಂದ್ರಗುಪ್ತನಾಗಿ ಪುಟ್ಟಿದೆಯೆಂದು ಸಮಾಧಿಗುಪ್ತ ಭಟಾರರ್ ತನ್ನ ಭವಮಂ ಪೇೞ್ದೊಡಾದಮಾನುಂ ಒಸೆದು ಸಂತೋಷಂಬಟ್ಟು ಭಟ್ಟಾರರಂ ವಂದಿಸಿ ತನ್ನ ಮನೆಗೆ ಪೋಗಿ ಇಂತು ಸಂಪ್ರತಿ ಚಂದ್ರಗುಪ್ತ ಮಹಾರಾಜಂ ಪೃಥ್ವಿಯನೇಕಛತ್ರಚ್ಛಾಯೆಯಿಂದಲಾಳುತ್ತಮುಜ್ಜೇನಿಯೊಳ್ ಸುಖದಿಂದಿರ್ಪನ್ನೆಗಂ ಇತ್ತ ದ್ವಾದಶಾಂಗ ಚತುರ್ದಶ ಪೂರ್ವಧಾರಿಗಳಪ್ಪ ಭದ್ರಬಾಹು ಭಟ್ಟಾರರ್ ಪಿರಿದು ರಿಸಿ ಸಮುದಾಯಂ ಬೆರಸು ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತ ಬರ್ಪೋರುಜ್ಜೇನಿಗೆ ವಂದು ಪೊೞಲ ಬಹಿರುದ್ಯಾನವನದೊಳಿರ್ದರದನರಸಂ ಕೇಳ್ದು ಸಪರಿವಾರಂ ಬೆರಸು ಪೋಗಿ ಭಟಾರರಂ ವಂದಿಸಿ ಸದ್ಧರ್ಮಮಂ ಕೇಳ್ದು ಶ್ರಾವಕ ಬ್ರತಂಗಳನೇಱಿಸಿಕೊಂಡು ವಂದಿಸಿ ತನ್ನ ಮನೆಗೆವೋದನಿತ್ತ ಭಟಾರರುಂ ಪಲವು ದಿವಸಮಾ ಪೊೞಲೊಳಿರೆ ಮತ್ತೊಂದು ದಿವಸಂ ರಿಸಿ ಸಮುದಾಯಮೆಲ್ಲಮಂ ಚರಿಗೆವೊಗಿಸುತ್ತಮೆಲ್ಲರುಮಂ ನಿಱಿಸಿ ತಾವೊರ್ವರುಮೊಂದು ಮನೆಯಂ ಪೋಗಿ ಪೊಕ್ಕಾಗಳ್ ಮನೆಯೊಳಾರುಮಿಲ್ಲೋಸರಿಗೆಯೊಳ್ತೊಟ್ಟಿಲೊಳಿರ್ದವ್ಯಕ್ತ ಕಿಱುಗೂಸು ಬೋಳಹ ಬೋಳಹ ಭಟ್ಟಾರಾ ಎಂದ[ತ್ತು. ಆ]ಗಳಾ ವಚನಮಂ ಭಟಾರರ್ ಕೇಳ್ದು ದಿವ್ಯ ವಾಕ್ಯಮೆಂದಱಿದು ಕಾಲ ಪ್ರಮಾಣಮಂ ಬೆಸಗೊಂಡೊಡೆ ದ್ವಾದಶ ವರ್ಷಮೆಂದು ಪೇೞ್ದಿತ್ತು. ಭಟಾರರ್ ಕಾಲ ದೋಷದಿಂ ಪ್ರಜಾ ಪೀಡೆಯಾದಪುದೆಂದಱಿದು ಕಾರುಣ್ಯ ಬುದ್ಧಿಯಿಂದಾಹಾರಮಂ ಕೊಳ್ಳದೆ ಅಲಾಭಂ ಮಾಡಿಯಂತೆ ಬಸದಿಗೆವೋಗಿ ಗೋಚಾರ ನಿಯಮಂ ಗೆಯ್ದು ಬೞಿಕ್ಕೆ ರಿಸಿಯರ್ಕಳ್ಗೆಲ್ಲಂ ಬೞಿಯನಟ್ಟಿದರಿತ್ತರಸನುಮಾ ದಿವಸದಿರುಳ್ ಪದಿನಾಱುಂ ಪೊಲ್ಲ ಕನಸುಗಳಂ ಕಂಡನವಾವುವೆಂದೊಡೆ: ಆದಿತ್ಯನಸ್ತಮಾನಕ್ಕೆ ಸಲುವುದುಮಂ ಕಲ್ಪವೃಕ್ಷದ ಕೋಡು ಉಡಿವುದುಮಂ ನೆಲಕ್ಕೆ[ವ]ರುತಿರ್ದ ವಿಮಾನಂ ಬಾರದೆಡೆಯಿಂದೆ ಮೇಗೆ ಮಗುೞ್ವುದುಮಂ ಸಮುದ್ರ[ಂ] ಮೇರೆದಪ್ಪಿದುದುಮಂ ಬೆಳ್ಗತ್ತೆ ಪೂಡಿದ ಪೊನ್ನ ರಥ ಸಲುವುಮಂ ಬೆಳ್ಗತ್ತೆಯನರಸರ್ಕಳೇಱುವುದುಮಂ—ಇಂತೀ ಪದಿನಾಱುಂ ಕನಸುಗಳಂ ಸಮ್ಯಗ್ದರ್ಶನ ಸುದ್ಧಿ ಮೊದಲಾಗೊಡೆಯ ಗುಣಂಗಳಿಂ ಕೂಡಿದ ಸಂಪ್ರತಿ ಚಂದ್ರಗುಪ್ತ ಮಹಾರಾಜಂ ಪೊಲ್ಲ ಕನಸುಗಳಂ ಕಂಡೆನೆಂದಂಜಿ ನೇಸಱ್ ಮೂಡಿದಾಗಳ್ ಭದ್ರಬಾಹು ಭಟಾರರಲ್ಲಿಗೆ ಪೋಗಿ ವಂದಿಸಿ ತನ್ನ ಕಂಡ ಕನಸುಗಳಂ ಭಟಾರರ್ಗೆ ಪೇೞ್ದವಱ ಫಲಂಗಳಂ ಬೆಸಗೊಂಡೊಡೆ ಭಟಾರರಿಂತೆಂದು ಪೇೞಲ್ ತೊಡಗಿದರ್:—

ಆದಿತ್ಯನಸ್ತಮಾನಕ್ಕೆ ಸಲ್ವುದಂ ಕಂಡುದಱಿಂದೀ ಭರತಕ್ಷೇತ್ರದೊಳ್ ಚತುರ್ದಶ ಪೂರ್ವಧಾರಿಗಳುಮವಧಿಜ್ಞಾನಿಗಳುಮಿಲ್ಲಿಂದಿತ್ತಲಾಗರ್. ಕಲ್ಪವೃಕ್ಷದ ಕೋಡು ಡಿದುದುಮಂ ಕಂಡುದಱಿಂದಿಂದಿನ ದಿವಸಂ ಕೞಿದೊಡೆ ಕುಲ ಬಲ ವಿಭವದಿಂ ಪಿರಿಯರಪ್ಪ ಮಕುಟಬದ್ಧರಪ್ಪರಸುಗಳ್ತಪಂ ಬಡುವರಲ್ಲರ್. ನೆಲಕ್ಕೆವರುತ್ತಿರ್ದ ವಿಮಾನಮೆಡೆಯಿಂದಂ ಮೇಗೆ ಮಗುೞ್ವುದಂ ಕಂಡುದಱಿ[ಂ] ದೇವರ್ಕಳುಂ ವಿದ್ಯಾಧರರ್ಕಳುಂ ಇಲ್ಲಿಂದಿತ್ತೀ ಕ್ಷೇತ್ರಕ್ಕೆ ಬಾರರ್. ಪನ್ನೆರಡು ತಲೆಯ ಪಾವಂ ಕಂಡುದಱಿಂದಿಲ್ಲಿಂ ತೊಟ್ಟೀ ನಾಡೊಳ್ ಪನ್ನೆರಡು ವರ್ಷಂಬರಂ ರೌದ್ರ ಪಸವಮಕ್ಕುಂ. ಚಂದ್ರನೊಡೆದುದಂ ಕಂಡುದಱಿಂ ಸದ್ಧರ್ಮದ ಮೊದಲ ಪೊರ್ದಿದ

ಮಾರ್ಗದಿಂ ಬೆಳೆಯೊಳ್ ಪುಲ್ಗಳ್ ಪಲವಕ್ಕುಂ. ಕಡುಗಡಿಯುವಪ್ಪೆರಡಾನೆಗಳ್ ತಮ್ಮೊಳ್ ಪೆಱಸಾರ್ದು ಪೆಱಪಿಂಗುವುದಱಿಂ ಪ್ರಜೆಗಳ ಮೆಚ್ಚಿದಂತೆ ಮುಱಿಕೊಳ್ಳವು, ಮಂಡಲ ವರ್ಷಂಗಳಕ್ಕುಂ. ವಿಮಾನಂಬುಱಿವಂ ಕಂಡುದಱಿಂ ವಿಮಾನಂಬುಱಿವಿನೊಳೋರನ್ನವು ಶಾಸ್ತ್ರಂಗಳುಮಂಗ ಬಾಹ್ಯಮುಪ್ಪ ಚತುರ್ದಶ ವಿದ್ಯಾ ಸ್ಥಾನಂಗಳುಂ ಕುಂದಿಯುಪದೇಶ ತನು ಮಾತ್ರಮೆ ನಿಲ್ಕುಂ. ನೀರಿಲ್ಲದ ಕೆಱೆಯ ನಡುವಂ ಕಂಡುದಱಿಂ ತೀರ್ಥಂಕರ ಚಕ್ರವರ್ತಿಗಳ ಪುಟ್ಟಿದ ಮಧ್ಯದೇಶದೊಳ್ ಪಿನ್ನ ನೆಗೞ್ಕೆಯಾಗದು. ಆ ಮಧ್ಯದೇಶಕ್ಕೆ ಸಂಬಂಧಿ ಈ ಗಾಹೆ:—

ಪುಂವೇಣ ಅಂಗವಿಸ ಓ । ದಂಖಿಣದೊ ಜಾವಹೊ ಇಕೋಸಂಬಿ ॥
ಯವರೇಣ ಜಾವದೂಣ ಕುಳ । ವಿಸಯೊಯ ಉಂತರದೊ ॥

ಎಂದು ಮಧ್ಯದೇಶ ಪ್ರಮಾಣಂ. ಮತ್ತಂ ಪೊಗೆಯಿಂದಂ ಪೆರ್ಚಿ ನೆಗೆದ ಕಾೞ್ಕಿರ್ಚಂ ಕಂಡುದಱಿಂ ಧೂರ್ತರಪ್ಪ ಪೊಲ್ಲ ಲಿಂಗಿಗಳ ಪೆರ್ಚಕ್ಕುಂ. ಮತ್ತ[ಂ] ದಯ ಮೊದಲಾಗೊಡೆಯ ಸದ್ಧರ್ಮ ವಿರುದ್ಧಮಾಗಿ ನೆಗೞ್ವ ಪಿರಿದಪ್ಪ ಹಿಂಸಾದಿಗಳಂ ಗೆಯ್ವ ವೇದಾದಿ ಶಾಸ್ತ್ರಂಗಳ ಪೆರ್ಚಕ್ಕುಂ. ಸಿಂಹಾಸನಮನೇಱಿರ್ದ ಕೋಡಗಮಂ ಕಂಡುದಱಿಂ ಕುಲಜರಲ್ಲದವರರಸುಗೆಯ್ವರ್. ಪೊನ್ನ ತಳಿಗೆಯೊಳ್ ನಾಯ್ ತುಯ್ಯಲನುಣ್ಬುದಂ ಕಂಡುದಱಿಂ ಪೊಲ್ಲ ಲಿಂಗಿಗಳರಸರ್ಕಳಿಂ ಪೂಜಿಸೆ ಪಡುವರ್. ಕೋಡಗವಾನೆಯನೇಱುವುದಂ ಕಂಡುದಱಿಂದಾದಮಾನುಂ ಶುದ್ಧ ಕುಲದೊಳ್ಪುಟ್ಟಿದರಸುಮಕ್ಕಳ್ ಉತ್ತಮ ಕುಲದೊಳಪ್ಪಭಿಮಾನಮಂ ತೊಱೆದು ಬಾೞ್ಕಾರಣಮಾಗಿ ಕುಲಜರಲ್ಲದವರ್ಗಳಾಗಿ ಬಾೞ್ವರ್. ಕಸ ಕುಪ್ಪೆಯೊಳ್ ತಾವರೆ ಮೂಡಿದುದಂ ಕಂಡುದಱಿಂ ದಯೆಯುಪಶಮಮುಂ ಪರಿಗ್ರಹ ಪರಿತ್ಯಾಗಮುಂ ಸಮಾಧಿಯುಂ ಸತ್ಯಮುಂ ಶೌಚಮುಂ ಕ್ಷಮೆಯುಮೆಂದಿವು ಮೊದಲಾಗೊಡೆಯವಱೊಳ್ ಕೂಡಿದ ಮಿಕ್ಕ ಸದ್ಧರ್ಮ ಮಾರ್ಗಮಂ ದ್ರವ್ಯ ಪತಿಗಳುಮರಸು ಮಕ್ಕಳುಂ ತಮ್ಮ ದ್ರವ್ಯಾದಿ ಮದದಿಂದಂ ತೊಱೆವರುಂ ನೀಚ ಜಾತಿಗಳುಂ ಬಡವರುಂ ಸದ್ಧರ್ಮಮಂ ಕೈಕೊಂಡು ನೆಗೞ್ವರ್. ಸಮುದ್ರ ವೇಳೆ ತನ್ನ ಮರ್ಯಾದೆಯಂ ಮಿಕ್ಕುವರಿದುದಂ ಕಂಡುದಱಿಂದರಸುಮಕ್ಕಳ್ ತಮ್ಮ ಮರಿಯಾದೆಯುಂ ಮಿಕ್ಕು ದ್ರವ್ಯಂ ಮೊದಲಾಗೊಡೆಯವಱೊಳ್ ಲೋಭಿಷ್ಟರಪ್ಪರ್, ಒಳ್ಳಿತಪ್ಪ ಸತ್ಯ ಶೌಚ ಚಾರಿತ್ರವೆಂದಿವಱಿಂ ಕೂಡಿಯಾದಮಾನುಂ ನಿರ್ದಯರ್ಕಳಪ್ಪರ್. ಬೆಳ್ಗತ್ತೆ ಪೂಡಿದ ಪೊನ್ನ ರಥಮಂ ಕಂಡುದಱಿಂದಂ ಸಮ್ಯಗ್ದರ್ಶನ ಚಾರಿತ್ರಂಗಳಿಂದಂ ಪವಿತ್ರಮಪ್ಪ ನಿರ್ಗ್ರಂಥಂ ಲಿಂಗಮುಪ್ಪುದನತ್ತಿರ್ಗಳಿಂದಂ ಚರಮ ದೇಹ ಧಾರಿಗಳಿಂದಂ ನೆಗೞೆಪಟ್ಟುದನೊಳ್ಳಿತಪ್ಪ ಮೋಕ್ಷ ಮಾರ್ಗಮಂ ಪೊರ್ದಿಯುಂ ವಿಷಯ ಸುಖಂಗಳೊಳ್ ಮೋಹಿತರ್ಕಳಾಗಿ ಕಿಡುವರ್. ಬೆಳ್ಗತ್ತೆಯನರಸರ್ಕಳೇಱುವುದಂ ಕಂಡುದಱಿಂದಂ ಉತ್ತಮ ಕುಲಜರಿಗೆ ಕುಲಜೆಯರಲ್ಲದವರೊಡನೆ ಮದುವೆಱ್ತೊಟ್ಟಸಂಬುಗಳಕ್ಕುಮೆಂದಿಂತು ಪದಿನಾಱುಂ ಕಂಡ ಕನಸುಗಳ ಫಲಂಗಳಂ ಸಂಪ್ರತಿ ಚಂದ್ರಗುಪ್ತ ಮಹಾರಾಜಂಗೆ ಭದ್ರಬಾಹು ಭಟಾರರ್ ಪೇೞ್ದು ಮತ್ತಮಿಂತೆಂದರ್: ಈ ಕಲಿಯುಗ ರಾಜನ ಸ್ವರೂಪಮನಿಂತೆಂದು ಪೇೞಲ್ತೊಡಗಿದರ್:—

(೧) ಅನೃತಿಂತಾ ಲೋಭಂತಾ ಪಾರ್ಥಿವಂ ಪುತ್ರಸ್ಯಾಪಿ ।
ನ ವಿಶ್ವಸಂತಿ ಫಿತರಃ ಕಷ್ಟಂ ಯುಗಂ ವರ್ತತೇ ॥

(೨) ನಿರ್ವೀರ್ಯಾ ಪೃಥಿವೀಗತೌಷಧಿ ರಸಾ ನೀಚಾ ಮಹತ್ವಂ ಗತಾಃ ।
ರಾಜಾ ನಾಸ್ತಿ ಪರಾನ್ನ ಧರ್ಮ ನಿರತಾ ವಿಪ್ರಾ ವಿಕರ್ಮ ಸ್ಥಿತಾಃ ॥
ಭಾರ್ಯಾ ಭರ್ತರಿ ನಾಸ್ತಿ ಬದ್ಧ ಹೃದಯಾ ಪುತ್ರಾಃ ಪಿತೃ ದ್ವೇಷಿಣಃ ।
ಇತ್ಯೇವಂ ಸಮುಪಸ್ಥಿತೇ ಕಲಿಯುಗೇ ದಾನ್ಯಾದನಂ ಪ್ರಸ್ಥಿತಾ ॥

ಎಂದಿಂತು ಭಟ್ಟಾರರ್ ಪೇೞೆ ಸಂಪ್ರತಿ ಚಂದ್ರಗುಪ್ತ ಮಹಾರಾಜಂ ಕೇಳ್ದು ಮತ್ತಂ ದಿನ ದಿವಸಂ ಪೋದೊಡೆ ಮಂಡಳಿಕರ್ ಜಿನ ದೀಕ್ಷೆಯಂ ಕೈಕೊಳ್ಳರೆಂಬುದಂ ಕೇಳ್ದಾದ ಮಾನುಂ ಭೀತನಾಗಿ ಸಿಂಹಸೇನನೆಂಬ ತನ್ನ ಪಿರಿಯ ಮಗಂಗೆ ರಾಜ್ಯ ಪಟ್ಟಂಗಟ್ಟಿ ಭದ್ರಬಾಹು ಭಟಾರರ ಪಕ್ಕದೆ ಪಲಬರರಸು ಮಕ್ಕಳ್ವೆರಸುಮಾ ದಿವಸಮೆ ತಪಂಬಟ್ಟು ಮತ್ತಿತ್ತ ಮಧ್ಯದೇಶದೊಳಿರ್ದ ರಿಸಿಯರ್ಕಳ್ಗೆಲ್ಲಂ ಬೞಿಯಸಟ್ಟಿ ಬರಿಸಿ ಭಟಾರ ರಿಂತೆಂದರ್: ಪನ್ನೆರಡು ವರ್ಷಂಬರೆಗಮೀ ನಾಡೊಳನಾವೃಷ್ಟಿಯಾಗಿ ಮಹಾ ರೌದ್ರವ ಪಸವಮಕ್ಕುಂ ಮಧ್ಯಮ ದೇಶಮೆಲ್ಲಂ ಪಾೞಿಕ್ಕುಂ ಈ ನಾಡೊಳಿರ್ದ ರಿಸಿಯರ್ಕಳ್ಗೆ ಬ್ರತ ಭಂಗಮಪ್ಪುದದಱಿಂ ಪೋಪಂ ದಕ್ಷಿಣಾ ಪಥಕ್ಕೆಂದು ಆಚಾರ್ಯರ್ಕಳ್ ಸಹಿತ ಮಿಚ್ಚಾಸಿರ ರಿಸಿ ಸಮುದಾಯಂ ಬೆರಸು ಸಿಂಧು ವಿಷಯಕ್ಕೆ ಪೋದರ್. ಇತ್ತ ಭಟಾರರುಂ ತಿರಿದು ರಿಸಿ ಸಮುದಾಯಂ ಬೆರಸು ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ಕೞಿದು ಪೋಗಿ ಕಟ್ಬಪ್ಪು ನಾಡನೆಯ್ದಿ ಪೋಗುತ್ತಂ ಭದ್ರಬಾಹು ಭಟಾರರ್ ತಮ್ಮ ಆಯುಷ್ಯ ಪ್ರಮಾಣಮನಱಿದಾವಿಲ್ಲಿ ಸಂನ್ಯಸನಂ ಗೆಯ್ದಪ್ಪೆವು ನೀಮೆಲ್ಲಂ ಪೋಗಿಮೆಂದು ತಮ್ಮ ಪಿರಿಯ ಶಿಷ್ಯರ್ ದಶಪೂರ್ವ ಧಾರಿಗಳ್ ವಿಶಾಖಾಚಾರ್ಯರೆಂಬೊರಲ್ಲಿಂ ಬೞಿಯಮಾರ್ಯ ಸುಹಸ್ತಿಗಳುಂ ಅರ ಭದ್ರರುಂ ಸುಭದ್ರಮಿತ್ರರುಂ ಮಹಾರಿಗಿರಿಯುಂ ಸುಮತಿಯುಂ ಮಹಾ ಮತಿಯುಂ ರಾಮಿಲ್ಲರುಂ ಪ್ರೋಷ್ಠಿಲ್ಲರುಂ ವಿಶಾಖಸಂದಿಯುಂ ಇಂತಿವರ್ಗಳೆಲ್ಲರುಮನಾಚಾರ್ಯರ್ ಮಾಡಿ ದ್ರವಿಡ ವಿಷಯಕ್ಕೆ ಪೋಗಿಮೆಂದು ವಿಶಾಖಾಚಾರ್ಯರೊಡನೆ ಎಣ್ಬಾಸಿರ್ವರ್ ರಿಸಿಯರನಟ್ಟಿದರ್. ಚಂದ್ರಗುಪ್ತ ಮುನಿಯುಮನಿವರೊಡನೆ ಪೋಗಿಮೆಂದು ಭಟಾ ರರ್ ಕೀೞಿ ಪೋಗಲ್ವೇೞ್ದೊಡಾಮುಂ ಪೋಗಲೊಲ್ಲೆವು ನಿಮ್ಮಡಿಗಳ್ಗೆ ವಿನಯಂ ಗೆಯ್ಯುತ್ತಮಿರ್ದಪ್ಪೆಮೆಂದು ಪೋಗಲುಮೊಲ್ಲದೆ ಪಕ್ಕದಿರ್ದರೆಲ್ಲಂ ಪೋದರಿತ್ತ ಚಂದ್ರ ಗುಪ್ತ ಮುನಿಯುಮಷ್ಟೋಪವಾಸಂ ಗೆಯ್ದಿರ್ದೊರ್. ಭದ್ರಬಾಹು ಭಟಾರರ್ ಕಟ್ಬಪ್ಪು ನಾಡಡವಿಯ ಬೆಟ್ಟದ ಮೇಗಣೆ ಕಸಱಿಯ ಮೇಗಿರ್ದು ಚತುರ್ವಿಧಮಪ್ಪಾ ಹಾರಕ್ಕಂ ಶರೀರಕ್ಕಂ ಜಾವಜ್ಜೀವಂ ನಿವೃತ್ತಿ ಪೂರ್ವಕಂ ಸಂನ್ಯಸನಂ ಗೆಯ್ದರ್. ಇತ್ತ ಚಂದ್ರಗುಪ್ತ ಮುನಿಯುಮಷ್ಟೋಪವಾಸಂ ಗೆಯ್ದಿರ್ದೊರಂ ಭಟಾರರೆಂದರಿಂತು ದಿವ ಸಕ್ಕಂ ನಾಮು [ಂ] ನೋನುವಿರ್ಚರಿಗೆವುಗುವುದಲ್ತೆ ಎಂದೊಡೆ ಭಟಾರಾ ಊರಿಲ್ಲ ಕೇರಿ ಯಿಲ್ಲಿಲ್ಲಿ ಅಡವಿಯೊಳೆಲ್ಲಿ ಚರಿಗೆವುಗುವುದೆಂದೊಡೆ ಭಟಾರರೆಂದರ್ : ಕಾಂತಾರ ಭೈಕ್ಷ ಮೆಂಬುದಾಗಮದೊಳ್ಪೇೞ್ದುದಾರಾನುಂ ಬಟ್ಟೆವೋಪರ್ ಬೀಡಂ ಬಿಟ್ಟಿರ್ದನ್ನಿರ್ಲಿಸುವ

ರಪ್ಪುದಱಿಂದೆ ಚರಿಗೆವುಗುವುದೆಂದೊಡೆ ಅಂತೆಗೆಯ್ವೆವೆಂದು ದೇವರಂ ಬಂದಿಸಿ ಚರಿಗೆ ವೊಕ್ಕಡವಿಯಂ ತೊೞಲ್ವಲ್ಲಿ ಒಂದು ಮರದ ಪೋೞಲೊಳಿರ್ದು ಮಾಣಿಕದ ಮುತ್ತಿನ ಪಿಂಡುಗಂಕಣಮಂ ತೊಟ್ಟ ಕೈಯಿಂದ ಪೊನ್ನ ಸಟ್ಟುಗಮುಂ ತೀವಿ ಭೈಕ್ಷಮಂ ಪಿಡಿ ಎಂದು ನೀಡಿದ ಕೈಯನೀತನೆ ಕಂಡು ತೊೞಲ್ದಲಾಭಮಾಗಿ ತಮ್ಮಾವಾಸಕ್ಕೆ ಪೋದೊಡೆ, ಭಟಾರರ್ ನಿಲೆವಟ್ಟುದೆ ಎಂದು ಬೆಸಗೊಂಡೊಡವರುಂ ತಮ್ಮಂ ಕಂಡುದಂ ಪೇೞ್ದೊಡೆ ಬೇಸಱದೆ ದಿವಸಕ್ಕಂ ಚರಿಗೆವೋಗುವುದೆಂದು ಭಟ್ಟಾರರ್ ಕಲ್ಪಿಸಿದೊಡಂತೆ ಗೆಯ್ವೆವೆಂದು ಮಱು ದಿವಸಂ ಚರಿಗೆವೊಕ್ಕಡವಿಯಂ ತೊೞಲ್ವಲ್ಲಿಯೊಂದು ಮರದ ಕೆಳಗೆ ಪೊನ್ನ ಮಡಕೆಯೊಳು ಬೋನಮನೊಡ್ಡಿ ನೆಱೆಯೆ ತೊಟ್ಟುಟ್ಟು [ಪೊನ್ನ ಪಸದನಂಗೊಂಡು] ದಿವ್ಯ ಸ್ತ್ರೀ ಬಂದು ನಿಱಿಸಿದೊಡೆ ಇಂತೆಂದರಬ್ಬಾ ನೀ [ನೊರ್ವಳಯೆ ಪೆಱರಾರುಮಿಲ್ಲಮೆ] ರಿಸಿಯರ್ಕಳ್ಗೆ ನಿಲಲಾಗದೆಂದು ಪೇೞ್ದು ತಮ್ಮಿರ್ದೆಡೆಗೆ ವೋದೊಡೆ ಭಟ್ಟಾರರಿಂತೆಂದರ್ : ನಿಲೆವಟ್ಟುದೆ ಎಂದವರ್ ಬೆಸಗೊಂಡೊಡೆ ಇಂತೆಂದರ್ : ಒರ್ವಳ್ ದಿವ್ಯ ಸ್ತ್ರೀ ಸರ್ವಾಭರಣ ಭೂಷಿತೆಯೊಂದು ಮರದ ಕೆಳಗೆ ಬೋನಮನೊಡ್ಡಿರ್ದಿದಿರಂ ಬಂದು ನಿಱಿಸಿದೊರ್ವಳೆ ಪೆಱರಾರುಮಿಲ್ಲೆಂದು ಎನೆ ನಿಲ್ಲದೆ ಪೋದೆವೆಂದೊಡೊಳ್ಳಿತು ಕೆಯ್ದಿರೆಂದೊರಿಂತು ಪತ್ತುಪವಾಸಂ ಗೆಯ್ದು ಪನ್ನೊಂದನೆಯ ದಿವಸದಂದು ಚರಿಗೆ ವೊಕ್ಕಡವಿಯಂ ತೊೞಲ್ವನ್ನೆಗಂ ಪಿರಿದೊಂದು ಪೊೞಲುಂ ಧವಳಾರಂಗಳುಂ ನೆಲೆಯ ಮಾಡಂಗಳುಂ ಸೂಳೆಗೇರಿಗಳುಂ ದೇವಾಲಯಂಗಳುಂ ಆನೆ ಕುದುರೆಗಳುಂ ಮಾನಸರ ಬರವುಮಂ ಪೋಗುಮಂ ಕಂಡಿನಿತು ದಿವಸಮಿಾ ಮರಗಳ ಗಿಡುಗಳ ಪೊದಱುಗಳ ಮಱೆಗಳೊಳೀ ಪೊೞಲಂ ಕಂಡೆಮಿಲ್ಲೆಂದು ಮನದೊಳ್ ಬಗೆದು ಪೊೞಲೊಳಗೆ ಚರಿಗೆ ವೊಕ್ಕಾಗಳೊರ್ವಳ್ ದಿವ್ಯ ಸ್ತ್ರೀ ಪರಿವಾರ ಸಹಿತಮಿದಿರಂ ಬಂದು ನಿಱಿಸಿ ತನ್ನ ಮಾಡ ಕ್ಕೊಡಗೊಂಡು ಪೋಗಿ ಕಾಲಂ ಕರ್ಚಿಸಿ ಗುರುಭಕ್ತಿ ಗೆಯ್ದು ವಂದಿಸಿಯಾದಮಾನುಂ ಭಕ್ತಿಯಿಂದಂ ದಿವ್ಯಾಹಾರಮಂ ಮಗುೞ್ದು ಮಗುೞ್ದು ಬಡ್ಡಿಸಿ ಚರಿಗೆ ಮಾಡಿ ಪರಸಿ ತಮ್ಮಾವಾಸಕ್ಕೆ ಪೋದೊಡೆ ಭಟಾರರ್ ನಿಲೆವಟ್ಟುದೆ ಎಂದು ಬೆಸಗೊಂಡೊಡೆ ನಿಲೆವಟ್ಟುದೆಂದೊಡೆ ಎಲ್ಲಿ ನಿಂದಿರೆಂದು ಬೆಸಗೊಂಡೊಡಿಂತೆಂದರ್: ಭಟಾರಾ ಇನಿತು ದಿವಸಂ ಮರಂಗಳ ಪೊದಱುಗಳ ಮಱೆಗಳೊಳ್ ಪೊೞಲಂ ಕಂಡೆಮಿಲ್ಲಿಂದಿನಿಸಾನುಂ * * * * ಪ್ಪಾಹಾರಂಗಳಂ ಬಡ್ಡಿಸೆ ಶ್ರಮಂ ಪೋಗೆ ಚರಿಗೆ ಮಾಡಿ ಪರಸಿ ಬಂದೆವೆಂದು ಭಟ್ಟಾರರ್ಗೆ ಪೇೞ್ದೊಡೆ ಒಳ್ಳಿತ್ತಾಯಿತ್ತೆಂದು ಸಂತೋಸಂ ಬಟ್ಟಿರ್ದರಿಂತು ದಿವಸಕ್ಕಂ ಪೊೞಲ್ಗೆ ವೋಗಿ ಚರಿಗೆ ಮಾಡುವರಿತ್ತ ಭಟಾರರ್ * * * * ಮುನ್ನ ತಪಂ ಗೆಯ್ವಂದೆಲ್ಲಾ ಕಾಲಮುಮವಮೋದರ್ಯ ಚರಿಗೆ ಮಾಡಿ ಪಸಿವಂ ಸೈರಿಸಿ ತಮ್ಮ ಮೆಯ್ಯಂ ಕ್ಷಯಕ್ಕೆ ತಂದು ಸಂನ್ಯಸನಂ ಗೆಯ್ದು ಪಲವು ದಿವಸದಿಂದಂ ಪಸಿವು ನೀರೞ್ಕೆಯುಮಂ ಸೈರಿಸಿ ಶುಭ ಪರಿಣಾಮ * * * ಪರಮ ಶುದ್ಧ ದರ್ಶನ ಜ್ಞಾನ ಚಾರಿತ್ರಂಗಳಿಂ ಮುಡಿಪಿ ಬ್ರಹ್ಮ ಕಲ್ಪದೊಳ್ ಪತ್ತು ಸಾಗರೋಪಮಾಯುಷ್ಯಮನೊಡೆಯೊಂ ಅಮಿತಕಾಂತಿಯೆಂಬೊಂ ದೇವನಾಗಿ ಪುಟ್ಟಿದೊಂ. ಚಂದ್ರಗುಪ್ತ ಮುನಿಯುಂ ಭಟಾರರ ನಿಸಿದಿಗೆಯಂ ಬಂದಿಸುತ್ತಂ ದೇವತೆ ಬೆಸಕೆಯ್ಯೆ ಚರಿಗೆ ಮಾಡಿ ತಪಂ ಗೆಯ್ಯುತ್ತಂ ಪನ್ನೆರಡು ವರುಷಂ ಬರೆಗಮಿಂತಿರ್ಪನ್ನೆಗಂ—

ಇತ್ತ ತಿಮುಬಿ ಸಾಟಿಗೆವೋದ ರಿಸಿ ಸಮುದಾಯಮೆಲ್ಲಂ ಪನ್ನೆರಡು ವರುಷಂ ಬರೆಗಂ ಸುಖದೊಳಿರ್ದು ನಿರುಪಮ ಸ್ವರ್ಗದಿಂದಂ ದರ್ಶನ ಜ್ಞಾನ ಚಾರಿತ್ರಂಗಳಂ ಪ್ರತಿ ಪಾಳಿಸಿ ಬಡಗನಾಡ ಪಸವು ತಿಳಿದುದೆಂಬುದನಾ ನಾಡಿಂದಂ ಬಂದರ್ ಪೇಟಿ ಕೇಳ್ದಱಿದು ಭಟಾರರ ನಿಸಿದಿಗೆಯುಂ ಬಂದಿಸಿ ಪೋಪಮೆಂದು ವಿಶಾಖಾಚಾರ್ಯರ್ ಮೊದಲಾಗೊಡೆಯ ರಿಸಿ ಸಮುದಾಯಮೆಲ್ಲಂ ದಕ್ಷಿಣಾ ಪಥದಿಂ ಬಂದು ಭಟ್ಟಾರರ ನಿಸಿದಿಗೆಯನೆಯ್ದಿದಾಗಳ್ ಚಂದ್ರಗುಪ್ತ ಮುನಿಯುಂ ರಿಸಿಯರ್ಕಳ ಬರವಂ ಕಂಡಿದಿರಂ ಬಂದು ರಿಸಿ ಸಮುದಾಯಮೆಲ್ಲಮಂ ಬಂದಿಸಿದೊಡೆ ರಿಸಿಯರ್ಕಳಿಂತೆಂದು ಬಗೆದರ್: ಈ ಅಡವಿಯೊಳಿನ್ನೆಗಮಿವರ್ ಕಂದಮೂಲ ಫಲಂಗಳಂ ತಿಂದು ತೊಱೆಯ ಪಳ್ಳದ ನೀರ್ಗಳಂ ಕುಡಿದು ಪನ್ನೆರಡು ವರುಷಂಬರೆಗಮೆಂತು ಬರ್ದರೆಂದು ತಮ್ಮೊಳ್ನುಡಿದು ಮತ್ತಂ ತಲೆನವಿರ್ ಬೆಳೆದುದುಮಂ ಕಂಡಾರಪ್ಪೊಡಂ ಪ್ರತಿ ವಂದನೆಯಂ ಕೊಟ್ಟುದಿಲ್ಲ. ಮತ್ತಾ ರಿಸಿಯರ್ಕಳನಿಬರುಂ ಆ ದೆವಸಮುಪವಾಸಂ ಗೆಯ್ದು ಅರ್ಚಿಸಿ ಕ್ರಿಯೆ ಗೆಯ್ದು ಭಟಾರರ ನಿಸಿದಿಗೆಯಂ ಬಂದಿಸಿ ಒಂದು ದಿವಸಮಲ್ಲಿಯೆ ಕೆಂದು ಮಱು ದಿವಸಂ ಪೋಪಾಗಳ್ ಚಂದ್ರಗುಪ್ತ ಮುನಿಗಳೆಂದರ್: ನಿನ್ನೆ ನಾಮುಂ ಶ್ರಮಂಬಟ್ಟಿರುಪವಾಸಂಗೆಯ್ದು * * * ವಿಂದಿನ ದಿವಸಮಿಲ್ಲಿರ್ದು ಚರಿಗೆವೊಕ್ಕು ಸೇದೆಯನಾಱಿಸಿ * * ಂ ದೂರಿಲ್ಲ ಕೇರಿಯಿಲ್ಲೆಲ್ಲಿ ಚರಿಗೆವುಗುವಮಂತು ಕೆಮ್ಮನೆ ಕೆಮ್ಮಂ ತಾಗಿದಪರೆಂದರೆ ಪಿರಿದೊಂದು ಪೊಬಿಲುಂಟು ನಾಮುಂ ಸಂಕ್ಲೇಶಂಬಡದೆ * ಇಂದಿನ ದಿವಸಮಿರ್ಕೆಂದೊಡನಿಬರು * ಮೆಂದರಿಂದಿನ ದಿವಸಮೆಂಬುಕೆಯ್ವೆಮೆಂದಿರ್ದೊಡೆ ಮಧ್ಯಾಹ್ನಮಪ್ಪಾಗಳ್ ದೇವರಂ ಬಂದಿಸವೇಟಿರ್ದೊಡನಿಬರುಂ ದೇವರಂ ಬಂದಿಸಿ ಚಂದ್ರಗುಪ್ತ ಮುನಿಯ ಬೞಿಯಂ ರಿಸಿ ಸಮುದಾಯಮೆಲ್ಲಾ ತಗುಳ್ದು ಕಿಱಿ ದಂತರಮಂ ಪೋ[ಗಿ] ಚರಿಗೆವೊಕ್ಕನಿಬರುಮಂ ನಿಱಿಸಿ ಕೆಲ ರಿಸಿಯುರುಮಾಚಾರ್ಯರ್ಕ್ಕಳುಂ ಬೆರಸು ತಾಮೊಂದು ಮನೆಯೊಳ್ ನಿಂದರ್. ಇಂತನಿಬರುಂ ದಿವ್ಯಾಹಾರಂಗಳಂ ಶ್ರಮ ಪೋಗೆ ಚರಿಗೆ ಮಾಡಿ ತಮ್ಮಾವಾಸಕ್ಕೆ * * * * * ಕಾಲಂ ಕರ್ಚಲ್ಕುಂಡಿಗೆಯಂ ಕೊಂಡುಬನ್ನಿಮೆಂದೊಡೆ ಬ್ರಹ್ಮಯ್ಯನೆಂದಂ: ಗುಂಡಿಗೆಯುಮನುಂಡುಮನೆಯೊಳ್ ಮಱೆದು ಬಂದೆನೆನೆ ಬೇಗಂ ಪೋಗಿ ಕೊಂಡು ಬಾಯೆನೆ ಬ್ರಹ್ಮಯ್ಯಂ ಪೋಗಿ ಪೊಬಿಲೊ * * * * * * ಗುಂಡಿಗೆಯಂ ಕಾಣದತ್ತಮಿತ್ತಂ ನೋಟ್ಪನ್ನೆಗಂ ಒಂದು ಮರದ ತುತ್ತ ತುದಿಯೊಳಿರ್ದು ಎಬಿಲ್ಪ ಗುಂಡಿಗೆಯಂ ಕಂಡು ಬಂದು ಗುರುಗಳ್ಗಿಂತೆಂದಂ: ಭಟ್ಟಾರಾ ನಾಮುಂಡೆಡೆಯೊಳ್ * * * ಗುಂಡಿಗೆಯುಮೊಂದು ಸಿಡಿಯ ಮರದ ತುತ್ತ ತುದಿಯೊಳಿರ್ದುದಾರಾಸುಮೇಱಲ್ಬಲ್ಲಾತಸನಟ್ಟಿಗೆಂದೊಡನಿಬರುಂ ರಿಸಿಯರ್ಕಳೆಲ್ಲಂ ಚೋದ್ಯಂಬಟ್ಟು ನೋಡಲ್ ಪೋಗಿ ಪೊಬಿಲಂ ಕಾಣ * * * * * * ತುದಿಯೊಳೆಬಿಲ್ಪ ಗುಂಡಿಗೆಯಂ ಕಂಡು ತೆಗೆಯಿಸಿಕೊಂಡು ಪೋಗಿ ಚಂದ್ರಗುಪ್ತ ಮುನಿಗನಿಬರುಂ ರಿಸಿಯರ್ಕಳ್ನೆರೆದಿಂತೆಂದರಾಮುಂ ನಿಮ್ಮ ಅಡವಿಯೊಳ್ ಕಂದಮೂ * * * * ಬಗೆದು ಬಂದಿಸದೆ ನೀಮುಮಿಲ್ಲದರ್ಕೆ ನೀಮುಂ ಮನದೊಳೇವಂ * * * * * * ನುಡಿದು

ವಂದಿಸಿ ಮತ್ತಮಿಂತೆಂದಂ: ನೀಮುಂ ದೇವತಾಧಿಷ್ಠಿತರ್ * * * * * * * * * ತಪಂಗೆಯ್ದಿರಿನ್ನುಣಲ್ವೇಡ. ದೇವತೆಗಳ್ಮಾಡಿದಾಹಾರಮಂ ರಿಸಿಯರ್ಗೆ ಚರಿಗೆ ಮಾಡಲಾಗದೆಂದು ಬಾರಿಸಿ ಅನರ್ಗಲೋ [ಭಂ]ಗೆಯ್ದು ಬ್ರತಂಗಳನೇಱಿಸಿ ಪಡ * * * ನಿಬರುಂ ಕತಿಪಯ ದಿವಸಂಗಳಿಂದಂ ಮಧ್ಯದೇಶಮನೆಯ್ದಿಯಾ ನಾಡೊಳ್ ರಿಸಿ ಸಮುದಾಯಮೆಲ್ಲಂ ನಿರುಪಸರ್ಗಮಿರ್ದತ್ತು.

ಮತ್ತಿತ್ತ ಲಾಮಿಲಾಚಾರ್ಯರುಂ ಸ್ಥೂಲಾಚಾರ್ಯರುಂ * * * * ರುಂ ಸಿಂಧು ವಿಷಯಕ್ಕೆ ತಂತಮ್ಮ ರಿಸಿ ಸಮುದಾಯಂ ಬೆರಸು ಪೋದೊಡಾ ನಾಡೊಳ್ ಮಾನಸರ್ ಮಾನಸರಂ ತಿಂಬಂತುಟಪ್ಪ ಮಹಾ ಘೋರಂ ಪಸವಾದೊಡಲ್ಲಿಯ ಶ್ರಾ * * * * * * ಂದರು ಭಟಾರಾಲ ವಟುಗಳ ಕೈಯಲ್ ಪಗಲುಣಲುಮಡಲುಂ ಪೆಱಲಾಗ ಮೇಲ್ವಾಯ್ದೆೞೆದು ಕೊಂಡುಂಬರ್ ಲೋಗರೆಲ್ಲಮವರ ಭಯಕ್ಕೆ ಪಗಲುಡ * * * * * * ಸಮುಂ ಮಿಂದಿಂದಿತ್ತಿರುಳ್ ಭೈಕ್ಷ್ಯ ಭಾಜನಂಗಳಂ ಕೊಂಡುಪೋಗಿ ಶ್ರಾವಕರ ಮನೆಗಳಂ ತೊೞಲ್ದು ಭೈಕ್ಷ್ಯಂ ಬೇಡಿಕೊಂಡು ಕೂಡಿನಿರುಳ್ತಂದಿಟ್ಟು ಪಗಲುಂಬುದೆಂದೊಡಂತೆ ಗೆಯ್ವಮೆಂದು * * * * * ಮಡಗಿಟ್ಟು ಪಗಲುಣ್ಬರಾದರಿಂತೀ ಪಾಂಗಿನೊಳ್ ಕಾಲಂ ಸಲೆ ಮತ್ತೊಂದು ದಿವಸಮೊರ್ವ ನಿರ್ಗ್ರಂಥ ಯತಿ ಭೈಕ್ಷ್ಯ ಭಾಜನಮಂ ಕೊಂಡು ಶ್ರಾವಕರ ಮನೆಗಳನಿರುಳ್ ಭೈಕ್ಷ್ಯಂ ಬೇಡಿ ತೊೞಲುತ್ತಂ * * * ಮನೆಯಂ ಪೊಕ್ಕು ಭೈಕ್ಷಮಂ ಬೇಡಿದೊಡೊರ್ವಳ್ ಪೊಸ ಶ್ರಾವಕಿ ಬಸಿಱ್ಪೆಂಡತಿ ಮೇಳಾಸ್ವಾಮಿನಿಯೆಂಬೊಳ್ ಕದ್ದಿಂಗಳಿರುಳೊಳ್ ಕತ್ತ * * * * ನಿರ್ಗ್ರಂಥಮಪ್ಪ ರೂಪಂ ಕಂಡು ಬೆರ್ಚಿದೊಡಾಕೆಗೆ ಬಸಿಱ್ * * * * * ರೆಲ್ಲಂ ನೆರೆದು ರಿಸಿಯಲ್ಲಿಗೆ ವೋಗಿ ಇಂತೆಂದರ್: ಭಟಾರಾ ಕಾಲಮಪ್ಪೊಡೆ ಕೆಟ್ಟತ್ತು. ಒಳ್ಳಿತಪ್ಪ ಕಾಲಮಾದಂದು ಪ್ರಾಯಶ್ಚಿತ್ತಂಗೊಂಡು ನಿಮ್ಮ ತಪಂಗಳೊಳ್ ನಿಲ್ಲಿ ಮನ್ನೆಗಮಿಾಗಳೀ ಪಸವುಗೞಿದನ್ನೆಗಂ ನೀಮುಮೆಡದ ಕೈಯಿ * ಲಿಕ್ಕಿಯರ್ದ್ಧಗಪ್ಪಡಮನೆಡದ ಮುಯ್ಪಿನ ಮೇಗಿಕ್ಕಿ ಒಳಗೆ ನಿರ್ಗ್ರಂಥಮಪ್ಪ ರೂಪಂ ತಾಳ್ದಿ ಬಲದ ಕೈಯೊಳ್ ಭೈಕ್ಷ್ಯದ ಭಾಜನಮಂ ಪಿಡಿದು ತೊೞಲ್ದು ಭೈಕ್ಷಮಂ ಬೇಡಿ ಮಡಗಿಟ್ಟು ಪಗಲುಣ್ಣಿಮೆಂದೊಡವರ್ಗಳುಮಂತೆ ಗೆಯ್ವಮೆಂದವರ್ಗಳ ಪೇೞ್ದ ಪಾಂಗಿನೊಳ್ ನೆಗೞ್ದು ಪಸವಂ ನೀಗಿ ಕಾಲಮೊಳ್ಳಿತಾದೊಡೆ ರಾಮಿಲ್ಲಾಚಾರ್ಯರುಂ ಸ್ಥೂಲಾಚಾರ್ಯರುಂ ಸ್ಥೂಲಭದ್ರಾಚಾರ್ಯರುಂ ಅಂತು ಮೂವರುಂ ತಂತಮ್ಮ ರಿಸಿ ಸಮುದಾಯಂ ಬೆರಸು ವಿಹಾರಿಸುತ್ತಂ ಮಧ್ಯದೇಶಕ್ಕೆ ರಿಸಿಯರ್ಕಳಲ್ಲಿಗೆ ಬಂದೊಡೆ ವಿಶಾಖಾಚಾರ್ಯರ್ ಮೊದಲಾಗೊಡೆಯ ಆಚಾರ್ಯರ್ಕಳ್ ಅವರನಿಂತೆಂದರ್: ನೀಮೆಲ್ಲಮರ್ಧಗಪ್ಪಡಮಂ ಬಿಸುಟ್ಟು ನಿರ್ಗ್ರಂಥ ರೂಪುಮಂ ಕೈಕೊಂಡು ಬ್ರತಂಗಳನೇಱಿಸಿ ಪ್ರಾಯಶ್ಚಿತ್ತಂಗೊಂಡು ಪಡಿಕಮಣಂಗೇಳ್ದು ತಪದೊಳ್ನಿಲ್ಲಿಮೆಂದೊಡಂತೆ ಗೆಯ್ವೆಮೆಂದು ರಾಮಿಲಾಚಾರ್ಯರುಂ ಸ್ಥೂಲಾಚಾರ್ಯರುಂ ಸ್ಥೂಲಭದ್ರಾಚಾರ್ಯರುಂ

ತಮ್ಮ ರಿಸಿ ಸಮುದಾಯಂ ಬೆರಸು ವಿಶಾಖಾಚಾರ್ಯರ ಪಕ್ಕದೆ ಅರ್ಧಗಪ್ಪಡಮಂ ಬಿಸುಟ್ಟು ಪಡಿಕಮಣಂಗೇಳ್ದು ತಪದೊಳ್ ನಿಂದು ಪ್ರಾಯಶ್ಚಿತ್ತಂಗೊಂಡು ಯಥೋಕ್ತಮಪ್ಪ ಚಾರಿತ್ರದೊಳ್ನಿಂದರ್. ಸ್ಥೂಲ ಭದ್ರಾಚಾರ್ಯರ್ ಮೊದಲಾಗಿ ಕೆಲಂಬರ್ ಕೊಳಲೊಲ್ಲದವರ್ ಜಿನಕಲ್ಪಸ್ಥಂ ಸ್ಥವಿತರಪ್ಪೆಮೆಂದೆರಡು ಭೇದಂ ಮಾಡಿ ಅರ್ಧಗಪ್ಪಡದ ತೀರ್ಥಮಂ ನೆಗೞ್ದರಿಂತರ್ಧಗಪ್ಪಡದ ತೀರ್ಥ ಪಾರಂಪರ್ಯದಿಂದಂ ಸುರಥ ಮೆಂಬುದು ನಾಡಲ್ಲಿ ವಳಂಬಿಯೆಂಬುದು ಪೊೞಲದ ನಾಳ್ವೊಂ ವಪ್ರಪಾಳನೆಂಬೊ ನರಸು ರಾಜ್ಯಂಬರೆಗಮರ್ಧಗಪ್ಪಡದ ತೀರ್ಥಂಗಳ್ ನೆಗೞ್ದಿತ್ತು. ಮತ್ತಂ ವಪ್ರಪಾಳ ನೆಂಬರಸಂ ಮಿಥ್ಯಾದೃಷ್ಟಿ. ಆತನ ಮಹಾದೇವಿ ವಿಶ್ವಾಪುಸಿಯೆಂಬೊಳರ್ಧಗಪ್ಪಡದ ತೀರ್ಥದ ತಪಸ್ವಿಯರ ಶ್ರಾವಕಿಯಾಗಿ ಇಂತು ಕಾಲಂ ಸಲೆ ಮತ್ತೊಂದು ದಿವಸಂ ನಡುವಗಲರಸನುಂ ಮಹಾದೇವಿಯುಮಿಂತಿರ್ವರುಂ ಪ್ರಾಸಾದದ ಮೇಗಿರ್ದು ಗವಾಕ್ಷ ಜಾಳಾಂತರಂಗಳಿಂದಂ ದಿಶಾವಳೋಕನಂ ಗೆಯ್ಯುತ್ತಿಪ್ಪನ್ನೆಗಂ ಅರ್ಧಗಪ್ಪಡದ ಸಂಘಂ ಭೈಕ್ಷಂ ಕಾರಣಮಾಗರಮನೆಯಂ ಪುಗುವುದನರಸಂ ಕಂಡರಸಿಯ ನಿಂತೆಂದನೆಲೆ ಮಹಾದೇವಿ ಈ ನಿನ್ನಯರ್ಧಗಪ್ಪಡದ ಯತಿಯುಂ ಧರ್ಮವೊಳ್ಳಿತಲ್ಲಿವರುಟ್ಟರುಮಲ್ಲ ಬತ್ತಲೆಗರುಮಲ್ಲರೆಂದು ನುಡಿದು ಮತ್ತೊಂದು ದಿವಸಮರ್ಧಗಪ್ಪಡದ ಸಂಘಮನರಸಂ ಬೞಿಯಟ್ಟಿ ವರಿಸಿ ಇಂತೆಂದಂ: ನೀಮರ್ಧಗಪ್ಪಡಮಂ ಬಿಸುಟ್ಟು ನಿರ್ಗ್ರಂಥಮಪ್ಪ ರಿಸಿ ರೂಪಮಂ ಕೈಕೊಂಡು ಬೞಿಯ ತಪಂ ಗೆಯ್ವು ದೆಂದೊಡವರೊಲ್ಲದಿರ್ದೊಡರಸಂ ಮತ್ತಮಿಂತೆಂದಂ: ನಿರ್ಗ್ರಂಥಮಪ್ಪ ರೂಪುಮಂ ಕೈಕೊಳಲೊಲ್ಲರಪ್ಪೊಡರ್ಧ ಕಪ್ಪಡಮಂ ಬಿಸುಟ್ಟು ಪೞಿಯಂ ಸಯ್ತುಟ್ಟುಕೊಂಡಿರಿ ಮೆಂದೊಡಂತೆಗೆಯ್ವೆಮೆಂದಾ ದಿವಸಂ ತಗುಳ್ದು ಬಡಗ ನಾಡವರ್ ವಪ್ರಪಾಳನ ರಾಜ್ಯ ದೊಳರ್ಧಗಪ್ಪಡಮಂ ಬಿಸುಟ್ಟು ಕಚ್ಚೆಗಟ್ಟದೆ ಸಯ್ತುಡುವರುಂ ಕುಱುವಡಂಬೊ ದೇವರುಮಾದರಲ್ಲಿಂದಿತ್ತ ಕಂಬಳಿತೀರ್ಥಮೆಂಬುದಾದ[ುದ]ವರುಂ [ಶ್ವೇ]ತಪಟರೆಂಬೊ ರಾದರ್. ದಕ್ಷಿಣಾ ಪಥದೊಳ್ ಸಾಮುಳಿಪುತ್ರನೆಂಬರಸನಪ್ಪವರಯೆ ಸಂತತಿಯ ಶ್ವೇತವಿಕ್ಷುಜಾಪುಲಿ ಸಂಘಕ್ಕೆ ಮೊದಲಿಗನಾದಂ. ಮತ್ತಿತ್ತ ಸಂಪ್ರತಿ ಚಂದ್ರಗುಪ್ತ ಮುನಿಯುಮುಗ್ರೋಗ್ರ ತಪಶ್ಚರಣಂ ಗೆಯ್ದು ಸಂನ್ಯಸನ ವಿಧಾನದಿಂದಂ ಪರಮ ಶುದ್ಧ ರತ್ನ ತ್ರಯಮಂ ಸಾಧಿಸಿ ಮುಡಿಪಿ ಬ್ರಹ್ಮ ಕಲ್ಪದೊಳ್ ಪತ್ತು ಸಾಗರೋಪ ಮಾಯುಷ್ಯಮನೊಡೆಯೊಂ ಶ್ರೀಧರನೆಂಬೊಂ ದೇವನಾಗಿ ಪುಟ್ಟಿದನಿಂತಿದು ಭದ್ರ ಬಾಹು ಭಟ್ಟಾರರ ಕಥೆ ಪೇೞ್ದುದು. ಪೆಱರುಂ ಸಂನ್ಯಸನಂ ಗೆಯ್ದು ಭವ್ಯರ್ಕಳುಂ ಪಸಿವುಂ ನೀರೞ್ಕೆ ಮೊದಲಾಗೊಡೆಯ ಪರೀಷಹಂಗಳಂ ಸೈರಿಸಿ ಸಮಾಧಿ ಮರಣದಿಂ ಮುಡಿಪಿ ಪರಮ ಶುದ್ಧ ಸಹಜ ರತ್ನ ತ್ರಯಂಗಳಂ ಸಾಧಿಸಿ ಸ್ವರ್ಗಾಪವರ್ಗ ಸುಖಂ ಗಳನೆಯ್ದುಗೆಂಬುದು.

---

# ವಿದ್ಯುಚ್ಚೋರನೆಂಬ ರಿಸಿಯ ಕಥೆ

ಗಾಹೆ ॥ ದಂಸಿಹಿಯಂ ಮಸಕೆಹಿಯಂ ಖಂಜಂತೊ ವೇದಣಂ ಪರಮ ಘೋರಂ ।
ವಿಂಜಂಚೊರೊ ಅದಿಹಾಸಿಯ ಪಡಿವಣ್ಣೊ ಉಂತಮ ಅಂಠಂ ॥

[ದಂಸಿಹಿಯ—ಚಿಕ್ಕುಟುಗಳಿಂದಂ, ಮಸಕೆಹಿಯ—ಗುಂಗಾಱುಗಳಿಂದಂ, ಖಂಜಂತೊ—ತಿನೆಪಡುತ್ತಿರ್ದೊನಾಗಿ, ವೇದಣಂ—ವೇದನೆಯು, ಪರಮ ಘೋರಂ—ಆದವಾನುಂ ಕಡಿದಪ್ಪುದಂ, ವಿಂಜಂಚೊರೊ—ವಿದ್ಯುಚ್ಚೋರನೆಂಬ ರಿಸಿ, ಅದಿಹಾಸಿಯ—ಲೇಸಾಗಿ ಸೈರಿಸಿ, ಪಡಿವಣ್ಣೊ—ಪೊರ್ದಿದೊಂ, ಉಂತಮ ಅಂಠಂ—ಮಿಕ್ಕ ದರ್ಶನ ಜ್ಞಾನ ಚಾರಿತ್ರಂಗಳಾರಾಧನೆಯಂ.]

ಅದೆಂತೆಂದೊಡೆ—

ಈ ಜಂಬೂ ದ್ವೀಪದ ಭರತ ಕ್ಷೇತ್ರದೊಳ್ ವಿದೇಹಮೆಂಬುದು ನಾಡಲ್ಲಿ ಮಿಥಿಳೆಯೆಂಬುದು ಪೊೞಲದನಾಳ್ವೊಂ ಪದ್ಮರಥನೆಂಬೊನರಸನ ಸಂತತಿಯಂ ಬಂದ ವಾಮರಥನೆಂಬರಸನಾತನ ಮಹಾದೇವಿ ಬಂಧುಮತಿಯೆಂಬೊಳಂತವರ್ಗ್ಗಳಿಷ್ಟ ವಿಷಯ ಕಾಮ ಭೋಗಂಗಳನನುಭವಿಸುತ್ತಂ ಪಲ ಕಾಲಂ ಸಲೆ ಮತ್ತಾ ಪೊೞಲೊಳ್ ಯಮದಂಡನೆಂಬ ತಳಾಱಿಂ ಮತ್ತಲ್ಲಿಯಿರ್ಪೊಂ ವಿದ್ಯುಚ್ಚೋರನೆಂಬೊಂ ಕಳ್ಳನಾತಂ ಜೃಂಭಿನಿ ಸ್ತಂಭಿನಿ ಮೋಹಿನಿ ಸರ್ಷಪಿ ತಾಳೋದ್ಘಾಟಿನಿ ವಿದ್ಯಾ ಮಂತ್ರ ಚೂರ್ಣ ಯೋಗ ಘುಟಿಕಾಂಜನಮೆಂದಿವು ಮೊದಲಾಗೊಡೆಯ ತಸ್ಕರ ಶಾಸ್ತ್ರ ಮೊದಲಾದವಾನುಂ ಕುಶಲನಂತಪ್ಪ ಕಳ್ಳಂ. ಪೊೞಲ ಕಸವರಂಗಳನಿರುಳ್ ಕಳ್ದು ಪೊೞಲ್ಗೆ ನಾಡೆಯಂತರದೊಳೊಂದು ಪರ್ವತಮುಂಟಲ್ಲಿ ಪಿರಿದೊಂದು ಗುಹೆಯುಂಟದಱೊಳಗೆ ಕಳ್ದ ಕಸವರಂಗಳೆಲ್ಲಮಂ ಪೂೞ್ದಿಟ್ಟು ಗುಹೆಯ ಬಾಗಿಲಂ ಪಿರಿದೊಂದು ಸಿಲೆಯಂ ತಂದಿಟ್ಟು ಮುಚ್ಚಿ ಬಂದು ಪಗಲೆಲ್ಲಂ ಪಾೞ್ದೇಗುಲದೊಳ್ ಅಂಜನಮನೆಚ್ಚಿ ತಾಂ ತೊಂನ್ನನಾಗಿ ಮುರುಂಟಿ * * * ಬೆರಸೂರೊಳಗಿರ್ದು ರಸಿಗೆ ಸುರಿಯೆ ನೊಣವುಗಳ್ ಮುಸುಱೆ ಕಡಿಯೆ ತಿನೆ ಪೇಸಿದನಾಗಿ ಲೋಗರ ಮನೆಗಳೊಳ್ ಭೈಕ್ಷಮಂ ಬೇಡಿ ಮನೆ ಮನೆಯಂ ತೊೞಲ್ದು ಪೊೞಲವರ್ಗ್ಗೆಲ್ಲಂ ತನ್ನ ಮಱಯಿಸುತ್ತಂ ಮನಕ್ಕೆ ಮೆಚ್ಚಿದಾಗಳ್ * * * * ನ್ವೊತ್ತೆಗೊಟ್ಟು ಭೋಗೋಪಭೋಗಂಗಳಂ ಅನುಭವಿಸುತ್ತಮಾರುಮಱಿಯದಂತಿರ್ದು ಬಚ್ಚರ ದೂಸಿಗರ ನಿಯೋಗಿಗಳ ಅಗ್ಗಳಮಪ್ಪ ಸೂಳೆಯರ ಸಾಮಂತರ ಕಸವರಮೆಲ್ಲಮಂ ಕಳ್ದು ಮತ್ತೊಂದು ದಿವಸಂ ಪದ್ಮರಥಂಗೊಸೆದು ಅಚ್ಯುತೇಂದ್ರನಟ್ಟಿದ ದಿಬ್ಯಮಪ್ಪ ಸರ್ವರುಜಾಪಹಾರಮೆಂಬ ಹಾರ [೦] ಸಂತತಿಯಿಂ ವಾಮರಥಂಗೆ ಬಂದುದು. ವಾಮರಥಂ ಕರುನಾಡದೇೞನೆಯ ನೆಲೆಯೊಳ್ ತನ್ನ ಉಂದುವೋವರಿಗೆಯ ಪುಡಿಕೆಯೊಳಿಟ್ಟೆಲ್ಲಾ ಕಾಲಮುಂ ಗಂಧ ಪುಷ್ಪ ದೀಪ ಧೂಪಾಕ್ಷತಂಗಳಿಂದರ್ಚಿಸುತ್ತಂ ಪೊಡವಡುತ್ತಿರ್ಕುಮಂತಪ್ಪ ಹಾರಮಂ ವಿದ್ಯುಚ್ಚೋರನಂಜನಮಂ ಕಣ್ಣೊಳೆಚ್ಚಿ ಯಾರುಂ ತನ್ನಂ ಕಾಣದಂತಾಗಿರೆ ಅರಮನೆಯಂ ಪೊಕ್ಕರಸನ ಮಱಲುಂದುವೋವರಿಯಂ ಪೊಕ್ಕು ತಲೆದೆಸೆಯೊಳರ್ಚಿಸಿರ್ದ ಪುಡಿಕೆಯಂ ತೆಱೆದು ಹಾರಮಂ ಕೊಂಡರಮನೆಯಿಂ ಪೊಱಮಟ್ಟು

ಪೋಗಿ ಪೊಱವೊೞಲ ಗುಹೆಯೊಳ್ ಪೂೞ್ದಿಟ್ಟು ಪೊೞಲ್ಗೆ ವಂದು ಮುನ್ನಿನಂತೆ ತೊನ್ನ ರೂಪಂ ಕೈಕೊಂಡಿರ್ದಂ.

ಮತ್ತಿತ್ತರಸಂ ನೇಸರ್ಮೂಡೆ ಹಾರಮುಂ ಕಾಣದೆ ಆಸ್ಥಾನಮಂಟಪದೊಳ್ ಸಿಂಹಾಸನಮಸ್ತಕಸ್ಥಿತನಾಗಿರ್ದು ತಳಾಱನಪ್ಪ ಯಮದಂಡಂಗೆ ಬೞಿಯಟ್ಟಿವರಿಸಿ ಇಂತೆಂದನೆಲವೊ ಯಮದಂಡಾ ಪೊೞಲ ಪಾರ್ವರ ಸೂಳೆಯರ ಒಕ್ಕಲಮಕ್ಕಳ ಕಸವರಮೆಲ್ಲಮಂ ಕಳ್ಳುಡನಾರಯ್ಯದೆ ಕೆಮ್ಮಗಿಪ್ಪೆಯಲ್ಲದೆಯುಮೆಮ್ಮ ಸಜ್ಜೆಯೋವರಿಯಂ ಕಳ್ಳಂ ಪೊಕ್ಕು ಪುಡುಕೆಯಂ ತೆಱೆದಿಂದ್ರನಿತ್ತ ಕುಲಧನಮಪ್ಪ ಹಾರಮಂ ಕೊಂಡುಪೋದಂ. ಬೇಗಂ ಕಳ್ಳನನಾರೈದು ಹಾರಮಂ ಕೊಂಡು ಬಾ ಅಲ್ಲದಾಗಳ್ ಕಳ್ಳಂಗೆ ತಕ್ಕ ನಿಗ್ರಹಮಂ ನಿನಗೆ ಮಾಡಿದಪ್ಪೆನೆಂದೊಡೆ ತಳಾಱನೆಂದಂ: ದೇವಾ ಏೞು ದಿವಸಮನಗೆಡೆಯನೀವುದು. ಏೞು ದಿವಸದೊಳಗೆ ಕಳ್ಳನನಾರಯ್ಯಲಾಱದಾಗಳ್ ದೇವರೆನ್ನ ಮೆಚ್ಚು ಕೆಯ್ಯೆಂದೊಡಂತೆಗೆಯ್ವೆನೆಂದು * * * * * ಇಂದಂ ಪೊಱಮಟ್ಟು ಪೊೞಲೊಳಗೆ ಸೂಳೆಗೇರಿಗಳೊಳಂ ಅಂಗಡಿಗಳೊಳಂ ಬಸದಿಗಳೊಳಂ ವಿಹಾರಂಗಳೊಳಂ ಕೇರಿಗಳೊಳಂ ಅರವೆಗಳೊಳಂ ದೇವಾಲಯಂಗಳೊಳಂ ಪೊಱವೊೞಲೊಳಂ ಕೆಲದ ಪೊೞಲ್ಗಳೊಳಂ ಮೂಱುಂ ದಿವಸ ನಿರಂತರಂ ಆರಯ್ದಲ್ಲಿಯುಂ ಕಾಣದೇೞನೆಯ ದಿವಸದಂದು ಪಾೞ್ದೇಗುಲದೊಳಿರ್ದು ತೊನ್ನಂ ಪೋಪಾಗಳ್ ಸಿರಿದೊಂದು ಕಿಱುವಳ್ಳಮಂ ಕಂಡದಂ ವಿದ್ಯುಚ್ಚೋರಂ ವಿದ್ಯುತ್ಕರಣದಿಂ ಲಂಘಿಸಿ ಪೋಪುದಂ ಯಮದಂಡಂ ಗೆಂಟಱೊಳಿರ್ದು ಕಂಡಿವನೆ ಕಳ್ಳನೆಂದು ನಿಶ್ಚಯಿಸಿ ಪಿಡಿದರಮನೆಗೆ ಪುಯ್ಯಲಿಡೆಯಿಡೆ ಕೊಂಡುಪೋಪರನ್ನೆಗಮರಸಂಗೆ ಕಳ್ಳನಂ ತಂದೆನೆಂದು ತೋಱೆ ಈತಂ ಕಳ್ಳನೆಂದರಸಂಗೆ ಪೇೞ್ದೊಡೆ ತೊನ್ನನಿಂತೆಂದಂ: ಕಳ್ಳನಲ್ಲದುದಕ್ಕೆ ಪೊೞಲೆಲ್ಲಮಱಿಗುಂ ಕಳ್ಳನನಾರಯ್ಯಲಾಱದೆನ್ನ[ಂ] ತನ್ನ ಸಾವಿಂಗಂಜಿ ಬಡವನಂ ದೇಸಿಗನಂ ಭೈಕ್ಷಂದಿರಿದುಂಡು ಬಾೞ್ವೆನ್ನಂ ಪಿಡಿದುಕೊಂಡು ಬಂದು ಕೊಲಿಸಿದಪ್ಪನೆಂದೊಡೆ ತಳಾಱಂ ಕಳ್ಳನನಾರೈವ ಶಾಸ್ತ್ರಂಗಳೊಳಾದಮಾನುಂ ಕುಶಲನಪ್ಪುದಱಿಂದರಸಂಗಿಂತೆಂದಂ: ಈತಂ ತನ್ನ ರೂಪುಗರೆದಿರುಳ್ ಪೊೞಲೆಲ್ಲಮಂ ಕಳ್ದು ದಿವಸಕ್ಕೀ ಪಾಂಗಿನೊಳ್ ತೊನ್ನನಾಗಿರ್ಪಂ. ನೀ ಮುನ್ನಂ ಬಂದಾಗಳ್ ಪ್ರತ್ಯಯಮಂ ಮಾಡಿ ತೋರ್ಪೆನೆಂದಾಗಳ್ ಪ್ರತಿಘುಟಿಕಾಂಜನಂಗಳಂ ತೊನ್ನನ ಕಣ್ಣಿನೊಳೆಚ್ಚಿದೊಡೆ ದಿಬ್ಯಮಪ್ಪ ತನ್ನ ಮುನ್ನಿನ ರೂಪಾಗಿರ್ದಂತೆಂದನೀತಂ ಘುಟಿಕಾಂಜನಕುಹಕಂ ಇಂದ್ರಜಾಲಂಗಳಂ ಬಲ್ಲನಪ್ಪುದಱಿಂದೆಲ್ಲಾ ರೂಪುಗಳಂ ಮಾಡಲ್ಬಲ್ಲನೆಂದೊಡೆ ತಳಾಱನೆಂದಂ: ಪೆಱರ್ಗೆ ಮಾಡೀ ಪ್ರತ್ಯಯಮಂ ತೋರ್ಪೆನೆಂದರಸನನುಮತದಿಂದರಸಿಯರ ಸೂಳೆಯರ ಕಣ್ಗಳೊಳ್ ಘುಟಿಕಾಂಜನಂಗಳನೆಚ್ಚಿದೊಡನಿಬರುಂ ತೊನ್ನೆಯರಾಗಿರ್ಪನ್ನೆಗಂ ಮತ್ತಂ ಬೞಿಕ್ಕೆ ಪ್ರತಿ ಘುಟಿಕಾಂಜನಂಗಳನೆಚ್ಚಿದೊಡೆ ಸ್ವಭಾವಿಕಮಪ್ಪ ತಮ್ಮ ಮುನ್ನಿನ ರೂಪುಗಳಂ ಕೈಕೊಂಡಿರ್ದರಾಗಳರಸಂಗೆ ನಂಬುಗೆಯಾಗಿ ನೆಟ್ಟನಿವಂ ಕಳ್ಳನಪ್ಪನೀತನಂ ದಂಡಿಸೆಂದು ಯಮದಂಡಗೆ ಬೆಸವೇೞ್ದೊಡಾತನಂತೆಗೆಯ್ವೆನೆಂದಾತನಂ ತನ್ನ ಮನೆಗೊಡಗೊಂಡು ಪೋಗಿ ಮಾಘ

ಮಾಸದಿರುಳ್ ಸೀತದೊಳ್ ಘೋರಮಪ್ಪ ಕಳ್ಳನಂ ಮೂವತ್ತೆರಡು ದಂಡಣೆಗಳಿಂದಂ ನೀಡುಂ ದಂಡಿಸೆ ಅಸಿತುಮಂ ಬಾೞಿತೆ ವಾೞಿತೆ ಅವಯವದೆ ಸೈರಿಸಿಯುಂ ಕಳ್ಳನಲ್ಲೆ ನಯ್ಯೋ ಬಲ್ಲಾಳ್ತನದಿಂದೆನ್ನಂ ತಳಾಱಂ ಕೊಂದಪ್ಪನೆಂದೊಳಱೆ ಪುಯ್ಯಲಿಡೆ ತಳಾಱಂಗೆ ಕಳ್ಳನೀತನಲ್ಲೆಂಬುದೊಂದು ನಂಬುಗೆಯಾಗೆ ನೇಸಮೂರ್ಡೆಯುರಮನೆಗೆ ಪೋಗಿ ಅರಸಂಗಿಂತೆಂದು ಬಿನ್ನಪಂಗೆಯ್ದಂ: ದೇವಾ ಮೂವತ್ತೆರಡು ಘೋರೋಪಮಪ್ಪ ದಂಡಣೆಗಳಿಂದಂ ಕಳ್ಳನಂ ದಂಡಿಸಿ ನೋಡಿದೆನಾತನಮೋಘಂ ಕಳ್ಳನಲ್ಲೆಂದಂ. ದೇವರ್ ಮೆಚ್ಚುಕೆಯ್ಯೆಂದೊಡರಸಂ ಶ್ಮಶಾನದ ಸೂಲದೊಳ್ ಯಮದಂಡನ ನಿಕ್ಕಿಮೆಂದಾಗಳ್ ಬೆಸವೇೞ್ದೊಡವರುಮಾತನಂ ಶ್ಮಶಾನಕ್ಕೆೞೆದುಕೊಂಡು ಪೋಗಿ ದಕ್ಕಂಬಸಿದು ಸೂಲದೊಳಿಕ್ಕುವಾಗಳವರೊಡಪೋಗಿ ತೊನ್ನಂ ರೂಪ ಪರಾವರ್ತನಂಗೆಯ್ದು ತನ್ನ ಸ್ವಭಾವಿಕಮಪ್ಪ ವಿದ್ಯುಚ್ಚೋರನ ದಿವ್ಯ ರೂಪಂ ಕೈಕೊಂಡು ಸೂಲದೊಳಿಕ್ಕಲೀಯದೆ ಅಡ್ಡಮಾಗಿರ್ದರಸರ ಕಾಪಿನವರನೆಂದನೆಲೆಯಣ್ಣಗಳಿರಾ ನೀವೀತನಂ ಕೊಂದಿರಾತನುಂ ಸೂಲದೊಳಿರ್ಕೆಪಟ್ಟನಾಗಿ ಸತ್ತವನೆಂದವರೊಳ್ನುಡಿದು ತಳಾಱನನಿಂತೆಂದನೆಲೆ ಗಳಾ ಯಮದಂಡಾ ನೀನುಮಾನುಂ ಕಿಱಿಯಂದೊರ್ವರುಪಾಧ್ಯಾಯರ ಪಕ್ಕದೊಳೋದುವಂದು ನಂದನ ವನದೊಳಗೆ ನೀನೆನ್ನಂ ಪೂಣ್ದ ಪ್ರತಿಜ್ಞೆಯಂ ನೆನೆದಾವೊಂದುಂ ದೋಷಮಿಲ್ಲದೆ ನಿನ್ನಂ ಕೊಲಿಸಿದೆನೊ ಕೊಲಿಸೆನೊ ಪೂಣ್ದ ಪ್ರತಿಜ್ಞೆಯಂ ನೆನೆವೆಯೊ ನೆನೆಯೆಯೊ ಎನೆ ಯಮದಂಡನೊಳ್ಳಿತ್ತಾಗಿ ನೆನೆದೆಂದೊಡೆ ವಿದ್ಯುಚ್ಚೋರನಿಂತೆಂದಂ: ಮತ್ತೀಗಳ್ ನೀನೇನು ಸತ್ತೆಯೊ ಸಾಯೆಯೊ ಮತ್ತೇನೊ ಎಂದಾಗಳ್ ಯಮದಂಡನೆಂದಂ: ದೇವಾ ನೀಂ ಗೆಲ್ದೆ ಆಂ ಸೋಲ್ತೆನುಂ ಸತ್ತೆನುಮೆಂದಿರ್ವರ್ ಪದಿರಿನಿಂ ನುಡಿವ ಸೂೞ್ಮಾತುಗಳಂ ಕಾಪಿನವರುಂ ಪೊೞಲ ಜನಮುಂ ಕೇಳ್ದು ಚೋದ್ಯಂಬಟ್ಟು ಬೆಱಗಾಗಿರ್ದೊಡೆ ವಿದ್ಯುಚ್ಚೋರಂ ಕಾಪಿನವರನಿಂತೆಂದಂ: ಎನ್ನುಮನೀತನುಮನರಸನಲ್ಲಿಗೆ ಕೊಂಡುಪೋಗಿ ಅರಸನ ಮುಂದೀತಂಗಮೆನಗಂ ಮಾತುಂಟಲ್ಲಿ ನುಡಿದ ಬೞಿಕ್ಕೆ ಅರಸನೀತನಂ ಮೆಚ್ಚುಗೆಯ್ಗೆ ಎಂತು ಕೊಲವೇೞ್ದೊಡಂ ಮೂಱು ಸೂೞ್ ಬೆಸಗೊಂಡಲ್ಲದೆ ಕೊಲಲಾಗದೆಂದು ನೀತಿಶಾಸ್ತ್ರದೊಳ್ ಪೇೞ್ದುದಱಿಂದೆಮ್ಮಿರ್ವರುಮನರಮನೆಗೆ ಕೊಂಡುಪೋಗಿ ಅರಸಂಗೆ ತೋಱಿಮೆಂದೊಡಾ ಕಾಪಿನವರಿರ್ವರುಮಂ ಅರಸನಲ್ಲಿಗೆ ಕೊಂಡುಪೋಗಿ ಇಂತೆಂದು ಬಿನ್ನಪಂಗೆಯ್ದರ್: ದೇವಾ ಈತಂ ಯಮದಂಡನಂ ಕೊಲಲೀಯದೆ ಬಾರಿಸಿದನೆಂದು ವಿದ್ಯುಚ್ಚೋರನಂ ತೋಱೆ ನುಡಿದೊಡರಸನೇಕೆ ನೀಂ ಬಾರಿಸಿ[ದೆ]ಯೆಂದು ಬೆಸಗೊಂಡೊಡೆ ವಿದ್ಯುಚ್ಚೋರನೆಂದಂ: ಯಮದಂಡಗೇನುಂ ನಿಮ್ಮ ದೇವತಾರಕ್ಷಿತಮಪ್ಪ ಸರ್ವರುಜಾಪಹಾರಮೆಂಬುದು ಮೊದಲಾಗಿ ಪೊೞಲ ಕಸವರಮನಿರುಳೀ ರೂಪಿನೊಳ್ ಕಳ್ದು ಪಗಲೆಲ್ಲಂ ತೊನ್ನನಾಗಿ ಪಾೞ್ದೇಗುಲದೊಳಿರ್ಪನದಱಿಂದೆನ್ನಂ ಕೊಲ್ಲವೀತಂಗೇನುಂ ದೋಷಮಿಲ್ಲೆಂದೊಡರಸನೆಂದನಾ ಕಳ್ದ ಕಸವರಮನೆಲ್ಲಮನೇಗೆಯ್ದೆಯೆಂದು ಬೆಸಗೊಂಡೊಡನಿತುಮಿರ್ದುವೈಸಾಸಿರಮುಱುಸಾಸಿರ ದೀನಾರಮನ್ನ ಸೂಳೆಗೆ ಬಯಮಾದುದು ಉೞಿದುದೆಲ್ಲಮಣ್ಣವೞಿಯುದಿರ್ದುದೆಂದೊಡರಸಂ ವಿದ್ಯುಚ್ಚೋರನಂ ಹಾರಮುಂ

ಕೊಂಡುಬಾ ಪೊೞಲವರ್ಗ್ಗಂ ಕಸವರಮಂ ಮಡಗಿದೆಡೆಯಂ ತೋಱಿಂದೊಡಾತ ನೊಡನೆ ಪೊೞಲ ಜನಮುಮನಟ್ಟಿ ಕಾಪುವೆರಸಿ ಪೋಗಿ ಪೊೞಲ್ಗೆ ನಾಡೆಯಂತರ ದೊಳ್ ಪಿರಿದೊಂದು ಪರ್ವತಮುಂಟಲ್ಲಿಯೊಂದು ವಿಸ್ತೀರ್ಣ ಗುಹೆಯುಂಟದಱ ಬಾಗಿಲಂ ಮುಚ್ಚಿರ್ದ ಪಿರಿಯ ಸೆಲೆಯುಂ ಕಳೆದದಱೊಳಗೆ ಪೊಕ್ಕು ಹಾರಮಂ ಕೊಂಡುಪೋಗಿ ಅರಸಂಗೊಪ್ಪಿಸಿದೊಡರಸನಿಂತೆಂದು ವಿದ್ಯುಚ್ಚೋರನಂ ಬೆಸಗೊಂಡಂ: ಮಾಘ ಮಾಸದಿರುಳಿನ ಸೀತದೊಳ್ ನಾಲ್ಕು ಜಾವಮುಂ ಮೂವತ್ತೆರಡು ಘೋರ ಮಪ್ಪ ದಂಡಣೆಯನೆಂತು ಸೈರಿಸಿದೆಯೆಂದೊಡಾತನಿಂತೆಂದರಸಂಗೆ ಪೇೞ್ದುವೊಂದು ದಿವಸಂ ಸಹಸ್ರ ಕೂಟ ಚೈತ್ಯಾಲಯಕ್ಕೆ ಕಿಱಿಯಂದೆನ್ನ ನೋದಿಸುವೋಜರು ಮಾನುಂ ಪೋಗಿ ಓಜಂ ದೇವರಂ ಬಂದಿಸುವನ್ನೆಗಂ ಚರಿತ ಪುರಾಣಂಗಳಂ ವಖ್ಯಾ ಣಿಸುತ್ತಿರ್ದ ಶಿವಗುಪ್ತರೆಂಬಾಚಾರ್ಯರ ಪಕ್ಕದೆ ಕುಳ್ಳಿರ್ದ್ದು ವಖ್ಯಾಣೆಯಂ ಕೇಳು ತ್ತಿರ್ಪನ್ನೆಗಂ ನರಕ ವ್ಯಾವರ್ಣನೆಯನಾ ಭಟಾರರಿಂತೆಂದು ಪೇೞ್ವುದಂ ಕೇಳ್ದೆಂ: ಬ್ರತ ಶೀಲ ಗುಣಂಗಳಿಲ್ಲದ ಜೀವಂಗಳ ಕೊಲ್ವರುಂ ಬೇಂಟೆಯಾಡುವರುಂ ರಾಗ ದ್ವೇಷ ಲೋಭಂ ಕಾರಣಮಾಗಿ ಪುಸಿ ನುಡಿದು ಜೀವಂಗಳ್ಗೆ ತಾಪಮಂ ವಧೆಯುಮಂ ಮಾಡಿಸು ಮಾಡಿಗೊಳ್ವರುಂ ಕಳ್ವರುಂ ಪೆಱರ ಪೆಂಡಿರೊಳ್ ಮಱಿವಾೞ್ವರುಂ ಅಪರಿಮಿತ ಪರಿಗ್ರಹಮಂ ನೆರಪುವರುಂ ಮತ್ತಂ ಮಧು ಮದ್ಯ ಮಾಂಸಗಳುಮೈದು ಪಾಲ್ಮರದ ಪಣ್ಗಳುಮಾಳಂಬೆಯುಂ ಸಣಂಬನ ಪೂವುಂ ಎಂದಿವ ಸೇವಿಸುವರುಂ ಮತ್ತಮಮೋಘಮನಮಪೇಯಾಪೇಯ ಭಕ್ಷ್ಯಾಭಕ್ಷ್ಯಮೆಂದಿವಱೊಳ್ ನೆಗ ೞ್ವರುಂ ಪಂಚ ಮಹಾ ಪಾತಕಂಗಳಂ ಗೆಯ್ದೊರುಮಿವರೆಲ್ಲಂ ನಿವೃತ್ತಿ ಪರಿಣಾಮ ಮಿಲ್ಲದೆ ಕಾಲಂ ಗೆಯ್ದೇೞುಂ ನರಕಂಗಳೊಳ್ ಪುಟ್ಟಿ ದುಃಖಂಗಳನೆಯ್ದುವರ್.—

ಗಾಹೆ ॥ ಅಂಭಿಣಿ ಮಿಳಣ ಮೆಂತಂ ಣಂತಿ ಸುಹಂ ।
ದುಃಖಮೇವ ಅಣು ಬುಂದಾ ॥
ಣಿರಯೇಣಿರಯಿಯಾಣಂ ಅಹಂಣಿ ।
ಸು ಪಂಚಮಾಣಾಣಂ ॥

ಶ್ಲೋ ॥ ಕರಜನ ವೇಶಿತ ತೀಕ್ಷ್ಣ ಶಳಾಕಾ ।
ಕ್ರಕಚ ವಿಪಾಟಿತ ಭಿನ್ನ ಶರೀರಾಃ ॥
ನರಕ ಭವೇ ವಿರಸಾವಿಸವಂತೇ ।
ಚಿರಮಪಿ ಕರ್ಷಣ ದುಃಖ ವಿಷಾದಃ ॥

ಕಂ ॥ ಇಱಿ ಕಿಱಿದನೊದಱಿ ಕೈರಂ ।
ದಱಿಮುಱಿ ನಿಟ್ಟೆಲುವನರಿದು ನೆರಡೆಡೆಗಳ್ ಬಾ ॥
ಯ್ದೆಱೆಯೆ ಪೊಸ ಪುಣ್ಗಳೊಳ್ ಪೊಯ್ ।
ಮಱುಗುವಿನಂ ಲೋಹವಾರಿಯಂ ಮಱುಗುವಿನಂ ॥

ಕಡಿ ಕಟಿವಮನುಡಿ ತೊಡೆಯಂ ।
ನಡ ನಡ ನಡುಗುವಿನಮುಡಸಿ ತಡೆಯದೆ ಖಳನಂ ॥

ಪಿಡಿದುಡಿಯೆ ಕಟ್ಟು ಮಿಡಮಿಡ ।
ಮಿಡುಕುವಿನಂ ಬಡಿಯೊಳೊಡೆಯೆ ಪೊಡೆ ಪೆಡ ತಲೆಯಂ ॥

ಬಡಿ ಕೊಲು ಕಟ್ಟಿಱಿ ಮುಱಿ ಕಡಿ ।
ನಡುವಂ ಕಾಱಿತಿ ಕರುಳ್ಗಳಂ ತೆಗೆ ಮೊಗಮಂ ॥
ಸುಡು ಪಿಡಿ ಬಡಿ ನಿಮಿರ್ದಿಱಿ ಬೈ ।
ಕಡಂಗಿ ನುಂಗೆಂದು ಮುಸುಱಿ ನಾರಕರಾಗಳ್ ॥

ಮತ್ತಂ ಕೊಂತಂಗಳಿಂದಮಿಟ್ಟಿಗಳಿಂದಂ ಕುತ್ತೆ ಸೀೞಿಂದಂ ಕರುಳ್ಮಾಲೆಗಳ್ ನೆಲದೊಳ್ ಸುರಿಯೆಯುಂ ಕುತ್ತುವುದುಂ ಇಟ್ಟಿಗಳೊಳಿಟ್ಟು ತೆಗವುವುದುಂ ಕರಗಸಂಗಳಿಂದಂ ಮರಸಂ ಪೋೞ್ವಂತೆ ಕೆಯ್ಯುಂ ಕಾಲನಗಲ್ಚಿ ಪಿಡಿದಡಸಿ ಕಟ್ಟಿಯುಂದಂಪಿಡಿದು ಬಾೞ್ವುದುಮಿಂತಿವು ಮೊದಲಾಗೊಡೆಯ ದುಃಖಂಗಳಂ ಕಣ್ಣೆವೆಯಿಕ್ಕುವಸಿತು ಪೊೞ್ತಿಪ್ಪೊಡಂ ಉಸಿರ್ಪ್ಪತ್ತಿಲ್ಲ ದುಷ್ಕೃತದಿಂದಮೇೞನೆಯ ನರಕದೊಳ್ ಮೂವತ್ತು ಮೂಱು ಸಾಗರೋಪಮಾಯುಷ್ಯಂಬರೆಗಂ ದುಃಖಂಗಳ ನೆಯ್ದುವರ್. ಮತ್ತಂ ದಾನ ಪೂಜೆ ಶೀಲೋಪವಾಸಮೆಂದಿಂತು ಚತುರ್ವಿಧಮಪ್ಪ ಶ್ರಾವಕ ಧರ್ಮದೊಳ್ ನೆಗೞ್ವರುಂ ಸ್ವರ್ಗಾಪವರ್ಗ ಸು ಖಂ ಗ ಳ ನೆ ಯ್ದು ವ ರೆಂ ದಿಂ ತು ಪೇೞೆ ಕೇಳ್ದು ಭಟಾರರ ಪಕ್ಕದೆಯಾನಣುವ್ರತ ಗುಣಬ್ರತ ಶಿಕ್ಷಾಬ್ರತಮೆಂದಿಂತು ದ್ವಾದಶ ವಿಧಮಪ್ಪ ಶ್ರಾವಕ ಧರ್ಮಮುನರಹಂತ ಪರಮದೇವರ್ದೈದೇವರ್ ಕೊಲ್ಲದುದೆ ಧರ್ಮಂ ಬಾಹ್ಯಾಭ್ಯಂತರ ಪರಿಗ್ರಹಂಗಳಿಲ್ಲದುದೆ ತಪಂ ಅರಹಂತ ಪರಮದೇವರಾಗಮದೊಳ್ ಪೇೞಿಪಟ್ಟ ಜೀವಾಜೀವ ಪುಣ್ಯ ಪಾಪಾಸ್ರವ ಸಂವರ ನಿರ್ಜರ ಧರ್ಮಮೆಂದಿಂತು ನವ ಪದಾರ್ಥಂಗಳುಮಂ ಷಡ್ದ್ರವ್ಯಂಗಳುಮಂ ನಂಬುವುದು ಸಮ್ಯಕ್ತ್ವಮೆಂಬುವುದಕ್ಕುಮಾ ಸಮ್ಯಕ್ತ್ವದತಿಚಾರಂಗಳ್ ಶಂಕಾದ್ಯಷ್ಟಮಳಂಗಳುಮೆಂಟು ಮದಂಗಳುಂ ಮೂಱು ಮೂಢಮುಂ ಆಱನಾಯತನ ಸೇವೆಗಳುಮೆಂದಿಂತಿಪ್ಪತ್ತೈದಕ್ಕುಮವಂ ಪಿಂಗಿಸಿ ನಿಶ್ಶಂಕಾದ್ಯಷ್ಟ ಗುಣಂಗಳಿಂ ಕೂಡಿದ ಶುದ್ಧಮಪ್ಪ ಸಮ್ಯಕ್ತ್ವ ಪೂರ್ವಕಂ ಬ್ರತಂಗಳನೇಱಿಸಿ * ಕೊಂಡು ಮತ್ತೆ ನರಕಂಗಳ ದುಃಖಂಗಳಂ ಕೇಳ್ದವಱ ಶತ ಸಹಸ್ರ ಭಾಗಕಪ್ಪೊಡಮಿಾ ದುಃಖಮಿಲ್ಲೆಂದು ಮನದೊಳ್ ಬಗೆದು ಮೂವತ್ತೆರಡು ದಂಡಣೆಗಳಂ ಸೈರಿಸಿದೆನೆಂದೊಡರಸಂ ಕೇಳ್ದು ನಿನಗೊಸೆದೆಂ ಬೇಡಿಕೊಳ್ ನಿನ್ನ * ಬೇಡಿದುದೆಲ್ಲಮಂ ಕುಡುವೆನೆಂದೊಡೆ ಪೆಱತೇನುಮನೊಲ್ಲೆನೆನ್ನ ಕೆಳೆಯನಪ್ಪ ಯಮದಂಡಂಗೆ ಕ್ಷಮಿಯಿಸುವುದೆನೆ ಬೇಡಿಡೆನೆಂದೊಡರಸನಿಂತೆಂದು ಬೆಸಗೊಂಡಂ: ಯಮದಂಡಂ ನಿನಗೆಂತು ಕೆಳೆಯನಾದಂ ಮತ್ತೆ ನೀಂ ಶ್ರಾವಕ ಬ್ರತಂಗಳಂ ಕೈಕೊಂಡೆಯಪ್ಪೊಡೆ ಕೇಳ್ವೆಂ ಎಂದು ಬೆಸಗೊಂಡೊಡಾತನಿಂತೆಂದಂ: ಯಮದಂಡನೆನಗೆ ಕೆಳೆಯನಪ್ಪುದುಮಂ ನಿಮ್ಮ ಪೊೞಲ ಕಸವರಮಂ ಕಳ್ದುದರ್ಕೆ ಕಾರಣಮುಂ ಪೇೞ್ವೆಂ ಕೇಳರಸಾ ಎಂದು ವಿದ್ಯುಚ್ಚೋರನಿಂತೆಂದು ಪೇೞಲ್ತೊಡಗಿದಂ:—

ಈ ಜಂಬೂ ದ್ವೀಪದ ಭರತ ಕ್ಷೇತ್ರದೊಳ್ ತಿಲಕಮನೆ ಪೋಲ್ವುದು ದಕ್ಷಿಣಾಪಥದೊಳಾಭೀರಮೆಂಬುದು ನಾಡಲ್ಲಿ ವರ್ಣೆಯೆಂಬುದು ತೊಱೆಯ ತಡಿಯೊಳ್

ವೇಣಾತಟವೆಂಬುದು ಪೊೞಲದು ಪೊೞಲ ಗುಣಂಗಳಿನಾದಮಾಸುಂ ರಮ್ಯ
ಮಪ್ಪುದುಂ ಸ್ವರ್ಗಮನೆ ಪೋಲ್ಪುದದನಾಳ್ವೊಂ ಜಿತಶತ್ರುವೆಂಬರಸನಾತನ ಮಹಾ
ದೇವಿ ವಿಜಯಮತಿ ಮಹಾದೇವಿಯೆಂಬೊಳಾ ಇರ್ವರ್ಗ್ಗಂ ಮಗನೆ ನಾಂ ವಿದ್ಯು
ಚ್ಚೋರನೆಂಬೆನ್. ಮತ್ತಾ ಪೊೞಲೊಳ್ ಯಮಪಾಶನೆಂಬೊಂ ತಳಾಱನಾತನ ಪೆಂಡತಿ
ನಿಜಗುಣದೇವತೆಯೆಂಬೊಳಾಯಿರ್ವ್ವರ್ಗ್ಗಂ ಮಗನೀತಂ ಯಮದಂಡನೆಂಬೊಂ.
ಮತ್ತಾವಿರ್ವರುಂ ಸಮಾನ ವಯಸ್ಸರೆಮೈದಾಱು ವರ್ಷದ ಪ್ರಾಯದಂದು ಶ್ರಾವಕ
ನಪ್ಪ ಸಿದ್ಧಾರ್ಥನೆಂಬುಪಾಧ್ಯಾಯರ ಪಕ್ಕದೆ ಇರ್ವರುಮನೋದಲಿಟ್ಟೊಡೆ ಪಱಿಂ
ಎಂಟು ವರುಷದೊಳಗೆ ವ್ಯಾಕರಣ ಪ್ರಮಾಣಂ ಛಂದಮಲಂಕಾರಂ ನಿಘಂಟು ಕಾವ್ಯ
ನಾಟಕಂ ಸಾಮುದ್ರಿಕಂ ವಾತ್ಸ್ಯಾಯನಂ ಶಾಳಿಹೋತ್ರಂ ಪಾಳಕಾರ್ಷಂ ಚಾಣಕ್ಯ
ವೈದ್ಯ ಮೊದಲಾಗೊಡೆಯ ಶಾಸ್ತ್ರಂಗಳನೆಲ್ಲಮನಿರ್ವ್ವರುಂ ಕಲ್ತು ಬೞಿಕ್ಕೀತಂ ತಳಾ
ಱನ ಮಗನಪ್ಪುದಱಿಂ ತನಗೆ ತಕ್ಕ ಕಳ್ಳನಾರೈವ ತೆಱನಂ ಪೇೞ್ವ ಸುರಖನೆಂಬುದಂ
ಕಲ್ತೊನ್. ಆನುಂ ಕಳ್ವುಪಾಯಮಂ ಪೇೞ್ವ ಕರಪಟ ಶಾಸ್ತ್ರಮಂ ಕಲ್ತೆನಿಂತೆಮ
ಗನ್ಯೋನ್ಯ ಪ್ರೀತಿಯಿಂದಂ ಕಾಲಂ ಸಲೆ ಮತ್ತೊಂದು ದಿವಸಂ ಇರ್ಬರುಂ ವನ ಕ್ರೀಡೆ
ಗೆಯ್ಯಲೆಂದು ಇಂದೀ ತೆಱದ ವೃಕ್ಷ ಜಾತಿಗಳಿಂದಂ ಕಿಕ್ಕಿಱಿಗಿಱಿದಿರ್ದ ನಂದನ
ವನದೊಳಿರ್ವರುಂ ಮುಳಿಸೆಂಡೆಯಾಡುತ್ತಿರೆ ಲೋಕವಿದ್ಯೆಯನೀತ ಕಲ್ತನಪ್ಪುದ
ಱಿಂದೆಲ್ಲಿಯುಂ ಬೞಿದೊಡಂ ಕಾಣಲಾಗದೀತನಂ ನೀಡುಮಱಸಿ ಕಾಣದೆ ದೆಸೆಗೆಟ್ಟು
ಬೇಸತ್ತಾನಿಂತೆಂದೆನಕ್ಕುಂ: ಮಗನೆ ನೀಂ ತಳಾಱನಪ್ಪಂದು ನಿನ್ನ ಕಾಪಿನೊಳ್ ಕಳ್ವು
ನಿನ್ನಂ ಕೋಪಿಸಿದಾಗಳೇನಾಯಿತೆಂದು ನುಡಿದೊಡೀತನುಮಿಂತೆಂದನಕ್ಕುಂ: ಮಗನೆ
ನೀನೆನ್ನ ತಳಾಱುಗೆಯ್ವಂದು ಕಳ್ದೊಡೆ ನಿನ್ನಂ ಪಿಡಿದುಡಿಯೆ ಕಟ್ಟಿ ಕಳ್ಳರ ದಂಡಣೆಯಿಂ
ದಂಡಿಸಿದಾಗಳೇನಾಯ್ತೆಂದು ನುಡಿದೊಡೀ ನುಡಿಯಂ ಮಱೆಯಲ್ವೇಡೆಂದಿರ್ವರುಂ
ಓರೊರ್ವರಂ ಮೂದಲಿಸಿ ಪ್ರತಿಜ್ಞೆಗೆಯ್ದು ಕೆಲ ಕಾಲದಿಂದೆನ್ನ ತಂದೆಯೆನಗೆ ರಾಜ್ಯ
ಪಟ್ಟಂಗಟ್ಟಿ ಶ್ರುತಸಾಗರರೆಂಬ ಭಟಾರರ ಪಕ್ಕದೆ ತಪಂಬಟ್ಟನೀತನ ತಂದೆಯುಂ ತನ್ನ
ಸಂತಾನಮನೀತಂಗೆ ಕೊಟ್ಟರಸನೊಡನೆ ತಪಂಬಟ್ಟಂ. ಮತ್ತಾನುಂ ರಾಜ್ಯಂಗೆಯ್ಯು
ತ್ತಿರೆ ಈತನುಮಾ ಪೊೞಲೊಳ್ ತಳಾಱುಗೆಯ್ಯುತ್ತಿರೆ ಇಂತು ಸುಖದೊಳ್
ಇರ್ವರ್ಗ್ಗಂ ಕಾಲಂ ಸಲೆ ಮತ್ತೊಂದು ದಿವಸಮೀತಂ ತನ್ನ ಮನದೊಳಿಂತೆಂದು ಬಗೆವ
ನೆನ್ನರಸಂ ಕಳ್ಳನಾನ್ ಪೊೞಲೊಳ್ ತಳಾಱುಗೆಯ್ವನಿದು ಕಜ್ಜವೊಳ್ಳಿತ್ತಲ್ತೆಂದು
ಮನಗಂಜಿ ನಾಡಂ ಬಿಟ್ಟು ಬಂದು ನಿಮಗಾಳಾದನಾನುಮೀತನನೆನ್ನಾಳ್ವನೆಂಟು
ದೆಸೆಯ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳೊ
ಳಾರಯಿಸಿಯುಂ ಕಾಣದೆ ಪರ ಮಂಡಲಂಗಳೊಳಾರಯಿಸಿ ಕಾಣದಿಲ್ಲಿಗಾರಯ್ಯು
ಲಟ್ಟಿದೊಡೆ ಚರ ಪುರುಷರಾರೈದು ಕಂಡುಬಂದೆನಗಿಂತೆಂದು ಪೇೞ್ದರ್ :—

ದೇವಾ ಮಿಥಿಳೆಯೆಂಬ ಪೊೞಲನಾಳ್ವೊಂ ವಾಮರಥನೆಂಬರಸಂಗೆ ಯಮ
ದಂಡಂ ಪೋಗಿಯಾಳಾಗಿ ಪೊೞಲ ಕಾಪಂ ಪೆತ್ತು ತಳಾಱನಾಗಿ ಸುಖದೊಳಿರ್ದೊ
ನೆಂದು ಪೇೞ್ದೊಡಾ ಮಾತನಾಂ ಕೇಳ್ದು ಪುರುಷೋತ್ತಮನೆಂಬ ಮಂತ್ರಿಗೆ
ಮಿಥಿಳೆಯೆಂಬ ಪೊೞಲ್ಗೆಯಾನಾರುಮಱಿಯದಂತಿರೆ ಪೋಗಿ ಯಮದಂಡನನೊಡ

ಗೊಂಡು ಬಂದಪೆನೆಂದು ಪೇೞ್ದು ವಜ್ರಸೇನನೆಂಬ ಪೆರ್ಗಡೆಯುಂ ಕರೆಯಿಸಿ ಆನೊಂದು ಮನೆವಾರ್ತೆಗೆ ಪೋಗಿಬಂದಪೆನೆನ್ನ ಬಪ್ಪನ್ನೆಗಂ ರಾಜ್ಯಮುಂ ಪ್ರತಿಪಾಲಿಸುತ್ತಿರುವೆಂದು ಕಲ್ಪಿಸಿ ಸಮಸ್ತ ರಾಜ್ಯ ಭರ ಭಾರಮೆಲ್ಲಮುಂ ಸಮರ್ಪಿಸಿ ಅರ್ಧರಾತ್ರದಾಗಳ್ ಕಪ್ಪಡಮುಂ ಪಱಿದುಟ್ಟು ಬೞಿಕಾರುಮಱಿಯಲೀಯದೆಯೊರ್ವನೆ ಪೊಱಮಟ್ಟು ಬಂದೀ ಪೊೞಲಂ ಪೊಕ್ಕು ಪ್ರತಿಜ್ಞೆ ಕಾರಣಮಾಗಿ ಕಸವರಮುಂ ಕಳ್ದೀತನಂ ಕೊಲಿಸುವಂತು ಮಾಡಿದೆನಿದು ಕಳ್ದುದಕ್ಕೆ ಕಾರಣಮಿದುವೀತನುಮೆನಗೀ ಪಾಂಗಿನೊಳ್ ಮಿತ್ರನೆಂದು ಪೇೞ್ದು ಮತ್ತಮಿಂತೆಂದಂ: ನಿಮ್ಮ ದೇವತಾಧಿಷ್ಠಿತಮಪ್ಪ ಸರ್ವ ರುಜಾಪಹಾರಮೆಂಬ ಹಾರಮನಧಿಗಮ ಸಮ್ಯಗ್ದೃಷ್ಟಿಯಪ್ಪುದಱಿಂದೆನ್ನ ಕೈಗೆ ವಂದುದು ಉೞಿದ ಮಿಥ್ಯಾದೃಷ್ಟಿಗಳ ಕೈಗೆ ಬಾರದೆಂದೊಡರಸಂ ತನ್ನ ಸಭೆಯೊಳಿರ್ದ ನೆರವಿಗೆಲ್ಲಂ ಹಾರಂ ಬಂದ ತೆಱನನಿಂತೆಂದು ಪೇೞಲ್ತೊಡಗಿದಂ: ಧನ್ವಂತ್ರಿ ವಿಶ್ವಾಸುಲೋಮರ್ಕಳ ಕಥೆಯುಂ ಮೊದಲಿಂ ತಗುಳ್ದು ಪೇೞುತ್ತುಮಿಂತೆಂದನೆಮ್ಮ ಸಂತತಿಯ ಪದ್ಮರಥನೆಂಬರಸನೊಂದು ದಿವಸಂ ವಾಸುಪೂಜ್ಯ ತೀರ್ಥಕರ ಪರಮ ದೇವರಂ ಬಂದಿಸಲ್ ಪೋಗುತ್ತಿರ್ದೊನನೆಡೆಯೊಳಚ್ಯುತೇಂದ್ರನುಂ ವಿಶ್ವಾಸು ಲೋಮನಪ್ಪ ವಾಹನದೇವನುಮಿಂತಿರ್ವರುಂ ಕಂಡು ಚಂಪಾ ನಗರಕ್ಕೆ ಪೋದೊನಪ್ಪೊನೀತನಂ ಅಚ್ಯುತೇಂದ್ರ ವಾಹನದೇವನನಿಂತೆಂದನೀತಂ ಅಧರ್ಮಿಯಿಂದೆ ಧರ್ಮಮುಂ ಕೈಕೊಂಡ ವಾಸುಪೂಜ್ಯ ತೀರ್ಥಕರರ ಪರಮ ದೇವರಂ ಬಂದಿಸಿದಲ್ಲದುಣನೆಂದು ಆಗ್ರಹಂಗೊಂಡು ಚಂಪಾ ನಗರಕ್ಕೆವೋದನಪ್ಪೊನೀತನಂ ಪೋಗಲೀಯದೆ ಮಗುೞ್ಚಲಾರ್ಪೊಡೆ ಮಗುೞ್ಚೆಂದು ನುಡಿದೊಡೆ ವಾಹನ ದೇವನುಂ ತನ್ನಾರ್ಪ ತೆಱದಿಂದೆಲ್ಲಮನಿತಾನುಂ ತೆಱದುಪಸರ್ಗಂಗೆಯ್ದು ಮಗುೞ್ಚಲಾಱದೆ ಬೇಸತ್ತುೞಿದೊಡಂ ಅಚ್ಯುತೇಂದ್ರಂ ಪದ್ಮರಥಂಗೊಸೆದು ತನ್ನ ತೊಟ್ಟ ಸರ್ವ ರುಜಾಪಹಾರಮೆಂಬ ಹಾರಮನಾತನ ಕೊರಳೊಳ್ ತಾನಿಕ್ಕಿ ಪೊಗೞ್ದು ಪೂಜಿಸಿ ಪೋದೊನಿಂತೀ ಪಾಂಗಿನೊಳ್ ಎಮಗೀ ಹಾರಂ ಸಂತತಿಯಿಂ ಬಂದುದೆಂದು ಕಥೆಯಂ ಪೇೞ್ದಿರ್ದು ತದನಂತರಮಿರ್ವ್ವರ್ ಪರಿವೊಟ್ಟೆಯವರೋಲೆಯುಂ ಕೊಂಡುಬಂದು ಅರಸನ ಮನೆಯ ಬಾಗಿಲೊಳ್ ನಿಂದು ಪಡಿಯಱಂಗೆ ಪೇೞ್ದೊಡೆ ಪಡಿಯಱರುಂ ತಮ್ಮರಸಂಗೆ ಪೇೞ್ದೊಡರಸನನುಮತದಿಂದಂ ಅರಮನೆಯಂ ಪೊಕ್ಕಾಸ್ಥಾನ ಮಂಟಪದೊಳಿರ್ದ ವಿದ್ಯುಚ್ಚೋರನಂ ಕಂಡು ಪೊಡೆವಟ್ಟಾತನ ಮುಂದೆ ಓಲೆಯನಿಕ್ಕಿದಾಗಳ್ ಸಂಧಿವಿಗ್ರಹಿ ಓಲೆಯಂ ಕಂಡರಸನ ಮುಂದೆ ಇಂತೆಂದು ಬಾಚಿಸಿದಂ: ವಿದ್ಯುಚ್ಚೋರ ಸ್ವಾಮಿಗೆ ಮಂತ್ರಿ ಪುರುಷೋತ್ತಮನುಂ ಪೆರ್ಗಡೆ ವಜ್ರಸೇನನುಂ ಸಾಷ್ಟಾಂಗವೆಱಗಿ ಪೊಡೆವಟ್ಟು ಕಾರ್ಯಮುಂ ಬಿನ್ನವಿಕ್ಕಿ ಮತ್ತಪ್ಪುದುಂ ಆಮುಂ ಪಲವು ದಿವಸ ಪೋಗಿರ್ದರ್ ಪೆಱತಣ ಮನೆವಾರ್ತೆಯುಂ ಮಱೆದಿರ್ದರ್ ತಾಮಿಲ್ಲದೆ ರಾಜ್ಯಮುಂ ಪ್ರತಿಪಾಲಿಸುವರಾರುಮಿಲ್ಲೆಂದೋಲೆಯುಂ ಕಾಣಲೊಡಂ ತಡೆಯದೆ ಪೊಱಮಟ್ಟು ಬೇಗಂ ಬರ್ಕೆಂದು ಬಾಚಿಸಿದುದಂ ವಾಮರಥಂ ಕೇಳ್ದು ಮುನ್ನೀತನ ಪೇೞ್ದುದುಮೋಲೆಯ ಮಾತುಮೊಂದಾದುದೆಂದು ಸಂದೇಹಮಿಲ್ಲದಾಗಳ್ ನಂಬಿ ಮಂಡಳಿಕನೆಂದಱಿದು ತನ್ನ ಸಿಂಹಾಸನದೊಳೋರಂತಪ್ಪ ಆಸನಮನಿಕ್ಕವೇೞ್ದಿರಿಸಿ ಇಂತೆಂದನೆನ್ನ ತಂಗೆಯ

ಮಗನ್ಮೈ *    *    *    * ನ್ನ ಮಕ್ಕಳ್ ಶ್ರೀಮತಿ ವಸುಮತಿ ಗುಣಮತಿ ಸುಲೋಚನೆ ಸುಪ್ರಭೆ ಸುಕಾಂತೆ ಸುಶೀಲೆ ಮನೋಹರಿಯೆಂಬೆಣ್ಬರುಂ ತಂಗೆಯ ರತ್ಯಂತ ರೂಪ ಲಾವಣ್ಯ ಸೌಭಾಗ್ಯ ಕಾಂತಿ ಹಾವ ಭಾವ ವಿಲಾಸ ವಿಭ್ರಮಂಗಳನೊಡೆ ಯರಂ ನವ ಯವ್ವನೆಯರಂ ಅಕ್ಷರ ಲೆಕ್ಕ ಗಣಿತ ಗಾಂಧರ್ವ ನೃತ್ಯ ಚಿತ್ರಕರ್ಮ ಪತ್ರ ಚ್ಛೇದ್ಯವೆಂದಿಂತು ಮೊದಲಾಗೊಡೆಯ ಚವುಷಷ್ಠಿ ಕಲೆಗಳೊಳಾದಮಾಸುಂ ಕುಶಲೆಯರ್ ಪರ ಮಂಡಳಿಕರ್ ಪಲರುಂ ಪಾಗುಡಂಗಳುಮೋಲೆಗಳುಂ ಪೆರ್ಗಡೆ ಗಳುಮನನವರತಂ ಕೂಸುಗಳುಮಂ ಬೇಡಿಯಟ್ಟುತ್ತಿರ್ಪ್ಪರವರಾರುಮಂ ನಾ ಮೆಚ್ಚದೆ ಕುಡದಿರ್ದ್ದೆನ್ನೆಗಮಿಂತಿವರ್ಗಳಂತಾಗಿರ್ದ್ದನೀ ಕನ್ಯಾರತ್ನಂಗಳ್ಗೆ ನೀನೆ ಯೋಗ್ಯನೈ ನಿನಗೆಣ್ಬರುಮಂ ಕೊಟ್ಟೆನ್ ಮದುವೆನಿಲ್ಲೆಂದೊಡಾತನಿಂತೆಂದನಾನೊ ರ್ವಳ್ಗೆ ಬೇಂಟಂಗೊಂಡಿರ್ದ್ದೆನಿವರ ಕೊಂಡೇವೆನೆಂದೊಡರಸನಾರ್ಗ್ಗೆ ಬೇಂಟಂ ಗೊಂಡಿರ್ದೆ ಎಂದು ಬೆಸಗೊಂಡೊಡೆ ಆತನಿಂತೆಂದಂ: ಮುಕ್ತಿಶ್ರೀಯೆಂಬೊಳ್ಪೆಂಡತಿಗೆ ಬೇಂಟಂಗೊಂಡಿರ್ದೆನಾಕೆಯುಂ ಮದುವೆನಿಲವೇೞ್ಕುಮೆಂದು ಪರಿಚ್ಛೇದಿಸಿ ನುಡಿದು ಮತ್ತಮಿಂತೆಂದನೆನ್ನ ಕೆಳೆಯನೆನಗೊಪ್ಪಿಸಲ್ವೇೞ್ಕುಮೆಂದೊಡರಸುಮೊಪ್ಪಿಸಿದೆ ನೆಂದೊಡೆ ಅರಸನಂ ಬೀೞ್ಕೊಂಡು ಯಮದಂಡ ಪುರಸ್ಸರಂ ಒಟ್ಟೆಯನೇಱಿ ತುರಿಪದಿಂ ಕತಿಪಯ ದಿವಸಂಗಳಿಂ ವೇಣಾತಟಮನೆಯ್ದಿ ಪೊಱವೊೞಲೊಳಿರ್ದು ಪೇೞ್ದಟ್ಟಿಯಷ್ಟ ಶೋಭೆಯಂ ಮಾಡಿಸಿ ಮಂತ್ರಿ ಮಹತ್ತರರ್ ಪರಿವಾರ ಸಾಮಂ ತರ್ಕಳುಂ ಪೆಂಡವಾಸದ ಸೂಳೆಯರುಂ ಪೊಱವೊೞಲ ಜನಮೆಲ್ಲಮಿದಿರಂ ಬಂದು ಕಂಡು ಪೊಡೆವಟ್ಟು ಸೇಸೆಗಳನಿಕ್ಕಿದ ಬೞಿಕ್ಕೆ ಪಟ್ಟವರ್ಧನಮನೇರ್ದರುಮೇಱಿ ಬೆಳ್ಗೊಡೆ ಮೊದಲಾಗೊಡೆಯ ರಾಜ್ಯಚಿಹ್ನಂಗಳ್ ಮುಂದೆ ಪರಿಯೆ ಪಂಚ ಮಹಾ ಶಬ್ದಂಗಳಿಂ ಬದ್ದವಣದ ಪಱೆಗಳುಂ ಬಾಜಿಸೆ ಅರಮನೆಯಂ ಪೊಕ್ಕು ಮಱು ದಿವಸಮಾಸ್ಥಾನ ಮಂಟಪದೊಳ್ ಸಿಂಹಾಸನ ಮಸ್ತಕ ಸ್ಥಿತನಾಗಿ ಸಾಮಂತ ಮಹಾ ಸಾಮಂತರ್ಕಳಂ ಮಂತ್ರಿ ಮಹತ್ತರ ಪುರೋಹಿತ ಪರಿವಾರದವರ್ಗಳಮರಸಿಯರ್ಕಳ್ಗಂ ಬೞಿಯಟ್ಟಿ ಬರಿಸಿ ಇಂತೆಂದು ನುಡಿದನಾನೀ ಸಂಸಾರದೊಳಪ್ಪ ಭೋಗೋಪ ಭೋಗಂಗಳ್ಗೆ ಪೇಸಿ ವಿರಕ್ತನಾಗಿ ತಪಂಬಡಲ್ಬಗೆದಪ್ಪೆನೆಂದೊಡನಿಬರುಂ ನೆರೆದಿಂತೆಂದ ರಿನ್ನುಮಾವುದು ಕಾಲಂ ತಪಂಬಡಲಮ್ಮಿನ್ನುಂ ನೀಂ ಕೂಸನೈ ನವ ಯವ್ವನನೈ ಕೆಲ ಕಾಲಮರಸುಗೆಯ್ದು ಪಶ್ಚಾತ್ಕಾಲದೊಳ್ ತಪಂಬಡಲಕ್ಕುಮೆಂದೊಡರಸ ನಿಂತೆಂದಂ: ಎಂತಱಿಯಲಕ್ಕುಮನ್ನೆಗಂ ಸಾವರೊ ಬಾೞ್ವರೊ ಎಂದು ಪ್ರಸ್ತುತಂಗಳ ನವಗಾರ್ಡಿ ಪೇೞಲ್ತೊಡಗಿದಂ—

ಶ್ಲೋ ॥ ಡಿಂಡೀರ ಪಿಂಡ ಸಂಕಾಶಂ ಆಯುಃ ಸಂಸಾರ ವರ್ತಿನಾಂ ।
ಆಖಂಡಲ ಧನುಷ್ಕಾಂಡ ಸನ್ನಿಭಂ ರೂಪ ಯೌವನಂ ॥

ವೃ ॥ ರೂಪಂ ಯೌವನಮಾಯುರಕ್ಷವಿಷಯಾಭೋಗೋಪಭೋಗಾ ವಪುಃ ।
ವೀರ್ಯಾ ಸ್ತೇಷ್ಟ ಸಮಾಗಮೋ ವಸುಮತಿಃ ಸೌಭಾಗ್ಯ ಭಾಗ್ಯೋದಯೋ ॥
ಯೇ ನಿತ್ಯಸ್ಫುಟಮಾತ್ಮನಃ ಸಮುದಿತಾಜ್ಞಾನೇಕ್ಷಣಾ ಭೂಭೃತಾಂ ।
ಶೇಷಾಯೇತ್ಯನುಚಿಂತಯಂತು ಸುಧಿಯಃ ಸರ್ವೇ ಸದಾನಿತ್ಯತಾಂ ॥

ಶ್ಲೋ ॥ ಯದಿ ಜಾತಿ ಜರಾ ಮರಣಂ ನ ಭವೇತ್ ಯದಿ ಚೇಷ್ಟ ವಿಯೋಗ ಭಯಂ ನ ಭವೇತ್ ।
ಯದಿ ಸರ್ವಮಸತ್ಯಮಿದಂ ನ ಭವೇತ್ ಇಹ ಜನ್ಮನಿ ಕಸ್ಯ ರತಿರ್ನಿಯತೋ ಭವೇತ್ ॥

ಅದಱಿಂ ಮಾನಸರ ರೂಪುಂ ಯವ್ವನಮುಂ ತೇಜಮುಂ ಲಾವಣ್ಯಮುಂ ಸೌಭಾಗ್ಯಮುಂ ಆಯುಷ್ಯಮುಂ ಶ್ರೀಯುಂ ಸಂಪತ್ತು ವಿಭವಮುಂ ನಲ್ಮೆಯುಂ ಎಂದಿವು ಮೊದಲಾಗೊಡೆಯನಿತ್ಯಂಗಳ್ಮತ್ತಂ ಮೆಯ್ಯೊಳ್ಳಿತ್ತೆ ಎಂನೊಡೆದುವುಂ ತಾನಿಂತುಟೆ—

ಗಾಹೆ ॥ ಯೆದಂ ಸರೀರ ಮಸುಚಿಣಿಂ ಚಂಕಲಿಕಲು ಸಚಾಯನುಂಬೊಂಖಂ ।
ಅಂತೊಂ ಛಾಯಗದಿಂಠಿ ಸಕಿಂಬಿಸಭತಿದಂತು * ಂ ಝುಸುವಂ ॥
ರಸಮುಂಜ ಸೋಣಿದ ಪುಂಪಸಕಾಲೆಂಜಸೆಮೆ ಸಿಂಹಾಣಂ ।
ಬಿಡಜಾಲ ಅಂಠಿಸಂ ಕಲಚಂಮಾಣಂಠಂ ಸರೀರ ಪುರಂ ಅಂಠಿವಾಝುಣಂ ॥
ಣಾಳಿಣಿಭಂದಂ ಕಲಮುಲಭ * * * * * ರಪುಂಣಂ ಮಾಂಪವಿಲಿಂತಂ ।
ತಯುಪಡಿಭಂಣಂ ಸರೀರ ಪುರಂತಂ ಸಂತತಮುಚೊಂಖಂ ॥
ಏದಾರಿಸಿ ಸರೀರೆ ದುಂಗಂಧೆ ಕುಲನುಪೂದಿಗೆ ಯ ಚೊಂಖೇ ।
ಸದಣ ಪದಣ ಯಸಾ * * * * * ತಿಸಂಪುತಿಸೊ ॥
ಹಾಯಿ ವಸಕದಕಂ ಮಂ ಅಣುಮಾದಿ ಕಾರಗಂಣಸೆ ।
ಪದಾಯಿದುಂ ಸಂಕಾ ಅಂಣ ಛ ಜಿಣಶಾಸನೇ ॥

ಶ್ಲೋ ॥ ದುರ್ಗಂಧೇ ದುರ್ಧರೇ ದುಃಖೇ ದುಸ್ಸ್ವಭಾವೇ ಚ ನಶ್ವರೇ ।
ದುರ್ವಿಲೋಕೇ ವೃಥಾ ಕಾಯೆ ಕಿಂ ತು ಜ್ಞಾನಿ ತವಾಗ್ರಹಃ ॥
ಅಚ್ಛೇದ್ಯೋನಂತ ಸೌಖ್ಯೋಹಂ ಅತ್ಯಪೂರ್ಣ ನಿರಂಜನಂ ।
ಸರ್ವ ದುಃಖಾಕರಂ ದೇಹಂ ತ್ಯಜಾಮ್ಯೇತತ್ಪರಿಸ್ಫುಟಂ ॥

ವೃ ॥ ಜಾತಿಕ್ಷ್ಮಾಜರತೇ ಕೃತಾಂತ ಕುಪಿತಃ ಕ್ರೂರಂ ಮುದುಸ್ವಾಸದೆ ।
ವ್ಯಾಧಿಂ ವ್ಯಾಧ ಭಯಾ ದುರಂತ ದುರಿತಸ್ಫೂರ್ಜದ್ದವಾಗ್ನಿಚ್ಛದೆ ॥
ನಿಸ್ತ್ರಾನಸ್ಯ ವಿಜೇತಸೋ ದೃಢ ತೃಷಾ ದುಃಖಾಕುಳಸ್ಯಾಂಗಿನೋ ।
ಜೈನಶ್ಶಾಸನಮೇಕಮೇವ ಶರಣಂ ಜನ್ಮಾಟವೀ ಸಂಕಟೇ ॥

ಅದಱಿಂ—

ಯಾವತ್ ಸ್ವಸ್ಥಮಿದಂ ಶರೀರಮರುಜಂ ಯಾವಜ್ಜರಾ ದೂರಿತಂ ।
ಯಾವಚ್ಚೇಂದ್ರಿಯ ಶಕ್ತಿರಪ್ರತಿಹತಾ ಯಾವತ್ ಕ್ಷಯೋ ನಾಯುಷಃ ॥
ಆತ್ಮ ಶ್ರೇಯಸಿ ತಾವದೇವ ವಿದುಷಾ ಕಾರ್ಯ ಪ್ರಯತ್ನೋ ಮಹಾನ್ ।
ಯಾ ದೀಪ್ತೇ ಭವನೇತು ಕೂಪ ಘಟನಂ ಪ್ರತ್ಯುದ್ಯಮಃ ಕೀ ದೃಶಃ ॥

ಎಂದಿವು ಮೊದಲಾಗೊಡೆಯುವನೋದಿ ಯವಱರ್ಥಮುಂ ನೆರಪಿಗೆಲ್ಲಂ ಪಟ್ಟಾಣಿಸಿ ಪೇೞ್ದು ಮತ್ತಮಿಂತೆಂದಂ:—

ಕಂ ॥ ಆನಾಳ್ವೆನಾೞ್ಗೆ ಳಿವರೆನ ।
ಗೇನಾಯ್ತೆಂದಱಿದುಮುಱಿದೆ ನುಡಿದೊಂ ॥
ದೇನಾನುಮೇವಮುಳ್ಳೊಡ ।
ಮಾ ನುಡಿಯಂ ಮಱತೆಯಿಮೆಲ್ಲಮಿದು ನಿಶ್ಶಲ್ಯಂ ॥

ಗಾಹೆ || ಖಮಾಮಿಸಂವ ಜೀವಾಣಂ ಸಂವೇಜೀವಾಖಮಂತುಮೆ ।
ಮೆಂತಿಮೇ ಸಂವಭೂತೇಸು ವೇರಂ ಮಂಝುಣಕೇರಚಿ ||

ಎಂದೆಲ್ಲರುಮಂ ಕ್ಷಮೆಗೊಳಿಸಿ ನಿಶ್ಶಲ್ಯಂಗೈದು ವಿದ್ಯುದಂಗನೆಂಬ ಪಿರಿಯ ಮಗಂಗೆ ರಾಜ್ಯಪಟ್ಟಂಗಟ್ಟಿ ರಾಜ್ಯಾಭಿಷೇಕಂ ಗೆಯ್ದಾತನಂ ಪಿಡಿದು ನೀಮೆಲ್ಲಂ ಸುಖಂ ಬಾೞಿಮೆಂದು ಕಲ್ಪಿಸಿ ಯಮದಂಡಂಗಂ ಪೊೞಲ ತಳಾಱಿಕೆಯುಂ ಕೊಟ್ಟು ಮಂಗಳ ವರ್ಧನಂಗೊಂಡು ಪಟ್ಟವರ್ಧನಮನೇಱಿಸುತ್ತೆ ಪಿಂಗಡೆ ಪೆಂಡವಾಸದ ಸೂಳೆಯ ರಿರ್ಬರ್ ಪೊಱಗೇಱಿರ್ಕೆಲದೊಳಂ ಚಾಮರಂಗಳನಿಕ್ಕುತ್ತಂ ಬೆಳ್ಗೊಡೆಗಳುಂ ಪಾಳಿ ಧ್ವಜಂಗಳುಂ ತಜಿನೆ ವೞಿಯಿಗೆಗಳುಂ ಚಂದ್ರಾದಿತ್ಯರ್ಕಳುಂ ಸಿಂಹ ವ್ಯಾಘ್ರ ಮಕರ ಮತ್ಸ್ಯಂಗಳೆಂದಿವು ಮೊದಲಾಗೊಡೆಯ ರಾಜ್ಯ ಚಿಹ್ನಂಗಳುಮಂ * *
* * * * * * * * * ಗಳುಂ
ಬದ್ದವಣದ ಪಱೆಗಳುಂ ಬಾಜಿಸೆ ವಂದಿ ಮಾಗಧ ಯಾಚಕ ಪ್ರಭೃತಿಗಳ್ಗಂ ದೀನಾ ನಾಥರ್ಕಳ್ಗಂ ತುಷ್ಟಿ ದಾನಮುಂ ಕೊಡುತ್ತಂ ಸಹಸ್ರ ಕೂಟದ ಚೈತ್ಯಾಲಯಮ ನೆಯ್ದಿ ಪಟ್ಟವರ್ಧನದಿಂದಿೞಿದು ಬಸದಿಯಂ ತ್ರಿಪ್ರದಕ್ಷಿಣಂ ಗೆಯ್ದು ದೇವರಂ ಸಿವೇ ದಿಸಿ ಗುಣಧರರೆಂಬಾಚಾರ್ಯರಂ ಗುರುಭಕ್ತಿಗೆಯ್ದು ಬಂದಿಸಿ ಇಂತೆಂದಂ: ಭಟಾರಾ ಸಂಸಾರಮೆಂಬ ಸಮುದ್ರದೊಳ್ ಮುೞುಗುತ್ತಿರ್ದೆನ್ನಂ ಮುೞುಗಲೀಯದೆತ್ತಿ ಮೆನಗೆ ದೀಕ್ಷೆಯಂ ಪ್ರಸಾದಂಗೆಯ್ಯಿಮೆಂದು ನುಡಿದೊಡಂಬಡಿಸಿ ಸಾಸಿರ್ವರರಸು ಮಕ್ಕಳ್ವೆರಸು ಕಟಕ ಕಟಿಸೂತ್ರ ಕುಂಡಲಾಭರಣಾದಿಗಳುಮೆಲ್ಲಮುಂ ಕಳೆದು ಬಾಹ್ಯಾ ಭ್ಯಂತರ ಪರಿಗ್ರಹಂಗಳೆಲ್ಲಮುಂ ತೊಱೆದು ಗುಣಧರ ಭಟ್ಟಾರರ ಪಕ್ಕದೆ ತಪಂಬಟ್ಟು ಮತ್ತಂ ದೇವ ಗಣಿಕೆಯರನೆ ಪೋಲ್ವ ಸೌಂದರಿ ಮಹಾದೇವಿ ಮೊದಲಾಗೇೞ್ನೂರ್ವ ರರಸಿಯರ್ಕಳ್ ಗುಣಧರ ಭಟಾರರೆ ಗುರುಗಳಾಗಿ ತಮ್ಮತ್ತೆವಿರಪ್ಪ ಜಯಮತಿ ಕಂತಿ ಯರ್ ಕಂತಿಯರಾಗಿ ತಪಂಬಟ್ಟು ಗಿಡಿಗಿಡಿ ಜಂತ್ರ ವಿಳಿವಿಳಿ ನೇತ್ರಮಾಗಿ ಘೋರ ವೀರ ತಪಶ್ಚರಣದೊಳ್ ನೆಗೞುತ್ತಿರ್ದರ್.

ಇತ್ತ ವಿದ್ಯುಚ್ಚೋರ ಮುನಿಯುಂ ಪನ್ನೆರಡು ವರ್ಷಂಬರೆಗಂ ಗುರುಗಳನಗಲದೆ ದ್ವಾದಶಾಂಗ ಚತುರ್ದಶ ಪೂರ್ವಮಪ್ಪಾಗಮಮೆಲ್ಲಮುಂ ಕಲ್ತು ಉಗ್ರೋಗ್ರ ತಪ ಶ್ಚರಣದೊಳ್ ನೆಗೞುತ್ತಮಾಚಾರ್ಯರಾಗಿಯೈನೂರ್ವರ್ ಶಿಷ್ಯರ್ಕಳ್ ಬೆರಸು ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿ ಸುತ್ತಂ ಪೋಗಿ ಪೂರ್ವ ವಿದೇಶದೊಳ್ ಮಂದರಮೆಂಬ ನಾಡೊಳ್ ತಾಮ್ರಲಿಪ್ತಿ ಯೆಂಬ ಪೊೞಲೊಳಮದಱ ಪೊಱವೊೞಲನೆಯ್ದಿದಾಗಳ್ ಅಲ್ಲಿ ವರಾಂಗಾಯಿ ಯೆಂಬೊಳುಗ್ರ ದೇವತೆಯಱುದಿಂಗಳಱುದಿಂಗಳೆಲ್ಲಾ ಕಾಲಮುಂ ಜಾತ್ರೆಯಪ್ಪುದಾ ಜಾತ್ರೆಗೆ ನಾಡೆಯಷ್ಟಮಿಯಂದು ಬಂದು ನೆರೆದು ಜಾತ್ರೆಯಂ ಮಾಡೆ ದುರ್ಗಾ ದೇವತೆ ರಿಸಿಯರ ಬರವಂ ಗೆಂಟಱೊಳಿರ್ದು ಕಂಡಿದಿರಂ ಪೋಗಿಯಿಂತೆಂದಳೆನ್ನ ಜಾತ್ರೆ ಸಮೆವನ್ನಮೀ ಪೊೞಲಂ ಪುಗದಿರಿಮೆಂದು ವಾರಿಸಿದೊಡೆ ಶಿಷ್ಯರ್ಕಳೆಂದರ್: ನಮ್ಮ ದೇವತೆಯೇಗೆಯ್ವಪ್ಪಳ್ ಪೋಪಂ ಭಟಾರಾ ಎಂದು ಭಟಾರರನೊಡಗೊಂಡು

ದೇವತೆ ಬಾರಿಸೆ ಪೊಱಲಂ ಪೊರ್ಕು ಮತ್ತಿರುಳ್ ಪೊಱಲ ಪಡುವಣ ದೆಸೆಯ ಕೋಂಟೆಯಿಂ ಪೊಱಗಣ ದೆಸೆಯೊಳ್ ವಿದ್ಯುಚ್ಚೋರ ಭಟಾರರ್ ಪ್ರತಿಮಾಯೋಗಂ ನಿಂದೊಡೆ ದೇವತೆ ಮುಳಿದು ಪೊರಸುಗಳಸಿಪಿರಿಯವು ದಂಸಮುಸಕಂಗಳಂ (?) ವಿಗುರ್ವಿಸೆ ಮೆಯ್ಯೆಲ್ಲಮನಿರುಳ್ ನಾಲ್ಕು ಜಾವಮುಂ ತಿನೆ ನರಕ ವೇದನೆಯಿಂದಂ ಅಗ್ಗಳಮ ವೇದನೆಯುಪ್ಪಂತುಪಸರ್ಗಂಗೆಯ್ಯೆ ಅಂತಪ್ಪ ದುಃಖಮುಂ ವೇದನೆಯುಮಂ ಮನದೊಳಿಲ್ಲದಂತಿರೆ ಸೈರಿಸಿ ಆಜ್ಞಾ ವಿಜಯಮಪಾಯ ವಿಜಯ ವಿಪಾಕ ವಿಜಯ ಸಂಸ್ಥಾನ ವಿಜಯಮೆಂಬೀ ನಾಲ್ಕು ಧರ್ಮ ಧ್ಯಾನಂಗಳಂ ಜಾನಿಸಿ ಬೞಿಕ್ಕೆ ಪೃಥಕ್ತ್ವ ವಿತರ್ಕ ವಿಚಾರಮೆಂಬ ಪ್ರಥಮ ಶುಕ್ಲ ಧ್ಯಾನಂಗಳಂ ಧ್ಯಾನಿಸುತ್ತಂ ಕ್ಷಪಕ ಶ್ರೇಣಿಯನೇಱಿ ಏಕತ್ವ ವಿತರ್ಕ ವಿಚಾರಂ ಸೂಕ್ಷ್ಮ ಕ್ರಿಯಾ ಪ್ರತಿಪಾತಿ ಸಮುಚ್ಛಿನ್ನ ಕ್ರಿಯಾ ಪ್ರತಿಪಾತಿಯೆಂಬ ಶುಕ್ಲ ಧ್ಯಾನಂಗಳಂ ಜಾನಿಸಿ ಘಾತಿ ಕರ್ಮಂಗಳಂ ಕಿಡಿಸಿ ಅಂತರ್ಗತ ಕೇವಳಿಯಾಗಿ ಅಘಾತಿ ಕರ್ಮಂಗಳಂ ಕೇಳಿಸಿ ಮೋಕ್ಷಕ್ಕೆ ಪೋದರ್. ಮತ್ತೆ ಸಂನ್ಯಸನಂ ಗೆಯ್ಯುತ್ತಿರ್ದ ಭವ್ಯರ್ಕಳ್ ಪರಮ ಶುದ್ಧ ಸಹಜ ರತ್ನತ್ರಯಮನಾರಾಧಿಸುತ್ತಿರ್ದೊರ್ ವಿದ್ಯುಚ್ಚೋರ ರಿಸಿಯರಂ ಮನದೊಳ್ ಬಗೆದು ದಂಡಣೆಗಳುಮಂ ವೇದನೆಗಳುಮಂ ವ್ಯಾಧಿಗಳುಮಂ ಚತುರ್ವಿಧಮುಪ್ಪುಪಸರ್ಗಮುಂ ಪಸಿವು ನೀರಱಿಕೆಯುಂ ಶೀತೋಷ್ಣ ವಾತ ದಂಸಮುಸಕಂ ಮೊದಲಾಗೊಡೆಯವಱಿಂದಪ್ಪ ವೇದನೆಗಳುಂ ದುಃಖಗಳುಮಂ ಸೈರಿಸಿ ಪರಮ ಶುದ್ಧ ಸಹಜ ರತ್ನ ತ್ರಯಂಗಳಂ ಸಾಧಿಸಿ ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ.

---

# ದಾದು ಕವಿ

ಉತ್ತರ ಭಾರತದ ಸಂತ (ಸಾಧು) ಕವಿಗಳಲ್ಲಿ ದಾದು ಕವಿಯ ಹೆಸರು ಪ್ರಖ್ಯಾತ ವಾಗಿರುವುದು. ಅವನ ಜನ್ಮ ಕಾಲದ ವಿಷಯವಾಗಿಯೂ ಅವನ ತಾಯಿ ತಂದೆಗಳ ಹೆಸರುಗಳ ವಿಷಯವಾಗಿಯೂ ಪಂಡಿತರಲ್ಲಿ ಭಿನ್ನಾಭಿಪ್ರಾಯಗಳಿರುವುವು. ಪಂಡಿತ ಚಂಡೀಪ್ರಸಾದರ ಅಭಿಪ್ರಾಯದಂತೆ, ಅಹಮ್ಮದಾಬಾದಿನ ಒಂದು ಬ್ರಾಹ್ಮಣ ಕುಟುಂಬದಲ್ಲಿ ದಾದುವು ಹುಟ್ಟಿದನು. ಸಂವತ್ ೧೬೦೧ (ಕ್ರಿ. ಶ. ೧೫೪೪)ನೆಯ ಫಾಲ್ಗುನ ಶುದ್ಧಾಷ್ಟಮಿಯು ದಾದುವಿನ ಜನ್ಮತಿಥಿಯು; ಎಂದರೆ, ಕಬೀರನ ಮರಣಾನಂತರ ೨೬ ವರುಷಗಳ ತರುವಾಯ ದಾದುವು ಹುಟ್ಟಿ ತನ್ನ ೫೮ನೆಯ ವರುಷ ದಲ್ಲಿ (ಕ್ರಿ. ಶ. ೧೬೦೩) ತೀರಿಹೋದನು. ಅವನ ತಂದೆಯ ಹೆಸರು ಲೋದಿರಾಮ.

ದಾದುವಿನ ಬಾಲ್ಯಕಾಲದ ಜೀವನದ ಬಗ್ಗೆ ಸಾಧಾರವಾದ ಸಂಗತಿಗಳು ಸಿಕ್ಕುವುದಿಲ್ಲ. ಅಸ್ಪಷ್ಟವಾದ ಆಧಾರಗಳಿಂದ ಅವನು ನೇಕಾರನಿದ್ದನೆಂದೂ ಪಿಂಜಾರ ನಿದ್ದನೆಂದೂ ತಿಳಿದುಬರುತ್ತದೆ. ಅವನು ಕಬೀರ ಪಂಥೀಯ ವೈಷ್ಣವನಾಗಿದ್ದನು; ತನ್ನ ಹಾಡುಗಳಲ್ಲಿ, ವಚನಗಳಲ್ಲಿ, ಅನೇಕ ಸ್ಥಳಗಳಲ್ಲಿ ಕಬೀರನ ಹೆಸರನ್ನೂ ಅವನ ತತ್ತ್ವಗಳನ್ನೂ ಉಲ್ಲೇಖಿಸಿದ್ದಾನೆ. ದಾದುವಿನ ಗುರುವಿನ ಬಗ್ಗೆ ವಾದವಿರುತ್ತದೆ. ವಿಲ್ಸನ್ನರವರು ದಾದುವು ಕಬೀರನಿಂದ ೫ನೆಯವನೆಂದು ಹೇಳುತ್ತಾರೆ; ಅವನ ಗುರು ವಿನ ಹೆಸರು ಬುಧನ—(೧) ಕಬೀರ, (೨) ಕಮಾಲ, (೩) ಜಮಲ, (೪) ವಿಮಲ, (೫) ಬುಧನ, (೬) ದಾದು. ಮತ್ತೆ ಕೆಲವರು ಕಬೀರನ ಮಗನಾದ ಕಮಾಲನ ಶಿಷ್ಯನೇ ದಾದುವೆಂದು ಹೇಳುವರು. ಆದರೆ ದಾದುವು ಗುರುವಿನ ವಿಷಯವಾಗಿ ಹೇಳಿದ ವಚನದಲ್ಲಿ, ಸ್ವಯಂ ಈಶ್ವರನು ದಾದುವಿನ ತಲೆಯ ಮೇಲೆ ತನ್ನ ವರದ ಹಸ್ತವನ್ನಿಟ್ಟು ಅವನಿಗೆ ರಹಸ್ಯ ಜ್ಞಾನೋಪದೇಶವನ್ನು ಮಾಡಿದನೆಂದು ಹೇಳುತ್ತಾನೆ.

ದಾದುವಿಗೆ ೫೨ ಮಂದಿ ಶಿಷ್ಯರಿದ್ದರು. ಅವರಲ್ಲಿ ಇಪ್ಪತ್ತುಮಂದಿ ಪ್ರಖ್ಯಾತರಾ ದವರಾಗಿ ದಾದುವನ್ನನುಕರಿಸಿ ಕವಿತೆಗಳನ್ನು ಬರೆದಿದ್ದಾರೆ. ಅವರಲ್ಲಿ ಅತ್ಯಂತ ಪ್ರಖ್ಯಾತ ನಾದವನು ಸಂಸ್ಕೃತ ಪಂಡಿತನಾದ ಸುಂದರದಾಸನೆಂಬವನು. ಇವನು ಅನೇಕ ಧಾರ್ಮಿಕ, ನೈತಿಕ ವಿಷಯಗಳ ಮೇಲೆ ಬರೆದಿರುವನು. ದಾದುವು ಕಬೀರನ ಬಗ್ಗೆ, "ಕಬೀರನ ನುಡಿಗಳಲ್ಲಿ ಸತ್ಯವು ತುಂಬಿಕೊಂಡಿದೆ; ಅವುಗಳನ್ನು ಕೇಳಲಿಕ್ಕೆ ನನಗೆ ಬಹಳ ಆನಂದವಾಗುತ್ತದೆ" ಎಂದು ಹೇಳಿದ್ದರೂ, ದಾದುವಿನ ಶಿಷ್ಯರ ವಚನಾವಳಿಗಳನ್ನೆಲ್ಲ ಸೂಕ್ಷ್ಮವಾಗಿ ಅವಗಾಹಿಸಿದವರಿಂದ, ದಾದುವು ಕಬೀರನ ಪ್ರತ್ಯಕ್ಷ ಶಿಷ್ಯನಾಗಿರಲಾರ ನೆಂಬುದು ಪ್ರತೀತವಾಗುತ್ತದೆ.

ದಾದುವಿನ ಬಗ್ಗೆ ಪ್ರಚಲಿತವಾಗಿರುವ ಕೆಲವು ಸಣ್ಣ ಆಖ್ಯಾಯಿಕೆಗಳು ದಾದುವಿನ ಶೀಲದ ಮೇಲೆ ಪ್ರಕಾಶವನ್ನು ಬೀರುತ್ತವೆ. ಒಮ್ಮೆ, ದಾದುವು ಧ್ಯಾನ ಕ್ಕಾಗಿ ಒಂದು ಗವಿಯಲ್ಲಿ ಅಡಗಿಕೊಂಡು ಕುಳಿತಿದ್ದನು. ಯಾವನೋ ಒಬ್ಬನು

ಗವಿಯ ಬಾಗಿಲನ್ನು ಕಲ್ಲಿನಿಂದ ಮುಚ್ಚಿ ಒಂದು ವಾರದವರೆಗೆ ಅವನನ್ನು ಸೆರೆಯಲ್ಲಿ ಬಂಧಿಸಿದನು. ಗವಿಯ ಬಾಗಿಲು ತೆರೆದ ಬಳಿಕ ದಾದುವು ಸಿಟ್ಟುಗೊಳ್ಳದೆ, ಇಷ್ಟು ಕಾಲದವರೆಗೆ ತನ್ನನ್ನು ದೇವರ ಧ್ಯಾನದಲ್ಲಿ ಮಗ್ನವಾಗಿ ಇರಗೊಟ್ಟುದಕ್ಕಾಗಿ ಅವನ ಉಪಕಾರವನ್ನು ಮನ್ನಿಸಿ ಅವನನ್ನು ಹರಸಿದನು. ಮತ್ತೊಂದು ಸಂದರ್ಭದಲ್ಲಿ ಒಬ್ಬ ಹುಚ್ಚ ಮುಸಲ್ಮಾನನು ಅವನ ಕಪಾಳಕ್ಕೊಂದು ಏಟನ್ನು ಕೊಟ್ಟನು. ತನ್ನ ಕಪೋಲ ವೇದನೆಯನ್ನು ಲಕ್ಷಿಸದೆ, "ಅಯ್ಯೋ, ಪಾಪ! ನಿನ್ನ ಕೈಗೆ ನೋವಾಯಿತೇ?" ಎಂದು ಕೇಳಿದನಂತೆ. ಈ ಪರದುಃಖ ಕಾತರತೆಯೂ, ತನ್ನನ್ನು ಹೊಡೆದವರನ್ನು ಅನುಗ್ರಹಿಸುವ ರೀತಿಯೂ, ಕ್ಷಮಾ ಶೀಲತೆಯೂ, ತನ್ನನ್ನು ಗಲ್ಲಿಗೇರಿಸುವವರನ್ನು ಅನುಗ್ರಹಿಸುವ ಕ್ರೈಸ್ತನ ಶೀಲವನ್ನು ಹೋಲುತ್ತವೆ.

ದಾದುವು ಉತ್ತರ ಭಾರತದಲ್ಲೆಲ್ಲ ವಿಸ್ತಾರವಾಗಿ ಸಂಚರಿಸಿದ್ದನು. ಪಂಜಾಬು, ರಾಜಪುಟಾನಾದಿಗಳಲ್ಲೆಲ್ಲ ತಿರುಗಾಡುತ್ತ ಅವನು ತನ್ನ ತತ್ತ್ವೋಪದೇಶವನ್ನು ಮಾಡಿದನು. ಅವನು ತಿರುಗಾಡಿದ ಪ್ರದೇಶದ ಭಾಷೆಗಳಲ್ಲಿ ದೈವೀ ಪ್ರೇಮದ ಹಾಡುಗಳನ್ನು ಕಟ್ಟುತ್ತ ಹಾಡುವನು. ಬೇರೆಬೇರೆ ಭಾಷೆಗಳಲ್ಲಿ, ಎಂದರೆ ಗುಜರಾಥಿ, ಹಿಂದೀ, ಪಂಜಾಬಿ, ಜಯಪುರೀ, ಪರ್ಶಿಯಾ ಭಾಷೆಗಳಲ್ಲೆಲ್ಲ ಅವನ ಗೀತಗಳಿರುತ್ತವೆ. ಈ ಭಾಷೆಗಳ ಮೇಲೆಲ್ಲ ಅವನ ಆಜ್ಞಾಧಾರಕ ಶಕ್ತಿ ಇದ್ದಂತೆ ಕಂಡುಬರುತ್ತದೆ. ಸಂಸ್ಕೃತದಲ್ಲಿಯೂ ಕೂಡ ಅವನ ಗೀತಗಳಿರುವುವು. ದಾದುವು ತನ್ನ ಗೀತಗಳನ್ನು ಬರೆದಿಡಲಿಲ್ಲ. ಯಾವದೊಂದು ವಿಷಯದ ಬಗ್ಗೆ ಪ್ರಶ್ನೆಗಳನ್ನು ಕೇಳಿದಾಗ ಅವನು ಆನಂದ ಮಗ್ನನಾಗಿ ಹಾಡುವನು. ಅವನ ಶಿಷ್ಯರು ಅವನ ಶಬ್ದಗಳನ್ನು ಹಿಡಿದಿಟ್ಟಿರುವರು. ಅವುಗಳನ್ನು ಅವರು ಎರಡು ಭಾಗವಾಗಿ ವಿಂಗಡಿಸಿದ್ದಾರೆ: (೧) ನೈತಿಕ ಸೂಕ್ತಗಳು, ಧಾರ್ಮಿಕ ಸೂಕ್ತಗಳು; (೨) ಹಾಡುಗಳು—ವಚನಗಳು, ಗೀತಗಳು. ಗೀತಗಳೂ ವಚನಗಳೂ ಕೂಡಿ ೫,೦೦೦ ಇರುತ್ತವೆ.

ದಾದುವಿನ ಧರ್ಮವನ್ನೂ ತತ್ತ್ವಜ್ಞಾನವನ್ನೂ ಚರ್ಚಿಸುವುದಕ್ಕಿಂತ ಮೊದಲು ಅವನ ವಚನಾವಳಿಗಳಲ್ಲಿ ಕಂಡುಬರುವ ಉಪದೇಶದ ಸಾರವನ್ನಿಲ್ಲಿ ಕೊಡುವುದು ಅಪ್ರಾಸಂಗಿಕವಾಗಲಾರದು.—

ದಾದುವು ನುಡಿಯುತ್ತಾನೆ—"ಎಲೈ ದಾದುವೇ! ರಾಮನು ಅಗಾಧನಾಗಿರುವನು; ಅವನ ಆಕಾರ ರೂಪಗಳು ಅಜ್ಞಾತವಾಗಿರುವುವು. ಈಶ್ವರನ ಪ್ರಕೃತಿಯು ಪ್ರೇಮ ಮಯವಾಗಿರುವುದು. ಪ್ರೇಮವೇ ಅವನ ದೇಹ, ಅವನ ಇರುವಿಕೆ; ಅದುವೇ ಅವನ ರೂಪವು." ದಾದುವು ಈ ಮೇರೆಗೆ ದೇವರ ಜ್ಞಾನವಾಗುವುದಕ್ಕೆ ವ್ಯಾವಹಾರಿಕವಾದ ದಾರಿಯನ್ನು ತೋರಿಸಿದ್ದಾನೆ. "ಮನಸ್ಸನ್ನು ಅಂತರ್ಮುಖಿಯಾಗಿ ಮಾಡು; ಒಳಗಿರುವ ಆತ್ಮನನ್ನು ಸಾಕ್ಷಾತ್ಕರಿಸು. ಅಲ್ಲಿಯೇ ವಿಶ್ವಾತ್ಮನು ನೆಲೆಗೊಂಡಿರುವನು.* ನೋಡು ಅಲ್ಲಿಯೇ ಅವನನ್ನು. ನಿನ್ನ ಮನವನ್ನು ಅಲ್ಲಿಯೇ

* ತ್ವಾಮಂತರಾತ್ಮನಿ ಲಸಂತಮನಂತಮಜ್ಞಾಃ । ತೀರ್ಥೇಷು ಹಂತ ಮುದಸಾಂತಕ ಧಾವಯಂತಃ ॥
—ಜಗನ್ನಾಥ.

ನೆಲೆಗೊಳಿಸು.'' ಅಹಂಕಾರವಿರುವ ವರೆಗೆ ದ್ವೈತವಿರುವುದು. ಅಹಂಕಾರವು ಅಳಿದ ಕೂಡಲೆ ದ್ವೈತವೂ ಅಳಿದುಹೋಗುವುದು. ವೈಯಕ್ತಿಕ ಆತ್ಮನೂ ವಿಶ್ವಾತ್ಮನೂ ಕೂಡಿಯೇ ಹೃದಯದಲ್ಲಿ ವಾಸಿಸುವರು. ಆತ್ಮನಿಗೆ ಪರಮಾತ್ಮನ ದರ್ಶನವಾದೊಡನೆಯೇ ಅವನು ಅವನಲ್ಲಿ ಕರಗುವನು. ಈಶ್ವರನ ಸಾಕ್ಷಾತ್ಕಾರದಲ್ಲಿ ಕೋಟ್ಯವಧಿ ಸೂರ್ಯರ ಬೆಳಕು ಬೆಳಗುತ್ತದೆ;* ಅನಂತ ಚಂದ್ರರ ಬೆಳಕು ಮಿನುಗುವುದು; ವಿಶ್ವದೊಡೆಯನ ಪ್ರಭೆಯು ಅನಾಕಲನೀಯವಾಗಿರುವುದು.

ಈಶ್ವರನ ಸಾಕ್ಷಾತ್ಕಾರದ ಆನಂದವನ್ನು ಪ್ರಕಟಿಸಲೆಳಸುವುದು ಮೂಕನು ಮಧುರ ರುಚಿಯ ಮಾಧುರ್ಯವನ್ನು ವಿವರಿಸಿ ಹೇಳುವ ಪ್ರಯತ್ನದಂತೆ ವ್ಯರ್ಥವಾಗಿರುವುದು. ತತ್ತ್ವಜ್ಞಾನಿಗಳು ಈಶ್ವರನ ಈ ಅದ್ಭುತ ಪ್ರಕೃತಿಯ ಬಗ್ಗೆ ಉಪ್ವಾಭ್ರಾಂತರಾಗಿದ್ದಾರೆ. ದೇವರು ತನ್ನಿಂದ ಅನುಗೃಹೀತರಾದ ಕೆಲವರಿಗೇ ಪ್ರಸನ್ನನಾಗುವನು. ಐದನೆಯ ವಚನದಲ್ಲಿ ದಾದುವು ಮಾನಸವನ್ನು ಕೇಂದ್ರೀಕರಿಸುವ ಬಗ್ಗೆ ಕೆಲವು ವ್ಯಾವಹಾರಿಕ ಸೂಚನೆಗಳನ್ನು ಮಾಡಿರುವನು.—''ದೇವರೊಬ್ಬನು ನಿಜವಾಗಿರುವನೆಂದು ನಂಬು; ಎಂದರೆ, ಉಳಿದುದೆಲ್ಲ ಮಿಥ್ಯೆಯಾಗುವುದು. ಈ ಸತ್ಯವನ್ನು ತಿಳಿದು ನಿನ್ನ ಮನಸ್ಸನ್ನು ಅವಿಚ್ಛಿನ್ನವಾಗಿ ನಿಜತ್ವದ ಕಡೆಗೆ ತಿರುಗಿಸು. ನಿನ್ನ ಅಂತರದಲ್ಲಿಯೇ ದೇವರಿರುವುದನ್ನು ತಿಳಿದು ಮನವು ಬಹಿಷ್ಕರವಾಗದಂತೆ ಸಂಯಮಿಸು. ಅಂತರಂಗದಲ್ಲಿ ಸ್ಫುರಿಸುವವನಲ್ಲಿಯೇ ನಿನ್ನ ಮನಸ್ಸು ಸ್ಥಿರೀಕರಿಸಲಿ; ಅವನ ವೈಭವವನ್ನು ಕುರಿತು ಹಾಡು. ಬಳಿಕ, ಮನವು ಈಶ್ವರನ ಮುಂದೆ ಕುಣಿಯತೊಡಗುವುದು. ಅವಿಚ್ಛಿನ್ನವಾಗಿ ಅಂತರಾತ್ಮನಲ್ಲಿ ನೀನು ನಿಲ್ಲಿಸುವುದರಿಂದಲೇ ಕಡೆಗೆ ನಿನಗೆ ಅವನ ಸಾಕ್ಷಾತ್ಕಾರವಾಗುವುದು.''

ಮಾಯೆಯ ಬಗ್ಗೆ ದಾದುವು ಹೇಳುವುದೇನೆಂದರೆ:—''ಜಗತ್ತು ಮಿಥ್ಯೆಯಾಗಿರುವುದು. ಸಂಸಾರದಿಂದ ವಿರಾಗವನ್ನು ಹುಟ್ಟಿಸುವುದಕ್ಕಾಗಿ ಮಾಯೆಯು ಮಾನವರನ್ನು ಎಚ್ಚರಿಸುವುದು; ದೇವನಲ್ಲಿ ಮನವನ್ನು ಸ್ಥಿರವಾಗಿರಲು ಬೋಧಿಸುವುದು. ದೇವನೊಬ್ಬನೇ ಸತ್ಯಸ್ವರೂಪನು. ಸಾಮಾನ್ಯವಾದ ಕಲ್ಲಿನ ಸ್ಪರ್ಶದಿಂದ ಕಬ್ಬಿಣವು ಬಂಗಾರವಾಗಲಾರದು; ಸ್ಪರ್ಶಮಣಿಗೇ ಅದನ್ನು ಮುಟ್ಟಿಸಿದರೆ ಬಂಗಾರವಾಗುತ್ತದೆ. ಜಗವು ವೃಥಾ ಇತರ ದೇವತೆಗಳನ್ನು ಪೂಜಿಸಿ ವಂಚಿತವಾಗುತ್ತದೆ; ಹೃದಯದಲ್ಲಿರುವ ರಾಮನನ್ನು ಮರೆಯುತ್ತದೆ. ಕಲ್ಲನ್ನು ಸೂರ್ಯನೆಂದು ಕಲ್ಪಿಸಿದರೆ ಅದರಿಂದ ಕತ್ತಲೆಯು ಅಳಿಯಲಾರದು. ಅದರಂತೆ ನಮ್ಮ ಅಜ್ಞಾನವು ನಿಜವಾದ ಜ್ಞಾನೋದಯವಾಗದೆ ಅಳಿಯಲಾರದು. ಜನರು ಕಲ್ಲಿನ ಮೂರ್ತಿಗಳನ್ನು

* ಉಪನಿಷತ್ತು ಹೀಗೆ ಹೇಳುತ್ತದೆ:—''ನ ತತ್ರ ಸೂರ್ಯೋ ಭಾತಿ ನ ಚಂದ್ರ ತಾರಕಂ |
ನೇಮಾ ವಿದ್ಯುತೋ ಭಾಂತಿ ಕುತೋಯಮಗ್ನಿಃ ||

ಅಲ್ಲಿ (ಆತ್ಮನ ಮುಂದೆ) ಸೂರ್ಯ ಚಂದ್ರರೂ ನಕ್ಷತ್ರಗಳೂ ಬೆಳಗಲಾರವು; ಆತ್ಮನ ಬೆಳಕಿನ ಮುಂದೆ ವಿದ್ಯುತ್ತುಗಳೂ ಹೊಳೆಯಲಾರವು; ಅಗ್ನಿಯ ಪಾಡೇನು?

ಮಾಡಿ ಅವುಗಳನ್ನು ಸೃಷ್ಟಿಕರ್ತನೆಂದು ಕರೆಯುತ್ತಾರೆ.* ಅವರು ಸತ್ಯವನ್ನು ಕಾಣದೆ ಮಾಯಾ ಸಾಗರದಲ್ಲಿ ಮುಳುಗಿಹೋಗುತ್ತಾರೆ.

"ನಮ್ಮ ಹೃದಯದಲ್ಲಿ ದೇವರು ವಾಸಿಸುತ್ತಿರಲು, ತೀರ್ಥ ಸ್ಥಾನಗಳ ಯಾತ್ರೆಯು ಪ್ರಯೋಜನಕಾರಿಯಾಗಲಾರದು. ನೀವು ದೇವರನ್ನು ಕಾಣಲು ಬಯಸುತ್ತಿದ್ದರೆ ದ್ವೈತ ಭಾವನೆಯನ್ನು ಬದಿಗಿರಿಸಿ ಪರಿಪೂರ್ಣ ಭಕ್ತಿಯಿಂದ ನಿಮ್ಮ ಹೃದಯದಲ್ಲಿರುವ ಅಂತರಾತ್ಮನನ್ನು ಪೂಜಿಸಿರಿ."

ಮಧ್ಯ ಕಾಲದ ಹಿಂದೂ ಧರ್ಮದ ಭಕ್ತಿ ಮಾರ್ಗಕ್ಕೆ ದಾದುವು ಸಂಬಂಧಪಟ್ಟವನಾಗಿದ್ದನು. ೧೬ನೆಯ ಶತಕದ ಉತ್ತರಾರ್ಧದಲ್ಲಿ ಅವನ ತರುವಾಯ ಆಗಿಹೋದ ನಾನಕ, ಸೂರದಾಸರಂತೆಯೂ, ಅವನ ಸಮಕಾಲಿಕನಾದ ತುಲಸೀದಾಸನಂತೆಯೂ (೧೫೪೪–೧೬೦೩) ದಾದುವು 'ಮಿಸ್ಟಿಕ್' (ತತ್ತ್ವದರ್ಶಿ) ಕವಿಯಾಗಿದ್ದನು. ಇವರೆಲ್ಲರೂ ದೈವೀ ಪ್ರೇಮವನ್ನು ಉಪದೇಶಿಸಿದರು. ಸೂರದಾಸ, ಮೀರಾಬಾಯಿ, ತುಲಸೀದಾಸರು ರಾಮ ಕೃಷ್ಣರನ್ನು ದೇವರ ಅವತಾರವೆಂದು ನಂಬಿರುವರು. ಇವರ ಉಪದೇಶಗಳೂ ವಿಚಾರಗಳೂ ಪುರಾಣ ಮತವಾದಿಗಳ ಸಂಪ್ರದಾಯಗಳಲ್ಲಿ ಹಿಂದೂ ಶಾಸ್ತ್ರಗಳಲ್ಲಿ ಅಡಕವಾಗಿರುವುವು. ಕಬೀರ, ನಾನಕ, ದಾದುಗಳ ಕಥೆ ಸ್ವಲ್ಪ ಭಿನ್ನವಾಗಿರುವುದು. ಇವರುಗಳು ಹಿಂದೂಗಳ ಪರಮಾರ್ಥ ಜ್ಞಾನದ, ಅಧ್ಯಾತ್ಮ ಜ್ಞಾನದ ತತ್ತ್ವಗಳನ್ನು ಅಂಗೀಕರಿಸಿದರೂ, ದೇವರ ಸಂಬಂಧವಾಗಿ ಇವರ ಭಾವನೆಗಳು ಆತ್ಮನ ಬಗ್ಗೆ, ಭಕ್ತಿಯ ಬಗ್ಗೆ ಮಾನವನ ಹೃದಯದಲ್ಲಿರುವ ಅಂತರಾತ್ಮನ ಪ್ರೇರಣೆಯಿಂದ ಜನಿಸಿದಂಥವು. ಅಂತರಂಗದ ಸಾಕ್ಷಿಯು ಇವರಿಗೆ ಬಲವಾದುದು. ಹೃದಯದ ಪ್ರಗಾಢ ಸ್ನೇಹ, ಪರಮಾತ್ಮನ ದರ್ಶನದ ಬಗ್ಗೆ ಹೃದಯದ ತೀವ್ರವಾದ ಬಳಲುವಿಕೆಗಳು—ಇವರ ಧರ್ಮದ ಮೂಲ ಭಿತ್ತಿಯು. ಇತರ ದೇಶದ ತಾತ್ತ್ವಿಕ ಕವಿಗಳು (ಮಿಸ್ಟಿಕ್ ಪೊಯೆಟ್ಸ್) ಕರ್ಮ ಕಾಂಡವನ್ನೂ, ಪೂಜಾ ಪುರಸ್ಕಾರ ಪದ್ಧತಿಯನ್ನೂ, ಪಂಥ ವಾದವನ್ನೂ ಕಟುವಾಗಿ ಟೀಕಿಸುತ್ತ ತಮ್ಮ ಕಾಲದ ಕಪಟ ಧರ್ಮಪಟುಗಳನ್ನು ಜರೆದಂತೆ, ನಮ್ಮ ದೇಶದ ಈ ತಾತ್ತ್ವಿಕ ಕವಿಗಳೂ ಇವುಗಳನ್ನು ಜರೆದು ವಿಶ್ವ ಪ್ರೇಮವನ್ನು ಉಪದೇಶಿಸಿದರು. ಇವರ ಗೀತಗಳು ಒಮ್ಮೆಯೇ ಹೊರನುಗ್ಗಿದ ಪರಮಾನಂದದ ಪ್ರೇಮದ ಗೀತಗಳ ಬುಗ್ಗೆಗಳು. ಮಹತ್ತಾದ ಆಧ್ಯಾತ್ಮಿಕ ಸತ್ಯವನ್ನವರು ಲೋಕ ಪ್ರಿಯವಾದ ಜನರಾಡುವ ಭಾಷೆಯಲ್ಲಿ ಸಾಮಾನ್ಯ ಉಪಮೆಗಳಿಂದ ವಿವರಿಸಿ ಹೇಳುವರು. ಅವರು ಕಂಡ ಈಶ್ವರೀಯ ದೃಶ್ಯವನ್ನು (ಕನಸನ್ನು)—ಮಾನವ ಸೃಷ್ಟಿಯ ಗಭೀರವಾದ ಆಧ್ಯಾತ್ಮಿಕ ಸತ್ಯವನ್ನು—ಸರಳವಾದ, ಶಕ್ತಿಮತ್ತಾದ

---

* ಕಬೀರನೂ ತನ್ನದೊಂದು ಕವಿತೆಯಲ್ಲಿ ಹೀಗೆಯೇ ಹೇಳಿದ್ದಾನೆ.—

"The images are all lifeless; they cannot speak, I know; for, I have cried aloud to them. The Puran and the Kuran are mere words lifting up the curtain I have seen."

"ಮೂರ್ತಿಗಳೆಲ್ಲ ಜೀವಂತವಾಗಿರುವುದಿಲ್ಲ; ಅವು ಮಾತನಾಡಲಾರವು, ನನಗೆ ಗೊತ್ತಿದೆ. ನಾನು ಅವುಗಳ ಮುಂದೆ ಕೂಗಿಕೊಂಡಿದ್ದೇನೆ. ಪುರಾಣ ಕುರಾಣಗಳು ಮಾತಿನರಮನೆಯು. ನಾನು ಪರದೆಯನ್ನು ಬದಿಗೆ ಸರಿಸಿ ನೋಡಿದ್ದೇನೆ." —ಕಬೀರ

ಹಿಡಿಸುಡಿಗಳಿಂದ ನುಡಿಯುವರು. ಶಾಶ್ವತ ಜಗತ್ತಿನ ಬಗ್ಗೆ ನುಡಿದ ನುಡಿಯಲ್ಲಿ ದಾದುವು ನುಡಿದಿದ್ದಾನೆ:—"ಸತತವಾಗಿ ಅನುಚಿಂತನವನ್ನು ಮಾಡುವವರಿಗೆ ಜಗತ್ತು ದೈವೀ ಸತ್ಯದಿಂದ ತುಂಬಿಕೊಂಡಿರುವುದು ಕಂಡುಬರುವುದು."

ದಾದುವಿನ ವಚನಗಳನ್ನು ಪುನಃ ಪುನಃ ಓದುವವರಿಗೆ ನೂತನವಾದ ಆನಂದವೂ ಪ್ರಕಾಶಕ ಶಕ್ತಿಯೂ ಅವುಗಳಲ್ಲಿ ತುಂಬಿಕೊಂಡಿರುವುದು ಕಂಡುಬರುವುದು. ಅವುಗಳಿಂದ ಅವರು ಈಶ್ವರನ ಮಾರ್ಗಕ್ಕೆ ಒಯ್ಯಲ್ಪಡುತ್ತಾರೆ. ದಾದುವಿನ ಶಬ್ದಗಳ ಸ್ವಾರಸ್ಯವನ್ನು ಭಾಷಾಂತರದಲ್ಲಿ ತರುವುದು ಶಕ್ಯವಲ್ಲ. ಭಾಷಾಂತರದ ಗತಿಯಲ್ಲಿ ಅವುಗಳ ಸೌಗಂಧ್ಯವು ಗಾಳಿಯಲ್ಲಿ ಹಾರಿಹೋಗುತ್ತದೆ. ಅವುಗಳ ಸ್ವರ್ಗೀಯ ಸ್ವರ ಮಾಧುರ್ಯವು ಭಾಷಾಂತರದಲ್ಲಿ ತನ್ನ ಮಾಂತ್ರಿಕ ಪರಿಣಾಮದ ಶಕ್ತಿಯನ್ನು ಕಳೆದು ಕೊಳ್ಳುವುದು.

ಈ ಕಾಲದ ಅರ್ಥದಿಂದ ದಾದುವು ಸುಶಿಕ್ಷಿತನಾಗಿರದಿದ್ದರೂ ಅವನ ಅಂತ ರ್ಜ್ಞಾನವೂ, ಆಧ್ಯಾತ್ಮಿಕ ಭಾವನೆಗಳ ಪ್ರಕಟನಾ ಶಕ್ತಿಯೂ ಮಹತ್ತರವಾಗಿದ್ದುವು.

ದಾದುವಿನ ಭಾಷೆ ಸರಳವಾದುದು, ಸುಗಮವಾದುದು, ಶೈಲಿ ಮನೆತನದ್ದು (Homely). ಅವನ ಶಬ್ದಗಳಲ್ಲಿ ವಿಲಕ್ಷಣವಾದ ಸ್ವರ ಮಾಧುರ್ಯವಿರುವುದು. ಅವು ಹೃದಯದ ಗೂಢ ಗೂಢವಾದ ಅಂತಃಪ್ರದೇಶಕ್ಕೆ ತಾಕಿ, ಅಲ್ಲಿ ಕಂಪನ ತರಂಗಗಳನ್ನೆಬ್ಬಿಸುವುವು; ಅಲ್ಲಿ ಅಪರಿಮಿತವಾದ ಆನಂದವನ್ನೂ ಸಮಾಧಾನವನ್ನೂ ಹುಟ್ಟಿಸುವುವು.

ಈಶ್ವರನ ರಾಜ್ಯದಲ್ಲಿ ಪರಮಾನಂದವಿರುವುದು. ಅಲ್ಲಿ ದ್ವಂದ್ವಗಳ ಸುಳಿದಾಟ ವಿಲ್ಲ, ಅಲ್ಲಿ ದುಃಖವಿಲ್ಲ, ಕಷ್ಟಸಹಿಷ್ಣುತೆಯಿಲ್ಲ, ಕಾಮವಿಲ್ಲ, ದ್ವೇಷವಿಲ್ಲ, ಸಂಶಯ ವಿಲ್ಲ, ಅಹಂಕಾರವಿಲ್ಲ. ಅಲ್ಲಿ ಪ್ರೇಮ ಮದಿರಾ ಮತ್ತಳಾದ ಪ್ರಿಯೆಯು ವಲ್ಲಭನ ಮಹಿಮೆಯ ಹಾಡುಗಳನ್ನು ಕಟ್ಟಿ ಸದಾ ಹಾಡುವಳು. ಅಲ್ಲಿ ಪ್ರಿಯಾ ಪ್ರಿಯರು ಯಾವಾಗಲೂ ಆನಂದದಿಂದ ನರ್ತಿಸುವರು. ಅಲ್ಲಿ ಯಾವಾಗಲೂ ವಲ್ಲಭಾರಾಧನೆಯು ನಡೆಯುವುದು. ಅಲ್ಲಿ ಯಾವಾಗಲೂ ದೇವನ ಸರ್ವೋತ್ಕೃಷ್ಟವಾದ ನುಡಿಗಳನ್ನು ಕೇಳುವೆವು. ಅಲ್ಲಿಯ ಗಿಡಗಳು ಅಮರತ್ವದ ಫಲವನ್ನು ಧರಿಸುವುವು. ಭಕ್ತನು ಕಡೆಗೆ ಅಲ್ಲಿ ತನ್ನ ವಲ್ಲಭನಲ್ಲಿ ಐಕ್ಯವನ್ನು ಹೊಂದುವನು.

ಮುಖ್ಯವಾಗಿ, ದಾದುವಿನ ತತ್ತ್ವಜ್ಞಾನವು ವ್ಯಾವಹಾರಿಕವಾಗಿದೆ. ಅವನು ಮೂಲ ಸೂತ್ರಭೂತ ವಾಕ್ಯಗಳ ಅರ್ಥ ವಿವರಣೆಯ ಗೊಂದಲದಲ್ಲಿ, ಅಧ್ಯಾತ್ಮ ವಿದ್ಯೆಯ ಚರ್ಚೆಯಲ್ಲಿ ಬೀಳುವುದಿಲ್ಲ; ದೇವರ ಹಾದಿಯನ್ನು ಹಿಡಿಯಲಿಕ್ಕೆ ವ್ಯಾವಹಾರಿಕ ಸೂಚನೆಗಳನ್ನು ಮಾಡುವನು. ಅವನ ಮುಖ್ಯವಾದ, ಆವಶ್ಯಕವಾದ ಹೇಳಿಕೆಯು ಮನಸ್ಸನ್ನು ಶುದ್ಧೀಕರಿಸಿ ದೇವರಲ್ಲಿ ಸ್ಥಿರೀಕರಿಸಿಡುವುದು, ಪರೋಪಕಾರ ರತನಾಗಿ ಮಾಡುವುದು. ದೈವೀ ಪ್ರೇಮದ ವ್ಯವಸಾಯ ಮಾಡುವಲ್ಲಿಯೇ ಹೆಚ್ಚು ಆವೇಶವನ್ನು ದಾದುವು ಕೊಟ್ಟಿರುವನು. ಚಾತಕವು ಮಳೆಯ ಹನಿಗಳ ಬಗ್ಗೆ ಹಂಬಲಿಸುವಂತೆ,

ಭಕ್ತನು ದೇವ ದರ್ಶನಕ್ಕಾಗಿ ತೊಳಲಬೇಕು, ಬಳಲಬೇಕು. ನೀರಿಲ್ಲದೆ ಮೀನು ಕೊರಗುವಂತೆ, ಭಕ್ತನು ಹರಿಗಾಗಿ ಹಲುಬಬೇಕು.

ದೇವ ಭಕ್ತನು ಸೌಮ್ಯನಾಗಿರಬೇಕು; ಅವನು ಅಹಂಭಾವನೆಯಿಂದ ಮುಕ್ತ ನಾಗಿರಬೇಕು; ಮನೋವಿಕಾರಗಳನ್ನು ಅಳಿಯಬೇಕು; ನಿಶ್ಚಿಂತನಾಗಿರಬೇಕು. ಅವನು ತನ್ನ ಚಿತ್ತವನ್ನು ಈಶ್ವರನಲ್ಲಿ ಕೇಂದ್ರೀಕರಿಸಬೇಕು.

ಇದಕ್ಕಾಗಿ ಸಂಸಾರವನ್ನು ಬಿಟ್ಟು ವನಕ್ಕೆ ತೆರಳುವ ಆವಶ್ಯಕತೆಯಿಲ್ಲ. ಇಷ್ಟೇ ಅಲ್ಲ, ಅದನ್ನು ದಾದುವು ಕಠಿಣ ಶಬ್ದಗಳಿಂದ ಹಳಿದಿದ್ದಾನೆ. ನೀವು ಮನೆಯಲ್ಲಿಯೇ ವಾಸಿಸಿರಿ, ಅರಣ್ಯಕ್ಕೇ ತೆರಳಿರಿ, ಹರಿಯ ನಿಜವಾದ ಪೂಜೆಯು ಇರುವುದು ಹೃದಯ ದಲ್ಲಿ. ಹೋಮ ಹವನಗಳು, ಯಜ್ಞ ಯಾಗಗಳು, ತೀರ್ಥಾಟನಗಳು, ತಪಶ್ಚರ್ಯ ಗಳು ಮಾನವನನ್ನು ಅಹಂಕಾರಕ್ಕೆ ಎಳೆದೊಯ್ಯುವುವು. ದೇವರನ್ನು ದೊರೆಯಿಸುವ ಉತ್ತಮವಾದ ಹಾದಿಯು ಅವನನ್ನು ಹೃದಯದಲ್ಲಿಯೇ ಮಥಿಸಿ ಕಡೆಗೆ ತೆಗೆದು ಶಾಂತತೆಯಿಂದ ಪೂಜಿಸಬೇಕು.

ವಿಶ್ವವು ಓಂಕಾರದಿಂದ (Eternal eye) ಹುಟ್ಟಿತೆಂಬ ಪುರಾಣ ಮತ ವಾದಿಗಳ ತತ್ತ್ವವನ್ನು ದಾದುವು ಒಪ್ಪಿಕೊಂಡಿದ್ದಾನೆ; ಕಡೆಗೆ ವಿಶ್ವವು ಓಂಕಾರದಲ್ಲಿಯೇ ಲೀನವಾಗುವುದೆಂಬುದಕ್ಕೂ ಒಡಂಬಡುವನು. ಈ ದೇಹವು ವಾದನದ ಸಾಧನದಂತೆ (ಕೊಳಲಿನಂತೆ) ಇರುವುದು. ಅದು ಓಂಕಾರ ಧ್ವನಿಯನ್ನು ಮಾಡುವುದು.* ಕಡೆಯ ವರೆಗೂ ಬಾಳುವ ಈ ಕಣ್ಣು (ಓಂಕಾರ) ಐದು ಇಂದ್ರಿಯಗಳನ್ನು ಹುಟ್ಟಿಸುವುದು. ಅವುಗಳಿಂದ ಇದು ಕಂಪನವನ್ನು ಹೊಂದುವುದು. ಎಂತಹ ಅದ್ಭುತವಾದ ಸಂಗೀತ ವನ್ನು ಈಶ್ವರನು ಹುಟ್ಟಿಸಿರುವನು! ಈ ಶಾಶ್ವತ ಶಬ್ದವಾದ ಓಂಕಾರವನ್ನು ಜಪಿ ಸುತ್ತ, ಒಳ್ಳೆಯ ಕೆಲಸಗಳನ್ನು ಮಾಡುತ್ತ ಹೃದಯದಲ್ಲಿರುವ ರಾಮನನ್ನು ಪೂಜಿ ಸಿದರೆ ಮಾನವನು ಮಾಯೆಯ ಕಡಲನ್ನು ದಾಟುವನೆಂದು ದಾದುವು ಹೇಳುತ್ತಾನೆ.

ಇದೇ ಜನ್ಮದಲ್ಲಿ, ಪರಮಾತ್ಮನಲ್ಲಿ—ಆ ತೇಜಸ್ಸಿನಲ್ಲಿ—ತಲ್ಲೀನನಾಗಿ ಹೋಗು ವುದೇ ಮುಕ್ತಿಯೆಂದು ದಾದುವು ಹೇಳುತ್ತಾನೆ; ಮರಣದನಂತರ ಉಂಟಾಗುವ ಮುಕ್ತಿಯಲ್ಲಿ ಅವನ ನಂಬುಗೆ ಇಲ್ಲ. ಭಕ್ತನು ತನ್ನ ವಲ್ಲಭನಲ್ಲಿ ಐಕ್ಯವಾಗಿ ಹೋಗು ವುದೇ ದಾದುವಿನ ಮುಕ್ತಿಯ ಕಲ್ಪನೆ. ಮುಖ್ಯವಾಗಿ, ದೇವನೂ ದೇವ ಭಕ್ತನೂ ಒಂದೇ ಆಗಿರುವುದರಿಂದ ವ್ಯಕ್ತಿ ಭಾವನೆ ಮರೆಯಾಗಿ ಈಶ್ವರನಲ್ಲಿ ಸಂಪೂರ್ಣ ಮಗ್ನನಾಗಿ ಹೋಗುವುದೇ ದಾದುವಿನ ಮೋಕ್ಷ.

ದಾದುವಿನ ಅಭಿಪ್ರಾಯದಂತೆ, ಮನಸ್ಸು ಅನೇಕ ಆಕಾರಗಳನ್ನೂ ಅನುಭವ ಗಳನ್ನೂ ಸುಖ ದುಃಖಗಳ ಭಾವನೆಗಳನ್ನೂ ತನ್ನ ಒಳ್ಳೆಯ, ಕೆಟ್ಟ ಗುಣ ಧರ್ಮಗಳಿಗನು

* ಆಧುನಿಕ ಕವಿಗಳಾದ ರವೀಂದ್ರನಾಥರು ಮಾನವೀಯ ದೇಹವನ್ನು ಗೀತಾಂಜಲಿಯಲ್ಲಿ ಕೊಳ ಲಿಗೆ ಹೋಲಿಸಿದ್ದಾರೆ.—"ನೀನು ನನ್ನನ್ನು ಅನಂತನನ್ನಾಗಿ ಮಾಡಿದೆ; ಹೀಗಿದೆ ನಿನ್ನ ಮನೋರಥ. ಈ ಕ್ಷಣಭಂಗುರವಾದ ಪಾತ್ರವನ್ನು (ದೇಹವನ್ನು) ಪುನಃಪುನಃ ಬರಿದಾಗಿ ಮಾಡುವೆ, ಮತ್ತೆ ನೂತನ ಜೀವನ ದಿಂದ ತುಂಬುವೆ. ಈ ಸಣ್ಣ ಬಿದಿರಿನ ಕೊಳವೆಯನ್ನು (ದೇಹವನ್ನು) ಬನ್ನಗಳ ಮೇಲೆ ಕಂದರಗಳಲ್ಲಿ ಒಯ್ಯುತ್ತ ಊದಿದೆ. ಅದು ಯಾವಾಗಲೂ ನೂತನವಾಗಿರುವ ಸಂಗೀತಗಳನ್ನು ಹಾಡಿತು."

ಸಾರವಾಗಿ ಧರಿಸುವುದು. ಮಾನವನು ತನ್ನ ಕರ್ಮಕ್ಕನುಸಾರವಾಗಿ ನಾಯಿ, ನರಿ, ಸೂಕರ, ಹುಲಿ, ಹಾವು, ಯಾವ ರೂಪವನ್ನು (ಜನ್ಮವನ್ನು) ಹೊಂದಿದರೂ, ಮನೋಧರ್ಮಕ್ಕನುಸರಿಸಿದ ಮನಸ್ಸಿನ ದೃಶ್ಯರೂಪಗಳವು. ಎಲ್ಲಿಯ ವರೆಗೆ ಮನವು ತನ್ನ ಗುಣ ಧರ್ಮಗಳಿಗೆ ಅಂಕಿತವಾಗಿರುವುದೋ ಅಲ್ಲಿಯ ವರೆಗೆ ಪುನರ್ಜನ್ಮದ ಚಕ್ರವು ಸಾಗತಕ್ಕದ್ದೇ. ಮನಸ್ಸಿನ ಜನ್ಮಾಂತರವು ಅದನ್ನು ದೇವರಲ್ಲಿ ಸ್ಥಿರಗೊಳಿಸಿದಾಗಲೇ ನಿಲ್ಲುವುದು. ಜನ್ಮಾಂತರದ ಈ ಉಪಪಾತಿಯು ದಾದುವಿಗೆ ವಿಶಿಷ್ಟವಾಗಿದ್ದಿತು; ಯದ್ಯಪಿ, ಇದರ ಬಗ್ಗೆ ಪುರಾತನ ಹಿಂದೂಗಳ ಮತಕ್ಕೆ ಇದು ವಿರೋಧಿಯಾಗಿಲ್ಲ.

ಈ ಜನ್ಮಾಂತರದ ಕಥೆ ಕರ್ಮ ತತ್ತ್ವಕ್ಕೆ ಸಂಬಂಧಪಟ್ಟಿದೆ. ಚಿತ್ತಶುದ್ಧಿ ಗಾಗಿಯೇ ಒಳ್ಳೆಯ ಕರ್ಮಗಳನ್ನು ಮಾಡಬೇಕೆಂದು ದಾದುವು ಒತ್ತಿ ಹೇಳುತ್ತಾನೆ. ಪರೋಪಕಾರಕ ಕಾರ್ಯಗಳನ್ನು ದಾದುವು ಚೆನ್ನಾಗಿ ಹೊಗಳಿದ್ದಾನೆ. ಅನಾಸಕ್ತ ಕರ್ಮವು ಅವನ ಧರ್ಮದ ಮುಖ್ಯ ಸ್ತಂಭವಾಗಿದೆ.* ದಾದುವು ತನ್ನ ಇಡೀ ಆಯುಷ್ಯ ವನ್ನು ಮಾನವ ಜಾತಿಯನ್ನು ಸೇವಿಸುತ್ತ ಕಳೆದು ಸ್ವೋದಾಹರಣದಿಂದ ಸಿದ್ಧಪಡಿ ಸಿದನು. ಅವನು ಹಿಂದೂಗಳನ್ನೂ ಮುಸಲ್ಮಾನರನ್ನೂ ಸಮಾನವಾಗಿ ಪ್ರೀತಿಸಿದನು. ಅವರೆಲ್ಲರೂ ಪ್ರಿಯ ರಾಮನ ಸೃಷ್ಟಿಯಾಗಿರುವರೆಂದು ಅವನು ಹೇಳುವನು. ಸಂಸಾರ ವನ್ನು ಬಿಡದೆ, ಉಚ್ಚವಾದ ಆಧ್ಯಾತ್ಮಿಕ ಸತ್ಯವನ್ನು ಮಾನವನು ಅನುಭವಿಸಬಹು ದೆಂದು ಅವನು ತೋರಿಸಿದನು.

ದಾದುವು ಹೊಸ ಧರ್ಮವನ್ನು ಸ್ಥಾಪಿಸಲು ವಿರೋಧಿಯಾಗಿದ್ದನು. ಇದ್ದ ಧರ್ಮಗಳನ್ನು ಶುದ್ಧಗೊಳಿಸುವುದೇ ಅವನ ಉದ್ದಿಷ್ಟ ಕಾರ್ಯವಾಗಿದ್ದಿತು. ಅವನ ಶಿಷ್ಯರೂ ಮುಂದೆ ಬಂದವರೂ, ಯದ್ಯಪಿ ದಾದು ಪಂಥಿಗಳೆಂದು ಕರೆಯಿಸಿಕೊಂಡ ದ್ದೇನೋ ನಿಜ. ದಾದುವು ಧರ್ಮದ ಸಾರವನ್ನು ಹೀಗೆ ನುಡಿದಿರುವನು:— "ದ್ವೈತದಿಂದ ಸ್ವತಂತ್ರವಾದ ಮಾರ್ಗವನ್ನು ನಾನು ಅನುಸರಿಸುವೆನು. ನಿರಾ ಕಾರ ವಸ್ತುವಿನಲ್ಲಿ ನನ್ನ ನಂಬುಗೆಯಿರುವುದು. ನಿನ್ನ ಹೃದಯದಲ್ಲಿ ಇಚ್ಛೆಯನ್ನು ಪೋಷಿಸಬೇಡ. ಪರಬ್ರಹ್ಮ ವಸ್ತುವನ್ನು ಪ್ರೀತಿಸು." ಮತ್ತೊಂದು ಸೂಕ್ತದಲ್ಲಿ, ದೇವರು ದಾದುವಿಗೆ ನಿಜವಾದ ಧರ್ಮದ ತತ್ತ್ವವನ್ನು ತೆರೆದಿಟ್ಟಿರುವನು—"ಸ್ವಾರ್ಥ ವನ್ನು ಅಳಿಸಿಬಿಡು; ಹರಿಯನ್ನು ಪೂಜಿಸು; ದೇಹವನ್ನೂ ಮನಸ್ಸನ್ನೂ ಶುದ್ಧೀ ಕರಿಸು; ನಿನ್ನಂತೆ ಪರರನ್ನು ಪ್ರೀತಿಸು. ಎಲೈ ದಾದುವೇ! ಇದುವೆ ನಿಜವಾದ ಧರ್ಮದ ತಿರುಳು."

ರಾಜಕಾರಣದ ಗೊಂದಲದ ತ್ರಾಸ ದಾಯಕ ಕಾಲದಲ್ಲಿ, ಧರ್ಮ ಹಿಂಸೆಯ ಕಾಲದಲ್ಲಿ, ದಾದುವು ಹುಟ್ಟಿದ್ದರೂ, ವಿಶ್ವ ಪ್ರೇಮದ ಅಮರ ತತ್ತ್ವವನ್ನು ಎಲ್ಲರಿಗೂ

* ಫಲಾಭಿಸಂಧಿಯನ್ನು ಬಿಟ್ಟು ಯಾವಾಗಲೂ ಜಗದುಪಕಾರಕವಾದ ಒಳ್ಳೆಯ ಕರ್ಮಗಳನ್ನು ಮಾಡುತ್ತಿರಬೇಕೆಂದೇ ಗೀತೆಯ ತಾತ್ಪರ್ಯವಿರುವುದು. ಇದರ ವಿಸ್ತೃತ ವಿವೇಚನೆಯನ್ನು ಲೋಕ ಮಾನ್ಯರ ಗೀತಾ ರಹಸ್ಯದಲ್ಲಿ ನೋಡಬಹುದು. "ಕಾಯಕದಿಂದಲೇ ಕೈಲಾಸ" ಎಂದು ಹೇಳುವ ಬಸವೇಶ್ವರನೂ ಕೂಡ ಕರ್ಮಯೋಗಕ್ಕೆ ಪ್ರಾಧಾನ್ಯವನ್ನು ಕೊಟ್ಟಿರುವನು.

ಇತ್ತಲಾಗಿ, ಮ|| ಗಾಂಧಿಯವರು ಭಗವದ್ಗೀತೆಗೆ ಒಂದು ವ್ಯಾಖ್ಯಾನವನ್ನು ಬರೆದಿರುವರು. ಅವರು ಅದಕ್ಕೆ ಅನಾಸಕ್ತಿಯೋಗವೆಂದೇ ಹೆಸರು ಕೊಟ್ಟಿರುವರು.

ಒಂದೇ ಸಮನಾಗಿ ಬೋಧಿಸಿದನು. ಈ ಗೊಂದಲದ ಮುತ್ತಿಗೆಯಲ್ಲಿ ಅವನು ಕಳವಳ ಗೊಳ್ಳಲಿಲ್ಲ. ಅವನು ಕಂಡ ಉನ್ನತವಾದ ಆಧ್ಯಾತ್ಮಿಕ ದೃಶ್ಯವು ಅವನು ಸುತ್ತಲಿನ ಪರಿಸ್ಥಿತಿಯ ಬಗ್ಗೆ ಉದಾಸೀನ ಭಾವವನ್ನು ತಾಳುವಂತೆ ಮಾಡಿತು. ಒತ್ತಿಯಾಗಿ ಹೃದಯದಿಂದ ಹರಿದುಬರುವ ಅವನ ದೈವೀಪ್ರೇಮವು, ಮಾನವರ ಬಗ್ಗೆ ಅವನ ಕಾರುಣ್ಯವು ಅವನ ಮೇಲೆ ಕೈಯೆತ್ತುವವರ ಕೈಯನ್ನು ಚುಂಬಿಸುವಂತೆ ಮಾಡಿತು. ಎಲ್ಲ ಉಚ್ಚ ನೀಚ ಪ್ರಾಣಿಗಳಲ್ಲಿ ಅವನು ತನ್ನ ಪ್ರಿಯನಾದ ಜಗದೊಡೆಯನನ್ನೇ ಕಂಡನು. ಅವರೆಲ್ಲರನ್ನೂ ಅವನು ತನ್ನಂತೆ ಪ್ರೀತಿಸಿದನು. ಎಲ್ಲ ಜೀವಿಗಳ ಸೇವೆ ಗಾಗಿ ತನ್ನ ಜೀವನವನ್ನು ಅವನು ಸಮರ್ಪಿಸಿದನು; ಇಷ್ಟೇ ಅಲ್ಲ, ಮರಣದ ತರು ವಾಯ ತನ್ನ ದೇಹವು ಪಕ್ಷಿಗಳಿಗೆ, ವನ್ಯ ಪಶುಗಳಿಗೆ, ಆಹಾರವಾಗಲೆಂದು ಬಯಸಿದನು.

ದಾದುವಿನ ಕವಿತ್ವದ ಭಾವವನ್ನಿಲ್ಲಿ ಕೊಟ್ಟಿರುವೆವು :—

"ಎಲೈ ಬಾಲೆಯೇ! ರಾತ್ರಿಯು ಜಾರುತ್ತಲಿರುವುದು, ಕ್ಷಣಕ್ಷಣಕ್ಕೆ ಕಡಿಮೆ ಯಾಗುತ್ತಿರುವುದು, ಪ್ರಭಾತ ಕಾಲವು ಬೇಗನೆ ಬಂದೊದಗುವುದು. ಇಷ್ಟು ಶಾಂತತೆ ಯಿಂದ ಇಷ್ಟು ದೀರ್ಘ ಕಾಲದ ವರೆಗೆ ಏಕೆ ನೀನು ಮಲಗಿಕೊಂಡಿರುವೆ? ಸುಸಂಧಿಯು ಕಳೆದುಹೋಗುತ್ತದೆ. ಈ ಜೀವನದಲ್ಲಿ ಅವನನ್ನು ನೀನು ತಪ್ಪಿಸಿಕೊಂಡರೆ ಪುನಃ ನಿನಗವನು ಸಿಕ್ಕಲಾರನು; ಬಳಿಕ ನಿನಗೆ ಪಶ್ಚಾತ್ತಾಪವಾದೀತು.

"ಎಲೈ ಸುಂದರಿಯೇ! ನಿನ್ನ ಯಜಮಾನನು ಜಾಗೃತವಿರುವಾಗ ನೀನೇಕೆ ಮಲಗಿಕೊಳ್ಳುವೆ? ಏಳು, ಎಚ್ಚರವಾಗು, ಪಶ್ಚಾತ್ತಾಪಪಡು, ಅವನ ಕಾಲುಗಳನ್ನು ಹಿಡಿದುಕೊ. ಆ ಕರುಣಾ ಸಾಗರನ ಬಳಿಯಲ್ಲಿ ಬಂದು ಆರ್ಜವಗಳಿಂದ ಅವನ ಮನ ವೊಲಿಸು, ಗಾಢಾಲಿಂಗನದಿಂದ ಅವನನ್ನು ಬಿಗಿದಪ್ಪು. ವರನ ಬಳೆಯುವ ಪ್ರೇಮ ದಿಂದ ಅನುಗೃಹೀತಳಾದ ಕನ್ಯಕೆ ಎಷ್ಟು ಧನ್ಯಳೋ!"

ದಾದುವು ನುಡಿಯುತ್ತಾನೆ: "ಯಾವಳು ರಾಜರಾಜೈಶ್ವರ್ಯನಾದ ತನ್ನ ಒಡೆಯನನ್ನು ಕಾಣುವಳೋ ಅವಳಿಗೇ ಮೂರು ಬಾರಿ ಧನ್ಯವಾದಗಳು."

**ಪಂಡಿತ ಕೇಶವಶರ್ಮಾ ಗಲಗಲಿ.**

# ಜೈಮಿನಿ ಭಾರತ (ಆಶ್ವಮೇಧಿಕ ಪರ್ವ)

## *ಸಂಸ್ಕೃತ ಜೈಮಿನಿ ಭಾರತದ ಕನ್ನಡದ ಅನುವಾದ

### ಹದಿನೇಳನೆಯ ಅಧ್ಯಾಯ

ಆ ಕುದುರೆಯು ಅಲ್ಲಿಂದ ಹೊರಟು ಶೂರನಾದ ಹಂಸಧ್ವಜನು, ಸ್ತ್ರೀಯನ್ನು ಪಾಲಿಸುವಂತೆ ಆಳುತ್ತಿರುವ ಚಂಪಕಾಪುರಿಯ ಬಳಿಗೆ ಹೋಯಿತು. ಕ್ರೂರರಾದ, ದಿವ್ಯ ವಸ್ತ್ರಾಭರಣಗಳನ್ನೂ ಮುಕ್ತಾಹಾರವನ್ನೂ ಧರಿಸಿ ಮನೋಹರವಾಗಿರುವ ಪ್ರದ್ಯುಮ್ನ ಮೊದಲಾದ ಶೂರರೊಡನೆ ಅರ್ಜುನನು ಕುದುರೆಯ ಹಿಂದೆಯೇ ಹೋದನು. ಕುದುರೆಯ ಕಾವಲಿಗಾಗಿ ಶೂರನಾದ ಅರ್ಜುನನು ತನ್ನ ದೇಶಕ್ಕೆ ಬಂದಿರುವನೆಂಬ ಭಯಂಕರವಾದ ವೃತ್ತಾಂತವನ್ನು ಹಂಸಧ್ವಜನು ಚಾರ ಮುಖ ದಿಂದ ಕೇಳಿ, ಮಕ್ಕಳು ಬಂಧುಗಳು ಮಂತ್ರಿಗಳು—ಇವರೊಡನೆ ಆಲೋಚಿಸಿದನು. 'ಈಗ ಬಂದಿರುವ ಅರ್ಜುನನ ಕುದುರೆಯನ್ನು ಹಿಡಿದು ಶಕ್ತಿಯಿಂದ ಸೈನ್ಯವನ್ನು ವ್ಯೂಹ ರಚನೆ ಮಾಡಿ ದೇಶವನ್ನು ರಕ್ಷಿಸಿಕೊಳ್ಳಲೇ? ಇದರಿಂದ ಪರಮ ಲಾಭವೂ ಆಗುವುದು. ಶ್ರೀಕೃಷ್ಣನ ಸೇವಕನಾದ ಅರ್ಜುನನು ಎಲ್ಲಿರುವನೋ ಅಲ್ಲಿ ಶ್ರೀಕೃಷ್ಣನು ಇದ್ದೇ ಇರುವನು; ಇದಕ್ಕೆ ಸಂಶಯವಿಲ್ಲ. ನಾನು ಇಷ್ಟು ಮುದಕ ನಾದರೂ ಈ ವರೆಗೂ ಕೃಷ್ಣನನ್ನು ಕಣ್ಣಿನಿಂದ ನೋಡಲಿಲ್ಲ. ಆದಕಾರಣ, ಎಲೈ ಶೂರರಿರಾ! ನಾನು ಯುದ್ಧಕ್ಕೆ ಹೋಗುವೆನು, ನೀವೆಲ್ಲರೂ ಹೊರಡಿರಿ' ಎಂದು ಹೇಳಿ ತಾನು ಯುದ್ಧಕ್ಕೆ ಹೊರಟನು.

ಹೀಗೆ ದೊರೆಯು ಎಪ್ಪತ್ತು ಮಂದಿ ಮುಖ್ಯ ನಾಯಕರನ್ನು ಸಂಗಡ ಕರೆದು ಕೊಂಡು ಮುಂದೆ ನಿಂತನು. ಎಲೈ ಜನಮೇಜಯನೇ, ಕೇಳು: ಮಾನ ಧನರಾದ ಸೇನಾಪತಿಗಳಲ್ಲಿ ಪ್ರತಿಯೊಬ್ಬನೂ ಯಾವಾಗಲೂ ಯತ್ನಪೂರ್ವಕವಾಗಿ ಪೋಷಿಸಿದ್ದ ತನ್ನ ತನ್ನ ಸೈನ್ಯವನ್ನು ಸಿದ್ಧಪಡಿಸಿದನು. ಎಪ್ಪತ್ತೊಂದು ಸಾವಿರ ಮದಗಜ ಗಳೂ, ಎಪ್ಪತ್ತೊಂದು ಸಾವಿರ ಹೂಡಿ ಸಿದ್ಧವಾದ ರಥಗಳೂ, ಸೊಗಸಾದ ಒಂದು ಲಕ್ಷ ಕುದುರೆಗಳೂ, ೯೫ ಸಾವಿರ ಕಾಲಾಳೂ ಬಂದು ಸೇರಿದುವು. ಸೈನಿಕರೆಲ್ಲರೂ, ವೈಷ್ಣವರೂ ಶೂರರೂ ದಾನ ಪರಾಯಣರೂ ಏಕ ಪತ್ನೀ ವ್ರತಸ್ಥರೂ ಇಷ್ಟರೂ ಪ್ರಿಯ ವಚನವಾಡುವರೂ ಆಗಿದ್ದರು. ಯಾವುದಾದರೂ ಒಂದು ದೂರ ದೇಶದಿಂದ ರಾಜನನ್ನು ಸೇವಿಸಲು ಯಾವನಾದರೂ ಬಂದರೆ ದೊರೆಯು ಅವನನ್ನು ನೋಡಿ— 'ಎಲೈ ಧರ್ಮಿಷ್ಠನೇ! ನೀನು ಏಕ ಪತ್ನೀ ವ್ರತಸ್ಥನಾಗಿದ್ದರೆ ನಿನ್ನನ್ನು ನನ್ನ ಬಳಿ ಯಲ್ಲಿಟ್ಟುಕೊಂಡು ರಕ್ಷಿಸುವೆನು; ಇದು ಸತ್ಯವು; ಶೌರ್ಯ, ಕುಲ, ಪರಾಕ್ರಮ

* ಕ. ಸಾ. ಪರಿಷತ್ಪತ್ರಿಕೆಯ ೧೬ನೆಯ ಸಂಪುಟದ ೩ನೆಯ ಸಂಚಿಕೆಯ ೧೫೦ನೆಯ ಪುಟದಿಂದ ಮುಂದುವರಿದುದು.

ಗಳು ಬೇಕಾಗಿಲ್ಲ. ಬಲಶಾಲಿಗಳಾಗಿ ಮನ್ಮಥ ವೇಗವನ್ನು ಯಾರು ತಡೆಯಬಲ್ಲರೋ ಅಂತಹ ಸೈನಿಕರಲ್ಲಿ ಶೂರನಾಗಿಯೂ ಏಕ ಪತ್ನೀ ವ್ರತಶೀಲನಾಗಿಯೂ ವಿಷ್ಣು ಭಕ್ತನಾಗಿಯೂ ಇರುವವನನ್ನು ನನ್ನ ಮನೆಯಲ್ಲಿಯಾಗಲಿ ರಾಜ್ಯದಲ್ಲಿಯಾಗಲಿ ಸೇರಿಸುವೆನು' ಎಂದು ಹೇಳುತ್ತಿದ್ದನು. ಬುದ್ಧಿಶಾಲಿಯೂ ಸದಾಚಾರ ಸಂಪನ್ನನೂ ಸಂತುಷ್ಟನೂ ಶ್ರದ್ಧಾಳುವೂ ಆಗಿರುವ ಆ ದೊರೆಯು ತನ್ನ ಭೃತ್ಯರಿಗೆ ಬೇಕಾದಷ್ಟು ಹಣವನ್ನು ಉಚಿತವಾಗಿ ಕೊಡುತ್ತಿದ್ದನು. ಅವನ ಸೇನಾಪತಿಗಳೂ ಮಂತ್ರಿಗಳೂ ಅವನ ಇಷ್ಟಾನುಸಾರವಾಗಿ ಸೈನ್ಯವನ್ನು ರಕ್ಷಿಸುತ್ತಿರುವರು. ವಿದೂರಥನೇ ಮೊದಲಾದ ಅವನ ಸಹೋದರರೂ, ಚಂದ್ರಸೇನ, ಚಂದ್ರಕೇತು, ಬಲಿಷ್ಠನಾದ ಚಂದ್ರದೇವ, ನ್ಯಾಯವಂತನಾದ ಘನಬಲ, ಸುಂದರನಾದ ಧರ್ಮವಾಹ ಎಂಬ ಅವನ ಐದು ಮಂದಿ ಮಕ್ಕಳೂ; ಸುಬಲ, ಸುರಥ, ಸಮ, ಸುದರ್ಶನ, ಬಲಿಷ್ಠನಾದ ಸುಧನ್ವ ಎಂಬ ಬೇರೆ ಐದು ಮಂದಿ ಮಕ್ಕಳೂ—ಇವರೊಡನೆ ಹಂಸಧ್ವಜನು ಸೇನಾ ಸಹಿತನಾಗಿ ಅರ್ಜುನನ ಸೈನ್ಯದ ಎದುರಿಗೆ ಯುದ್ಧಕ್ಕೆ ನಿಂತು ಬೇಗನೆ ಸೇನಾ ವ್ಯೂಹವನ್ನು ರಚಿಸಿದನು; ಯುದ್ಧ ಭೇರಿಯನ್ನು ಹೊಡೆಯಿಸಿ ಆನೆಯ ಮೇಲೆ ಕುಳಿತು ಹೊರಟನು. ಅವನ ಆಜ್ಞಾನುಸಾರವಾಗಿ ಶೂರರೆಲ್ಲರೂ ಊರನ್ನು ಬಿಟ್ಟು ಹೊರಟರು. ಅವರಲ್ಲಿ ಒಬ್ಬನು ಕವಚವನ್ನೂ ಶಸ್ತ್ರಾಸ್ತ್ರಗಳನ್ನೂ ಪೂಜಿಸಿ ಅವುಗಳನ್ನು ಧರಿಸಿ, ಅಗ್ನಿಯಲ್ಲಿ ಹೋಮವನ್ನು ಮಾಡಿಕೊಂಡು ಹೊರಟನು. ಸಮಾನ ಬಲವುಳ್ಳ ಇತರರಾದ ವೀರರನೇಕರು ಆಜ್ಯ ಭಕ್ಷ್ಯ ಪಾಯಸಾದಿಗಳಿಂದ ಬ್ರಾಹ್ಮಣ ಭೋಜನ ಮಾಡಿಸಿ ಛತ್ರ ಚಾಮರಾದಿಗಳಿಂದ ಕೂಡಿ, ಕೆಲವರು ರಥಗಳ ಮೇಲೆಯೂ, ಕೆಲವರು ಆನೆಗಳ ಮೇಲೆಯೂ, ಕೆಲವರು ಕುದುರೆಗಳ ಮೇಲೆಯೂ ಯುದ್ಧಾರ್ಥಿಗಳಾಗಿ ಸಿಂಹನಾದ ಮಾಡುತ್ತ ಹೊರಟರು.

ಆ ಯೋಧರ ಪ್ರಿಯ ಪತ್ನಿಯರೆಲ್ಲರೂ ಅವರನ್ನು ನೋಡುವುದಕ್ಕಾಗಿ ಬಹು ಕುತೂಹಲದಿಂದ ಉಪ್ಪರಿಗೆಗಳನ್ನೇರಿ ಒಬ್ಬರಿಗೊಬ್ಬರು ಸಲ್ಲಾಪ ಮಾಡುತ್ತ ನಿಂತಿದ್ದರು. ಅವರಲ್ಲೊಬ್ಬಳು ಸುಂದರಿಯಾದ ತನ್ನ ಸಖಿಯನ್ನು ಕುರಿತು, "ಎಲೆ ಸಖಿ! ನಿನ್ನ ಪತಿಯು ಕೃಷ್ಣಾರ್ಜುನರ ಮೇಲೆ ಯುದ್ಧ ಮಾಡುವುದಕ್ಕೆ ಹೋಗುತ್ತಾನೆ. ನಿನ್ನ ಅಧರದಲ್ಲಿ ಕೃಷ್ಣರೂಪವಾದ ವ್ರಣವು ಕಾಣಿಸುತ್ತಿದೆಯಲ್ಲಾ! ಅದೇಕೆ? ಎಲ್ಲರೂ ಈ ಗಾಯವನ್ನು ನೋಡುತ್ತಿದ್ದರೂ ನಿನಗೆ ನಾಚಿಕೆಯಿಲ್ಲವೇ?" ಎಂದಳು. ಅದಕ್ಕೆ ಮತ್ತೊಬ್ಬಳು ಅವಳನ್ನು ನೋಡಿ, "ಎಲೆ ದುಷ್ಟೆ! ನೀನು ಅಧರದಿಂದ ಮಾಧವನನ್ನುಚ್ಚರಿಸುವುದಿಲ್ಲ; ಆದಕಾರಣ ಪತಿಯು ತಕ್ಕ ಹಾಗೆ ದಂಡಿಸುತ್ತಾನೆ. ಕೆದರಿರುವ ನಿನ್ನ ತಲೆಗೂದಲು ನನಗೆ ಹೇಗೆ ಸೊಗಸಾಗಿ ಕಾಣಿಸುವುದು? ಅಲ್ಪರ ದೃಷ್ಟಿಯು ಇತರರ ದೋಷದ ಕಡೆಗೇ ಹೋಗುವುದು; ಬುದ್ಧಿಶಾಲಿಗಳ ದೃಷ್ಟಿಯು ಗುಣವನ್ನು ಗ್ರಹಿಸುವುದು. ಇದರಲ್ಲಿ ವಿಚಾರವೇನಿದೆ? ಸತ್ಪುರುಷರ ಸಮೀಪದಲ್ಲಿ ಕಷ್ಟದಿಂದ ವಾಸ ಮಾಡುವುದಾದರೂ ಉತ್ತಮವು; ಸತ್ಪುರುಷರಿಲ್ಲದೆ ನೀಚರ ಸಮೀಪದಲ್ಲಿದ್ದು ರಾಜ್ಯವಾಳಿದರೂ ಪ್ರಯೋಜನವಿಲ್ಲ" ಎಂದಳು. ಆ ಮಾತನ್ನು

ಕೇಳಿ ಆ ಗಜಗಮನೆಯು ನಸುನಗುತ್ತ, "ಎಲೆ ಮೂಢಳೆ! ನೀನು ಕೃಷ್ಣನನ್ನು ನೋಡುವುದಿಲ್ಲ. ಈ ಯುದ್ಧದಲ್ಲಿ ನೀನೂ ನಾನೂ ನೋಡಬೇಕಾದುದೇನಿರುವುದು? ಹಂಸಪಕ್ಷಿಯಂತೆ ತೊದಲು ಮಾತಾಡುವವಳೇ! ಗಾಯವಾಗಿರುವ ಹಣೆಯನ್ನು ನೋಡು; ಮನುಷ್ಯರೆಲ್ಲರೂ ಎಲ್ಲಿಯೂ ಭಾವಸಂಪಾದನೆಗಾಗಿ ಗಾಯವನ್ನು ಮಾಡುವರು. ಇದು ಸ್ತ್ರೀ ಶರೀರವಾಗಿದೆ. ನಿನ್ನ ನಿಜಸ್ಥಿತಿಯನ್ನೇ ನೀನು ಕಾಣೆ. ನನಗೆ ಬಹಳ ಕುತೂಹಲವಿದೆ; ಈ ಸುಂದರಿಯನ್ನು ಕೇಳುವೆನು: ಎಲೆ ಮೈತ್ರೆಯೇ! ನೀನು ಧರಿಸಿರುವ ಮನೋಹರವಾದ ಚಂದನವೂ ಪುಷ್ಪವೂ ವಸ್ತ್ರಗಳೂ ಏಕೆ ಮಲಿನವಾಗಿವೆ ಹೇಳು" ಎಂದು ಕೇಳಿದಳು. ಅದಕ್ಕೆ ಅವಳು, "ಎಲೆ ಭದ್ರೆ? ನಿನ್ನ ಹಣೆಯ ಮೇಲೆ ಗಾಯವಾಗಿದೆ. ಇದನ್ನು ಯೋಗಿಗಳು ಕೃಷ್ಣನ ಪಾದಚಿಹ್ನೆಯೆಂದು ಹೇಳುವರು. ಇನ್ನುಮೇಲೆ ಹೀಗೆ ಹೇಳಕೂಡದು. ಕುಶಲರಾದ ಹಂಸಧ್ವಜನ ಸೈನಿಕರು ಪಾರ್ಥನ ಕುದುರೆಯನ್ನು ಹಿಡಿಯಲು ಹೋಗುತ್ತಾರೆ" ಎಂದಳು.

ಬಳಿಕ, ಕ್ಷತ್ರಿಯರೆಲ್ಲರೂ ಭೇರೀ ಭಾಂಕಾರದೊಡನೆ ಯುದ್ಧಕ್ಕೆ ಹೊರಟರು. ದೊರೆಯ ಅಪ್ಪಣೆಯಂತೆ ಸೇವಕರು ಎಣ್ಣೆ ತುಂಬಿದ ಕೊಪ್ಪರಿಗೆಯನ್ನು ತಂದರು. "ಮಕ್ಕಳು ಮೊಮ್ಮಕ್ಕಳು ಸಹೋದರರು—ಇವರಲ್ಲಿ ಯಾವನಾದರೂ ಯುದ್ಧಕ್ಕೆ ಹೊರಡದೆ ಹೋದರೆ ಈ ಭಯಂಕರವಾದ ಕಾದೆಣ್ಣೆಯ ಕೊಪ್ಪರಿಗೆಯಲ್ಲಿ ಅವನನ್ನು ಕೆಡಹುವೆನು. ದೊರೆಗಳಿಗೆ ಆಜ್ಞಾಭಂಗವೂ, ಬ್ರಾಹ್ಮಣರಿಗೆ ಮಾನಭಂಗವೂ, ಸ್ತ್ರೀಯರಿಗೆ ಬೇರೆ ಹಾಸಿಗೆಯೂ, ಆಯುಧಹತಿಯಿಲ್ಲದ ಕೊಲೆ ಎಂದು ಹೇಳಿದೆ. ಆದಕಾರಣ ಎಲ್ಲಿಯೂ ಯಾವನೂ ದೊರೆಯ ಆಜ್ಞೆಗೆ ಭಂಗವನ್ನುಂಟುಮಾಡಕೂಡದು. ದೊರೆಯು ಶಂಖನೆಂಬನನ್ನು ಪುರೋಹಿತನನ್ನಾಗಿ ಮಾಡಿಕೊಂಡನು. ಆತನು ಬಹಳ ನೀತಿಶಾಸ್ತ್ರಸಂಪನ್ನನು; ಹಿಂದೆ ಆತನ ಸಹೋದರನು ಹಣ್ಣುಗಳನ್ನು ಕದ್ದ ಅಪರಾಧಕ್ಕಾಗಿ ಅವನ ತೋಳುಗಳನ್ನು ಕತ್ತರಿಸಿದನು. ಸಜ್ಜನರ ಆಜ್ಞೆಯು ಹೀಗೆ ವಿಚಾರಾರ್ಹವಾದುದು. ಇಂತಹ ಪುರೋಹಿತನ ವಶದಲ್ಲಿದ್ದುಕೊಂಡು ದೊರೆಯು ಸರ್ವದಾ ನೀತಿಜ್ಞನಾಗಿ ರಾಜ್ಯಭಾರ ಮಾಡುತ್ತಿರುವನು. ಹೀಗೆ ಚೆನ್ನಾಗಿ ರಾಜ್ಯವಾಳುತ್ತಿರುವುದರಿಂದಲೇ ಈತನು ಯುದ್ಧದಲ್ಲಿ ಶತ್ರುನಿಗ್ರಹವನ್ನು ಮಾಡುವನು" ಎಂದು ದೊರೆಯು ಹೇಳಿದನು. ದೊರೆಯು ಏರ್ಪಡಿಸಿದ ಎಣ್ಣೆಯ ಕೊಪ್ಪರಿಗೆಯನ್ನು ನೋಡಿ ಆತನ ಮಗನಾದ ಸುಧನ್ವನು ಮೊದಲು ಹೊರಟು ದೊರೆಯ ಬಳಿಗೆ ಬಂದು ಆತನನ್ನು ನಮಸ್ಕರಿಸಿ, ಬಳಿಕ ತಾಯಿಗೆ ನಮಸ್ಕರಿಸಿ, ಉತ್ತಮವಾದ ಧನುಸ್ಸನ್ನು ತೆಗೆದುಕೊಂಡು, ತಾಯಿಯನ್ನು ಕುರಿತು, "ಅಮ್ಮಾ! ಅರ್ಜುನನ ಮೇಲೆ ಯುದ್ಧಕ್ಕೆ ಹೋಗಿ ಅವನಿಂದ ರಕ್ಷಿತವಾಗಿರುವ ಕುದುರೆಯನ್ನು ಹಿಡಿದುಕೊಂಡು ಬರುವೆನು" ಎಂದನು. ಅದನ್ನು ಕೇಳಿ ಆಕೆಯು, "ಎಲೈ ಮಗನೇ! ನೀನು ಯುದ್ಧಕ್ಕೆ ಹೋಗಿ ಚತುಷ್ಪಾದಿಯಾದ ಆ ಹರಿಯನ್ನು ಬಿಟ್ಟು ಮುಕ್ತಿಪ್ರದವಾದ ಹರಿಯನ್ನು ಹಿಡಿದು ನನ್ನ ಬಳಿಗೆ ತೆಗೆದುಕೊಂಡು ಬಾ. ನಾರದನು ಆ ಕೃಷ್ಣನ ಚೇಷ್ಟೆಗಳನ್ನು ಬಹುವಾಗಿ ಹೇಳಿರುವನು. ನನ್ನ ಪತಿಯು

ಯುದ್ಧದಲ್ಲಿ ಶೂರರನೇಕರನ್ನು ಗೆದ್ದಿರುವನು. ಕಂಸಾರಿಯಾದ ಈ ಕೃಷ್ಣನನ್ನು ಮಾತ್ರ ನಾನು ನೋಡಲಿಲ್ಲ. ದಿವಾರಾತ್ರಿಗಳಲ್ಲಿಯೂ ಎಲ್ಲರೂ ಹರಿಸ್ಮರಣೆ ಮಾಡುತ್ತಿರುವರು. ನಾನು ಅವನನ್ನು ನೋಡುವಹಾಗೆ ಮಾಡು. ಶ್ರೀಕೃಷ್ಣನು ಮೆಚ್ಚುವ ಕೆಲಸಗಳನ್ನೇ ಮಾಡು. ಆತನು ಕೈಗೆ ಸಿಕ್ಕದೆ ದೂರದೂರಕ್ಕೆ ಓಡಿಹೋಗುವನು. ಅಂತಹವನು ಕಣ್ಣಿಗೆ ಬೀಳುವುದು ಭಾಗ್ಯವಲ್ಲವೇ? ಪಾರ್ಥನನ್ನು ನೀನು ಹಿಡಿದರೆ ಶ್ರೀಕೃಷ್ಣನು ನಿನ್ನ ವಶನಾಗುವನು. ನಿನಗೆ ಮಂಗಳವಾಗಲಿ. ಆತನು ತನ್ನ ಭಕ್ತರನ್ನು ಬಿಟ್ಟುಕೊಡುವನಲ್ಲವೆಂದು ನಾನು ಬಹಳವಾಗಿ ಕೇಳಿದ್ದೇನೆ. ಹಸುವು ತನ್ನ ಕರುವನ್ನು ಕಾಡಿನಲ್ಲಿ ಹೇಗೆ ಬಿಟ್ಟುಹೋಗುವುದಿಲ್ಲವೋ ಹಾಗೆ ಆತನು ಕಷ್ಟಕಾಲದಲ್ಲಿ ಸ್ವಜನವನ್ನು ಬಿಟ್ಟುಹೋಗುವುದಿಲ್ಲ. ಅವನಿಗೆ ನೀನು ಹೆದರಬೇಡ. ಅವನಿಗೆ ಹೆದರಿದವನು ಬದುಕಲಾರನು. ನೀನು ಹಾಗೆ ಹೆದರಿದರೆ, 'ಎಲೆ ಭದ್ರೆ! ನಿನ್ನ ಮಗನು ಕೃಷ್ಣನನ್ನು ನೋಡಿ ಹೆದರಿ ವಿಮುಖನಾದನು' ಎಂದು ನಮ್ಮ ಬಂಧುಗಳೂ ಇತರರೂ ನನ್ನನ್ನು ಹಾಸ್ಯಮಾಡುವರು. ಚಾಡಿಕೋರರ ಮಾತಿಗೆ ಅವಕಾಶವನ್ನು ಕೊಡಬೇಡ. ನೀನು ಯುದ್ಧದಲ್ಲಿ ಮಡಿದರೂ ನನಗೆ ಸಂತೋಷ. ಮಗನ ವಿಷಯದಲ್ಲಿ ಲೋಕವಿರುದ್ಧವಾದ ಮಾತನ್ನಾಡಿಕೊಳ್ಳುವ ಜನವಾರ್ತೆಯು ನನ್ನ ಮನಸ್ಸಿಗೆ ಬರುವಹಾಗಿಲ್ಲ. ಕೃಷ್ಣನಿಗೆ ಎದುರಾಗಿ ನಿಂತು ಯುದ್ಧಮಾಡಿ ಬಿದ್ದುಹೋದವನು ಪತಿತನಾಗುವುದಿಲ್ಲ. ಅವನೊಡನೆ ಅವನ ಕಡೆಯ ಇಪ್ಪತ್ತೊಂದು ತಲೆಯವರು ಸದ್ಗತಿಯನ್ನು ಪಡೆಯುವರು. ಶ್ರೀಕೃಷ್ಣನ ಎದುರಿಗೆ ಯಾರ ಮಕ್ಕಳೂ ಮೊಮ್ಮಕ್ಕಳೂ ಹೋಗುವುದಿಲ್ಲವೋ ಆ ಸ್ತ್ರೀಯರೆಲ್ಲರೂ ಲೋಕದಲ್ಲಿ ರೋದನೆಮಾಡಲಿ" ಎಂದು ಹೇಳಿದಳು.

ಅದನ್ನು ಕೇಳಿ ಸುಧನ್ವನು, "ಅಮ್ಮಾ! ನೀನು ಹೇಳಿದುದೆಲ್ಲವನ್ನೂ ಮಾಡುವೆನು. ಶ್ರೀಕೃಷ್ಣನನ್ನೂ ಹಿಡಿದು ತರುವೆನು. ಇದಕ್ಕಾಗಿ ನನ್ನ ಸಾಮರ್ಥ್ಯವನ್ನೆಲ್ಲ ತೋರಿಸುವೆನು. ಜಯವು ದೈವಾಯತ್ತವಾದುದು. ಶ್ರೀಕೃಷ್ಣನನ್ನು ನೋಡಿ ನಾನು ವಿಮುಖನಾಗಿ ಬಂದರೆ ನಿನ್ನ ಮಗನಲ್ಲವೆಂದು ನನ್ನನ್ನು ತಿಳಿ; ನನಗೆ ಸದ್ಗತಿಯುಂಟಾಗದಿರಲಿ" ಎಂದು ಹೇಳಿ ಶೂರನಾದ ಸುಧನ್ವನು ಯುದ್ಧಪ್ರಯಾಣ ಮಾಡುತ್ತಿರಲು, ಅವನ ಸಹೋದರಿಯಾದ ಕುವಲೆಯು ಆರತಿಯನ್ನೆತ್ತಿ ಲಾಜಾಕ್ಷತೆಗಳನ್ನೂ ಪುಷ್ಪಗಳನ್ನೂ ಎರಚಿ ಗಂಧವನ್ನು ಲೇಪಿಸಿ ಕೊರಳಿಗೆ ಹಾರವನ್ನು ಹಾಕಿ, "ಎಲೈ ಸುಧನ್ವನೇ! ಅರ್ಜುನನ ಮೇಲೆ ಯುದ್ಧಕ್ಕೆ ಹೋಗುತ್ತೀಯಷ್ಟೆ! ಚೆನ್ನಾಗಿ ಯುದ್ಧಮಾಡು. ನನಗೆ ಯಾವಾಗಲೂ ಈ ಮಾವನ ಮನೆಯ ವಾಸವು ಕಷ್ಟತರವಾಗಿರುವುದು. ನಾನು ಇಲ್ಲಿ ವಾಸಿಸುತ್ತಿರುವುದರಿಂದ ನನ್ನ ಭಾವಂದಿರೂ ಮೈದುನಂದಿರೂ ನನ್ನನ್ನು ಹಾಸ್ಯಮಾಡುತ್ತ ಹೀಗೆ ನಿಂದಿಸುವರು: "ಎಲೆ ಕುವಲೆ! ನಿಮ್ಮ ತಂದೆಯು ಮೂರ್ಖನಾಗಿ ಕಾಣುವನು; ಕಾಶೀರಾಜನನ್ನು ಜಯಿಸಿದಂತೆ ಕೃಷ್ಣನನ್ನು ಜಯಿಸುವುದಾಗಿ ಹೇಳುತ್ತಾನೆ. ಸೇನಾಸಮೇತನಾಗಿ ತಾನು ಹೊರಟರೂ ಶ್ರೀಕೃಷ್ಣನ ಪಟ್ಟಣವಾದ ಆ ದ್ವಾರವತಿ

ಯನ್ನು ಪ್ರವೇಶಿಸಲಾರನು. ಆದರೂ ಆ ಕೃಷ್ಣನನ್ನು ಜಯಿಸುವುದಕ್ಕೆ ಯತ್ನಿಸುವ ಅವನು ಮೂಢನಲ್ಲವೇ!"

ಇದನ್ನು ಕೇಳಿ ಸುಧನ್ವನು ಕುವಲೆಯನ್ನು ಕುರಿತು, "ಎಲೆ ಕುವಲೆಯೇ! ನಿಮ್ಮ ತಂದೆಯ ಮಾತನ್ನೂ ಭಾವಮೈದುನದಿರ ಮಾತನ್ನೂ ಎಲ್ಲವನ್ನೂ ಸತ್ಯವಾಗಿ ಮಾಡುವೆನು. ಆಯುಧವನ್ನು ಸತ್ಯದಿಂದ ಪರಿಗ್ರಹಿಸುವೆನು. ನಿನಗೆ ನಮಸ್ಕರಿಸಿ ಕೃಷ್ಣನ ಮೇಲೆ ಯುದ್ಧಕ್ಕೆ ಹೊರಡುವೆನು" ಎಂದು ಹೇಳಿ ಮನೆಯನ್ನು ಬಿಟ್ಟು ಹೊರಗಣ ಪಡಸಾಲೆಗೆ ಬಂದನು.

ಅಷ್ಟರಲ್ಲಿ, ಗಂಧಾನುಲೇಪನಗಳುಳ್ಳವಳಾಗಿ ತುರುಬನ್ನು ಹಾಕಿಕೊಂಡಿರುವ ಸುಂದರಿಯಾದ ಪ್ರಭಾವತಿಯು ಸುವರ್ಣ ಪಾತ್ರೆಯಲ್ಲಿ ತಾವರೆ ಸಂಪಗೆ ಹೂಗಳನ್ನೂ ದೂರ್ವಾಕ್ಷತೆಗಳನ್ನೂ ದೀಪಗಳನ್ನೂ ಐದು ಮುಖಗಳುಳ್ಳ ಕರ್ಪೂರ ದೀಪದ ಆರತಿಗಳನ್ನೂ ಇಟ್ಟು ಕೈಯಲ್ಲಿ ಹಿಡಿದುಕೊಂಡು ಬಂದು ಎದುರಾಗಿ ನಿಂತಿರುವುದನ್ನು ಸುಧನ್ವನು ಕಂಡನು. ಶುಭ್ರ ಪಟ್ಟವಸ್ತ್ರವನ್ನೂ ಪುಷ್ಪರಾಗದ ಕಂಚುಕವನ್ನೂ ಧರಿಸಿರುವ ಆಕೆಯು ಮನೋಹರವಾಗಿ ಧ್ವನಿಮಾಡುತ್ತಿರುವ ಕೈಕಡಗ ಕಾಲ್ಕಡಗ ನಡುಪಟ್ಟಿಗಳುಳ್ಳವಳಾಗಿ ಸಡಗರದಿಂದ ಸುಧನ್ವನ ಕೊರಳಿಗೆ ಮುತ್ತಿನ ಹಾರವನ್ನು ಹಾಕಿ ಕೆಂಪಾಗಿ ಹೊಳೆಯುತ್ತಿರುವ ಮುಖಾನುಲೇಪನವನ್ನರ್ಪಿಸಿ ಕ್ರಮವಾಗಿ ಅರ್ಚನೆ ಮಾಡಿ ಪತಿ ಪರಾಯಣಳಾಗಿ ಓರೆನೋಟದಿಂದ ಆತನನ್ನು ನೋಡುತ್ತ ಆರತಿಯನ್ನೆತ್ತಿ ಅವನನ್ನು ಕುರಿತು, "ಎಲೈ ಪ್ರಾಣಕಾಂತನೇ! ನಿನ್ನ ಮುಖವನ್ನು ನೋಡಿದರೆ ಶ್ರೀಕೃಷ್ಣದರ್ಶನ ಕುತೂಹಲವುಳ್ಳುದಾಗಿರುವಂತೆ ಕಾಣುತ್ತದೆ. ಸ್ವಲ್ಪ ಕಾಲವಾದರೂ ನಿನ್ನ ಪ್ರಿಯೆಯಾದ ನನ್ನನ್ನು ಬಿಟ್ಟು ನೀನು ಹೇಗೆ ಹೋಗುವೆ? ಈಗ ನಿನ್ನ ಏಕ ಪತ್ನೀ ವ್ರತವು ನಷ್ಟವಾದಂತೆ ತೋರುವುದು. ನಿನ್ನನ್ನು ಯಾವಳು ವರಿಸುವಳೋ ನೀನು ಯಾವಳನ್ನು ಕೂಡುವೆಯೋ ಅವಳು ನನಗೆ ಸಮಾನಳಾಗಿ ಎಂದಿಗೂ ಇರಲಾರಳು. ಅವಳು ಎಲ್ಲರನ್ನೂ ಸೇರುವವಳು ಎಂದು ಸಜ್ಜನರು ವರ್ಣಿಸಿರುವರು; ನಾನು ಹಾಗಲ್ಲ. ತಂದೆಯು ಯಾರಲ್ಲಿಗೆ ಹೋಗುವನೋ ಮಗನೂ ಅವಳಲ್ಲಿಯೇ ಹೋಗುವನು. ಇಂತಹ ಮುಕ್ತಿಯು ನಿನ್ನ ಮನಸ್ಸಿನಲ್ಲಿ ಸರ್ವದಾ ಎಚ್ಚತ್ತಿರುವುದು. ಅದನ್ನು ಶ್ರೀಕೃಷ್ಣನು ನಿನಗೆ ಕೊಡುವನೆಂದು ತಿಳಿದು ನೀನು ಬೇಗನೆ ಹೊರಡುತ್ತಿದ್ದೀಯೆ. ದೇವತಾ ಸ್ತ್ರೀ ಸಂಗನು ವಿಷಯದಲ್ಲಿ ಪುರುಷರ ಚಿತ್ತವೃತ್ತಿಯು ಕ್ಷಣ ಕಾಲ ಪ್ರವರ್ತಿಸುತ್ತದೆ. ವಿವೇಕವೆಂಬ ಪುತ್ರನು ನಿನಗೆ ಹುಟ್ಟಿಲ್ಲ. ಆದಕಾರಣ ನೀನು ಶ್ರೀಕೃಷ್ಣನೆದುರಿಗೆ ಯುದ್ಧಕ್ಕಾಗಿ ಚಾಪಲ್ಯದಿಂದ ಏಕೆ ಹೋಗುತ್ತೀಯೆ? ನೀನು ಯಾವಳನ್ನು ನಿನಗೆ ಪ್ರಿಯ ಪತ್ನಿಯಾಗುವಳೆಂದೆಣಿಸಿರುವೆಯೋ ಅವಳು ನಿನಗೆ ಪ್ರಿಯಳಾಗುವುದಿಲ್ಲ. ಮನೆಯಲ್ಲಿರುವ ನಾನೊಬ್ಬಳೇ ನಿನ್ನ ಪತ್ನಿ. ನನ್ನ ಸಂಗದಿಂದ ನಿನಗೆ ಹುಟ್ಟಿರುವ ವಿವೇಕವೆಂಬ ಪುತ್ರನಾದರೋ ಯುದ್ಧಾರ್ಥವಾಗಿ ಹೊರಡುತ್ತಿರುವ ನಿನ್ನನ್ನು ತಡೆಯಲಿಲ್ಲ. ಪುರುಷನು ಪರಾಂಗನೆಯನ್ನು ಸೇರುವಂತೆ ಸ್ತ್ರೀಯು ಪರ ಪುರುಷನನ್ನು ಸೇರ

ಲಾರಳು. ಆದಕಾರಣ ನಾನು ಮೋಕ್ಷವನ್ನು ಪಡೆಯುವೆನು. ಇಲ್ಲದಿದ್ದರೆ, ವಿವೇಕ ವೆಂಬ ಪುತ್ರನನ್ನು ಪಡೆದಿರುವ ನನ್ನನ್ನು ಗ್ರಹಿಸುವ ಪರ ಪುರುಷನೊಬ್ಬನೂ ಇಲ್ಲ. ಭಯಂಕರವಾದ ಈ ಸಂಸಾರದಲ್ಲಿ ನನ್ನ ದೇಹವನ್ನು ರಕ್ಷಿಸುವ ವಿವೇಕವೆಂಬ ಮಗನು ಧನ್ಯನಾಗುವನು. ಇದರಲ್ಲಿ ಸಂದೇಹವಿಲ್ಲ. ವಿವೇಕ ಶೂನ್ಯರಾದ ಸ್ತ್ರೀಯರು ಪರ ಪುರುಷನನ್ನು ಸೇರುವರು. ನನಗೆ ಶೈಶವದಲ್ಲಿಯೇ ವಿವೇಕವೆಂಬ ಪುತ್ರನು ಹುಟ್ಟಿರುವುದರಿಂದ ಪರ ಪುರುಷನನ್ನು ಮಲಿನನನ್ನಾಗಿ ತಿಳಿದು ನಾನು ಕೈವಲ್ಯವನ್ನು ಪಡೆವೆನು. ನೀನು ಹೊರಟುಹೋದರೆ ನಿನ್ನೊಡನೆ ನಾನೂ ಮೋಕ್ಷವನ್ನು ಹೊಂದುವೆನು. ಮುಖಕ್ಕೆ ಮುಖವನ್ನು ಸೇರಿಸಬೇಕು; ಧನ್ಯನಾದವನಲ್ಲಿ ಧನ್ಯ ವಾದ ಕಾರ್ಯವನ್ನು ಮಾಡಬೇಕು. ನಿನ್ನ ಮುಖವನ್ನೇ ಸ್ಮರಿಸುತ್ತ ಮೊದಲೇ ನಾನು ಹೋಗುವೆನು. 'ಸ್ವಸ್ತ್ರೀಯನ್ನು ಬಿಟ್ಟು ಇವನು ನನ್ನನ್ನು ಪ್ರಾರ್ಥಿಸುವ ನಲ್ಲಾ' ಎಂದು ಮುಕ್ತಿ ಸ್ತ್ರೀಯು ನನಗೆ ಹೆದರಿ, ನಿನ್ನನ್ನು ನೋಡಿ ನಗುವಳು. ಯಾರೊಡನೆ ಕೂಡಿ ಶ್ರೀಕೃಷ್ಣನನ್ನು ಅರ್ಚಿಸಿದರೆ ಮೋಕ್ಷವುಂಟಾಗುವುದೋ ಆ ಶ್ರದ್ಧೆಯು ನಿನ್ನ ಭಾವದಲ್ಲಿ ನೆಲೆಗೊಂಡಂತೆ ಕಾಣಲಿಲ್ಲ. ಆದಕಾರಣ ಮನೆಯನ್ನು ಬಿಟ್ಟು ಮತ್ತೊಬ್ಬನ ಬಳಿಗೆ ಹೋಗದ ಹಾಗೆ ಆ ಶ್ರದ್ಧೆಯ ಕಾಲುಗಳೆರಡನ್ನೂ ನಾನು ಕಡಿದುಹಾಕುವುದರಲ್ಲಿ ಸಂದೇಹವಿಲ್ಲ. ಆ ಶ್ರದ್ಧೆಯು ಹಿತಕರವಾದ ಔಷಧ ದಂತೆ ಬಗೆಬಗೆಯಾಗಿ ಹೇಳುವ ಮಾತುಗಳು ಶ್ರೇಯಸ್ಕರವೇ? ಶ್ರೇಯಸ್ಸಿಗೆ ಶ್ರೀಕೃಷ್ಣನನ್ನು ಬಿಟ್ಟು ಬೇರೊಂದನ್ನು ಕಾರಣವನ್ನಾಗಿ ಹೇಳಬಹುದೇ? ಆ ಶ್ರದ್ಧೆಯ ಮುಖವು ಶ್ರೀಕೃಷ್ಣನ ಪಾದ ರಜಸ್ಸಿನಿಂದ ಆವರಿಸಿದುದನ್ನಾಗಿ ತಿಳಿ. ಇವೆಲ್ಲವನ್ನೂ ಆಲೋಚಿಸಿ ನೀನು ಹೊರಡಬೇಕೆಂದಿರುವೆಡೆಗೆ ತೆರಳು" ಎಂದಳು.

ಅದಕ್ಕೆ ಸುಧನ್ವನು, "ಎಲೆ ಭದ್ರೆ! ನಿನ್ನ ಸಹವಾಸದಿಂದ ಆ ಶ್ರದ್ಧೆಯು ನನಗುಂಟಾಗುವುದರಲ್ಲಿ ಸಂದೇಹವಿಲ್ಲ. ನೀನು ನನ್ನ ಪೌರುಷವನ್ನತಿಕ್ರಮಿಸಿ ಈ ಮಾತನ್ನು ಹೇಳಿದೆ. ನನಗೆ ಆಸೆಯಿದ್ದರೂ ಈ ಮಾತಿನಿಂದ ಅದು ತೀರಿಹೋಯಿತು. ಶ್ರೀಕೃಷ್ಣನ ಮೇಲೆ ನಾನು ಯುದ್ಧಕ್ಕೆ ಹೊರಡುವೆನು. ನೀನು ಮೋಕ್ಷವನ್ನು ಪಡೆ. ಚಂದನಾದ್ಯನುಲೇಪಗಳನ್ನೂ ದಿವ್ಯ ವಸ್ತ್ರಗಳನ್ನೂ ಸುವರ್ಣ ರತ್ನಾದಿಗಳನ್ನೂ ದೇಹವನ್ನೂ ನನ್ನ ಮನಸ್ಸನ್ನೂ ಬಿಟ್ಟು ನೀನು ಹೊರಟುಹೋಗಬಹುದು. ನೀನು ನಮ್ಮ ಮನೆಯಲ್ಲಿರುವಾಗ ನಿನ್ನನ್ನು ಮೋಕ್ಷ ಪ್ರಿಯಳೆಂದು ತಿಳಿದಿದ್ದರೆ ನಿನ್ನಂಥವಳಿಗೆ ವಿವೇಕವನ್ನು ಹುಟ್ಟಿಸಲು ಯತ್ನಿಸುತ್ತಿದ್ದೆನು" ಎಂದನು. ಅದಕ್ಕೆ ಪ್ರಭಾವತಿಯು, "ಎಲೈ ಪ್ರಾಣ ವಲ್ಲಭನೇ! ಮಹಾ ಬಲಶಾಲಿಯಾದ ಅರ್ಜುನನ ಮೇಲೆ ಯುದ್ಧ ಮಾಡಲು ನೀನು ಹೊರಟಿದ್ದೀಯೆ. ನನ್ನ ಮನಸ್ಸಿನಲ್ಲಿ ವಿವೇಕವೆಂಬ ಮಗನಿರು ವನು. ಅವನು ತನ್ನ ಮೂರ್ತಿಯನ್ನು ನನಗೆ ತೋರಿಸುವನು. ಅದರಂತೆ ನೀನು ನನಗೆ ಹಿತವನ್ನುಂಟುಮಾಡಬೇಕು. ನಾನು ಈಗ ಋತು ಸ್ನಾನ ಮಾಡಿದ್ದೇನೆ. ನೀನು ಹೊರಟುಹೋದರೆ ಇಲ್ಲಿ ಜಲಾಂಜಲಿಯನ್ನು ಕೊಡುವುದಕ್ಕೆ ಯಾರನ್ನೂ ಕಾಣಲಿಲ್ಲ" ಎಂದಳು. ಸುಧನ್ವನು, "ಸರ್ವ ವ್ಯಾಪಕರಾದ ಆ ಕೃಷ್ಣಾರ್ಜುನರನ್ನು

ಕಂಡು ಅವರಿಬ್ಬರನ್ನೂ ಐದು ಬಾಣಗಳಿಂದ ಗೆದ್ದು ಪುನಃ ನಿನ್ನ ಬಳಿಗೆ ಬರುವೆನು" ಎಂದನು. ಅದನ್ನು ಕೇಳಿ ಪ್ರಭಾವತಿಯು, "ಯಾರು ಕೃಷ್ಣನನ್ನು ನೋಡುವುದಕ್ಕೆ ಹೋಗುತ್ತಾರೋ, ಶ್ರೀಕೃಷ್ಣನು ಯಾರನ್ನು ನೋಡುವನೋ ಅಂತಹವರು ಪುನಃ ಈ ಸಂಸಾರದಲ್ಲಿ ಎಂದಿಗೂ ಹಿಂದಿರುಗಿ ಬರುವುದಿಲ್ಲ" ಎಂದಳು. ಆಕೆಯ ಮಾತನ್ನು ಕೇಳಿ ಸುಧನ್ವನು, "ಎಲೆ ದೇವಿ! ಶ್ರೀಕೃಷ್ಣದರ್ಶನವಾದ ಮೇಲೆ ಹಿಂದಿರುಗಿ ಬರುವುದಿಲ್ಲವೆಂಬುದನ್ನು ನೀನು ತಿಳಿದಿದ್ದರೂ ಏಕೆ ವೃಥಾ ಜಲದಾನ ಮಾಡುವವನನ್ನು ಕೇಳಿಕೊಳ್ಳುವೆ?" ಎಂದನು. ಅದಕ್ಕೆ ಪ್ರಭಾವತಿಯು, "ಪುತ್ರವಂತರು ಯಾರೋ ಅವರೇ ಪರಮ ಪದವನ್ನು ಪಡೆಯುವರು. ಶುಕ ನಾರದರು ಪುತ್ರೋತ್ಪಾದನೆ ಮಾಡಿಯೇ ಪದವನ್ನು ಪಡೆದರು. ಲೋಕದಲ್ಲಿ ಪುತ್ರ ಮುಖ ದರ್ಶನವನ್ನು ಮಾಡದವರೇ ಋಣಿಗಳು. ಪರರ ಇಚ್ಛಾ ಪೂರ್ತಿ ಮಾಡಿ ಹೋಗುವ ಸಾಧುಗಳಿಗೇ ಇಷ್ಟ ಕಾರ್ಯ ಸಿದ್ಧಿಯಾಗುವುದು. ಈ ವಿಷಯದಲ್ಲಿ ಸಂದೇಹವಿಲ್ಲ. ಇತರರ ಇಚ್ಛಾಭಂಗವನ್ನುಂಟುಮಾಡಿ ಸ್ವಕಾರ್ಯಕ್ಕೆ ಹೋದವರಿಗೆ ಎಂದಿಗೂ ಇಷ್ಟ ಸಿದ್ಧಿಯಾಗಲಾರದು" ಎಂದಳು. ಅದಕ್ಕೆ ಸುಧನ್ವನು, "ಎಲೆ ದೇವಿ! ದೊರೆಯ ಆಜ್ಞೆಯು ಕ್ರೂರವಾದುದೆಂಬುದನ್ನರಿಯೆಯಾ? ಇದೊ! ಭಯಂಕರವಾದ ದುಂದುಭಿ ಧ್ವನಿಯಾಗುತ್ತಿರುವುದು. ಸೇನೆಯು ಹೊರಡುವ ವಿಷಯದಲ್ಲಿ, ಕುದಿವ ಎಣ್ಣೆಯು ತುಂಬಿದ ಕೊಪ್ಪರಿಗೆಯು ಸಿದ್ಧವಾಗಿರುವುದು. ಯಾವನು ಬೇಗನೆ ಯುದ್ಧಕ್ಕೆ ಹೊರಡುವುದಿಲ್ಲವೋ ಅವನನ್ನು ಎಣ್ಣೆಯ ಕೊಪ್ಪರಿಗೆಯಲ್ಲಿ ಹಾಕುವರು. ರಾತ್ರಿಯಲ್ಲಿ ಋತು ಸಂಗಮವು ಪುತ್ರ ಸಂಪತ್ತನ್ನುಂಟುಮಾಡುವುದು; ದಿವಾ ಸಂಗಮವನ್ನು ಸಜ್ಜನರು ಎಂದಿಗೂ ಒಪ್ಪುವುದಿಲ್ಲ. ತಂದೆಯ ಆಜ್ಞಾನುಸಾರವಾಗಿ ಶೂರರೆಲ್ಲರೂ ಅರ್ಜುನನ ಮೇಲೆ ಯುದ್ಧಕ್ಕೆ ಹೊರಟುಹೋದರು" ಎಂದನು. ಅದಕ್ಕೆ ಪ್ರಭಾವತಿಯು ಸುಧನ್ವನನ್ನು ನೋಡಿ, ಪ್ರೀತಿಯುಕ್ತಳಾಗಿ, "ಅನಂಗಾವೃತಳಾಗಿರುವ ನನ್ನನ್ನು ಮೊದಲು ಜಯಿಸಲಾರದ ನಿನಗೆ ಅನೇಕಾಂಗಗಳಿಂದ ಕೂಡಿದ ಸೇನೆಯನ್ನು ಹಗಲು ಜಯಿಸುವ ಧೈರ್ಯವು ಎಲ್ಲಿಯದು? ಕಾಲಾಂತಕ ಯಮರಿಗೆ ಸಮಾನರಾದ ವೀರರೊಡನೆ ಕೃಷ್ಣನ ಎದುರಿಗೆ ನೀನು ಹೋದಮೇಲೆ ನನ್ನ ಗತಿಯೇನು?" ಎಂದಳು. ಅದನ್ನು ಕೇಳಿ ಸುಧನ್ವನು, "ಎಲೈ ವಿಶಾಲಾಕ್ಷಿ! ಹಾಗೆ ಹೇಳಬೇಡ. ನಿನಗೆ ಇನ್ನೂ ಬಹು ದಿನಗಳಿವೆ. ಯುದ್ಧದಲ್ಲಿ ಅರ್ಜುನನು ಅಷ್ಟು ದಿನಗಳವರೆಗೂ ನಿರೀಕ್ಷಿಸುವುದಿಲ್ಲ" ಎಂದನು. ಆಗ ಪ್ರಭಾವತಿಯು, "ಪ್ರಾಣನಾಥನೇ! ನನಗೆ ಈ ದಿನವು ಋತುಸ್ನಾನದ ಹದಿನಾರನೆಯ ದಿನವಾಗಿದೆ. ಋತುಭಂಗದಿಂದುಂಟಾಗುವ ಪಾಪವು ನಿನಗೆ ತಿಳಿದೇ ಇದೆ. ಪಿತೃ ಶ್ರಾದ್ಧವೂ ಪತ್ನಿಯ ಋತು ಸ್ನಾನದ ಹದಿನಾರನೆಯ ದಿನವೂ ಏಕಾದಶೀ ವ್ರತವೂ ಈ ಮೂರೂ ಒಂದೇ ದಿನ ಸೇರಿದರೆ ಈ ಸಂದೇಹ ವಿಷಯದಲ್ಲಿ ಬುದ್ಧಿಶಾಲಿಯು ಹೇಗೆ ನಡೆಯಿಸಬೇಕು? ಧರ್ಮವು ಸೂಕ್ಷ್ಮವೂ ಬಹಳ ಗಹನವೂ ಆದುದು. ಅದನ್ನು ವಿಚಾರುವುದಕ್ಕೆ ಯಾರಿಗೆ ತಾನೇ ಸಾಧ್ಯವು?" ಎಂದಳು. ಅದಕ್ಕೆ ಸುಧನ್ವನು, "ಮೊದಲು ಶ್ರದ್ಧಾಪೂರ್ವಕವಾಗಿ ತಂದೆಯ ಶ್ರಾದ್ಧವನ್ನು ಮಾಡಬೇಕು. ಶ್ರಾದ್ಧಶೇಷಾನ್ನವ

ಸ್ನಾಘ್ರಾಣಿಸಿ ರಾತ್ರಿಮಧ್ಯದಲ್ಲಿ ಏಕಾದಶೀ ವ್ರತವನ್ನು ಮಾಡಿ, ಆ ಬಳಿಕ ಋತು ಸಂಗವನ್ನು ಮಾಡಬೇಕು ಎಂದು, ಇಂತಹ ಧರ್ಮ ಸಂಕಟಗಳು ಪ್ರಾಪ್ತವಾದಾಗ ಮಾಡಬೇಕಾದ ಕರ್ತವ್ಯಗಳನ್ನು, ಧರ್ಮಾರ್ಥಜ್ಞರಾದ ಋಷಿಗಳು ಧರ್ಮಶಾಸ್ತ್ರಗಳ ಆಧಾರದಿಂದ ನಿರ್ಣಯ ಮಾಡಿರುವರಷ್ಟೆ! ಹಾಗೆಯೇ ನಡೆಯಬೇಕು. ಇದೇ ಗೃಹಸ್ಥನಿಗೆ ಪರಮ ಧರ್ಮವು'' ಎಂದನು.

ಪ್ರಭಾವತಿಯು ಆ ಮಾತನ್ನು ಕೇಳಿ, ''ಹಾಗಿದ್ದರೆ ನಿಮ್ಮ ತಂದೆಯು ಯುದ್ಧ ಭೂಮಿಯಲ್ಲಿರುವನು. ಈ ದಿನ ಏಕಾದಶೀ ವ್ರತವಿಲ್ಲ. ಋತು ದಾನವನ್ನು ಮಾಡಿ ಬಳಿಕ ಕೃಷ್ಣನ ಮೇಲೆ ಯುದ್ಧಕ್ಕೆ ಹೊರಡು'' ಎಂದು ಹೇಳಿ ಶೂರನಾದ ಸುಧನ್ವನ ಕೊರಳನ್ನು ಕೋಮಲವಾದ ತನ್ನ ಬಾಹು ದ್ವಯದಿಂದ, ವೃಕ್ಷವನ್ನು ಬಳ್ಳಿಯು ಸುತ್ತಿ ಕೊಳ್ಳುವಂತೆ, ಬಿಗಿದಪ್ಪಿದಳು. ಪ್ರಿಯೆಯ ನಿರ್ಬಂಧದಿಂದ ಅವಳನ್ನು ಬಿಟ್ಟು ಹೊರಡ ಲಾರದೆ ಸುಧನ್ವನು ಕಿರೀಟ ಕವಚಗಳನ್ನು ತೆಗೆದು ನೆಲದಮೇಲಿಟ್ಟು ನಸು ನಗುತ್ತ ರತ್ನ ಖಚಿತವಾದ ಶಯನದಲ್ಲಿ ಅವಳೊಡನೆ ಕ್ರೀಡಿಸಿದನು. ಪ್ರಭಾವತಿಯು ಗರ್ಭವತಿ ಯಾದಳು. ಸುಧನ್ವನು ಸ್ನಾನ ಮಾಡಿ ರಥವನ್ನೇರಿ ಮನೆಯಿಂದ ಹೊರಡುವಷ್ಟರಲ್ಲಿ ಹಂಸಧ್ವಜನು ಯುದ್ಧಭೂಮಿಯಲ್ಲಿ ಸೇನಾಪತಿಯನ್ನು ನೋಡಿ, ''ದುಂದುಭಿ ಧ್ವನಿ ಯನ್ನು ಕೇಳಿ ವೀರರೆಲ್ಲರೂ ಇಲ್ಲಿಗೆ ಬಂದರು. ಸುಧನ್ವನು ಯುದ್ಧಭೂಮಿಗೆ ಬಂದಂತೆ ಕಾಣಲಿಲ್ಲ. ಅವನಿಗೆ ನನ್ನ ಆಜ್ಞೆಯು ತಿಳಿಯಲಿಲ್ಲವೋ! ಎಣ್ಣೆಯ ಕೊಪ್ಪರಿಗೆಯನ್ನು ಮರೆತನೋ ಹೇಗೋ! ನನ್ನ ಮಗನು ಪ್ರಯಾಣ ಭೇರಿಯನ್ನುಲ್ಲಂಘಿಸಿದನೋ? ಕುದುರೆಗಳೂ ಮದ ಗಜಗಳೂ ಅರ್ಜುನನೆದುರಿಗೆ ಬಂದು ನಿಂತಿವೆ. ಸುಧನ್ವನು ಹಿಂದುಳಿದು ಯಾವ ದುಷ್ಕೃತ್ಯವನ್ನು ಮಾಡುತ್ತಿರುವನು? ಅದರಿಂದ ಯವನರು ಆಯುಧ ಪಾಣಿಗಳಾಗಿ ಸೇನೆಯೊಡನೆ ಹೋಗಿ, ಕೃಷ್ಣನಿಗೆ ಪರಾಙ್ಮುಖನಾದ ಆ ದುಷ್ಟ ನನ್ನು ಜುಟ್ಟು ಹಿಡಿದು ನೆಲದಲ್ಲಿ ಎಳೆದು ಎಣ್ಣೆಯ ಕೊಪ್ಪರಿಗೆಯ ಬಳಿಗೆ ತನ್ನಿರಿ'' ಎಂದು ಆಜ್ಞೆ ಮಾಡಿದನು.

ಆತನ ಆಜ್ಞಾನುಸಾರವಾಗಿ ಯವನರು ಬೇಗನೆ ಹೊರಟು ರತ್ನ ಖಚಿತವಾಗಿಯೂ ವಿಚಿತ್ರವಾಗಿಯೂ ಮನೋಹರವಾಗಿಯೂ ಇರುವ ಸುಧನ್ವನ ಮನೆಯ ಬಳಿಗೆ ಬಂದರು. ಸುಖವನ್ನನುಭವಿಸಿ ಎದುರಿಗೆ ಬರುತ್ತಿರುವ ದೊರೆಯ ಮಗನನ್ನು ನೋಡಿ ಆ ಯವನರು ವಜ್ರಪಾತಕ್ಕೆ ಸದೃಶವಾದ ದೊರೆಯ ಆಜ್ಞೆಯನ್ನು ಅವನಿಗೆ ಹೀಗೆ ತಿಳಿಸಿದರು: ''ಎಲೈ ಶೂರನೇ! ನಾವು ನಿನ್ನನ್ನು ಹಿಡಿದು ಎಳೆದುಕೊಂಡು ಹೋಗು ವುದಕ್ಕೆ ಬಂದಿರುವೆವು. ಆ ದೊರೆಯ ಆಜ್ಞಾಭಂಗವನ್ನು ಏಕೆ ಮಾಡಿದೆ? ನೀನು ಹಿಂದುಳಿದು ಎಲ್ಲ ವಿಷಯದಲ್ಲಿಯೂ ವಂಚನೆ ಮಾಡಿದ್ದೀಯೆ. ಮೂಢನಾದ ನಿನ್ನನ್ನು ನೆಲದ ಮೇಲೆ ಎಳೆದುಕೊಂಡು ಯುದ್ಧಭೂಮಿಗೆ ತರಬೇಕೆಂದು ಸೇನೆಯೊಡನೆ ನಿಮ್ಮ ತಂದೆಯು ನಮ್ಮನ್ನು ಕಳುಹಿಸಿರುವನು. ಅರ್ಜುನನನ್ನು ಪ್ರತಿಭಟಿಸಿ ಪದ್ಮವ್ಯೂಹವ ನ್ನೊಡ್ಡಿ ಯುದ್ಧ ವಿಶಾರದರೊಡನೆ ಸೇರಿರುವ ನಿಮ್ಮ ತಂದೆಯ ಬಳಿಗೆ ನಡೆ'' ಎಂದರು. ಅವರ ಮಾತಿನಿಂದ ಸ್ವಾಮಿಯಾದ ತಮ್ಮ ತಂದೆಯು ತನ್ನ ಮೇಲೆ ಕೋಪಿಸಿಕೊಂಡಿರುವ

ನೆಂಬುದನ್ನು ತಿಳಿದು ಸುಧನ್ವನು ರಥಾರೂಢನಾಗಿ ಅವರೊಡನೆ ಮುಂದೆ ಹೊರಟು, ಸುತ್ತಲೂ ಪೂರು ಯೋಜನ ವಿಸ್ತಾರವುಳ್ಳುದಾಗಿ ಸಮುದ್ರದಂತಿರುವ ಸೈನ್ಯವನ್ನೂ, ಅರ್ಜುನನನ್ನು ಜಯಿಸುವ ಕುತೂಹಲವುಳ್ಳವನಾಗಿರುವ ತಂದೆಯನ್ನೂ ನೋಡಿದನು; ಕುಪಿತನಾದ ತನ್ನ ತಂದೆಗೆ ನಮಸ್ಕರಿಸಿ ಎದುರಿಗೆ ನಿಂತುಕೊಂಡನು. ಅವನನ್ನು ನೋಡಿ ದೊರೆಯು ಕೋಪದಿಂದ, "ಎಲೈ ಶೂರನೇ! ನೀನು ಏಕೆ ನನ್ನ ಆಜ್ಞೆಯನ್ನುಲ್ಲಂಘಿಸಿದೆ?" ಎಂದು ಕೇಳಿದನು. ಅದಕ್ಕೆ ಸುಧನ್ವನು, "ಎಲೈ ರಾಜೇಂದ್ರನೇ! ಮನೆಯಲ್ಲಿ ನಿನ್ನ ಸೊಸೆಯು ಸಂತಾನಾಪೇಕ್ಷೆಯಿಂದ ಪ್ರಾರ್ಥಿಸಲು ನಾನು ಯುದ್ಧ ಪ್ರಯಾಣ ಮಾಡಲು ತಡವಾಯಿತು" ಎಂದನು.

ಅದಕ್ಕೆ ಹಂಸಧ್ವಜನು, "ಶ್ರೀಕೃಷ್ಣನು ಯುದ್ಧಭೂಮಿಯಲ್ಲಿ ಪ್ರತ್ಯಕ್ಷನಾಗಿದ್ದರೂ ಅವನನ್ನು ನೋಡದ ನೀನು ಬಹು ಮೂರ್ಖನಲ್ಲವೇ? ನೀನು ನಮ್ಮ ವಂಶಕ್ಕೇ ವಂಚನೆ ಮಾಡಿದಹಾಗಾಯಿತು. ನಿನ್ನ ಪತ್ನಿಗೆ ನೀನು ಸಂತಾನ ದಾನ ಮಾಡಿ ಊರಿನಿಂದ ಹೊರಟಿದ್ದೀಯೆ. ಇದರಿಂದ ನಿನ್ನ ಪೂರ್ವ ಪಿತೃಗಳಿಗೆ ಎಂದಿಗೂ ಸಂಪೂರ್ಣವಾದ ತೃಪ್ತಿಯುಂಟಾಗಲಾರದು. ಎಲೈ ದುರಾತ್ಮನೇ! ಜಲದಾನಕ್ಕರ್ಹವಾದ ಸಂತತಿ ಮಾತ್ರದಿಂದ ನಿಮ್ಮವರಾಗಲಿ ನಮ್ಮವರಾಗಲಿ ಶ್ರೀಕೃಷ್ಣನನ್ನು ಬಿಟ್ಟು ತೃಪ್ತಿಯನ್ನು ಪಡೆಯರು. ಜನರ ಬಾಯಾರಿಕೆಯನ್ನು ಹೋಗಲಾಡಿಸಲು ವರುಣನಿಗೂ ಶಕ್ತಿಯಿಲ್ಲ. ಶ್ರೀಕೃಷ್ಣನನ್ನು ಬಿಟ್ಟು ಪುತ್ರವಂತರಾದ ಮಾತ್ರಕ್ಕೆ ಜನರು ಸ್ವರ್ಗವನ್ನೂ ಮೋಕ್ಷವನ್ನೂ ಪಡೆಯುವುದಾದರೆ ನಾಯಿಗಳಿಗೂ ಹಂದಿಗಳಿಗೂ ಸ್ವರ್ಗ ಪ್ರಾಪ್ತಿಯಾಗಬಹುದಷ್ಟೆ! ಮಹಾ ಬಲಶಾಲಿಯಾದ ಅರ್ಜುನನು ಅಶ್ವ ರಕ್ಷಕನಾಗಿ ಬಂದಿದ್ದಾನೆ. ಶ್ರೀಕೃಷ್ಣನು ಯುದ್ಧದಲ್ಲಿ ಅವನನ್ನು ಬಿಟ್ಟು ಒಂದು ಕ್ಷಣ ಕಾಲವೂ ಇರುವುದಿಲ್ಲ. ನಿನ್ನ ಶಕ್ತಿಯೂ ವಿಚಾರವೂ ಧರ್ಮಾಚರಣೆಯೂ ವ್ಯರ್ಥವು. ಊರಿಗೆ ಬಂದಿರುವ ಕೃಷ್ಣನನ್ನು ಕೇಳಿಯೂ ನೀನು ಹೇಗೆ ಕಾಮಾಸಕ್ತನಾದೆ? ಹೀಗೆ ಕೃಷ್ಣನಿಗೆ ವಿಮುಖನಾಗಿಯೂ, ಮಲಿನನಾಗಿಯೂ, ಕಾಮಾತುರನಾಗಿಯೂ, ಕುಪುತ್ರನಾಗಿಯೂ ಇರುವ ನಿನ್ನನ್ನು ಕಾದೆಣ್ಣೆಯ ಕೊಪ್ಪರಿಗೆಯಲ್ಲಿ ಹಾಕಿ ಕುತ್ತಿಗೆಯವರೆಗೂ ಮುಳುಗಿಸುತ್ತೇನೆ" ಎಂದು ಹೇಳಿ ಸೇವಕರನ್ನು ಕರೆದು, "ಎಲೈ! ನೀವು ನಮ್ಮ ಪುರೋಹಿತರಾದ ಶಂಖ, ಲಿಖಿತ—ಇವರಿಬ್ಬರ ಬಳಿಗೆ ಹೋಗಿ ನಡೆದ ಸಂಗತಿಯನ್ನೆಲ್ಲ ಅವರಿಗೆ ತಿಳಿಸಿ ಅವರ ಆಜ್ಞೆಯಂತೆ ನಾನು ನಡೆಯಿಸುವೆನೆಂದು ಹೇಳಿರಿ; ನನ್ನ ಜೀವಕ್ಕಿಂತಲೂ ರಾಜ್ಯಕ್ಕಿಂತಲೂ ಹೆಚ್ಚು ಆವಶ್ಯಕವಾದ ಅವರ ಮಾತನ್ನು ನಾನು ಮೀರಲಾರೆನು. ಕೊಪ್ಪರಿಗೆಯ ಎಣ್ಣೆಯನ್ನು ಪುನಃ ಕಾಯಿಸಿರಿ. ಅರ್ಜುನಾದಿಗಳು ನನ್ನ ಆಜ್ಞೆಯನ್ನು ನೋಡಲಿ" ಎಂದು ಹೇಳಿದನು.

ಹೀಗೆ ರಾಜಾಜ್ಞಾಬದ್ಧರಾದ ಸೇವಕರು ಪುರೋಹಿತರಾದ ಶಂಖ ಲಿಖಿತರನ್ನು ಕೇಳುವುದಕ್ಕೆ ಬಂದು, ಅವರನ್ನು ಕುರಿತು, "ದೊರೆಯು ಈ ಧರ್ಮ ಸಂಕಟ ವಿಷಯದಲ್ಲಿ ನಿಮ್ಮನ್ನು ಕೇಳಿಬರುವಂತೆ ಹೇಳಿದ್ದಾನೆ. ಸುಧನ್ವನು ರಾಜಾಜ್ಞೆಯನ್ನುಲ್ಲಂಘಿಸಿ ಸಂತಾನೋತ್ಪಾದನ ಕಾರಣದಿಂದ ಯುದ್ಧಕ್ಕೆ ಹಿಂದುಳಿದಿದ್ದಾನೆ. ಆ ಪಾಪಿಷ್ಠನ

ವಿಷಯದಲ್ಲಿ ಏನು ಮಾಡಬೇಕು? ಬಲಾತ್ಕಾರದಿಂದ ದೊರೆಯು ತನ್ನ ಮಗನನ್ನು ಎಳೆಯಿಸಿ ತಂದು ಎಣ್ಣೆಯ ಕೊಪ್ಪರಿಗೆಯಲ್ಲಿ ಹಾಕದೆ ಪುತ್ರವಾತ್ಸಲ್ಯದಿಂದ ಅದರ ಬಳಿಯಲ್ಲಿ ಅವನನ್ನು ಕೆಡವಿಸಿದ್ದಾನೆ. ಇದಕ್ಕೆ ನೀವು ಏನು ಹೇಳುವಿರಿ?'' ಎಂದು ಕೇಳಿದರು. ಅದಕ್ಕೆ ಲಿಖಿತನು, ''ಎಲೈ ದೂತರುಗಳಿರಾ! ನೀವು ದೊರೆಯ ಬಳಿಗೆ ಹೋಗಿ ನಾನು ಹೀಗೆ ತಿಳಿಸಿದೆನೆಂದು ಹೇಳಿರಿ: ಯಾವ ಮೂಢನು ಲೋಕದಲ್ಲಿ ಭಯದಿಂದಲೋ ಮೋಹದಿಂದಲೋ ತನ್ನ ಮಾತನ್ನು ತಾನು ಉಳಿಸಿಕೊಳ್ಳುವದಿಲ್ಲವೋ ಅವನು ಕ್ರೂರವಾದ ನರಕದಲ್ಲಿ ಶಾಶ್ವತವಾಗಿ ಬೀಳುವನು. ವಿವೇಕಿಯಾದ ಹರಿಶ್ಚಂದ್ರನು ತನ್ನ ಸತ್ಯವನ್ನು ಕಾಪಾಡಲು ವಿಶ್ವಾಮಿತ್ರನಿಗೆ ತನ್ನ ರಾಜ್ಯವನ್ನು ಕೊಟ್ಟನು; ತನ್ನ ಹೆಂಡತಿ ಮಕ್ಕಳನ್ನು ಮಾರಿಕೊಂಡನು; ಕಾಶಿಯಲ್ಲಿ ಗಂಗಾ ತೀರದಲ್ಲಿ ಹೆಂಡತಿಯನ್ನು ಕೊಲ್ಲಲು ಸಿದ್ಧನಾದನು; ಸತ್ತ ತನ್ನ ಮಗನ ಮೈಮೇಲಿನ ವಸ್ತ್ರವನ್ನು ತೆಗೆದುಕೊಂಡನು. ಪೂರ್ವದಲ್ಲಿ ದಶರಥನು ತನ್ನ ಮಗನಾದ ರಾಮನನ್ನು ಅರಣ್ಯಕ್ಕೆ ಕಳುಹಿಸಿ ಕೈಕೇಯಿಗೆ ತಾನು ಕೊಟ್ಟಿದ್ದ ಮಾತನ್ನು ಸತ್ಯವನ್ನಾಗಿ ಮಾಡಿದನು. ನಿಮ್ಮ ದೊರೆಯು, 'ತನ್ನ ಆಜ್ಞಾಭಂಗಮಾಡಿದವನು ಸಹೋದರನಾಗಲಿ ಮಗನಾಗಲಿ ಮೊಮ್ಮಗನಾಗಲಿ ಅವನನ್ನು ಕಾದೆಣ್ಣೆಯ ಕೊಪ್ಪರಿಗೆಯಲ್ಲಿ ಹಾಕಿಸುವೆನು' ಎಂದು ಹೇಳಿ ಈಗ ತನ್ನ ಮಗನನ್ನು ಹಾಗೆ ಮಾಡದಿದ್ದರೆ ಅವನ ಸತ್ಯಕ್ಕೆ ಭಂಗ ಬರುವುದು. ಯಾವನು ಕೃಷ್ಣನನ್ನೂ ರಥಿಕಶ್ರೇಷ್ಠನಾದ ಅರ್ಜುನನನ್ನೂ ನೋಡಿ ವಿಮುಖನಾಗಿ ಕಾಮಾಸಕ್ತಿಯಿಂದ ಮನೆಯಲ್ಲಿ ನಿಂತನೋ ಆ ಮಗನನ್ನು ದೊರೆಯು ರಕ್ಷಿಸಿಕೊಂಡಿರುವನು. ಆದಕಾರಣ ಅಣ್ಣತಮ್ಮಂದಿರಾದ ನಾವಿಬ್ಬರೂ ಈ ದೇಶವನ್ನು ಬಿಟ್ಟು ಹೊರಟುಹೋಗುತ್ತೇವೆ. ಸತ್ಯಭ್ರಷ್ಟನಾದ ರಾಜನ ದೇಶದಲ್ಲಿ ವಾಸಮಾಡಕೂಡದು. ಅಂತಹವನ ಸಹವಾಸದಿಂದ ಇತರರಿಗೂ ಆ ಗುಣಗಳೇ ಬರುವುವು. ಅವನ ಜೊತೆಯಲ್ಲಿ ಕುಳ್ಳಿರುವುದು, ಮಲಗುವುದು, ನಡೆಯುವುದು, ಇರುವುದು, ಊಟಮಾಡುವುದು—ಹೀಗೆ ಮಾಡುವವರಿಗೆ ಪಾಪವುಂಟಾಗುವುದು'' ಎಂದು ಹೇಳಿ ಲಿಖಿತನು ಶಂಖನೊಡನೆ ಹೊರಟುಹೋದನು.

ಆ ದೂತರು ದೊರೆಯ ಬಳಿಗೆ ಬಂದು ಆ ಪುರೋಹಿತನು ಹೇಳಿದಂತೆ ಎಲ್ಲವನ್ನೂ ಹೇಳಿ, ''ಎಲೈ ಮಹಾರಾಜನೇ! ಬುದ್ಧಿಶಾಲಿಯಾದ ಆ ಲಿಖಿತನು ಕೋಪಿಸಿಕೊಂಡು ಊರನ್ನು ಬಿಟ್ಟು ಹೊರಟುಹೋದನು. ಧರ್ಮೋಪದೇಶಕನಾದ ಆ ಮುನಿಯನ್ನು ಕರೆಯಿಸು'' ಎಂದು ಹೇಳಿದರು. ಅದನ್ನು ಕೇಳಿ ಹಂಸಧ್ವಜನು ಸುಮತಿಯೆಂಬ ತನ್ನ ಮಂತ್ರಿಯನ್ನು ಕರೆದು, ''ದುಷ್ಟನಾದ ನನ್ನ ಮಗ ಸುಧನ್ವನನ್ನು ನೀನು ನನ್ನ ಆಜ್ಞಾಪ್ರಕಾರವಾಗಿ ಕಾದೆಣ್ಣೆಯ ಕೊಪ್ಪರಿಗೆಯಲ್ಲಿ ಕೆಡಹು; ನಾನು ಹೋಗುವೆನು. ಧೈರ್ಯಶಾಲಿಗಳಾದ ಸಚಿವರೊಡನೆ ಸೇರಿ ವೀರನಾದ ಅರ್ಜುನನೊಡನೆ ಯುದ್ಧಮಾಡುತ್ತಿರು'' ಎಂದು ಹೇಳಿ ಹೊರಟು, ಆ ಪುರೋಹಿತರ ಬಳಿಗೆ ಬಂದು ಅವರಿಗೆ ನಮಸ್ಕರಿಸಿ, ಅವರಿಬ್ಬರನ್ನೂ ಎಣ್ಣೆಯ ಕೊಪ್ಪರಿಗೆಯ ಬಳಿಗೆ ಕರೆತಂದನು. ಸುಮತಿಯು ದೊರೆಯು ಹೇಳಿದಂತೆ ಎಲ್ಲವನ್ನೂ ನಡೆಯಿಸಿದನು; ಮಹಾ ವೀರ

ನಾದ ಸುಧನ್ವನನ್ನು ಕುರಿತು, "ಎಲೈ ರಾಜಶ್ರೇಷ್ಠನಾದ ಸುಧನ್ವನೇ! ಮಹಾ ಬಲಶಾಲಿಯಾದ ನಿನ್ನನ್ನು ನೋಡಿದರೆ ನನ್ನ ಮನಸ್ಸಿಗೆ ಬಹಳ ಕರುಣೆಯುಂಟಾಗುವುದು; ರಾಜಾಜ್ಞೆಯೂ ಮೀರತಕ್ಕುದಲ್ಲ; ನನಗೆ ರಾಜಾಜ್ಞೆಯಾದರೋ ನಿನ್ನ ವಿಷಯದಲ್ಲಿ ಬಹು ಕ್ರೂರವಾಗಿದೆ" ಎಂದು ಹೇಳಿದನು. ಅದಕ್ಕೆ ಸುಧನ್ವನು, "ಪರಾಧೀನನಾದ ನೀನು ರಾಜಾಜ್ಞೆಯನ್ನು ನಡೆಯಿಸಬೇಕು. ಪೂರ್ವದಲ್ಲಿ ಪರಶುರಾಮನು ತಂದೆಯ ಮಾತಿನಂತೆ ತನ್ನ ತಾಯಿಯ ತಲೆಯನ್ನು ಕಡಿಯಲಿಲ್ಲವೇ? ನಿನಗೆ ದುಃಖವೇಕೆ? ಎಲೈ ಬುದ್ಧಿಶಾಲಿಯೇ! ನಾನು ಶುಭಕರವಾದ ಪುಣ್ಯಕಾರ್ಯವನ್ನು ಮಾಡಿ ಪ್ರಸಿದ್ಧನಾಗಿದ್ದೇನೆ; ನನಗೆ ಮರಣ ಭಯವಿಲ್ಲ. ಕಾದೆಣ್ಣೆಯ ಕೊಪ್ಪರಿಗೆಯಲ್ಲಿ ಈಗ ನನ್ನನ್ನು ಕೆಡಹು" ಎಂದನು. ಅದೇ ಪ್ರಕಾರವಾಗಿ ಸ್ನಾನ ಮಾಡಿ ದಿವ್ಯಾಂಬರವನ್ನೂ ಹೃದಯದಲ್ಲಿ ತುಳಸೀ ದಳಗಳ ದಂಡೆಯನ್ನೂ ಧರಿಸಿ ವಸುದೇವ ಪುತ್ರನಾದ ಶ್ರೀಕೃಷ್ಣನನ್ನು ಧ್ಯಾನಿಸುತ್ತಿದ್ದ ಆ ಸುಧನ್ವನನ್ನು ಸುಮತಿಯು ದೊರೆಯ ಅಪ್ಪಣೆಯ ಪ್ರಕಾರ ಕಾದೆಣ್ಣೆಯ ಕೊಪ್ಪರಿಗೆಯಲ್ಲಿ ಎತ್ತಿಹಾಕಿಸಿದನು.

ದುರ್ಜನನ ಮನಸ್ಸು ಅನ್ಯರ ಏಳಿಗೆಯನ್ನು ನೋಡಿ ಹೇಗಾಗುವುದೋ ಹಾಗೆ ನೂರಾರು ಸುಳಿಗಳಿಂದ ಕೂಡಿ ಕುದಿಯುತ್ತಿರುವ ಎಣ್ಣೆಯನ್ನು ನೋಡಿ, ಮೊದಲು ಸುಧನ್ವನು ಶ್ರೀಕೃಷ್ಣನನ್ನು ಕುರಿತು ಹೇಳಿದುದನ್ನು ನಿನಗೆ ಹೇಳುವೆನು, ಎಲೈ ಜನಮೇಜಯನೇ! ಏಕಾಗ್ರ ಚಿತ್ತನಾಗಿ ಕೇಳು: "ಎಲೈ ಗೋವಿಂದನೇ! ನಾನು 'ರಕ್ಷಿಸು ರಕ್ಷಿಸು' ಎಂದು ನಿನ್ನನ್ನು ಕೂಗಿಕೊಂಡುದನ್ನು ಕೇಳಿದರೂ ನೀನು ಬಾರದುದಕ್ಕೆ ಕಾರಣವು ತಿಳಿಯಿತು. 'ಈ ಸುಧನ್ವನು ಮೊದಲು ಕಾಮಾಸಕ್ತನಾಗಿ ನನ್ನನ್ನು ಮರೆತು, ಬಳಿಕ ಈಗ ಸಂಕಟ ಬಂದಾಗ ಜಗದ್ಗುರುವಾದ ಹರಿಯನ್ನು ಸ್ಮರಿಸುತ್ತಾನೆ' ಎಂದು. ಆದರೆ ಸಂಕಟದಲ್ಲಿ ಬಿದ್ದ ಜನರೇ ನಿನ್ನನ್ನು ಯಾವಾಗಲೂ ಭಯದಿಂದ ಸ್ಮರಿಸುವರಲ್ಲದೆ ಸುಖವಾಗಿದ್ದ ಕಾಲದಲ್ಲಿ ಸ್ಮರಿಸರು. ಇದನ್ನು ನಾನು ಸತ್ಯವಾಗಿ ಹೇಳುತ್ತೇನೆ. ಹರಿಯನ್ನುಳಿದ ಕಷ್ಟಕರವಾದ ಈ ನನ್ನ ಸೌಖ್ಯವು ವ್ಯರ್ಥವೆಂದು ಭಾವಿಸುವೆನು. ಪ್ರಹ್ಲಾದ, ಗಜೇಂದ್ರ, ಧ್ರುವ, ದ್ರೌಪದಿ, ಇತರ ಗೋಪಾಲರು—ಇವರೇ ಮೊದಲಾದವರು ತಮ್ಮ ಕಷ್ಟಕಾಲಗಳಲ್ಲಿಯೇ ಹರಿ ಸ್ಮರಣೆಯನ್ನು ಮಾಡಿದ್ದಾರೆ. ನೀನು ಪೂರ್ವದಲ್ಲಿ ನಿನ್ನನ್ನು ಸ್ಮರಿಸಿದ ಅವರನ್ನು ಕಷ್ಟದಿಂದ ತಪ್ಪಿಸಿ ರಕ್ಷಿಸಿದ್ದೀಯೆ. ಜನರಿಗೆ ಪ್ರಾಣಾಂತ ಕಾಲದಲ್ಲಿ ನಿನ್ನ ಸ್ಮರಣೆಯು ಮುಕ್ತಿಪ್ರದವಾಗುವುದು. ಮನಸ್ಸಿನಲ್ಲಿ ನಿನ್ನನ್ನು ಚಿಂತಿಸುತ್ತಿರುವ ನನಗೆ ಮುಕ್ತಿಯಾಗುವುದರಲ್ಲಿ ಸಂದೇಹವಿಲ್ಲ; ಆದರೆ ಲೋಕನಿಂದೆಗಾಸ್ಪದವಾಗುವುದು: 'ವೀರನಾದ ಸುಧನ್ವನು ಎಣ್ಣೆಯ ಕೊಪ್ಪರಿಗೆಯಲ್ಲಿ ಬಿದ್ದು ದುರ್ಮರಣವನ್ನು ಹೊಂದಿದನು; ಅವನು ಕೃಷ್ಣಾರ್ಜುನರನ್ನು ಸಂತೋಷಪಡಿಸಲಿಲ್ಲ; ಗಾಂಡೀವ ಧನುಸ್ಸಿನಿಂದ ಬಿದ್ದ ಬಲವಾದ ಏಟುಗಳಿಂದ ಅವನ ಮೈ ಪುಡಿ ಪುಡಿಯಾಗಲಿಲ್ಲ; ಸಮರ್ಥನಾದ ಸುಧನ್ವನ ಗತಿಯು ಕಳ್ಳನಂತಾಯಿತು; ಅವನು ಕೃಷ್ಣಾರ್ಜುನರ ಸ್ಮರಣೆ ಮಾಡಿ ಸೈನ್ಯವನ್ನು ಕೊಲ್ಲಲಿಲ್ಲ' ಎಂಬುದೇ ಮೊದಲಾದ ಮಾತುಗಳಿಂದ ಜನರು ನನ್ನನ್ನು ಹಾಸ್ಯ ಮಾಡು

ವರು. ಲಜ್ಜಾ ಸಮುದ್ರದಲ್ಲಿ ಮುಳುಗಿದ ದ್ರೌಪದಿಯನ್ನು ವಸ್ತ್ರ ಪ್ರದಾನ ರೂಪವಾಗಿ ದೊಡ್ಡ ಸಭೆಯಲ್ಲಿ ದ್ರೋಣ ಭೀಷ್ಮಾದಿಗಳೆದುರಿಗೆ ರಕ್ಷಿಸಿದೆ. ಈಗ ನನ್ನನ್ನು ಅಗ್ನಿ ದಾಹದಿಂದ ತಪ್ಪಿಸಿ ರಕ್ಷಿಸುವವನಾಗು". ಹೀಗೆಂದು ಹೇಳುತ್ತಿರಲು, ಶ್ರೀಕೃಷ್ಣ ಧ್ಯಾನದ ಮಹಿಮೆಯಿಂದ ಕಾದೆಣ್ಣೆಯು ಅವನಿಗೆ, ಸತ್ಪುರುಷರ ಮನಸ್ಸಿನಂತೆ, ಶೀತಲ ವಾಗಿದ್ದಿತು. ಅಲ್ಲಿ ನೋಡುತ್ತಿದ್ದ ಜನರೆಲ್ಲರೂ, ನೀರಿನಲ್ಲಿ ಅರಳಿದ ಕಮಲವು ಕೋಮಲವಾಗಿಯೂ ಸೊಗಸಾಗಿಯೂ ಕಾಣುವಂತೆ, ಕರ್ಣಕುಂಡಲದಿಂದಲೂ ವಿಶಾಲ ನೇತ್ರದಿಂದಲೂ ಕಾದೆಣ್ಣೆಯಲ್ಲಿ ಹೊಳೆಯುತ್ತಿರುವ ಸುಧನ್ವನ ಮುಖವನ್ನು ನೋಡಿ ವಿಸ್ಮಿತರಾದರು; ಹಾಗೆಯೇ, ದುಃಖದಿಂದ ಕಣ್ಣೀರನ್ನು ಸುರಿಸುತ್ತಲೂ, ನೆಲದಲ್ಲಿ ಬಿದ್ದು ಹೊರಳುತ್ತಲೂ, ಎದೆಯನ್ನು ಚಚ್ಚಿಕೊಳ್ಳುತ್ತಲೂ, ಅಯ್ಯೋ! ಎಂದು ಕೂಗಿಕೊಳ್ಳುತ್ತಲೂ, ಕಿರೀಟವನ್ನು ತೆಗೆದು ಎಸೆಯುತ್ತಲೂ, ಕೈಗಳನ್ನು ಕೊಡಹುತ್ತಲೂ ಇದ್ದರಲ್ಲದೆ, 'ದೊರೆಯು ತನ್ನ ಮಗನಿಗಾಗಿ ನಮ್ಮನ್ನು ಏಕೆ ಅಗ್ನಿ ಯಲ್ಲಿ ಹಾಕಬಾರದಾಗಿದ್ದಿತು? ಅರ್ಜುನನೂ ಕೃಷ್ಣನೂ ಇರುವ ಸ್ಥಳಕ್ಕೆ ಹೋಗೋಣ ನಡೆಯಿರಿ' ಎಂದು ಹೇಳುತ್ತಿದ್ದರು.

ಹಂಸಧ್ವಜನು ಶಂಖನೊಡನೆ ನೋಡುತ್ತ, ಗೋವಿಂದ, ಮಾಧವ ಮೊದಲಾದ ಕೃಷ್ಣನ ಶುಭ ನಾಮ ಸ್ಮರಣೆಯನ್ನು ಮಾಡುತ್ತಲೂ ಎಣ್ಣೆಯ ಕೊಪ್ಪರಿಗೆಯಲ್ಲಿ ತೇಲಾಡುತ್ತಲೂ ಇದ್ದ ತನ್ನ ಮಗನನ್ನು ಕಂಡನು. ಆಗ ಶಂಖನು, "ಎಲೈ ದೊರೆಯೇ! ಬೆಂಕಿಯಿಂದ ಎಷ್ಟು ಕಾಯಿಸಿದರೂ ಎಣ್ಣೆಯು ಏಕೆ ಕಾಯಲಿಲ್ಲ? ನಿನ್ನ ಮಗನು ಮಂತ್ರೌಷಧಗಳನ್ನೇನಾದರೂ ಬಲ್ಲನೋ! ಕುದಿಯುತ್ತಿರುವ ಈ ಎಣ್ಣೆ ಯೆಲ್ಲಿ! ಅರಳಿದ ಕಮಲದಂತೆ ಇವನ ಮುಖವು ಪ್ರಕಾಶಮಾನವಾಗಿರುವುದೆಲ್ಲಿ? ಸೇವಕರು ಎಳನೀರ ಕಾಯಿಯನ್ನು ತಂದು ಎಣ್ಣೆಗೆ ಹಾಕಲಿ. ಆಗ ಈ ಎಣ್ಣೆಯ ಪರೀಕ್ಷೆಯು ಗೊತ್ತಾಗುವುದು" ಎಂದನು. ದೂತರು ಆ ಮಾತನ್ನು ಕೇಳಿದ ಕೂಡಲೆ ಆ ಮುನಿಗೆ ಹೆದರಿ, ಆ ಎಣ್ಣೆಯಂತೆ ಚುರುಕಾಗಿ, ಬೇಗನೆ ಎಳನೀರು ಕಾಯಿಗಳನ್ನು ತಂದು ಅವನ ಎದುರಿಗೆ ಎಣ್ಣೆಯಲ್ಲಿ ಹಾಕಿದರು. ಆಗ ಒಂದು ಎಳನೀರು ಕಾಯಿ ಫಟ್ಟನೆ ಎರಡು ಭಾಗವಾಗಿ ಒಡೆದು ಆ ಕೊಪ್ಪರಿಗೆಯಿಂದ ಹಾರಿ, ಒಂದು ಕರಟದ ಚೂರು ಶಂಖನ ಹಣೆಗೂ ಮತ್ತೊಂದು ಚೂರು ಲಿಖಿತನ ಹಣೆಗೂ ತಗಲಿತು; ಎಣ್ಣೆಯ ಧಾರೆಯು ಮೇಲಕ್ಕೆದ್ದಿತು.

ಇಂತು ಸುಧನ್ವ ಸತ್ತ್ವಕಥನವೆಂಬ ಹದಿನೇಳನೆಯ ಅಧ್ಯಾಯವು.

---

## ಹದಿನೆಂಟನೆಯ ಅಧ್ಯಾಯ

ಬಳಿಕ ಜನಮೇಜಯರಾಜನು ವೈಶಂಪಾಯನ ಮುನೀಂದ್ರನನ್ನು ಕುರಿತು, "ಆ ಶೂರನಾದ ಸುಧನ್ವನು ಹೇಗೆ ಬಿಡುಗಡೆಯನ್ನು ಹೊಂದಿ ಅರ್ಜುನನ ಮೇಲೆ ಯುದ್ಧಕ್ಕೆ ಹೋದನು? ಶಂಖನು ಏನು ಮಾಡಿದನು? ಈ ಆಶ್ಚರ್ಯವನ್ನು ನನಗೆ ತಿಳಿಸಬೇಕು" ಎಂದು ಕೇಳಿದನು. ಅದಕ್ಕೆ ವೈಶಂಪಾಯನ ಮುನೀಂದ್ರನು, "ಎಲೈ ರಾಜೇಂದ್ರನೇ! ಕೇಳು, ಸುಧನ್ವನು ಆ ಎಣ್ಣೆಯ ಕೊಪ್ಪರಿಗೆಯಲ್ಲಿ ಯಾವ ಬಾಧೆಯೂ ಇಲ್ಲದೆ ಸುರಕ್ಷಿತವಾಗಿ ಇದ್ದುದನ್ನು ಕಂಡು ಶಂಖನು ಸೇವಕನನ್ನು ನೋಡಿ, "ಶೂರನಾದ ಈ ಸುಧನ್ವನು ಯಾವುದಾದರೂ ಮೂಲಿಕೆಯನ್ನು ಕೈಗೆ ಕಟ್ಟಿಕೊಂಡಿರುವನೇ, ಅಥವಾ ಮಂತ್ರವನ್ನೇನಾದರೂ ಜಪಿಸುವನೇ ಏನು? ನಿನಗೇನಾದರೂ ಗೊತ್ತುಂಟೇ?" ಎಂದು ಕೇಳಲು ಅದಕ್ಕೆ ಅವನು, "ಯಾವನ ಸ್ಮರಣ ಮಾತ್ರದಿಂದ ಪ್ರಾಣಿಗಳಿಗೆ ಸಂಸಾರ ದುಃಖ ನಾಶವಾಗುವುದೋ ಆ ಶ್ರೀಕೃಷ್ಣನ ಸ್ಮರಣೆಯಲ್ಲದೆ ಸುಧನ್ವನು ಬೇರೆ ಯಾವುದನ್ನೂ ಮಾಡಲಿಲ್ಲ. ಅವನು ಈಗಲೂ ಮಾಧವ ಸ್ಮರಣೆಯನ್ನು ಮಾಡುತ್ತಿರುವನು. ತನ್ನ ಪ್ರಿಯೆಯಿಂದ ಕಾಮ ಕೇಳಿಯಲ್ಲಿ ದಷ್ಟವಾದ ಅವನ ಓಷ್ಠ ಪುಟಗಳು ಚಲಿಸುತ್ತಿರುವುದನ್ನು ನೋಡು" ಎಂದನು. ಆಗ ಶಂಖನು, 'ಈ ಸುಧನ್ವನು ಹರಿ ಸ್ಮರಣೆ ಮಾಡುತ್ತಿರುವುದಾದರೆ, ಈ ಬಾಲನನ್ನು ಎಣ್ಣೆಯ ಕೊಪ್ಪರಿಗೆಯಲ್ಲಿ ಕೆಡವಿ ಸಮೀಪದಲ್ಲಿ ನಿಂತು ನೋಡುತ್ತಿರುವ ನಾನು ಕ್ರೂರನೇ ಸರಿ; ನನ್ನ ಬಾಳು ವ್ಯರ್ಥವು. ಆದಕಾರಣ ಈ ದೋಷಕ್ಕೆ ಪ್ರಾಯಶ್ಚಿತ್ತ ರೂಪವಾಗಿ ನನ್ನ ದೇಹಕ್ಕೆ ಮರಣಾಂತ ದಂಡನೆಯನ್ನು ಮಾಡುವೆನು" ಎಂದು ಹೇಳಿ ತಾನೂ ಆ ಕೊಪ್ಪರಿಗೆಯಲ್ಲಿ ಬಿದ್ದು ಸುಧನ್ವನನ್ನು ತಬ್ಬಿಕೊಂಡು, "ಕ್ಷತ್ರಿಯ ವೀರನಾದ ನೀನೇ ಸಾಧು. ನಾನು ಅಬ್ರಾಹ್ಮಣನು, ನೀಚನು; ಅದರಿಂದಲೇ ನಿನ್ನನ್ನು ಧೈರ್ಯವಾಗಿ ಇದರಲ್ಲಿ ಕೆಡಹಿದೆನು. ಮಾಧವನನ್ನು ಸ್ಮರಿಸದವರು ನಿರ್ಭಾಗ್ಯರೂ ಮೂಢರೂ ಸದಾ ದುಃಖಪಡುವರೂ ಆಗಿ ಪರಿತಾಪಕ್ಕೊಳಗಾಗುವರು. ಇಷ್ಟಾರ್ಥಪ್ರದನಾದ ಶ್ರೀಕೃಷ್ಣನನ್ನು ನೆನೆಯುವವರು ತಾಪತ್ರಯ ದುಃಖಗಳಿಗೊಳಗಾಗರು. ಪರಮ ವೈಷ್ಣವನಾದ ನಿನ್ನನ್ನು ಬೆಂಕಿಯಲ್ಲಿ ಸುಡಲು ಹೇಗೆ ಸಾಧ್ಯವಾಗುವುದು? ಯಾವನನ್ನು ಮುನಿಗಳೂ ಸಹ ಮನಸ್ಸಿನಲ್ಲಿಯೂ ಕಾಣಲರಿಯರೋ, ಯಾವನು ಪ್ರಹ್ಲಾದನನ್ನು ಸಂರಕ್ಷಿಸಿದನೋ ಅಂತಹ ಸುರಾಸುರ ಗುರುವಾದ ಶ್ರೀಹರಿಯನ್ನು ನೀನು ಪ್ರಾಣಾಂತ ಕಾಲದಲ್ಲಿ ಸ್ಮರಿಸುತ್ತಿದ್ದೀಯೆ! ಅಗ್ನಿದಗ್ಧವಾದ ನಿನ್ನ ದೇಹದ ಸ್ಪರ್ಶದಿಂದ ನನ್ನ ಈ ದೇಹವು ಪರಿಶುದ್ಧವಾಯಿತು. ಇದಕ್ಕಿಂತಲೂ ಶ್ರೇಷ್ಠವಾದ ಉಪಾಯವು ಮತ್ತೊಂದಿಲ್ಲ. ಇಲ್ಲಿಂದ ಏಳು; ದೊರೆಯನ್ನೂ ಇತರ ರಾಜಪುತ್ರರನ್ನೂ ಸೈನ್ಯವನ್ನೂ ಪಾವನಗೊಳಿಸಿ ನನ್ನನ್ನುದ್ಧರಿಸು. ಶ್ರೀಕೃಷ್ಣನು ಪಾಂಡವನಾದ ಅರ್ಜುನನಿಗಾಗಿ ಸಾರಥ್ಯವನ್ನು ಮಾಡುತ್ತಿರುವನು. ಆ ಅರ್ಜುನನೊಡನೆ ಈಗ ನೀನು ತಕ್ಕಹಾಗೆ ಯುದ್ಧವನ್ನು ಮಾಡು. ಕೀರ್ತಿಯನ್ನು ಮೊದಲು ನೆಲೆಗೊಳಿಸಿ ಬಳಿಕ ಮಂಗಳವನ್ನು ಪಡೆ" ಎಂದು ಹೇಳಿ ಅವನನ್ನು ಎಣ್ಣೆಯ

ಕೊಪ್ಪರಿಗೆಯಿಂದೆಬ್ಬಿಸಿ ಯುದ್ಧಭೂಮಿಗೆ ಕರೆತಂದು ದೊರೆಯನ್ನು ಕಂಡು, "ಎಲೈ ರಾಜೇಂದ್ರನೇ! ಪೂಜ್ಯನಾದ ನಿನ್ನ ಮಗನನ್ನು ನೋಡು. ಮಂತ್ರರಾಜವಾದ ನೃಸಿಂಹ ಮಂತ್ರವನ್ನು ಜಪಿಸಿದುದರಿಂದ ಇವನು ತನ್ನ ದೇಹವನ್ನು ರಕ್ಷಿಸಿಕೊಂಡು ಕೀರ್ತಿಯನ್ನು ಪಡೆದಿದ್ದಾನೆ; ನಾನು ಇವನಿಂದ ಪುನೀತನಾದೆನು; ನಿನ್ನನ್ನು ಶುದ್ಧ ನನ್ನಾಗಿ ಮಾಡಲು ಕಾದಿದ್ದಾನೆ" ಎಂದು ಹೇಳಿದನು.

ಆಗ ಹಂಸಧ್ವಜನು ಮಗನನ್ನಾಲಿಂಗಿಸಿ, "ನಾನು ನಿನ್ನ ತಂದೆಯಾಗಿದ್ದರೂ ಎಣ್ಣೆಯ ಕೊಪ್ಪರಿಗೆಯಲ್ಲಿ ಹಾಕಿಸಿದೆನು. ನೀನು ಶ್ರೀಕೃಷ್ಣನ ಮಹಿಮೆಯಿಂದ ಸುಡದೆ ಸುರಕ್ಷಿತನಾಗಿದ್ದೀಯೆ. ಈಗ ನೀನು ವಾಸುದೇವನ ಮಹಿಮೆಯನ್ನೂ ಅಲ್ಪವಾಗಿ ಮಾಡಿದೆ ಎಂದು ನಾನು ಚೆನ್ನಾಗಿ ಬಲ್ಲೆನು. ಎಲೈ ಮಗನೇ! ಏಳು. ಈಗ ನನ್ನನ್ನು ಆಲಿಂಗಿಸು; ಏಳು, ನಿನಗೆ ಮಂಗಳವಾಗಲಿ! ರಥವನ್ನೇರಿ ಪಾರ್ಥನ ಸಾರಥಿಯಾಗಿಯೂ ನನ್ನ ಅತಿಥಿಯಾಗಿಯೂ ಇರುವ ಕೃಷ್ಣನನ್ನು ದರ್ಶನ ಮಾಡು" ಎಂದನು. ಸುಧನ್ವನು ಸಂತೋಷದಿಂದ ತಂದೆಗೂ ಲಿಖಿತನಿಗೂ ನಮಸ್ಕಾರ ಮಾಡಿ, ರತ್ನದಿಂದಲಂಕೃತವಾಗಿಯೂ, ಚಿನ್ನದ ಮೂಕಿಮರವೂ ಎತ್ತರವಾದ ಧ್ವಜವೂ ಮನೋಹರವಾದ ಚಕ್ರವೂ ಉಳ್ಳುದಾಗಿಯೂ, ಕಿಟಕಿಗಳಿಂದ ಕೂಡಿದುದಾಗಿಯೂ, ಹೊಂಬಣ್ಣದ ಕುದುರೆಗಳನ್ನು ಹೂಡಿ ಚಾಮರಗಳನ್ನು ಕಟ್ಟಿದುದಾಗಿಯೂ, ಅನೇಕ ಸುವರ್ಣ ಮಾಲಿಕೆಗಳಿಂದಲೂ ಪುಷ್ಪ ಮಾಲಿಕೆಗಳಿಂದಲೂ ಅಲಂಕೃತವಾಗಿಯೂ, ಒಳ್ಳೆಯ ದಾರದಿಂದ ಪೋಣಿಸಿ ಕಟ್ಟಿರುವ ಕಿರುಗಂಟೆಗಳ ಶಬ್ದವುಳ್ಳುದಾಗಿ ಕಃಣಿವಂತೆ ತೋರುವುದಾಗಿಯೂ, ವೇಗಶಾಲಿಯಾಗಿಯೂ ಇರುವ ರಥವನ್ನು ಹತ್ತಿದನು. ಅಷ್ಟರಲ್ಲಿ, ದೊರೆಯ ಸೈನ್ಯವು ಘೋರವಾದ ಎರಡನೆಯ ಯಮಚಕ್ರವೋ ಎಂಬಂತೆ ಅರ್ಜುನನ ಎದುರಿಗೆ ಸೇರಿತು. ಶೂರರ ಮುಖದಿಂದ ಬಿದ್ದ ತಾಂಬೂಲದಿಂದ ನೆಲವು ಇಂದ್ರಗೋಪಗಳಿಂದ ಕೂಡಿದಂತೆ ಪ್ರಕಾಶಿಸಿತು. ವೀರರ ದೇಹದಿಂದ ಉದುರುವ ಕಸ್ತೂರೀ ಮಿಶ್ರವಾದ ಚಂದನ ಗಂಧವು, ಸಾಯಂಕಾಲದ ಸೂರ್ಯನ ಕಾಂತಿಯಿಂದ ಆಕಾಶವು ಪ್ರಕಾಶಿಸುವಂತೆ ಹೊಳೆಯುತ್ತಿದ್ದಿತು. ಸೇನಾ ಜನರ ಪರಸ್ಪರ ಸಮ್ಮರ್ದ ದಿಂದ ಹರಿದು ಸುರಿದುಹೋದ ಮುತ್ತಿನ ಹಾರದ ಮುತ್ತುಗಳು ನೆಲದಲ್ಲಿ ಬಿದ್ದು ಹೊಳೆಯುತ್ತಿದ್ದುವು. ವಿಚಿತ್ರವಾದ ಕವಚಗಳು, ಕಿರೀಟಗಳು—ಇವುಗಳ ಕಾಂತಿಯು ಲೋಕದ ಕಣ್ಣುಗಳು ಮುಚ್ಚಿಹೋಗುವಂತೆ ಹೊಳೆಯುತ್ತಿದ್ದುವು. ನೆಲಕ್ಕೆ ಬಿದ್ದ ಚಂದನವನ್ನು ಗಾಳಿಯು ಹೊಡೆದುಕೊಂಡು ಹೋಗಿ ಆಕಾಶವನ್ನೆಲ್ಲ ವ್ಯಾಪಿಸಿತು. ಹೂಗಳು ನೆಲದಿಂದ ಜನಗಳ ತಲೆಯ ಮೇಲೆ ಹಾರಿ ಕಲ್ಪವೃಕ್ಷಗಳು ಸುವಾಸನೆ ಯುಳ್ಳವುಗಳಾಗಿದ್ದರೂ ಅವುಗಳನ್ನು ಗೆಲ್ಲಲು ಆಕಾಶಕ್ಕೆ ಹೋಗುತ್ತಿದ್ದುವು. ಮಲಯಾನಿಲವು ಜನರ ಮುಖದ ಸುವಾಸನೆಗೆ ಸೋತು ಅಲ್ಲಿ ಸುತ್ತಾಡುತ್ತಿದ್ದಿತು. ಭೂಮಿಯು ಸಮವಾಗಿದ್ದರೂ ಆನೆಯ ಸೊಂಡಲದ ನೀರಿನಿಂದ ಹಳ್ಳದಿಣ್ಣೆಯಾಗಿ ಕುದುರೆಗಳ ಕಾಲುಗಳ ಗೊರಸಿನಿಂದೆದ್ದ ದೂಳಿಯಿಂದ ಮುಚ್ಚಿ ಪುನಃ ಸಮವಾಯಿತು. ಭಯಂಕರವಾದ ರಥ ಧ್ವನಿಯಿಂದ, ಪ್ರಸಿದ್ಧವಾಗಿ ಮಹಾ ಧ್ವನಿ ಮಾಡುತ್ತಿರುವ

ಮೇಘಗಳ ಮತ್ತು ಸಾಗರಗಳ ಗರ್ಜನೆಯು ಮುಚ್ಚಿಹೋಗಿ ಮೂಕೀಭಾವವನ್ನು ಹೊಂದಿತೆಂದು ತೋರುತ್ತಿದ್ದಿತು. ಪದಾತಿಯ ಕಾಲ್ತುಳಿತಕ್ಕೆ ಭೂಮಿಯು ಬಹಳವಾಗಿ ನಡುಗಿತು. ಹಂಸಧ್ವಜನು ಕುದುರೆಯನ್ನು ಹಿಡಿದು ತರುವಂತೆ ವೀರರಿಗೆ ಆಜ್ಞೆ ಮಾಡಲು ಅವರು ಬೇಗನೆ ಅದನ್ನು ಹಿಡಿದು ತಂದರು. ದೊರೆಯು ಗಂಧ ಪುಷ್ಪ ಧೂಪಾದಿಗಳಿಂದ ಆ ಕುದುರೆಯನ್ನರ್ಚಿಸಿ ಪದ್ಮವ್ಯೂಹದಲ್ಲಿ ಅದನ್ನು ನಿಲ್ಲಿಸಿ ತನ್ನ ಸಹೋದರರು, ಪುತ್ರರು—ಇವರೊಡನೆ ಸೇರಿ ಅರ್ಜುನನ ಮೇಲೆ ಯುದ್ಧಕ್ಕಾರಂಭಿಸಿದನು. ಸುಧನ್ವ, ಸುರಥ, ಮಂತ್ರಿಯಾದ ಸುಮತಿ, ಅವನ ತಮ್ಮಂದಿರಾದ ವೀರಕೇತು, ತೀವ್ರರಥ, ಶತಧನ್ವ, ಮಹಾರಥ—ಇವರೂ, ಇನ್ನೂ ಬಹು ಮಂದಿ ರಾಜರೂ ಅರ್ಜುನನ ಮೇಲೆ ಯುದ್ಧಮಾಡಲು ಸುಖವಾಗಿ ಹೋಗಿ ಎದುರಿಗೆ ನಿಂತರು. ಹೀಗೆ ವೀರರು ಸೇರಿರಲು, ದುಂದುಭಿ, ನಿಸ್ಸಾಣ, ಪಟಹ, ಮದ್ದಲೆ, ತಂತ್ರಕಿ, ಕೊಳಲು, ಬಿದಿರುಕೊಂಬು, ಮೃದಂಗ, ಡಿಂಡಿಮ, ಬಗೆ ಬಗೆಯ ಕೊಂಬುಗಳು, ಪಣವ, ಆನಕ, ಡಕ್ಕೆ, ಡೋಲು, ಭೇರಿ, ಗೋಮುಖ, ಕಾಹಳ, ಝರ್ಝರ, ಜಲಜ, ತಾಲ, ವಂಶ, ಮುರಳಿ ಮೊದಲಾದ ವಾದ್ಯಗಳನ್ನು ವಾದನ ಕುಶಲರು ಬಾರಿಸಿದರು. ಆ ಶಬ್ದದಿಂದ ಬೆಟ್ಟಗಳೂ ಸಮುದ್ರಗಳೂ ಕೂಗಿಕೊಂಡುವು; ಅಂಜುಬುರುಕರ ಮನಸ್ಸು ಎರಡು ಭಾಗವಾಗಿ ಒಡೆದುಹೋಯಿತು.

ಆಗ ಅರ್ಜುನನು ಕೃಷ್ಣನ ಮಗನಾದ ಪ್ರದ್ಯುಮ್ನನನ್ನು ನೋಡಿ, "ಧರ್ಮರಾಜನ ಯಜ್ಞಾಶ್ವವನ್ನು ಹಂಸಧ್ವಜನು ಅಪಹರಿಸಿದ್ದಾನೆ. ಅದನ್ನು ಬಿಡಿಸಿ ತರುವುದಕ್ಕೆ ಹೋಗುವ ವೀರರು ಯಾರು ಹೇಳು. ಬಲಿಷ್ಠನಾದ ನೀನು, ನಿನ್ನ ಮಗ, ಬುದ್ಧಿಶಾಲಿಯಾದ ಯೌವನಾಶ್ವ, ವೀರನಾದ ಅನುಸಾಲ್ವ, ಕೃತವರ್ಮ, ಸಾತ್ಯಕಿ, ಮಹಾತೇಜಸ್ವಿಯಾದ ವೃಷಕೇತು, ವೀರ್ಯವಂತನಾದ ಅನಿರುದ್ಧ, ಅಗ್ನಿಯನ್ನು ಅಳಿಯನನ್ನಾಗಿ ಮಾಡಿ ತನ್ನ ರಾಜ್ಯದ ಆಡಳಿತಕ್ಕೆ ಇಟ್ಟುಕೊಂಡಿರುವ ನೀಲಧ್ವಜ, ಇನ್ನೂ ಉಳಿದವರೂ ಇಲ್ಲಿರುವರು; ನಾನೂ ಇರುವೆನು. ನಾವು ಪರ ರಾಜ್ಯಕ್ಕೆ, ಅದರಲ್ಲಿಯೂ ಬಲಿಷ್ಠನ ರಾಷ್ಟ್ರಕ್ಕೆ ಬಂದಿರುವೆವು. ನೀನು ಎಲ್ಲರಿಗೂ ಪ್ರಮುಖನಾಗಿದ್ದೀಯೆ. ನಾನು ಮುಂದೆ ಹೊರಡುವೆನು" ಎಂದನು. ಅದಕ್ಕೆ ಪ್ರದ್ಯುಮ್ನನು, ಎಲೈ ಪೂಜ್ಯನೇ! ಶ್ರೀಕೃಷ್ಣನು ಹೇಳಿದುದು ನಿನಗೆ ಮರೆತುಹೋದಂತೆ ಕಾಣುತ್ತದೆ. ಹಾಗೆ ಹೇಳಬೇಡ. ಮಹಾತ್ಮನಾದ ನಮ್ಮ ತಂದೆಯು ಪಾಂಡವಾಖ್ಯೆಯುಳ್ಳ ಸರ್ವವನ್ನೂ ನನ್ನ ವಶಕ್ಕೊಪ್ಪಿಸಿರುವನು. ಆದಕಾರಣ, ನಾನು ಬಲಶಾಲಿಯಾಗಿದ್ದರೂ ಅದನ್ನು ಧರ್ಮಜ ಭೀಮಾದಿಗಳೆದುರಿಗೆ ಕಳೆದುಕೊಳ್ಳುವುದು ಹೇಗೆ? ಎಲೈ ಅರ್ಜುನನೇ! ಈಗ ಯುದ್ಧದಲ್ಲಿ ನನ್ನ ಭುಜಬಲವನ್ನು ನೋಡು: ಹಂಸಧ್ವಜ ಸುಧನ್ವ ಸುರಥ ಸುಮತಿ ಇವರನ್ನು ತೀಕ್ಷ್ಣಗಳಾದ ಬಾಣಗಳಿಂದ ಸಂತೋಷಪಡಿಸುವೆನು; ಸೈನ್ಯವನ್ನೂ ಧ್ವಂಸ ಮಾಡುವೆನು; ಈ ದೊರೆಯು ಸ್ವದಾರಾಸಕ್ತನೆಂದು ತಿಳಿ" ಎಂದನು.

ಪ್ರದ್ಯುಮ್ನನ ಮಾತನ್ನು ಕೇಳಿ ಉದಾರ ಬುದ್ಧಿಯುಳ್ಳ ವೃಷಕೇತುವು ನಮಸ್ಕರಿಸಿ, ಮಾತಿನಲ್ಲಿ ಚತುರತೆಯುಳ್ಳವನಾಗಿ, "ನಿಮ್ಮ ಮಾತು ಯುಕ್ತವಾದು

ದಲ್ಲ; ಸೃಷ್ಟಿಲಯುಗಳನ್ನು ಮಾಡುವ ನೀವೆಲ್ಲಿ? ಅಲ್ಪವಾದೀ ಸೈನ್ಯವೆಲ್ಲಿ? ಊದಿಬಿಟ್ಟರೆ ಈ ಬಲವು ಅರಳೆಗೆ ಸಮಾನವಾಗಿ ಹಾರಿಹೋಗುವುದು; ಅದಕ್ಕಾ ಉರಿವ ಬಡ ಬಾಗ್ನಿಯನ್ನು ಉಪಯೋಗಿಸಬಹುದೇ! ರೆಪ್ಪೆಯ ಬಡಿತಕ್ಕೆ ಸಾಯುವ ಸೊಳ್ಳೆಯನ್ನು ಕೊಲ್ಲಲು ಸರ್ಪ ಸಂಹಾರಕನಾದ ಗರುಡನನ್ನು ಕಳುಹಿಸುವ ಮೂಢನುಂಟೆ! ಅಲ್ಪ ವಾದ ತುಂತುರು ಮಳೆಯಿಂದ ಅಡಗುವ ಧೂಳಿಯನ್ನು ಶಾಂತಿಗೊಳಿಸಲು ಕೋಪ ದಿಂದ ವರುಣನು ಮಳೆಯನ್ನು ಸುರಿಸುತ್ತಾನೆಯೇ? ನಿಮಗೆ ಇದೂ ಹಾಗೆಯೇ ಇರುವುದೆಂದು ತೋರುತ್ತದೆ. ನಿಮ್ಮಿಬ್ಬರ ಆಜ್ಞೆಯನ್ನು ಪಡೆದು ನಾನು ಹೋಗಿ ಕುದುರೆಯನ್ನು ಹಿಂದಿರುಗಿಸಿಕೊಂಡು ಬರಲಾರೆನೇ? ಯಮದೂತರು ಕಟ್ಟಿಹಾಕಿ ಕೊಂಡಿರುವ ಹರಿಭಕ್ತನಾದ ಸಂಸಾರಸ್ಥನಾದ ಜೀವಿಯನ್ನು ವಿಷ್ಣುದೂತನು ಅಪಹರಿಸಿಕೊಂಡು ಬರುವಂತೆ, ನಾನೂ ಆ ಕುದುರೆಯನ್ನು ನಿಮ್ಮ ಆಜ್ಞೆಯಿಂದ ಹಿಂದಕ್ಕೆ ತೆಗೆದುಕೊಂಡು ಬರುವೆನು. ಎಲೈ ಅರ್ಜುನನೇ! ನಾನು ಹೊರಡುವೆನು. ನೀನು ಯುದ್ಧದಲ್ಲಿ ಶತ್ರುಗಳ ಗತಿಯನ್ನು ನೋಡಿಕೊ'' ಎಂದು ಹೇಳಿ ವೃಷಕೇತುವು, ಅರ್ಜುನನು ತನ್ನನ್ನು ತಡೆಯುತ್ತಿದ್ದರೂ, ಮುಂದೆ ಹೊರಟು ಹಂಸಧ್ವಜನ ಸೈನ್ಯಕ್ಕಭಿಮುಖನಾಗಿ ಶಂಖಧ್ವಾನ ಮಾಡಿದನು; ಗರ್ಜಿಸುತ್ತ ವಿಚಿತ್ರ ಧ್ವಜಗಳಿಂದ ಮೆರೆಯುತ್ತಿರುವ ರಥವನ್ನೇರಿ ಸಾರಥಿಯನ್ನು ಕುರಿತು, ''ಎಲೈ ಸೂತನೇ, ಲಾವನ ಹಕ್ಕಿಗಳಂತೆ ಹೊಳೆಯುತ್ತಿರುವ ನನ್ನ ಕುದುರೆಗಳನ್ನು ಭಯಂಕರವಾದ ಆ ಪದ್ಮ ವ್ಯೂಹದ ಕಡೆಗೆ ನಡೆಯಿಸು'' ಎಂದು ಹೇಳಿದನು. ಸೂತನು ಆ ಕ್ಷಣದಲ್ಲಿಯೇ ಯುದ್ಧದಲ್ಲಿ ಚತುರಗಳಾಗಿಯೂ ವೇಗಶಾಲಿಗಳಾಗಿಯೂ ಇರುವ ಆ ಕುದುರೆಗಳನ್ನು ಬೇಗನೆ ಮುಂದಕ್ಕೆ ಬಿಟ್ಟನು.

ಬಳಿಕ ಸುಧನ್ವನು ವೃಷಭ ಧ್ವಜವನ್ನು ನೋಡಿ ''ಪದ್ಮವ್ಯೂಹವನ್ನು ನೋಡದೆಯೇ ಯಾವನೋ ಒಬ್ಬ ವೀರನು ವಿನೋದದಿಂದ ಬರುತ್ತಿರುವನು. ಇವನ ಧ್ವಜದಲ್ಲಿ ವೃಷಭವು ಕಾಣಿಸುತ್ತಿದೆ. ಇವನು ಅರ್ಜುನನಲ್ಲ. ಬೆಂಕಿಯ ಕಿಡಿಗಳು ಆವರಿಸಿ ಅನೇಕ ಪರ್ವತಗಳನ್ನು ಸುಟ್ಟುಹಾಕುವುದಿಲ್ಲವೇ? ಹಾಗೆಯೇ ಅಲಕ್ಷ್ಯದಿಂದ ಯಾವನೋ ತಾನೊಬ್ಬನೇ ಬಹು ಜನದ ಮೇಲೆ ಯುದ್ಧಕ್ಕೆ ಬಂದಿರುವನು. ರಣಧೀರ ನಾದ ಇವನ ಮೇಲೆ ನಾನು ಈಗ ಯುದ್ಧಕ್ಕೆ ಹೋಗುತ್ತೇನೆ. ಎಲೈ ಸೂತನೇ! ರಥವನ್ನು ಆ ಶೂರನ ಮುಂದಕ್ಕೆ ನಡೆಯಿಸು'' ಎಂದು ಹೇಳಲು, ಅವನು ರಥಿಕರಲ್ಲಿ ಶೂರನಾದ ಸುಧನ್ವನ ರಥವನ್ನು ವೃಷಕೇತುವಿನೆದುರಿಗೆ ನಡೆಯಿಸಿದನು. ಮಹಾ ಪರಾಕ್ರಮಶಾಲಿಗಳಾದ ವೃಷಕೇತು ಸುಧನ್ವರು ಯುದ್ಧಕ್ಕೆ ನಿಂತರು. ಸುಧನ್ವನು ಸಂತೋಷದಿಂದ ನಗುತ್ತ ವೃಷಕೇತುವನ್ನು ಕುರಿತು, ''ಎಲೈ ಸುವ್ರತನೇ! ನೀನು ಯಾರು? ಯಾರ ಮಗನು? ನಿನ್ನ ಹೆಸರೇನು?'' ಎಂದು ಕೇಳಿದನು. ಅದಕ್ಕೆ ವೃಷಕೇತುವು, ''ನೀನು ಯಾರನ್ನು ಭೇದಿಸಲು ಪ್ರಯತ್ನಿಸಿರುವೆಯೋ ಅವನು ನಮ್ಮ ಪಿತಾಮಹನು; ಅವನ ಮಕ್ಕಳಲ್ಲಿ ಚಿಕ್ಕವನೂ, ದಾತೃಗಳಲ್ಲಿ ಮೊದಲನೆ ಯವನೂ, ಶೂರನೂ, ಧೀರನೂ ಆದ ಕರ್ಣನು ನಮ್ಮ ತಂದೆ; ಕಶ್ಯಪ ವಂಶದಲ್ಲಿ ಹುಟ್ಟಿದ ನನ್ನನ್ನು ವೃಷಕೇತುವೆಂದು ತಿಳಿ'' ಎಂದನು. ಅದಕ್ಕೆ ಸುಧನ್ವನು,

"ನಾನು ಹಂಸಧ್ವಜನ ಮಗನು; ನನ್ನ ಶುಭ ನಾಮವು ಸುಧನ್ವನೆಂದು; ಮಧುಚ್ಛಂದ ಋಷಿಯು ನಮ್ಮ ವಂಶದ ಮೂಲಪುರುಷನು; ನೀನು ನನ್ನೆದುರಿಗೆ ನಿಂತು ಪರಾಕ್ರಮವನ್ನು ತೋರಿಸು. ನಿಮ್ಮ ಪೂರ್ವ ಪುರುಷನಾದ ಸೂರ್ಯನು ಕತ್ತಲೆಯನ್ನು ಹೋಗಲಾಡಿಸುವಂತೆ ನೀನೂ ಶತ್ರು ಸೈನ್ಯವನ್ನು ಯುದ್ಧದಲ್ಲಿ ನಾಶಗೊಳಿಸುವವನಾಗು. ಪೌರುಷ ಹೀನರಾದ ಮೂಢರು ತಮ್ಮ ವಂಶವನ್ನು ವರ್ಣಿಸುತ್ತಾರೆ" ಎಂದನು. "ಈಗ ನನ್ನ ಶಕ್ತಿಯನ್ನು ಬಾಣದಿಂದಲೇ ತೋರಿಸುವೆನು. ಹರಿತವಾದ ಮೊನೆಯುಳ್ಳವಾಗಿ ಪ್ರಜ್ವಲಿಸುತ್ತಿರುವ ಈ ನನ್ನ ಬಾಣಗಳು ಮಹಾಯುದ್ಧದಲ್ಲಿ ನಿನ್ನ ಸೈನ್ಯದ ಮೇಲೆ ವೇಗವಾಗಿ ಹೋಗುವುವು. ನಾನು ಮಾತಿನಿಂದ ಹೇಳಿದುದು ಸುಳ್ಳಾಗುವುದಿಲ್ಲ" ಎಂದು ಹೇಳಿ, ವೃಷಕೇತುವು ಸೈನ್ಯದ ಮೇಲೆ ದೊಡ್ಡ ಬಾಣದ ಮಳೆಯನ್ನು ಸುರಿಸಿ, ಬಳಿಕ ಸುಧನ್ವನನ್ನೂ ಮುಚ್ಚಿ ಸಿಂಹನಾದ ಮಾಡಿದನು. ಮಹಾತ್ಮನಾದ ವೃಷಕೇತುವಿನ ಬಾಣಗಳು ಸುಧನ್ವನ ಅಶ್ವ ರಥ ಹಯ ಪದಾತಿಗಳನ್ನು ಭೇದಿಸಿ ಜೀವ ಹೀನಗಳನ್ನಾಗಿ ಮಾಡಿದುವು; ಸೇನಾಪತಿಯಾದ ಸುಧನ್ವನನ್ನು ವೃಷಕೇತುವು ಸುತ್ತಲೂ ಹೊಡೆದು ಮುತ್ತಿದನು. ಸುಧನ್ವನ ಸೈನ್ಯವು ಬಾಣಗಳಲ್ಲಿ ಮುಳುಗಿ ಕಾಣಿಸದೆ ಹೋಯಿತು. ವೃಷಕೇತುವು ಐದು ಬಾಣಗಳಿಂದ ಸುಧನ್ವನ ಕುದುರೆಗಳನ್ನೂ ಸಾರಥಿಯನ್ನೂ ಯುದ್ಧದಲ್ಲಿ ವೇಗವಾಗಿ ಹೊಡೆದು ಅವನ ಮಹಾ ಧ್ವಜವನ್ನು ನಗುತ್ತ ಕತ್ತರಿಸಿದನು; ಪುನಃ, ಎಲ್ಲರೂ ನೋಡುತ್ತಿರುವಂತೆ ಸೈನ್ಯವನ್ನು ಆವರಿಸಿ, ಹದ್ದಿನ ಗರಿಗಳುಳ್ಳ ಹರಿತವಾದ ಬಾಣಗಳಿಂದ ಛತ್ರಗಳನ್ನೂ ಚಾಮರಗಳನ್ನೂ ಬಗೆ ಬಗೆಯ ಧ್ವಜಗಳನ್ನೂ ಕವಚಗಳನ್ನೂ, ಆಯುಧಗಳಿಂದಲೂ ಆಭರಣಗಳಿಂದಲೂ ಕೂಡಿದುವಾಗಿ ಆನೆಯ ಸೊಂಡಲಗಳಂತಿರುವ ತೋಳುಗಳನ್ನೂ, ಹಲ್ಲುಮುಡಿಗಳನ್ನು ಕಚ್ಚಿರುವ ತಲೆಗಳನ್ನೂ ಕೋಪದಿಂದ ಯುದ್ಧದಲ್ಲಿ ವೃಷಕೇತುವು ಕತ್ತರಿಸಿ ಹಾಕಿದನು. ಸುಧನ್ವನು ತನ್ನ ಸೈನ್ಯವು ನಾಶವಾದುದನ್ನು ಕಂಡು, ವೃಷಕೇತುವಿನ ಪೌರುಷವನ್ನು ಬಹಳವಾಗಿ ಶ್ಲಾಘಿಸಿ, ಬೇರೊಂದು ರಥವನ್ನೇರಿ ವೃಷಕೇತುವನ್ನು ಐದು ಬಾಣಗಳಿಂದ ಹೊಡೆದು ಅವನ ಸಾರಥಿಯನ್ನೂ ಕುದುರೆಗಳನ್ನೂ ಧ್ವಜವನ್ನೂ ಅರಳೆಯ ಗುಡ್ಡೆಗೆ ಸಮವಾಗಿ ಮಾಡಿದನು; ಮತ್ತೆ ಐದು ಬಾಣಗಳಿಂದ ವೃಷಕೇತುವಿನ ಬಿಲ್ಲನ್ನೂ ಬತ್ತಳಿಕೆಯನ್ನೂ ಕತ್ತರಿಸಿದನು. ಯುದ್ಧದಲ್ಲಿ ತನ್ನ ದೊಡ್ಡ ಸೈನ್ಯವಿರುವೆಡೆಯಲ್ಲಿ ವೃಷಕೇತುವಿನ ದೇಹವು ಭ್ರಮಿಸುತ್ತಿರಲು, ಆ ಯುದ್ಧವು ಅದ್ಭುತವಾಯಿತು. ಧರ್ಮಾತ್ಮನಾದ ವೃಷಕೇತುವು ಮೂರ್ಛೆಯನ್ನು ಪಡೆದೆಚ್ಚತ್ತು ಸುಧನ್ವನನ್ನು ನೋಡುತ್ತಿರುವಾಗ, ಸುಧನ್ವನು ತನ್ನ ಸೈನ್ಯದ ಮಧ್ಯದಲ್ಲಿ ಭಯಂಕರನಾಗಿ ತನ್ನ ಮುಂದಿರುವುದನ್ನು ಕಂಡನು. ತಾನೂ ಬಹು ಸೈನ್ಯ ಪರಿವೃತನಾಗಿ ಮಧ್ಯದಲ್ಲಿರಲು, ವಿರಥನಾಗಿ ನಿಂತಿರುವ ವೃಷಕೇತುವನ್ನು ಕಂಡು ಸುಧನ್ವನು ಕೋಪದಿಂದ ಬಿಲ್ಲನ್ನು ಹಿಡಿದು ಸುವರ್ಣ ನಿರ್ಮಿತವಾದ ಬಾಣಗಳನ್ನು ತೆಗೆದುಕೊಂಡು ಬಲವಾಗಿ ಸಂಧಾನ ಮಾಡಿ ಪ್ರಯೋಗಿಸಿದನು. ವೃಷಕೇತುವಿನ ದೇಹವು ಬಾಣಗಳಿಂದ ಭೇದಿಸಿದ್ದರೂ ಭೇದಿಸದಂತೆ ಭಾವಿಸಿ ವೃಷಕೇತುವು ಹಂಸಧ್ವಜನ ಸೈನ್ಯವನ್ನು ಕೊಲ್ಲುತ್ತ ಬಂದನು. ಬಳಿಕ ಶತ್ರು ಸೈನ್ಯವು ವೃಷಕೇತುವನ್ನು ಸುತ್ತಿಕೊಂಡು ಶಕ್ತಿ

ತೋಮರ ಭಲ್ಲ ಭಿಂಡಿವಾಲ ಮುದ್ಗರ ಖಡ್ಗ ಬಾಣ ಕ್ರಕಚ ಭುಶುಂಡಿ ಅಯೋಮುಖ ಗದಾ ಪರಿಘ ಪಟ್ಟಸ ಶೂಲ ಮೊದಲಾದ ಶಸ್ತ್ರಾಸ್ತ್ರಗಳಿಂದ ಹೊಡೆಯುತ್ತಿರಲು, ಶೂರನಾದ ವೃಷಕೇತುವು ನೋಡಿ ಶ್ರೀಕೃಷ್ಣ ನಾಮಸ್ಮರಣೆ ಮಾಡುತ್ತಿದ್ದನು. ಅಷ್ಟರಲ್ಲಿ ಸಾರಥಿಯು ಮಹಾಧ್ವಜವುಳ್ಳ ಮತ್ತೊಂದು ರಥವನ್ನು ಸಿದ್ಧಪಡಿಸಿಕೊಂಡು ವೃಷಕೇತುವಿನ ಬಳಿಗೆ ತಂದನು. ವೃಷಕೇತುವು ಅದನ್ನೇರಿ, ಮತ್ತೆ ಮತ್ತೆ ನಗುತ್ತ, ತೀಕ್ಷ್ಣವಾದ ಬಾಣಗಳಿಂದ ಸುಧನ್ವನನ್ನು ಹೊಡೆಯುತ್ತ ಬಂದನು; ಅವನ ಸೈನ್ಯದ ಸುತ್ತಲೂ ಬಾಣದ ಮಳೆಯನ್ನು ಸುರಿಸಿ ಬಾಧೆಪಡಿಸಿದನು. ಸುಧನ್ವನು ಐದು ಬಾಣಗಳನ್ನು ವೃಷಕೇತುವಿನ ಎದೆಗೆ ಹೊಡೆದನು. ಮಹಾ ಬಲನಾದ ವೃಷಕೇತುವು ಮತ್ತೆ ಮೂರ್ಛೆಹೊಂದಿದನು. ಅವನ ಸಾರಥಿಯು ಕೂಡಲೆ ಯುದ್ಧ ಭೂಮಿಯಿಂದ ರಥವನ್ನು ಹಿಂದಕ್ಕೆ ತಿರುಗಿಸಿ ಅವನನ್ನು ಕರೆತಂದನು. ಅಷ್ಟರಲ್ಲಿ ಪ್ರದ್ಯುಮ್ನನು ಬಂದು ಸೇರಿ, ಸುಧನ್ವನನ್ನು ನಿಲ್ಲು ನಿಲ್ಲೆಂದು ಕೂಗಿ ಐದು ಬಾಣಗಳಿಂದ ಅವನನ್ನು ಹೊಡೆದನು; ಸುಧನ್ವನ ಸಾರಥಿಯನ್ನು ರೋಷದಿಂದ ಹೊಡೆದು ಕೊಂದು, ರಥಕ್ಕೆ ಕಟ್ಟಿದ್ದ ನಾಲ್ಕು ಕುದುರೆಗಳನ್ನು ಹರಿತವಾದ ಬಾಣಗಳಿಂದ ಹೊಡೆದು ರಥವನ್ನು ಇಪ್ಪತ್ತೊಂದು ಚೂರು ಮಾಡಿ, ಮೂರು ಬಾಣಗಳಿಂದ ನೊಗವನ್ನು ಎಂಟು ತುಂಡಾಗಿ ಕತ್ತರಿಸಿ, ಧನುವನ್ನು ಒಂದು ಬಾಣದಿಂದ ಮೂರು ತುಂಡಾಗಿ ಕಡಿದು ಆಶ್ಚರ್ಯವನ್ನುಂಟುಮಾಡಿದನು. ಸುಧನ್ವನೂ ಯುದ್ಧದಲ್ಲಿ ಪ್ರದ್ಯುಮ್ನನ ಕೌಶಲವನ್ನು ಕಂಡು ತನ್ನ ಪರಾಕ್ರಮವನ್ನು ತೋರಿಸಿ ಲೀಲೆಯಿಂದ ಯುದ್ಧಮಾಡುತ್ತ ಬಾಣಗಳನ್ನು ಅದ್ಭುತವಾಗಿ ಸಂಧಾನಮಾಡಿ ರೋಷದಿಂದ ಕುದುರೆಗಳನ್ನು ಎಂಟು ತುಂಡಾಗಿಯೂ ಮೂರು ಬಿದಿರುಗಳಿಂದ ಮಾಡಿದ್ದ ನೊಗವನ್ನು ಆರು ತುಂಡುಗಳಾಗಿಯೂ ಕಡಿದು, ಒಂದು ಬಾಣದಿಂದ ಪ್ರದ್ಯುಮ್ನನ ಬಿಲ್ಲನ್ನು ಐದು ಚೂರಾಗಿ ಕತ್ತರಿಸಿದನು. ಅವನ ಸಾರಥಿಯ ತಲೆಯು ದೇಹದಿಂದ ಕತ್ತರಿಸಿ ಬಿದ್ದಿತು. ಮೂರು ಬಾಣಗಳಿಂದ ಪ್ರದ್ಯುಮ್ನನನ್ನು ಹೊಡೆದು ಸುಧನ್ವನು ಸಿಂಹನಾದ ಮಾಡಿದನು. ಹೀಗೆ ಬಲಿಷ್ಠರಾಗಿಯೂ ಶೂರರಾಗಿಯೂ ಯುದ್ಧ ಕುಶಲರಾಗಿಯೂ ಇರುವ ಅವರಿಬ್ಬರೂ ಖೇಚರರಂತೆ ಆಕಾಶದಲ್ಲಿಯೂ ಭೂಮಿಯಲ್ಲಿಯೂ ಯುದ್ಧಮಾಡುತ್ತ, ಬಾಣಗಳಿಂದ ಮೂರ್ಛಿತರಾಗಿ ಬೀಳುತ್ತಲೂ ರಕ್ತದಿಂದ ನೆನೆದವರಾಗಿಯೂ ಇದ್ದರು. ಸುಧನ್ವನು ಬಹಳ ಕೋಪಿಸಿಕೊಂಡು ಎದ್ದು ಬೇರೊಂದು ರಥವನ್ನೇರಿ ಅರ್ಜುನನ ಭಟರನ್ನು ಬಾಣದಿಂದ ಸಹಸ್ರ ವಿಧವಾಗಿ ಹೊಡೆದನು; ಕೃತವರ್ಮನನ್ನು ಒಂಬತ್ತು ಬಾಣಗಳಿಂದ ಹೊಡೆಯಲು, ಅವನು ಆ ಬಾಣಗಳನ್ನು ಮೂರು ಬಾಣಗಳಿಂದ ಕತ್ತರಿಸಿ ಸುಧನ್ವನ ವಿಸ್ತಾರವಾದ ಎದೆಗೆ ಐದು ಬಾಣಗಳನ್ನು ಹೊಡೆದು ನೋಯಿಸಿದನು. ಸುಧನ್ವನು ಬಳಿಕ ಒಂಬತ್ತು ಬಾಣಗಳಿಂದ ಒಂದು ಕ್ಷಣಮಾತ್ರದಲ್ಲಿ ಕೃತವರ್ಮನ ಸಾರಥಿಯನ್ನೂ ಕುದುರೆಗಳನ್ನೂ ಕೊಂದು ಅವನನ್ನು ವಿರಥನನ್ನಾಗಿ ಮಾಡಿದನು. ಆಗ ಕೃತವರ್ಮನು ಬಾಣದ ಪೆಟ್ಟನ್ನು ತಡೆಯಲಾರದೆ ಯುದ್ಧಭೂಮಿಯಿಂದ ಓಡಿ ಹೋಗಲು, ಶೂರನಾದ ಅನುಸಾಲ್ವನು ಆ ಮಹಾ ಯುದ್ಧದಲ್ಲಿ ಬಿಲ್ಲು ಬಾಣಗಳನ್ನು ಹಿಡಿದು ನಿಂತು ಸುಧನ್ವನನ್ನು ಕರೆದು ಇಂತೆಂದನು :—

"ಎಲೈ ಸುಧನ್ವನೇ! ನೀನು ಸ್ವಶಕ್ತಿಯಿಂದ ನಿಂತು ನನ್ನೆದುರಿಗೆ ಬಹು ಮಂದಿ ಶೂರರನ್ನು ಯುದ್ಧದಲ್ಲಿ ಸಂತೋಷಪಡಿಸಿದೆ. ಇದು ಆಶ್ಚರ್ಯವೇ ಸರಿ. ಎಲ್ಲರೆದುರಿಗೂ ಈ ನನ್ನ ಬಾಣವನ್ನು ತಡೆದುಕೊ" ಎಂದು ಹೇಳಿ, ಬಡಬಾಗ್ನಿಗೆ ಸಮಾನವಾದ ಬಾಣವನ್ನು ಬಿಟ್ಟನು. ಅನುಸಾಲ್ವನ ಕೈಯಿಂದ ಬಿಟ್ಟ ಕ್ರೂರವಾದ ಆ ಬಾಣವನ್ನು ನೋಡಿ ಸುಧನ್ವನು ಅದನ್ನು ಕತ್ತರಿಸಬೇಕೆಂದಾಲೋಚಿಸಿದರೂ ಅದು ಸಾಧ್ಯವಾಗಲಿಲ್ಲ; ಅದು ಸುಧನ್ವನ ಎದೆಯನ್ನು ಭೇದಿಸಿತು. ಬಳಿಕ ಅನುಸಾಲ್ವನು ಸುಧನ್ವನ ಸೇನೆಯನ್ನು ಬಾಣಗಳಿಂದ ಸೀಳಿದನು. ಭುಜಬಲ ಸಂಪನ್ನನಾದ ಆ ಸುಧನ್ವನನ್ನು ಒಂಬತ್ತು ಬಾಣಗಳಿಂದ ಹೊಡೆದು ವಿರಥನನ್ನಾಗಿಮಾಡಿ ನೆಲಕ್ಕೆ ಕೆಡವಿ ದೈತ್ಯಾಧಿಪನಾದ ಅನುಸಾಲ್ವನು ಸಿಂಹನಾದ ಮಾಡಿದನು. ರಥಿಕ ಶ್ರೇಷ್ಠನಾದ ಸುಧನ್ವನು ಮೂರ್ಛೆಯಿಂದೆಚ್ಚತ್ತು ಅನುಸಾಲ್ವನನ್ನು ಒಂದು ಬಾಣದಿಂದ ಹೊಡೆದನು. ಅವನು ಆ ಬಾಣದಿಂದ ಭೇದಿಸಲ್ಪಟ್ಟವನಾಗಿ ನೆಲಕ್ಕೆ ಬಿದ್ದನು. ಸುಧನ್ವನು ಅರ್ಜುನನ ಬಗೆಬಗೆಯ ಸೈನ್ಯವನ್ನು ಬಾಣಗಳಿಂದ ಬಹು ವಿಧವಾಗಿ ಭೇದಿಸಿದನು. ಅವನು ಆನೆಯ ಹಿಂಡನ್ನು ಸೀಳಿ ನೆಲವು ರಕ್ತಪ್ರವಾಹಮಯವಾಗುವಂತೆಯೂ, ಮಾಂಸಗಳ ಕೆಸರಿನಿಂದ ಹಳ್ಳತಿಟ್ಟಾಗುವಂತೆಯೂ ಮಾಡಿದನು; ಯುದ್ಧದಲ್ಲಿ ಆನೆಗಳ ತಲೆಗಳನ್ನು ಕಡಿದುಹಾಕಲು, ಅವುಗಳಲ್ಲಿ ಕುದುರೆಗಳ ಸಾವಿರಾರು ತಲೆಗಳು ಕೂಡಿಕೊಂಡು ಕಾಣಿಸುತ್ತಿದ್ದುವು; ಬಾಣಗಳಿಂದ ಕುದುರೆಗಳನ್ನು ಎರಡು ಭಾಗವಾಗಿ ಕತ್ತರಿಸಿದರೂ, ಧನುರ್ಧಾರಿಗಳು ಬಿದ್ದಿದ್ದರೂ, ಸಾದಿಗಳೊಡನೆ ಅವು ಮುಂದು ಮುಂದಕ್ಕೆ ಹೋಗುತ್ತಿದ್ದುವು. ಮನುಷ್ಯರು, ಕುದುರೆಗಳು, ಒಂಟೆಗಳು, ಕತ್ತೆಗಳು —ಇವುಗಳನ್ನು ಚಿತ್ರತರಗಳಾದ ಬಾಣಗಳಿಂದ ಕತ್ತರಿಸಲು, ಇವುಗಳ ರಕ್ತವು ನದಿಗೆ ಪ್ರವಹಿಸುತ್ತಿದ್ದಿತು. ಬಹಳವಾಗಿ ಕತ್ತರಿಸಿಬಿದ್ದ ವೀರರು ರಕ್ತ ಪ್ರವಾಹದಲ್ಲಿ ಸಿಕ್ಕಿ, ರಕ್ತ ನದಿಯಲ್ಲಿ ಕೈಗಳನ್ನು ಮೇಲಕ್ಕೆತ್ತಿಕೊಂಡು, ಆಕಾಶದಲ್ಲಿ ಕ್ಷಣಮಾತ್ರದಲ್ಲಿ ಕಾಣಿಸಿಕೊಂಡರು. ಹೀಗೆ ಅರ್ಜುನನ ಸೈನ್ಯವು ವಿಮುಖವಾಗಿ ಅಲ್ಲಲ್ಲಿ ಮುರಿದು ಹೋಯಿತು.

ಇಂತು ಸುಧನ್ವನ ಯುದ್ಧ ವರ್ಣನವೆಂಬ ಹದಿನೆಂಟನೆಯ ಅಧ್ಯಾಯವು.

---



# ವಿವಿಧ ವಿಷಯಗಳು

**೧. ಕನ್ನಡ ಭಾಷೆಯ ಏಕೀಕರಣ.**—ಈ ವಿಷಯವಾಗಿ ನಮ್ಮ ಹಿಂದಣ ಸಂಚಿಕೆಯಲ್ಲಿ ಒಬ್ಬ ಪ್ರಸಿದ್ಧ ಲೇಖಕರ ಅಭಿಪ್ರಾಯವನ್ನು ತಿಳಿಸಿದೆವು. ಈಗ ಮತ್ತೊಬ್ಬರು ಮಾನ್ಯರು, ಕರ್ಣಾಟಕದ ಸುಪ್ರಸಿದ್ಧ ಕಾದಂಬರಿಕಾರರು, ಶ್ರೀಯುತ ಗಳಗನಾಥರವರು ಇದೇ ವಿಷಯವಾಗಿ ಏನು ಹೇಳುವರೆಂಬುದನ್ನು ನೋಡೋಣ. ಈ ಮಹನೀಯರು, ಕಳೆದ ಆಗಸ್ಟು ತಿಂಗಳು ೧೯ನೆಯ ತಾರೀಖಿನಲ್ಲಿ, ಚಿಕ್ಕಮಗಳೂರು ಕರ್ಣಾಟಕ ಸಂಘದಲ್ಲಿ ಮಾಡಿದ ಭಾಷಣದ ಸಾರಾಂಶವೇನೆಂದರೆ:—

> "ವಿವಿಧ ಭಾಗಗಳಲ್ಲಿನ ಕನ್ನಡ ಭಾಷೆಯು ಭಿನ್ನ ಭಿನ್ನವಾಗಿರುವದರಿಂದ, ಒಂದೇ ಪ್ರಾಂತದ ಭಾಷೆಯನ್ನೇ ಸರ್ವ ಪ್ರಾಂತಗಳಲ್ಲೂ ಅನುಸರಿಸುವಂತೆ ಮಾಡುವದು ಅಸಾಧ್ಯ. ಎಲ್ಲಾ ಪ್ರಾಂತಗಳ ಭಾಷೆಗಳನ್ನೂ ಮಿಶ್ರ ಮಾಡಿ ಬರೆಯುವದರಿಂದ ಭಾಷಾ ಸೌಂದರ್ಯವೇ ನಷ್ಟವಾಗುವದರಿಂದ ಹೀಗೆ ಮಾಡುವದು ತಪ್ಪು. ಆಯಾ ಪ್ರಾಂತದಲ್ಲಿ ಪ್ರಚಾರವಿರುವ ಭಾಷೆಯಾದರೂ ಒಂದೊಂದು ಬಗೆಯ ಸೊಬಗಿನಿಂದ ರಂಜಿಸುತ್ತಿರುವದರಿಂದ ಆ ಸೊಬಗೆಲ್ಲವನ್ನೂ ಧರಿಸಿ ಕರ್ಣಾಟಕ ಮಾತೆಯು ಆಯಾ ಭಾಗದಲ್ಲಿ ಆಯಾ ರೂಪದಲ್ಲಿ ವ್ಯಕ್ತವಾಗಿ ನಿಂತಿರುವಂತೆ ಪ್ರಚಾರದಲ್ಲಿರುವ ಮೈಸೂರು ಕನ್ನಡವೂ ಧಾರ್ವಾಡದ ಕನ್ನಡವೂ ಮಂಗಳೂರು ಕನ್ನಡವೂ ನೈಜಾಮಿ ಇಲಾಖೆಯ ಕನ್ನಡವೂ ರೂಪಾಂತರಗೊಳ್ಳದಂತೆ ಆದದ್ದನ್ನು ಇದ್ದಂತೆಯೇ ಇಟ್ಟು ಮೃತಪ್ರಾಯವಾಗಿರುವ ಭಾಷೆಯನ್ನು ಪುನರುಜ್ಜೀವನಗೊಳಿಸಲು ಸಂಘಗಳು ಯತ್ನಿಸಬೇಕು."
>
> —ವಿಶ್ವಕರ್ಣಾಟಕ (27-9-1931)

ಇಂತಹ ಮಹತ್ತ್ವದ ವಿಷಯದಲ್ಲಿ ದೊಡ್ಡ ಪಂಡಿತರಿಗೇ ಭಿನ್ನಾಭಿಪ್ರಾಯಗಳಿದ್ದರೆ ಸಾಮಾನ್ಯ ಜನರು ಮಾಡುವುದೇನು? ಪ್ರಪಂಚದ ಅನೇಕ ಭಾಗಗಳಲ್ಲಿ ಇಂಗ್ಲಿಷು ಭಾಷೆಯು ಪ್ರಚಾರದಲ್ಲಿರುವುದಷ್ಟೆ! ಸ್ಕಾಟ್‌ಲೆಂಡು ದೇಶದ ಹಳ್ಳಿಯವರಾಗಲಿ, ಐರ್ಲೆಂಡು ದೇಶದ ಹಳ್ಳಿಯವರಾಗಲಿ ಮನೆಯಲ್ಲಿ ಮಾತನಾಡುವ ಇಂಗ್ಲಿಷು ಭಾಷೆಯು, ಇಂಗ್ಲಿಷನ್ನು ಓದಿ ದೊಡ್ಡ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರುವ ನಮಗಂತೂ ಸಾಮಾನ್ಯವಾಗಿ ಅರ್ಥವಾಗುವುದೇ ಇಲ್ಲ; ಆದರೆ ಯಾವ ದೇಶದಲ್ಲಿರುವ ಲೇಖಕರೇ ಆಗಲಿ ಬರೆದ ಇಂಗ್ಲಿಷು ಗ್ರಂಥಸ್ಥ ಭಾಷೆಯು ಸಾಮಾನ್ಯವಾಗಿ ಒಂದೇ ತೆರನಾಗಿರುವುದು ಸರ್ವ ವಿದಿತವಾಗಿರುವುದಲ್ಲವೆ!

**೨. ಪುಸ್ತಕ ಭಾಂಡಾಗಾರಗಳು.**—೧೯೩೧ನೆಯ ಆಗಸ್ಟು ೩೧ನೆಯ ತಾರೀಖಿನ 'ರಾಷ್ಟ್ರಬಂಧು'ವಿನ ಸಾಹಿತ್ಯ ಸಂಚಿಕೆಯಲ್ಲಿ, 'ಪ್ರಪಂಚದ ಉತ್ತಮ ಪುಸ್ತಕ ಭಂಡಾರಗಳು' ಎಂಬ ಲೇಖನವಿದೆ. ಅದರಲ್ಲಿ, (೧) ಬ್ರಿಟಿಷ್ ಮ್ಯೂಜಿಯಮ್ಮಿನಲ್ಲಿರುವ ರಾಷ್ಟ್ರೀಯ ಪುಸ್ತಕ ಭಾಂಡಾಗಾರದ ವಿಷಯವಾಗಿಯೂ, (೨) ಅಮೆರಿಕದಲ್ಲಿಯ ವಾಷಿಂಗ್ಟನ್ ನಗರದ ಕಾಂಗ್ರೆಸ್ ಪುಸ್ತಕ ಭಾಂಡಾಗಾರದ ವಿಷಯವಾಗಿಯೂ ಮುಂದೆ ಬರೆಯುವ ಸಂಗತಿಗಳನ್ನು ತಿಳಿಸಿದೆ:—

(೧) ಈ ಭಾಂಡಾಗಾರವು ೧೭೫೩ರಲ್ಲಿ ಸ್ಥಾಪಿತವಾಯಿತು. ಇದು ತನ್ನ ಕಾರ್ಯನಿರ್ವಾಹಕತ್ವದಿಂದಲೂ, ಕಾರ್ಯವಿಸ್ತಾರದಿಂದಲೂ ವಾಚಕರಿಗೆ ದೊರೆಯಿಸುವ ಅನೇಕ ಸೌಕರ್ಯಗಳಿಂದಲೂ ಪ್ರಪಂಚದ ಪುಸ್ತಕ ಭಾಂಡಾಗಾರಗಳಿಗೆಲ್ಲ ಕಿರೀಟಪ್ರಾಯವಾಗಿರುವುದು. ಈ ಭಾಂಡಾಗಾರದ ವಿಷಯ ಸೂಚೀಪಟ್ಟಿಕೆಗಳು ಅರುವತ್ತು ದೊಡ್ಡ ಸಂಪುಟಗಳಾಗಿ ಮುದ್ರಿತವಾಗಿರುವುವು. ಇವುಗಳಿಂದ ತಿಳಿಯಬರುವುದೇನೆಂದರೆ:—ಈ ಭಾಂಡಾಗಾರದಲ್ಲಿ ಮೂವತ್ತೆರಡೂವರೆ ಲಕ್ಷ ಮುದ್ರಿತ ಪುಸ್ತಕಗಳೂ, ಎಪ್ಪತ್ತು ಸಾವಿರ ಪುರಾತನದ ಕೈಬರೆಹದ ಪುಸ್ತಕಗಳೂ, ಎಂಬತ್ತನಾಲ್ಕು ಸಾವಿರ ಚಿತ್ರವಿಚಿತ್ರ ವಸ್ತು ಸಾಮಗ್ರಿಗಳೂ, ಅನೇಕ ಭೂಚಿತ್ರಗಳೂ ಹಸ್ತಕೌಶಲ ವಸ್ತುಗಳೂ ಇರುವುವು. ೧೯೩೦–೩೧ನೆಯ ಸಾಲಿನಲ್ಲಿ ಈ ಸಂಸ್ಥೆಯ ಆರ್ಥಿಕ ವ್ಯಯವು ಎರಡು ಲಕ್ಷದ ಹದಿನೈದು ಸಾವಿರ ಪೌಂಡುಗಳಿಗೆ ಮೀರಿದ್ದಿತು; ಎಂದರೆ, ಈಗಿನ ದರದ ಮೇರೆಗೆ, ಸುಮಾರು ಮೂವತ್ತು ಲಕ್ಷ ರೂಪಾಯಿಗಳು.

(೨) ಈ ಭಾಂಡಾಗಾರದಲ್ಲಿ ನಾಲ್ವತ್ತು ಲಕ್ಷ ಮುದ್ರಿತ ಪುಸ್ತಕಗಳೂ, ಹತ್ತು ಲಕ್ಷಕ್ಕೆ ಮೀರಿದ ಕೈಬರೆಹದ ಪುಸ್ತಕಗಳೂ, ಹತ್ತು ಲಕ್ಷ ಭೂಚಿತ್ರಗಳೂ ಇವೆ. ಇದಕ್ಕೆ ಶಾಶ್ವತವಾಗಿ ವರ್ಷವೊಂದಕ್ಕೆ ನಾಲ್ಕು ಲಕ್ಷದ ಎಪ್ಪತ್ತು ಸಾವಿರ ಪೌಂಡುಗಳಷ್ಟು ಸಹಾಯ ದ್ರವ್ಯವು ದೊರೆಯುವುದು.

**೩. 'ಪುಸ್ತಕ' ಎಂಬ ಪದದ ವ್ಯುತ್ಪತ್ತಿ.**—'ದಿ ಇಂಡಿಯನ್ ಆಂಟಿಕ್ವೆರಿ' ಎಂಬ ಮಾಸ ಪತ್ರಿಕೆಯ ೧೯೩೧ನೆಯ ಆಗಸ್ಟು ತಿಂಗಳ ಸಂಚಿಕೆಯಲ್ಲಿ 'ಪುಸ್ತಕ' ಎಂಬ ಪದದ ವ್ಯುತ್ಪತ್ತಿಯನ್ನು ಹೀಗೆ ವಿವರಿಸಿದೆ:—ಇರೇನಿಯನ್ ಭಾಷೆಯಲ್ಲಿ 'ಪೋಸ್ತ್' (ಆವೆಸ್ಥ–'ಪಾಸ್ತ'; ಪೆಹಲವಿ–'ಪೋಸ್ತ್'; ಪರ್ಷಿಯನ್–'ಪೂಸ್ತ್') ಎಂದರೆ, ಚರ್ಮ. ಆದುದರಿಂದ, ಸಂಸ್ಕೃತದ 'ಪುಸ್ತ' ಅಥವಾ, 'ಪುಸ್ತಕ' ಎಂಬ ಪದವು ಇರೇನಿಯನ್ ಮಾತಾದ 'ಪೋಸ್ತ್' (ಎಂದರೆ ಚರ್ಮ) ಎಂಬ ಪದದಿಂದ ಹುಟ್ಟಿರುವುದು; ಏಕೆಂದರೆ, ಪೂರ್ವಕಾಲದಲ್ಲಿ ಲೇಖನಗಳನ್ನು, ಅಥವಾ ಗ್ರಂಥಗಳನ್ನು ಚರ್ಮದ ಮೇಲೆ (ಹದ ಮಾಡದ ಚರ್ಮದ ಮೇಲೆ) ಬರೆಯುತ್ತಿದ್ದರು. ಇದರ ರೂಢಿಯು ಪರ್ಷಿಯಾ ದೇಶದಿಂದ ಇಂಡಿಯಾ ದೇಶದ ವಾಯುವ್ಯ ಪ್ರಾಂತಗಳಿಗೆ ಹರಡಿರಬೇಕು.

**೪. ಮಹಾಭಾರತದಲ್ಲಿ ಪ್ರಕ್ಷಿಪ್ತ ಭಾಗಗಳು.**—ಆಂಧ್ರ ಸಾಹಿತ್ಯ ಪರಿಷತ್ಪತ್ರಿಕೆಯ ೨೦ನೆಯ ಸಂಪುಟದ ೩ನೆಯ (೧೯೩೧ನೆಯ ಆಗಸ್ಟು–ಸೆಪಟಂಬರು) ಸಂಚಿಕೆಯಲ್ಲಿ, "ಮಹಾಭಾರತ ವಿಮರ್ಶ" ಎಂಬ ಲೇಖನದಲ್ಲಿ ವಿಶಾಖಪಟ್ಟಣದ ಕೇತವರಪು ವೆಂಕಟಶಾಸ್ತ್ರಿಗಳು ಹೀಗೆ ಬರೆಯುತ್ತಾರೆ:—

"ನಮ್ಮ ಗ್ರಂಥಗಳಲ್ಲಿ ಬೌದ್ಧರೂ, ಬೌದ್ಧ ಗ್ರಂಥಗಳಲ್ಲಿ ನಮ್ಮವರೂ (ಮತದ್ವೇಷದಿಂದ) ತಮಗೆ ಅನುಕೂಲವಾಗುವಂತೆಯೂ, ಇತರರಿಗೆ ಪ್ರತಿಕೂಲವಾಗುವಂತೆಯೂ ಇರುವ ಪ್ರಕ್ಷಿಪ್ತ ಭಾಗಗಳನ್ನು ಸೇರಿಸಿರುವರೆಂಬುದು ನಿರ್ವಿವಾದಾಂಶವು. ಬೌದ್ಧ ಮತ ಗ್ರಂಥಗಳನ್ನು ಅಶೋಕಚಕ್ರವರ್ತಿಯು ನಿರ್ದುಷ್ಟವಾಗಿ ಮಾಡಿಸಿದಂತೆ ನಮ್ಮ ಹಿಂದೂ ಮತ ಗ್ರಂಥಗಳನ್ನೂ ಪರಿಶೋಧಿಸಿ ಪ್ರಕ್ಷಿಪ್ತಗಳನ್ನು ನಿರ್ಣಯಿಸಿ ಅವನ್ನು ತೊಲಗಿಸುವಷ್ಟು

ಮತಾಭಿಮಾನವುಳ್ಳ ಪುರುಷರು ಹುಟ್ಟದೆ ಇರುವುದು ನಮ್ಮ ದುರದೃಷ್ಟವೆಂದೇ ಹೇಳಬೇಕು. ನಮ್ಮ ಮತಗ್ರಂಥಗಳು ಪ್ರಕ್ಷಿಪ್ತ ಭಾಗ ದೂಷಿತಗಳಾಗಿರುವುವೆಂದೇ ನನ್ನ ನಂಬಿಕೆ. ಹಾಗೆ ಪ್ರಕ್ಷಿಪ್ತ ದೂಷಿತಗಳಾದ ಗ್ರಂಥಗಳಲ್ಲಿ ಮಹಾಭಾರತವೊಂದು.

"ಭಾರತಃ ಪಂಚಮೋ ವೇದಃ" ಎಂದು ಪಂಡಿತೋಕ್ತಿಯುಂಟು. ಭಾರತವು ಸಕಲ ಶಾಸ್ತ್ರ ಸಮ್ಮಿಳಿತವೆಂದೂ ಮಹೋತ್ಕೃಷ್ಟವಾದುದೆಂದೂ ಹೇಳುವುದು ಅತಿಶಯೋಕ್ತಿಯಲ್ಲ. ಆ ಭಾರತವನ್ನು ಧರ್ಮಜ್ಞರು ಧರ್ಮ ಶಾಸ್ತ್ರವೆಂದೂ, ತತ್ತ್ವಜ್ಞರು ವೇದಾಂತವೆಂದೂ, ನೀತಿ ವಿಶಾರದರು ನೀತಿ ಶಾಸ್ತ್ರವೆಂದೂ, ಕವಿಗಳು ಮಹಾ ಕಾವ್ಯವೆಂದೂ ಹೇಳುವುದರಿಂದ ಅದು ಸರ್ವಜನ ಪೂಜಿತವಾದುದೆನ್ನುವುದರಲ್ಲಿ ಸಂದೇಹವಿಲ್ಲ. ಈ ಮಹಾ ಗ್ರಂಥದಲ್ಲಿ ಅನೇಕ ಪ್ರಕ್ಷಿಪ್ತಾಂಶಗಳು ಸೇರಿರುವುವೆಂದು ವಿಮರ್ಶಕರೆಲ್ಲರೂ ಅಂಗೀಕರಿಸಿಯೇ ಇರುವರು. ಆದರೆ, ಇತರರು ಆ ಭಾಗಗಳನ್ನು ವೈಶಂಪಾಯನನೋ ಸೌತಿಯೋ ಸೇರಿಸಿರುವನೆನ್ನುವರು; ನಾನಾದರೋ, ಹಾಗೆ ಸೇರಿಸಿರುವವರು ಹಿಂದೂ ಮತ ದ್ವೇಷಿಗಳಾದ ಬೌದ್ಧರಲ್ಲದೆ ವೈಶಂಪಾಯನಾದಿಗಳಲ್ಲವೆನ್ನುವೆನು.—

"ಬೌದ್ಧರು ನಮ್ಮ ಹಿಂದೂ ಮತದಲ್ಲಿ ಗಣ್ಯರಾದವರಿಗೆ ಲೋಪವನ್ನು ಕಲ್ಪಿಸಬೇಕೆಂದೆಣಿಸಿ, ಅನೇಕ ಗ್ರಂಥಕರ್ತೃವೂ ಮತೋದ್ಧಾರಕನೂ ಮತಗುರುವೂ ಆದ ವ್ಯಾಸನಲ್ಲಿ ಲೋಪವನ್ನಾರೋಪಿಸುವುದಕ್ಕಾಗಿ ಕೆಲವು ಭಾಗಗಳನ್ನು ಮಹಾಭಾರತದಲ್ಲಿ ಸೇರಿಸಿರುವರು. ಇವನ್ನು ಸತ್ಯವೆಂದು ನಂಬಿ ನಮ್ಮ ಪಂಡಿತರೇ ಕೆಲವರು ವ್ಯಾಸನು ಸಂಕರ ಜಾತಿಯವನೆಂದೂ ನಿಷಾದನೆಂದೂ ಚಂಡಾಲನೆಂದೂ ಬರೆದಿರುವರು. ನಮ್ಮ ಪಂಡಿತರು, ಮಹಾಭಾರತದಲ್ಲಿ ಹೇಳಿರುವುದನ್ನೇ ಉಪಾಯಾಂತರಗಳಿಂದ ಸಮರ್ಥಿಸುವ ಪ್ರಯತ್ನ ಮಾಡತೊಡಗಿದರೇ ಹೊರತು ಅದು ಎಷ್ಟರಮಟ್ಟಿಗೆ ಸತ್ಯವೆಂದು ಆಲೋಚಿಸದೆ ಹೋದರು. ವ್ಯಾಸನಲ್ಲಿ ದೇವತಾ ಮಹಿಮೆಯನ್ನಾರೋಪಿಸಿ, "ವ್ಯಾಸೋ ನಾರಾಯಣೋ ಹರಿಃ" ಎಂದು ಹೇಳಿ, ಆತನಿಗೆ ಲೋಪವೆಲ್ಲಿಂದ ಬರಬೇಕು ಎಂದು ಸಮಾಧಾನ ಮಾಡಿರುವರು. ಒಂದು ವೇಳೆ ವ್ಯಾಸನು ಅಂತಹ ಚಂಡಾಲನಾಗಿದ್ದರೆ, ಆ ಕಾಲದಲ್ಲಿಯಾಗಲಿ ತರುವಾಯವಾಗಲಿ ಸದಾಚಾರ ಸಂಪನ್ನರಾದ ಮುನಿಗಳು ಆತನನ್ನು ಬಹಿಷ್ಕರಿಸದಿರುವರೆ? ಬ್ರಾಹ್ಮಣ ಜಾತ್ಯಭಿಮಾನವಂತರಾದವರು ಆತನಲ್ಲಿ ಶಿಷ್ಯತ್ವವನ್ನಂಗೀಕರಿಸುತ್ತಿದ್ದರೆ?

"ವ್ಯಾಸನ ಅವತಾರ ಘಟ್ಟವನ್ನು ಪರಿಶೀಲಿಸೋಣ: ಪರಾಶರನು ವಸಿಷ್ಠ ಸಂತತಿಯವನು, ಜಿತೇಂದ್ರಿಯನು, ಮಹಾ ತಪೋಧನನು, ತೀರ್ಥಯಾತ್ರಾಪರನು; ಈತನು ಯಮುನಾ ನದಿಯನ್ನು ದಾಟುತ್ತ, ದೋಣಿಯನ್ನು ನಡೆಯಿಸುತ್ತಿದ್ದ ಸತ್ಯವತಿಯನ್ನು ನೋಡಿ ಮೋಹಿಸಿ, ಹಗಲು ಹೊತ್ತು, ಇತರರು ನೋಡದಂತೆ ಮಂಜನ್ನು ಕಲ್ಪಿಸಿ, ಅಲ್ಲಿಯೇ ಸಂಗಮಿಸಿ ವ್ಯಾಸನನ್ನು ಪಡೆದಂತೆ ಭಾರತದಲ್ಲಿ ಹೇಳಿದೆ. ಅಂತಹ ಜಿತೇಂದ್ರಿಯನಾದ ಪರಾಶರನು ಇಂತಹ ಅಯೋಗ್ಯ ಕೃತ್ಯವನ್ನು ಮಾಡುವನೆ? ಹಾಗೆ ಅವನು ಮಾಡಿದ್ದರೆ ಅವನ ಗೌರವವು ಉಳಿಯುತ್ತಿದ್ದಿತೆ? ಆದುದರಿಂದ, ಲೋಕ ಸ್ವಭಾವ ವಿರುದ್ಧವಾದ ಈ ಘಟ್ಟವು ವಿಶ್ವಾಸಾರ್ಹವಾದುದಲ್ಲ. ಇದು ಕೇವಲ ಹಿಂದೂ ಮತ ದ್ವೇಷಿಗಳಾದ ಬೌದ್ಧರು ಕಲ್ಪಿಸಿದುದು.

"ಹಾಗಾದರೆ, ವ್ಯಾಸ ಜನ್ಮವು ಹೇಗೆಂದು ಪ್ರಶ್ನೆ ಮಾಡಿದರೆ, ಈ ವಿಷಯದಲ್ಲಿ ನನಗೆ ತೋರುವುದನ್ನು ಹೇಳುವೆನು: ಈ ವ್ಯಾಸಾವತಾರ ಘಟ್ಟವನ್ನು ಉಪರಿಚರ ವಸುವಿನ ವೃತ್ತಾಂತದಲ್ಲಿ ಹೇಳುವ ಕಾರಣವಿಲ್ಲ. ಉಪರಿಚರ ವಸುವಿನ ವೀರ್ಯೋತ್ಪನ್ನಳಾದ ಸತ್ಯವತಿಯನ್ನು ಪರಾಶರನೊಡನೆ ಕೂಡಿಸುವುದಕ್ಕಾಗಿ ಈ ಕಥೆ ಹುಟ್ಟಿದುದು ; ಇದು ಸರಿಯಲ್ಲ. ಯಮುನಾ ದ್ವೀಪದಲ್ಲಿ ಪರಾಶರನೆಂಬ ಮಹಾ ಮುನಿ ಇರುವನು. ಆತನಿಗೆ ಸತ್ಯವತಿಯೆಂಬ ಭಾರ್ಯೆ ಇರುವಳು. ಈ ಇಬ್ಬರಿಗೂ ವ್ಯಾಸನು ಹುಟ್ಟಿದನು. ಪರಾಶರನ ಮಗನಾದುದರಿಂದ ಪಾರಾಶರನೆಂದೂ, ಸತ್ಯವತಿಯ ಮಗನಾದುದರಿಂದ ಸಾತ್ಯವತೇಯನೆಂದೂ, ಕಪ್ಪನೆಯ ದೇಹವುಳ್ಳವನಾದುದರಿಂದ ಕೃಷ್ಣನೆಂದೂ, ದ್ವೀಪದಲ್ಲಿ ಹುಟ್ಟಿದವನಾದುದರಿಂದ ದ್ವೈಪಾಯನನೆಂದೂ ಈತನಿಗೆ ಹೆಸರುಗಳು ಬಂದಿರುವುವು. ಪರಾಶರನ ಭಾರ್ಯೆಯಾದ ಸತ್ಯವತಿಯೇ ಬೇರೆ, ಉಪರಿಚರ ವಸುವಿನ ಮಗಳು ಸತ್ಯವತಿಯೇ ಬೇರೆ; ನಾಮ ಸಾಮ್ಯವಿರಬಾರದೆ! ಶಂತನುವಂಶೋದ್ಧಾರಕಳಾದ ಸತ್ಯವತಿಗೆ ವ್ಯಾಸನು ಹುಟ್ಟಿದನೆಂದು ಹೇಳಿ ಕಥೆಯನ್ನು ತಾರುಮಾರು ಮಾಡಿರುವರು.

"ಹೀಗೆಯೇ, ಕುಂತಿ, ದ್ರೌಪದಿ, ಪಾಂಡು, ಧೃತರಾಷ್ಟ್ರ, ಧರ್ಮರಾಜ ಮೊದಲಾದವರಲ್ಲಿಯೂ ಲೋಪವನ್ನಾರೋಪಿಸಿರುವರು."

---

# ಗ್ರಂಥ ವಿಮರ್ಶೆ

## ೧. ಆಕಾಶದೊಳಗಿನ ಅದ್ಭುತ ಚಮತ್ಕಾರಗಳು

(ನವಜೀವನ ಗ್ರಂಥ ಭಾಂಡಾರ—ಗ್ರಂಥ ೧)

ಲೇಖಕರು.—ಪ್ರೊಫೆಸರ್ ಪಾಟೀಲ ತಿರುಮಲರಾಯರು, ಎಂ.ಎ.,
ಧಾರವಾಡ.

ಸಂಪಾದಕರು.—ಆಲೂರ ವೆಂಕಟರಾಯರು, ಬಿ.ಎ., ಎಲ್‌ಎಲ್.ಬಿ.,
ಧಾರವಾಡ.

ಬೆಂಗಳೂರು ಪ್ರೆಸ್ಸಿನಲ್ಲಿ ಮುದ್ರಿತವಾಯಿತು ; ಕ್ರೌನ್ ಅಷ್ಟಪತ್ರ ಪುಟಗಳು ೭+೧೦೨ ;
೧೯೩೧ ; ಬೆಲೆ ರೂ. ೧—೨—೦.

ಪಾಶ್ಚಾತ್ಯರಲ್ಲಿ ವಿಜ್ಞಾನವು ವಿಶೇಷವಾಗಿ ಅಭಿವೃದ್ಧಿ ಹೊಂದಿರುವುದಕ್ಕೆ ಅನೇಕ ಕಾರಣಗಳುಂಟು. ಅವನ್ನು ಈ ಸಂದರ್ಭದಲ್ಲಿ ವಿಚಾರಿಸುವ ಆವಶ್ಯಕತೆಯಿಲ್ಲ. ಅಕ್ಷರ ಜ್ಞಾನವು, ಆ ದೇಶಗಳ ಸಾಮಾನ್ಯ ಜನರಲ್ಲಿಯೂ ಅಧಿಕವಾಗಿ ಹರಡಿರುವುದರಿಂದ, ಜನರಿಗೆ ತಮ್ಮ ಜ್ಞಾನವನ್ನು ಹೆಚ್ಚಿಸಿಕೊಳ್ಳಬೇಕೆಂಬ ಕುತೂಹಲವು ಹೆಚ್ಚಾಗಿರುವುದು. ಆ ಕುತೂಹಲವನ್ನು ಪೂರಯಿಸಿಕೊಳ್ಳಲು ಎಲ್ಲ ಬಗೆಯ ಗ್ರಂಥಗಳೂ ಹೇರಳವಾಗಿರುವುವು. ನಮ್ಮ ಭಾರತದೇಶದಲ್ಲಾದರೋ ಸಾಮಾನ್ಯವಾಗಿ ನೂರು ಮಂದಿಯಲ್ಲಿ ತೊಂಬತ್ತೈದು ಮಂದಿಗೆ ಓದು ಬರೆಹ ಬರುವುದಿಲ್ಲ. ಇಂಥವರಿಗೆ ಪುಸ್ತಕಗಳಿಂದ ಪ್ರಯೋಜನವೇನು? ಆದುದರಿಂದ ಅಂತಹ ಗ್ರಂಥಗಳನ್ನು ಬರೆಯುವವರೂ ವಿರಳ. ಇದೂ ಅಲ್ಲದೆ ಭಾರತೀಯರಲ್ಲಿ ವೈಜ್ಞಾನಿಕ ಜ್ಞಾನವೂ ಕಡಿಮೆ. ಆಧುನಿಕ ಪಾಶ್ಚಾತ್ಯರಲ್ಲಿ ಭೌತಿಕ ವಿಜ್ಞಾನ, ರಸಾಯನ ವಿಜ್ಞಾನ, ಜೀವ ವಿಜ್ಞಾನ—ಇವೇ ಮೊದಲಾಗಿ ಪ್ರತಿಯೊಂದು ವಿಜ್ಞಾನವೂ ಬೆಳೆದು ಒಂದೊಂದನ್ನು ಅಧ್ಯಯನ ಮಾಡುವುದಕ್ಕೆ ಒಂದು ಆಯುಸ್ಸು ಕೂಡ ಸಾಲದಂತಿದೆ. ಅವರ ಆಧುನಿಕ ನಾಗರಿಕತೆಗೆ ಅವರ ವೈಜ್ಞಾನಿಕ ಕೌಶಲವೇ ಮೂಲ. ಎಷ್ಟೋ ಮಂದಿ ತಮ್ಮ ಯಾವಜ್ಜೀವವನ್ನೂ ವಿಜ್ಞಾನ ವ್ಯಾಸಂಗಕ್ಕೆ ಧಾರೆಯೆರೆದುಕೊಟ್ಟು ನಿರಂತರ ದುಡಿಯುತ್ತಿದ್ದಾರೆ. ಹಾಗೆ ಮಾಡಲು ಎಲ್ಲರಿಂದಲೂ ಸಾಧ್ಯವಿಲ್ಲ. ಆದರೆ ಎಷ್ಟೋ ಮಂದಿಗೆ ಯಾವ ಯಾವ ವಿಜ್ಞಾನದಲ್ಲಿ ಯಾವ ಯಾವ ನೂತನ ವಿಷಯಗಳು ಕಂಡುಹಿಡಿಯಲಾಗಿವೆಯೆಂಬುದನ್ನು ಅರಿತುಕೊಳ್ಳಲು ಕುತೂಹಲವಿರುವುದು. ಅಂತಹವರ ಕುತೂಹಲವನ್ನು ತಣಿಸುವುದಕ್ಕಾಗಿ ಪ್ರಸಿದ್ಧ ವೈಜ್ಞಾನಿಕರಿಂದ ಅವರವರು ಅಧ್ಯಯನ ಮಾಡಿದ ವೈಜ್ಞಾನಿಕ ಗ್ರಂಥಗಳು ಸಾಮಾನ್ಯರಿಗೂ ಸುಲಭ ಗ್ರಾಹ್ಯವಾಗುವಂತೆ ರಚಿತವಾಗಿವೆ.

ಈ ಮಾರ್ಗವನ್ನೇ ಅನುಸರಿಸಿ ಕನ್ನಡಿಗರ ಉಪಯೋಗಕ್ಕಾಗಿ ಈ 'ನವಜೀವನ ಗ್ರಂಥಮಾಲೆ'ಯು ಆರಂಭವಾಗಿದೆ. ಈ ಮಾಲೆಯ ಪ್ರಥಮ ಪುಸ್ತಕವು ಜ್ಯೋತಿಶ್ಶಾಸ್ತ್ರ ವಿಷಯವಾದುದಾಗಿ ಏಕೆ ಇರಬೇಕೆಂದು ಪ್ರಶ್ನೆ ಮಾಡಬಹುದು. ಜ್ಯೋತಿರ್ವಿದ್ಯೆಯು ಅತ್ಯಂತ ಪ್ರಾಚೀನವಾದುದರಿಂದ ಅದಕ್ಕೆ ಈ ಮಾಲೆಯ ಪ್ರಕಾಶಕರು ಅಗ್ರಸ್ಥಾನವನ್ನು ಕೊಟ್ಟಿರುವರೆಂಬುದು ನಮ್ಮ ಊಹೆ. ಇದಲ್ಲದೆ ಮತ್ತೊಂದು ಕಾರಣವೂ ಇರಬಹುದು: ಸೃಷ್ಟಿಯೆಲ್ಲವೂ ತನಗಾಗಿಯೇ ನಿರ್ಮಿತವಾಗಿರುವುದೆಂಬ ಮನುಷ್ಯನ ಒಣಹೆಮ್ಮೆಯನ್ನು ಮುರಿಯುವುದಕ್ಕೆ ಜ್ಯೋತಿಶ್ಶಾಸ್ತ್ರ ವ್ಯಾಸಂಗವನ್ನು ಬಿಟ್ಟರೆ ಮತ್ತಾವುದೂ ಇಲ್ಲ. ವಿಶ್ವದಲ್ಲಿ, ನಮ್ಮ ವಾಸಸ್ಥಾನವಾದೀ ಪೃಥ್ವೀ ಮಂಡಲವು ಪರಮಾಣುವಿಗಿಂತಲೂ ಕ್ಷುದ್ರವಾದುದೆಂದೂ, ಈ ಕ್ಷುದ್ರ ಪ್ರಪಂಚಕ್ಕೆ ಕಟ್ಟುಬಿದ್ದಿರುವ ನಾವು ಅದಕ್ಕಿಂತಲೂ ಕ್ಷುದ್ರರೆಂಬುದನ್ನೂ ಜ್ಯೋತಿಶ್ಶಾಸ್ತ್ರವು ಮನಕ್ಕೆ ತರುತ್ತದೆ. ಸಾಮಾನ್ಯರಿಗೆ ಈ ವಿಶ್ವವೈಶಾಲ್ಯದ ಜ್ಞಾನವೇ ಇಲ್ಲ. ಯಾರನ್ನಾದರೂ ಸಾಮಾನ್ಯನನ್ನು, 'ನೀನು ನಿತ್ಯವೂ ನೋಡುವ ಸೂರ್ಯನಿಗೂ ನಿನಗೂ ಇರುವ ದೂರವೆಷ್ಟೆಂ'ದು ಕೇಳಿದರೆ, ಅವನು ತಲೆಕೆರೆದುಕೊಂಡು ಕಣ್ಣು ಕಣ್ಣು ಬಿಡುವನು. ನೋಡುವುದಕ್ಕೆ ಸೂರ್ಯನೇನೊ ಹತ್ತಿರವಿರುವಂತೆಯೇ ತೋರುತ್ತದೆ; ಆದರೆ ಯಥಾರ್ಥವಾದ ಅಂತರವು ಒಂಬತ್ತು ಕೋಟಿಯೂ ಮೂವತ್ತು ಲಕ್ಷ ಮೈಲುಗಳ ದೂರವು. ಸೂರ್ಯನಿಗಾಚೆ ನಮಗೆ ಅತ್ಯಂತ ಸಮೀಪದಲ್ಲಿರುವ ನಕ್ಷತ್ರದ ದೂರವು ೨೫,೦೦೦,೦೦೦,೦೦೦,೦೦೦ ಮೈಲುಗಳು. ದೂರದರ್ಶಕಕ್ಕೆ ಮಾತ್ರ ಗೋಚರವಾಗುವ, ಅತ್ಯಂತ ದೂರದಲ್ಲಿ ನೆಲಸಿರುವ, ನೀಹಾರಕದ ದೂರವೆಷ್ಟೆಂದರೆ—ಅಲ್ಲಿಂದ ಹೊರಟ ಬೆಳಕು ಪ್ರತಿ ಸೆಕಂಡಿಗೂ ೧,೮೬,೦೦೦ ಮೈಲುಗಳ ವೇಗದಿಂದ ಪ್ರಯಾಣ ಮಾಡುತ್ತ, ಭೂಮಿಯನ್ನು ಮುಟ್ಟಲು ೧೪ ಕೋಟಿ ವರ್ಷಗಳಾಗುವುವು. ಈ ದೂರವು ಅಚಿಂತ್ಯವಾದುದಲ್ಲವೆ! ಗಗನ ದೃಶ್ಯಗಳ ವಿಷಯವಾಗಿ ಸಾಮಾನ್ಯರಲ್ಲಿ ಅನೇಕ ತಪ್ಪು ತಿಳಿವಳಿಕೆಗಳಿವೆ: ಗ್ರಹಣಗಳನ್ನು ಎಲ್ಲರೂ ನೋಡಿರುವರು; ಆದರೆ ಎಷ್ಟು ಮಂದಿಗೆ ಅವುಗಳ ನಿಜವಾದ ಕಾರಣವು ಗೊತ್ತಿರುವುದು? ಈ ವಿಷಯಗಳಲ್ಲಿ ಜನರಿಗಿರುವ ಅಜ್ಞಾನವನ್ನು ಹೋಗಲಾಡಿಸಲು ಈ 'ನವಜೀವನ ಗ್ರಂಥ ಭಾಂಡಾರ' ದಲ್ಲಿ ಜ್ಯೋತಿಶ್ಶಾಸ್ತ್ರಕ್ಕೆ ಅಗ್ರಸ್ಥಾನವನ್ನು ಕೊಟ್ಟಿರಬಹುದು.

ಅಲ್ಲದೆ, ಜ್ಯೋತಿಷವು ವೇದಾಂಗಗಳಲ್ಲಿ ಒಂದಾಗಿರುವುದು. ವೇದಾರ್ಥಗಳನ್ನರಿಯುವುದಕ್ಕೆ ಜ್ಯೋತಿಷದ ಸಾಹಾಯ್ಯವು ಆವಶ್ಯಕ. ಭಾರತೀಯರ ಕರ್ಮಗಳಿಗೆಲ್ಲ ಕಾಲವು ಮುಖ್ಯವಾದುದು. ಇದರ ನಿರ್ಣಯಕ್ಕೆ ಜ್ಯೋತಿಶ್ಶಾಸ್ತ್ರವೇ ಆಧಾರ. ಯಾವ ಕರ್ಮವನ್ನು ಆಚರಿಸಬೇಕಾದರೂ ಭಾರತೀಯರು ಮೊದಲು ಪಂಚಾಂಗವನ್ನು ನೋಡುವರಷ್ಟೆ! ಆದರೆ ಈಗಣ ಕಾಲದಲ್ಲಿ ಪಂಚಾಂಗವನ್ನು ಗುಣಿಸುವ ನಮ್ಮ ಜೋಯಿಸರನೇಕರಿಗೆ ಜ್ಯೋತಿಶ್ಶಾಸ್ತ್ರದ ಯಥಾರ್ಥ ಜ್ಞಾನವೇ ಇಲ್ಲದೆ ಹಿಂದಣವರು ಬರೆದಿಟ್ಟಿರುವ ಕೋಷ್ಟಕಗಳಿಂದಲೇ ಪಂಚಾಂಗಗಳನ್ನು ಗುಣಿಸುತ್ತಿರುವುದು ಶೋಚನೀಯವಾದ ವಿಷಯವಾಗಿದೆ. ಹೀಗಿರುವಲ್ಲಿ, ಇಂತಹ ಪಂಚಾಂಗಗಳಿಗೂ ದೃಗ್ಗಣಿತ

ಪಂಚಾಂಗಕ್ಕೂ ಬಹಳ ವ್ಯತ್ಯಾಸವಿರುವುದು ಆಶ್ಚರ್ಯಕರವಲ್ಲ. ಆಧುನಿಕ ಪಾಶ್ಚಾತ್ಯರಲ್ಲಿ ಜ್ಯೋತಿಶ್ಶಾಸ್ತ್ರವು ಎಷ್ಟು ಅಭಿವೃದ್ಧಿಯನ್ನು ಪಡೆದಿರುವುದೆಂಬುದನ್ನು ನಮ್ಮ ಜೋಯಿಸರಿಗೆ ತೋರಿಸಿ ಅವರಿಗೂ ಜ್ಞಾನೋದಯವಾಗುವಂತೆ ಮಾಡಬೇಕೆಂಬ ಉದ್ದೇಶದಿಂದಲೂ ಈ 'ನವಜೀವನಗ್ರಂಥ ಭಾಂಡಾರ'ದಲ್ಲಿ ಜ್ಯೋತಿಶ್ಶಾಸ್ತ್ರಕ್ಕೆ ಅಗ್ರ ಸ್ಥಾನವನ್ನು ಕೊಟ್ಟಿರುವರೆಂದು ನಮಗೆ ಹೊಳೆಯುತ್ತದೆ.

ಈ ಗ್ರಂಥ ಭಾಂಡಾರದ ಸಂಪಾದಕರೂ ಪ್ರಕಾಶಕರೂ ಆದ ಶ್ರೀ ಆಲೂರ ವೆಂಕಟರಾಯರನ್ನು ವಾಚಕವೃಂದಕ್ಕೆ ನಾವು ಪರಿಚಯಮಾಡಿಕೊಡಬೇಕಾದುದಿಲ್ಲ; ಅವರು ಕರ್ಣಾಟಕದ ಸರ್ವತೋಮುಖ ಪ್ರಗತಿಗಾಗಿ ಈಗಲೂ ದುಡಿಯುತ್ತಿರುವರು. ಈ ಭಾಂಡಾರದ ಉದ್ದೇಶವೇನೆಂಬುದನ್ನು ಅವರು ಪ್ರಸ್ತಾವನೆಯಲ್ಲಿ ಈ ಮೇರೆಗೆ ತಿಳಿಸಿರುತ್ತಾರೆ:—




> "ಗಹನವಾದ ವಿಷಯುಗಳನ್ನು ಅತ್ಯಂತ ಸುಲಭವಾಗಿಯೂ ಮನೋರಂಜಕವಾಗಿಯೂ ತಿಳುಹಿಸುವುದೇ ಈ ಗ್ರಂಥಭಾಂಡಾರದ ಮುಖ್ಯ ಉದ್ದೇಶ. ದೊಡ್ಡ ಗ್ರಂಥಗಳನ್ನು ಬರೆಯುವುದಕ್ಕಿಂತಲೂ ಇಂತಹ ಸಣ್ಣ ಪುಸ್ತಕಗಳನ್ನು ಬರೆಯುವುದು ಬಹಳ ಬಿಗಿಯಾದ ಕೆಲಸವೆಂಬುದನ್ನು ಸುಶಿಕ್ಷಿತರಿಗೆ ಹೇಳಬೇಕಾದುದಿಲ್ಲ. ಅದರಲ್ಲಿಯೂ, ಕರ್ನಾಟಕದಂಥ ಶಿಕ್ಷಣ ಪ್ರಸಾರವು ತೀರ ಕಡಿಮೆಯಿರುವ ಪ್ರಾಂತದಲ್ಲಿ ಸಾಮಾನ್ಯರಿಗೂ ಸುಬೋಧವಾಗುವಂತೆ ಬರೆಯುವುದು ಬಹಳ ಕಠಿನ ಕೆಲಸ. ಅದು ಈ ಗ್ರಂಥದಲ್ಲಿ ಎಷ್ಟರ ಮಟ್ಟಿಗೆ ಸಾಧಿಸಿದೆ ಎಂಬುದನ್ನು ವಾಚಕರೇ ಹೇಳಬೇಕು. ........ ಈ ಗಹನ ವಿಷಯವನ್ನು ಉತ್ಕೃಷ್ಟವಾಗಿ ಅಭ್ಯಾಸ ಮಾಡಿದ ಪ್ರೊಫೆಸರ್ ತಿರುಮಲರಾವ ಪಾಟೀಲ, ಎಂ.ಎ. ಇವರು ನಮ್ಮ ಪ್ರಾರ್ಥನೆಯನ್ನು ಮನ್ನಿಸಿ, ಅತ್ಯಂತ ಪರಿಶ್ರಮ ಪಟ್ಟು, ಸ್ವಲ್ಪಾವಧಿಯಲ್ಲಿ ಈ ಗ್ರಂಥವನ್ನು ಬರೆದುಕೊಟ್ಟದುದಕ್ಕಾಗಿ ನಾವು ಅವರಿಗೆ ವಂದನೆಗಳನ್ನು ಸಮರ್ಪಿಸುತ್ತೇವೆ."

ಒಂದು ನೂರು ಪುಟಗಳನ್ನು ಮಾತ್ರವೇ ಉಳ್ಳ ಈ ಸಣ್ಣ ಪುಸ್ತಕದಲ್ಲಿ ಜ್ಯೋತಿಶ್ಶಾಸ್ತ್ರದ ಕೇವಲ ಮುಖ್ಯ ವಿಷಯುಗಳನ್ನಾದರೂ ವಿಶದವಾಗಿ ವರ್ಣಿಸುವುದು ಸಾಧ್ಯವಲ್ಲವೆಂದು ಹೇಳಬೇಕಾದುದಿಲ್ಲ. ಲೇಖಕರು ಅನೇಕ ಗ್ರಂಥಗಳನ್ನೋದಿ ಬಹಳ ಶ್ರಮೆ ಪಟ್ಟು, ಈ ಪುಸ್ತಕವನ್ನು ಬರೆದಿರುವರೆಂಬುದು ಪುಸ್ತಕದ ಕೊನೆಯಲ್ಲಿ ಕೊಟ್ಟಿರುವ ಆಧಾರ ಗ್ರಂಥಗಳ ಪಟ್ಟಿಯಿಂದ ವ್ಯಕ್ತವಾಗುವುದು. ಈ ಗ್ರಂಥವನ್ನು ಓದಿ ಅರ್ಥ ಮಾಡಿಕೊಳ್ಳುವುದಕ್ಕೆ ವಾಚಕರಿಗೆ ಭೌತಿಕ ವಿಜ್ಞಾನ (Physics), ರಸಾಯನ ವಿಜ್ಞಾನ (Chemistry)—ಇವುಗಳ ಸಾಮಾನ್ಯ ಪರಿಚಯವಾದರೂ ಬೇಕು. ಈ ವಿಜ್ಞಾನಗಳು ಉಳಿದ ಎಲ್ಲ ವಿಜ್ಞಾನವ್ಯಾಸಂಗಕ್ಕೂ ತಳಹದಿಯಾಗಿರುವುವು.

ಗಹನ ವಿಷಯುಗಳನ್ನು ಸುಲಭ ಗ್ರಾಹ್ಯವಾಗಿ ಮಾಡಲು ಲೇಖಕರು ಬಹಳ ಕಷ್ಟಪಟ್ಟಿದ್ದಾರೆ. ಈ ಪುಸ್ತಕದಲ್ಲಿ ೧೬ ಪ್ರಕರಣಗಳಿವೆ; ಮೂರೇ ಚಿತ್ರಪಟಗಳು. ಮುದ್ರಣವು ಅಂದವಾಗಿದೆ. ಓದುಗರ ಕಣ್ತೆರೆದು ಅವರ ದೃಷ್ಟಿಯು ವಿಸ್ತಾರವಾಗುವುದರಲ್ಲಿ ಸಂಶಯವಿಲ್ಲ. ಕನ್ನಡಿಗರು ಈ ಪುಸ್ತಕವನ್ನೋದಿ ವಿಶ್ವ ವಿಷಯದಲ್ಲಿ

ಅನೇಕರಿಗಿರಬಹುದಾದ ಸಂಕುಚಿತ ದೃಷ್ಟಿಯನ್ನು ವಿಶಾಲಮಾಡಿಕೊಳ್ಳಬೇಕೆಂಬುದೇ ನಮ್ಮ ಹಾರಯ್ಕೆ.

ಇದು 'ಶಾಸ್ತ್ರ' ಗ್ರಂಥವಾದುದರಿಂದ ಇದರಲ್ಲಿರಬಹುದಾದ ನ್ಯೂನತೆಗಳನ್ನು ವಾಚಕರ ಸೌಕರ್ಯಕ್ಕಾಗಿ ತೋರ್ಪಡಿಸುವುದು ನಮ್ಮ ಕರ್ತವ್ಯವೆಂದು ತಿಳಿದು ಕೆಲವನ್ನು ಇಲ್ಲಿ ವಿಶದಪಡಿಸಿರುವೆವು. ಇದಕ್ಕಾಗಿ ಗ್ರಂಥಕರ್ತರಾಗಲಿ ಸಂಪಾದಕರಾಗಲಿ ನಮ್ಮನ್ನು ದೋಷದೃಕ್ಕುಗಳೆಂದು ಎಣಿಸಲಾಗದು. ಇಂಗ್ಲಿಷಿನಲ್ಲಿಯ 'ಸಯನ್ಸ್' ಎಂಬ ಪದಕ್ಕೆ 'ಯಥಾರ್ಥ ಜ್ಞಾನ' (Exact knowledge) ಎಂದು ವ್ಯಾಖ್ಯಾನ ಮಾಡಿರುವರು. ವಿಜ್ಞಾನ ಗ್ರಂಥಗಳಲ್ಲಿ ಹೇಳುವ ವಿಷಯಗಳು ತಪ್ಪು ತಿಳಿವಳಿಕೆಗೆ ಆಸ್ಪದ ಕೊಡದಂತೆ ಯಥಾರ್ಥವಾಗಿರಬೇಕು. ಪ್ರಕೃತ ಗ್ರಂಥವು, ಪ್ರಸ್ತಾವನೆಯಲ್ಲಿ ಹೇಳಿರುವಂತೆ, ಅವಸರದಲ್ಲಿ ಬರೆದ ಹಾಗೆ ತೋರುವುದು; ಕೆಲವು ಭಾಗಗಳು ಅಷ್ಟು ಸಮರ್ಪಕವಾಗಿರುವಂತಿಲ್ಲ. ಮುಂದೆ ಕೊಡುವ ಉದಾಹರಣೆಗಳಿಂದ ನಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವೆವು.

ಗ್ರಂಥದ ಮೊದಲನೆಯ ವಾಕ್ಯಗಳು ಹೀಗಿರುವುವು:—

"ವಿಶ್ವವೆಂಬುದೊಂದು ಚಿಕ್ಕ ತೊಟ್ಟಿಲು. ಆ ತೊಟ್ಟಿಲಿನಲ್ಲಿ ಮನುಷ್ಯವೆಂಬ ಎಳೆಗೂಸು ಹೆಬ್ಬಟ್ಟು ಚೀಪುತ್ತ ಮಲಗಿದೆ. ಮೇಲಕ್ಕೆ ದೂರದಲ್ಲಿ ಆ ತೊಟ್ಟಿಲಿಗೆ ಆಕಾಶವೆಂಬುದೊಂದು ಗುಬ್ಬಿಯ ಚಟ್ಟು ಕಟ್ಟಿದೆ. . . . . . . . . . . . . . . . . . . . . ತೊಟ್ಟಿಲಿನಲ್ಲಿಯ ಕೂಸು ಸಂಸಾರದುಃಖದಿಂದ ಬಳಲಿ ಅಳುವಾಗ, ಈ ಚಟ್ಟಿನ ಕಡೆಗೆ ನೋಡಿದರೆ ಅದಕ್ಕೆ ಆನಂದವಾಗುತ್ತದೆ; ಅಳುವುದನ್ನು ಬಿಡುತ್ತದೆ."

'ವಿಶ್ವ' ಎಂಬ ಪದಕ್ಕೆ (ಇಂಗ್ಲಿಷಿನಲ್ಲಿ 'ದಿ ಯೂನಿವರ್ಸ್') ಸಮಸ್ತ ಬ್ರಹ್ಮಾಂಡ ಎಂಬ ಅರ್ಥ; ಇಲ್ಲಿ ನಮ್ಮ 'ಪೃಥ್ವಿ' ಎಂಬ ಅರ್ಥದಲ್ಲಿ ಉಪಯೋಗಿಸಿರುವಂತಿದೆ; ಮುಂದೆ ಇದೇ ಪದವನ್ನು 'ಬ್ರಹ್ಮಾಂಡ' ಎಂಬ ಅರ್ಥದಲ್ಲಿ ಉಪಯೋಗಿಸಿದೆ. "ಮನುಷ್ಯ**ವೆಂಬ**" ಎಂಬುದು ಹೇಗೆ ಸುಷ್ಠು? "ಕೂಸು ಸಂಸಾರ ದುಃಖದಿಂದ ಬಳಲು" ವುದೆಂದರೇನು! ಒಟ್ಟಿನಲ್ಲಿ, ಇಲ್ಲಿ ಹೇಳಿರುವ ಉಪಮೆಯೂ ಅಷ್ಟು ಸಮರ್ಪಕವಾಗಿಲ್ಲ.

ಪುಟ ೨.—

"ಆಕಾಶದೊಳಗಿನ ಆ ಆಶ್ಚರ್ಯಕರವಾದ ಪದಾರ್ಥಗಳನ್ನು ನೋಡಿ ಪಶು ಪಕ್ಷಿಗಳು ಕೇವಲ ಆನಂದವನ್ನು ಪಡೆಯುತ್ತವಲ್ಲದೆ, ಅವುಗಳನ್ನು ತಿಳಿದುಕೊಳ್ಳುವುದಕ್ಕೆ ಕುತೂಹಲ ಪಡುವುದಿಲ್ಲ."

ಹೀಗೆ ಹೇಳಲು ನಮಗೆ ಆಧಾರವೇನು?

ಪುಟ ೩.—

"ಜ್ಯೋತಿಶ್ಶಾಸ್ತ್ರದ ಶೋಧಗಳಿಂದ ಈ ವಿಶ್ವವೆಂಬುದು ಅನಂತವಾದುದೂ ಅಪಾರವಾದುದೂ ಆಗಿರುತ್ತದೆಂಬ ಮಾತು ನಮಗೆ ಗೊತ್ತಾಗಿದೆ. ಮೊದಲು ವಾಮನ ಮೂರ್ತಿಯಾಗಿದ್ದು ಈಗ ಅದು ಬೆಳೆದು ಪೃಥ್ವಿ, ಅಂತರಿಕ್ಷ ಮತ್ತು ಆಕಾಶಗಳನ್ನು ಅಳೆಯುವ ತ್ರಿವಿಕ್ರಮ ಮೂರ್ತಿಯಾಗಿದೆ."

"ಮೊದಲು ವಾಮನಮೂರ್ತಿಯಾಗಿದ್ದು ಈಗ ಅದು ಬೆಳೆದು" ಎಂದರೇನು? ಇಲ್ಲಿ 'ವಿಶ್ವ' ಎಂಬ ಪದವನ್ನು 'ಬ್ರಹ್ಮಾಂಡ' ಎಂಬ ಅರ್ಥದಲ್ಲಿ ಉಪಯೋಗಿಸಿ 'ಪೃಥ್ವಿ'ಯನ್ನು ಅದರ ಒಂದು ಭಾಗವಾಗಿ ಹೇಳಿದೆ. ಹೀಗೆ ಒಂದೇ ಪದವನ್ನು ಎರಡು ಅರ್ಥಗಳಲ್ಲಿ ಉಪಯೋಗಿಸುವುದು 'ಶಾಸ್ತ್ರ'ಕ್ಕೆ ಬಹಳ ವಿರುದ್ಧವಾದುದು.

> "ಜ್ಯೋತಿಶ್ಶಾಸ್ತ್ರವು ನಮ್ಮ ವಿಶ್ವವನ್ನು ದೊಡ್ಡದಾಗಲೆಂದು ಹರಸಿರುವುದು.
> ಭೂಗರ್ಭ ಶಾಸ್ತ್ರವು ಅದಕ್ಕೆ ಆಯುಷ್ಮಂತವಾಗೆಂದು ಹರಸಿರುವುದು."

'ಹರಸಿರುವುದು' ಎಂದರೇನು?

**ಪುಟ ೪.—**

> "ಸಾರಾಂಶ, ಈ ವಿಷಯದಲ್ಲಿ ಮನುಷ್ಯನಿಗೆ ಎದ್ದರೂ ಆನಂದ, ಬಿದ್ದರೂ ಆನಂದ; ಆನಂದವೇ ಆನಂದ, ಅದ್ಭುತವಾದ ಆನಂದ!!!"

ಈ ವಾಕ್ಯದ ಅರ್ಥವೇನು? 'ಶಾಸ್ತ್ರ' ವಿಷಯಗಳನ್ನು ವಿವರಿಸುವಾಗ ಇಂತಹ ಅರ್ಥವಿಲ್ಲದ ಪದಸರಣಿಯನ್ನು ಉಪಯೋಗಿಸುವುದು ಅನುಚಿತ.

**ಪುಟ ೫.—**

"ಹಳೆಯ ಜ್ಞಾನ ಸಂಪತ್ತು" ಎಂಬ ಎರಡನೆಯ ಪ್ರಕರಣದಲ್ಲಿ 'ಪುರಾತನ ಕಾಲ' ಎಂದರೆ, ಕ್ರಿ. ಶ. ೧೬ನೆಯ ಶತಮಾನದ ವರೆಗೆ, ಜ್ಯೋತಿಶ್ಶಾಸ್ತ್ರವು ಪಾಶ್ಚಾತ್ಯರಲ್ಲಿಯೂ ಭಾರತೀಯರಲ್ಲಿಯೂ ಎಷ್ಟು ಮಟ್ಟಿನ ಪ್ರಗತಿಯನ್ನು ಮುಟ್ಟಿದ್ದಿತೆಂಬ ವಿಷಯವು ಅತಿ ಸಂಕ್ಷೇಪವಾಗಿ ವರ್ಣಿಸಿದೆ. ಹದಿನಾಲ್ಕನೆಯ ಪ್ರಕರಣದಲ್ಲಿ ಕೊಟ್ಟಿರುವ "ಪ್ರಾಚೀನ ಇತಿಹಾಸ" ಎಂಬ ಇದೇ ವಿಷಯದ ಭಾಗವನ್ನು ಈ ಎರಡನೆಯ ಪ್ರಕರಣದಲ್ಲಿಯೇ ಸೇರಿಸಬಹುದಾಗಿದ್ದಿತಲ್ಲವೆ?

**ಪುಟ ೬.—**

"ಋಜಗಳಲ್ಲಿ" ಎಂಬುದು "ಋುಕ್ಕುಗಳಲ್ಲಿ" ಎಂದಿರಬೇಕು.

> "ಪೃಥ್ವಿಯು ತನ್ನ ಸುತ್ತಲೂ ತಾನು ತಿರುಗುತ್ತದೆಂಬುದನ್ನು ಅವರು ಕಂಡುಹಿಡಿದಿದ್ದರು."

ಹೀಗೆಂದರೇನು? 'ಬುಗುರಿಯಂತೆ ತನ್ನ ಕಕ್ಷದ ಸುತ್ತಲೂ ತಿರುಗುತ್ತದೆ' ಎಂದರೆ ಸುಲಭವಾಗಿ ಅರ್ಥವಾಗುವುದಲ್ಲವೆ?

**ಪುಟ ೧೩.—**

> "ಕಣ್ಣಿಗೆ ನೋಡಲಿಕ್ಕೆ ಪೃಥ್ವಿಯು ಬಯಲು ಪ್ರದೇಶವಾಗಿಯೂ ಅಪಾರವಾಗಿಯೂ ಕಾಣುತ್ತದೆ. ಅದು ಬಯಲು ಪ್ರದೇಶವಲ್ಲ. ಕಿತ್ತಳೆಯ ಹಣ್ಣಿನಂತೆ ದುಂಡಗಿರುತ್ತದೆಂಬ,—ಸಕೃದ್ದರ್ಶನಕ್ಕೆ ಪ್ರತ್ಯಕ್ಷಕ್ಕೆ ವಿರೋಧವಾಗಿ ತೋರುವ—ಸಿದ್ಧಾಂತವು ಹೊಳೆಯಬೇಕಾದರೆ ಎಷ್ಟು ತಲೆಗಳು ವೆಚ್ಚವಾಗಿರಬೇಕು?"

ಇಲ್ಲಿ 'ಬಯಲು' ಎಂಬ ಪದವನ್ನು 'ಚಪ್ಪಟೆ' ಎಂಬ ಅರ್ಥದಲ್ಲಿ ಉಪಯೋಗಿಸಿದೆ. "ಎಷ್ಟು ತಲೆಗಳು ವೆಚ್ಚವಾಗಿರಬೇಕು?" ಎಂದರೇನು?

ಪುಟ ೧೭.—

"ಎರಡು ಪದಾರ್ಥಗಳು ಒಂದು ಎತ್ತರವಾದ ಸ್ಥಳದಿಂದ ಕೆಳಗೆ ಬಿಡಲ್ಪಟ್ಟರೆ ಅವುಗಳಲ್ಲಿ ಜಡವಾದುದು ಮೊದಲು ಭೂಮಿಗೆ ಬೀಳುವುದೆಂದು ಎರಿಸ್ಟಾಟಲನು ಕಲಿಸಿದ್ದನು. ಜನರು ಅದನ್ನೇ ನಂಬುತ್ತಿದ್ದರು. ಅದು ಸುಳ್ಳೆಂದು ಗ್ಯಾಲಿಲಿಯೋನು ಹೇಳಿದನು. ಒಂದು ಎತ್ತರವಾದ ಗೋಪುರದ ಮೇಲೆ ನಿಂತುಕೊಂಡು ಎರಡು ಪದಾರ್ಥಗಳನ್ನು ಒಗೆದು ತಾನು ಹೇಳಿದ್ದೇ ನಿಜವೆಂಬುದನ್ನು ಪ್ರತ್ಯಕ್ಷವಾಗಿ ಸಿದ್ಧಮಾಡಿ ತೋರಿಸಿದನು."

"ಕೆಳಗೆ ಬಿಡಲ್ಪಟ್ಟರೆ" ಎಂದರೇನು ? ದಾರ ಕಟ್ಟಿಯೆ ? 'ಜಡ' ಎಂದರೆ 'ಚಲನ, ಅಥವಾ ಚೈತನ್ಯವಿಲ್ಲದ ಪದಾರ್ಥ' ಎಂಬುದು ಸಾಮಾನ್ಯವಾದ ಅರ್ಥ. 'ಒಗೆದು' ಎಂಬ ಪದಕ್ಕೆ 'ಎಸೆದು' ಎಂದು ಸಾಮಾನ್ಯಾರ್ಥ. ಮೇಲೆ ಕೊಟ್ಟಿರುವ ವಾಕ್ಯಗಳಿಗೆ ಹೀಗೆ ಅರ್ಥಮಾಡಬಾರದೇಕೆ ?—"ಕಲ್ಲು, ಕಟ್ಟಿಗೆಯಂತಹ ಜಡ ಪದಾರ್ಥವನ್ನೂ, ಕೋಳಿ ಕುರಿಯಂತಹ ಚೈತನ್ಯವುಳ್ಳ ಪದಾರ್ಥವನ್ನೂ ಹಗ್ಗ ಕಟ್ಟಿ, ಎತ್ತರದಿಂದ ಕೆಳಕ್ಕೆ ಬಿಟ್ಟರೆ, ಕಲ್ಲಿನಂತಹ ಜಡ ಪದಾರ್ಥವು ಮೊದಲು ಭೂಮಿಗೆ ಬೀಳುವುದು................ಗ್ಯಾಲಿಲಿಯೋನು ಎತ್ತರವಾದ ಗೋಪುರದ ಮೇಲೆ ನಿಂತು ಎರಡು ಪದಾರ್ಥಗಳನ್ನು 'ಬಿರುಸಾಗಿ ಎಸೆದು'.........."

'ಶಾಸ್ತ್ರ' ವಿಷಯಗಳನ್ನು ಹೇಳುವಾಗ ಇಂತಹ ಸಂಶಯಗಳಿಗೆ ಸ್ವಲ್ಪವೂ ಆಸ್ಪದಕೊಡಬಾರದು. ಈ ವಿಷಯವನ್ನು ಮುಂದೆ ಕೊಟ್ಟಿರುವಂತೆ ಹೇಳಬಹುದಲ್ಲವೆ ?—

"ಎತ್ತರವಾದ ಸ್ಥಳದಿಂದ ಒಂದು **ಹಗುರವಾದ** ವಸ್ತುವನ್ನೂ, ಒಂದು **ಭಾರವಾದ** ವಸ್ತುವನ್ನೂ **ಕೆಳಕ್ಕೆ ಬೀಳುವಂತೆ ಒಟ್ಟಿಗೆ ಏಕಕಾಲದಲ್ಲಿ ಬಿಟ್ಟು ಬಿಟ್ಟರೆ** ಭಾರವಾದ ವಸ್ತುವು ಮೊದಲು ಭೂಮಿಗೆ ಬೀಳುವುದೆಂದು ಎರಿಸ್ಟಾಟಲನು ಕಲಿಸಿದ್ದನು. ........ಗೆಲಿಲಿಯೋವನು ಒಂದು ಎತ್ತರವಾದ ಗೋಪುರದ ಮೇಲೆ ನಿಂತು ಮೇಲೆ ಹೇಳಿದ ಪ್ರಯೋಗವನ್ನು ಮಾಡಿ ತಾನು ಹೇಳಿದ್ದೇ ನಿಜವೆಂಬುದನ್ನು ಪ್ರತ್ಯಕ್ಷವಾಗಿ ಸಿದ್ಧಮಾಡಿ ತೋರಿಸಿದನು."

ಪುಟ ೨೧.—

ಖಗೋಲವನ್ನು ಒಂದು ಪಟ್ಟಣಕ್ಕೆ ಹೋಲಿಸಿ, ಆ ಪಟ್ಟಣಕ್ಕೆ ಸೂರ್ಯನು ರಾಜನೆಂದೂ, ನಕ್ಷತ್ರಗಳು ಜೋತಾಡುತ್ತಿರುವ ಮನೆಗಳೆಂದೂ, 'ಓಣಿ, ಸಂದಿ' ಮುಂತಾದವುಗಳನ್ನು ಕಲ್ಪಿಸಿಕೊಳ್ಳಬೇಕೆಂದೂ ವರ್ಣಿಸಿರುವುದು ಸಮಂಜಸವಾಗಿಲ್ಲ. ಸೂರ್ಯನು ಆಕಾಶರಾಜನೆಂದು ನಮಗೆ ಕಾಣಬಂದರೂ ಅವನು ವಿಶ್ವದಲ್ಲಿ ಯಥಾರ್ಥವಾಗಿಯೂ ಒಂದು ಧೂಳಿನ ಕಣಕ್ಕಿಂತಲೂ ಕಡಿಮೆಯೆಂಬ ವಿಷಯವನ್ನು ಮುಂದೆ ತಿಳಿಸಬೇಕಾಗಿರುವ ಸಂದರ್ಭದಲ್ಲಿ, ಮೇಲೆ ವರ್ಣಿಸಿರುವುದು ಸರಿಯಾಗಿಲ್ಲ.

ಪುಟ ೨೨.—

"ಈ ಕ್ಷಿತಿಜದ ವರೆಗಿನ ಭೂ ಭಾಗವು ಪ್ರೇಕ್ಷಕರ ಸುತ್ತಲು ೫ ಮೈಲುಗಳ ವರೆಗೆ ಇರುತ್ತದೆ. ನಮ್ಮಿಂದ ೫ ಮೈಲುಗಳ ಮೇಲೆ ಹೀಗೆ ಭೂವ್ಯಾಕಾಶಗಳು ಹೊಂದಿದಂತೆ ಕಂಡರೂ ಅವು ನಿಜವಾಗಿ ಹೊಂದಿರುವುದಿಲ್ಲ...............ಆದುದರಿಂದ ನಮಗೆ ಕಾಣುವ ಭೂ ಭಾಗದ ಅಳತೆಯು ನಮ್ಮ ಎತ್ತರದ ಮೇಲೆಯೆ ಅವಲಂಬಿಸಿರುತ್ತದೆ."

ಇಲ್ಲಿ ಹೇಳಿರುವ ವಾಕ್ಯಗಳ ಅರ್ಥವನ್ನು ಸಾಮಾನ್ಯರು ಹೀಗೆ ಊಹಿಸಬಹುದಲ್ಲವೆ?—

'ನಮ್ಮಿಂದ ಒಂದು ಗೊತ್ತಾದ (೫ ಮೈಲುಗಳ) ದೂರದಲ್ಲಿ ಭೂಮಿಯೂ ಆಕಾಶವೂ **ನಿಜವಾಗಿ** ಸೇರಿರುತ್ತವೆ. ಆ ದೂರವನ್ನು ಮೀರಿದರೆ, ಎಂದರೆ ೭, ೮ ಮೈಲುಗಳ ದೂರದಲ್ಲಿ, ಭೂಮ್ಯಾಕಾಶಗಳು ಹೊಂದಿದಂತೆ ಕಂಡರೂ ಅವು ನಿಜವಾಗಿ ಹೊಂದಿರುವುದಿಲ್ಲ.'

ಇಂತಹ ಸಂಶಯಕ್ಕೆ ಆಸ್ಪದಕೊಡಬಾರದು. 'ಪ್ರೇಕ್ಷಕನು ಭೂಮಿಯ ಮೇಲೆ ನಿಂತಾಗ, ಈ ಕ್ಷಿತಿಜದ ವರೆಗಿನ ಭೂಭಾಗವು ಅವನ ಸುತ್ತಲೂ ಸುಮಾರು ೫ ಮೈಲುಗಳ ದೂರದ ವರೆಗೂ ಹಬ್ಬಿರುವಂತೆ ಭಾಸವಾಗುತ್ತದೆ. ಆದರೆ ನಿಜವಾಗಿ ಭೂಮ್ಯಾಕಾಶಗಳು ಹೊಂದಿರುವುದಿಲ್ಲ' ಎಂದು ಹೇಳಿದರೆ ಸಂಶಯಕ್ಕಾಸ್ಪದವಿಲ್ಲದಂತಾಗುವುದೆಂದು ತೋರುವುದು.

ಕಡೆಯ ವಾಕ್ಯವು ಸಾಮಾನ್ಯರಿಗೆ ಅರ್ಥವಾಗುವುದಿಲ್ಲ. ಅದು ಇಂಗ್ಲಿಷಿನ "This measure of the portion of the Earth that is seen by us depends upon our height" ಎಂಬುದರ ಭಾಷಾಂತರವಾಗಿದೆ.

ಪುಟ ೨೩.—

"ವಾತಾವರಣದಲ್ಲಿಯ ಧೂಳಿಯ ಕಣಗಳ ಮೇಲೆ ಸೂರ್ಯಪ್ರಕಾಶವು ಬೀಳಲು, ಅವು ನೀಲಿಯ ಬಣ್ಣದಿಂದ ಹೊಳೆಯುತ್ತವೆ. ಕಪ್ಪಾದ ಪರದೆಯ ಮೇಲೆ ಇವು ಒಂದು ನೀಲಿಯ ಬಣ್ಣದ ಗೌಸಣಿಕೆಯಂತಾಗುವವು. ಹಗಲಂತೂ ಯಾವವೂ ಕಾಣುವುದಿಲ್ಲ. ರಾತ್ರಿಯಲ್ಲಿ ನಮಗೆ ಸೂರ್ಯನು ಕಾಣಿಸದಿದ್ದರೂ ಅವನ ಕೆಲವು ಕಿರಣಗಳು ವಾತಾವರಣದಲ್ಲಿ ಸೇರಿ ಮಣಿದು ಹೀಗೆ ಹೊಳೆಯುತ್ತವೆ. ರಾತ್ರಿಯಲ್ಲಿ ಆಕಾಶವು ಹೆಚ್ಚು ಕಪ್ಪಾಗಿರುವುದು. ಎಂದರೆ ಅದರ ಮೇಲಿನ ಈ ಧೂಳಿಯ ಗೌಸಣಿಕೆಯು ತೀರ ತೆಳ್ಳಗಾಗುವುದು. ಅದರಿಂದಲೇ ನಕ್ಷತ್ರಗಳು ಕಾಣಹತ್ತುವವು. ಈ ಗೌಸಣಿಕೆಯು ಇರದೆ ಇದ್ದರೆ ನಾವು ಇನ್ನೂ ಎಷ್ಟೋ ನಕ್ಷತ್ರಗಳನ್ನು ಕಾಣಬಹುದಾಗಿತ್ತು. ಅವು ಹೆಚ್ಚು ಜಾಜ್ವಲ್ಯವಾಗಿ ಕಾಣುತ್ತಿದ್ದವು. ಸೂರ್ಯನು ಕೆಂಬಣ್ಣದವನಾಗದೆ ನೀಲವರ್ಣದವನಾಗಿ ಕಾಣುತ್ತಿದ್ದನು."

ಇಲ್ಲಿ ಹೇಳಿರುವ ವಿಷಯಗಳು ವಾಚಕರಿಗೆ ಅರ್ಥವಾಗುವಂತಿಲ್ಲದುದು ಮಾತ್ರವಲ್ಲದೆ ತಪ್ಪು ಅಭಿಪ್ರಾಯವನ್ನೂ ಕೊಡುವುವು. 'ನೀಲಿಯ' ಬಣ್ಣಕ್ಕೆ ಕಾರಣ

ವೇನು? "ಹಗಲಂತೂ ಯಾವವೂ ಕಾಣುವುದಿಲ್ಲ" ಎಂದರೇನು? ಸೂರ್ಯನು ಕಾಣುವುದಿಲ್ಲವೆ? ರಾತ್ರಿಯಲ್ಲಿ ಸೂರ್ಯನ ಕಿರಣಗಳು ಎಲ್ಲಿಂದ ಬರಬೇಕು? ರಾತ್ರಿಯಲ್ಲಿ 'ಧೂಳಿಯ' ಗೌಸಣಿಕೆಯು ತೆಳ್ಳಗಾಗುತ್ತದೆಯೇ? ಹಾಗಾಗಲು ಕಾರಣ ವೇನು? ಸೂರ್ಯನು 'ನೀಲ' ವರ್ಣದವನಾಗಿ ಏಕೆ ಕಾಣಬೇಕು?

ಪುಟ ೨೮.—

> "ವಿಶ್ವದಲ್ಲಿ ನಕ್ಷತ್ರಗಳು ಒಣಗಹಾಕಿದ ಧಾನ್ಯದ ಕಾಳುಗಳಂತೆ ಪಸರಿಸಿರುವವು; ಅಥವಾ ಹೂಗಳ ಹಾಸಿಗೆಯಂತಿರುವವು. ಇಂಥ ಹಾಸಿಗೆಯ ನಡು ಹೊಟ್ಟೆಯಲ್ಲಿಯ ಹೂವಿನಂತೆ ನಮ್ಮ ಸೂರ್ಯಮಾಲೆ ಇರುವುದು........... ವಿಶ್ವದಲ್ಲಿ ನಮಗೆ ಕಾಣುವ ನಕ್ಷತ್ರಗಳು ಗಾಲಿಯ ಆಕಾರದ ಸ್ಥಳವನ್ನು ವ್ಯಾಪಿಸಿರುವವು. ಈ ನಕ್ಷತ್ರಗಳ ಆಕಾರಗಳು ಬಹಳ ದೊಡ್ಡವು. ಗಾಲಿಯ ಆಕಾರದ ಸ್ಥಳದಲ್ಲಿ ಇವೆಲ್ಲ ನಕ್ಷತ್ರಗಳು ಸಮನಾಗಿ ಹರಡಿರುವವು...........ಸಾಧಾರಣವಾಗಿ ಈ ಗಾಲಿಯ ಮಧ್ಯ ಭಾಗದಲ್ಲಿ ಸೂರ್ಯನಿರುವನು."

ಇಲ್ಲಿ ಹೇಳಿರುವ ಧಾನ್ಯದ ಹೋಲಿಕೆಯು ಸರಿಯಾದುದಲ್ಲ; ಏಕೆಂದರೆ, ಒಣಗಹಾಕಿದ ಕಾಳುಗಳು ಒಂದೇ ಸಮತಳದಲ್ಲಿರುತ್ತವೆ; ನಕ್ಷತ್ರಗಳು ಹಾಗಿಲ್ಲ. ಇಲ್ಲಿ 'ಆಕಾರ' ಎಂಬ ಪದವನ್ನು ಎರಡು ಅರ್ಥಗಳಲ್ಲಿ ಪ್ರಯೋಗಿಸಿದೆ: ಮೊದಲನೆಯದು 'ರೂಪ', ಎರಡನೆಯದು 'ಗಾತ್ರ'. "ನಕ್ಷತ್ರಗಳು **ಸಮನಾಗಿ** ಹರಡಿರುವವು" ಎಂದರೇನು? ಇಲ್ಲಿ ಹೇಳಿರುವ ವಿಷಯವು ಸುಲಭವಾಗಿ ಅರ್ಥವಾಗುವಂತಹುದಲ್ಲ. ಇದನ್ನು ಬಿಟ್ಟುಬಿಡಬಹುದಾಗಿದ್ದಿತು.

ಪುಟ ೩೨.—

'ಆಕಾಶರಾಜ ಅಥವಾ ಸೂರ್ಯ' ಎಂದು ಹೇಳುವುದು ತಪ್ಪು ತಿಳಿವಳಿಕೆಯನ್ನು ಕೊಟ್ಟಂತಾಗುವುದು. ಏಕೆಂದರೆ, ಸೂರ್ಯನು ವಿಶ್ವದಲ್ಲಿ ಒಂದು ಪರಮಾಣುವಿಗಿಂತಲೂ ಕಡೆಯೆಂದು ಮುಂದೆ ತಿಳಿದುಬರುವುದು.

> "ಗಿಡಗಂಟಿಗಳು ಸಹ ಸೂರ್ಯನು ಮುಳುಗಿದ ಕೂಡಲೆ ತಮ್ಮ ಎಲೆಗಳನ್ನು ಮುಚ್ಚಿಕೊಳ್ಳುತ್ತವೆ. ಮನೆಯೊಳಗಿನ ಸಸಿಗಳು ತಮ್ಮ ಎಲೆಗಳನ್ನು ಕಿಡಕಿಯ ಕಡೆಗೆ ತಿರುಗಿಸುತ್ತವೆ."

ಎಲ್ಲಾ ಗಿಡಗಳೂ ಹೀಗೆ ಮಾಡುತ್ತವೆಯೇ? ಇಲ್ಲ.

ಪುಟ ೩೮.—

> "ಎಂದರೆ ಇವುಗಳಲ್ಲಿ, ಪ್ರತಿಯೊಂದು ಕಣದ ಮಧ್ಯದಲ್ಲಿ ಒಂದು ಪ್ರೋಟನ್ (Proton) ಎಂಬ ಗೋಲವಿರುವುದು. ಇದನ್ನು ಸೂರ್ಯನಿಗೆ ಹೋಲಿಸಬಹುದು. ಸೂರ್ಯನ ಸುತ್ತಲು ಗ್ರಹಗಳು ತಿರುಗುವಂತೆ ಇದರ ಸುತ್ತಲು ಇದಕ್ಕೂ ಸಣ್ಣ ದ್ರವ್ಯಗಳು ತಿರುಗುತ್ತಿರುವುವು. ಇವುಗಳಿಗೆ ಆಯೆನ್ಸ್ (Ions) ಎನ್ನುವರು."

ಇದು ಭೌತಿಕ ವಿಜ್ಞಾನವನ್ನರಿಯದವರಿಗೆ ಅರ್ಥವಾಗುವಂತಿಲ್ಲ. 'ಕಣ' ಎಂಬ ಪದಕ್ಕೆ, 'ನಮ್ಮ ಕಣ್ಣಿಗೆ ಕಾಣಿಸುವ ಅತ್ಯಂತ ಸೂಕ್ಷ್ಮ ಅಣು' ಎಂಬುದು

ಎಲ್ಲರ ಭಾವನೆ. ಕತ್ತಲು ಕೋಣೆಯೊಳಕ್ಕೆ ಚಾವಣಿಯ ಕಂಡಿಯೊಂದರಿಂದ ಹರಿದು ಬರುವ ಸೂರ್ಯನ ಬೆಳಕಿನಲ್ಲಿ ಕಾಣುವ ಅತ್ಯಂತ ಸೂಕ್ಷ್ಮವಾದ ಧೂಳಿನ ಅಣು ಗಳನ್ನು 'ಕಣ'ಗಳೆನ್ನುತ್ತೇವೆ. ಗ್ರಂಥದಲ್ಲಿ ಹೇಳಿರುವ "ಕಣ"ಗಳು ಇಂತಹ 'ಅಣು'ವೊಂದರಲ್ಲಿ ಲಕ್ಷಾಂತರವಿರುವುವು. ಇವನ್ನು ಎಂದಿಗೂ ಯಾರೂ ಹೇಗೂ ಎಂತಹ ಮಹತ್ತರವಾದ ಸೂಕ್ಷ್ಮದರ್ಶಿನಿಯ ಸಹಾಯದಿಂದಾಗಲಿ ಕಣ್ಣಿನಿಂದ ನೋಡಲಾಗುವುದಿಲ್ಲ. 'ಆಯೆನ್ಸ್' ಎಂಬ ಪದಕ್ಕೆ ಬದಲಾಗಿ 'ಎಲೆಕ್ಟ್ರಾನ್ಸ್' ಎಂಬ ಪದವಿರಬೇಕು.

ಪುಟ ೩೯.—

"ಹೀಗೆ ಈಗ ಸೂರ್ಯನಿಂದ ಹೊರಹೊರಡುವ ಶಕ್ತಿಯನ್ನು ಪೂರೈಸಬೇಕಾದರೆ ದಿನಾಲು ೩೬೦,೦೦೦,೦೦೦,೦೦೦ ಟನ್ನುಗಳು ನಾಶಹೊಂದಬೇಕಾಗುವುದು. ಹೀಗೆ ಆಗುತ್ತ ಹೋದರೆ ಸೂರ್ಯನು ಇನ್ನೂ ಅಬ್ಜಾವಧಿ ವರುಷಗಳವರೆಗೆ ಬಾಳಬಹುದು."

'ಈ ರೀತಿ ನಾಶ **ಹೊಂದುತ್ತಿದ್ದರೇನೇ** ಸೂರ್ಯನು ಇನ್ನೂ ಅಬ್ಜಾವಧಿ ವರುಷಗಳವರೆಗೆ ಬಾಳಬಹುದು; ಇಲ್ಲದಿದ್ದರೆ ಬಾಳಲಾಗುವುದಿಲ್ಲ' ಎಂಬ ಅರ್ಥಕ್ಕೆ ಇಲ್ಲಿ ಅವಕಾಶವಿದೆ.

"ಹೀಗೆ ಆಗುತ್ತ **ಹೋದರೂ**" ಎಂದಿರಬೇಕು.

ಪುಟ ೪೬.—

"ಏಕೆಂದರೆ ಆತನು ವನಸ್ಪತಿ ರಾಜನು. ಬೆಳದಿಂಗಳಿಂದಲೆ ವನಸ್ಪತಿಗಳು ರಸ ಪುಷ್ಟಿಯನ್ನು ಹೊಂದುತ್ತವೆ."

ಹೀಗೆ ಹೇಳುವುದಕ್ಕೆ ಶಾಸ್ತ್ರೀಯವಾದ ಆಧಾರವೇನು?

ಪುಟ ೪೮.—

"ಸಮುದ್ರವು ಭೂಮಿಯನ್ನು ಸುತ್ತುಹಾಕಿರುವುದಷ್ಟೆ. ಇದರ ಆಳವು ೫ ಮೈಲುಗಳ ವರೆಗೆ ಇರುವುದರಿಂದ ನೀರಿನ ಮೇಲ್ಭಾಗವು ಉಳಿದ ಭಾಗಕ್ಕಿಂತ ಚಂದ್ರನಿಗೆ ಸಮೀಪವಿರುವುದೆಂಬುದು ಸ್ಪಷ್ಟವಿದೆ. ಇಂತಹ ಜಲಸಮೂಹದ ಮೇಲೆ ಚಂದ್ರನ ಆಕರ್ಷಣವು ಹೆಚ್ಚು ಆಗುವುದರಿಂದ ಅದು ಉಬ್ಬಿ ಮೇಲಕ್ಕೇರುವುದು. ಆಗ ಸಮುದ್ರವು ಉಕ್ಕೇರಿದಂತೆ ಕಾಣುವುದು."

ಇಲ್ಲಿ ಬಹಳ ಅಸಮಂಜಸವಾದ ವಿವರಣೆಯಿದೆ: ಸಮುದ್ರದ ಆಳವು ಎಲ್ಲಾ ಕಡೆಗಳಲ್ಲಿಯೂ ೫ ಮೈಲುಗಳಿಲ್ಲ. ನೀರಿನ ಮೇಲ್ಭಾಗವು ಉಳಿದ ಭಾಗಕ್ಕಿಂತ ಚಂದ್ರನಿಗೆ ಸಮೀಪವಿರುವುದಕ್ಕೆ ೫ ಮೈಲುಗಳ ಆಳವು ಕಾರಣವಲ್ಲ. ಚಂದ್ರನ ಆಕರ್ಷಣವು 'ಹೆಚ್ಚು' ಎಂದರೆ, ಯಾವುದಕ್ಕಿಂತ ಹೆಚ್ಚು? "ಆಗ ಸಮುದ್ರವು ಉಕ್ಕೇರಿದಂತೆ ಕಾಣುವುದು" ಎಂಬ ವಾಕ್ಯವೇಕೆ?

ಇಲ್ಲಿ ತಿಳಿಸಬೇಕಾದ ವಿಷಯವೇನೆಂದರೆ—ಚಂದ್ರನ ಆಕರ್ಷಣವು ಭೂಮಿಯ ಮೇಲೆಯೂ ನೀರಿನ ಮೇಲೆಯೂ ಕೂಡ ಇದೆ; ಆದರೆ ಭೂಮಿಯು ಶಿಲಾವಸ್ಥೆ ಯಲ್ಲಿರುವುದರಿಂದ ಅದನ್ನು ಚಂದ್ರನು ತನ್ನ ಕಡೆಗೆ ಎಳೆಯುವುದು ಕಾಣಬರುವುದಿಲ್ಲ;

ನೀರು ದ್ರವಾವಸ್ಥೆಯಲ್ಲಿರುವುದರಿಂದಲೂ ಅದು ಕೆಲವು ಕಡೆ ಐದು ಮೈಲುಗಳಷ್ಟು ಆಳವಾಗಿರುವುದರಿಂದಲೂ ಇಷ್ಟೊಂದು ಹೆಚ್ಚಾಗಿರುವ ನೀರು ಚಂದ್ರನ ಎಳೆತ (ಆಕರ್ಷಣ)ದಿಂದ ಉಕ್ಕುವುದು.

ಪುಟ ೫೩.—

"ಈ ಭೂಗೋಲವು ಎಲ್ಲಿಂದ ಬಂದಿತು? ಈ ವಿಷಯದಲ್ಲಿ ಎರಡು ಮತಗಳಿವೆ."

ಈ ಎರಡು ಮತಗಳಲ್ಲದೆ, ಈಚೆಗೆ ಹೊರಟಿರುವ ಮತ್ತೊಂದು ಮತವಿರುವುದು—ವೇಲಾಮತ (Tidal Theory). ಈ ಮತಕ್ಕೇ ಈಗ ಹೆಚ್ಚು ಪ್ರಾಶಸ್ತ್ಯವಿರುವಂತಿದೆ.

ಪುಟ ೫೫.—

"ಈ ನದಿಗಳು ತಮ್ಮ ಉಗಮ ಸ್ಥಾನದಿಂದ ತಂದುಬಿಟ್ಟ ರೇವೆಯಿಂದ ಈಗ ನಾವು ನೋಡುವ ಬೆಳೆಯುಳ್ಳ ಪ್ರದೇಶಗಳಾಗುವವು. ಹೀಗೆ ನಾವು ನೋಡುವ ಮಣ್ಣು ಎರಡು ಸಾರಿ ಕುಟ್ಟಿದ ಕಲ್ಲಿನ ಪುಡಿಯಾಗಿದೆ."

ಇದು ನಮಗೆ ಅರ್ಥವಾಗುವುದಿಲ್ಲ.

ಪುಟ ೭೫.—

"ನಕ್ಷತ್ರಗಳು" ಎಂಬ ಪ್ರಕರಣವು ನಾಲ್ಕೇ ಪುಟಗಳಲ್ಲಿ ಮುಗಿದಿದೆ. ಇದರಲ್ಲಿ ಜನ ಸಾಮಾನ್ಯರು ಕೂಡ ಗುರುತಿಸುವ ಅನೇಕ ನಕ್ಷತ್ರಗಳ ವಿಚಾರವನ್ನೇ ಎತ್ತಿಲ್ಲ: ಉದಾ.—ಸಪ್ತರ್ಷಿ ಮಂಡಲ.

ಈ ಪುಟದ ೧೬ನೆಯ ಪಙ್ಕ್ತಿಯಲ್ಲಿ ಕಂಸದಲ್ಲಿ ಕೊಟ್ಟಿರುವ ಸಂಖ್ಯೆಗೆ ಮತ್ತೊಂದು ಸೊನ್ನೆಯನ್ನು ಸೇರಿಸಬೇಕು; ೧೯ನೆಯ ಪಙ್ಕ್ತಿಯಲ್ಲಿ '೧೯ ಪೂಜ್ಯಗಳು' ಎಂದಿರಬೇಕು.

ಪುಟ ೮೧.—

'ಒಡವೆ', 'ಸೂರ್ಯಕಾಂತ' ಎಂಬ ಪದಗಳಿಗೆ ಮೈಸೂರು ಪ್ರಾಂತದಲ್ಲಿ ಬೇರೆ ಅರ್ಥವಿರುವುದು.

ಪುಟ ೮೫.—

"ಕೆಲವು ನಕ್ಷತ್ರಗಳ ಹೊರಮೈ ೨೫,೦೦೦ ಅಂಶ ಉಷ್ಣತೆಯುಳ್ಳುದಿರುವುದು.

ಈ ಯಂತ್ರಕ್ಕೆ ಸ್ಪೆಕ್ಟ್ರಾಸ್ಕೋಪ್ ಎನ್ನುವರು."

ಯಾವ ಯಂತ್ರ?

ಪುಟ ೧೦೦.—

"ಅಖಿಲಾಂಡಕೋಟಿ ಬ್ರಹ್ಮಾಂಡನಾಯಕ" ಎಂಬ ಶಿರೋನಾಮವುಳ್ಳ ಈ ಪ್ರಕರಣವು ಒಂದೇ ಪುಟದಲ್ಲಿ ಮುಗಿದಿದೆ. ಇದರಲ್ಲಿ ಪ್ರತಿ ಗ್ರಹದ ವಿಷಯದಲ್ಲಿಯೂ 'ಲೀಲೆ' ಎಂಬ ಪದವನ್ನು ಪಯೋಗಿಸಿದೆ. ಹೀಗೆಂದರೇನು? ಕೊನೆಗೆ ಪರಬ್ರಹ್ಮನ ಮಹಿಮೆಯಲ್ಲಿ ಮುಗಿದಿದೆ. ಈ ಪ್ರಕರಣವನ್ನು ಬಿಟ್ಟುಬಿಡಬಹುದು.

ಈ ಗ್ರಂಥದ ಭಾಷೆಯು ಅಷ್ಟು ತೃಪ್ತಿಕರವಾಗಿಲ್ಲವೆಂದು ಮಾತ್ರ ಹೇಳುವೆವು.

---

## ೨. ಗೀತಗಳು

ಲೇಖಕರು.—ವಿ. ಸೀತಾರಾಮಯ್ಯನವರು, ಎಂ.ಎ., ಬೆಂಗಳೂರು.

ಪ್ರಕಾಶಕರು.—ಕರ್ಣಾಟಕ ಸಾಹಿತ್ಯ ಪ್ರಕಟನ ಮಂದಿರ, ಬೆಂಗಳೂರು.

ಬೆಂಗಳೂರು ಪ್ರೆಸ್ಸಿನಲ್ಲಿ ಮುದ್ರಿತವಾಯಿತು;

ಕ್ರೌನ್ ಅಷ್ಟಪತ್ರ ಪುಟಗಳು ೧೪+೧೨೨; ಬೆಲೆ ಮೂರು ರೂಪಾಯಿ; ೧೯೩೧.

ಈ ಪುಸ್ತಕದಲ್ಲಿ ೬೮ ಆಧುನಿಕ ಕವನಗಳಿವೆ, ೬ ಸುಂದರವಾದ ಚಿತ್ರಗಳಿವೆ. ಕಾಗದವೂ ಮುದ್ರಣವೂ ರಕ್ಷಾಪತ್ರವೂ ಅತ್ಯಂತ ಶ್ಲಾಘನೀಯವಾಗಿವೆ. ಇದಕ್ಕೆ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಬರೆದಿರುವ ಮುನ್ನುಡಿಯಲ್ಲಿ, "ಈ ಗೀತೆಗಳಲ್ಲಿ ಸಂಗೀತ ಕ್ರಮದಲ್ಲಿ ಹಾಡತಕ್ಕವು ಕೆಲವು; ಛಂದಸ್ಸಿಗನುಸಾರವಾಗಿ ಹೇಳತಕ್ಕವು ಕೆಲವು. ಹೊಸ ಛಂದಸ್ಸುಗಳ ಆವಶ್ಯಕತೆಯನ್ನು ತಿಳಿದ ವಿಮರ್ಶಕರು ಇಲ್ಲಿ ಕೆಲವು ಸುಂದರ ರೂಪಗಳನ್ನು ಕಾಣಬಹುದಾಗಿದೆ. ಭಾಷೆಯಲ್ಲಿ ಒಂದು ಬಗೆಯ ಸರಳತೆ, ಓಜಸ್ಸು, ಗಾಂಭೀರ್ಯ ತುಂಬಿದೆ. ಯುವಕರ ರಕ್ತವನ್ನು ಕುದಿಸುವ ದೇಶಾಭಿಮಾನ ಮತ್ತು ಪ್ರೇಮ; ಪ್ರಕೃತಿ ಮಾತೆಯ ಭಯಂಕರವಾದ ಮತ್ತು ಸೌಮ್ಯವಾದ ದರ್ಶನಗಳು; ಋತುಗಳ ಕುಣಿತ; ದೇವತಾ ವಿಷಯದಲ್ಲಿ ಮನಸ್ಸನ್ನು ತೂಗಾಡಿಸುವ ಸಂದೇಹ, ಭಕ್ತಿ; ಪಾಪದ ಭಯ; ಧರ್ಮ ಪ್ರೀತಿ; ಮುಖ್ಯವಾಗಿ ಎಲ್ಲಾ ಕಡೆಯಲ್ಲಿಯೂ ಕಾಣುವ ಸೂಕ್ಷ್ಮವಾದ, ಉದಾರವಾದ, ನಿರ್ಮಲವಾದ ಮನಸ್ಸು—ಇವು ಸಹಾನುಭೂತಿಯಿಂದ ನೋಡತಕ್ಕವರಿಗೆ ಈ ಗೀತೆಗಳಲ್ಲಿ ಚೆನ್ನಾಗಿ ಪ್ರತಿಬಿಂಬಿತವಾಗಿವೆ" ಎಂದು ಹೇಳುತ್ತಾರೆ.

ಲೇಖಕರು ತಮ್ಮ 'ವಿಜ್ಞಾಪನೆ'ಯಲ್ಲಿ, "ಪ್ರತಿಯೊಂದರಲ್ಲಿಯೂ (ಕವನದಲ್ಲಿಯೂ) ಗುರುತಿಸಬಹುದಾದ ಒಂದು ಬಗೆಯ ಓಟವೂ ಕಟ್ಟೂ ಇರುವುವೆಂದು ಹೇಳಬಲ್ಲೆನಾದರೂ, ವಿಶೇಷವಾಗಿ ಕೆಲವಕ್ಕಾದರೂ, ಮಾತ್ರೆ ಗಣಗಳ ಲೆಕ್ಕವನ್ನು ಹಾಕಿ ನಿಷ್ಠುರವಾಗಿ ತೂಗುವ ಪ್ರಯತ್ನವು ಸಲ್ಲದಾದೀತು" ಎಂದೂ, "ನೂರಾರು ವರ್ಷಗಳಿಗೆ ಹಿಂದೆ ರಚಿತವಾಗಿ ಹಿಂದೆಬಿದ್ದ ಕಾವ್ಯಭಾಷೆಯ ಆಧಾರದ ಮೇಲೆ ಏರ್ಪಟ್ಟ ವ್ಯಾಕರಣ ಸೂತ್ರಗಳನ್ನೂ, ಛಂದಸ್ಸಿನ ಕಟ್ಟಡಕ್ಕೆ ಸಂಬಂಧಿಸಿದ ನಿಯಮಗಳನ್ನೂ ಕಣ್ಣು ಚುಚ್ಚುವಂತೆ ಮುಂದೆ ಹಿಡಿಯದೆ; ಜೀವಂತವಾದ, ದಿನ ದಿನವೂ ಬೆಳೆಯುತ್ತಿರುವ, ಬನಿಗೊಳ್ಳುತ್ತಿರುವ,—ಬನಿಗೊಳ್ಳಬೇಕಾಗಿರುವ—ಈಗಿನ ಭಾಷೆಯ ಗತಿಗೆ ತಡೆಯಾಗಿ ತಂದೊಡ್ಡದೆ; ಕವಿತೆಯಲ್ಲಿ ಕೇವಲ ಸಂಪ್ರದಾಯ ಬದ್ಧವಾದ ಶಬ್ದ ರೂಪಕ್ಕೂ, ಸಂಧಿ ನಿಯಮಗಳಿಗೂ, ಕಡೆಗೆ ನಿರ್ದುಷ್ಟತೆಗೂ ಮೀರಿದ ಗುಣವೊಂದಿದೆ ಎಂಬುದನ್ನು ಒಪ್ಪುವವರು ಯಾರೂ ಇಲ್ಲಿನ ದೋಷಗಳ ಕಡೆಗೆ ಹೆಚ್ಚು ಗಮನ ಹರಿಸಲಾರರೆಂದಿದ್ದೇನೆ" ಎಂದು ಬರೆದಿರುವರು.

---

## ೩. ತಾವರೆ

ಲೇಖಕರು.—'ಶ್ರೀನಿವಾಸ'ರು, ಬೆಂಗಳೂರು.

ಪ್ರಕಾಶಕರು.—ಕರ್ಣಾಟಕ ಸಂಘ, ಸೆಂಟ್ರಲ್ ಕಾಲೇಜು, ಬೆಂಗಳೂರು.

ಬೆಂಗಳೂರು ಪ್ರೆಸ್ಸಿನಲ್ಲಿ ಮುದ್ರಿತವಾಯಿತು ; ಕ್ರೌನ್ ಅಷ್ಟಪತ್ರ ಪುಟಗಳು ೬+೬೨ ; ೧೯೩೦.

ಈ ಪುಸ್ತಕದಲ್ಲಿ ೧೪ ಆಧುನಿಕ ಕವಿತೆಗಳಿವೆ. ಕರ್ಣಾಟಕದಲ್ಲಿ ಸುಪ್ರಸಿದ್ಧರಾದ ಶ್ರೀಮಾನ್ ಮಾಸ್ತಿ ವೆಂಕಟೇಶ ಐಯಂಗಾರ್ಯರವರು ಇವನ್ನು ರಚಿಸಿದವರು.

---

## ೪. ವಿಷವೃಕ್ಷ

ಲೇಖಕರು.—ಕೀರ್ತಿಶೇಷರಾದ ಬಿ. ವೆಂಕಟಾಚಾರ್ಯರು, ಮೈಸೂರು.

ಪ್ರಕಾಶಕರು.—ಎಸ್. ಶಲ್ಲಮ್ಮನವರು, ಪರಿಮಳವಿಲಾಸ ಬುಕ್ ಡಿಪೋ, ಬೆಂಗಳೂರು ಸಿಟಿ.

ಮುದ್ರಿತವಾದುದು.—ಮೋದಿ ಪವರ್ ಪ್ರಿಂಟಿಂಗ್ ವರ್ಕ್ಸ್, ಬೆಂಗಳೂರು ಸಿಟಿ ; ಡೆಮ್ಮೈ ಅಷ್ಟಪತ್ರ ಪುಟಗಳು ೪+೧೯೩ ; ಬೆಲೆ ರೂ. ೧–೮–೦ ; ೧೯೩೧.

ಇದು ಬಂಗಾಳದ ಸುಪ್ರಸಿದ್ಧ ಕಾದಂಬರಿಕಾರರಾದ ಬಾಬು ಬಂಕಿಂ ಛತ್ತರ್ಜಿಯವರ ಬಂಗಾಲಿ ಕಾದಂಬರಿಯ ಕನ್ನಡದ ಪರಿವರ್ತನೆ. ಇದು ೧೯೦೦ನೆಯ ಇಸವಿಯಲ್ಲಿ ಕನ್ನಡದಲ್ಲಿ ಮೊದಲು ಪ್ರಕಟವಾಯಿತು. ಪ್ರಕೃತ ಮುದ್ರಣವು ಮೂರನೆಯ ಸಂಸ್ಕರಣವು.

---

## ೫. ಆರ್ಯಕೀರ್ತಿ

(ಪ್ರಥಮ ಖಂಡ)

ಲೇಖಕರು.—ಚ. ವಾಸುದೇವಯ್ಯನವರು, ಬೆಂಗಳೂರು.

ಬೆಂಗಳೂರು ಪ್ರೆಸ್ಸಿನಲ್ಲಿ ಮುದ್ರಿತವಾಯಿತು ; ಕ್ರೌನ್ ಅಷ್ಟಪತ್ರ ಪುಟಗಳು ೮+೧೫೪ ; ಕ್ಯಾಲಿಕೋ ಬೈಂಡಿನ ಪುಸ್ತಕದ ಬೆಲೆ ರೂ. ೧–೪–೦ ; ೧೯೩೧.

"ಇದು ವಂಗ ಭಾಷೆಯಲ್ಲಿ ಪ್ರಸಿದ್ಧ ಪಂಡಿತರಾದ ಶ್ರೀಯುಕ್ತ ರಜನೀಕಾಂತ ಗುಪ್ತರಿಂದ ರಚಿತವಾದುದು. ನಾನು ಅವರ ಅಪ್ಪಣೆಯನ್ನು ಪಡೆದು ಆ ಗ್ರಂಥದಲ್ಲಿನ ಕೆಲವು ಕಥೆಗಳನ್ನು ಯಥಾಮತಿ ಕನ್ನಡಿಸಿದೆನು" ಎಂದು ಲೇಖಕರು ಈ ಗ್ರಂಥದ ತಮ್ಮ ಮೊದಲನೆಯ ಮುದ್ರಣದಲ್ಲಿ (ಕ್ರಿ. ಶ. ೧೮೯೬) ಹೇಳಿರುತ್ತಾರೆ. ಪ್ರಕೃತ ಮುದ್ರಣವು ಐದನೆಯ ಆವೃತ್ತಿಯಾಗಿರುವುದು.

---

## ೬. ಆರ್ಯ ಮಹಿಳಾ ಕೀರ್ತಿ
## ೭. ಆಂಡ್ರೂ ಕಾರ್ನೆಗಿ
## ೮. ವ್ಯಾಪಾರ ಅಂದರೇನು?

ಲೇಖಕರು.—ಜಿ. ಆರ್. ಜೋಸ್ಯರ್, ಎಂ.ಎ., ಎಫ್.ಆರ್.ಇ.ಎಸ್., ಮೈಸೂರು.

ಪ್ರಕಾಶಕರು.—ಜೋಸ್ಯರ್ ಅಂಡ್ ಕೊ., ಮೈಸೂರು.

ಕ್ರೌನ್ ಅಷ್ಟಪತ್ರ ಪುಟಗಳು (೬) ೧೦೪, (೭) ೬೦, (೮) ೪೬;

ಬೆಲೆ—೮ ಆಣೆ, ೬ ಆಣೆ, ೧೨ ಆಣೆ; ೧೯೩೦; ?; ೧೯೨೭.

(೬) ಈ ಪುಸ್ತಕದಲ್ಲಿ ಭರತಖಂಡದ ಹದಿನಾಲ್ಕು ಮಂದಿ ವೀರ ರಮಣಿಯರ ಪ್ರತಾಪವನ್ನು ವರ್ಣಿಸಿದೆ: ಸಂಯುಕ್ತೆ, ಪದ್ಮಿನಿ, ತಾರಾಬಾಯಿ, ದುರ್ಗಾವತಿ, ಭವಾನಿ, ಜೋದಪುರದ ಮಹಾರಾಣಿ, ಜಷರೇಶ್ವರಿ, ಗನೋರ್ ರಾಣಿ, ಕರ್ಮದೇವಿ, ಅಹಲ್ಯಾಬಾಯಿ, ಚಂದ್ರಾವತಿ, ಝಾನ್ಸಿ ರಾಣಿ, ಮೀರಾಬಾಯಿ, ಲಕ್ಷ್ಮಮ್ಮಣ್ಣಿ.

ಭಾಷೆಯು ಸುಲಭವಾಗಿಯೂ ಲಲಿತವಾಗಿಯೂ ಇದೆ.

"ದೇಶೋದ್ಧಾರಕರಾಗಿ ಪ್ರಜಾ ಸೇವೆಯನ್ನು ಮಾಡಿ ಮಾರ್ಗ ದರ್ಶಿಗಳಾದ ಮಹಾ ಮಹಿಮರ ದಿವ್ಯ ಚರಿತ್ರೆಗಳನ್ನು ಲಲಿತವಾದ ಕನ್ನಡದಲ್ಲಿ ಬರೆದು ಬಾಲಕಿಯರ ಮುಂದಿಟ್ಟರೆ ಮಹದುಪಕಾರವನ್ನು ಮಾಡಿದಂತೆ ಆಗುತ್ತದೆ" ಎಂದು ಮ॥ ರಾ॥ ಶ್ರೀ ಕೆ. ಎಚ್. ರಾಮಯ್ಯನವರು ಈ ಪುಸ್ತಕಕ್ಕೆ ಬರೆದಿರುವ 'ಮುನ್ನುಡಿ'ಯಲ್ಲಿ ಹೇಳಿರುತ್ತಾರೆ.

(೭) ಇದು ಜಗತ್ಪ್ರಸಿದ್ಧನಾದ ಅಮೆರಿಕದ ಕೋಟ್ಯಾಧೀಶ್ವರ ಆಂಡ್ರೂ ಕಾರ್ನೆಗಿಯ ಕಥೆ. ಈ ಲೇಖಕರು "ನವೀನ ಪ್ರಪಂಚದಲ್ಲಿ ಅಭ್ಯುದಯವನ್ನು ಪಡದಿರ ತಕ್ಕ ಜನಾಂಗಗಳ ರಹಸ್ಯವನ್ನು ನಮ್ಮ ಜನಕ್ಕೆ ಸುಲಭವಾದ ಭಾಷೆಯಲ್ಲಿ ಸರ್ವರೂ ತಿಳಿಯುವ ರೀತಿಯಲ್ಲಿ ಬೋಧಿಸುತ್ತಿರುತ್ತಾರೆ" ಎಂದು ಮ॥ ರಾ॥ ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಈ ಪುಸ್ತಕಕ್ಕೆ ಬರೆದಿರುವ 'ಮುನ್ನುಡಿ'ಯಲ್ಲಿ ಹೇಳಿರುತ್ತಾರೆ.

(೮) "ಈ ಪುಸ್ತಕವು ಕೆಲವು ವರ್ಷಗಳ ಹಿಂದೆ 'ಲಂಡನ್ ಟೈಮ್ಸ್' ಪತ್ರಿಕೆಯ ವ್ಯಾಪಾರದ ಉಪ ಪತ್ರದಲ್ಲಿ ಪ್ರಕಟಿಸಲ್ಪಟ್ಟ ವ್ಯಾಪಾರ ಸಂಬಂಧವಾದ ಕೆಲವು ಉಪನ್ಯಾಸಗಳ ಆಧಾರದ ಮೇಲೆ ಬರೆದದ್ದು.....ಸಾಮಾನ್ಯ ಪ್ರಜೆಗಳಿಗೆ ವ್ಯಾಪಾರದ ವಿಷಯದಲ್ಲಿ ತಿಳಿಯಬೇಕಾದ ಮುಖ್ಯಾಂಶಗಳನ್ನು ಸುಲಭವಾದ ರೀತಿಯಲ್ಲಿ ವಿವರಿಸುವದು........ಆಬಾಲರಾಗಿ ಎಲ್ಲಾ ಪ್ರಜೆಗಳೂ ನವೀನ ಕಾಲದ ವ್ಯಾಪಾರ ಮತ್ತು ಕೈಗಾರಿಕೆಗಳ ಸಾಮಾನ್ಯ ವಿಷಯಗಳನ್ನು ತಿಳಿಯದೆ ಇರಬಾರದು. ....ಈ ಪುಸ್ತಕವು ಆ ವಿಷಯಗಳನ್ನು ಸುಲಭವಾದ ರೀತಿಯಲ್ಲಿ ತಿಳಿಸುತ್ತದೆ" ಎಂದು ಮ॥ ರಾ॥ ಶ್ರೀ ಸಿ. ರಂಗನಾಥರಾವ್ ಸಾಹೇಬರವರು ಈ ಪುಸ್ತಕಕ್ಕೆ ಬರೆದಿರುವ 'ಮುನ್ನುಡಿ'ಯಲ್ಲಿ ಹೇಳಿರುತ್ತಾರೆ.

ಆಯಾ ಪ್ರಾಂತಗಳಲ್ಲಿ ದೊರೆಯುವ ವ್ಯಾಪಾರ ವಸ್ತುಗಳು ಯಾವುವೆಂಬುದನ್ನು ಕೂಡಲೆ ಗ್ರಹಿಸಲನುಕೂಲಿಸುವಂತೆ ಅಲ್ಲಲ್ಲಿ ಆಯಾ ಪದಾರ್ಥಗಳ ಚಿತ್ರಗಳನ್ನು ಚಿತ್ರಿಸಿರುವ ಮೈಸೂರು ದೇಶದ ಭೂಪಟವು ಈ ಪುಸ್ತಕಕ್ಕೆ ಸೇರಿಸಿದೆ.

---

## ೯. ಕರ್ಣಾಟಕ ಧುರೀಣದ ವಿಶೇಷ ಸಂಚಿಕೆ

ಸಂಪಾದಕರು.— ಗಣೇಶ ರಾಮಯಾಜಿ, ಕುಮಟಾ.

ಡೆಮ್ಮೈ ಚತುಷ್ಪತ್ರ ಪುಟಗಳು ೯೦; ಬೆಲೆ ೧ ರೂಪಾಯಿ; ೧೯೩೧.

ಇದು 'ಕರ್ಣಾಟಕ ಧುರೀಣ'ದ ಮೂರನೆಯ ವಿಶೇಷ ಸಂಚಿಕೆ. ಇದರಲ್ಲಿ ಜ್ಯೋತಿಶ್ಶಾಸ್ತ್ರ, ಗಣಿತ ಶಾಸ್ತ್ರ, ರಾಜನೀತಿ ಶಾಸ್ತ್ರ, ಕನ್ನಡ ಕಾವ್ಯ, ಇತಿಹಾಸ, ಆರ್ಯ ಸಂಸ್ಕೃತಿ, ಕಥೆಗಳು, ಒಕ್ಕಲತನ, ಸಹಕಾರಿತೆ, ಕೈಗಾರಿಕೆ, ಸ್ವದೇಶಿ, ಸ್ವರಾಜ್ಯ—ಇವೇ ಮೊದಲಾದ ವಿಷಯಗಳನ್ನು ಕುರಿತು ಕರ್ಣಾಟಕದ ನಾನಾ ಪ್ರಾಂತದ ಪ್ರಸಿದ್ಧ ಲೇಖಕರು ಬರೆದ ಲೇಖನಗಳೂ, ಅನೇಕ ಆಧುನಿಕ ಕವಿತೆಗಳೂ ಇವೆ; ರಾಜಕೀಯ ಚಳವಳಿಯಲ್ಲಿ ಪ್ರಮುಖರಾದ ಅನೇಕ ಮಂದಿ ಸುಪ್ರಸಿದ್ಧ ಸ್ತ್ರೀ ಪುರುಷರ ಚಿತ್ರಗಳಿವೆ. ರಕ್ಷಾಪತ್ರದ ಮೇಲೆ ನಾನಾ ವರ್ಣದ ಅಂದವಾದ ಬಾಲೆಯ ಚಿತ್ರಪಟವೊಂದಿದೆ.

---

ಶ್ರೀಃ

# ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ






ಸಂಪುಟ ೧೬] ಪ್ರಜೋತ್ಪತ್ತಿ ಸಂ॥ ಪುಷ್ಯ ಮಾಸ [ಸಂಚಿಕೆ ೪

## ಹದಿನೇಳನೆಯ ಕರ್ಣಾಟಕ ಸಾಹಿತ್ಯ ಸಮ್ಮೇಳನ

ಈ ಸಾರಿ ಕರ್ಣಾಟಕ ಸಾಹಿತ್ಯ ಸಮ್ಮೇಳನವು ಮುಂಬಯಿ ಪ್ರಾಂತದ ಉತ್ತರ ಕನ್ನಡ ಜಿಲ್ಲೆಯ ಹಿರಿಯೂರಾದ ಕಾರವಾರದಲ್ಲಿ ೧೯೩೧ನೆಯ ಇಸವಿ ಡಿಸೆಂಬರು ತಿಂಗಳು ೨೮ನೆಯ ತಾರೀಖು ಸೋಮವಾರ ಮೊದಲ್ಗೊಂಡು ಮೂರು ದಿನಗಳು ನೆರೆದಿದ್ದಿತು. ಸಮ್ಮೇಳನ ಕಾರ್ಯವು ಗದಗ ದತ್ತಾತ್ರೇಯ ನಾಟಕ ಮಂದಿರದಲ್ಲಿ ವಿಜೃಂಭಣೆಯಿಂದ ನಡೆಯಿತು. ಉತ್ತರ ಕರ್ಣಾಟಕ, ಮೈಸೂರು, ಧಾರವಾಡ, ಮಂಗಳೂರು—ಈ ಪ್ರಾಂತಗಳಿಂದ ಭಾಷಾಭಿಮಾನಿಗಳೂ ಗಣ್ಯರೂ ಸಮ್ಮೇಳನಕ್ಕೆ ದಯಮಾಡಿಸಿದ್ದರು. ಸೋಮವಾರ ಬೆಳಗ್ಗೆ ೮॥ ಗಂಟೆಗೆ ಸಭೆಯು ಪ್ರಾರಂಭವಾಗಿ ಸಭಾಂಗಣವಾದ ನಾಟಕ ಶಾಲೆಯು ಸಭಿಕರಾದ ಸ್ತ್ರೀ ಪುರುಷರಿಂದ ತುಂಬಿದ್ದಿತು. ಶ್ರೀಮಾನ್ ವಿ. ಆರ್. ಪ್ರಭುಗಳವರು ರಚಿಸಿದ್ದ ಸ್ವಾಗತ ಪದ್ಯಗಳಲ್ಲಿ ಕೆಲವನ್ನು ಬಾಲಿಕೆಯರೂ ಕೆಲವನ್ನು ಶ್ರೀಮಾನ್ ಗರುಡ ಸದಾಶಿವರಾಯರೂ ಹಾಡಿದರು.

ತರುವಾಯ, ಸ್ವಾಗತ ಮಂಡಲಿಯ ಅಧ್ಯಕ್ಷರಾದ ಶ್ರೀಮಾನ್ ಶಾಸ್ತ್ರಿ ಶಿವ ರಾಯರು, ಸಮ್ಮೇಳನಕ್ಕೆ ದಯಮಾಡಿಸಿದ್ದ ಪ್ರತಿನಿಧಿಗಳ ಮತ್ತು ಸದಸ್ಯರ ಸ್ವಾಗತ ವನ್ನು ವಿಚಾರಿಸಿ, ಕಾರವಾರ ಜಿಲ್ಲೆಯು ಇರತಕ್ಕ ಸನ್ನಿವೇಶ, ಅದರ ಕುಂದು ಕೊರತೆಗಳು, ಪ್ರಾಕೃತಿಕ ಸೌಂದರ್ಯ, ಬನವಾಸಿಯ ಗತವೈಭವ ಮುಂತಾದ ವಿಷಯಗಳನ್ನೊಳಕೊಂಡ ಸ್ವಾರಸ್ಯವಾದೊಂದು ಭಾಷಣವನ್ನು ಮಾಡಿ, ಸಮ್ಮೇಳನ ಕಾರ್ಯವನ್ನು ಸಾಂಗವಾಗಿ ನೆರವೇರಿಸಿಕೊಡಬೇಕೆಂದು ಸಭಿಕರನ್ನು ಪ್ರಾರ್ಥಿಸಿದರು. (ಈ ಭಾಷಣವನ್ನು ಮುಂದೆ ಕೊಟ್ಟಿದೆ.)

ಬಳಿಕ, ಕಾರವಾರದ ವೃದ್ಧ ವಕೀಲರಾದ ಶ್ರೀಮಾನ್ ತೇಲಂಗ ಮಂಗೇಶ ರಾಯರು ಶ್ರೀಮಾನ್ ಪಂಡಿತ ಮುಳಿಯ ತಿಮ್ಮಪ್ಪಯ್ಯನವರ ಪಾಂಡಿತ್ಯವನ್ನು ಕೊಂಡಾಡಿ, ಅವರ ಗುಣಕಥನ ಮಾಡಿ ಕರ್ಣಾಟಕ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನವನ್ನಲಂಕರಿಸಲು ಅವರು ಸರ್ವವಿಧದಲ್ಲಿಯೂ ಅರ್ಹರೆಂಬುದನ್ನು ಪ್ರತಿಪಾದಿಸಿ

ಅಧ್ಯಕ್ಷತೆಯನ್ನು ವಹಿಸಬೇಕೆಂದು ಅವರನ್ನು ಪ್ರಾರ್ಥಿಸಿದರು. ಈ ಸೂಚನೆಯನ್ನು ಶ್ರೀಮತಿ ಕೃಷ್ಣಾಬಾಯಿ ಪಂಜೀಕರರು ಉತ್ಸಾಹ ಪೂರಿತವಾದ ಉಜ್ಜ್ವಲ ಭಾಷಣ ದಿಂದ ಅನುಮೋದಿಸಿದರು. ಧಾರವಾಡದವರ ಪರವಾಗಿ ಶ್ರೀಮಾನ್ ಆಲೂರ ವೆಂಕಟರಾಯರೂ ಮೈಸೂರಿನವರ ಪರವಾಗಿ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ ನವರೂ ಹೃದಯಂಗಮವಾಗಿ ಭಾಷಣ ಮಾಡಿ ಆ ಸೂಚನೆಯನ್ನು ಪುಷ್ಟೀಕರಿಸಿ ದರು. ಆ ಬಳಿಕ, ಕಿರಿಯರ ಪರವಾಗಿ ಶ್ರೀಮಾನ್ ತಿರುಮಲೆ ತಾತಾಚಾರ್ಯ ಶರ್ಮರವರೂ, ಅನಂತರ ಸ್ವಾಗತ ಮಂಡಲಿಯ ಕಾರ್ಯದರ್ಶಿಯವರಾದ ಶ್ರೀಮಾನ್ ರಂಗಪ್ಪ ಪೋತ್ದಾರರೂ, ಮನೋಹರವಾದ ಭಾಷಣಗಳನ್ನು ಮಾಡಿ, ಆ ಸೂಚನೆ ಯನ್ನು ತಾವೂ ಪುಷ್ಟೀಕರಿಸಿದರು. ತರುವಾಯ, ಶ್ರೀಮಾನ್ ಪಂಡಿತ ಮುಳಿಯ ತಿಮ್ಮಪ್ಪಯ್ಯನವರು, ಸಭಿಕರ ಕರತಾಡನ ಕೋಲಾಹಲದಲ್ಲಿ, ಅಧ್ಯಕ್ಷ ಸ್ಥಾನವನ್ನು ಸ್ವೀಕರಿಸಿ, ಆ ಸ್ಥಳವನ್ನು ತಮಗೆ ವಹಿಸಿಕೊಟ್ಟುದಕ್ಕಾಗಿ ಸಭಿಕರಿಗೆ ಕೃತಜ್ಞತಾ ಪೂರ್ವಕವಾದ ವಂದನೆಗಳನ್ನು ಸಮರ್ಪಿಸಿದರು. ಇದಾದ ಬಳಿಕ, ಪದ್ಧತಿಯ ಮೇರೆಗೆ ಪರಿಷತ್ತಿನ ಕಾರ್ಯದರ್ಶಿಯವರು ಕರ್ಣಾಟಕ ಸಾಹಿತ್ಯ ಪರಿಷತ್ತಿನ ಪ್ರಮೋದ ಸಂವತ್ಸರದ ವರದಿಯನ್ನು ಓದಿದರು. ಆಮೇಲೆ, ಈ ಸಮ್ಮೇಳನಕ್ಕೆ ಕಾರ್ಯಾಂತರದಿಂದ ಬರುವುದಕ್ಕಾಗದೆ ಹೋದುದಕ್ಕಾಗಿ ತಮ್ಮ ವಿಷಾದವನ್ನು ಸೂಚಿಸಿ ಸಮ್ಮೇಳನವು ಯಶಸ್ವಿಯಾಗಲೆಂದು ಹಾರೈಸಿ ಬರೆದಿದ್ದ ಕೆಲವರು ಸಭ್ಯರ ಪತ್ರಗಳನ್ನೂ ತಂತಿಯ ವರ್ತಮಾನಗಳನ್ನೂ ಓದಿ ತಿಳಿಸಲಾಯಿತು. ಬಳಿಕ, ಅಧ್ಯಕ್ಷರು ವಿಮರ್ಶಾತ್ಮಕವಾದ ದೀರ್ಘ ಭಾಷಣವನ್ನು ಮಾಡಿ ಸಭಿಕರನ್ನು ಆನಂದ ಗೊಳಿಸಿದರು. (ಈ ಭಾಷಣವನ್ನು ಮುಂದೆ ಕೊಟ್ಟಿದೆ.)

ಸ್ವಾಗತ ಮಂಡಲಿಯವರು ಗೊತ್ತುಮಾಡಿದ್ದ ಕಾರ್ಯಕ್ರಮದ ಪಟ್ಟಿಯಂತೆ, ಆ ದಿನ ಮಧ್ಯಾಹ್ನ ೨॥ ಗಂಟೆಗೆ ಸಭಾಂಗಣದಲ್ಲಿ ಅಂಕೋಲೆಯ ವಾದ್ಯಗಾರರ ಸುಶ್ರಾವ್ಯವಾದ ಓಲಗವು ನಡೆಯಿತು. ಅವರ ರೀತಿಯು ಮೈಸೂರು ಪ್ರಾಂತದಿಂದ ಬಂದಿದ್ದವರಿಗೆ ಹೊಸದಾಗಿದ್ದಿತು; ಹಿಂದುಸ್ಥಾನಿಯ ರಾಗಗಳನ್ನು ಓಲಗದಲ್ಲಿ ನುಡಿಸಿದ ಬಗೆಯು ವಾದ್ಯಗಾರರ ಅಭ್ಯಾಸ ಬಲವನ್ನು ತೋರಿಸುತ್ತಿದ್ದಿತು. ಅನಂತರ, ಶ್ರೀಮಾನ್ ಬೇಂದ್ರೆಯವರು **'ನಾದ ಲೋಲ ಲಕ್ಷ್ಮೀಶ'** ಎಂಬ ವಿಷಯವನ್ನೂ, ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯನವರು **'ಲಕ್ಷ್ಮೀಶನು ಚಿತ್ರಿಸಿರುವ ಕೆಲವು ಸ್ತ್ರೀ ಪಾತ್ರಗಳು'** ಎಂಬ ವಿಷಯವನ್ನೂ, ಶ್ರೀಮಾನ್ ಕಡೆಂಗೋಡ್ಲು ಶಂಕರಭಟ್ಟರು **'ದಕ್ಷಿಣ ಕನ್ನಡದ ಆಧುನಿಕ ಕವಿಗಳು'** ಎಂಬ ವಿಷಯವನ್ನೂ ಕುರಿತು ಭಾಷಣ ಮಾಡಿ ಸಭಿಕರನ್ನು ಆನಂದಪಡಿಸಿದರು.

ಆ ದಿನ ರಾತ್ರಿ ೮॥ ಗಂಟೆಗೆ ವಿಷಯ ನಿಯಾಮಕ ಸಭೆಯು ನಡೆಯತಕ್ಕು ದೆಂದು ಗೊತ್ತಾಗಿ, ಸಭೆಯು ಏರ್ಪಟ್ಟಿತು; ಈ ಸಭೆಯು ಚಿತ್ರಮಂಡಲದ ಕಟ್ಟಡ ದಲ್ಲಿ ಸೇರಿ, ಸಮ್ಮೇಳನದ ಮುಂದೆ ಇಡುವುದಕ್ಕಾಗಿ ನಾಲ್ಕು ನಿರ್ಣಯಗಳನ್ನು ಚರ್ಚೆ ಮಾಡಿ ತೀರ್ಮಾನಿಸಿತು.

---

## ಎರಡನೆಯ ದಿನ (೨೯-೧೨-೧೯೩೧)

ಸಾಹಿತ್ಯ ಸಮ್ಮೇಳನ ಸಮಾರಂಭದ ಸನ್ನಿವೇಶದಲ್ಲಿಯೇ ಕವಿ ಸಮ್ಮೇಳನವೂ, ಬೆಂಗಳೂರು ಇಂಟರ್‌ಮೀಡಿಯೆಟ್ ಕಾಲೇಜಿನ ಕನ್ನಡ ಭಾಷಾಧ್ಯಾಪಕರಾದ ಶ್ರೀಮಾನ್ ಎ. ಸೀತಾರಾಮಯ್ಯನವರ ಅಧ್ಯಕ್ಷತೆಯಲ್ಲಿ, ಜರುಗಿತು. ಸ್ವಾಗತ ಮಂಡಲಿಯ ಅಧ್ಯಕ್ಷರಾದ ಶ್ರೀಮಾನ್ ದಿನಕರ ದೇಸಾಯಿಯವರ ಭಾಷಣವಾದ ಮೇಲೆ ಸಮ್ಮೇಳನದ ಅಧ್ಯಕ್ಷರು ಶ್ರೀಮಾನ್ ಎ. ಸೀತಾರಾಮಯ್ಯನವರು ಸುಮಾರು ಒಂದು ಗಂಟೆಯ ಕಾಲ ಭಾವಯುಕ್ತವಾದ ಭಾಷಣವನ್ನು ಮಾಡಿ ಸಭಿಕರನ್ನು ಆನಂದಗೊಳಿಸಿದರು. ಅನಂತರ, ಕವಿಗಳು ತಂತಮ್ಮ ಕವನಗಳನ್ನು ಓದಿದರು: ಶ್ರೀಮಾನ್ ದಿನಕರ ದೇಸಾಯಿಯವರು ಸಾಬೂನಿನ ಮೇಲೆ ತಾವು ರಚಿಸಿದ್ದ ಹಾಸ್ಯಯುಕ್ತವಾದ ಕವನವನ್ನು ಓದಿದಾಗ ಸಭಿಕರು ನಕ್ಕು ನಕ್ಕು ತಮ್ಮ ಮೆಚ್ಚುಗೆಯನ್ನು ತೋರಿಸಿದರು. ಆಧುನಿಕ ಕವಿತೆಗಳನ್ನು ರಚಿಸುವುದರಲ್ಲಿ ಹೆಸರುವಡೆದ ಶ್ರೀಮಾನ್ ಕೆ. ವಿ. ಪುಟ್ಟಪ್ಪನವರ ಕೆಲವು ಕವನಗಳನ್ನು ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಸುರಸವಾಗಿ ಓದಿಹೇಳಿದರು. ಕರ್ಣಾಟಕದ ಪ್ರಸಿದ್ಧ ಲೇಖಕರಾದ ಶ್ರೀಮಾನ್ ಮಾಸ್ತಿ ವೆಂಕಟೇಶ ಐಯಂಗಾರ್ಯರವರ ಕೆಲವು ಕವಿತೆಗಳನ್ನು ಶ್ರೀಮಾನ್ ತಿರುಮಲೆ ತಾತಾಚಾರ್ಯ ಶರ್ಮರವರು ಓದಿಹೇಳಿದರು. ಶ್ರೀಮಾನ್ ಮೂಡಕಟ್ಟಿಯವರು, ಕೀರ್ತನ ಕೇಸರಿ ಶ್ರೀಮಾನ್ ಶಿವಮೂರ್ತಿ ಶಾಸ್ತ್ರಿಗಳು, ಶ್ರೀಮಾನ್ ನಾರಾಯಣ ವೆಂಕಟೇಶ ಕುರಡಿಯವರು—ಇವರೇ ಮೊದಲಾದವರು ತಂತಮ್ಮ ಕವನಗಳನ್ನು ಓದಿಹೇಳಿದರು. ಮಧ್ಯೇ ಮಧ್ಯೇ ಯಕ್ಷಗಾನದ ಹಾಡುವಿಕೆಯು ನಡೆಯುತ್ತಿದ್ದಿತು. ಇದನ್ನು ಹಾಡಲು, ಶ್ರೀಮಾನ್ ನಾಡವರೇ ಮುಂತಾದವರು ದೂರದಿಂದ ಬಂದಿದ್ದರು. ಪ್ರಸಿದ್ಧ ಕವಯಿತ್ರಿಯರಾದ 'ಭಾರತಿ' ಯವರು (ಶ್ರೀಮತಿ ತಿರುಮಲೆ ರಾಜಮ್ಮನವರು) ರಚಿಸಿರುವ "ತಪಸ್ವಿನಿ" ಎಂಬ ನಾಟಕದ ಕೆಲವು ಭಾಗಗಳನ್ನು ಶ್ರೀಮಾನ್ ಶಿವಮೂರ್ತಿ ಶಾಸ್ತ್ರಿಗಳವರು ಓದಿ ಹೇಳಿದರು. ಸಂಪಗಾವಿಯ ಉಪಾಧ್ಯಾಯರೊಬ್ಬರು ಸೂಜಿ, ದಾರ ಮುಂತಾದುವುಗಳ ಮೇಲೆ ತಾವು ರಚಿಸಿದ್ದ ಕವನವನ್ನು ಹೇಳಿದುದಲ್ಲದೆ ಆಶು ಕವಿತೆ ಮಾಡಿ ಸಭಿಕರನ್ನು ವಿನೋದಗೊಳಿಸಿದರು. ಅಧ್ಯಕ್ಷರಾದ ಶ್ರೀಮಾನ್ ಎ. ಸೀತಾರಾಮಯ್ಯನವರು ತಮ್ಮ "ಕಸ್ಮೈ ದೇವಾಯ" ಎಂಬ ಕವನವನ್ನು ಇಂಪಾಗಿ ಹಾಡಿ, ಉಪಸಂಹಾರ ಭಾಷಣವನ್ನು ಮಾಡಿದರು. ಅಲ್ಲಿಗೆ ಕವಿ ಸಮ್ಮೇಳನ ಕಾರ್ಯಗಳು ಮುಗಿದುವು.

ಅನಂತರ, ಹಿಂದಣ ರಾತ್ರಿ ಗೊತ್ತುಮಾಡಿದ್ದ ನಿರ್ಣಯಗಳನ್ನು ಸಮ್ಮೇಳನದ ಮುಂದೆ ಚರ್ಚೆಗಾಗಿ ಇಟ್ಟು, ಮುಂದೆ ಕೊಡುವ ಮೊದಲು ನಾಲ್ಕು ಗೊತ್ತುವಳಿಗಳನ್ನು ತೀರ್ಮಾನಿಸಲಾಯಿತು.

ಸಾಯಂಕಾಲ ೬ ಗಂಟೆಯ ಮೇಲೆ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಪಂಪ ಕವಿಯ ಆದಿಪುರಾಣ ಗ್ರಂಥದ ಮೇಲೆ ಸರ್ವರಿಗೂ ಗ್ರಂಥ ವಿಷಯವು ತಿಳಿಯು

ವಂತೆ, ಸುಮಾರು ಎರಡು ಗಂಟೆಗಳ ಕಾಲ, ಅತಿ ಸ್ವಾರಸ್ಯವಾಗಿ ಭಾಷಣ ಮಾಡಿ, ಸಭಿಕರನ್ನು ಆನಂದಗೊಳಿಸಿದರು. ಅನಂತರ, ಹಿಂದಣ ದಿವಸದಂತೆ, ವಿಷಯ ನಿಯಾಮಕ ಸಭೆಯು ಮಿತ್ರಮಂಡಲದ ಕಟ್ಟಡದಲ್ಲಿ ರಾತ್ರಿ ೯ ಗಂಟೆಗೆ ಸೇರಿ, ಮಾರನೆಯ ದಿನ ಸಮ್ಮೇಳನದ ಮುಂದೆ ಇಡುವುದಕ್ಕಾಗಿ ಮಿಕ್ಕ ಗೊತ್ತುವಳಿಗಳನ್ನು ಚರ್ಚಿಸಿತು.

---

## ಮೂರನೆಯ ದಿನ (೩೦-೧೨-೧೯೩೧)

ಹಿಂದೆಯೇ ಗೊತ್ತಾಗಿದ್ದಂತೆ, ಕರ್ಣಾಟಕ ಸಾಹಿತ್ಯ ಪರಿಷತ್ತಿನ ವಾರ್ಷಿಕಾಧಿವೇಶನವು ಸಮ್ಮೇಳನದ ಅಧ್ಯಕ್ಷರ ಬಿಡಾರದಲ್ಲಿ ಪ್ರಾತಃಕಾಲ ೯ ಗಂಟೆಗೆ ನಡೆಯಿತು. (ಇದರ ಕಾರ್ಯಕಲಾಪವನ್ನು ಮುಂದೆ ಕೊಟ್ಟಿದೆ.) ಸಮ್ಮೇಳನದ ಪ್ರತಿನಿಧಿಗಳಿಗಾಗಿ ನಾಟಕ ಮಂದಿರದಲ್ಲಿ ಸುಗ್ಗಿಯ ಹಾಡುಗಳೂ ಕೆಲವು ಕವಿತೆಗಳೂ ಓದಲಾದುವು.

ಅನಂತರ, ಕಾರವಾರದ ಸಭ್ಯಗೃಹಸ್ಥರಾದ ಶ್ರೀಮಾನ್ ಹಳದೀಪುರಕರರು ಸಮ್ಮೇಳನದ ಪ್ರತಿನಿಧಿಗಳೆಲ್ಲರನ್ನೂ ತಮ್ಮ ಮನೆಗೆ ಕರೆದುಕೊಂಡುಹೋಗಿ, ಸವಿಯಾದ ಉಪಾಹಾರದಿಂದ ತೃಪ್ತಿಗೊಳಿಸಿದರು. ಆ ದಿನ ಮಧ್ಯಾಹ್ನಾತ್ಪರ, ಮಿಕ್ಕ ಗೊತ್ತುವಳಿಗಳು ಸಮ್ಮೇಳನದ ಮುಂದೆ ಬಂದು ಚರ್ಚಿತವಾಗಿ ಅಂಗೀಕೃತವಾದುವು.

ಆ ತರುವಾಯ, ಪ್ರಸಿದ್ಧ ಕೀರ್ತನಕಾರರಾದ ಕೀರ್ತನಕೇಸರಿ ಶ್ರೀಮಾನ್ ಶಿವಮೂರ್ತಿ ಶಾಸ್ತ್ರಿಗಳವರು "ಕರ್ಣಾಟಕ ವಿಜಯ" ಎಂಬ ಕೀರ್ತನವನ್ನು ಮಾಡಿ ಸದಸ್ಯರನ್ನು ಹರುಷಗೊಳಿಸಿದರು. ಅಧ್ಯಕ್ಷರು ತರುವಾಯ, ಉಪಸಂಹಾರ ಭಾಷಣ ಮಾಡಿದರು. ಅನಂತರ, ಶ್ರೀಮಾನ್ ಪೋತದಾರರೂ, ಶ್ರೀಮಾನ್ ಎಸ್. ಎಸ್. ಶಾಸ್ತ್ರಿಗಳೂ, ಹಳದೀಪುರ ವಕೀಲರೂ ತಮ್ಮ ಜಿಲ್ಲೆಯ ಪರವಾಗಿ ಅತಿಥಿಗಳನ್ನು ಅಭಿವಂದಿಸಿದರು. ಅದಕ್ಕೆ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರೂ, ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯನವರೂ, ಶ್ರೀಮಾನ್ ಆಲೂರ ವೆಂಕಟರಾಯರೂ, ಶ್ರೀಮಾನ್ ಶಂಕರಭಟ್ಟರೂ ಉತ್ತರವಿತ್ತರು. ಅಲ್ಲಿಗೆ ಸಮ್ಮೇಳನ ಕಾರ್ಯವು ಪೂರಯಿಸಿತು.

---

## ಗೊತ್ತುವಳಿಗಳು

೧. ೧೯೩೧ನೆಯ ಇಸವಿ ಡಿಸೆಂಬರು ೨೮ನೆಯ ತಾರೀಖಿನಲ್ಲಿ ಕಾರವಾರದಲ್ಲಿ ಸೇರಿದ ಕರ್ಣಾಟಕ ಸಾಹಿತ್ಯ ಪರಿಷತ್ಸಮ್ಮೇಳನವು ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರ ದಿವ್ಯ ಸನ್ನಿಧಿಯಲ್ಲಿ, ಮಹಾಸ್ವಾಮಿಯವರು ಕನ್ನಡ ಭಾಷೆಯ ಏಳಿಗೆಗಾಗಿಯೂ ಸಾಹಿತ್ಯ ಪರಿಷತ್ತಿಗಾಗಿಯೂ ಅನುಗ್ರಹಿಸುತ್ತಿರುವ ಉದಾರಾಶ್ರಯಕ್ಕಾಗಿ, ಪ್ರೀತಿಪೂರ್ವಕವಾದ ಭಕ್ತಿ ವಿಶ್ವಾಸಗಳನ್ನು ಒಪ್ಪಿಸಲು ಅಪ್ಪಣೆಯನ್ನು ಬೇಡುತ್ತದೆ. (ಅಧ್ಯಕ್ಷರಿಂದ)

ಇದು ಸರ್ವಾನುಮತದಿಂದ ಅಂಗೀಕೃತವಾಯಿತು.

೨. ಕೀರ್ತಿಶೇಷರಾದ ರಾ. ಹ. ದೇಶಪಾಂಡೆ, ಎಂ.ಎ., ಪಂಡಿತ ಕರಿಬಸವಪ್ಪ ಶಾಸ್ತ್ರಿಗಳು, ಕೃಷ್ಣಾಜಿ ಗೋವಿಂದ ಗೆಜ್ಜಿ, ಬಿ.ಎ., ಎಲ್‌ಎಲ್.ಬಿ., ಎಸ್. ಎನ್. ನರಹರಯ್ಯನವರು, ಬಿ.ಎ., ಎಲ್‌ಎಲ್.ಎಂ., ವಾಮನರಾವ್ ಧಾರವಾಡಕರ್, ಬಿ.ಎ., ಬಿಡಾರದ ಕೃಷ್ಣಪ್ಪನವರು, ಕೆಕ್ಕಾರ್ ಶಿವರಾಮಭಟ್ಟರು, ವಾಸುದೇವ ರಾವ್ ಕೊಲ್ಲಾಳಿ—ಇವರುಗಳ ಅಕಾಲ ಮರಣಕ್ಕಾಗಿ ಈ ಸಮ್ಮೇಳನವು ವಿಷಾದ ಪ್ರದರ್ಶನ ಮಾಡುತ್ತದೆ. (ಅಧ್ಯಕ್ಷರಿಂದ)

ಇದು ಸರ್ವಾನುಮತದಿಂದ ಅಂಗೀಕೃತವಾಯಿತು.

೩. ಕೊಪ್ಪಳದಲ್ಲಿಯ ನಿಜಾಮ ಕರ್ಣಾಟಕ ಇತಿಹಾಸ ಸಂಶೋಧನ ಸಮಿತಿಯವರ ಆಮಂತ್ರಣದ ಮೇರೆಗೆ, ಹೈದರಾಬಾದಿನ ಪ್ರಾಕ್ತನ ಸಂಶೋಧನ ಖಾತೆಯವರು ಕ್ಷಿಪ್ರದಲ್ಲಿಯೇ ಕೊಪ್ಪಳಕ್ಕೆ ಬಂದು ಅಲ್ಲಿಯ ಎಲ್ಲ ಶಾಸನಗಳನ್ನೂ ಸಂಶೋಧಿಸುವುದಕ್ಕಾಗಿ ಆ ಇಲಾಖೆಯ ಡೈರೆಕ್ಟರಾದ ಮಿ॥ ಜಿ. ಯಾಜದಾನಿ, ಎಂ.ಎ. ಅವರನ್ನು ಈ ಸಮ್ಮೇಳನವು ಅಭಿನಂದಿಸುತ್ತದೆ; ಅಲ್ಲದೆ, ಆ ಎಲ್ಲ ಶಾಸನಗಳೂ ಬೇಗನೆ ಪ್ರಕಟಿಸಲಾಗುವುದೆಂದೂ ಆಶಿಸುತ್ತದೆ. (ಅಧ್ಯಕ್ಷರಿಂದ)

ಇದು ಸರ್ವಾನುಮತದಿಂದ ಅಂಗೀಕೃತವಾಯಿತು.

೪. ನಿಜಾಮ ಕರ್ಣಾಟಕ ಪ್ರಾಂತದ ಅಮೂಲ್ಯವಾದ ಎಷ್ಟೋ ಶಾಸನಗಳು ದಿನ ದಿನಕ್ಕೆ ಕೆಡಹತ್ತುತಲಿರುವುದರಿಂದ ಒಮ್ಮೆಯಾದರೂ ಎಲ್ಲ ಶಾಸನಗಳನ್ನೂ ಸಂಶೋಧಿಸಿ ಅವುಗಳ ಸಾರಾಂಶವನ್ನಾದರೂ ಪ್ರತಿ ವರ್ಷದ ತಮ್ಮ ವರದಿಯಲ್ಲಿ ಪ್ರಕಟಿಸಬೇಕೆಂದು ಈ ಸಮ್ಮೇಳನವು ಹೈದರಾಬಾದಿನ ಆರ್ಕಿಯೊಲಾಜಿಕಲ್ ಇಲಾಖೆಯವರಿಗೆ ವಿನಯವಾಗಿ ವಿನಂತಿ ಮಾಡುತ್ತದೆ.

ಸೂಚಕರು :—ಮ॥ ರಾ॥ ತಿರುಮಲೆ ತಾತಾಚಾರ್ಯ ಶರ್ಮರು.

ಅನುಮೋದಕರು :—ಮ॥ ರಾ॥ ಆಲೂರ ವೆಂಕಟರಾಯರು.

ಇದು ಸರ್ವಾನುಮತದಿಂದ ಅಂಗೀಕೃತವಾಯಿತು.

೫. ಕರ್ಣಾಟಕದ ಎಲ್ಲ ಊರುಗಳಲ್ಲಿಯೂ ಪರ ಭಾಷೆಯ ಶಾಲೆಗಳಿದ್ದು, ಅವುಗಳಿಂದ ಕನ್ನಡ ಭಾಷಾಭಿವೃದ್ಧಿಗೂ ವ್ಯವಹಾರಕ್ಕೂ ಆತಂಕವಾಗಿರುವುದರಿಂದ, ಆ ಶಾಲೆಗಳನ್ನು ಕನ್ನಡದವುಗಳಾಗಿ ಮಾಡಬೇಕೆಂದೂ, ಅನಿರ್ವಾಹ ಪಕ್ಷದಲ್ಲಿ ಆ ಶಾಲೆಗಳಲ್ಲಿ ಕನ್ನಡವನ್ನು ನಿರ್ಬಂಧದಿಂದ ಕಲಿಸಬೇಕೆಂದೂ ಈ ಸಮ್ಮೇಳನವು ಆಯಾ ಬೋರ್ಡುಗಳಿಗೆ ವಿಜ್ಞಾಪಿಸಿಕೊಳ್ಳುತ್ತದೆ.

ಸೂಚಕರು :—ಮ॥ ರಾ॥ ವೈ. ಜಿ. ನಾಡಕರಣಿಯವರು.

ಅನುಮೋದಕರು :—ಮ॥ ರಾ॥ ದಿನಕರ ದೇಸಾಯಿಯವರು.

ಸಮರ್ಥಕರು :—ಮ॥ ರಾ॥ ಗಣೇಶ ರಾಮಯಾಜಿಯವರು.

(ಅಂಗೀಕೃತವಾಯಿತು.)

೬. ಮುಂಬಯಿ ವಿಶ್ವವಿದ್ಯಾಪೀಠದವರು ಕನ್ನಡವೇ ಮುಂತಾದ ದೇಶ ಭಾಷೆಗಳ ಬೆಳೆವಣಿಗೆಯ ವಿಚಾರದಲ್ಲಿ ಇತ್ತೀಚೆಗೆ ವಿಶೇಷವಾದ ಆಸಕ್ತಿಯನ್ನು

ವಹಿಸುತ್ತಿರುವುದಕ್ಕಾಗಿ ಈ ಸಮ್ಮೇಳನವು ಅವರನ್ನು ಬಹಳವಾಗಿ ಅಭಿನಂದಿಸುತ್ತದೆ. ಆದರೆ, ಮುಂಬಯಿ ಸರಕಾರದವರು ಆ ದೇಶ ಭಾಷೆಗಳ ಪ್ರೊಫೆಸರರ ಸ್ಥಾನಗಳಿಗೆ ಅವಮರ್ಯಾದೆಯುಂಟಾಗುವಂತೆ ಅವರ ಸಂಬಳವನ್ನು ತೀರ ಕಡಿಮೆ ಮಾಡಿರುವುದನ್ನು ಈ ಸಮ್ಮೇಳನವು ತೀವ್ರವಾಗಿ ನಿಷೇಧಿಸುವುದಲ್ಲದೆ ಅವರ ಸ್ಥಾನ ಮಾನಗಳನ್ನು ದೇಶ ಭಾಷೇತರ ಪ್ರೊಫೆಸರುಗಳಿಗೆ ಗೊತ್ತುಮಾಡಿರುವಂತೆಯೇ ಏರ್ಪಡಿಸಬೇಕೆಂದು ಈ ಸಮ್ಮೇಳನವು ಆಗ್ರಹ ಪೂರ್ವಕವಾಗಿ ಸೂಚಿಸುತ್ತದೆ.

ಸೂಚಕರು :—ಮ॥ ರಾ॥ ಆಲೂರ ವೆಂಕಟರಾಯರು.

ಅನುಮೋದಕರು :—ಮ॥ ರಾ॥ ಡಿ. ಬಿ. ನಾಡಕರಣಿಯವರು.

(ಅಂಗೀಕೃತವಾಯಿತು.)

**೭.** ಮೈಸೂರು ವಿಶ್ವ ವಿದ್ಯಾ ನಿಲಯದಲ್ಲಿ ಇದುವರೆಗೆ ತಕ್ಕಮಟ್ಟಿಗೆ ಕನ್ನಡಕ್ಕೆ ಉತ್ತೇಜನವನ್ನು ಕೊಟ್ಟಿದ್ದರೂ ಕನ್ನಡದಂತೆಯೇ ಎರಡನೆಯ ಭಾಷೆಯಾಗಿ ಉರ್ದುವನ್ನೂ ಇಡಲಾಗಿದೆ. ಆದರೆ ಮೈಸೂರು ದೇಶದಲ್ಲಿ ಸರ್ವ ವ್ಯವಹಾರದಲ್ಲಿಯೂ ಆಡಳಿತದ ಕಾರ್ಯದಲ್ಲಿಯೂ ಕನ್ನಡಕ್ಕೆ ಪ್ರಧಾನ ಸ್ಥಾನವಿರುವುದರಿಂದ ವಿಶ್ವ ವಿದ್ಯಾ ನಿಲಯದಲ್ಲಿ ಕನ್ನಡವನ್ನೇ ಎರಡನೆಯ ಭಾಷೆಯನ್ನಾಗಿರಿಸಬೇಕೆಂದೂ ಉರ್ದು ಭಾಷೆಯನ್ನು ಐಚ್ಛಿಕ ವಿಷಯಗಳ ಗುಂಪಿಗೆ ಸೇರಿಸಬೇಕೆಂದೂ ಈ ಸಮ್ಮೇಳನವು ಅಭಿಪ್ರಾಯಪಡುತ್ತದೆ.

ಇದು ಅಧ್ಯಕ್ಷರಿಂದ ಸೂಚಿಸಲ್ಪಟ್ಟು ಸರ್ವಾನುಮತದಿಂದ ಅಂಗೀಕೃತವಾಯಿತು.

**೮.** ಅಖಿಲ ಕರ್ಣಾಟಕದಲ್ಲಿ ಒಂದೇ ತೆರದ ಪಠ್ಯ ಪುಸ್ತಕಗಳಾಗುವುದು ಅತ್ಯವಶ್ಯವಿರುತ್ತಾದುದರಿಂದ ಇಂತಹ ಪಠ್ಯ ಪುಸ್ತಕಗಳನ್ನು ನಿಯಮಿಸುವ ಅಧಿಕಾರವನ್ನು ಲೋಕಲ್ ಬೋರ್ಡು ಮುಂತಾದ ಸಂಸ್ಥೆಗಳು ಕೈಯಲ್ಲಿ ತೆಗೆದುಕೊಳ್ಳಬೇಕೆಂದು ಈ ಸಭೆಯು ಯಾವತ್ತು ಲೋಕಲ್ ಬೋರ್ಡುಗಳಿಗೆ ಆಗ್ರಹ ಪೂರ್ವಕವಾಗಿ ಬಿನ್ನವಿಸುತ್ತದೆ; ಮತ್ತು, ಈ ಕಾರ್ಯದಲ್ಲಿ ಶಕ್ಯವಿದ್ದಷ್ಟು ಸಹಾಯ ಮಾಡಲು ಪರಿಷತ್ತು ಸಿದ್ಧವಾಗಿರಬೇಕೆಂದು ಸೂಚಿಸುತ್ತದೆ.

ಸೂಚಕರು :—ಮ॥ ರಾ॥ ಮಹಾದೇವ ಯಶವಂತ ಗಿಂಡೆಯವರು.

ಅನುಮೋದಕರು :—ಮ॥ ರಾ॥ ಗಣೇಶ ರಾಮಯಾಜಿಯವರು.

(ಅಂಗೀಕೃತವಾಯಿತು.)

**೯.** ಮೈಸೂರು ಶಿಕ್ಷಣ ಶಾಖೆಯವರು ಕನ್ನಡದ ಮೂಲಕ ಶಿಕ್ಷಣವನ್ನು ಕೊಡುವ ಏರ್ಪಾಡು ಮಾಡಿದುದಕ್ಕಾಗಿ ಈ ಸಮ್ಮೇಳನವು ಮೈಸೂರು ಸರಕಾರವನ್ನು ಅಭಿನಂದಿಸುತ್ತದೆ. ಅಲ್ಲದೆ, ಮೈಸೂರು ದೇಶದಲ್ಲಿ ಸರ್ವ ವ್ಯವಹಾರದಲ್ಲಿಯೂ ಆಡಳಿತ ಕಾರ್ಯದಲ್ಲಿಯೂ ಕನ್ನಡಕ್ಕೆ ಪ್ರಧಾನ ಸ್ಥಾನವಿರುವುದರಿಂದ ಹೈ ಸ್ಕೂಲಿನ ಎಲ್ಲ ತರಗತಿಗಳಲ್ಲಿಯೂ ಕನ್ನಡವನ್ನು ಮಾತ್ರ ಎರಡನೆಯ ಭಾಷೆಯನ್ನಾಗಿಡಬೇಕೆಂದೂ ಉರ್ದು ಭಾಷೆಯನ್ನು ಐಚ್ಛಿಕ ವಿಷಯಗಳ ಗುಂಪಿಗೆ ಸೇರಿಸಬೇಕೆಂದೂ ಈ ಸಮ್ಮೇಳನವು ಅಭಿಪ್ರಾಯಪಡುತ್ತದೆ.

ಇದು ಅಧ್ಯಕ್ಷರಿಂದ ಸೂಚಿಸಲ್ಪಟ್ಟು ಸರ್ವಾನುಮತದಿಂದ ಅಂಗೀಕೃತವಾಯಿತು.

**೧೦.** ಉತ್ತರ ಕನ್ನಡ ಜಿಲ್ಲೆಯಲ್ಲಿ ತಾಮ್ರ ಶಾಸನಗಳೂ ತಾಳೆಯೋಲೆಯಲ್ಲಿ ಬರೆದ ಅನೇಕ ಕನ್ನಡ ಗ್ರಂಥಗಳೂ ಸಿಕ್ಕುವುವು. ಅವುಗಳನ್ನೆಲ್ಲ ಸಂಗ್ರಹ ಮಾಡಿ ಪರಿಷತ್ತಿನವರು ಆದಷ್ಟು ಬೇಗನೆ ಒಂದು ವಿವರಣ ಪಟ್ಟಿಕೆ (Descriptive Catalogue) ಯನ್ನು ಸಿದ್ಧಪಡಿಸತಕ್ಕುದೆಂದೂ, ಈ ಗ್ರಂಥ ಸಂಗ್ರಹ ಕಾರ್ಯಕ್ಕಾಗಿ ಪರಿಷತ್ತಿನವರು ಅನುಭವಶಾಲಿಗಳಾದವರನ್ನು ಈ ಪ್ರಾಂತಕ್ಕೆ ಕಳುಹಿಸುವ ಏರ್ಪಾಡನ್ನು ಮಾಡಬೇಕೆಂದೂ ಈ ಸಮ್ಮೇಳನವು ಸೂಚಿಸುತ್ತದೆ.

ಸೂಚಕರು :—ಮ॥ ರಾ॥ ಬೆಟಿಗೇರಿ ಕೃಷ್ಣ ಶರ್ಮರು.

ಅನುಮೋದಕರು :—ಮ॥ ರಾ॥ ಬಿ. ಎಂ. ಶ್ರೀಕಂಠಯ್ಯನವರು.

(ಅಂಗೀಕೃತವಾಯಿತು.)

**೧೧.** ಕನ್ನಡವು ಸುಮಾರು ಎರಡು ಸಾವಿರ ವರುಷಗಳಿಂದ ನಡೆದುಬಂದ ಪ್ರಾಚೀನ ನುಡಿಯಾಗಿರುವುದರಿಂದ ಮೈಸೂರು ವಿಶ್ವ ವಿದ್ಯಾನಿಲಯದವರು Classical Languages ಎಂದು ಕರೆಯಲ್ಪಡುವ ಭಾಷೆಗಳಲ್ಲಿ ಹಳಗನ್ನಡವನ್ನೂ ಸೇರಿಸಿದ್ದಾರೆ. ಇದೇ ಬಗೆಯಾಗಿ ಮುಂಬಯಿ ವಿಶ್ವ ವಿದ್ಯಾನಿಲಯದವರೂ ಪ್ರಾಚೀನ ಪ್ರೌಢ ಭಾಷೆಗಳ (Classical Languages) ಗುಂಪಿನಲ್ಲಿ ಹಳಗನ್ನಡವನ್ನೂ ಸೇರಿಸಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

ಸೂಚಕರು :—ಮ॥ ರಾ॥ ದಿನಕರ ದೇಸಾಯಿಯವರು.

ಅನುಮೋದಕರು :—ಮ॥ ರಾ॥ ಆಲೂರ ವೆಂಕಟರಾಯರು.

(ಅಂಗೀಕೃತವಾಯಿತು.)

**೧೨.** ಮದರಾಸು ವಿಶ್ವ ವಿದ್ಯಾನಿಲಯದ 'ಓರಿಯಂಟಲ್ ಟೈಟಲ್' ಪರೀಕ್ಷೆಯ 'ಡಿ' ಗ್ರೂಪಿನಲ್ಲಿ ತಮಿಳಿನಂತೆ ಕನ್ನಡಕ್ಕೂ ಏಕ ಭಾಷಾ ಗೌರವವನ್ನು ಕೊಡುವಂತೆ ಈ ಸಮ್ಮೇಳನವು ಸೂಚಿಸುತ್ತದೆ.

ಸೂಚಕರು :—ಮ॥ ರಾ॥ ಸಿ. ಕೆ. ವೆಂಕಟರಾಮಯ್ಯನವರು.

ಅನುಮೋದಕರು :—ಮ॥ ರಾ॥ ಕಡೆಂಗೋಡ್ಲು ಶಂಕರಭಟ್ಟರು.

(ಅಂಗೀಕೃತವಾಯಿತು.)

**೧೩.** ಕರ್ಣಾಟಕದ ಬೇರೆ ಬೇರೆ ಭಾಗಗಳಲ್ಲಿ ಸ್ಥಾಪಿಸಿರುವ ಮತ್ತು ಸ್ಥಾಪಿತವಾಗುವ ಕರ್ಣಾಟಕ ಸಾಹಿತ್ಯ ಸಂಘಗಳನ್ನು ಕರ್ಣಾಟಕ ಸಾಹಿತ್ಯ ಪರಿಷತ್ತಿಗೆ ಜೋಡಿಸಲು ಅನುಕೂಲವಾಗುವಂತೆ ಯೋಗ್ಯವಾದ ಉಪ ನಿಯಮಗಳನ್ನು ಕಾರ್ಯ ನಿರ್ವಾಹಕ ಮಂಡಲಿಯವರು ಏರ್ಪಡಿಸಿ ಪ್ರಕಟಿಸಬೇಕೆಂದು ಈ ಸಮ್ಮೇಳನವು ನಿರ್ಣಯಿಸುತ್ತದೆ.

ಸೂಚಕರು :—ಮ॥ ರಾ॥ ಸಿ. ಕೆ. ವೆಂಕಟರಾಮಯ್ಯನವರು.

ಅನುಮೋದಕರು :—ಮ॥ ರಾ॥ ದತ್ತಾತ್ರೇಯ ಬೇಂದ್ರೆಯವರು.

(ಅಂಗೀಕೃತವಾಯಿತು.)

೧೪. ಪ್ರತಿ ವರ್ಷವೂ ನಡೆಯುವ ಕರ್ಣಾಟಕ ಸಾಹಿತ್ಯ ಸಮ್ಮೇಳನದ ಜೊತೆಯಲ್ಲಿ ನಾಟಕ ಸಮ್ಮೇಳನವೂ ನಡೆಯುವಂತೆ ಸಾಹಿತ್ಯ ಸಮ್ಮೇಳನದ ಸ್ವಾಗತ ಸಭೆಯವರು ಮುಖ್ಯವಾದ ನಾಟಕ ಮಂಡಲಿಗಳಿಗೆ ಮುಂದಾಗಿ ತಿಳಿಸಿ ಏರ್ಪಾಡು ಮಾಡಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

ಸೂಚಕರು :—ಮ|| ರಾ|| ಆಲೂರ ವೆಂಕಟರಾಯರು.

ಅನುಮೋದಕರು :—ಮ|| ರಾ|| ಬೆಟಿಗೇರಿ ಕೃಷ್ಣಶರ್ಮರು.

(ಅಂಗೀಕೃತವಾಯಿತು.)

೧೫. ೧೯೩೬ನೆಯ ಇಸವಿಯಲ್ಲಿ ಕರ್ಣಾಟಕದ ಕೊನೆಯ ಬಲಾಢ್ಯವಾದ, ಮತ್ತು ಕನ್ನಡಿಗರೆಲ್ಲರಿಗೂ ಚಿರ ಕಾಲವಾಗಿ ಸ್ಫೂರ್ತಿಕೊಡುವಂತಹ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ದಿವಸ, ಇಡೀ ಕರ್ಣಾಟಕವು ವಿಜಯನಗರದಲ್ಲಿ ಒಂದುಗೂಡಿ ಕರ್ಣಾಟಕದ ಗತ ವೈಭವಕ್ಕೆ ತಕ್ಕಂತೆ ದೊಡ್ಡ ಪ್ರಮಾಣದಿಂದ ಷಟ್ ಶತತಮ ಸಾಂವತ್ಸರಿಕೋತ್ಸವವನ್ನು ಜರುಗಿಸಬೇಕೆಂದು ಶ್ರೀಮಾನ್ ಆಲೂರ ವೆಂಕಟರಾಯರು ತೆಗೆದಿರುವ ಆಲೋಚನೆಗೆ ಈ ಸಭೆಯ ಸಂಪೂರ್ಣ ಸಹಾನುಭೂತಿಯಿರುತ್ತದೆ; ಮತ್ತು ಕರ್ಣಾಟಕಸ್ಥರೆಲ್ಲರೂ ಈ ವಿಚಾರವನ್ನು ಕುರಿತು ಲಕ್ಷ್ಯ ಪೂರಯಿಸುವವರಾಗಿ ಈ ಸಮ್ಮೇಳನವು ಆಶಿಸುತ್ತದೆ.

ಸೂಚಕರು :—ಮ|| ರಾ|| ವೆಂಕಟರಮಣಭಟ್ಟರು.

ಅನುಮೋದಕರು :—ಮ|| ರಾ|| ಗಣೇಶ ರಾಮಯಾಜಿಯವರು.

ಸಮರ್ಥಕರು :—ಮ|| ರಾ|| ಮಹಾಬಲೇಶ್ವರ ತಿಮ್ಮಪ್ಪಸೆಟ್ಟರು,
ಮ|| ರಾ|| ಕಡೆಂಗೋಡ್ಲು ಶಂಕರಭಟ್ಟರು.

ಈ ನಿರ್ಣಯವು ಸರ್ವಾನುಮತದಿಂದ ಅಂಗೀಕೃತವಾಯಿತು.

---

## ಬರಮಾಡುವ ಹಾಡು

೧

ಇರಲಿ ಸ್ವಾಗತವಿಂದು ಕನ್ನಡ ತಾಯಕರುಳಿನ ಬಳಗಕೆ
ಹಿರಿಯರಿಗೆ ಕಿರಿಯರಿಗೆ ಹರೆಯದ ತರುಳರಿಗೆ ಕಾರ್ವಾರಕೆ ||
ವಿಬುಧರಿಗೆ ಕವಿಗಳಿಗೆ ಸುರಸ ಗ್ರಂಥಗಳ ರಚಿಸಿದರಿಗೆ
ವಿಭವ ಕನ್ನಡಕಾಸಿಸುವ ವೈಯಾಕರಣ ವಾಗ್ಮಿಗಳಿಗೆ ||
ವೈದ್ಯ ಜಾತಕ ಗಣಿತದೊಲುಮೆಯ ಪಡೆದರಿಗೆ ಲೆಕ್ಕಿಗರಿಗೆ
ವೇದ ವೇದಾಂತಗಳ ಗಂಗೆಯ ಕನ್ನಡದಿ ಹರಿಸಿದರಿಗೆ ||
ಹಾಡು ಲಾವಣಿ ಬಿಡಿಯ ಕವನವ ಕಟ್ಟಿ ಜನಸಾಮಾನ್ಯಕೆ
ನೀಡಿ ಹರುಷವನುರುಹುಕೊಟ್ಟ ಮಹಾನುಭಾವರ ಬಿಜಯುಕೆ ||

ಚಿತ್ರ ಗಾಯನ ನೃತ್ಯ ವಾದ್ಯದ ಹದವರಿವ ಪಟು ನಟರಿಗೆ
ಕೆತ್ತನೆಯ ಕೈಗಾರಿಕೆಗೆ ವ್ಯವಸಾಯಕೆದೆಯಿತ್ತವರಿಗೆ ॥
ಕನ್ನಡದ ಸಿರಿವನೆಗೆಸೆವ ಮಣಿಗನ್ನಡಿಗಳಂತಿಹರಿಗೆ
ಕನ್ನಡದ ಬನದೊಳಗುಲಿವ ಕೋಗಿಲೆಗಳಿಗೆ ವಿದುಷಿಯರಿಗೆ ॥
ಇರಲಿ ಸ್ವಾಗತವಿಂದು............

೨

ಬಡಗ ಕನ್ನಡವೆಂದು ಕರೆವರು ನಾವು ನೆಲಸಿಹ ನಾಡಿಗೆ
ನುಡಿಯು ಕನ್ನಡವದರ ಗೆಳೆತನವಿಹುದು ಕೊಂಕಣಿ ಮಾತಿಗೆ ॥
ಪಡುವಲಿಗೆ ಬಲುಗಡಲು ಮಲೆಗಳ ಸಾಲು ಬಳಸಿದೆ ಮೂಡಲು
ಗಿಡ ಮರದ ಹಸುರನ್ನು ಮುಗಿಲಿನ ನೀಲದೊಂದಿಗೆ ಬೆಸೆವೊಲು ॥
ಬಾಳೆ ಹಲಸಿನಿಮಾವು ತೆಂಗಡಕೆಗಳ ಮೇಲೆಲೆವಳ್ಳಿಯು
ಈಳೆ ಮಾದಳ ಕಂಚಿ ಲಿಂಬೆಗಳಿಹವು ಮೆಣಸೇಲಕ್ಕಿಯು ॥
ಸೂಜಿಮಲ್ಲಿಗೆ ದುಂಡುಮಲ್ಲಿಗೆಯೊಡನೆ ಕತ್ತುರಿಮಲ್ಲಿಗೆ
ಜಾಜಿಸಂಪಗೆ ನಾಗಸಂಪಗೆ ಹೊನ್ನೆಸಳ ಸೇವಂತಿಗೆ ॥
ಹಳ್ಳ ಕೆರೆ ಹೊಳೆ ತುಂಬಿ ಹರಿವುದು ಕೊರತೆ ಕಾಣದು ನೀರಿಗೆ
ನೆಲ್ಲು ಕಬ್ಬಿನ ಗದ್ದೆ ತೋಟಗಳಿಹವು ದುಡಿತದ ಬಾಳ್ವೆಗೆ ॥
ಘಟ್ಟವೆಂಬುದು ಮೇಲು ನೆಲವಡಿ ನೆಲವು ತಾನು ಕರಾವಳಿ
ಪಟ್ಟೆ ಭಾರ್ಗವರಾಮ ಬಾಣಕೆ ಕಡಲು ರಾಯನ ಬಿಡುವಳಿ ॥
ಭಟ್ಟಕಳ ಬನವಾಸಿ ಸೋಂದೆಯು ಹಳೆಯ ಕಾಲದ ಪಟ್ಟಣ
ಸೆಟ್ಟಿ ಬಿಟ್ಟಲ್ಲಾಯ್ತು ಪಟ್ಟಣವೆಂಬುದೇ ನುಡಿಯಿೀಗಿನ ॥
ಹಾಡುವಳಿ ಭಟ್ಟಾಕಲಂಕರು ಕನ್ನಡಕ್ಕೆ ವ್ಯಾಕರಣವ
ಮಾಡಿ ಕನ್ನಡ ಶಾಕಟಾಯನರೈದಿದರು ನಿರ್ವಾಣವ ॥
ಭಟಕಳವು ಕನ್ನಡದ ನಾಡಿಗೆ ಸಲುವ ರೇವೆನಿಸಿದ್ದರೂ
ಘಟಿಸಿಬಹುದೆಂದೆಂಬ ಹಾರೈಕೆಯಲಿ ನಿಂತಿಹೆವೆಲ್ಲರು ॥
ಉಪ್ಪಿನಾಗರವೊಂದೆಡೆಗೆ ಗೆರಸೊಪ್ಪೆಯಲಿ ಶರಾವತಿ
ಧೊಪ್ಪನುರುಳ್ವ ಜಲ ಪ್ರಪಾತವು ಧರೆಯೊಳೊಂದು ಚಮತ್ಕೃತಿ ॥
ಕಾಶಿಗೂ ಮಿಗಿಲೆನಿಸುವುದು ಗೋಕರ್ಣ ಪುಣ್ಯ ಕ್ಷೇತ್ರವು
ದಾಶರಥಿಯಿಂದ್ರಜನು ಕಂಡ ಮಹಾಬಳೇಶ್ವರ ನಿಳಯವು ॥
ಕೊಲೆ ಮಸಗೆ ಬಿಜ್ಜಳನ ಹೊಳಲೊಳಗುಳಿವುಗಾಣದೆ ಬಳಲುತ
ನೆಳಲ ಸೋವಿದ ಬಸವ ದೇವರಿಗುಳಿವೆಗಾಯಿತು ಸ್ವಾಗತ ॥
ಹೆಚ್ಚಿನಂಶದಿ ಹೈಗ ನಾಡಿದು ಜಿನ ಬಸತಿಗಾವಾಸವು
ಅಚ್ಚಗನ್ನಡ ಹಳೆಯ ಮಾತುಗಳೆಡೆಯು ಕಂಡ ಪ್ರದೇಶವು ॥
ಇರಲಿ ಸ್ವಾಗತವಿಂದು............

೩

ತಾಯ ನುಡಿಯುನ್ನತಿಯ ಮಾಡುವುದಾರಿಗಳೆ ನಮ್ಮೂರಿಗೆ
ತಾಯ ಸೆರಗೆಂದೆಣಿಸಿ ದರುಸನ ಕೊಡಲು ತೆರಳಿಹಿರಿಲ್ಲಿಗೆ ||
ಸಿಸುವು ತಾಯೆಡೆಯರಸಿ ಬಂದಂತಿಹುದು ನಿಮ್ಮಯ ಬರವಿದು
ಹಸಿದವಗೆ ಹಾಲುಣಿಸು ಬಡವಗೆ ಕೊಪ್ಪರಿಗೆ ಹೊನ್ನಾದುದು ||
ಹುರಿಯ ಕಡುಪಿನ ಕೆಚ್ಚೆದೆಯ ಗಟ್ಟಿಗರ ಕನ್ನಡ ಕುಡಿಯಲಿ
ಮಿರುಗುವೆಳೆ ಮುಗುಳರಳಿ ಕಂಪನು ಕೊಡಲಿ ಸೊಂಪಿಮ್ಮಡಿಸಲಿ ||
ಒಡೆಯ ಶ್ರೀ ಕೃಷ್ಣೇಂದ್ರ ಪೊಡವಿಪಗಿರಲಿ ಜಯ ಜಯಕಾರವು
ಒಡತಿ ಕನ್ನಡ ನುಡಿಗೆ ನಾಡಿಗೆ ಭದ್ರ ಶುಭ ಮಾಂಗಲ್ಯವು ||
ಇರಲಿ ಸ್ವಾಗತವಿಂದು............

**ಭಟಕಳದ ಪ್ರಭು ವೆಂಕಟರಾವ್.**

---

## ಸ್ವಾಗತಾಧ್ಯಕ್ಷರ ಭಾಷಣ

ವಾಗರ್ಥಾವಿವ ಸಂಪೃಕ್ತೌ ವಾಗರ್ಥಪ್ರತಿಪತ್ತಯೇ ।
ಜಗತಃ ಪಿತರೌ ವಂದೇ ಪಾರ್ವತೀ ಪರಮೇಶ್ವರೌ ||

ಮಾನ್ಯ ಬಂಧು ಭಗಿನಿಯರೇ, ಉತ್ತರ ಕನ್ನಡ ಜಿಲ್ಲೆಯ ಸಾಹಿತ್ಯ ಸೇವಕರ, ಹಾಗೂ ಪರಿಷತ್ತಿನ ಸ್ವಾಗತ ಮಂಡಲದ ಪರವಾಗಿ ನಾನು ತಮ್ಮಗಳೆಲ್ಲರಿಗೆ ಸುಖಾಗಮನವನ್ನು ಬಯಸಿ, ಬಡವರಾದ ನಮ್ಮ ಆಮಂತ್ರಣವನ್ನು ಬಂಧು ಪ್ರೇಮದಿಂದ ಸ್ವೀಕರಿಸಿ ಇಷ್ಟು ದೂರದ ಪ್ರವಾಸದ ಕ್ರಮಗಳನ್ನು ಸಹಿಸಿ ಇಲ್ಲಿಗೆ ಬಂದುದಕ್ಕಾಗಿ ತಮ್ಮೆಲ್ಲರ ಉಪಕಾರವನ್ನು ಸ್ಮರಿಸುವುದಕ್ಕೆ ನನಗೆ ಅತ್ಯಾನಂದವಾಗುತ್ತದೆ.

೨. ಈ ನಮ್ಮ ಜಿಲ್ಹೆಯಲ್ಲಿ ಈ ತೆರದ ಸಮ್ಮೇಳನವು ಇದೇ ಮೊದಲನೆಯದು. ಸಾಹಿತ್ಯ ಸೇವೆಯ ದೃಷ್ಟಿಯಿಂದ ವಿಚಾರ ಮಾಡಿದರೆ ಕರ್ನಾಟಕ ಸಾಹಿತ್ಯ ದೇವಿಗೆ ನಮ್ಮಿಂದಾದ ಸೇವೆಯು ಅತ್ಯಲ್ಪವಾಗಿರುವುದೆಂದು ಹೇಳಬಹುದು. ಆರ್ಥಿಕ ದೃಷ್ಟಿಯಿಂದ ನಮ್ಮ ಜಿಲ್ಹೆಯು ಕನಿಷ್ಠ ದರ್ಜೆಯದಾದರೂ, ಇದರ ಮೇಲೆ ಸೃಷ್ಟಿ ದೇವತೆಯ ಪೂರ್ಣ ಕೃಪಾ ಕಟಾಕ್ಷವುಂಟು. ನಿಸರ್ಗ ಸೌಂದರ್ಯವು ಈ ಜಿಲ್ಹೆಯ ಪ್ರತಿಯೊಂದು ಮೂಲೆ ಮುರುಕಿನಲ್ಲಿಯೂ ತುಂಬಿರುವುದು. ಅಗಾಧವಾದ ಜಲಸಂಚಯ, ಉನ್ನತವಾದ ಪರ್ವತ ಶ್ರೇಣಿ, ನಿಬಿಡವಾದ ಅರಣ್ಯ, ನಿರಭ್ರವಾದ ಆಕಾಶ, ಸದಾ ನಯನ ಮನೋಹರವಾದ ಪ್ರಾಕೃತಿಕ ದೃಶ್ಯಗಳು (Landscape), ಲತಾ ಪುಷ್ಪ ಫಲಗಳಿಂದ ನಲಿದಾಡುವ ತೋಟಗಳು, ಇವುಗಳ ಜೊತೆಗೆ ಸೌಜನ್ಯಶಾಲಿಗಳಾದ ಜನರು, ಇಂತಹ ಜನರ ನಿರ್ಮಲಾಂತಃಕರಣ ಪೂರಿತವಾದ ಆದರಾತಿಥ್ಯ—ಇವೆಲ್ಲವೂ ಪರಸ್ಥಳೀಯರ ಮನಸ್ಸನ್ನು ಎಳೆದುಕೊಳ್ಳುತ್ತವೆಂಬುದರಲ್ಲಿ ಸಂದೇಹವಿಲ್ಲ. ಅದರಲ್ಲೂ ಈಗ ತಾವು ಸೇರಿರುವ ಈ ಜಿಲ್ಹೆಯ ಮುಖ್ಯ ಸ್ಥಳದಲ್ಲಿ ಸೃಷ್ಟಿ ಸೌಂದರ್ಯಾತಿಶಯವನ್ನೂ

ರಮಣೀಯತ್ವವನ್ನೂ ಕಣ್ಣುತುಂಬ ನೋಡಬಹುದು. ಬೇರೆ ಯಾವ ಗುಣಗಳೂ ಈ ಊರಿನಲ್ಲಿ ಕಂಡುಬಾರದಿದ್ದರೂ, ಮೇಲ್ಕಂಡ ಸಂಗತಿಗಳನ್ನು ನೆನಸಿ ತಮ್ಮನ್ನೆಲ್ಲ ಈ ಜಿಲ್ಹೆಯ ಉತ್ತರ ತುದಿಯೂ ಕರ್ನಾಟಕದ ಪಶ್ಚಿಮ ಸೀಮೆಯೂ ಆದ ಮತ್ತು ಕರ್ನಾಟಕ ಭಾಷಾ ದೃಷ್ಟಿಯಿಂದ ಬೇರೆ ಭಾಗಗಳಿಗಿಂತ ವಿಲಕ್ಷಣವಾದ ಈ ಕಾರವಾರಕ್ಕೆ ಬರಮಾಡಿಕೊಂಬುದರಲ್ಲಿ ಸ್ವಾಗತ ಮಂಡಳದ ಚಾತುರ್ಯವು ತಮ್ಮ ಲಕ್ಷ್ಯಕ್ಕೆ ಬಾರದೆ ಉಳಿಯಲಿಕ್ಕಿಲ್ಲ; ಇರಲಿ.

೩. ಬ್ರಿಟಿಷರ ಆಗಮನದಿಂದ ನಮ್ಮ ಉತ್ತರ ಕನ್ನಡಿಗರ ಸ್ಥಿತಿಯು ವಿಪರೀತವಾಗಿ ಪರಿಣಮಿಸಿರುತ್ತದೆ. ನೈಸರ್ಗಿಕ ಗಡಿಗಳನ್ನು ದುರ್ಲಕ್ಷಿಸಿ ಕೃತ್ರಿಮ ಗಡಿಗಳನ್ನು ನಿರ್ಮಿಸಿದ್ದರಿಂದ ಕನ್ನಡ ಭಾಷಾಭಿವೃದ್ಧಿಗೆ ತುಂಬ ತೊಂದರೆಗಳಾಗಿರುವುವು. ಆಳರಸರು ತಮ್ಮ ರಾಜ್ಯಭಾರದ ಅನುಕೂಲತೆಗಾಗಿ ಏರ್ಪಡಿಸಿದ ದೇಶಭಾಗಗಳಿಂದ ಕನ್ನಡ ನಾಡಿನ ಪೂರ್ವ ಸಂಸ್ಕೃತಿಯು ಭಿನ್ನವಾಗಿ ಈಗಣ ಹೀನಾವಸ್ಥೆಯನ್ನು ಹೊಂದಿರುತ್ತದೆಂದು ಹೇಳುವುದು ತಪ್ಪಾಗಲಿಕ್ಕಿಲ್ಲ. ಕ್ರಿಸ್ತ ಶಕದ ೨ನೆಯ ಶತಮಾನದ ಸುಮಾರಿಗೆ, ಎಂದರೆ ಈಗ ಪ್ರಚಾರದಲ್ಲಿರುವ ವ್ಯಾಸ ಕೃತ ಮಹಾಭಾರತವು ಅಸ್ತಿತ್ವದಲ್ಲಿ ಬಂದಾಗ, ಉತ್ತರ ಕನ್ನಡದ ಸಮುದ್ರ ಪ್ರಾಂತಕ್ಕೆ ಕುಂತಲವೆಂಬ ಹೆಸರಿದ್ದಿತೆಂದು ತೋರುತ್ತದೆ. ಮುಂದೆ ೫ನೆಯ ಶತಮಾನದಲ್ಲಿ ಕದಂಬ ಕುಲದ ರಾಜರು ಬನವಾಸಿಯಲ್ಲಿ ಆಳುವಾಗ ಅಂಕೋಲಾ ತಾಲೂಕಿನ ಗಂಗಾವಳೀ ನದಿಯಿಂದ ದಕ್ಷಿಣಕ್ಕೆ ಉಡುಪಿಯ ತಾಲೂಕಿನ ಕಲ್ಯಾಣಪುರ ಹೊಳೆಯ ವರೆಗಿನ ಸೀಮೆಗೆ ಹೈವಯೂಹೈಗ ನಾಡೆಂದು ಕರೆಯುತ್ತಿದ್ದರೆಂದೂ ಅದಕ್ಕೂ ದಕ್ಷಿಣಕ್ಕೆ ನೇತ್ರಾವತೀ ಹೊಳೆಯ ವರೆಗಣ ಪ್ರಾಂತಕ್ಕೆ ತುಳುವು ನಾಡೆಂದು ತಿಳಿಯುತ್ತಿದ್ದರೆಂದೂ ಉಲ್ಲೇಖಗಳಿರುವುವು. ಈಗಲೂ ಗಂಗಾವಳೀ ಹೊಳೆಯ ದಕ್ಷಿಣಕ್ಕಿರುವ ದೇಶದ ಕನ್ನಡ ಭಾಷೆಗೂ ಅದಕ್ಕೂ ಉತ್ತರಕ್ಕಿರುವ ಅಂಕೋಲಾ, ಕಾರವಾರ ತಾಲೂಕಗಳಲ್ಲಿಯ ಜನರಾಡುವ ಕನ್ನಡ ಭಾಷೆಗೂ ಬಹಳ ವ್ಯತ್ಯಾಸವಿದೆ. ಬಹು ವರ್ಷಗಳಿಂದ ಈಗಿನ ಉತ್ತರ ಕನ್ನಡ ಜಿಲ್ಹೆಯಲ್ಲಿ ಅನೇಕ ಸಂಸ್ಕೃತಿಗಳ, ಎಂದರೆ ಆರ್ಯ, ಆರ್ಯೇತರ ಸಂಸ್ಕೃತಿಗಳ, ಮಿಶ್ರಣವಾಗಿರುವುದರಿಂದ, ಹಾಗೂ ರಾಜಕೀಯ ಆರ್ಥಿಕ ವಿಚಾರಗಳಲ್ಲಿ ಈ ಕನ್ನಡೇತರ ಜನಗಳು ಮೂಲ ಕನ್ನಡಿಗರಿಗಿಂತ ಮುಂದೆ ಸಾಗಿ ಹೋದುದರಿಂದ, ಬೇರೆಬೇರೆ ಸ್ವಭಾವದ ಮತ್ತು ಸಂಸ್ಕೃತಿಗಳ ಈ ಜನಗಳಲ್ಲಿ ಮೂಲ ನಿವಾಸಿಗಳಾದ ಕನ್ನಡಿಗರ ಬಗ್ಗೆ ಸಹಾನುಭೂತಿಯಿಲ್ಲದೆ ಇದ್ದುದರಿಂದಲೂ, ಉತ್ತರ ಕನ್ನಡಿಗರ ಸ್ಥಿತಿಯು ಈಗ ದೃಗ್ಗೋಚರವಾಗುವಂತೆ ಆಗಿರುವುದು. ಕನ್ನಡ ಸಾಹಿತ್ಯದ ಏಳಿಗೆಯ ದೃಷ್ಟಿಯಿಂದ ವಿಚಾರ ಮಾಡಿದರೆ ಉತ್ತರ ಕನ್ನಡಿಗರು ಕರ್ನಾಟಕದ ಉಳಿದ ಭಾಗಗಳಿಗಿಂತ ಈ ವಿಷಯದಲ್ಲಿ ಏಕೆ ಹಿಂದುಳಿದಿರುವರೆಂಬ ಪ್ರಶ್ನೆಗೆ ಇದೇ ಮುಖ್ಯ ಕಾರಣವೆಂದು ತಿಳಿದುಬರುವುದು. ಕನ್ನಡ ನುಡಿ ಮಾತೃಭಾಷೆಯುಳ್ಳದ ಅಲ್ಪಸಂಖ್ಯಾಕರಾದ ಸಮಾಜದವರು ಸ್ವಸಂತೋಷದಿಂದ ಕನ್ನಡ ನುಡಿಯನ್ನು ತಮ್ಮದಾಗಿ ಮಾಡಿಕೊಳ್ಳಲು ಯಾವ ಕಾಲದ ವರೆಗೆ ಇಷ್ಟಪಡುವುದಿಲ್ಲವೋ ಅಲ್ಲಿಯ ವರೆಗೆ ತಮ್ಮ ಸಂಖ್ಯಾ ಬಾಹುಲ್ಯದಿಂದ ಅವರ ಮೇಲೆ ತಮ್ಮ ನಡೆ ನುಡಿಗಳನ್ನು ಬಲಾ

ತ್ಕಾರದಿಂದ ಹೊರಿಸುವುದಕ್ಕೆ ಉದ್ಯುಕ್ತರಾಗುವುದು ಈಗಣ ಮತಿ ಸ್ವಾತಂತ್ರ್ಯ ಯುಗದಲ್ಲಿ ಹಿತಕರವಾಗಲಿಕ್ಕಿಲ್ಲ. ಹಾಗೂ, ಈ ತೆರದ ಅಶ್ಲಾಘ್ಯವಾದ ಪ್ರಯತ್ನ ವನ್ನು ಉತ್ತರ ಕನ್ನಡಿಗರು ಇದುವರೆಗೂ ಮಾಡಿರುವುದಿಲ್ಲೆಂದು ನಾನು ಹೇಳಬಲ್ಲೆನು. ಆದರೆ ಇದೇ ತೆರದ ಔದಾರ್ಯವನ್ನೂ ಸೌಜನ್ಯವನ್ನೂ ಕನ್ನಡದ ಬಗ್ಗೆ ನಮ್ಮ ಕನ್ನ ಡೇತರ ಬಂಧುಗಳು ಕೆಲವು ಕಡೆಗಳಲ್ಲಿ ತೋರಿಸಿರುವುದಿಲ್ಲೆಂದು ಬಹು ದುಃಖದಿಂದ ಹೇಳಬೇಕಾಗಿದೆ.

೪. ಪ್ರಪಂಚದಲ್ಲಿ ಸಂಸ್ಕೃತಿ ಹೊಂದಿದ ಎಲ್ಲಾ ದೇಶಗಳಲ್ಲಿಯ ಸಾರಸ್ವತವು ಆ ಆ ದೇಶಗಳ ಸಂಸ್ಕೃತಿಯ ಮುಖ್ಯ ನಿದರ್ಶಕವಾಗಿರುವುದು. ಭಾಷಾ ವೈಚಿತ್ರ್ಯ ಗಳಿಂದ ಇಂತಹ ಸಂಸ್ಕೃತಿಯ ಬಾಹ್ಯ ರೂಪವು ಬೇರೆ ಬೇರೆಯಾಗಿದ್ದರೂ ಸಾರಸ್ವತಕ್ಕೆ ಜಾತಿ ಕುಲ ಗೋತ್ರ ವರ್ಣ—ಇವುಗಳ ಭೇದವಿಲ್ಲ; ಅದು ವಿಶ್ವಕುಟುಂಬಿಯಾಗಿರು ತ್ತದೆ. ವೇದಾಂತದ ಪರಿಭಾಷೆಯಲ್ಲಿ ಮಾತಾಡುವುದಾದರೆ, ವಿವಿಧತ್ವದಲ್ಲಿ ಏಕತ್ವ ವೆಂಬ ನಿಯಮದಂತೆ, ಸಂಸ್ಕೃತಿಗಳ ಅಂತರಂಗವು ಒಂದೇ ಎಂದು ನನ್ನ ಅಭಿಪ್ರಾಯ ವಿದೆ. ಆದುದರಿಂದ ಭಾರತವರ್ಷದಲ್ಲಿ ಸಾವಿರಾರು ವರ್ಷಗಳಿಂದ ಏಕತ್ರ ವಾಸವಾ ಗಿರುವ ನಾವು ಕನ್ನಡ ಮರಾಠಿ ಬಂಗಾಲ ಹಿಂದಿ ತೆಲುಗು ತಮಿಳು—ಇತ್ಯಾದಿ ಭಾಷಾ ವಿಭಾಗಗಳ ಮೂಲಕ ನಮ್ಮ ನಿಜವಾದ ಐಕ್ಯವನ್ನು ಮರೆಯಕೂಡದು. ಈಗಣ ಪರಿಸ್ಥಿತಿಯಲ್ಲಂತೂ ಮೊದಲೇ ಶತಮುಖವಾಗಿರುವ ನಮ್ಮ ಸಣ್ಣ ಪುಟ್ಟ ಕಲಹಗಳನ್ನು ಮರೆತು ದೇಶ ಕಾಲಕ್ಕನುಸಾರವಾಗಿ ಕೃತಿಗಳಿಂದ ಬೇರೆ ಭಾಷೆಯ ಅಭಿಮಾನಿಗಳಿಗೆ ಪ್ರತ್ಯಕ್ಷವಾಗಿ ಅಸಮಾಧಾನವಾಗದಂತೆ ವರ್ತಿಸುವುದು ನಮ್ಮೆಲ್ಲರ ಕರ್ತವ್ಯವೆಂದು ನನ್ನ ಅಲ್ಪ ಮತಿಗೆ ತೋರುತ್ತದೆ.

೫. ಇದರಂತೆಯೇ, ಸಾಹಿತ್ಯಾಭಿವೃದ್ಧಿಗೂ ರಾಜಕಾರಣಕ್ಕೂ (Politics) ಅನ್ಯೋನ್ಯ ಸಂಬಂಧವಿದೆ. ಪ್ರಸ್ತುತ ಕಾಲದಲ್ಲಿಯೂ ಕೂಡ ರಾಜಾಶ್ರಯದಲ್ಲಿರುವ ಮೈಸೂರ ಕನ್ನಡ ಸಾರಸ್ವತವು ಎಷ್ಟರ ಮಟ್ಟಿಗೆ ಮುಂದುವರಿದಿರುವುದೆಂಬುದನ್ನು ವಿಚಾರ ಮಾಡಿದರೆ ನನ್ನ ಹೇಳಿಕೆಯ ಯಥಾರ್ಥತೆಯು ಕಂಡುಬರುವುದು. ಮೈಸೂರ ಸಂಸ್ಥಾನ ಹೊರತಾಗಿ ಉಳಿದ ಪೂರ್ವ ಕಾಲದ ಕರ್ಣಾಟಕವು ಈಗ ಚದರಿಹೋದದ್ದ ರಿಂದ ಈಗಣ ದುರವಸ್ಥೆಯನ್ನು ಕನ್ನಡ ಸಾಹಿತ್ಯವು ಹೊಂದಿರುತ್ತದೆಂಬುದನ್ನು ಯಾರೂ ಅಲ್ಲಗಳೆಯಲಿಕ್ಕಿಲ್ಲ. ಇನ್ನು ಮುಂದೆಯಾದರೂ ಕನ್ನಡ ಸಾರಸ್ವತವು ವೃದ್ಧಿ ಯಾಗಿ ಮೊದಲಿನಂತೆ ಉನ್ನತಾವಸ್ಥೆಯನ್ನು ಹೊಂದುವುದಾದರೆ ಸಾಹಿತ್ಯ ಸೇವಕ ರೆಲ್ಲರೂ ಈಗಿಗಿಂತಲೂ ಪ್ರಚಲಿತ ರಾಜಕಾರಣ, ಹಾಗೂ ಆಂದೋಲನಗಳಲ್ಲಿ ಹೆಚ್ಚು ಹೆಚ್ಚಾಗಿ ಪರಿಶ್ರಮ ಮಾಡಬೇಕಾಗುವುದು. ನಾವು ಸಾಹಿತ್ಯ ಭಕ್ತರಾದುದರಿಂದ ಬೇರೆ ಉಪಾಧಿಗಳನ್ನು ಹಚ್ಚಿಕೊಳ್ಳುವುದೇನೆಂದು ಔದಾಸೀನ್ಯದಿಂದ ಈಗಣ ಆಂದೋ ಲನಗಳಿಂದ ಅಗಲಿರುವುದಾಗಲೀ ನ್ಯಾಯತಃ ಪ್ರಾಪ್ತವಾದ ಪರಿಸ್ಥಿತಿಯಿಂದ ದೂರ ಇರುವುದಾಗಲೀ ಹಿತಕರವಾಗಲಿಕ್ಕಿಲ್ಲ. ಸಾಹಿತ್ಯ ದೇವತೆಗೆ ಎಲ್ಲ ವಿಧಗಳಿಂದಲೂ, ಎಂದರೆ ಭಕ್ತಿಶಾಸ್ತ್ರದಲ್ಲಿ ಹೇಳಿರುವ ನವ ವಿಧ ಭಕ್ತಿ ಭಾವಗಳಿಂದಲೂ, ಸೇವೆ ಮಾಡ

ಬೇಕಾಗುವುದು. ಈ ಪ್ರಕಾರದಿಂದ ಮಾಡುತ್ತಿರುವ ಸೇವೆಯ ಫಲವು ಸೇವಕರ ಅಧಿಕಾರ ಭೇದದಿಂದ ಹೆಚ್ಚು ಕಡಿಮೆ ಯೋಗ್ಯತೆಯದಾದರೂ ಅವರೆಲ್ಲರೂ ಒಂದೇ ದೇವತೆಯ ಉಪಾಸಕರಾಗಿದ್ದಾರೆಂದು ತಿಳಿದುಕೊಂಡರೆ ಈಗ ಕರ್ನಾಟಕದ ಒಂದು ಭಾಗದವರು ಇನ್ನೊಂದು ಭಾಗದವರ ಜಗ್ಗೆ ತೋರಿಸುವ ಉದಾಸೀನತೆಯಾಗಲಿ ತಾತ್ಸಾರ ಬುದ್ಧಿಯಾಗಲಿ ಯುಕ್ತವಲ್ಲ. ಮತ್ತೊಂದು ಸಂಗತಿಯೇನೆಂದರೆ, ಕನ್ನಡ ಸಾಹಿತ್ಯವು ಮರಾಠಿ, ಹಿಂದಿ, ಅಥವಾ ಬಂಗಾಲಿ—ಇತ್ಯಾದಿ ಸಾಹಿತ್ಯಗಳಂತೆ ಪ್ರೌಢಾವಸ್ಥೆಗೆ ಬಾರದಿದ್ದುದರಿಂದ ಕನ್ನಡಿಗರು ಸ್ವಲ್ಪ ಕಾಲದ ಹಿಂದಿನ ವರೆಗೆ ಅಖಿಲ ಭಾರತದ ರಾಜಕಾರಣಿಕ ಕಾರ್ಯಗಳಲ್ಲಿ ಹಿಂದುಳಿದವರೆಂದು ಹೇಳಿಸಿಕೊಳ್ಳುತ್ತಿದ್ದರು. ಆದರೆ ಸುದೈವದಿಂದ ಇತ್ತೀಚೆಗೆ ಈ ಆರೋಪವನ್ನು ಕನ್ನಡಿಗರ ಮೇಲೆ ಹೊರಿಸುವ ಧೈರ್ಯವು ನಮ್ಮ ಅನ್ಯ ಭಾಷಾ ಬಂಧುಗಳಲ್ಲಿರಲಾರದೆಂದು ನಾನು ಭಾವಿಸುತ್ತೇನೆ. ತಾತ್ಪರ್ಯವೇನೆಂದರೆ, ಕನ್ನಡ ಸಾರಸ್ವತವು ಅನೇಕ ಕಾರಣಗಳ ಮೂಲಕ ಊರ್ಜಿತಾವಸ್ಥೆಗೆ ಬಾರದಿದ್ದುದರಿಂದ ಕನ್ನಡಿಗರ ಸರ್ವಾಂಗೀಣವಾದ ಅಭಿವೃದ್ಧಿಗೆ ದೊಡ್ಡ ತೊಂದರೆಯಾಗಿದ್ದಿತು. ನಾಲ್ಕಾರು ರಾಜ್ಯದಾಡಳಿತಗಳಲ್ಲಿ ಹಂಚಿಹೋದ ಕನ್ನಡಿಗರಿಗೆ ತಮ್ಮ ದೂರದ ಬಾಂಧವರ ಹಂಬಲು ಸಹ ಇರದೆ ತಮ್ಮ ತಮ್ಮ ಪ್ರದೇಶವಷ್ಟೇ ಶುದ್ಧ ಕನ್ನಡ ನಾಡೆಂಬ ಭ್ರಮೆಯಾಗಿದ್ದಿತು. ಇದಕ್ಕೆ ಸಣ್ಣ ದೃಷ್ಟಾಂತವೇನೆಂದರೆ, ಈ ಹೊತ್ತಿಗೂ ನಮ್ಮ ಉತ್ತರ ಕನ್ನಡ ಜಿಲ್ಹೆಯನ್ನು ಕಾರವಾರ ಜಿಲ್ಹಾ ಎಂತಲೇ ಹೊರಗಿನ ಜಿಲ್ಹೆಗಳ ಕನ್ನಡಿಗರು ಸಹ ಸಂಬೋಧಿಸುತ್ತಾರೆ. ಕಾರವಾರ ಜಿಲ್ಹೆಯಲ್ಲಿ ತುಂಬ ಕನ್ನಡ ನುಡಿಯುವರೇ ಇರಬಹುದೆಂಬ ಕಲ್ಪನೆಯು ಕೂಡ ಪ್ರತ್ಯಕ್ಷ ಇಲ್ಲಿಗೆ ಬಂದು ಹೋದವರಿಗಲ್ಲದೆ ಇತರರಿಗೆ ಇರಲಿಲ್ಲೆಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಇಂತಹ ಸ್ಥಿತಿಗೆ ಮುಖ್ಯ ಕಾರಣವು, ರಾಜಕಾರಣ ಮತ್ತು ಅದಕ್ಕೆ ಸಂಬಂಧಿಸಿದ ಇತರ ವಿಷಯಗಳಲ್ಲಿ ಕನ್ನಡಿಗರ ಪ್ರಗತಿಯು ಕನ್ನಡೇತರ ಬಂಧುಗಳಿಗಿಂತ ಕಡಿಮೆಯಾದುದೇ ಮತ್ತು ಮೇಲೆ ಹೇಳಿದಂತೆ ರಾಜಕಾರಣದಲ್ಲಿ ಹಿಂದುಳಿಯುವುದಕ್ಕೆ ಕನ್ನಡಿಗರು ಸಾಹಿತ್ಯ ಪ್ರಚಾರದಲ್ಲಿ ತೋರಿಸಿದ ಅನಾಸ್ಥೆಯೇ ಕಾರಣವೆಂದು ನನ್ನ ತಿಳಿವಳಿಕೆಯಿದೆ.

೬. ಸಂಸ್ಕೃತ ಸಾರಸ್ವತಕ್ಕೂ ಕನ್ನಡ ಸಾಹಿತ್ಯಕ್ಕೂ ನಿಕಟ ಸಂಬಂಧವು ಈಗ ಬಹು ವರ್ಷಗಳಿಂದ ಉಂಟೆಂಬುದನ್ನು ಎಲ್ಲರೂ ಒಪ್ಪಿಕೊಳ್ಳಬೇಕಾಗಿದೆ. ಪ್ರಾಕ್ಕನ್ನಡ ಕವಿಗಳಲ್ಲಿ ಸ್ವಲ್ಪ ಜನರು ಮಾತ್ರ ಬರೆ ಅಚ್ಚಗನ್ನಡ ಶಬ್ದಗಳನ್ನು ಪಯೋಗಿಸಲು ಯತ್ನಿಸಿದ್ದರೆಂಬುದು ತಮಗೆಲ್ಲರಿಗೂ ಗೊತ್ತುಂಟು. ಆದರೆ ಕ್ರಮೇಣ ಇಂತಹ ಅಸ್ವಾಭಾವಿಕ ನಿರ್ಬಂಧಗಳನ್ನು ಬದಿಗೊತ್ತಿ ಕನ್ನಡ ಸಾಹಿತ್ಯವು ಯೋಗ್ಯ ಸ್ಥಳಗಳಲ್ಲಿ ಸಂಸ್ಕೃತದ ಸಾಹಾಯ್ಯವನ್ನು ತೆಗೆದುಕೊಂಡು ಅಭಿವೃದ್ಧಿಯನ್ನೂ ಕೆಲವು ಕಾಲ ಉನ್ನತಾವಸ್ಥೆಯನ್ನೂ ಪಡೆದಿದ್ದಿತು. ಪ್ರಪಂಚದ ಯಾವ ಭಾಷೆಯಾದರೂ ತನ್ನ ನಿಕಟವರ್ತಿಯಾದ ಇನ್ನೊಂದು ಭಾಷೆಗೆ ಸ್ವಲ್ಪಾಂಶದಿಂದಾದರೂ ಋಣಿಯಾಗಿರುತ್ತದೆ. ಇದರಿಂದ ಋಣಿಯಾದ ಭಾಷೆಯು ಹೀನವೆಂದು ಯಾರೂ ತಿಳಿಯುವುದಿಲ್ಲ. ಭಾಷಾಭಿವೃದ್ಧಿಗೂ

ಇತರ ಪ್ರಾಣಿಗಳಂತೆ ನಿರ್ಬಂಧಗಳು ಪೋಷಕವಾಗದೆ ಬೆಳೆವಣಿಗೆಗೆ ಅಡ್ಡಬರುತ್ತ ವೆಂಬುದು ತುಲನಾತ್ಮಕ ಭಾಷಾಶಾಸ್ತ್ರದಿಂದ ತಿಳಿದುಬರುವಂತಿದೆ. ಪ್ರಪಂಚದಲ್ಲಿ ಅಸ್ವಾಭಾವಿಕ ನಿರ್ಬಂಧಗಳಿಲ್ಲದೆ ಸ್ವತಂತ್ರ ವಾತಾವರಣದಲ್ಲಿ ಬೆಳೆಯುವ ಪ್ರಾಣಿಜೀವನ ವಾಗಲಿ ಸಂಸ್ಥೆಯಾಗಲಿ ಶಾಸ್ತ್ರವಾಗಲಿ ನೋಡಿದರೆ, "ನಿಯಂತ್ರಣವೇ ಮರಣವು, ಸ್ವತಂತ್ರತೆಯೇ ಜೀವನವು" ಎಂಬ ಜೀವಶಾಸ್ತ್ರ ತತ್ತ್ವದ ವ್ಯಾಪಕತ್ವವು ಕಂಡುಬರು ವುದು. ಸಾಹಿತ್ಯಕ್ಕಾದರೂ ಈ ತತ್ತ್ವವೇ ಅರ್ಪಕವಾಗಿರುವುದು. ಈಗಣ ಇಂಗ್ಲಿಷ ಭಾಷೆಯ ಪ್ರಚಾರವನ್ನು ನೋಡಿದರೆ ನಾವು ಬೆರಗಾಗುವೆವು. ಶುದ್ಧ ಇಂಗ್ಲಿಷ ಭಾಷೆಯ ಶಬ್ದಗಳಿಗಿಂತ ನೂರು ಮಡಿ ಬೇರೆ ಭಾಷೆಯ ಶಬ್ದಗಳು ಅದರೊಂದಿಗೆ ಸೇರಿ ಏಕಜೀವವಾಗಿ ಈಗಣ ಆಂಗ್ಲ ಸಾರಸ್ವತವು ನಿರ್ಮಾಣವಾಗಿರುತ್ತದೆಂದು ವ್ಯಕ್ತ ವಾಗುತ್ತದೆ. ಈ ಶಬ್ದ ವಿನಿಮಯದಿಂದ ಆಂಗ್ಲ ಭಾಷೆಗೆ ಏನಾದರೂ ಕುಂದು ಬಂದಿರು ವುದೇ? ಆದುದರಿಂದ, ಕನ್ನಡ ಸಾಹಿತ್ಯದಲ್ಲಿ ಸೇರಿರುವ ಸಂಸ್ಕೃತ ಶಬ್ದಗಳ, ಹಾಗೂ ಪ್ರಾಸ ಅಲಂಕಾರ ಇತ್ಯಾದಿ ಪೋಷಕ ಸಾಧನೆಗಳ ಆಧಿಕ್ಯವನ್ನು ಜರೆಯುವುದು ನನಗೆ ಸರಿದೋರುವುದಿಲ್ಲ. ಇಷ್ಟೇ ಅಲ್ಲ; ಕನ್ನಡ ಸಾಹಿತ್ಯದ ವಿಸ್ತಾರಕ್ಕೆ ಅವಶ್ಯವಾದ ಶಬ್ದ ಗಳನ್ನು ಯಾವ ಭಾಷೆಯಿಂದಾಗಲಿ ಉದ್ಧೃತ ಮಾಡುವುದು ಶ್ಲಾಘನೀಯವೇ ಆಗಿದೆ ಯೆಂದು ನನ್ನ ಅಭಿಪ್ರಾಯವಿದೆ. ಕಲಹದ ಇನ್ನೊಂದು ಬೀಜವು ಹಳಗನ್ನಡ ಹೊಸ ಗನ್ನಡ ಶಬ್ದಗಳ, ಹಾಗೂ ವಾಕ್ಯ ರಚನೆಗಳನ್ನು ಕುರಿತು ಅಂಕುರಿಸಿರುವುದು. ಸಂಸ್ಕೃತಿಯು ಏಕರೂಪಿಯಾಗಿದ್ದರೆ ಅದರ ಬಾಹ್ಯ ವೇಷವು ದೇಶ ಕಾಲಕ್ಕನುಗುಣ ವಾಗಿ ಬದಲಾವಣೆಯನ್ನು ಹೊಂದಿರುವುದರಿಂದ ಸಾಹಿತ್ಯ ವೃದ್ಧಿಗೆ ಏನೂ ಪ್ರತಿಬಂಧಕ ವಾಗಲಿಕ್ಕಿಲ್ಲೆಂದು ನಾನು ತಿಳಿಯುತ್ತೇನೆ. ವೈದಿಕ, ಹಾಗೂ ಸ್ಮೃತಿ ಪೌರಾಣಿಕ ಕಾಲಗಳ ಸಂಸ್ಕೃತಿಗಳು ಮೂಲದಲ್ಲಿ ಒಂದೇ ಆಗಿದ್ದರೂ ವೈದಿಕ ಭಾಷೆಗೂ ಪಾಣಿನಿಯ ಕಾಲಾನಂತರದ ಸಂಸ್ಕೃತ ಭಾಷೆಗೂ ಅಜ ಗಜಾಂತರವಾಗಿದ್ದಿತು. ಭಾಷೆಯು ಸಹ ಉತ್ಕ್ರಾಂತಿ ತತ್ತ್ವಕ್ಕನುಸರಿಸಿ ಕ್ರಮೇಣ ಏಕರೂಪ ಸ್ಥಿತಿಯಿಂದ (Homogeneity) ವಿವಿಧತ್ವ ಸ್ಥಿತಿಗೆ (Heterogeneity) ಸಾಗುತ್ತಿರುವುದು. ಶಾಸ್ತ್ರಜ್ಞರಿಗೂ ಭಾಷಾ ಕೋವಿದರಿಗೂ ಇತಿಹಾಸ ಸಂಶೋಧಕರಿಗೂ ಭಾಷೆಯಲ್ಲಿ ಯುಗ ಯುಗಗಳಲ್ಲುಂಟಾಗುವ ಪರಿಣಾಮಗಳ ಬಗ್ಗೆ ಸಂಶೋಧನ ವಿವೇಚನಾದಿ ಕಾರ್ಯಗಳನ್ನು ಕೈಕೊಳ್ಳುವುದೂ ಸಿದ್ಧಾಂತಗಳನ್ನು ಗೊತ್ತುಹಚ್ಚುವುದೂ ಆನಂದ ಕರವಾದ ಅಭ್ಯಾಸ ವಿಷಯವಾಗಿರುತ್ತದೆ. ಇದಲ್ಲದೆ, ಆಯಾ ಕಾಲದ ಭಾಷೆಯು ಆಗಣ ಜನರ ಸಂಸ್ಕೃತಿಗಳ ಪ್ರತಿಬಿಂಬವಾಗಿರುವುದರಿಂದ, ನಿಶ್ಚಯವಾದ ಇತಿಹಾಸದ ಅಭಾವದಲ್ಲಿ ಈ ತೆರದ ಸಂಶೋಧನ ಕ್ರಮದಿಂದ ಹಿಂದಣ ಜನರ ನಡೆ ನುಡಿಗಳ ನಿಜವಾದ ಸ್ಥಿತಿಯನ್ನು ನಮ್ಮೆದುರಿಗೆ ತಂದುಕೊಳ್ಳಲು ಮಹತ್ವದ ಸಾಧನವಾಗಿರುವುದು. ಇನ್ನು ಹಳಗನ್ನಡ ಪ್ರೇಮಿಗಳಿಗೆ ಈಗಲೂ ಹಳಗನ್ನಡ ಶಬ್ದ ಪ್ರಯೋಗಗಳನ್ನು ತಮ್ಮ ಕಾವ್ಯ ಗಳಲ್ಲಾಗಲಿ ದಿನಚರಿ ವ್ಯವಹಾರಗಳ ಮಾತಿನಲ್ಲಾಗಲಿ ಮಾಡಿದರೆ ಅದರಿಂದ ಅಸಮಾಧಾನ ಪಡುವ ಆವಶ್ಯಕತೆ ಇಲ್ಲ. ಎಲ್ಲಿಯ ವರೆಗೆ ಕನ್ನಡ ಭಾಷೆಗೆ ಆದರ್ಶ

ಪ್ರಾಯು ಸ್ಥಿತಿಯು (Standard Form) ಬರುವುದಿಲ್ಲವೋ ಅಲ್ಲಿಯ ವರೆಗೆ ತಮ್ಮ ತಮ್ಮ ಮನೋನುಕೂಲತೆ, ಅಥವಾ ಸ್ಫೂರ್ತಿಯಂತೆ ಹಳಗನ್ನಡ, ಇಲ್ಲವೆ ಹೊಸ ಗನ್ನಡ ಶಬ್ದ ಪ್ರಯೋಗಗಳನ್ನು, ಇಲ್ಲವೆ ಶೈಲಿಯನ್ನು ಸಾಹಿತ್ಯ ಸೇವಕರು ಸ್ವೀಕರಿಸಿ ದರೆ ಅಂಥವರನ್ನು ನಾವು ಹೀಯಾಳಿಸುವುದರಲ್ಲಿ ಪ್ರಯೋಜನವಿಲ್ಲ. ಪ್ರತಿ ಕ್ಷಣದಲ್ಲಿ ಬದಲಾಗುವ ಈ ಯುಗ ಮಾಹಾತ್ಮ್ಯದಿಂದ ಅವಶ್ಯವುಳ್ಳ ಬದಲಾವಣೆಗಳೂ ತಿದ್ದು ಪಾಟುಗಳೂ ಸಾಹಿತ್ಯ ಪ್ರೇಮಿಗಳ ಮನಸ್ಸಿನಲ್ಲಿ ತಾವಾಗಿಯೇ ಉದ್ಭವಿಸಿ ಅದರಂತೆ ಕೃತಿಯಲ್ಲಿ ಸಹ ಬಂದೇ ಬರುವುವು. ಇದಕ್ಕಾಗಿ ನಾವು ಯಾವುದೇ ಕ್ರಮವ ನ್ನಾಗಲಿ ಕೃತ್ರಿಮ ಬಂಧನಗಳಿಂದ ಜಾರಿಯಲ್ಲಿ ತರುವ ಆವಶ್ಯಕತೆ ನನಗೇನೂ ಕಂಡು ಬರುವುದಿಲ್ಲ. ಹೊಸಗನ್ನಡ ನಾಡು ಸದ್ಯದಲ್ಲಿಯೇ ಸಂಯುಕ್ತ ಪ್ರಾಂತವಾಗಿ ಪರಿಣಮಿಸಿದನಂತರ ಸ್ವಾಭಾವಿಕವಾಗಿ ಈ ಪ್ರಶ್ನೆಯು ತೀರ್ಮಾನವಾಗುವುದು.

೮. ಕನ್ನಡಿಗರಲ್ಲಿ ವಾಚನಾಭಿರುಚಿಯು ಇದ್ದರೂ ಅದು ಕನ್ನಡೇತರ ಭಾಷೆಗಳ ಗ್ರಂಥಗಳನ್ನೋದುವುದರಲ್ಲಿ ಲೀನವಾಗುತ್ತದೆಂದು ಆಕ್ಷೇಪವಿದೆ. ಇದಕ್ಕೆ ಕನ್ನಡಿಗ ಪದವೀಧರರು ಹೆಚ್ಚಾಗಿ ಕಾರಣರೆಂದು ಹೇಳಬಹುದು. ಇಂತಹ ಪದವೀಧರರ ಉಚ್ಚ ಶಿಕ್ಷಣದ ದಿನಗಳು ಆಂಗ್ಲ ಸಾರಸ್ವತದ ಅಭ್ಯಾಸದಲ್ಲಿ ಕಳೆದಿರುವುದರಿಂದ ಹೊಸತಾಗಿ ಕನ್ನಡ ಸಾಹಿತ್ಯದ ಪರಿಚಯ ಮಾಡಿಕೊಳ್ಳುವುದಕ್ಕೆ ಈ ಮಹಾನುಭಾವರಿಗೆ ಅವ ಕಾಶವೂ ಉತ್ಸುಕತೆಯೂ ಇರುವುದಿಲ್ಲೆಂಬ ಸಂಗತಿಯು ಶೋಚನೀಯವಾಗಿದೆ. ನಮ್ಮ ಮುಂಬೈ ಪ್ರಾಂತದ ಕನ್ನಡಿಗರ ಮಟ್ಟಿಗೆಂತೂ ಈ ಆಕ್ಷೇಪವು ಹೆಚ್ಚಿನಂಶದಿಂದ ನಿಜವೆಂದು ನನ್ನ ಅನುಭವ. ಕನ್ನಡ ಸಾಹಿತ್ಯದಲ್ಲಿ ಮೊದಲಿನಿಂದಲೂ ಪರಿಶ್ರಮ ಮಾಡಿದ ಹೊರತು ಇಂತಹ ಅಭಿರುಚಿಯು ಹೊಸದಾಗಿ ಹುಟ್ಟುವುದು ಅಪೂರ್ವ. ಈಗ ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡ ಭಾಷೆಯು ಉಚ್ಚತರ ಶಿಕ್ಷಣಕ್ಕೆ ಇಂಬು ಸಿಕ್ಕಿರು ವುದರಿಂದ ಇತ್ತೀಚೆಗಾದ ಪದವೀಧರರಿಗೆ ಕನ್ನಡ ಸಾಹಿತ್ಯದಲ್ಲಿ ತಕ್ಕಷ್ಟು ಪರಿಶ್ರಮ ಮಾಡಲು ಅನುಕೂಲವಾಗಿರುತ್ತದೆ. ಆದರೂ ಕಾಲೇಜುಗಳಲ್ಲಿ ಓದುವ ಕನ್ನಡ ವಿದ್ಯಾರ್ಥಿಗಳು ಈ ವಿಷಯವಾಗಿ ಸಾಕಷ್ಟು ಗಮನಕೊಟ್ಟದ್ದು ನಮ್ಮ ಪ್ರಾಂತದ ಮಟ್ಟಿಗೆ ಕಂಡುಬರುವುದಿಲ್ಲ. ಈ ನ್ಯೂನತೆಯ ಕಡೆಗೆ ಈಗಣ ಕಾಲೇಜಿನ ಛಾತ್ರ ವರ್ಗದವರು ವಿಶೇಷವಾಗಿ ಲಕ್ಷ್ಯಪೂರೈಸುವರಾಗಿ ಈಕ್ಷಿಸುತ್ತೇನೆ.

೯. ವಾಚನಾಭಿರುಚಿಯು ಸಾಮಾನ್ಯ ಜನಗಳಲ್ಲಿ, ಹೆಚ್ಚಾಗಿ ಹಳ್ಳಿಗರಲ್ಲಿ, ಹುಟ್ಟಬೇಕಾದರೆ ಸುಲಭ ಭಾಷಾ ಶೈಲಿಯಲ್ಲಿ ಬರೆದ ಪುಸ್ತಕಗಳ ಸಂಖ್ಯೆಯು ಹೆಚ್ಚಾಗ ಬೇಕು. ಅದರಂತೆ ವಿವಿಧ ವಿಷಯಗಳ ಮೇಲೆ ಗ್ರಂಥಗಳನ್ನು ಬರೆಯುವ ತಜ್ಜ್ಞರ ಸಂಖ್ಯೆಯು ಕೂಡ ಬೆಳೆಯುತ್ತ ಬರುವುದು ಆವಶ್ಯಕ. ಈ ಭಾಗದಲ್ಲಿ ಕರ್ಣಾಟಕ ಸಾಹಿತ್ಯ ಪರಿಷತ್ತು ದುಡಿಯುತ್ತಿರುವುದು ಶ್ಲಾಘನೀಯವಾಗಿದೆ. ಮುಖ್ಯವಾಗಿ, ಮೈಸೂರು ಸಂಸ್ಥಾನದಲ್ಲಿಯ ಇತರ ಸಂಸ್ಥೆಗಳೂ, ಮುಂಬಯಿ ಕರ್ಣಾಟಕದ ಧಾರ ವಾಡದಲ್ಲಿಯ ಸಂಸ್ಥೆಗಳೂ ಈಗ ಬಹು ವರ್ಷಗಳಿಂದ ಪ್ರಯತ್ನಮಾಡುತ್ತಿರುವುವು. ಇಪ್ಪತ್ತು ವರ್ಷಗಳ ಮೊದಲ ಸ್ಥಿತಿಗೂ ಈಗಣ ಸ್ಥಿತಿಗೂ ತುಲನೆ ಮಾಡಿದರೆ ಈ ವಿಷಯ

ದಲ್ಲಿ ಕನ್ನಡಿಗರು ಬಹಳ ಸಾಹಸವನ್ನು ಮಾಡಿರುತ್ತಾರೆಂಬುದರಲ್ಲಿ ಸಂದೇಹವಿಲ್ಲ. ಇನ್ನುಮುಂದೆ ಅನೇಕಮುಖವಾದ ಈ ಪ್ರಯತ್ನಗಳನ್ನೆಲ್ಲ ಸಂಕಲಿಸಿ ಒಮ್ಮುಖದಿಂದ ಮುಂದೆ ಸಾಗಿಸುವುದಕ್ಕೆ ಸಾಹಿತ್ಯ ಪರಿಷತ್ತಿನ ಚಾಲಕರೇ ಸಿದ್ಧರಾಗಬೇಕಾಗಿ ನನ್ನ ನಮ್ರ ಸೂಚನೆಯಿದೆ.

೧೦. ಸಂಗ್ರಾಹ್ಯವಾದ ಗ್ರಂಥಗಳನ್ನು ವಿವಿಧ ವಿಷಯಗಳ ಮೇಲೆ ಬರೆಯಿಸಿ ಪ್ರಕಟಿಸುವುದು ಎಷ್ಟು ಆವಶ್ಯಕವೋ ಅಷ್ಟೇ ಕನ್ನಡದಲ್ಲಿ ಒಂದು ಜ್ಞಾನಕೋಶವನ್ನು ತಯಾರಿಸುವುದೂ ಅಗತ್ಯವೆಂದು ನನಗೆ ತೋರುತ್ತದೆ. ಮಹಾರಾಷ್ಟ್ರೀಯ ವಿದ್ವಾಂಸರು ಇಂತಹ ಜ್ಞಾನಕೋಶವನ್ನು ಕೆಲವು ವರ್ಷಗಳ ಹಿಂದೆ ಪ್ರಕಟಿಸಿರುವರು. ಅದೇ ಮಾದರಿಯನ್ನನುಸರಿಸಿ ಕನ್ನಡದಲ್ಲಿಯೂ ಪಂಡಿತವರ್ಯರೆಲ್ಲರೂ ಒಟ್ಟುಗೂಡಿ ಈ ಕೆಲಸವನ್ನು ಕೂಡಲೆ ಕೈಕೊಳ್ಳಬಹುದು. ಇದರಂತೆ ಸಂದಿಮೂಲೆಗಳಲ್ಲಿರುವ ಸಾಮಾನ್ಯ ಜನಗಳಲ್ಲಿಯೂ ವಾಚನಾಭಿರುಚಿಯನ್ನುಂಟುಮಾಡಬೇಕಾದರೆ ಅಲ್ಲಲ್ಲಿ ಸಣ್ಣ ಸಣ್ಣ ಪುಸ್ತಕಾಲಯಗಳನ್ನು ತೆರೆಯುವುದು ಅಪರಿಹಾರ್ಯವಾಗಿರುತ್ತದೆ. ಈ ವಿಷಯವಾಗಿ ಹಿಂದಣ ಸಮ್ಮೇಲನಗಳಲ್ಲಿ ಆದ ನಿರ್ಣಯವು ಎಷ್ಟರ ಮಟ್ಟಿಗೆ ಕೃತಿಯಲ್ಲಿ ತರಲ್ಪಟ್ಟಿದೆಯೆಂಬುದು ತಿಳಿಯುವುದಿಲ್ಲ. ಈ ನ್ಯೂನತೆಗೆ ಧನಸಹಾಯದ ಕೊರತೆಯೇ ಕಾರಣವಾಗಿರಬಹುದು; ಆದರೂ ಅಲ್ಪ ಪ್ರಮಾಣದಲ್ಲಿಯೇ ಆಗಲಿ ಈ ದಿಶೆಯಿಂದ ಪ್ರಯತ್ನಮಾಡಬೇಕು. ಬಡೋದೆಯ ಸಂಸ್ಥಾನದಲ್ಲಿ ಪ್ರಥಮತಃ ಈ ವಿಷಯವಾಗಿ ದೊಡ್ಡ ಪ್ರಮಾಣದಿಂದ ಮಹಾರಾಜ ಗಾಯಕವಾಡರವರು ಈ ಪ್ರಯತ್ನವನ್ನು ನಡೆಯಿಸಿರುವುದರಿಂದ ಈಗ ಆ ಸಂಸ್ಥಾನದಲ್ಲಿ ಲೋಕೋಪಕಾರಕವಾದ ಈ ಸಂಸ್ಥೆಯ ಶಾಖೆಗಳು ತುಂಬ ಹರಡಿಕೊಂಡಿವೆ. ನಮ್ಮ ಮೈಸೂರ ದೇಶಾಧಿಪರಾದರೂ ಈ ವಿಷಯವಾಗಿ ಪ್ರಯತ್ನ ಮಾಡುತ್ತಿದ್ದಾರೆಂದು ಕೇಳುತ್ತೇನೆ. ಇದು ಸ್ತುತ್ಯವೇ ಸರಿ. ಪುಸ್ತಕಾಲಯಗಳ ಜೊತೆಗೆ ವಾಚನಾಲಯಗಳೂ ಇರಬೇಕೆಂದು ಹೊಸದಾಗಿ ಹೇಳುವುದು ಕಾರಣವಿಲ್ಲ. ಪ್ರಚಲಿತ ರಾಜಕಾರಣದ, ಅಥವಾ ಸಾಹಿತ್ಯ ವಿಷಯಕ ಆಂದೋಲನಗಳ ತಿಳಿವಳಿಕೆಯಾಗುವುದಕ್ಕೆ ಅಲ್ಲಲ್ಲಿ ವಾಚನಾಲಯಗಳೂ, ಅವುಗಳಲ್ಲಿ ವಿವಿಧ ವಿಷಯ ಪೂರ್ಣವಾದ ವೃತ್ತಪತ್ರಗಳೂ, ಮಾಸ ಪತ್ರಿಕೆಗಳೂ ಅಪೇಕ್ಷಣೀಯವಾಗಿವೆ. ಕನ್ನಡದಲ್ಲಿ ದೈನಿಕ ವೃತ್ತಪತ್ರಿಕೆಗಳು ಸಕಾಲದಲ್ಲಿ ಹೊರಟು ಊರ್ಜಿತಾವಸ್ಥೆಗೆ ಬಂದದ್ದು ಕಂಡುಬರುವುದಿಲ್ಲ. ಇದಕ್ಕೂ ಕನ್ನಡ ನಾಡಿನ ಭಿನ್ನ ಭಿನ್ನವಾದ ಪರಿಸ್ಥಿತಿಯೂ ಕನ್ನಡಿಗರ ಅನಾಸ್ಥೆಯೂ ಕಾರಣವಾಗಿರಬಹುದು.

೧೧. ವಿಜ್ಞಾನಶಾಸ್ತ್ರ ವಿಷಯಕ ಗ್ರಂಥಗಳು ನಿರ್ಮಾಣವಾಗಬೇಕೆಂದು ಎಲ್ಲರ ಮತವೂ ಇದೆ. ಆದರೆ ಇಂತಹ ಗ್ರಂಥಗಳನ್ನು ಬರೆಯುವ ತಜ್ಜ್ಞರು, ತಜ್ಜ್ಞರಿಗೆ ಆವಶ್ಯಕವಾದ ಪಾರಿಭಾಷಿಕ ಶಬ್ದಕೋಶವು—ಈ ಸಾಧನೆಗಳ ಸಿದ್ಧತೆಯು ಮೊದಲಾಗಬೇಕು. ಸದ್ಯಕ್ಕೆ ಸುಲಭವಾದ ಕೆಲವು ವಿಜ್ಞಾನ ವಿಷಯಗಳ ಮೇಲೆ ಕನ್ನಡದಲ್ಲಿ ಗ್ರಂಥಗಳನ್ನು ಬರೆಯುವುದಕ್ಕೆ ಸಹಾಯವಾಗುವಂತೆ ಪಾರಿಭಾಷಿಕ ಶಬ್ದಕೋಶವನ್ನು ತಯಾರಿಸಿ ಪ್ರಕಟಿಸುವುದಕ್ಕಾಗಿ ತಜ್ಜ್ಞರ ಉಪಸಮಿತಿಯನ್ನು ಈ ಪರಿಷತ್ತು

ನೇಮಿಸಿ ಅದರ ಕಡೆಗೆ ಈ ಕೆಲಸವನ್ನು ವಹಿಸಿಕೊಡುವುದು ಯುಕ್ತವಾಗಿ ಕಾಣು ತ್ತದೆ. ವಿಜ್ಞಾನ ವಿಷಯವಾಗಿ ಬರೆಯತಕ್ಕ ಪುಸ್ತಕಗಳಂತೆಯೇ ಪ್ರಾಥಮಿಕ ಶಾಲೆ ಗಳಿಗಾಗಿ ಕರ್ಣಾಟಕದ ಎಲ್ಲಾ ಭಾಗಗಳಲ್ಲಿಯೂ ಪ್ರಚಾರವಾಗುವಂತೆ ಒಂದೇ ಮಾದರಿಯ ಪಠ್ಯ ಪುಸ್ತಗಳನ್ನು ರಚಿಸಿ ಶಾಲೆಗಳಲ್ಲಿ ಓದುವ ಮಕ್ಕಳಿಗೆ ಕಲಿಸಬೇಕಾಗಿ ನನ್ನ ಸೂಚನೆ ಇರುವುದು. ಭಾಷೆಯ ಏಕೀಕರಣವನ್ನು ಮಾಡುವ ನಮ್ಮ ಧ್ಯೇಯಕ್ಕೆ ಕನ್ನಡ ನಾಡಿನ ಎಲ್ಲಾ ಭಾಗಗಳಲ್ಲಿಯೂ ಕಲಿಯುವ ಮಕ್ಕಳಿಗೆ ಬಾಲ್ಯ ದಿಂದಲೂ ಏಕರೂಪವಾದ ಪಠ್ಯ ಪುಸ್ತಕಗಳನ್ನಿಟ್ಟು ಕಲಿಸುವುದು ಹಿತಕರವೂ ಪರಿಪೋಷಕರವೂ ಆದೀತು. ಹಾಗೂ, ಭಾಷಾ ವೈವಿಧ್ಯಕ್ಕೆ ತಡೆಹಾಕುವುದಕ್ಕೂ ಈ ಕ್ರಮದಿಂದ ಒಳ್ಳೆಯ ಅನುಕೂಲವಾಗುವುದು.

೧೨. ಕನ್ನಡದ ಪ್ರಾಚೀನ ಗ್ರಂಥಗಳಲ್ಲಿ ಎಷ್ಟೋ ಗ್ರಂಥಗಳ ವಾರ್ತೆ ಸಹ ನಮಗಿಲ್ಲ. ವೈದಿಕ, ಜ್ಯೋತಿಷ ಇತ್ಯಾದಿ ಶಾಸ್ತ್ರೀಯ ಗ್ರಂಥಗಳು ಇನ್ನೂ ಪ್ರಸಿದ್ಧ ವಾಗಿರುವುದಿಲ್ಲ. ಇಂತಹ ಗ್ರಂಥಗಳು ನಿರ್ಮಾಣವಾಗಲೇ ಇಲ್ಲವೆಂದು ಹೇಳುವುದು ಧಾರ್ಷ್ಟ್ಯವೇ ಸರಿ. ಈ ವಿಷಯಗಳ ಮೇಲೆ ರಚಿಸಿದ ಗ್ರಂಥಗಳು ಇನ್ನೂ ಅಜ್ಞಾತ ಸ್ಥಿತಿಯಲ್ಲಿರಬಹುದು. ಹಳೆಯ ಗ್ರಂಥಗಳಲ್ಲಾದರೂ ಈಗ ಮುದ್ರಿತವಾಗಿರುವ ಕೆಲವು ಗ್ರಂಥಗಳು ಅಪೂರ್ಣವಿರುತ್ತವೆ. ದೃಷ್ಟಾಂತಕ್ಕೆ, ಕುಮಾರವ್ಯಾಸ ರಚಿತವಾದ ಮಹಾಭಾರತವನ್ನೇ ತೆಗೆದುಕೊಳ್ಳೋಣ. ಈಗ ಮುದ್ರಿತವಾಗಿರುವ ಪ್ರತಿಗಳಲ್ಲಿ ಹತ್ತೇ ಪರ್ವಗಳು ಮಾತ್ರ ಇವೆ; ಉಳಿದ ಪರ್ವಗಳನ್ನು ಈ ಮಹಾ ಕವಿಯು ಬರೆಯ ಲಿಲ್ಲೆಂದು ಕೆಲವರ ಅಭಿಪ್ರಾಯ. ಆದರೆ ಇನ್ನೂ ಮೂರು ಪರ್ವಗಳಿರುವ ತಾಡೋ ಲೆಯ ಬರೆಹದ ಪ್ರತಿ ನಮ್ಮ ಜಿಲ್ಹೆಯಲ್ಲಿ ಇದ್ದದ್ದು ನಾನು ಕಂಡಿದ್ದೇನೆ. ಇದಲ್ಲದೆ, ಈಗ ಮುದ್ರಿತವಾದ ಮಹಾಭಾರತದ ಪ್ರತಿಯಲ್ಲಿ ಆದಿಪರ್ವದ ಶ್ಲೋಕ ಸಂಖ್ಯೆಗಿಂತಲೂ ನೂರಾರು ಹೆಚ್ಚಿನ ಪದ್ಯಗಳಿರುವ ಪ್ರತಿಯೂ ಇದೆ. ಇದರಂತೆ ಕನ್ನಡ ಕವಿತಾ ಬದ್ಧ ವಾದ ಅಧ್ಯಾತ್ಮ ರಾಮಾಯಣವೂ, ಕೌಸಲ್ಯಾ ವಿವಾಹವೆಂಬ ಖಂಡ ಕಾವ್ಯವೂ, ಭಾಗ ವತದ ಈಗಣ ಪ್ರತಿಗಿಂತ ಹೆಚ್ಚಿನ ಪದ್ಯಗಳಿರುವ ಪ್ರತಿಯೂ, ಅಭಿನವ ಕೇಶಿರಾಜನೆಂಬ ಬಿರುದುಳ್ಳ ಕವಿಯ ಛಂದಸ್ಸಾರವೆಂಬ ಗ್ರಂಥವೂ ತಾಡೋಲೆಯ ಪುಸ್ತಕದಲ್ಲಿವೆ ಯೆಂದು ನನ್ನ ಮಿತ್ರರಲ್ಲೊಬ್ಬರು ಹೇಳಿದ್ದಾರೆ. ಇದೇ ರೀತಿ ಇನ್ನೂ ಅನೇಕ ಗ್ರಂಥ ಗಳು ಅಲ್ಲಲ್ಲಿ ಕಸ ಮೂಲೆಗಳ ಪಾಲಾಗುತ್ತ ಬಿದ್ದಿರಬೇಕೆಂದು ಬಲವಾದ ಅನುಮಾನ ವುಂಟು. ಹೊಸ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸುವ ಕೆಲಸದಂತೆಯೇ ಹಳೆಯ ಗ್ರಂಥಗಳನ್ನು ಪರಿಶೋಧಿಸಿ ಮುದ್ರಿಸುವ ಕೆಲಸವಾದರೂ ಮಹತ್ವದ್ದಾದ್ದರಿಂದ ಈ ವಿಷಯದ ಕಡೆಗೂ ಪರಿಷತ್ತಿನವರು ಗಮನಕೊಡಬೇಕಾಗಿ ನನ್ನ ಸವಿನಯ ಪ್ರಾರ್ಥನೆ ಯಿದೆ.

೧೩. ಸಾಹಿತ್ಯ ಪರಿಷತ್ತಿನ ಮುಖ್ಯ ಉದ್ದೇಶವು ಯಾವುದಿರುವುದೆಂಬುದನ್ನು ಹನ್ನೊಂದನೆಯ ಸಮ್ಮೇಳನದ ಅಧ್ಯಕ್ಷರು ತಮ್ಮ ಉಪನ್ಯಾಸದಲ್ಲಿ ವಿಶದವಾಗಿ ಹೇಳಿರುವರು. ಆದುದರಿಂದ ಅದರ ವಿಷಯವಾಗಿ ಪುನಃ ಎಚ್ಚರಿಕೆ ಕೊಡುವ ಆವಶ್ಯ

ಕತೆಯಿಲ್ಲ. ಹಿಂದೆ ನಡೆದ ಸಮ್ಮೇಳನಗಳಲ್ಲಿ ನಾನ್ಯ ಮಾಡಿರುವ ಗೊತ್ತುವಳಿಗಳನ್ನು ಪೂರ್ಣವಾಗಿ ಜಾರಿಯಲ್ಲಿ ತರುವುದು ಈಗ ನಮ್ಮ ಕರ್ತವ್ಯವಾಗಿರುತ್ತದೆ. ಪ್ರತಿಯೊಂದು ಜನಾಂಗದ ಸಾರಸ್ವತದ ವಿಷಯವಾಗಿ ವಿಚಾರ ಮಾಡಿದರೆ ಅದರಲ್ಲಿ ಉತ್ಪಾದಕ (Evolution) ಮತ್ತು ತಾರ್ಕಿಕ (Critical) ಕಾಲಗಳು ಇರುತ್ತವೆಂದು ಕಂಡುಬರುವುದು. ಕನ್ನಡ ಸಾಹಿತ್ಯವು ಉತ್ಪಾದಕ ಕಾಲವನ್ನು ದಾಟಿ ಎರಡನೆಯದಾದ ತಾರ್ಕಿಕ ಕಾಲದಲ್ಲಿ ಪ್ರವೇಶ ಮಾಡಿರುವುದು. ಮೊದಲಿನಂತೆ ರಸ ಭರಿತವಾದ ಮಹಾ ಕಾವ್ಯಗಳು ಈಗ ನಿರ್ಮಾಣವಾಗುವುದಿಲ್ಲೆಂದು ನಾವು ಅಸಮಾಧಾನಪಡಬೇಕಾಗಿರುವುದಿಲ್ಲ. ಈಗಾದರೂ ಪ್ರತಿಭಾ ಸಂಪನ್ನವಾದ ಸಣ್ಣ ಪುಟ್ಟ ಕಾವ್ಯಗಳೂ ಗದ್ಯ ಪ್ರಬಂಧಗಳೂ ಹೊರಡುತ್ತಿರುವುದು ತಮ್ಮೆಲ್ಲರಿಗೂ ಗೊತ್ತುಂಟು. ಕಾವ್ಯಗಳನ್ನು ಬರೆಯುವಾಗ ಗ್ರಂಥಕರ್ತರು ಪೂರ್ವ ಪದ್ಧತಿಯನ್ನು ಬಿಟ್ಟು ಆಧುನಿಕ ಆಂಗ್ಲ ಪದ್ಧತಿಯನ್ನು ಅನುಸರಿಸುತ್ತಾರೆ. ಈ ಬದಲಾವಣೆಯು ಕೊನೆಯಲ್ಲಿ ಹಿತಕರವೋ ಇಲ್ಲವೋ ಭಾರತೀಯರ, ಮುಖ್ಯವಾಗಿ ಕನ್ನಡಿಗರ, ವೈಶಿಷ್ಟ್ಯಕ್ಕೆ ಹಾನಿಕರವೋ, ಎಂಬ ವಿಚಾರವನ್ನು ಕನ್ನಡ ಪಂಡಿತರೂ ಕವಿಗಳೂ ಮಾಡತಕ್ಕದ್ದು. ಈ ಭಾಗದಲ್ಲಿ ನನ್ನ ಅಧಿಕಾರವು ಇಲ್ಲವೆಂದು ಒಪ್ಪಿಕೊಳ್ಳುತ್ತೇನೆ. ಪೂರ್ವಾಪರ ಪದ್ಧತಿಯನ್ನು ಒಮ್ಮೆಯೇ ಬಿಟ್ಟುಕೊಡುವುದು ವಿಹಿತವಲ್ಲೆಂದು ನನ್ನ ಭಾವನೆ.

೧೪. ಮೇಲೆ ವಿವರಿಸಿದ ವಿಚಾರಗಳನ್ನು ಸಾಹಿತ್ಯ ಪರಿಷತ್ತಿನ ಚಾಲಕರು ನಿರ್ಣಯಿಸಬೇಕಾಗಿ ನನ್ನ ಸೂಚನೆಯಿದೆ. ಇನ್ನೂ ಅನೇಕ ವಿಷಯಗಳ ಬಗ್ಗೆ ಹಿಂದಣ ಸಮ್ಮೇಳನಗಳಲ್ಲಿ ಚರ್ಚೆ ನಡೆದು ನಿರ್ಣಯಗಳೂ ಆಗಿವೆ. ಅಂತಹ ನಿರ್ಣಯಗಳಲ್ಲಿ ಕೆಲವು ಜಾರಿಯಲ್ಲಿಯೂ ಬಂದಿವೆ. ಇದು ಸಂತೋಷಕರವಾದ ಸಂಗತಿ. ಈ ಸಮ್ಮೇಳನದಲ್ಲಿ ಮುಖ್ಯವಾಗಿ ಉತ್ತರ ಕನ್ನಡ ಜಿಲ್ಹೆಯಲ್ಲಿ ಕನ್ನಡ ಸಾಹಿತ್ಯವು ಹೇಗೆ ವೃದ್ಧಿಗೊಳ್ಳಬೇಕೆಂಬುದರ ಬಗ್ಗೆ ನಿರ್ಣಯಗಳನ್ನೂ, ಹಾಗೂ ಇಂತಹ ನಿರ್ಣಯಗಳನ್ನು ಕೃತಿಯಲ್ಲಿ ತರುವ ಬಗ್ಗೆ ತಕ್ಕ ಏರ್ಪಾಡುಗಳನ್ನೂ ತಾವೆಲ್ಲರೂ ಮಾಡುವಿರಾಗಿ ಆಶಿಸುತ್ತೇನೆ. ಸಾಹಿತ್ಯ ವಿಷಯದಲ್ಲಿ ಉತ್ತರ ಕನ್ನಡವು ದಕ್ಷಿಣ ಕನ್ನಡ ಜಿಲ್ಹೆಗಿಂತ ಹಿಂದೆ ಬಹಳ ಬಿದ್ದಿದೆ. ಈ ದುರವಸ್ಥೆಯನ್ನು ಹೋಗಲಾಡಿಸುವುದು ಉತ್ತರ ಕನ್ನಡ ಜಿಲ್ಹೆಯ ಸಾಹಿತ್ಯ ಭಕ್ತರ ಆದ್ಯ ಕರ್ತವ್ಯವಾಗಿದ್ದರೂ ಅವರನ್ನೇ ಅವಲಂಬಿಸಿರದೆ ಕರ್ಣಾಟಕದ ಇತರ ಬಂಧುಗಳೂ ಉತ್ತರ ಕನ್ನಡಿಗರ ಸಹಾಯಕ್ಕೆ ಬರಬೇಕಾಗುವುದು. ಉತ್ತರ ಕನ್ನಡ ಜಿಲ್ಹೆಯ ಸಾಹಿತ್ಯ ಸೇವೆಯು ಇದುವರೆಗೆ ಅತ್ಯಲ್ಪವಾದದ್ದೆಂದು ಮೇಲೆ ಹೇಳಿರುವೆನಷ್ಟೆ! ಆದರೆ ಇತ್ತೀಚೆಗೆ ಹಲವರು ಸಾಹಿತ್ಯ ಭಕ್ತರು ಮುಂದೆ ಬರಲುಪಕ್ರಮಿಸಿದ್ದಾರೆ. ಅವರ ವಿಷಯವಾಗಿ ಉಲ್ಲೇಖ ಮಾಡಿದ ಹೊರತು ನಾನು ಕುಳಿತುಕೊಳ್ಳುವುದು ಉಚಿತವಲ್ಲ. ಈ ಸಾಹಿತ್ಯ ಭಕ್ತರಲ್ಲಿ ಗದ್ಯ ಪದ್ಯ ಕರ್ತರೂ ಪ್ರತಿಭಾ ಸಂಪನ್ನ ಕವಿಗಳೂ ಲೇಖಕರೂ ಇರುತ್ತಾರೆ. ಅನುಕೂಲ ಪರಿಸ್ಥಿತಿಯಿರುತ್ತಿದ್ದರೆ ಅವರು ಕರ್ಣಾಟಕದ ಇತರ ಪ್ರಾಂತಗಳ ವಿದ್ವಾಂಸರಿಗೆ ಪರಿಚಿತರಾಗುತ್ತಿದ್ದರೆಂದು ಖಂಡಿತವಾಗಿ ಹೇಳಬಹುದು. ಆಜನ್ಮ ದಾರಿದ್ರ್ಯ, ಕುಟುಂಬದ ಪೋಷಣೆಯ ಭಾರ, ಹೀನ

ಶಿಕ್ಷಣ, ಪ್ರಕೃತಿಯ ಅಸ್ವಾಸ್ಥ್ಯ—ಇವೇ ಮೊದಲಾದ ಕಾರಣಗಳಿಂದ ಸಾಹಿತ್ಯ ಸೇವೆಯನ್ನು ನಿರಂತರವಾಗಿಯೂ ನಿರಾತಂಕವಾಗಿಯೂ ಮಾಡಲು ಅವಕಾಶವಿಲ್ಲ. ಮುಖ್ಯವಾಗಿ, ಶ್ರೀಯುತ ನಾರಾಯಣ ವೆಂಕಟೇಶ ಕುರಡಿ, ವೆಂಕಪ್ಪ ಹೆಗಡೆ ಕಡೆಕೋಡಿ, ದಿನಕರ ದೇಸಾಯಿ, ಕೈ. ವಾ. ತಿಪ್ಪಯ್ಯಾ ಮಾಸ್ತರ, ಗಣೇಶ ಸೂರ್ಯನಾರಾಯಣ ಭಟ್ಟ ಕೆಕ್ಕಾರ, ಓಡಲಮನೆ ಆತ್ಮಾರಾಮ ಶಾಸ್ತ್ರಿ, ಕೈ. ವಾ. ಕೆಕ್ಕಾರ ಶಿವ ಭಟ್ಟರು, ಮಹಾಬಲ ಹೆಗಡೆ, ಗಣೇಶ ರಾಮಯಾಜಿ, ವೆಂಕಟೇಶ ಪ್ರಭು—ಇತ್ಯಾದಿ ಸಾಹಿತ್ಯ ಭಕ್ತರ ಸೇವೆಯು ಅಮೂಲ್ಯವಾದದ್ದು. ಉತ್ತರ ಕನ್ನಡಿಗರು ಈ ಮಹಾನುಭಾವರಿಗೆ ಯಾವಾಗಲೂ ಋಣಿಗಳಾಗಿರಬೇಕು.

೧೫. ಈ ಪರಿಷತ್ತು ಈಗ ಕೌಮಾರಾವಸ್ಥೆಯನ್ನು ದಾಟಿ ಯೌವನಾವಸ್ಥೆಯಲ್ಲಿ ಹೆಜ್ಜೆಯಿಟ್ಟಿರುತ್ತದೆ. ಈ ಕಾಲದಲ್ಲಿ ಭಾವನೆಗಳ ಪ್ರಾಧಾನ್ಯವಿರುತ್ತಿದ್ದು ಪ್ರೌಢ ವಿಚಾರಗಳ ಪ್ರಾದುರ್ಭಾವವು ಮುಂದೆ ಆಗತಕ್ಕದ್ದಿರುತ್ತದೆ. ಇಂತಹ ಸಂದುಗಟ್ಟಿನ ಸಮಯದಲ್ಲಿ ಅನುಭವದಲ್ಲಿ ವೃದ್ಧರೂ, ವಿದ್ವನ್ಮಣಿಗಳೂ, ಪೂರ್ವಾಪರ ಸಂದರ್ಭಗಳ ಜ್ಞಾನವುಳ್ಳವರೂ, ಶೀಲವಂತರೂ ಆಗಿರುವ ಕರ್ಣಧಾರರು ಈ ಪರಿಷತ್ತಿನ ನೇತೃತ್ವವನ್ನು ವಹಿಸಿಕೊಳ್ಳುವುದು ನ್ಯಾಯವೂ ಆವಶ್ಯಕವೂ ಆಗಿರುತ್ತದೆಂಬುದರಲ್ಲಿ ಮತಭೇದವಿರಲಿಕ್ಕಿಲ್ಲ. ಇಂತಹ ಸನ್ಮಾನ್ಯ ನೇತೃಗಳು ಯೋಗ್ಯವಾದ, ಹಾಗೂ ಪರಿಸ್ಥಿತಿಗನುರೂಪವಾದ ಮಾರ್ಗವನ್ನು ಯೌವನಾವಸ್ಥೆಗೆ ಹೊಂದಿಕೊಂಡಿರುವ ಪ್ರಮಾದಗಳಿಂದ ಈ ಪರಿಷತ್ತನ್ನು ಪಾರುಮಾಡಿ ಅದರ ಉದ್ದಿಷ್ಟ ಹೇತುವಿಗೆ ಮುಟ್ಟಿಸಲು ಸಮರ್ಥರಾಗುವರೆಂದು ತುಂಬ ನಂಬಿದ್ದೇನೆ. ನನಗೆ ಕನ್ನಡ ಸಾಹಿತ್ಯದಲ್ಲಿ ಏನೂ ವ್ಯಾಸಂಗವಿಲ್ಲ; ಕನ್ನಡ ಶಿಕ್ಷಣವಂತೂ ಹೆಸರಿಗೆ ಪೂರ್ತಿ. ಇಂತಹ ಅಲ್ಪಜ್ಞನು ವಿದ್ವತ್ ಶಿಖಾಮಣಿಗಳಾದ ತಮ್ಮೆದುರಿಗೆ ಸ್ವಾಗತ ಮಂಡಲದವರ ಆಜ್ಞೆಯ ಪ್ರಕಾರ ನನಗೆ ತೋರಿದ ಕೆಲವು ವಿಚಾರಗಳನ್ನು ಇಟ್ಟಿರುವೆನು. ಪರಿಷತ್ತಿನಲ್ಲಿ ಈ ವಿಚಾರಗಳ ಗ್ರಾಹ್ಯಾಗ್ರಾಹ್ಯತೆಯನ್ನು ನಿರ್ಣಯಿಸುವ ಭಾರವು ತಮ್ಮದಾಗಿದೆ.

೧೬. ನಮ್ಮ ಜಿಲ್ಹೆಯ ಜನರು ಹೆಚ್ಚಾಗಿ ಅಶಿಕ್ಷಿತರು, ಸಂಸ್ಕೃತಿಯಲ್ಲಿ ಹಿಂದುಳಿದವರು. ಆದುದರಿಂದ ನಮ್ಮ ರೀತಿ ರಿವಾಜುಗಳನ್ನು ನೋಡಿ ತಾವು ನಗಬಹುದು, ಗಂಜಿ ಉಣ್ಣುವವರೆಂದು ಪರಿಹಾಸ ಮಾಡಬಹುದು. ಕರ್ಣಾಟಕದ ಮುಖ್ಯಮುಖ್ಯ ಪಟ್ಟಣಗಳಲ್ಲಿ, ಇಲ್ಲವೆ ಕೇಂದ್ರ ಸ್ಥಳಗಳಲ್ಲಿ ಸಂಚಾರ ಮಾಡಿ ಪಂಚಪಕ್ವಾನ್ನ ಮಿಷ್ಟಾನ್ನಗಳನ್ನು ಯಥೇಷ್ಟವಾಗಿ ಸವಿದ ತಮ್ಮಂಥ ಮಹಾನುಭಾವರನ್ನು ಪಶ್ಚಿಮ ಸಮುದ್ರ ತೀರದಲ್ಲಿ ಬಂದ ನೀರಿನಲ್ಲಿ ಏಂದು ತಿಳುವಾದ ಗಂಜಿಯ ತಿಳಿಯನ್ನು ಕುಡಿದು ನೀರಸವಾದ ಅನ್ನವನ್ನುಂಡುಹೋಗಲು ನಿಮಂತ್ರಿಸಿದ್ದೇಕೆಂದು ತಮಗೆನಿಸಬಹುದು. ಆದರೆ ಕರ್ಣಾಟಕದ ಪಶ್ಚಿಮ ಸೀಮೆಯಲ್ಲಿಯ ತಮ್ಮ ಬಂಧುಗಳು ಹೇಗೋ ಜೀವವನ್ನಿಟ್ಟುಕೊಂಡು ಕನ್ನಡ ಸಂಸ್ಕೃತಿಯ ಕನ್ನಡ ನಾಡಿನ ಅಭಿಮಾನವನ್ನು ಇದುವರೆಗೆ ಕಾದುಕೊಂಡಿರುತ್ತಾರೆಂಬುದರ ಪ್ರತ್ಯಕ್ಷ ಜ್ಞಾನವು ತಮಗೆಲ್ಲರಿಗೂ ಆಗಬೇಕೆಂಬ ಉದ್ದೇಶದಿಂದಲೇ ಎಲ್ಲ ಪರಿಯಿಂದ ಹೀನಾ

ಪಸ್ಥೆಯಲ್ಲಿರುವ ನಮ್ಮ ಈ ಬಡ ಜಿಲ್ಹೆಗೆ ತಮ್ಮನ್ನೆಲ್ಲ ಇಷ್ಟು ದೂರದಿಂದ ಬರಮಾಡಿ ಕೊಂಡಿರುತ್ತೇವೆ. ತಾವಾದರೋ, ಬಂಧುಗಳಾದ ನಮ್ಮನ್ನು ಬಡವರೆಂದೂ ಅಡಾಣಿ ಗಳೆಂದೂ ತಾತ್ಸಾರ ಮಾಡದೆ, ದೂರದ ಪ್ರವಾಸದ ಅನನುಕೂಲತೆಗಳಿಗೆ ಲೆಕ್ಕಿಸದೆ, ಬಹು ಶ್ರಮಪಟ್ಟು ಪ್ರೇಮದಿಂದ ಬಂದುದಕ್ಕಾಗಿ ತಮ್ಮನ್ನೆಲ್ಲ ನಮ್ಮ ಜಿಲ್ಹೆಯ ಪರವಾಗಿಯೂ ಸಾಹಿತ್ಯಸೇವಕರ ಪರವಾಗಿಯೂ ಸಾಹಿತ್ಯಮಂಡಳದ ಪರ ವಾಗಿಯೂ ಪುನಃಪುನಃ ಅಭಿನಂದಿಸುತ್ತೇನೆ. ಮುಂದಿನ ನಾಲ್ಕು ದಿವಸಗಳ ವರೆಗೆ ನಮ್ಮ ಶಕ್ತಿ ಯುಕ್ತಿಗೆ ಸರಿಯಾಗಿ ಏರ್ಪಡಿಸಿರುವ ಊಟ ಉಪಚಾರಗಳನ್ನು ಸ್ವೀಕರಿಸಿ ಅವುಗಳಲ್ಲಿಯ ಕುಂದು ಕೊರತೆಗಳನ್ನು ಹಂಸ ಕ್ಷೀರ ನ್ಯಾಯದಿಂದ ನೋಡಿ ತಮ್ಮಗಳ ಆಗಮನದಿಂದಲೂ ಸಾನ್ನಿಧ್ಯ ಸಹವಾಸಗಳಿಂದಲೂ ನಮ್ಮೆಲ್ಲರ ಮನಸ್ಸನ್ನು ಸಂತೋಷಗೊಳಿಸುವಿರಾಗಿ ಆಶಿಸುತ್ತೇನೆ. ಪರಿಷತ್ತಿನ ಈ ಸಮ್ಮೇ ಳನದ ಮುಂದೆ ನಡೆಯತಕ್ಕ ಕಾರ್ಯ ಕಲಾಪಗಳು ನಿರ್ವಿಘ್ನತೆಯಿಂದಲೂ ಸುಸಂಗತ ವಾಗಿಯೂ ನಡೆಯುವಂತೆ ಕೆಳಗಣ ವೇದ ವಾಣಿಯಿಂದ ಆ ದಯಾಘನ ಪರಮೇಶ್ವರ ನಲ್ಲಿ ಪ್ರಾರ್ಥನೆ ಮಾಡಿ ತಮ್ಮೆಲ್ಲರ ಅಪ್ಪಣೆ ತೆಗೆದುಕೊಳ್ಳುತ್ತೇನೆ.—

> ಸಮಾನೀ ವ ಆಕೂತಿಃ ಸಮಾನಾ ಹೃದಯಾನಿ ವಃ
> ಸಮಾನಮಸ್ತು ವೋ ಮನೋ ಯಥಾ ವಃ ಸುಸಹಾಸತಿ
> ಯಥಾ ವಃ ಸುಸಹಾಸತಿ ॥

---

## ಸಮ್ಮೇಳನದ ಅಧ್ಯಕ್ಷರ ಭಾಷಣ

ಕನ್ನಡಿಗ ಮಹಾಶಯರೇ, ಈ ಅಧ್ಯಕ್ಷ ಪದವಿಗೆ ತಾವು ನನ್ನನ್ನೇರಿಸಿದುದರಿಂದ ಉಕ್ಕಿ ಹರಿಯುತ್ತಿರುವ ನನ್ನೀ ಭಾವನೆ ಆನಂದ ಜನ್ಯವೋ, ಬದಲಾಗಿ ಭಯೋ ತ್ಪನ್ನವೋ ಎಂಬ ಸಂದೇಹವುಂಟಾದಲ್ಲಿ, ಎರಡೂ ಅಲ್ಲ ಮಿಶ್ರಿತವೆಂದೇ ಹೇಳ ಬೇಕಾಗುತ್ತದೆ.

ಇಡೀ ಕರ್ಣಾಟಕದ ಸಾಹಿತ್ಯಪ್ರೇಮಿಗಳೊಳಗೆ, ಅವರವರ ತಿಳಿವುಗೆಲಸಗಳಿ ಗನುವಾಗಿ ಕನ್ನಡಿಗ ಮಹಾಶಯರು ಕೊಡುವ ಬಹುಮಾನವೆಂದರೆ ಈ ಅಧ್ಯಕ್ಷ ಪದವಿ. ಅದರಿಂದಲೇ "ನನ್ನೀ ಭಾವನೆ ಆನಂದ ಜನ್ಯವೋ" ಎಂಬ ಶಂಕೆ. ಆದರೆ, ಇದರ ಕಾರ್ಯ ಭಾರವನ್ನು ಹೊತ್ತು ನಡೆಯಿಸಲಿಕ್ಕಲ್ಲ, ಏಳಲಿಕ್ಕೂ ಬಲವಿಲ್ಲದವನ ತಲೆಯಲ್ಲಿಟ್ಟರೆ ಅಂಥವನ ಎಣಿಕೆ ಎಂತಹುದಾದೀತೆಂದು ಭಾವಿಸಿ ನೋಡಿರಿ. ಅದ ರಿಂದಲೇ "ನನ್ನೀ ಭಾವನೆ ಭಯೋತ್ಪನ್ನವೋ" ಎಂಬ ಸಂದೇಹ. ನಮ್ಮ ಕನ್ನಡದಲ್ಲಿ ನುರಿತು ಹದವಡೆದ ಬಲ್ಲವರೊಳಗೆ ಒಂದೆರಡನೆಯ ಬೆರಳಿನ ಲೆಕ್ಕಕ್ಕೆ ಬರುವ ಯೋಗ್ಯತೆ ಯಂತಿರಲಿ, ಕಡೆಯಣ ಕಿರುಬೆರಳಿನಲ್ಲಾದರೂ ಎಡೆಗೊಳ್ಳುವಷ್ಟು ಹುರುಳು ನನ್ನಲ್ಲಿದೆ ಯೆಂದೆಣಿಸುವಷ್ಟು ಎದೆಗಟ್ಟಿ ನನ್ನದಲ್ಲ. ಇದು ಉಪಚಾರೋಕ್ತಿಯೆಂದು ಭಾವಿಸ ಬಾರದು. ಈ ಗದ್ದುಗೆಯೆಂದರೆ, ಕೀರ್ತಿಶೇಷರಾದ ಮ॥ ರಾ॥ ನಂಜುಂಡಯ್ಯ ನವರು ಮೊದಲಾಗಿ ಕನ್ನಡದ ಸಜೀವ ಮೂರ್ತಿಗಳಾದ ಮ॥ ರಾ॥ ಆಲೂರು ವೆಂಕಟ

ರಾಯರ ವರೆಗಿನವರಿಂದ ನಿಜವಾಗಿಯೂ ಅಲಂಕರಿಸಲ್ಪಟ್ಟುದು. ಇದನ್ನೇರಿ ಇಲ್ಲಿಯ ಕಾರ್ಯಕಲಾಪಗಳನ್ನು ನಡೆಯಿಸಬೇಕಾಗಿಬಂದ ನನ್ನಂಥವನ ಭಾವನೆ ಅಂಜಿಕೆಯ ಸೆರಗನ್ನು ಬಿಡುವುದೆಂದರೆ ಹೇಗೆ? ಬೆಂಕಿಯಿಲ್ಲದೆ ಬೆಣ್ಣೆ ಕರಗದೆಂಬ ನಾಣ್ಣುಡಿಯ ಹಾಗೆಯೇ ಭಯವಿಲ್ಲದೆ ಭಕ್ತಿಯುಂಟಾಗದು ; ಅದರಿಂದಲೇ ಆ ನನ್ನ ಭಾವನೆ ಮಿಶ್ರಿತ ವೆಂದೇ ಹೇಳಿದುದು. "ಕ್ವ ಸೂರ್ಯಪ್ರಭವೋ ವಂಶಃ ಕ್ವ ಚಾಲ್ಪವಿಷಯಾ ಮತಿಃ" ಎಂದ ಕಾಳಿದಾಸನದು ವೈದಗ್ಧ್ಯ ಭಣಿತಿ; ಎಂದರೆ ನುಣ್ಣುಡಿಗಳಿಂದ ಒಳಗಿನ ಆಳ ವನ್ನು ತಿಳಿಸಿದ ಮಾತು. "ಈ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ಎಲ್ಲಿ? ಶಾಲೆಯ ಹುಡುಗರಿಗೆ ಕಲಿಸುವ ನಾನೆಲ್ಲಿ?" ಎಂಬುದು ಭಯದಿಂದ ಹುಟ್ಟಿದ ವಾಸ್ತವವಾದ ಮಾತು. ಆದರೂ ತಮ್ಮೆಲ್ಲರ ಅಭಿಪ್ರಾಯವನ್ನಲ್ಲಗಳೆವುದು ತಕ್ಕುದಲ್ಲವೆಂದು ಈ ಕಾರ್ಯಭಾರವನ್ನು ಸ್ವೀಕರಿಸಬೇಕಾಯಿತು. ಕಲ್ಲಿನ ಮೂರ್ತಿಯೇ ದೈವವಾಗುತ್ತದೆ. ಶಿಲ್ಪಿಯ ಚಾತುರ್ಯ, ಮಹಾಜನರ ನಂಬುಗೆ—ಇವುಗಳೇ ಅದಕ್ಕೆ ಕಾರಣಗಳು. ಪ್ರಕೃತ ಕಾರ್ಯದಲ್ಲಿ ನನ್ನಿಂದೊದಗಬಹುದಾದ ನ್ಯೂನತೆಗಳನ್ನು ತಾವೆಲ್ಲ ಸರಿ ಗೊಳಿಸುವಿರೆಂಬ ವಿಶ್ವಾಸವೇ ನನ್ನನ್ನು ಈ ಕಾರ್ಯದಲ್ಲಿ ಕೈಗೊಳಿಸಿರುವುದು.

೧

ನಮ್ಮ ಈ ಉತ್ತರ ಕನ್ನಡ ಜಿಲ್ಲೆಯೆಂದರೆ, ಇಡೀ ಭಾರತೀಯರಾದ ಹಿಂದೂ ಗಳ ಮನಸ್ಸನ್ನಾಕರ್ಷಿಸುವ ಗೋಕರ್ಣವೆಂಬ ಪುಣ್ಯಕ್ಷೇತ್ರದಿಂದ ಕೂಡಿರುವುದಷ್ಟೇ ಅಲ್ಲ; ಕನ್ನಡ ಸಾಹಿತ್ಯಭಕ್ತರಿಗೆ ಅಭಿಮಾನಾಸ್ಪದವಾದ ನಾಡೇ ಇದೆಂದು ನನ್ನೆಣಿಕೆ. ಸೀತಾರಾಮರೆಂದರೆ, ದೇವತಾಂಶರೆಂಬ ಮಾತಂತಿರಲಿ; ನಮ್ಮ ಸ್ತ್ರೀ ಪುರುಷರಿಗೆಲ್ಲ ದೃಷ್ಟಾಂತ ಸ್ವರೂಪಿಗಳಾದವರೆಂಬುದನ್ನು ಎಲ್ಲರೂ ಒಪ್ಪುತ್ತಾರಲ್ಲವೆ? ಅಂಥವರನ್ನು ಅವರ ಹುಟ್ಟೂರು ನಾಡಿಂದೋಡಿಸಿತು. ಅವರಿಗೆ ಹಲಗಾಲ ಸುಖವಾಗಿ ವಾಸಿಸ ಲಿಕ್ಕೆ ಎಡೆಯೊದಗಿಸಿ, ಇಂದಿಗೂ 'ಬನವಾಸಿ' ಎಂಬ ಪ್ರಸಿದ್ಧವಾದ ಹೆಸರುಗೊಂಡ ನಾಡು ಈ ಜಿಲ್ಲೆಯಲ್ಲೇ ಇರುವುದು. 'ಅಲ್ಲಿರುವಾಗ ಶ್ರೀರಾಮನಿಗೆ ಸೀತೆಯ ಪಾತಿವ್ರತ್ಯದ ಹುರುಳನ್ನು ಪರೀಕ್ಷಿಸಬೇಕೆಂಬ ಎಣಿಕೆಯಾಯಿತು ; ಗಿಳಿಯ ಸ್ವರೂಪ ವನ್ನು ಧರಿಸಿ ಸೀತಾ ಲಕ್ಷ್ಮಣರೊಡನೆ ಮಾತಾಡಿ ಅವರ ಆಂತರ್ಯವನ್ನರಿತನು' ಎಂಬೊಂದು ಕತೆ ನಿಮಗೆಲ್ಲರಿಗೂ ಗೊತ್ತಿರಬಹುದು. ಅದು ಮೊದಲ್ಗೊಂಡು ಗಿಳಿ ಗಳಿಗೆ ಮಾತಾಡುವ ಶಕ್ತಿ ಬಂತು ; ಶುಕವೇಷಧಾರಿಯಾದ ರಾಮನ ಕೆಲವು ನುಡಿ ಗಳಿಂದ ಕೋಪಗೊಂಡು ಸೀತಾದೇವಿ ಶಪಿಸಿದುದರಿಂದಾಗಿ, ಈಗ ಗಿಳಿಗಳಿಗೆ ಕಲಿಸಿದು ದನ್ನು ಮಾತ್ರ ಆಡುವ ಶಕ್ತಿಯುಳಿದಿದೆ; ಅದರಿಂದಲೇ "ರಾಮಪ್ಪಾ" ಎಂದು ಸಂಬೋಧಿಸಿ ಗಿಳಿಯನ್ನು ಮಾತಾಡಿಸುವ ಬಳಕೆ ನೆಲೆ ನಿಂತಿದೆ ಎಂದು ಹಳಬರು ಹೇಳುವುದುಂಟು. 'ಕನ್ನಡವಕ್ಕಿ', 'ಪಂಡಿತವಕ್ಕಿ' ಎಂಬುದಾಗಿ ಕನ್ನಡದಲ್ಲಿ ಗಿಳಿಗೆ ಹೆಸರಾಗಲು ಇದೇ ಕಾರಣವಾಗಿರಬಹುದೋ ಏನೋ? ಮಲಯಾಳ ಭಾಷೆಯಲ್ಲಿ "ಕಿಳಿಪ್ಪಾಟ್ಟು" ಎಂಬ ಒಂದು ಜಾತಿಯ ಕಾವ್ಯಭೇದವಿದೆ. ವಾಲ್ಮೀಕಿ ಮುನೀಶ್ವ ರನು ಕುಶಲವರಿಗೆ ಹೇಳಿದುದರಿಂದ "ವಾಲ್ಮೀಕಿ ರಾಮಾಯಣ" ವೆಂಬ ಹೆಸ

ರಾದಂತೆ, ಗಿಳಿ ಹೇಳುವ ಹಾಡಾದುದರಿಂದ ಅದಕ್ಕೆ "ಕಿಳಿಪ್ಪಾಟ್ಟು" ಎಂಬ ನಾಮ ವೊದಗಿತು. ಆದರೆ, ವಾಲ್ಮೀಕಿ ಕುಶಲವರಿಗೆ ಆ ಕಾವ್ಯವನ್ನೇಕೆ ಹೇಳಿದನೆಂಬುದು ಎಲ್ಲರಿಗೂ ಗೊತ್ತಿದೆ. ಈ ಪಕ್ಷಿ ಮನುಷ್ಯರಿಗೆ ಬೋಧಿಸುವುದೆಂದರೇನು? ಎಂಬ ವಿಷಯದಲ್ಲಿ ಮಲಯಾಳ ಭಾಷಾ ವಿದ್ವಾಂಸರು ಇನ್ನೂ ವಿಚಾರಿಸುತ್ತಿದ್ದಾರೆ. ಮಲಯಾಳವೆಂದರೆ, ನಮ್ಮ ಮಲಯಾದ್ರಿಯು ಒಂದು ಪಕ್ಕ. ಅದರಿಂದ ನಮ್ಮ ಬನ ವಾಸಿಯು ರಾಮಪ್ಪನ ಒಂದು ಪಾಡೇ ಆ ಕಿಳಿಪ್ಪಾಟ್ಟಾಗಿರಬಹುದೊ ಏನೊ?

ವಿದ್ಯಾಧರ ರಾಜಪುತ್ರನಾದ ಜೀಮೂತವಾಹನನು ನಾಗ ಜನಾಂಗದ ರಕ್ಷಣೆ ಗಾಗಿ ತನ್ನ ಮೈಯನ್ನೇ ಗರುಡನಿಗೆ ಅರ್ಪಿಸಿದ ಪವಿತ್ರ ಸ್ಥಳವೂ ಈ ನಾಡಿಗೆ ಸೇರಿದುದು. ಅದನ್ನೇ ಪಂಪನು 'ವಿಕ್ರಮಾರ್ಜುನ ವಿಜಯ'ದ ನಾಲ್ಕನೆಯ ಆಶ್ವಾಸದಲ್ಲಿ—"ಎಂದು ಅಭಿನವ ಜೀಮೂತವಾಹನಂ ಜೀಮೂತವಾಹನನ ಪರೋಪಕಾರದ ಬೀರದ ಪೆಂಪಂ ಮೆಚ್ಚುತಂ ಬಂದು ಗೋಕರ್ಣ ನಾಥನಂ...... ಕಂಡು ಕೈಗಳಂ ಮುಗಿದು" ಎಂದು ವರ್ಣಿಸಿರುತ್ತಾನೆ. ಇದು ನಮ್ಮ ನಾಡಿನ ಪೌರಾಣಿಕ ಚರಿತ್ರೆಯಾಯಿತು.

ಮತ ಪಕ್ಷಪಾತವಿಲ್ಲದೆ ಪ್ರಜೆಗಳನ್ನೆಲ್ಲ ಪಾಲಿಸಿ ರಾಜರಿಗೆ ದೃಷ್ಟಾಂತ ಸ್ವರೂಪಿ ಗಳೂ ನಮ್ಮ ಕನ್ನಡ ರಾಜರೂ ಆದ ಕದಂಬರಿಗೆ ತಾಯ್ನಾಡೇ ಮೇಲೆ ಹೇಳಿದ ಬನವಾಸಿ. ಒಂದು ಕಾಲದಲ್ಲಿ ಬನವಾಸಿಯೆಂದರೆ, ವೇದ ವೇದಾಂಗ ಪಾರಂಗತರ, ವ್ಯಾಖ್ಯಾಕಾರರ ಬೀಡಾಗಿತ್ತೆಂಬುದನ್ನು ಎಲ್ಲರೂ ಒಪ್ಪುತ್ತಾರೆ. ಅದರಿಂದ, ಪಂಪನು 'ವಿಕ್ರಮಾರ್ಜುನ ವಿಜಯ'ದಲ್ಲಿ ಈ ನಾಡನ್ನು ವಿಶೇಷವಾಗಿ ವರ್ಣಿಸಿದುದು ಅತಿಶಯ ವಲ್ಲ. ನಮ್ಮಲ್ಲಿ ಅತಿಶಯವಾದ ವೈಭವವನ್ನು ಅನುಭವಿಸುತ್ತಿರುವ ಕೆಲವು ಮಹನೀಯರು ವಿಲಾಸಕ್ಕೆ ಪರವಶರಾಗಿ ಇಂಗ್ಲೆಂಡ್, ಫ್ರಾನ್ಸ್ ಮುಂತಾದ ಪರ ದೇಶಗಳಲ್ಲಿ ಮನೆ ಮಾಡಿಕೊಂಡಿರುತ್ತಾರಲ್ಲವೆ? ಪಂಪನು ವಿಲಾಸಪರನಾದವನಲ್ಲ; ರಾಜಕಾರ್ಯ ನಿಬದ್ಧನಾದುದರಿಂದ ಅವನ ಮನಸ್ಸಿನಲ್ಲಿ, "ಅಯ್ಯೋ ಪಾರತಂತ್ರ್ಯವೆ! ಈ ಕನ್ನಡ ತಾಯ್ನಾಡಿನಲ್ಲೇ ಹುಟ್ಟಿ ಬೆಳೆದು ವಿಹರಿಸಬೇಕಿತ್ತು. ಹುಂ! ಯೋಗ್ಯತೆ ಇಲ್ಲ" ಎಂಬೆಣಿಕೆಯೊಸರು ಎದೆಯಲ್ಲಿ ಕವಿತೆಯ ಹೊನಲಾಗಿ ಹರಿದುದರಲ್ಲಿ ತಪ್ಪಿದೆಯೆ? ಇಲ್ಲ; ಅದರಿಂದಲೇ ಆ ಪಂಪನು ಯಶಶ್ಶರೀರಿಯಾಗಿ ಈಗಲೂ ಇಲ್ಲಿ ವಿಹರಿಸುತ್ತಿದ್ದಾನೆ. ಇಂತಹ ಕನ್ನಡ ನಾಡಿನಲ್ಲಿ ಈ ಸಾಹಿತ್ಯ ಸಮ್ಮೇಳನವು ಎಂದೋ ಜರುಗಬೇಕಿತ್ತು. ಹಾಗೆ ಜರುಗದಿರಲಿಕ್ಕೆ ಇಲ್ಲಿಯ ಕನ್ನಡಿಗರಾದ ಬಂಧು ಗಳ ಅಸಡ್ಡೆಯೇ ಕಾರಣವೆಂದು ನಾನೆಂದೂ ಭಾವಿಸಲಾರೆನು. ವರ್ಷಕ್ಕೆ ಒಂದ ರಂತಲ್ಲವೆ ಸಮ್ಮೇಳನವಾಗತಕ್ಕುದು? ಹೊಸಗನ್ನಡ ನಾಡುಗಳ ಪೂಜೆಗಳನ್ನು ಸ್ವೀಕರಿಸುತ್ತ ಸಾಹಿತ್ಯ ದೇವಿ ಬರುವಾಗ ಇಷ್ಟು ತಡವಾಯಿತು.

೨

ಈ ಸಂದರ್ಭದಲ್ಲಿ ಗೆಳೆಯರೊಬ್ಬರು ವಿಲಾಸಕ್ಕಾಗಿ ಕೇಳಿದ ಮಾತು ನೆನಪಾಗು ತ್ತಿದೆ: "'ಮದುವೆಯ ಸಾಹಿತ್ಯ, ಊಟದ ಸಾಹಿತ್ಯ' ಎಂದರೆ ಸುಲಭವಾಗಿ ಅರ್ಥ

ವಾಗುತ್ತದೆ. ಆಯಾ ಕೆಲಸಗಳೇನೆಂದು ತಿಳಿದ ಕೂಡಲೆ ಆಯಾ 'ಸಾಹಿತ್ಯ'ಗಳನ್ನೂ ಮಾಡಬಹುದು. ಆದರೆ ನಿಮ್ಮ ಬರಿಯ 'ಸಾಹಿತ್ಯ'ವೆಂದರೆ ಯಾವುದಕ್ಕಾಗಿ ಮಾಡುವುದು?" ಇದೇ ಆ ಮಾತು. ವಿಲಾಸಕರವಾದ ಪ್ರಶ್ನೆಯಿಂದ ನಿಜವಾದ ಉತ್ತರವನ್ನು ಪಡೆಯಬೇಕೆಂದೇ ಅವರು ಹಾಗೆ ಕೇಳಿದುದು. ಶಬ್ದಾರ್ಥಗಳು ಸಹಿತವಾಗಿರುವುದನ್ನೇ ನಾವು 'ಸಾಹಿತ್ಯ'ವೆಂದು ಕರೆವುದು. ಶಬ್ದಾರ್ಥಗಳೆಂಬ ಸಾಮಾನ್ಯ ವಚನದಲ್ಲಿ ವೇದ ಮೊದಲ್ಗೊಂಡು ಗೆಳೆಯರು ಅನ್ಯೋನ್ಯವಾಗಿ ಬರೆಯುತ್ತಿರುವ ಪತ್ರದ ವರೆಗಿನವುಗಳೂ ಸೇರುತ್ತವೆ. ಮನುಷ್ಯನಲ್ಲಿ ಸಂಸ್ಕೃತಿಯನ್ನೊದಗಿಸಲಿಕ್ಕೆ ತಯಾರಾದ ಶಬ್ದಾರ್ಥಗಳ ಸಾಹಿತ್ಯವನ್ನೇ ಸಾಹಿತ್ಯಶಾಸ್ತ್ರವೆಂದು ಹೇಳುವುದು. ಆ ಸಾಹಿತ್ಯಾಭ್ಯಾಸದಿಂದಲೇ ಅಂತಃಕರಣಗಳೂ ತ್ರಿಕರಣಗಳೂ ಪಳಗಿ ದುರ್ಭಾವನೆಯಡಗಿ ಸತ್ಕಾರ್ಯದಲ್ಲಿ ಸಮರ್ಥಗಳಾಗುತ್ತವೆ. ಆ ಸಾಮರ್ಥ್ಯವನ್ನೇ ಸಂಸ್ಕೃತಿಯೆನ್ನುವುದು. ನೋಡಿರಿ, ಕವಿ ಕಾಮನು ಹೇಳುವ ಅಂತಃಕರಣ ಸ್ವರೂಪವನ್ನು—

> **ನೆನೆಯಿಸುಗುಂ ಮನಂ ಮರೆಯಿಸಿರ್ದ್ದ ಪದಾರ್ಥಮನಾ ಪದಾರ್ಥ ಸಂ।**
> **ಜನಿತ ವಿಭೇದಮಂ ಬಗೆಯೆ ಬುದ್ಧಿ ವಿಚಾರಿಸುಗುಂ ವಿಚಾರಕ॥**
> **ಲ್ಪನೆಯನಹಂಕೃತಂ ತಿಳಿದು ನಿಶ್ಚಯಿಸಿರ್ಕುಮದಂ ವಿಶುದ್ಧ ಭಾ।**
> **ವನೆಯಿನನಾರತಂ ಮರೆಯದಿರ್ಪ್ಪುದು ಚಿತ್ತಮುದಾತ್ತ ವೃತ್ತಿಯಿಂ॥**

ಕಾಮನು ವಿವರಿಸುವುದು ಪಳಗಿ ಕಾರ್ಯಸಾಮರ್ಥ್ಯವಡೆದ ಅಂತಃಕರಣಗಳ ಸ್ವರೂಪವನ್ನು. ಅದು ಎಷ್ಟು ಸಕಾರಣವಾಗಿದೆಯೆಂಬುದನ್ನು ಭಾವಿಸಿರಿ. "ಮರೆತು ಹೋದ ವಿಷಯವನ್ನು ಆಯಾ ಸಂದರ್ಭಾನುಸಾರವಾಗಿ ನೆನೆಯಿಸುವ ಅಂತಃಕರಣ ಭಾಗವೇ ಮನಸ್ಸು; ಹಾಗೆ ನೆನಪಾದುವುಗಳೊಳಗೆ ಇದು ಹಾಳು, ಇದು ಒಳ್ಳೆಯದು, ಇದು ಅಕಾರ್ಯ, ಇದು ಸುಕಾರ್ಯ ಎಂಬುದನ್ನು ವಿಚಾರಪೂರ್ವಕವಾಗಿ ಬೋಧಿಸುವುದೇ ಬುದ್ಧಿ; ಅದನ್ನು ಹಿಂಬಾಲಿಸಿ ಇತರ್ತರದ ಬೋಧನೆಗಳನ್ನು ಪಡೆದು ಹಾಳನ್ನುಳಿದು ಒಳ್ಳೆಯದೇ ಕಾರ್ಯವೆಂದು ನಿಶ್ಚಯಿಸುವುದೇ ಅಹಂಕೃತವು. (ಇಲ್ಲಿಯ ಅಹಂಕೃತವೆಂದರೆ ದುರಹಂಕಾರವಲ್ಲ, 'ನಾನು' ಎಂಬ ಕಲ್ಪನೆ. ಅದಿಲ್ಲದೆಯೇ ಹಲವು ಮಂದಿ ಸಜ್ಜನರೆನ್ನಿಸಿದವರಿಂದ ಸತ್ಕಾರ್ಯವೇನೂ ಸಾಗದಿರುವುದು. ಆ ಸದುದ್ದೇಶವೇ ಅಭಿಮಾನವೆನಿಸುವುದು.) ಅದಕ್ಕನುವಾಗಿ ನಿರ್ಣೀತಾಭಿಪ್ರಾಯವನ್ನು ಭದ್ರವಾಗಿ ಇರಿಸಿಕೊಳ್ಳುವುದೇ ಚಿತ್ತವು.

ಸಂಸ್ಕೃತಿಗೊಂಡ ಪ್ರತಿಯೊಂದು ವ್ಯಕ್ತಿಯನ್ನೂ ಒಂದು ಉತ್ತಮ ಸರಕಾರವೆನ್ನಬಹುದು. ಅದರಿಂದಲೇ ಕಾಳಿದಾಸನು, "ಸತಾಂ ಹಿ ಸಂದೇಹಪದೇಷು ವಸ್ತುಷು ಪ್ರಮಾಣಮಂತಃಕರಣಪ್ರವೃತ್ತಯಃ" ಎಂದು ಹೇಳಿದುದು. ಆ ಅಂತಃಕರಣವೆಂಬುದೇ ಈ ಸರಕಾರದ ನ್ಯಾಯ ವಿಧಾಯಕ ಸಭೆ. ಅದಕ್ಕನುವಾದ ಕಾರ್ಯಕಾರಿ ಮಂಡಳಿಯೂ ಅದನ್ನು ಸೇರಿಕೊಂಡೇ ಇದೆ. ಇದು ಮೊದಲಿನದಕ್ಕಿಂತ ಚಿಕ್ಕದಾದರೂ ಆ ವೈಯಕ್ತಿಕ ಸರಕಾರದ ಪರಿಣಾಮವೆಲ್ಲ ಇದನ್ನೇ ಆಶ್ರಯಿಸಿಕೊಂಡಿದೆ.

ಇದರಲ್ಲಿರುವುದು ಮನಸ್ಸು, ವಾಕ್ಕು, ಕಾಯವೆಂಬ ಮೂರೇ ಸದಸ್ಯರು. ಇದನ್ನೇ ತ್ರಿಕರಣವೆಂದು ಕರೆಯುತ್ತಾರೆ. ಅಂತಃಕರಣದಲ್ಲಾದ ನಿರ್ಣಯವನ್ನು ಪ್ರತಿನಿಧಿಯಾದ ಮನಸ್ಸು ಸಭೆಯ ಮುಂದಿರಿಸುತ್ತದೆ. ಪ್ರಕಟನಾಧಿಕಾರಿಯಾದ ಸದಸ್ಯನೇ ವಾಕ್ಕೆಂಬುದು. ಈ ಸದಸ್ಯನು ನಾಲಗೆಯೆಂಬ ಮುದ್ರಣಾಲಯದಲ್ಲಿ, ಮನಸ್ಸಿನ ತತ್ತ್ವಗಳನ್ನೆಲ್ಲ ಪ್ರಕಟಿಸಗೊಳಿಸುತ್ತಾನೆ. ಈ ಸರಕಾರದೊಳಗಿನ ಉದ್ಯೋಗಸ್ಥರೆಲ್ಲರ ಕಾರ್ಯನಿರ್ವಹಣಾಧಿಕಾರಿಯೇ ಕಾಯವೆಂಬುದು. ಈ ಅಧಿಕಾರಿಯ ಒಳಗಾಗಿ ಕೆಲಸ ಮಾಡುವ ಕೈ, ಕಾಲು ಮೊದಲಾದ ಅಂಗಗಳೇ ಆ ಉದ್ಯೋಗಸ್ಥರು. ಮೇಲೆ ಹೇಳಿದ ನಿಜವಾದ ಸಂಸ್ಕೃತಿಯಿದ್ದರೆ ಮಾತ್ರವೇ ವೈಯಕ್ತಿಕ ಸರಕಾರದ ಕಾರ್ಯಕಲಾಪಗಳೆಲ್ಲ ಅನುಗೊಂಡು ಸಾಗುತ್ತವೆ, ಲೋಕಹಿತವಾಗುತ್ತದೆ. ಅದಕ್ಕಾಗಿಯೇ ಪಂಪನು ಹೇಳಿದಂತಿರುವ ಈಗಿನ ನಮ್ಮ "ಅಭಿನವ ಜೀಮೂತವಾಹನ"ನು ಆತ್ಮಾರ್ಪಣವನ್ನಾದರೂ ಮಾಡಲಿಕ್ಕೊಪ್ಪಿದುದು. ಈ ತ್ರಿಕರಣಗಳು ಅಂತಃಕರಣದ ನಿರ್ಧಾರವನ್ನನುಸರಿಸುವುದೇ ನಿಜವಾದ ಸಂಸ್ಕೃತಿ. ಅದನ್ನೇ ಒಬ್ಬ ಸಂಸ್ಕೃತ ಕವಿ ಎಷ್ಟು ಸರಳವಾಗಿ, ಅಂದವಾಗಿ ವಿವರಿಸಿದ್ದಾನೆ ನೋಡಿರಿ:

"ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ಮಹಾತ್ಮನಾಂ."

ಹಾಗಿಲ್ಲದ ವ್ಯಕ್ತಿಗಳನ್ನೂ ಅದೇ ಕವಿ ಸ್ವರಭೇದಾಭಿನಯಗಳಿಂದ ವಿವರಿಸುತ್ತಾನೆ:

"ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ದುರಾತ್ಮನಾಂ."

ಅದನ್ನೇ ನೃಪತುಂಗನು—

ಜಡಜನಮುಮೆಲ್ಲವೋದಂ।
ತಡೆಯದೆ ಕಲ್ಗುಂ ಗುರೂಪದೇಶಕ್ರಮದಿಂ॥
ನುಡಿವಲ್ಮೆಯಲ್ತದೇಂ ಕ।
ಲ್ತೊಡನೋದುವುವಲ್ತೆ ಗಿಳಿಗಳುಂ ಪುರುಳಿಗಳುಂ॥

ಎಂದು ಮತ್ತೊಂದು ರೀತಿಯಲ್ಲಿ ವಿವರಿಸಿದ್ದಾನೆ. ಇರಲಿ; ಲೋಕ ಹಿತವಾಗಬೇಕಾದರೆ ಆಯಾ ವ್ಯಕ್ತಿಗಳಲ್ಲಿ ಸಂಸ್ಕೃತಿ ನೆಲೆಗೊಂಡಿರಬೇಕು; ಆ ಸಂಸ್ಕೃತಿಯುಂಟಾಗಬೇಕಾದರೆ ಮೊದಲಿನ ಸಾಹಿತ್ಯಗಳನ್ನಭ್ಯಾಸ ಮಾಡುವುದಷ್ಟೇ ಅಲ್ಲ; ಕಾರ್ಯಗಳಾಗುವಂತೆ ನಮ್ಮ ಕರಣಗಳಲ್ಲಿ ಅವುಗಳ ಸಾಮರಸ್ಯವನ್ನು ಒದಗಿಸಬೇಕು. ಪೂರ್ವಾಚಾರ್ಯರ ಸಂಸ್ಕೃತಿವಡೆದ ತ್ರಿಕರಣಗಳೊಳಗಿನ ವಾಕ್ಕೇ ವಿಸ್ತರಿಸಿ ಪೂರ್ವ ಸಾಹಿತ್ಯವಾದಂತೆ, ಈಗಿನವರ ವಾಕ್ಕೇ ವಿಸ್ತರಿಸಿ ಆಧುನಿಕ ಸಾಹಿತ್ಯವಾಗುತ್ತದೆ. ಆ ಪೂರ್ವ ಸಾಹಿತ್ಯವು ಆಧುನಿಕರ ಸಂಸ್ಕೃತಿಗೆ ಆಧಾರವಾದಂತೆ ಆಧುನಿಕ ಸಾಹಿತ್ಯವು ಭಾವಿ ಜನಾಂಗದ ಸಂಸ್ಕೃತಿಗೆ ಅಡಿಗಟ್ಟಾಗುವುದು. ಆಯಾ ದೇಶೀಯರ ತ್ರಿಕರಣಗಳೊಳಗಿನ ಸಾಹಿತ್ಯ ರೂಪದ ವಾಕ್ಕೆಂಬುದು ಆಯಾ ದೇಶ ಭಾಷಾತ್ಮಕವೇ ಆಗಿರತಕ್ಕುದೆಂಬುದನ್ನು ಹೇಳಬೇಕಾಗಿಲ್ಲ. ಹಾಗಿಲ್ಲದೆ, ಪರ ಭಾಷಾತ್ಮಕವಾದರೆ ಆ ಪಾರತಂತ್ರ್ಯವೇ ಮನಸ್ಸಿನಲ್ಲಿಯೂ ಕಾರ್ಯದಲ್ಲಿಯೂ ಪರಿಣಮಿಸುವುದು;

ಸಂಸ್ಕೃತಿ ಕೆಟ್ಟುಹೋಗುವುದು. ಅದರಿಂದಲೇ ಕೆಲಗಾಲದಿಂದಿತ್ತ ನಮ್ಮ ಕನ್ನಡಿಗರ ಹುರುಪು ಮಾಸಿಹೋಗಿರುವುದು. ಎಚ್ಚರಗೊಂಡ ಕನ್ನಡಿಗರಲ್ಲಿ ಆ ಸಂಸ್ಕೃತಿ ಇತ್ತೀಚೆಗೆ ತಲೆದೋರತೊಡಗಿರುವುದು ಆನಂದಾಸ್ಪದವು.

೩

ಕನ್ನಡ ಸಾಹಿತ್ಯದ ಬೇರು ಕ್ರಿಸ್ತ ಶಕಕ್ಕಿಂತಲೂ ಅಡಿಯಲ್ಲಿ ನೆಟ್ಟು ಹರಡಿಕೊಂಡಿತ್ತೆಂಬುದು ಈಗೀಗ ತಿಳಿಯಬಂದಿದೆಯಷ್ಟೆ! ಈ ನಮ್ಮ ಕನ್ನಡ ಸಾಹಿತ್ಯವೆಂಬ ವೃಕ್ಷದಲ್ಲಿ ಜೈನ ವಾಙ್ಮಯ, ವೀರಶೈವ ವಾಙ್ಮಯ, ವೈಷ್ಣವ ವಾಙ್ಮಯ ಎಂಬ ಮೂರು ಕೊಂಬೆಗಳಿರುತ್ತವೆ. ಆ ಕೊಂಬೆಗಳಲ್ಲಿಯೂ ರೆಂಬೆಗಳಿರುತ್ತವೆ. ಬಿರುಗಾಳಿ ಬಂದಾಗ ಆ ಕೊಂಬೆಗಳೇ ಅನ್ಯೋನ್ಯವಾಗಿ ಒರಸೊರಸಿ ಉರಿಯೇಳುವ ಸಂಭವಗಳೂ ಇದ್ದುವು; ಆದರೂ ಅಂತಹ ಅಪಶಕುನವೇನೂ ಒದಗದೆ ಹಸುರೆಲೆಗಳಿಂದ ಹೊದ್ದಿಕೆಗೊಂಡು ಒಂದಾಗಿ ಹೂ ಹಣ್ಣುಗಳನ್ನೊದಗಿಸುತ್ತ ಬಂದಿರುವುವು. ತಾತ್ಪರ್ಯವೇನೆಂದರೆ, ಆಯಾ ಪಂಗಡದ ಕವಿಗಳೊಳಗೆ ಪರಸ್ಪರವಾಗಿ ಮತಭೇದವಿತ್ತು, ಭಾಷೆಯ ಆಂತರಿಕ ಭೇದವಿತ್ತು, ಕಾವ್ಯದ ಮಾರ್ಗ ಭೇದವಿತ್ತು, ಎಷ್ಟೆಷ್ಟೋ ಭೇದವಿತ್ತು. ಆದರೆ ಆ ಭೇದಗಳಿಂದ ಕನ್ನಡಿಗರಿಗೆ ಅಪಾಯವೇನೂ ಆಗಲಿಲ್ಲ; ಇಷ್ಟಾರ್ಥವೇ ಕೈಗೂಡುತ್ತ ಬಂದಿದೆ. ಸಾಮಾನ್ಯವಾಗಿ ಹೇಳುವುದಾದರೆ, ಸಾಹಿತ್ಯವು ಲಕ್ಷಣ ಬದ್ಧವಾಗಿರಬೇಕೆಂದು ಹೋರಾಡಿದ ಮನ್ನಣೆ ಜೈನರಿಗೆ. "ಸಾಹಿತ್ಯವೆಂದರೆ ಒಬ್ಬಿಬ್ಬರ ಸೊತ್ತಲ್ಲ; ಜನಸಾಮಾನ್ಯರ ಹಕ್ಕಿನದು. ಲಕ್ಷಣಗಳಲ್ಲೇ ಕಣ್ಣಿಡುತ್ತಹೋದರೆ ಅರ್ಥವಾಗದ ನಾಡವರಿಗೆ ಅದೊಂದು ಅವಲಕ್ಷಣವೇ ಆದೀತು" ಎಂದು ಅದನ್ನು ಊರಲ್ಲೆಲ್ಲ ಹಾಸುಹೊಕ್ಕಾಗಿ ಹೆಣೆದ ಹೆಗ್ಗಳಿಕೆ ವೀರಶೈವರಿಗೆ. ಒಂದು ತಣ್ಣೀರು, ಮತ್ತೊಂದು ಬೆನ್ನೀರು ಎಂದೆಣಿಸಿ ಎರಡನ್ನೂ ಸೇರಿಸಿದ ಜಾಣ್ಮೆ ವೈಷ್ಣವರಿಗೆ.

ಮತ ವಿಷಯಕವಾದ ಭೇದವಂತಿರಲಿ; ಈ ಪಂಗಡದೊಳಗಿನ ಭಾಷಾ ಮಾರ್ಗಗಳ ಭೇದವೇನೆಂದು ವಿಚಾರಿಸುವ: ಜೈನರು ಭಾಷಾ ಶುದ್ಧತೆಗಾಗಿ ಬಹಳವಾಗಿ ಹೆಣಗಾಡಿದವರು. ಕವಿರಾಜಮಾರ್ಗ, ಕಾವ್ಯಾವಲೋಕನ, ಭಾಷಾಭೂಷಣ, ಶಬ್ದಮಣಿದರ್ಪಣ, ಶಬ್ದಾನುಶಾಸನ ಎಂಬ ಗ್ರಂಥಗಳೇ ಈ ಹೇಳಿಕೆಗೆ ದೃಷ್ಟಾಂತಗಳು. ಈ ಸಂಪ್ರದಾಯ ವಾದಿಗಳ ನಿಯಮ ಬಂಧವೆಂದರೆ ಭಾಷಾ ಸ್ವಾತಂತ್ರ್ಯಕ್ಕೆ ಬಂಧವೆಂದೇ ವೀರಶೈವರಿಗೆ ತೋರಿತು. ಸಾಹಿತ್ಯ ಸಾಮ್ರಾಜ್ಯದಲ್ಲಿ ವೀರಶೈವರೆಂದರೆ ಸರ್ವಸಮತಾ ವಾದಿಗಳು. ಯಾವ ಸಂಸ್ಥೆಯಲ್ಲಾದರೂ ಸರಿಯೆ ಭಿನ್ನಾಭಿಪ್ರಾಯವುಂಟಾಗುವುದು ಅದರ ಸದಸ್ಯರು ವಿಚಾರವಂತರಾಗುತ್ತ ಬರುತ್ತಾರೆಂಬುದರ ಚಿಹ್ನೆ. ಸಾಹಿತ್ಯದಲ್ಲಿ ನೆಲೆಗೊಂಡ ಹಲವು ಕಡುನಿಯಮಗಳನ್ನು ಹರಿದೊಗೆದ ವೀರಶೈವರಿಂದಲೇ ಕನ್ನಡವು ಹೊಸ ರೂಪಕ್ಕೆ ತಿರುಗಿತೆಂದು ತೋರುತ್ತದೆ. ಬುದ್ಧರು ಪಾಲಿ ಭಾಷೆಯಲ್ಲೇ ಸಾಹಿತ್ಯವನ್ನು ಹಬ್ಬಿಸಿದಂತೆ ವೀರಶೈವರು ಕನ್ನಡ ಪದ್ಯಗಳಿಂದಷ್ಟೇ ಅಲ್ಲ, ವಚನಗಳಿಂದಲೂ ಅದನ್ನು ವಿಸ್ತರಗೊಳಿಸಿದರು. ಮೇಲೆ ಹೇಳಿದ ಮಾತಿನಿಂದ

ಜೈನ ಮತಸ್ಥರೆಲ್ಲರೂ ವ್ಯಾಕರಣಾದಿ ಲಕ್ಷಣ ಶಾಸ್ತ್ರಗಳಲ್ಲಿ ಅಂಥ ಶ್ರದ್ಧೆಯಿದ್ದವರೆಂದು ಭಾವಿಸಬಾರದು. ಆದಿ ಪುರಾಣದ ಪ್ರಥಮಾಶ್ವಾಸದಲ್ಲಿ—

ಇರು ಮರುಳೆ ಶುಷ್ಕ ವೈಯಾ।
ಕರಣಂಗಂ ಶುಷ್ಕ ತಾರ್ಕಿಕಂಗಂ ಬೆಳ್ಳ॥
ಕ್ಕರಿಗಂಗಂ ವಿಷಯಮೆ ಕಾ।
ವ್ಯರತ್ನಮತಿ ಚತುರ ಕವಿ ಕದಂಬಕ ವಿಷಯಂ॥

ಹೀಗೆ ಹೇಳಿದ ಪಂಪನು ಜೈನನೇ ಅಲ್ಲವೆ? ಜೈನರಲ್ಲಿ ರಸಜ್ಞರಾದ ವಿದ್ವಾಂಸರೂ ಕವಿಗಳೂ ಎಷ್ಟೋ ಮಂದಿ ಇದ್ದರೆಂಬುದರಲ್ಲಿ ಸಂದೇಹವಿಲ್ಲ. ಆದರೂ, ನಿಯಮ ಬಂಧಗಳು ಮಿತಿ ಮೀರುತ್ತಬಂದುದರಿಂದ ಸಮತಾವಾದಿಗಳಾದ ಹರಿಹರಾದಿಗಳು ಅವನ್ನು ಕಡಿಯಬೇಕಾಗಿ ಬಂದುದಕ್ಕೆ ದೃಷ್ಟಾಂತಗಳೂ ಒದಗುತ್ತವೆ.

ಮೇಲೆ ಹೇಳಿದ ಎರಡು ಪಂಗಡದವರಲ್ಲಿರುವ ಉದಾತ್ತ ವಿಷಯಗಳನ್ನೆತ್ತಿ ಕೊಂಡ ಉದಾರ ಪಕ್ಷದವರು ವೈಷ್ಣವ ಕವಿಗಳು. ಇಂಥ ಮಧ್ಯಮ ಮಾರ್ಗ ದವರಲ್ಲಿ ಯಾವಾಗಲೂ ತೀಕ್ಷ್ಣತೆ ಇರುವುದಿಲ್ಲ; ಅದು ಅನುಯಾಯಿಗಳನ್ನು ಹೆಚ್ಚಾಗಿ ಆಕರ್ಷಿಸುವುದೂ ಇಲ್ಲ. ಅದರಿಂದ ಈ ವೈಷ್ಣವ ಕವಿಗಳ ಸಂಖ್ಯೆ ಮೊದಮೊದಲು ಕಡಿಮೆಯಾಗಿತ್ತು. ಆದರೆ ಕಾಲವು ಕಳೆಯುತ್ತ ಬಂದು ಚಿಕದೇವರಾಜರ ಸಮಯ ದಲ್ಲಿ ಸಾಹಿತ್ಯ ಸಾಮ್ರಾಜ್ಯಾಧಿಕಾರವು ಈ ವೈಷ್ಣವ ಕವಿಗಳ ಅಧಿಕಾರಕ್ಕೆ ಬಂದಿತ್ತು. ಅಧಿಕಾರವಲ್ಲವೆ ಅದು? ಆಗ ಇವರೂ ಸಂಪ್ರದಾಯ ವಾದಿಗಳಾಗಿ ಲಕ್ಷಣ ಶಾಸ್ತ್ರಾದಿ ಗಳನ್ನು ಬರೆಯತೊಡಗಿದರು; ಅನುಯಾಯಿಗಳೂ ಹೆಚ್ಚಾದರು. ಇವರಲ್ಲದೆ ಆಂಡಯ್ಯನೇ ಮೊದಲಾದ ಅಚ್ಚಗನ್ನಡಿಗರೆಂಬ ವೈಶಿಷ್ಟ್ಯ ವಾದಿಗಳೂ ಕನ್ನಡದಲ್ಲಿ ಇದ್ದರು. 'ಆಂಡಯ್ಯನಲ್ಲದೆ ಆ ಮಾರ್ಗದಲ್ಲಿ ಮತ್ತಾರೂ ಬರೆದುದಾಗಿ ತಿಳಿದು ಬರಲಿಲ್ಲ. ಅದರಿಂದ ಅಂಥ ಪಂಗಡವೊಂದಿತ್ತೆಂದು ಹೇಗೆ ಹೇಳುವುದು?' ಎಂದು ಪ್ರಶ್ನಿಸಬಹುದು. ಆದರೆ, ಆ ವಿಷಯವನ್ನು ವಿಸ್ತಾರವಾಗಿ, ನನಗರಿದಂತೆ ಬೇರೆ ಕಡೆಯಲ್ಲಿ ಚರ್ಚಿಸಿರುವೆನಾದುದರಿಂದ ಇಲ್ಲಿ ಮತ್ತೊಮ್ಮೆ ವಿವರಿಸುವುದು ತಕ್ಕುದಲ್ಲ. 'ಶಬ್ದಮಣಿ ದರ್ಪಣವೇ ಆ ಪಂಗಡವನ್ನು ಒಪ್ಪಿದೆ' ಎಂದಿಷ್ಟು ಹೇಳಿ ಆ ಪ್ರಶ್ನೆ ಯನ್ನು ಉತ್ತರಿಸುತ್ತೇನೆ. ಈಗಳಿನ್ನು ಅಧಿಕಾರಾರೂಢವಾಗುತ್ತಿರುವುದು ವಿಶಿಷ್ಟ ವಾದ ಹೊಸಗನ್ನಡ ಸಾಹಿತ್ಯವು. ಇದರಲ್ಲಿ ಜೈನ ಶೈವಾದಿ ಮತ ಸಂಬಂಧದ ಮುದ್ರೆ ಇಲ್ಲ. ಪಾಶ್ಚಾತ್ಯ ಪೌರ್ವಾತ್ಯ ಸಂಸ್ಕೃತಿ, ಈಗಿನ ವಾತಾವರಣದಿಂದೊದಗಿದ ರಾಷ್ಟ್ರೀಯ ಭಾವನೆ, ಆತ್ಮ ವಿಶ್ವಾಸ—ಈ ಮುಪ್ಪುರಿಗಳಿಂದ ಬಲಿದಿರುವ ಸಾಹಿತ್ಯ ವಿದು. ಈ ನೂತನ ಸಾಹಿತ್ಯ ಸುಧಾರಕರೇ ಸ್ವಾತಂತ್ರ್ಯ ವಾದಿಗಳು. ಇದೀಗ ಕನ್ನಡ ಸಾಹಿತ್ಯ ಸಾಮ್ರಾಜ್ಯದ ಸಿಂಹಾವಲೋಕನ.

೪

"ಕನ್ನಡ ಭಾಷೆಗೆ ಪೂರ್ವದ ಹಳಗನ್ನಡ, ಹಳಗನ್ನಡ, ಹೊಸಗನ್ನಡ ಎಂಬ ಮೂರು ಅವಸ್ಥೆಗಳಿರುವಂತೆ ತೋರುತ್ತದೆ. ನೃಪತುಂಗನು ತನ್ನ ಕಾಲಕ್ಕೆ ಹಿಂದೆ

ಹಳಗನ್ನಡವೆಂಬ ಭಾಷೆಯಿದ್ದಂತೆ ಹೇಳಿದ್ದಾನೆ. ಪೂರ್ವದ ಹಳಗನ್ನಡವು ಕದಂಬರ ರಾಜಧಾನಿಯಾದ ಬನವಸೆಯಲ್ಲಿ ವ್ಯವಹಾರದಲ್ಲಿದ್ದಂತೆಯೂ ಅನೇಯ ಶತಮಾನದ ವರೆಗೆ ಬಳಕೆಯುಲ್ಲಿದ್ದಂತೆಯೂ ಕೆಲವರು ಹೇಳುತ್ತಾರೆ'' ಎಂದು ಕನ್ನಡ ಭಾಷೆಯಲ್ಲಿ ಅವಸ್ಥಾ ತ್ರಯವಿತ್ತೆಂದು ಊಹಿಸಲಿಕ್ಕೆ ಕಾರಣವನ್ನೂ, ಆ ಪೂರ್ವದ ಹಳಗನ್ನಡದ ಪ್ರಾಂತವಿಂಥದಾಗಿರಬಹುದೆಂಬುದನ್ನೂ ತಮ್ಮ ಕವಿಚರಿತೆಯ ಮುನ್ನುಡಿಯಲ್ಲಿ ಶ್ರೀ ಆರ್. ನರಸಿಂಹಾಚಾರ್ಯರು ಸೂಚಿಸಿದ್ದಾರೆ. ಮುಂದೆ ಅದನ್ನೇ ಸಮರ್ಥಿಸು ವಾಗ, ''ಹಳಗನ್ನಡ ವ್ಯಾಕರಣಗಳಲ್ಲಿರುವ ಸೂತ್ರಗಳಿಂದ ಸಿದ್ಧಿಸದ 'ಸಂದಾನ್, ಬಂದೋನ್, ಒಕ್ಕಲುಳ್, ಕೆಡುಗ' ಮೊದಲಾದ ಶಬ್ದರೂಪಗಳು ಅನೇಯ ಶತ ಮಾನದಲ್ಲಿಯೂ ಅದಕ್ಕೆ ಪೂರ್ವದಲ್ಲಿಯೂ ಹುಟ್ಟಿರುವ ಶಾಸನಗಳಲ್ಲಿ ದೊರೆಯುತ್ತವೆ. ಈ ರೂಪಗಳು ತಮಿಳಿನಲ್ಲಿ ದೊರೆವ ರೂಪಗಳನ್ನು ಹೋಲುತ್ತವೆ. ಇಂಥ ಶಬ್ದರೂಪ ಗಳ ಪ್ರಯೋಗ ಪ್ರಾಚುರ್ಯವು ಪೂರ್ವದ ಹಳಗನ್ನಡಕ್ಕೆ ಒಂದು ಗುರುತಾಗಿದ್ದಂತೆ ತಿಳಿಯಬಹುದಾಗಿದೆ'' ಎಂದು ವಿಮರ್ಶಿಸಿರುತ್ತಾರೆ.

ಆ ಪೂರ್ವದ ಹಳಗನ್ನಡವು ಕದಂಬರ ರಾಜಧಾನಿಯಾದ ಬನವಸೆಯಲ್ಲಿ ಮಾತ್ರವೇ ವ್ಯವಹಾರದಲ್ಲಿದ್ದುದೆಂದೂ, ಅನೇಯ ಶತಮಾನದ ವರೆಗೆ ಬಳಕೆಯಲ್ಲಿದ್ದುದೆಂದೂ ಆಚಾರ್ಯರಿಗೆ ಹೇಳಿದ ಆ ಕೆಲವರ ಅಭಿಪ್ರಾಯವು ತೀರ ಸರಿಯಲ್ಲ. ನಮ್ಮಲ್ಲಿ ಕೆಲವರಿಗೆ ತಮ್ಮೊಳಗಿನ ವ್ಯಾವಹಾರಿಕ ಭಾಷೆ ಈಗಲೂ ಅದೇ. ಆ ಪಂಗಡದವರೆಲ್ಲ ಕದಂಬರ ಆಳಿಕೆಯ ಸಮಯದಲ್ಲಿ, ಈ ಬನವಸೆಯ ಪ್ರಾಂತದಿಂದಲೇ ಆ ಕಡೆಗೆ ಹೋಗಿ ನೆಲೆಗೊಂಡವರೆಂಬುದರಲ್ಲಿ ಸಂದೇಹವಿಲ್ಲ. ಆ ಹಳಗನ್ನಡದ ಬಳಕೆ ಬನವಸೆಯ ಪ್ರಾಂತದಲ್ಲಿ ಈಗ ಹೇಗಿದೆಯೆಂಬುದರ ತಿಳಿವು ನನಗಿಲ್ಲ; ನಮ್ಮಲ್ಲಿ ಆ ಹಳೆನುಡಿಯ ವೈಶಿಷ್ಟ್ಯವೀಗಲೂ ಉಳಿದುಕೊಂಡಿದೆ. ಆದರೆ ''ಹಿತ್ತಿಲ ಗಿಡ ಮದ್ದಲ್ಲ'' ಎಂಬ ನಾಣ್ನುಡಿ ತಪ್ಪಾಗುವುದೆ? ಹೊಸಬರೆದುರಲ್ಲಿ ಆ ನುಡಿಯನ್ನಾಡುವುದೆಂದರೆ ಆ ಪಂಗಡದವರಿಗೆ ಲಜ್ಜೆ. ಹಾಗಿದ್ದರೂ, ಹಳ್ಳಿ ಹಳ್ಳಿಗಳಲ್ಲಿ ತಿರುಗಾಡಿ ''ಇದೀಗ ಆ ಪೂರ್ವದ ಹಳೆಗನ್ನಡವು'' ಎಂದು ತಿಳಿಸಿದ ಬಹುಮಾನವು ಶ್ರೀಯುತರಾದ ಪಿ. ಮಂಗೇಶರಾಯರಿಗೆ ಇರಲಿ; ಆ ಭಾಷೆಯ ವಿಶೇಷತೆ ಏನೆಂಬುದನ್ನು ಸಂಗ್ರಹ ವಾಗಿ ಹೇಳುತ್ತೇನೆ:—

ಸ್ತ್ರೀಲಿಂಗ ಪ್ರತ್ಯಯವೇ ಆ ಭಾಷೆಯಲ್ಲಿ ಇಲ್ಲವೆನ್ನಬಹುದು. ಪೂಜ್ಯಾರ್ಥದ ಬಹುವಚನದಲ್ಲಿ ಮಾತ್ರ ''ಅತ್ತೆಯೋರು ಬಂದವು'' ಎಂಬಂತೆ ನಾಮಪದಕ್ಕೆ ''ಓರ್'' ಪ್ರತ್ಯಯವನ್ನೂ, ಕ್ರಿಯಾಪದಕ್ಕೆ ''ಅವು'' ಪ್ರತ್ಯಯವನ್ನೂ ಸೇರಿಸುತ್ತಾರೆ. ಈ ''ಅವು'' ಎಂಬುದು ಸ್ವಭಾವತಃ ನಪುಂಸಕ ಕ್ರಿಯಾಪದದ ಬಹುವಚನ ಪ್ರತ್ಯಯವೇ ಆದರೂ ಅದನ್ನು ಈ ಪೂಜ್ಯಾರ್ಥದಲ್ಲುಪಯೋಗಿಸುತ್ತಾರೆ. ಆದರೆ ಸ್ತ್ರೀವಾಚಕ ಕೃಲ್ಲಿಂಗಗಳಲ್ಲಿ ಮಾತ್ರ ''ಬಂದೋಳು, ಹೋದೋಳು'' ಎಂಬಂತೆ ''ಅಳ್, ಅವಳ್'' ಎಂಬುದಕ್ಕೆ ಬದಲಾಗಿ ''ಓಳ್'' ಎಂಬ ಪ್ರತ್ಯಯವನ್ನು ಕೂಡಿಸುತ್ತಾರೆ. ಪುಲ್ಲಿಂಗದ ಏಕವಚನ ಪ್ರತ್ಯಯದ ಅನುಸ್ವಾರಕ್ಕೆ ಬದಲಾಗಿ ''ಬಂದ, ಹೋದ'' ಎಂಬಂತೆ

ಅರ್ಧಾನುಸ್ವಾರವನ್ನೇ ಉಪಯೋಗಿಸುತ್ತಾರೆ. ಈ ಅರ್ಧಾನುಸ್ವಾರದಿಂದಾಗಿ ಹಿಂದಿನ ಲಘ್ವಕ್ಷರವು ಗುರುವಾಗುವುದಿಲ್ಲ. ಆಂಧ್ರರ ಅರ್ಧಾನುಸ್ವಾರವನ್ನಿದು ನೆನೆಯಿಸುತ್ತದೆ. "ಉತ, ಉತ್ತ" ಮೊದಲಾದುವುಗಳು "ನಡೆಯುತ್ತಂ ಬಂದಂ" ಎಂಬಂತೆ ವ್ಯಾಕರಣಾನುಸಾರವಾಗಿ ವರ್ತಮಾನದ ಆಖ್ಯಾತ ಪ್ರತ್ಯಯಗಳು. ಆದರೆ ಆ ವರ್ತಮಾನ ಕಾಲವಾಚಿ ಪೂರ್ಣಕ್ರಿಯಾಪದವಾಗಬೇಕಾದರೆ "ದಪ" ಎಂಬುದನ್ನು ಧಾತು ಪ್ರತ್ಯಯಗಳ ನಡುವೆ ಸೇರಿಸಬೇಕಷ್ಟೆ! ಆದರೆ ಅದರಲ್ಲಿ ಈ ವ್ಯಾಕರಣದ "ದಪ"ವು ಇಲ್ಲವೇ ಇಲ್ಲ. "ಅವ ಮಾಡುತ್ತ, ಅದು ಮಾಡುತ್ತು" ಎಂಬಂತೆ "ದಪ"ಕ್ಕೆ ಬದಲಾಗಿ ಈ "ಉತ್ತ"ವನ್ನೇ ಸೇರಿಸುತ್ತಾರೆ. ಈಗಿನ ಹೊಸಗನ್ನಡದ "ಮಾಡುತ್ತಾನೆ" ಮೊದಲಾದ ರೂಪಗಳು ಆ ಪ್ರಯೋಗದಿಂದಲೇ ಹುಟ್ಟಿದುವೆಂದರೆ ತಪ್ಪಾದೀತೆ? "ಬಂದತ್ತು, ನಡೆದತ್ತು" ಎಂದು ಚಂಪೂ ಕಾವ್ಯಗಳಲ್ಲಿರುವ ಪ್ರಯೋಗಗಳನ್ನು ಇದರಲ್ಲಿಯೂ ನೋಡಬಹುದು. ವ್ಯಾಕರಣದ ಸೂತ್ರಪಾಠದಲ್ಲಿಯೂ ಹಳೆಯ ಕಾವ್ಯಗಳಲ್ಲಿಯೂ ದೊರೆಯದ ಕೆಲವಾದರೂ ಧಾತುಗಳನ್ನು ಈ ಭಾಷೆಯಿಂದಾರಿಸಬಹುದು.

'ಕವಿರಾಜಮಾರ್ಗ'ದಲ್ಲಿ "ಜರದ್ವಧು"ವಿನೊಡನೆ ಹೋಲಿಸಿದ, "ಸುಡಿಗೆಲ್ಲಂ ಸಲ್ಲದ ಕನ್ನಡ"ವೆಂದು ಹೇಳಿದ, ಅದನ್ನು ಅನುಸರಿಸಿ ಮ|| ರಾ|| ಆಚಾರ್ಯರು ಪೂರ್ವದ ಹಳಗನ್ನಡವೆಂದು ನಿರೂಪಿಸಿದ, ಆ ಕನ್ನಡವು ಇದೇ ಆಗಿರಬಹುದೆಂದು ಕಾಣುತ್ತದೆ. ಆದರೆ ಆಗಿನ ಸತ್ಕವಿಯೊಬ್ಬನು—

> **ಪಳಗನ್ನಡಂ ಪುದುಂಗೊಳೆ।**
> **ಕೊಳೆಸಕ್ಕದಮುಂ ತಗುಳ್ಚಿ ನಾಣ್ಕಿಡೆ ಮುತ್ತಂ॥**
> **ಮೆಳಸಂ ಕೋದಂತಿರೆ ಪೇ।**
> **ಳ್ವಳಿಗವಿಗಳ ಕಬ್ಬಮೇಂ ಮನಂಗೊಳಿಸುಗುಮೇ॥**

ಎಂದು ಖಂಡಿಸಿದುದು ಮುತ್ತಿನಂತಿರುವ ಹಳಗನ್ನಡದಲ್ಲಿ ಮೆಣಸಿನ ಕಾಳಿನಂತಿರುವ "ಕೊಳೆಸಕ್ಕದ", ಎಂದರೆ ಅಬದ್ಧವಾದ ಸಂಸ್ಕೃತವನ್ನು ಕೋದು ಕಾವ್ಯವನ್ನು ರಚಿಸುತ್ತಿದ್ದ "ಅಳಿಗವಿಗಳನ್ನು". ಇದರಿಂದ ಆಗಿನ ಹಳಗನ್ನಡವನ್ನು ಕಾವ್ಯದಲ್ಲಿ ಸೇರಿಸಬಹುದೆಂದೇ ಅವನ ಅಭಿಪ್ರಾಯವಾಗುತ್ತದೆಯಲ್ಲವೆ? ಅದಕ್ಕನುವಾಗಿ ಪಂಪಾದಿಗಳ ಆಗಿನ "ಹೊಸಗನ್ನಡ" ಕಾವ್ಯಗಳಲ್ಲಿಯೂ "ಇಲ್ಲೆಯೋ, ಮನದಲ್, ಚಂದ್ರಾನ್, ಬಿಲ್ಲಾನ್" ಮೊದಲಾದ ಪ್ರಯೋಗಗಳೂ ದೊರೆಯುತ್ತವೆ; ಕೆಲವನ್ನು ವ್ಯಾಕರಣಗಳಲ್ಲಿಯೂ ಸಮರ್ಥಿಸಿರುತ್ತಾರೆ. ಈ ಕಾರಣಗಳಿಂದ ಆ ಪೂರ್ವದ ಹಳಗನ್ನಡವೆಂಬುದು ಆಚಾರ್ಯರು ಹೇಳುವ ಹಳಗನ್ನಡ ಸಾಹಿತ್ಯದಲ್ಲಿಯೂ ಬೆರಸಿಕೊಂಡಿತ್ತೆಂದು ತೋರುತ್ತದೆ. ಹಾಗೆಯೇ, ಹೊಸಗನ್ನಡದಲ್ಲಿ ಆ ಹಳಗನ್ನಡವೂ ಸೇರಿದೆ. ಕಾವ್ಯಮಾರ್ಗವನ್ನು ವಿವರಿಸುವಾಗ ಕವಿರಾಜಮಾರ್ಗಕಾರನು ಸ್ಫುಟಭೇದವಿರುವ ಎರಡೇ ಭೇದವನ್ನು ಹೇಳಿದಂತೆ ಕನ್ನಡ ಭಾಷೆಯಲ್ಲಿಯೂ ಎರಡೇ ಅವಸ್ಥೆಯನ್ನು ಹೇಳಿದರೆ ಸಾಕು. ಹಾಗಲ್ಲದೆ ಅವಸ್ಥಾತ್ರಯವನ್ನು ಕಲ್ಪಿಸಿದರೆ ನಡುಗನ್ನಡವೆಂಬ ನಾಲ್ಕನೆಯ

ಅವಸ್ಥೆಯನ್ನೂ ಒಪ್ಪಬೇಕಾದೀತು. ಹೀಗೆ ಬಹುಳಾವಸ್ಥೆಯೆಂದರೆ ಅನವಸ್ಥೆಯೇ ಅಲ್ಲವೆ?

ಹಳಗನ್ನಡವೆಂದರೆ ಈಗಿನ ಸಾಹಿತ್ಯದಲ್ಲಿ ಬಳಕೆಯುಳಿದುದೆಂದೂ, ಹೊಸಗನ್ನಡ ವೆಂದರೆ ಬಳಕೆಯುಳ್ಳುದೆಂದೂ ತಾತ್ಪರ್ಯವು. ಕಾಲಾನುಸಾರವಾಗಿ ಒದಗುವ ಪ್ರಾಂತ ಭೇದವೆಂಬುದು ಹಾಗೆ ಬಳಕೆ ತಪ್ಪಿ ಹೋಗುವುದಕ್ಕಿರುವ ಪ್ರಬಲ ಕಾರಣ ಗಳಲ್ಲೊಂದು. ಒಂದೇ ಚಿಕ್ಕ ಊರಿನಲ್ಲಿ ಎರಡು ಮೂರು ಸೀಮೆಗಳಿದ್ದರೆ ಭಾಷೆಯ ಒಳಗವಲುಗಳು ಹೆಚ್ಚಾಗುತ್ತವೆ. ಹಾಗೆಂದಮೇಲೆ ಇಡೀ ದೇಶದೊಳಗೆ ಪ್ರಾಂತ ಭೇದಗಳಿದ್ದರೆ ನೆರೆ ಹೊರೆಯ ಭಿನ್ನ ಭಾಷಾ ಸಾಂಕರ್ಯವಾಗಿ ಪ್ರಾಂತ ಭಾಷೆಗಳಲ್ಲಿಯೂ ಒಳಗೊಳಗೆ ವೈವಿಧ್ಯವುಂಟಾಗುವುದು ಆಶ್ಚರ್ಯವೇ? ಅದರಿಂದ ಒಂದು ಪ್ರಾಂತದ ದೇಸಿ (ದೇಶೀಯ ಪದವು) ಇನ್ನೊಂದು ಪ್ರಾಂತದವರಿಗೆ ದೇಸಿಯಲ್ಲದೆ ಹೋಗುತ್ತದೆ. ಅಂಥ ಭಾಷೆಯನ್ನಲ್ಲವೆ ನೃಪತುಂಗನು ಪಳಗನ್ನಡವೆಂದು ಹೇಳಿದುದು? ನೋಡಿರಿ—

> ನೆಲಸಿದ ಕಾವ್ಯಂ ಕಾವ್ಯ।
> ಕ್ಕೆ ಲಕ್ಷಣಂ ಸತತಮೆಂದೆ ಪಳಗನ್ನಡಮಂ॥
> ಪೊಲಗಿಡಿಸಿ ನುಡಿವರಾಗಮ।
> ಬಲಹೀನರ್ ದೇಸಿಯಲ್ಲದೆಂದರಿದಿರ್ದುಂ॥

ಇದರಿಂದಲೇ ಕನ್ನಡದ ಏಕರೂಪತೆಯುಳಿದು ಕನ್ನಡಂಗಳಾಗುತ್ತವೆ ಎಂಬುದನ್ನೂ ಅವನೇ ಬಾಯ್ಬಿಟ್ಟು ಹೇಳಿದ್ದಾನೆ—

> ದೋಸಮಿನಿತೆಂದು ಬಗೆದು।
> ದ್ಭಾಸಿಸಿ ತರಿಸಂದು ಕನ್ನಡಂಗಳೊಳೆಂದುಂ॥
> ವಾಸುಗಿಯುಮರಿಯಲಾರದೆ।
> ಬೇಸರುಗುಂ ದೇಸಿ ಬೇರೆವೇರಪ್ಪುದರಿಂ॥

ಅಂಗಯ್ನೆಲ್ಲಿಗೆ ಕನ್ನಡಿ ಏಕೆ? ನಮ್ಮ ಈಗಿನ ಆಡುಮಾತಿನ ಅವಸ್ಥೆಯನ್ನು ನೋಡ ಬಾರದೆ? ಮೈಸೂರುಗನ್ನಡ ಒಂದು, ಧಾರ್ವಾಡಗನ್ನಡವಿನ್ನೊಂದು, ಮಂಗಳೂರು ಗನ್ನಡ ಮತ್ತೊಂದು; ಇನ್ನೂ ಎಷ್ಟೆಷ್ಟೋ ಕನ್ನಡಗಳಿವೆ. ಪ್ರಾಂತಗಳನ್ನು ಏಕೀಕರಿಸದಿದ್ದರೆ, ಕೆಲವು ಕಾಲದ ಮೇಲೆ ಇವುಗಳೇ ದೇಸಿಯಲ್ಲದೆ ಹಳಗನ್ನಡವಾಗಿ ಹೋಗುವುದರಲ್ಲಿ ಸಂದೇಹವಿಲ್ಲ.

ಬೇರೆ ಬೇರೆ ನೂಲುಗಳನ್ನೆಲ್ಲ ಹೊಸೆದು ಹುರಿಗೂಡಿದರೆ ಹಗ್ಗವಾಗುತ್ತದೆ; ಹಾಗೆಯೇ ಪ್ರಾಂತ ಭಾಷೆಗಳನ್ನೆಲ್ಲ ಒಟ್ಟಿಗೆ ಹೊಸೆದು ಮಾಡಿದುದೇ ಹೊಸಗನ್ನಡ ಸಾಹಿತ್ಯವೆನಿಸುತ್ತದೆ. ಅಂಥ ಸಾಹಿತ್ಯದ ಕನ್ನಡಕ್ಕೆ ಮೊದಲಿನ ಕವಿಗಳು "ದೇಸಿ, ದೇಸಿವೆತ್ತ ಪೊಸನುಡಿ, ಪೊಸಗನ್ನಡ" ಮೊದಲಾದ ಹೆಸರುಗಳನ್ನಿತ್ತರು. ಅದರಿಂದ ಜನ್ಯ ಜನಕ ಭಾವ ಸಂಬಂಧಗೊಂಡಿರುವ ಈ ಹೊಸಗನ್ನಡ ಹಳಗನ್ನಡಗಳೆಂಬ ಎರಡು

ಭೇದಗಳೇ ಸಾಕೆಂದು ತೋರುತ್ತದೆ. ಅಲ್ಲದಿದ್ದರೆ ಮುಂದಿನ ಕನ್ನಡಿಗರಿಗೆ ನಮ್ಮ ಈಗಿನ ಭಾಷೆಯಲ್ಲಿ ಇನ್ನೊಂದು ಭೇದವನ್ನು ಕಲ್ಪಿಸಬೇಕಾದೀತಲ್ಲವೆ?

೫

ಕೆಲಗಾಲಕ್ಕೆ ಮೊದಲು ಕನ್ನಡ ಕಾವ್ಯಗಳ ದಕ್ಷಿಣೋತ್ತರ ಮಾರ್ಗಗಳ ವಿಷಯ ದಲ್ಲೊಂದು ವಾದವಾಗಿತ್ತಲ್ಲವೆ? ಅದೂ ಕನ್ನಡ ಸಾಹಿತ್ಯದಲ್ಲೊಂದು ಮುಖ್ಯಾಂಶ ವೆಂದು ನನ್ನ ಭಾವನೆ. ಆದರೆ ಹಿಂದಿನ ಆ ಚರ್ಚಾಂಶವನ್ನೆಲ್ಲ ವಿವರಿಸತೊಡಗಿ ತಮ್ಮ ಅಮೌಲ್ಯವಾದ ಸಮಯವನ್ನು ಸವೆಯಿಸುವುದು ನನ್ನುದ್ದೇಶವಲ್ಲ; ಅವುಗಳ ಸಾರ ವನ್ನು ಸೂಚಿಸಿ ನನ್ನೆಣಿಕೆ ಏನೆಂಬುದನ್ನು ನಿವೇದಿಸಿಕೊಳ್ಳುತ್ತೇನೆ: 'ತಮಿಳಿನ ಸಂಪರ್ಕದಿಂದ ಹಳಗನ್ನಡ ಭಾಷೆಯಾಯಿತು; ಅದೇ ದಕ್ಷಿಣ ಮಾರ್ಗದ ಭಾಷೆ. ತೆಲುಗಿನ ಸಂಪರ್ಕದಿಂದಾಗಿ ಹೊಸಗನ್ನಡವಾಯಿತು; ಅದೇ ಉತ್ತರ ಮಾರ್ಗದ ಭಾಷೆ' ಎಂಬ ಅಡಿಗಟ್ಟಿನ ಮೇಲೆ ನೆಲೆಗೊಂಡೇ ನೃಪತುಂಗನು ಮಾರ್ಗ ಭೇದವನ್ನು ಲಕ್ಷಿಸಿದ್ದಾನೆಂದು ಕೀರ್ತಿಶೇಷರಾದ ಆರ್. ರಘುನಾಥರಾಯರವರ ನಿರ್ಧಾರದ ಸಾರಾಂಶ. "ಆ ವಾದವು ಸಾಧುವಲ್ಲ; ದಂಡಿಯೇ ಮೊದಲಾದ ಆಲಂಕಾರಿಕರ ಮತದಂತೆ ಸಂಸ್ಕೃತ ಸಾಹಿತ್ಯದಲ್ಲಿರುವ ಭೇದವನ್ನೇ ಕವಿರಾಜಮಾರ್ಗಕಾರನು ಕನ್ನಡಿಸಿದ್ದಾನೆ. ಕನ್ನಡದಲ್ಲಿ ಅಂತಹ ಭೇದವೇನೂ ಇದ್ದಂತೆ ತೋರುವುದಿಲ್ಲ. ಆ ಲಕ್ಷಣ ಗ್ರಂಥಕಾರನು ಹೇಳುವಂತೆ ಮಾರ್ಗ ಭೇದವನ್ನು ಸೂಚಿಸುವ ಕ್ರಿಯಾಪದ ರೂಪಭೇದಗಳು ಆಗಿನ ಸಮಯದಲ್ಲಿದ್ದರೂ ಈಗ ಅಂಥ ಭೇದವಿಲ್ಲ" ಎಂಬುದು ಮ|| ರಾ|| ಆರ್. ನರಸಿಂಹಾಚಾರ್ಯರ ವಿಮರ್ಶೆಯ ಸಾರ. ನುರಿತ ವಿದ್ವಾಂಸರೂ ನಮ್ಮಾ ಸಾಹಿತ್ಯ ಪರಿಷತ್ತಿನ ಮುಂದಾಳುಗಳಲ್ಲೊಬ್ಬರೂ ಆಗಿದ್ದ ರಾಯರವರು ಅಷ್ಟರಲ್ಲಿ ಸ್ವರ್ಗಸ್ಥರಾದುದರಿಂದ ಆ ಚರ್ಚೆ ಅಲ್ಲಿಯೇ ಅಡಗಿಹೋಯಿತು. ಆದರೆ 'ಕನ್ನಡದೊಳಗಿನ ದಕ್ಷಿಣೋತ್ತರ ಮಾರ್ಗಗಳೆಂದರೇನು?' ಎಂಬ ಪ್ರಶ್ನೆ ಮಾತ್ರ ಹಾಗೆಯೇ ಉಳಿದಿದೆ. ಈಗ ಉಳಿದಿರುವ ರಾಯರ ನಿರ್ಧಾರವನ್ನು ವಿಚಾರಿಸಿದರೆ, ಅಖಂಡ ಕರ್ಣಾಟಕಕ್ಕೆ ತಮಿಳು ತೆಲುಗುಗಳನ್ನುಳಿದರೆ ಮಾರ್ಗವಿಲ್ಲ ಎಂಬಂತೆ ಭಾಸ ವಾಗುತ್ತದೆ. ಆಚಾರ್ಯರಾದರೂ ಸಂಸ್ಕೃತದ ಮಾರ್ಗಭೇದವೇ ಇದೆಂದು ಹೇಳಿದ್ದಾ ರಲ್ಲದೆ ಆ ಭೇದವನ್ನು ವಿವರಿಸಲಿಲ್ಲ.

ಕವಿಗಳಲ್ಲಿ ಭೇದವಿರುವಂತೆ ಅವರವರ ಮಾರ್ಗಗಳೊಳಗೂ ಭೇದವಿರುತ್ತದೆ. ಒಡಹುಟ್ಟಿದ ಸೋದರರಾದರೂ ಒಂದೇ ತೆರದ ಸ್ವಭಾವಯುಕ್ತರಾಗಿರುತ್ತಾರೆಯೇ? ಇಲ್ಲ. ಹಾಗೆಂದಮೇಲೆ ಬೇರೆ ಬೇರೆ ಗುರುಗಳಲ್ಲಿ ವಿದ್ಯಾಭ್ಯಾಸ ಮಾಡಿದ ಮತ್ತು ಭಿನ್ನ ಭಿನ್ನ ದೇಶಗಳಲ್ಲಿ ವಾಸ ಮಾಡುವ ಕವಿಗಳ ಮಾರ್ಗಗಳಲ್ಲಿ ಸ್ಫುಟ ಭೇದವು ತೋರದಿರುವುದೆ? ಅದರಿಂದ, ಪೂರ್ವದ ಆಲಂಕಾರಿಕರಾದ ವಾಮನಾದಿಗಳು ಕವಿಗಳ ದೇಶಭೇದವನ್ನನುಸರಿಸಿ ವೈದರ್ಭೀ, ಗೌಡೀಯಾ, ಪಾಂಚಾಲೀ—ಇವೇ ಮೊದಲಾದ ಮಾರ್ಗಭೇದವನ್ನು ಕಲ್ಪಿಸಿದರು. ಆದರೆ ನೃಪತುಂಗನು ಈ ಭೇದಗಳಿಂದ ಅನವಸ್ಥೆ ಯಾದೀತೆಂದು ಭಾವಿಸಿದನು; ದಂಡಿಯನ್ನನುಸರಿಸಿ ದಕ್ಷಿಣೋತ್ತರಗಳೆಂಬ ಎರಡೇ ಮಾರ್ಗಗಳನ್ನು ಸ್ವೀಕರಿಸಿದನು. ಅಷ್ಟೇ ಅಲ್ಲ; ಆ ಭೇದದ್ವಯದ ಲಕ್ಷಣವನ್ನು—

ಸತತಂ ದಕ್ಷಿಣ ಮಾರ್ಗೋ ।
ದಿತೋಕ್ತಿ ಭೇದಕ ಗುಣಂ ಸ್ವಭಾವಾಖ್ಯಾನಂ ॥
ವಿದಿತೋತ್ತರ ಮಾರ್ಗ ಗತಂ
ಪ್ರತೀತ ವಕ್ರೋಕ್ತಿ ಕೃತಮನಲ್ಪ ವಿಕಲ್ಪಂ ॥

ಎಂದು ವಿವರಿಸಿದ್ದಾನೆ. ಆಮೇಲೆ ಭೇದಕಗಳಾದ ಆ ಸ್ವಭಾವಾಖ್ಯಾನ ವಕ್ರೋಕ್ತಿಗಳೆಂಬ ಎರಡು ಗುಣಗಳಲ್ಲಿಯೂ ಬೇರೆ ಬೇರೆಯಾಗಿ ಹತ್ತು ಭೇದಗಳಿವೆಯೆಂದು ಹೇಳಿ ಲಕ್ಷಣಗಳನ್ನೂ ದೃಷ್ಟಾಂತಗಳನ್ನೂ ವಿಸ್ತರಿಸಿದ್ದಾನೆ. ಆದರೇನು? ಲಕ್ಷಣಗಳು ಹೆಚ್ಚಾದಂತೆ ಲಕ್ಷ್ಯದಲ್ಲಿ ಸಂದೇಹವೇರುತ್ತಹೋಗಿದೆ. ಎಲ್ಲಾ ತೆರದ ಕಾವ್ಯಗಳಿಂದ ಕೂಡಿ ಸಾಹಿತ್ಯವು ಹಬ್ಬುಗೆಗೊಂಡುದೇ ಅದಕ್ಕೆ ಕಾರಣವು.

ಸ್ವಭಾವೋಕ್ತಿ ವಕ್ರೋಕ್ತಿಗಳೆಂದರೆ ಪರಸ್ಪರ ಭಿನ್ನವಾದುವುಗಳು. ಕನ್ನಡದಲ್ಲಿ "ಸಯ್ಪು, ಕೊಂಕು" ಎಂದು ಅವುಗಳ ಹೆಸರುಗಳು. 'ಸಯ್ಪು' ಎಂದರೆ 'ಸರುತ' ವಾದ—ಎಂದರೆ ಸರಳವಾದ ಉಕ್ತಿ; 'ಕೊಂಕು' ಎಂದರೆ ವಕ್ರೋಕ್ತಿ. ಹೀಗೆ ವಿಚಾರಿಸಿದಲ್ಲಿ 'ಸ್ವಭಾವೋಕ್ತಿ' ಎಂಬುದಕ್ಕೆ ಬದಲಾಗಿ ಕನ್ನಡದ 'ಸಯ್ಪು' ಎಂಬ ಪದಕ್ಕೆ ಸಮಾನಾರ್ಥಕವಾದ 'ಸರಳೋಕ್ತಿ' ಎನ್ನುವುದೇ ಉಚಿತವಾಗಿ ತೋರುತ್ತದೆ. ಏಕೆಂದರೆ, ವಕ್ರೋಕ್ತಿಗೆ ಸಂಪೂರ್ಣ ಭಿನ್ನವಾದುದು ಸರಳೋಕ್ತಿಯೇ. ಇವುಗಳಲ್ಲಿಯೂ, 'ಪದ ಸರಳ, ಅರ್ಥ ಸರಳ, ಪದ ವಕ್ರ, ಅರ್ಥ ವಕ್ರ' ಮೊದಲಾದ ಅನೇಕ ಭೇದಗಳಿವೆ. ದಿಗ್ದರ್ಶನಕ್ಕಾಗಿ ಕೆಲವು ದೃಷ್ಟಾಂತಗಳನ್ನು ಕೊಡುತ್ತೇನೆ:

"ಆಂ ಕವಡುದವಸಿಯಲ್ತು ವಾಲ್ಮೀಕಿ ಕಣಾ! ಬಳಿವೋಕಂ. ನಿರ್ಜನ ಪ್ರದೇಶದೊಳಿರ್ಪ ಈ ಬಾಲೆ ನಿನ್ನಂ ಅರಿವೊಡೆಂದೆ ನುಡಿಯಿಸಿದೆಂ ಪೆರತೆಣಿಸದಿರ್."

[ಮುದ್ದಣನ ರಾಮಾಶ್ವಮೇಧ]

ಇದು ಕಾಡಿನಲ್ಲಿದ್ದ ತನ್ನನ್ನು ನೋಡಿ, ರಾವಣನಂತಿರುವ ಮತ್ತೊಬ್ಬ ರಾಕ್ಷಸನೋ ಎಂದು ಭಯಪಟ್ಟ ಸೀತೆಯನ್ನು ಸಂತಯಿಸುವ ವಾಲ್ಮೀಕಿಯ ಮಾತು. ವಾಕ್ಯರಚನೆಯನ್ನು ನೋಡಿದರೆ ಕರ್ತೃ ಕ್ರಿಯಾ ಪದಗಳ ಸ್ಥಾನಗಳು ಅನುಕ್ರಮವಾಗಿದ್ದು ಪದ ಸಾರಳ್ಯವಿದೆ. 'ಸೀತೆಯ ಸಂದೇಹ ಜನ್ಯ ಭಯ ನಿವಾರಣೆ; ಅನಾಥಳಾದವಳ ರಕ್ಷಣೋದ್ದೇಶ' ಎಂಬ ಅರ್ಥಗಳೂ ಸರಳವಾಗಿ ಹೊರಡುವುದರಿಂದ ಅರ್ಥ ಸಾರಳ್ಯವೂ ಇದೆ. ಸಂದರ್ಭಕ್ಕೆ ಸರಿಯಾಗಿ ಪದಗಳನ್ನು ಜೋಡಿಸುವುದು ಮುದ್ದಣನ ಜಾಣ್ಮೆಯಲ್ಲವೆ? ಪದ ವಕ್ರತೆ, ಅರ್ಥ ವಕ್ರತೆಗಳಿಗೆ ಮುಂದಿನ ಉದಾಹರಣೆಯಾಗಬಹುದೆಂದು ತೋರುತ್ತದೆ:—

ಭಾವಿಸಿ ನೋಡಿ ದೂರದೊಳೆ ಕಂಡು ವನಾಂತರದೊಳ್ ನಿಪಾನ ಪಂ ।
ಕಾವಿಳ ವಾರಿಯುಂ ಹರಿಣಿಯೊಂದತಿ ತುಚ್ಛಮನಲ್ಲಿಗುಷ್ಣ ತೃ ॥
ಷ್ಣಾವಶ ಮಂದ ಮಂದ ಗತಿ ಬರ್ಪನಿತರ್ಕ್ಕೆನ ತಾಪದಿಂದೆ ತ ।
ಜ್ಜೀವನಮುಂ ಮೃಗಾಂಗನೆಯ ಜೀವನಮುಂ ತವುತಂದುವೊರ್ಮೆದಲ್ ॥

[ಚಂದ್ರಪ್ರಭ ಪುರಾಣ]

"ಅಗ್ಗಳನ ಕೊಂಕು" ಎಂದು ಅನೇಕ ಕವಿಗಳು ಹೊಗಳಿದ್ದಾರೆ. ಈ ಪದ್ಯವು ಓದಿದೊಡನೆಯೇ ಅರ್ಥವಾಗುವಂತಿಲ್ಲ. "ಬಿಸಿಲಿನ ತಾಪದಿಂದ ಬಾಯಾರಿದ ಒಂದು ಹುಲ್ಲೆಯು ಕಣ್ಣಿಗೆ ದೂರದ ವನಾಂತರದಲ್ಲಿ ತಳತಳಿಸುತ್ತಿರುವ ಕುಂಟೆಯ ನೀರು (ಜೀವನ) ಹೊಳೆಯಿತು. ಅದನ್ನಾಶಿಸಿ ಹೇಗಾದರೂ ಬಂದು ಸೇರುವಾಗ ಆ ಜೀವನವೂ ಮೃಗಾಂಗನೆಯ ಜೀವನವೂ ಒಟ್ಟಿಗೆ ಆರಿದುವು" ಎಂಬುದೇ ಅನ್ವಯಾರ್ಥವು. ಪದ ರಚನಾ ಕ್ರಮವು ಹಿಂದು ಮುಂದಾಗಿ 'ವಂಕಿ'ಯಂತೆ ವಕ್ರವಾಗಿ ಮೆಲ್ಲನೆ ಧಾರಣೆಮಾಡಿಕೊಳ್ಳಬೇಕಾಗಿದೆ; ಆದರೆ ಪದ ಕಾಠಿನ್ಯವೇನೂ ಇಲ್ಲ. ಇದರಲ್ಲಿರುವ ಶ್ಲೇಷಾದ್ಯಲಂಕಾರಗಳೂ ವಕ್ರೋಕ್ತಿಯೊಳಗಿನ ಭೇದಗಳೇ. ಪದಸಾರಳ್ಯದಿಂದ ಕೂಡಿದ ಅರ್ಥವಕ್ರತೆಗೆ ಒಂದು ದೃಷ್ಟಾಂತವನ್ನು ಕೊಡುತ್ತೇನೆ:

> "ಎಲೈ ಆರ್ಯನೆ, ನಿನ್ನ ಸವಿ ನುಡಿಗಳಿಂದುಂಟಾದ ಸಲುಗೆಯು ನಮ್ಮನ್ನು ಮಾತಾಡುವಂತೆ ಮಾಡುವುದು. ಆರ್ಯನಾದ ನಿನ್ನಿಂದ ಯಾವ ರಾಜವಂಶವು ಅಲಂಕೃತವಾಗಿರುವುದು?"
>
> [ಕನ್ನಡ ಶಾಕುಂತಲ ನಾಟಕ]

ಇದು ಆಗಂತುಕನಾದ ದುಷ್ಯಂತನನ್ನು ಅನಸೂಯೆ ಎಂಬ ಶಕುಂತಳೆಯ ಕೆಳದಿಯು ಕೇಳಿದ ಪ್ರಶ್ನೆ. ಇದನ್ನೇ ಸರಳೋಕ್ತಿಯಲ್ಲಿ ಮಾರ್ಪಡಿಸಿದರೆ, "ನೀನು ಯಾವ ರಾಜನ ಮಗನು?"—ಈ ತೆರದಲ್ಲಾದೀತು. ಇಂಥ ಸಾರಳ್ಯದಿಂದ ಔಚಿತ್ಯ ಭಂಗವಾದೀತೆಂದು ಕಾಳಿದಾಸನು ಅವಳಿಂದ ಮಾತಿನ ಮಾಲೆಯನ್ನು ಅಂದವಾಗಿ ಕಟ್ಟಿಸಿದನು.

ಎಲ್ಲಾ ಭಾಷೆಯಲ್ಲಿಯೂ ಈ ಉಕ್ತಿ ವೈಚಿತ್ರ್ಯವಿದೆ; ಅದಿಲ್ಲವಾದರೆ ಆ ಭಾಷೆಯ ಸಾಹಿತ್ಯವೇ ನೀರಸವಾದೀತು. ಒಂದು ವಿಶಿಷ್ಟ ಮಾರ್ಗದ ಭಾಷೆ ಹಳಗನ್ನಡವೆಂದೂ, ಇನ್ನೊಂದರದು ಹೊಸಗನ್ನಡವೆಂದೂ ಹೇಳುವುದು ಸಮಂಜಸವಲ್ಲ. ಸಮಂಜಸವಾದರೆ ಹಳಗನ್ನಡದಲ್ಲಿ ಉತ್ತರಮಾರ್ಗ ಲಕ್ಷಣವಾದ ವಕ್ರೋಕ್ತಿ ಇರಬಾರದು; ಹೊಸಗನ್ನಡದಲ್ಲಿ ದಕ್ಷಿಣಮಾರ್ಗ ಲಕ್ಷಣವಾದ ಸ್ವಭಾವಾಖ್ಯಾನ, ಅಥವಾ ಸರಳೋಕ್ತಿ ಇರಬಾರದು. ಸಂದರ್ಭಾನುಸಾರವಾಗಿ ಒಬ್ಬ ಕವಿಯಲ್ಲೇ ಆ ಎರಡು ಉಕ್ತಿಗಳೂ ತೋರುವಾಗ, 'ಒಂದು ಭಾಷೆಯಲ್ಲಿ ವಕ್ರೋಕ್ತಿ ಇಲ್ಲ, ಇನ್ನೊಂದರಲ್ಲಿ ಸ್ವಭಾವಾಖ್ಯಾನವಿಲ್ಲ'ವೆನ್ನುವುದು ಹೇಗೆ? ಅದಿರಲಿ; ಈ ಉಕ್ತಿದ್ವಯದಲ್ಲೇ ಗುಣ, ಅಲಂಕಾರ, ಅಭಿಧೆ ಲಕ್ಷಣೆ ವ್ಯಂಜನೆಗಳೆಂಬ ಮೂರು ವೃತ್ತಿಗಳು—ಏಕೆ? ಇಡೀ ಸಾಹಿತ್ಯವೇ ನೆಲೆನಿಂತಿದೆ. ಹೀಗೆ ಹೇಳಲಿಕ್ಕೆ ಆಧಾರವೂ ಇದೆ. ಕುಂತಳಕನು ತನ್ನ 'ವಕ್ರೋಕ್ತಿ ಜೀವಿತ'ವೆಂಬ ಗ್ರಂಥದ ಪ್ರಥಮೋನ್ಮೇಷದಲ್ಲಿ—

> ಕವಿವ್ಯಾಪಾರ ವಕ್ರತ್ವ ಪ್ರಕಾರಾಸ್ಸಂಭವಂತಿ ಷಟ್ ।
> ಪ್ರತ್ಯೇಕಂ ಬಹವೋ ಭೇದಾಸ್ತೇಷಾಂ ವಿಚ್ಛಿತ್ತಿ ಶೋಭಿನಃ ॥

ಎಂದು ವಿವರಿಸಿದುದಲ್ಲದೆ, ಆ ವಕ್ರೋಕ್ತಿಯ ವಿಸ್ತೃತಿಯನ್ನು ನಿರೂಪಿಸುತ್ತಾನೆ—

> ವಾಕ್ಯಸ್ಯ ವಕ್ರಭಾವೋನ್ಯೋಭಿದ್ಯತೇ ಯಃ ಸಹಸ್ರಧಾ ।
> ಯತ್ರಾಲಂಕಾರ ವರ್ಗೋಸೌ ಸರ್ವೋಪ್ಯಂತರ್ಭವಿಷ್ಯತಿ ॥

ವಕ್ರೋಕ್ತಿಯ ವಿಶೇಷತೆಯನ್ನು ಭಾಮಹನೂ ಒಪ್ಪಿರುತ್ತಾನೆ; ಆದರೆ ಅದನ್ನು ಸರಿಯಾಗಿ ವಿವರಿಸಿದವನೆಂದರೆ ಕುಂತಲಕನೇ ಸರಿ. ನೃಪತುಂಗನೂ ಭಾಮುಹ ಕುಂತಲಕರ ಅಭಿಪ್ರಾಯಾನುಸಾರವಾಗಿ ಎಂವೇ ತೋರುತ್ತದೆ—"ಪ್ರತೀತ ವಕ್ರೋಕ್ತಿ ಕೃತಮನಲ್ಪ ವಿಕಲ್ಪಂ" ಎಂದು ಆ ವಕ್ರೋಕ್ತಿಯಲ್ಲಿ ಅನೇಕ ಭೇದವಿದೆ ಯೆಂದು ಸೂಚಿಸುತ್ತಾನೆ.

'ದಕ್ಷಿಣ ಮಾರ್ಗಕ್ಕೆ ಸಂಬಂಧಿಸಿದ ಭಾಷೆ ಒಂದು, ಉತ್ತರ ಮಾರ್ಗಕ್ಕೆ ಸೇರಿದುದು ಇನ್ನೊಂದು' ಎಂದು ಹೇಳಲಿಕ್ಕೆ ಸಾಧ್ಯವೇ ಇಲ್ಲ. ಹಾಗೆಂದರೆ, ಆಯಾ ಭಾಷೆಗಳಲ್ಲಿರುವ ಕವಿಗಳು ಆಯಾ ವಿಶಿಷ್ಟ ಮಾರ್ಗದಲ್ಲೇ ಬರೆಯುತ್ತಾರೆಂದಾಗು ತ್ತದೆ. ಮಾರ್ಗ ಭೇದಗಳಾಗಲಿಕ್ಕೆ ಭಾಷೆಗಳು ಕಾರಣವಲ್ಲ, ಬೇರೆ ಬೇರೆ ಕವಿಗಳು. ಒಬ್ಬನೇ ಕವಿಯಲ್ಲಿ ಉಕ್ತಿ ವೈಚಿತ್ರ್ಯವು ಅನೇಕವಿರುತ್ತದೆ:

> ಕವಿಗಳುಮನಾದಿ ಲೋಕೋ ।
> ದ್ಭವರಪ್ಪುದರಿಂದನಂತ ಗಣನಾನುಗತಂ ॥
> ಸವಿಶೇಷೋಕ್ತಿಗಳುಮನಂ ।
> ತ ವಿಧಂಗಳನಂತ ಭೇದಮುದರಿಂ ಮಾರ್ಗಂ ॥

ಎಂದು ಹೇಳಿದ ನೃಪತುಂಗನ ಪದ್ಯಗಳಿಂದಲೂ ಆ ಅಭಿಪ್ರಾಯವೇ ಸ್ಪಷ್ಟವಾಗು ತ್ತದೆ. ಪ್ರತಿಯೊಬ್ಬ ಕವಿಯ ಕಾವ್ಯಗಳ ಒಳಗೊಳಗಿನ ಭೇದಗಳನ್ನೆಲ್ಲ ನಿಶ್ಚಯಿಸಿ ಲಕ್ಷಣ ಬರೆಯಲಿಕ್ಕೆ ಸಾಧ್ಯವಿಲ್ಲ. ಅದರಿಂದ ಎರಡೇ ಭೇದಗಳನ್ನು ಇಟ್ಟುಕೊಂಡು ಲಕ್ಷಣವನ್ನು ವಿವರಿಸುತ್ತೇನೆಂದು ಅವನೇ ಹೇಳಿರುತ್ತಾನೆ. ಆದರೆ ಇದು "ದಕ್ಷಿಣ ಮಾರ್ಗ ವಿಚಕ್ಷಣೋದಿತಂ", "ಇವುತ್ತರಮಾರ್ಗವರ್ತಿಗಳ್" ಎಂದು ಅವನೇ ಭೇದಿಸಿ ಹೇಳಿದ್ದಾನಲ್ಲವೆ? ಅದರಿಂದ ಆಯಾ ಮಾರ್ಗದ ವಿಶಿಷ್ಟ ಕವಿಗಳಿದ್ದರೆಂದು ಸಿದ್ಧವಾಗುತ್ತದೆಯಲ್ಲವೆ? ಎಂದು ಕೇಳಬಹುದು. ಆಯಾ ಮಾರ್ಗದಲ್ಲಿ ಹೆಚ್ಚಿನ ಪ್ರವಣತೆ ಇದ್ದವರನ್ನು ಆಯಾ ಅಂಕಿತಗಳಿಂದ ಕರೆದುದಾಗಿರಬೇಕು; ಅಥವಾ, ಕವಿಯೊಬ್ಬನೇ ಆಗಿದ್ದರೂ ಅವನ ಭಿನ್ನ ಮಾರ್ಗಗಳನ್ನು ವಿಮರ್ಶಿಸುವಾಗ ಹಾಗೆ ಹೇಳಿದುದಾಗಿರಲೂ ಬಹುದು. ಪಂಪನೊಬ್ಬನನ್ನೇ ಮಾರ್ಗದ್ವಯ ಪರಿಣತನೆಂದು ಸ್ತುತಿಸಿದ್ದಾರಲ್ಲವೆ? ಆದರೆ ತನ್ನ ಪ್ರವಣತೆ ಉತ್ತರ ಮಾರ್ಗದಲ್ಲಿ, ಅಥವಾ ಕೊಂಕಿನಲ್ಲಿ ಎಂಬುದನ್ನು ಅವನೇ ತಿಳಿಸಿದ್ದಾನೆ—

> ಕಿವಿಯಿಂ ಬಗೆವುಗುವೊಡೆ ಕೊಂ ।
> ಕುವೆತ್ತ ಪೊಸ ನುಡಿಯೆ ಪುಗುಗುಮುಳಿದುದು ಸರುಸ್ಯೆ ॥
> ತವಚರನೆ ಮಾಡಿ ಸರುಸ್ಯೆ ।
> ತುವೋಕುಮೇಂ ಬಗೆಯ ಬಟ್ಟೆಯಂ ಮುಟ್ಟುಗುಮೇ ॥

[ಆದಿ ಪು., ಆ. ೧, ಪ. ೧೮]

ಇದರಿಂದ ಅವನದೆಲ್ಲ ವಕ್ರೋಕ್ತಿಯೆನ್ನಲೂ ಬಾರದು. "ಸರುಸ್ಯೆತಾದುದು ಬಗೆ ಗೆಯ್ದುವ ದಾರಿಯಾದ ಕರ್ಣಶಷ್ಕುಲಿಯಲ್ಲಿ ನುಸುಳಿ ಹೃದಯವನ್ನೊಂದಲಿಕ್ಕೆ

ಸಮರ್ಥವಲ್ಲ; ಅವಕ್ಕೆ ವಕ್ರೋಕ್ತಿಯೇ ತಕ್ಕುದು" ಎಂದು ಬಲು ಜಾಣ್ಮೆಯಿಂದ ಹೇಳಿದ್ದಾನೆ. ಮಾವಿನ ಹಣ್ಣಾಗಬೇಕಾದರೆ, ತೊಗಟೆ ಬೇಡವೆ? ಅತ್ಯವಶ್ಯವು. ಆದರೆ ನಾಲಗೆಯನ್ನೊಂದಿ ಹೃದಯಕ್ಕೆ ಹಿತವನ್ನುಂಟುಮಾಡುವುದು ಅದರ ಗುಣ, ರಸ ಮೊದಲಾದುವು. ಅವನ ಈ ಹೇಳಿಕೆಯನ್ನು ಅವನ ಕಾವ್ಯದಲ್ಲಿಯೂ ನೋಡ ಬಹುದು:—

ತಿಂತಿಣಿಯಾಗಿ ನಟ್ಟ ಕಣೆಯೊಳ್ ನೆಲಮುಟ್ಟದೆ ಮೆಯ್ಯೊಳತ್ತಮಿ |
ತ್ತಂ ತೆರೆದಿರ್ದ ಪುಣ್ಗಳೆಸೆವಕ್ಕರದಂತಿರೆ ನೋಡಿ ಕಲ್ಲಿಮೆಂ ||
ಬಂತೆವೊಲಿರ್ದ ನಟ್ಟವಣೆಗೋಲ್ಗಳ ಮೇಲೆಸದಿರ್ದ ವೀರ ಸಿ |
ದ್ಧಾಂತದ ಶಾಸನಂ ಬರೆದ ಪೊತ್ತಗೆಯಂತಮರಾಪಗಾತ್ಮಜಂ ||

[ವಿಕ್ರಮಾರ್ಜುನ ವಿಜಯ, ಆ. ೧೧, ಪ. ೪೬]

ಇದು ಸರಳ ಮಂಚದಲ್ಲಿ ಮಲಗಿದ ಭೀಷ್ಮನ ವರ್ಣನೆ. ಇಲ್ಲಿ "ವೀರ ಸಿದ್ಧಾಂತದ ಶಾಸನಂ ಬರೆದ ಹೊತ್ತಗೆಯಂತೆ", "ಅತ್ತಮಿತ್ತಂ ತೆರೆದಿರ್ದ ಪುಣ್ಗಳೆಸೆವಕ್ಕರ ದಂತಿರೆ", "ನೋಡಿ ಕಲ್ಲಿಮೆಂಬಂತೆವೊಲಿರ್ದ ನಟ್ಟವಣೆಗೋಲ್ಗಳ" ಎಂಬ ಅಪೂರ್ವೋ ಪಮೆಗಳಲ್ಲಿರುವ ವಕ್ರತೆಯನ್ನೆಷ್ಟು ಬಣ್ಣಿಸಿದರೂ ಕಡಿಮೆಯೆ. "ವಾಸ್ತವ ಮೌಪಮ್ಯಮತಿಶಯಃ ಶ್ಲೇಷಃ" ಎಂಬ ಅಲಂಕಾರದ ಪ್ರಥಮ ಭೇದಗಳಲ್ಲಿ ವಾಸ್ತವವನ್ನು ಬಿಟ್ಟರೆ ಉಳಿದುವೆಲ್ಲ ವಕ್ರೋಕ್ತಿ ಜನ್ಯಗಳು. ಅತಿಶಯ ಶ್ಲೇಷ ಗಳಲ್ಲಿ ಅಧಿಕಾಧಿಕ ವಕ್ರತೆ ಇದೆ, ಔಪಮ್ಯದಲ್ಲಿ ಹಾಗೆ ಅಧಿಕವಾಗಿಲ್ಲ. ಸ್ವಭಾವಾಖ್ಯಾನ ಜನ್ಯವಾದ ವಾಸ್ತವಾಲಂಕಾರವಾದರೂ ಹೃದಯಾಕರ್ಷಕವಾಗುವುದು ವಕ್ರೋ ಕ್ತಿಯ ಗಂಧದಿಂದಾಗಿಯೇ ಎಂದು ಹೇಳಬಹುದು. ಅದರಿಂದಲೇ ಭಾಮಹನು—

ಸೈಷಾ ಸರ್ವೈವ ವಕ್ರೋಕ್ತಿರನಯಾರ್ಥೋ ವಿಭಾವ್ಯತೇ |
ಯತ್ನೋಽಸ್ಯಾಂ ಕವಿನಾ ಕಾರ್ಯಃ ಕೋಽಲಂಕಾರೋಽನಯಾವಿನಾ ||

[ಕಾವ್ಯಾಲಂಕಾರ, ii. 85]

ಎಂದು ಹೇಳಿದುದು. 'ಅಗ್ಗಳಾದಿಗಳಲ್ಲಿ ವಕ್ರತೆ ಹೆಚ್ಚು; ಪಂಪಾದಿಗಳಲ್ಲಿ ಸಾರಳ್ಯ ಮಿಶ್ರಿತವಾಗಿದೆ' ಎಂದಿಷ್ಟೇ ಭೇದವು. ಪಂಪನ ಆ ಮಿಶ್ರಿತ ಕ್ರಮವೇ ಮತ್ತಿನ ಕವಿಗಳಲ್ಲಿ ಹೆಚ್ಚಾಗಿ ನೆಲೆಗೊಂಡಿದೆ. ಗದುಗಿನ ನಾರಣಪ್ಪನ ಭಾರತವನ್ನು ದೃಷ್ಟಾಂತ ವಾಗಿ ಹೇಳಬಹುದು:—

ಸರಸಿಜದ ಪರಿಮಳಕೆ ತುಂಬಿಯ |
ಬರವ ಕೊಟ್ಟನು ಚಂದ್ರಕಾಂತಕೆ |
ಬೆರಗನಿತ್ತನು ಜಕ್ಕವಕ್ಕಿಯ ಸೆರೆಯ ಬಿಡಿಸಿದನು ||
ಕೆರಳಿ ನೆಯ್ದಿಲ ಸಿರಿಯ ಸೂರೆಯ |
ತರಿಸಿದನು ರಿಪುರಾಯರಾಜ್ಯವ |
ನೊರಸಿದನು ರವಿ ಮೂಡಣದ್ರಿಯೊಳಿತ್ತನೋಲಗನ ||

[ವಿರಾಟಪರ್ವ]

ಕೌರವಾದಿಗಳನ್ನೆಲ್ಲ ಗೆದ್ದು ಗೋಗ್ರಹಣದಲ್ಲಿ ಜಯಶಾಲಿಯಾಗಿ ಅರ್ಜುನನು ಬಂದನು. "ನಾಳೆ ಪ್ರಾತಃಕಾಲದಲ್ಲಿ ವಿರಾಟರಾಜನ ಆಸ್ಥಾನದಲ್ಲಿ ಓಲಗಗೊಟ್ಟು ಅವನು ನಮ್ಮನ್ನು ಮನ್ನಿಸುತ್ತಾನೆಯೊ ಅವಮಾನಿಸುತ್ತಾನೆಯೊ ಎಂಬುದನ್ನು ಪರೀಕ್ಷಿಸುವ" ಎಂದು ನಿಶ್ಚಯಿಸಿ ಯುಧಿಷ್ಠಿರಾದಿಗಳೆಲ್ಲ ನಿದ್ರಿಸಿದರು. ಮರು ದಿನದ ಪ್ರಾತಃಕಾಲದ ವರ್ಣನೆಯಿದು. ಪದ್ಯವು ಪದಯೋಜನೆಯಲ್ಲಿ ಸರಳವಾಗಿಯೇ ಇದೆಯೆನ್ನಬಹುದು. ಆದರೆ ಪಾಂಡವರು ಓಲಗಗೊಡಲಿಕ್ಕಿರುವ ಸಂದರ್ಭದಲ್ಲಿ, "ರವಿ ಮೂಡಣದ್ರಿಯೊಳಿತ್ತ ನೋಲಗವ" ಎಂದು ಅಂತ್ಯವಾಗುವ ಈ ಪದ್ಯದ ವಕ್ರತೆ ಅತಿ ಮನೋಹರವಾಗಿದೆ. "ರವಿ ಮೂಡಣ ಅದ್ರಿಯಲ್ಲಿ ಓಲಗವಿತ್ತಂತೆ ಯುಧಿಷ್ಠಿರನು ಸಹೋದರರೊಡನೆ ಓಲಗಗೊಡುತ್ತಾನೆ; ಸರಸಿಜದ ಪರಿಮಳಕ್ಕೆ ತುಂಬಿಯ ಬರವಾದಂತೆ, ತಾವು ಯಾರೆಂಬುದನ್ನರಿತ ವಿರಾಟನಿಗೆ ತಮ್ಮ ಬಂಧುತ್ವದಲ್ಲಿ ಆಸೆಯಾಗುತ್ತದೆ; ಚಂದ್ರ ಕಾಂತಕೆ ಬೆರಗು ಉಂಟಾದಂತೆ, ಕರ್ಣಾದಿಗಳಿಗೆ ಬೆರಗಾಗಿತ್ತು; ಜಕ್ಕವಕ್ಕಿಯ ಸೆರೆ ಬಿಡುಗಡೆಯಾದಂತೆ, ಗೋವುಗಳ ಬಂಧನ ನಿವೃತ್ತಿಯಾಯಿತು; ಮತ್ತು ಅಜ್ಞಾತವಾಸವೆಂಬ ಬಂಧದ ವಿಮೋಚನೆಯೂ ಆಯಿತು. ಕೆರಳಿ ನೆಯ್ದಿಲ ಸಿರಿಯ ಸೂರೆಯ ತರಿಸಿದುದಕ್ಕೆ ಸರಿಯಾಗಿ ಯುದ್ಧದಲ್ಲಿ ಸೋತವರ ಆಭರಣಗಳನ್ನು ಅರ್ಜುನನು ಸುಲಿದು ತಂದಿದ್ದನು. ರಿಪುರಾಯ(ಚಂದ್ರ)ರಾಜ್ಯವನ್ನೊರಸಿದ ನೆಂಬುದಕ್ಕೆ ತಕ್ಕಂತೆ ದುರ್ಯೋಧನಾದಿಗಳನ್ನು ಅರ್ಜುನನು ಜಯಿಸಿದನು." "ರಾಜ್ಯವನೊರಸಿದನು" ಎಂದಿರುವುದರಿಂದ ಮುಂದಾಗುವ ಭಾರತ ಯುದ್ಧ ವಿಜಯವೂ ಧ್ವನಿತವಾಗುತ್ತದೆ. ಇಂಥ ಪದ್ಯಗಳನ್ನು ಭಾರತದಲ್ಲಿ ಅಲ್ಲಲ್ಲಿ ಕಾಣ ಬಹುದು. ಇಂಥವರೀಗ ಪ್ರಾಸಾದಿಕ ಕವಿಗಳೆಂದರೆ.

ಇದೆಲ್ಲ ಹಿಂದಿನ ಕವಿಗಳಿಂದ ನೆಲೆಗೊಂಡ ಸಾಹಿತ್ಯದ ವಿಷಯವಾಯಿತು. ಇದೇ ನಮ್ಮ ಈಗಿನ ಕನ್ನಡ ಸಾಹಿತ್ಯವೆಂಬ ಯುವಕನಿಗೆ ಪಿತ್ರಾರ್ಜಿತ ಧನವೆಂದು ಹೇಳ ಬಹುದು. ಮೊದಲಿನ ಕವಿಗಳೆಲ್ಲ ಆ ಧನವನ್ನು ಯೋಗ್ಯ ರೀತಿಯಿಂದ ಸಂಪಾದಿ ಸಿದ್ದಾರೆಯೊ ಇಲ್ಲವೊ ಎಂಬುದನ್ನು ನಾನಿಲ್ಲಿ ವಿಮರ್ಶಿಸಲಿಲ್ಲ; ಹಾಗೆಂದರೆ ಕೆಲವರಲ್ಲಿ ತತ್ಪೂರ್ವದ ಕವಿಗಳ ಅನುಕರಣೆ ತೋರಬಹುದು; ಆತ್ಮಸ್ತುತಿ ಪರನಿಂದೆಗಳನ್ನು ಮಾಡಿದವರು ಹಲವರಿರಬಹುದು; ಕೆಲವರಲ್ಲಿ ಭಾವನಾ ವಿಶಾಲತೆ ಇಲ್ಲದಿರಬಹುದು; ಯಾವ ಭಾಷೆಯಲ್ಲಿಯೂ ಹಲ ಕೆಲವು ಕವಿಗಳಲ್ಲಿ ಅಂಥ ನ್ಯೂನತೆ ಇದ್ದೇ ಇರುತ್ತದೆ. ಅಂಥ ದೋಷಗಳನ್ನು ಈಗಿನ ಸಾಹಿತ್ಯ ಸುಧಾರಕರಾದ ಕವಿಗಳು ಬಿಟ್ಟರೆ ಮುಗಿ ಯಿತು. "ಬಗೆವೆರಸಿ ಸಂದಪ್ಪವಾದೊಡರಿಯೆಂ ಪರೋಕ್ತಿಗಳರ್ಥಮಂ ಕಳುವು ದಧಮತನ"ವೆಂನು ರಾಘವಾಂಕನು ಆ ದೋಷವು ಎಷ್ಟು ಹೀನವಾದುದೆಂಬುದನ್ನು ಅಂದವಾಗಿ ಹೇಳಿದ್ದಾನೆ. ಸಾಮಾನ್ಯವಾಗಿ ಹೇಳುವುದಾದರೆ, ಅಂಥ ದೋಷಗಳಿಗೆ ಎಡೆಗೊಡದ ಕವಿಗಳೇ ಹೆಚ್ಚಾಗಿ ತಲೆದೋರುತ್ತಿದ್ದಾರೆ. ಇದು ಕನ್ನಡ ಸಾಹಿತ್ಯದ ಪುಣ್ಯವೆಂದು ತೋರುತ್ತದೆ.

ಮೇಲಿಂದ ಮೇಲೆ ಹೇಳುವುದಾದರೆ, ಧಾರ್ವಾಡ ಮೈಸೂರು ಮಂಗಳೂರು ಗಳೆಂಬ ಮೂರು ಪ್ರಾಂತಗಳೇ ಕನ್ನಡ ಸಾಹಿತ್ಯದ ಕ್ಷೇತ್ರಗಳು. ಇವುಗಳಲ್ಲಿ ಕ್ರಮ

ವಾಗಿ "ಗೆಳೆಯರ ಗುಂಪು, ಕರ್ಣಾಟಕ ಸಂಘ, ಮಿತ್ರಮಂಡಲಿ" ಎಂಬ ಮೂರು ನೂತನ ಸಾಹಿತ್ಯ ಸುಧಾರಕರ ಸಂಸ್ಥೆಗಳಿವೆ. ಅವುಗಳ ಸದಸ್ಯರೂ ಹೆಚ್ಚಾಗಿ ಪಾಶ್ಚಾತ್ಯ ಪೌರ್ವಾತ್ಯ ಸಂಸ್ಕೃತಿಗಳ ಸವಿಯನ್ನುಂಡ, ಉಣ್ಣುತ್ತಿರುವ ಯುವಕರು. ಅವರಿಗೆ ಆದರ್ಶಗಳೆಂದರೆ, ಹೊಸಗನ್ನಡ ಸಾಹಿತ್ಯಕ್ಕೆ ಅಡಿಗಟ್ಟು ಹಾಕಿ ಅಂದವಾದ ಮೇಲ್ಗಟ್ಟನ್ನು ಹಾರಯಿಸಿ ಉದ್ಯೋಗಿಸುತ್ತಿರುವ ಮಹನೀಯರಾದ ಶ್ರೀ ಆಲೂರ ವೆಂಕಟರಾಯರು, ಶ್ರೀ ಬಿ. ಎಮ್. ಶ್ರೀಕಂಠಯ್ಯನವರು, ಶ್ರೀ ಪಂಜೆ ಮಂಗೇಶ ರಾಯರು. ಈ ಸಂಸ್ಥೆಗಳುಂಟಾಗಿ ಈಗ ಆ ಮಹನೀಯರುಗಳಿಗೂ ಆನಂದವಾಗಿರ ಬಹುದು; ಕೆಲಸವೂ ಸರಿ ದಾರಿಯಲ್ಲಿ ನಡೆಯತೊಡಗಿದೆ. ಅದರಿಂದಲೇ ಮೇಲೆ, "ಇದು ಕನ್ನಡ ಸಾಹಿತ್ಯದ ಪುಣ್ಯ"ವೆಂದು ಹೇಳಿದುದು. ಇವುಗಳ ಮೂಲಕ ವಾಗಿಯೂ ವೈಯಕ್ತಿಕವಾಗಿಯೂ ಕೆಲವು ಮನೋಹರಗಳಾದ ನೂತನ ಕಾವ್ಯಗಳು ಪ್ರಕಟವಾಗಿವೆ; ಹಲವು ಸಿದ್ಧವಾಗುತ್ತಿವೆ. ಈ ಸಂಸ್ಥೆಗಳ ಉದ್ದೇಶವೂ ಆಯಾ ಕವಿಗಳ ಯೋಗ್ಯತೆಯೂ ಎಂಥದೆಂಬುದನ್ನು ಸ್ವಲ್ಪ ವಿವೇಚಿಸುವ:—

ಕವಿಗಳೆಲ್ಲ ಬಣ್ಣಿಸಿಹುದ । ನೋಡುತಿರುವೆನು ।
ಕಪ್ಪೆ ಮೀನು ಮೊಸಳೆ ರತ್ನ । ಹರಿಗೆ ಶಿವಗೆ ಹೋಲಿಪಂತೆ ।
ಶ್ಲೇಷೆಯಿಂದ ಬರೆವ ಯತ್ನ । ಬೇರೆ ಕಾಣೆನು ।
ಕಡಲೆ ನಿನ್ನ ಮೈಮೆ ಎನ್ನ । ಬಾಳಿಗಾಗಲಿ ।
ನಿನ್ನ ಬಿತ್ತರೆನಗೆ ಬರಲಿ । ನಿನ್ನ ಚಿತ್ತವೆನ್ನೊಳಿರಲಿ ।
ಕಾಣದಿರುವ ಕಡಲಿಗಿಂತು । ಹಾಡುತಿರುವೆನು ।
ಕಂಡ ಕಡಲಿಗೆಂತುಟುಲಿವೆ । ಎಂಬುದರಿಯೆನು ।

ಇದು ಶ್ರೀಯುತರಾದ ಕೆ. ವಿ. ಪುಟ್ಟಪ್ಪನವರು ತಮ್ಮ 'ಕೊಳಲ'ಲ್ಲಿ ಬಾರಿಸಿದ ಸಮುದ್ರವರ್ಣನೆ. ಹಿಂದೆ ಹೇಳಿದ ಸರಳತೆ ವಕ್ರತೆಗಳು ಇಲ್ಲಿ ಹೇಗೆ ಸೇರಿವೆಯೆಂಬು ದನ್ನು ತಾವೇ ನೋಡಬಹುದು. ಬೇರೆಬೇರೆ ಅರ್ಥಗಳೊದಗುವ ಪದಗಳನ್ನಿಟ್ಟು, ಶ್ಲೇಷಾಲಂಕಾರದಿಂದ ಹರಿಯೊಡನೆಯೂ ಶಿವನೊಡನೆಯೂ ಸಮುದ್ರವನ್ನು ಹೋಲಿಸುವ ಪದ್ಯಗಳನ್ನು ಹಲವು ಕಾವ್ಯಗಳಲ್ಲಿ ಕಾಣಬಹುದಷ್ಟೆ! ಅಂಥ ಶ್ಲೇಷ ದಿಂದ, ಕವಿಯೆಂದರೆ ಒಂದು ಶಬ್ದಭಂಡಾರವೆನ್ನಬಹುದಲ್ಲದೆ ಅವನ ನಿಜವಾದ ಉದ್ದೇಶ ವನ್ನು ಸಾಧಿಸಿದಂತಾಗುವುದಿಲ್ಲ; ಕವಿತಾ ರಸವನ್ನು ಸುರಿದು ರಸಿಕರನ್ನಾನಂದ ಪಡಿಸುವುದಲ್ಲದೆ ಅಜ್ಞರಲ್ಲಿ ಸಂಸ್ಕೃತಿಯನ್ನುಂಟುಮಾಡುವುದೂ ಕವಿಯ ಉದ್ದೇಶ ವಾಗಿರಬೇಕಲ್ಲವೆ? ನಿಜವಾದ ಕವಿಗಳೆಂದರೆ ವರ್ಣ್ಯವಸ್ತುಗಳಲ್ಲಿ ಐಕ್ಯಗೊಂಡಿರು ತ್ತಾರೆ. ಬೇಕಾದರೆ, ಕಾಳಿದಾಸನ ಶಾಕುಂತಲ ನಾಟಕವನ್ನು ನೋಡಬಹುದು. ಅವನ ದೃಷ್ಟಿಗೆ ಕಣ್ವಾಶ್ರಮದಲ್ಲಿರುವ ಓಷಧಿಗಳೆಲ್ಲ ಮನುಷ್ಯಸಮಾಜವಾಗಿಯೇ ತೋರುತ್ತವೆ. ಪೂರ್ವದಲ್ಲಿ ಹೇಳಿದಂತೆ, ಶ್ಲೇಷದಿಂದ ಬಣ್ಣಿಸುವ ಕವಿ ತಲ್ಲೀನನಾಗಿರು ವುದಿಲ್ಲ. ಅದರಿಂದಲೇ ಶ್ರೀ ಪುಟ್ಟಪ್ಪನವರು ಆ ಕ್ರಮವನ್ನಲ್ಲಗಳೆದು ತಮ್ಮ ತನ್ಮಯತೆ ಯನ್ನು ಮುಂದೆ ಸರಸವಾಗಿ ಬಣ್ಣಿಸಿದ್ದಾರೆ. ಇದೀಗ, ಹಿಂದಿನ ಸಾಹಿತ್ಯದಲ್ಲಿದ್ದ

ನ್ಯೂನತೆಗಳನ್ನು ಬಿಟ್ಟು ಗುಣವನ್ನು ಸ್ವೀಕರಿಸಿ ನೂತನ ಸಾಹಿತ್ಯವನ್ನು ಅಂದವಾಗಿ ಹಬ್ಬಿಸುವ ಕ್ರಮವು. ಹಿಂದಿನದನ್ನೆಲ್ಲ ಬಿಡಬಾರದೆಂಬುದನ್ನು "ಸುಗ್ಗಿ ಬರುತಿದೆ" ಎಂಬ ಪದ್ಯದಲ್ಲಿ ಅವರೇ ಹೇಳುತ್ತಾರೆ—

ಮಧುವೆ ಬಾರ ಮುದವ ತಾರ! ನೀನೆ ದೇವದೂತನು
ಪರದ ಚಿಂತೆ ಮರೆಯದಂತೆ ಕಳುಹುವನು ವಿಧಾತನು
ಬುವಿಯ ಸಿಂಗರಿಸುತ ಬಾರ
ಪರದ ಬೆಳಕನಿಳೆಗೆ ತಾರ
ಸೊಬಗೆ ಶಿವನು ಎಂದು ಸಾರ
ಬಾರ ಶಕ್ತಿದಾಯಕ
ಹಳತ ಕೂಡಿ ಹೊಸತು ಮಾಡಿ ಬಾರೆಲೆ ಋತುನಾಯಕ

ವಸಂತನು ಹಳತಾದ ಉಪವನದಲ್ಲಿರುವ ಹಳೆಯ ತರು ಲತೆಯನ್ನೇ ಹೊಸತನ್ನಾಗಿ ಮಾಡುವುದಲ್ಲವೆ? ಶ್ರೀ ಪುಟ್ಟಪ್ಪನವರೆಂದರೆ ತಾತ್ತ್ವಿಕರಾದ ಸರಸ ಕವಿಗಳು. ನಮ್ಮ ಇನ್ನೊಂದು ಪ್ರಾಂತದ ಕಾವ್ಯಾಂಶವನ್ನು ಉದಾಹರಿಸುತ್ತೇನೆ:—

ಕವಿಯೇ ಕಾವ್ಯ ಸಮಾಧಿಯೊಳೊರಗೈ
ಅಮೃತಾನಂದದ ಪೀಠದೆ ಮೆರೆಯೈ
ಗತ ಶತಮಾನದ ಬೇರ್ಗಳ ಬಿಟ್ಟು
ನೂತನ ಯುಗಗಳ ರೆಂಬೆಗಳಿಟ್ಟು
ಜೀವನ ರಸಗಳ ಕಾಂಡಕೆ ಹೀರಿ
ದಿನ ದಿನಗಳ ಹೂಬಲಿಗಳ ಬೀರಿ
ಆದ್ಯಂತವ ಕಾಣದ ಹೆಮ್ಮರವಿದು
ತಲೆ ಮೇಗಡೆ ಹಸುರಿನ ಕೊಡೆ ಹಿಡಿವುದು

ಶ್ರೀಯುತ ಕೆ. ಶಂಕರ ಭಟ್ಟರು ಬರೆದಿರುವ ಇನ್ನೂ ಅಚ್ಚಾಗದ "ಹಣ್ಣುಕಾಯಿ" ಎಂಬ ಕಾವ್ಯದೊಳಗಣ "ಕಾವ್ಯ ಸಮಾಧಿ" ಎಂಬ ಭಾಗದ ಆದಿಪದ್ಯವಿದು. ಕವಿಗಳು "ಆದ್ಯಂತವ ಕಾಣದ ಹೆಮ್ಮರ"ವೆಂದು ಹೇಳಿದುದು ಪ್ರಪಂಚ ಸಾಹಿತ್ಯ ವೃಕ್ಷವನ್ನು. ಆ ವೃಕ್ಷದ ಬೇರುಗಳನ್ನೂ ರೆಂಬೆಗಳನ್ನೂ ಅದು ಬೆಳೆಯುವ ರೀತಿಯನ್ನೂ ಅದರಲ್ಲಿ ಮೊಳೆದು ಲೋಕದ ಕಣ್ಣೆದಿರಿನಲ್ಲಿ ಬಿದ್ದು ಪ್ರಪಂಚ ಹಿತವನ್ನೆಸಗುವ ತತ್ತ್ವ ಕವಿತಾ ಕುಸುಮಗಳನ್ನೂ ಆಲಂಕಾರಿಕರಾದ ಕವಿಗಳು ಅಂದವಾಗಿ ವಿಸ್ತರಿಸಿರುತ್ತಾರೆ. "ಗತ ಶತಮಾನದ ಬೇರ್ಗಳ ಬಿಟ್ಟು, ನೂತನ ಯುಗಗಳ ರೆಂಬೆಗಳಿಟ್ಟು" ಎಂಬ ಭಾಗದ 'ಬಿಟ್ಟು, ಇಟ್ಟು' ಎಂಬ ಪದಗಳಲ್ಲಿ ಒಂದಿಷ್ಟು ವಕ್ರತಾ ರೂಪವಾದ ಶ್ಲೇಷ ವಿರಲೂ ಬಹುದು. ಭಾಷೆಗೆ ಅನ್ವಯಿಸಿದರೆ, ಹಿಂದಿನ ಹಳಗನ್ನಡದ ಆ ಸ್ವರೂಪವನ್ನೂ ಆ ಕಾಲದ ವರ್ಣನಾದಿ ಪದ್ಧತಿಗಳನ್ನೂ ಬಿಡಬೇಕೆಂದೂ ಇಂದಿನ ಹೊಸಗನ್ನಡದ ಸ್ವರೂಪ, ಇಂದಿನ ನೂತನ ವರ್ಣನಾದಿ ಪದ್ಧತಿಗಳನ್ನು ಇಡಬೇಕೆಂದೂ ಆ ಶ್ಲೇಷದ

ಉದ್ದೇಶವಾಗಿರಲೂ ಬಹುದು. ಇಂಥ ಶ್ಲೇಷದಲ್ಲಿ ಸವಿ ಇಲ್ಲವೆ? ಮುಂದಿನ ಪದ್ಯವನ್ನು ನೋಡಿರಿ:—

ವೇದದಿ ಬೋಧದಿ ಹುತ್ತವ ಕಟ್ಟಿ
ವಾದವು ಸರ್ಪದವೊಲು ಬುಸುಗುಟ್ಟಿ
ಬೆದರಿಸುತಿರುವುದು ; ಮಾನವ ಕೋಟಿ
ಚೆದರುತಲಿರುವುದು ಚಲಿಪಿಲಿಗುಟ್ಟಿ
ನಿನ್ನಯ ಕಾವ್ಯಶರೀರದ ಸುತ್ತಲು
ಯುಗಧರ್ಮಗಳೇ ಹೆಣೆದಿವೆಯೆತ್ತಲು

ಮತ್ತೊಂದು ಪ್ರಾಂತದ ಕವಿತೆಯ ಉದಾತ್ತತೆಯನ್ನು ನೋಡಿರಿ:—

ಬಣ್ಣ ಬಣ್ಣದ ಹಕ್ಕಿ ಹೊನ್ನ ರನ್ನದ ಮೋಡ
ಸುಣ್ಣನೆಯ ಕೆಂಪ ಹೂ ತಣ್ಣನೆಯ ತಂಪುದೊರೆ
ಕಣ್ಣಮುಂದೆನ್ನಯಿಾತಾಳ ತಂತಿಯನರಿಯದಂಥ ಸಂತೆಯನು ನೆರಸಿ
ಕಣ್ಣ ಕಟ್ಟಲು ಬಯಸುವವು ಬಣ್ಣದಾಟದಲಿ
ನನ್ನ ನೆತ್ತರು ಅವರ ತಾಳಮೇಳವ ಕೂಡಿ
ಭಿನ್ನ ಆಟದ ಮರವೆ ಮನಸಿಗಾಗುವವರೆಗೆ ಏನಿದ್ದರೇನು ನಮಗೆ

ಇದು ಶ್ರೀ ಅಂಬಿಕಾತನಯ ದತ್ತರವರು ಬರೆದ "ಹಸಿ ಹಂಬಲ"ವೆಂಬ ಕವಿತೆಯ ಮೊದಲನೆಯ ಪದ್ಯವು. ಇವರ ಉದಾತ್ತ ವಿಚಾರಗಳು ವ್ಯಾಪಕವಾಗಿವೆ. ಸ್ವಾತಂತ್ರ್ಯದ ಹೊನಲು ಇವರ ಭಾಷೆಯಲ್ಲಿಯೂ ಕಾವ್ಯಮಾರ್ಗದಲ್ಲಿಯೂ ಒಟ್ಟಿಗೆ ಹರಿಯುತ್ತದೆ. "ಪ್ರಕೃತಿಯಲ್ಲಿ ದೃಶ್ಯಗಳು ಇಂದ್ರಿಯ ಗ್ರಾಮವನ್ನು ಮೋಹಿಸಲು ಯತ್ನಿಸುತ್ತವೆ. ಆದರೆ ಅವು ಬಾಹ್ಯ ಸೌಂದರ್ಯಕ್ಕೆ ಮೋಹಿಸುವುದು ತಕ್ಕುದಲ್ಲ; ನನ್ನ ಮನಸ್ಸು ಅದರಲ್ಲಿ ಲೀನವಾಗಿ ಆನಂದಪಡೆಯದೆ ಬರಿಯ ಬಾಹ್ಯಾಡಂಬರದಿಂದ ಏನೂ ಪ್ರಯೋಜನವಿಲ್ಲ" ಎಂಬುದೇ ಕವಿಗಳ ಅಭಿಪ್ರಾಯವೆಂದು ತೋರುತ್ತದೆ.

ದಿಗ್ದರ್ಶನಕ್ಕಾಗಿ ಇಷ್ಟು ಹೇಳಿದೆನು. ಎಲ್ಲರ ಪ್ರಯತ್ನವೂ ತಂತಮ್ಮ ವೈಶಿಷ್ಟ್ಯವನ್ನು ವಿಸ್ತರಿಸುವುದು ಆನಂದದ ಸಂಗತಿ. ಮೊದಲಿನ ಸಾಹಿತ್ಯದಲ್ಲಿ "ಜೈನ, ವೀರಶೈವ, ವೈಷ್ಣವ" ಎಂಬ ಮತಭೇದವಿದ್ದರೆ ಈಗಿನ ಹೊಸಗನ್ನಡ ಸಾಹಿತ್ಯದಲ್ಲಿ ಅಂತಹ ಕವಲಿನ ಬಿಗಿತಕ್ಕೆಡೆಯಿಲ್ಲ. ಆಂಗ್ಲ ಭಾಷಾ ಪರಿಚಿತಿಯಿಂದೊದಗಿದ ಪಾಶ್ಚಾತ್ಯ ಸಂಸ್ಕೃತಿ, ಈಗಿನ ವಾತಾವರಣದಿಂದುಂಟಾದ ರಾಷ್ಟ್ರೀಯ ಭಾವನಾ ಸಂಸ್ಕೃತಿ, ಆತ್ಮ ವಿಶ್ವಾಸದಿಂದ ನೆಲೆಗೊಂಡ ತಾತ್ತ್ವಿಕ ಸಂಸ್ಕೃತಿ, ಈ ಮುಪ್ಪುರಿಗಳಿಂದ ಹೆಣೆಯಲ್ಪಟ್ಟು ಇದು ಬಲವಾಗುತ್ತಿದೆ. ಸ್ವಲ್ಪ ಹಿಂದಿನ ಸಾಹಿತ್ಯದಲ್ಲಿ ಈ ಗುಣಗಳೆಲ್ಲ ಇದ್ದಂತೆ ತೋರುವುದಿಲ್ಲ; ಅದರಿಂದಲೇ ಅದು ಒಂದಿಷ್ಟು ಸಡಿಲಾಗಿರುವಂತೆ ತೋರುತ್ತದೆ. ನೃಪತುಂಗನಂತೆ ಈಗಿನವರು, "ಕನ್ನಡಂಗಳ"ನೆಲ್ಲ ಒಟ್ಟುಗೂಡಿಸಿ ದೇಸಿಯನ್ನಾಗಿ ಮಾಡತೊಡಗಿರುವುದು ಧೈರ್ಯವನ್ನೂ ಆನಂದವನ್ನೂ ಒದಗಿಸುತ್ತದೆ. ಮೇಲೆ ಹೇಳಿದ ಸಂಘಗಳಿಂದಲೂ ವೈಯಕ್ತಿಕವಾಗಿಯೂ ಪ್ರಕಟಿಸಲ್ಪಟ್ಟ ಕಾವ್ಯಗಳಲ್ಲಿ ಕೆಲ ಕೆಲವು ಪದ್ಯಗಳು ಇಷ್ಟರಲ್ಲೇ ಜೀದಿವಾಡಾಗಲೂ ತೊಡ

ಗಿವೆ. ಮೊದಲೊಮ್ಮೆ "ಏಂ ಬೀದಿವಾಡೆ?" ಎಂಬುದು ನಿಂದಾ ವಚನವಾದರೆ ಇಂದು ಹೊಗಳಿಕೆಯ ನುಡಿ. ಕಾರಣವೇನೆಂದರೆ, ಮೊದಲು ರಾಜಕೀಯಾದ್ಯಧಿಕಾರಗಳಂತೆ ಸಾಹಿತ್ಯವೂ ಸಾಂಪ್ರದಾಯಿಕರ ಕೈಯೊಳಗಿನ ಗಂಟೇ ಆಗಿತ್ತು; ಈಗ ಹಾಗಲ್ಲ; ಸಾಹಿತ್ಯವನ್ನೂ ಈ ಪ್ರಜಾಸತ್ತಾ ವಾದಿಗಳು ವಶೀಕರಿಸತೊಡಗಿದ್ದಾರೆ. ಅದರಿಂದ ಅವುಗಳು ರಸಯುಕ್ತವಾದ ಸಾರ್ವಜನಿಕವಾದ ಬೀದಿವಾಡುಗಳೂ ಆಗಬೇಕಾಗಿವೆ. ಶ್ರೀ ಅಂಬಿಕಾತನಯ ದತ್ತರವರ "ಹಾಹಾದಿ ಹೂಹುಗಳ ಸ್ತೋಮವಿದು. ತಿರುಹಾಡು ಸಾಕು ದೊರೆವಾಡುಗಳ ಸೀಮೆಗಳ ಸಾಮ್ರಾಟನಾಗಿ ಆಳುವ ವರೆಗೆ ಏನಾದರೇನು ನಮಗೆ" ಎಂಬ ಪದ್ಯಭಾಗದಲ್ಲಿ ಈ ತಾತ್ಪರ್ಯವೂ ಹೊಳೆಯುತ್ತಿದೆ.

೬

ನಮ್ಮ ಕನ್ನಡದಲ್ಲಿ ಮಾತ್ರವೇ ಅಲ್ಲ; ಭರತಖಂಡದ ಎಲ್ಲಾ ಭಾಷೆಗಳಲ್ಲಿಯೂ ಮೊದಲಿನಿಂದಲೂ ಪದ್ಯ ಸಾಹಿತ್ಯವೇ ಹೆಚ್ಚು. ಸಂಸ್ಕೃತ ಸಾಹಿತ್ಯವನ್ನು ನೋಡಿರಿ; ಅದರಲ್ಲಿಯೂ ಇದೇ ಹಾಡು. ಸಾಹಿತ್ಯ ಸಾರವಾದ ಸಂಸ್ಕೃತಿ ಸಾರ್ವಜನಿಕವಾಗಬೇಕಾದರೆ ಮೊದಲು ಸಾಹಿತ್ಯವು ಸಾರ್ವಜನಿಕವಾಗಬೇಕಲ್ಲವೆ? "ಸಂಸ್ಕೃತಿಗೊಂಡ ನಮ್ಮ ದೇಶೀಯರಾದ ಹಲವರು ಆದಿಯಿಂದಲೂ ಹೆಚ್ಚಾಗಿ ದೈವಭಕ್ತಿಪ್ರೇರಿತರಾಗಿ ನಾದಬ್ರಹ್ಮನಲ್ಲಿಯೇ ಮನಸ್ಸನ್ನು ನೆಲೆಗೊಳಿಸುತ್ತಿದ್ದುದರಿಂದಲೆಂದೇ ತೋರುತ್ತದೆ—ಸಾಹಿತ್ಯವೂ ಪದ್ಯಮಯವಾಗಿ ಹೋಯಿತು. ಕನ್ನಡದಲ್ಲಿ ಪೂರ್ವಕಾಲದಲ್ಲಿದ್ದ ಗದ್ಯ ಸಾಹಿತ್ಯವೆಂಬುದು ಬಹಳ ಕಡಿಮೆ. ಚಾವುಂಡರಾಯ ಪುರಾಣ, ದುರ್ಗಸಿಂಹನ ಪಂಚತಂತ್ರ, ಚಿಕದೇವರಾಯ ವಂಶಾವಳಿ ಮೊದಲಾದ ಕೆಲವೇ ಗದ್ಯಕಾವ್ಯಗಳು ನಮಗೆ ದೊರೆತಿರುವುವು. ಚಂಪೂ ಕಾವ್ಯಗಳಲ್ಲಿರುವ ಗದ್ಯಗಳ ಹಾಡೂ ಹಾಗೆಯೇ. ಇವುಗಳು ಹೆಸರಿನಿಂದ ಗದ್ಯಗಳಾದರೂ ಒಂದು ತೆರದ ಪದ್ಯಗಳಂತೆಯೇ ತೋರುತ್ತವೆ. ಆ ಗ್ರಂಥಗಳಲ್ಲಿ ಪಂಚತಂತ್ರವು ಸ್ವಲ್ಪಮಟ್ಟಿಗಾದರೂ ಗದ್ಯರೂಪದಲ್ಲಿದೆ ಎನ್ನಬಹುದು. ಪದ್ಯವೆಂಬುದು ಅನೇಕ ನಿಯಮಗಳಿಂದ ಬದ್ಧವಾಗಿ ದೊಡ್ಡವರ ಸೊತ್ತಿನಂತಿದೆ; ಬಡವರಂತಿರುವ ಸಾಮಾನ್ಯರಿಗೆ ಅದರಿಂದ ಸಂಸ್ಕೃತಿಯ ತುತ್ತು ಒದಗುವುದು ಹೇಗೆ? ಈ ವಿಷಯವನ್ನು ಮೊತ್ತಮೊದಲು ತಿಳಿದ ಕನ್ನಡಿಗರೆಂದರೆ ವೀರಶೈವರು. ಅದರಿಂದಲೇ ಅವರು ತಮ್ಮ ಮತ ತತ್ತ್ವಗಳನ್ನು ವಚನ ರೂಪವಾಗಿ ವಿಸ್ತರಿಸತೊಡಗಿದರು. ನಮ್ಮ ಕನ್ನಡ ನಾಡೆಂಬುದು ಮೊದಲಿನಿಂದಲೂ ಮತಗಳ ತವರೂರು. ಅದರಿಂದ ಅವರ ಪ್ರಯತ್ನವು ಆಗಿನ ಕನ್ನಡಿಗರೆಲ್ಲರ ಮೆಚ್ಚಿಕೆಗೆ ಒಳಗಾಗಲಿಲ್ಲವೆಂದು ತೋರುತ್ತದೆ. ಆಮೇಲೆ ಕನ್ನಡದಲ್ಲಿರುವ ಗದ್ಯದ ನ್ಯೂನತೆಯನ್ನೂ ಹಳಗನ್ನಡ ಗದ್ಯಕಾವ್ಯಗಳ ದೋಷವನ್ನೂ ಕಂಡುಹಿಡಿದವನೆಂದರೆ ನಮ್ಮ ಕನ್ನಡಿಗರ ಮುದ್ದಣನು (ಕೀ॥ ಶೇ॥ ನಂ. ಲಕ್ಷ್ಮೀನಾರಣಪ್ಪನವರು). ಮನೋರಮಾ ಮುದ್ದಣರ ಸಲ್ಲಾಪದೊಳಗಿನ "ಪದ್ಯಂ ವಧ್ಯಂ ಗದ್ಯಂ ಹೃದ್ಯಂ", "ನೀರಿಳಿಯದ ಗಂಟಲೊಳ್ ಕಡುಬಂ ತುರುಕಿದಂತಾಯ್ತು" ಎಂಬ ಭಾಗದಿಂದ ಮುದ್ದಣನ ಆ ಅಭಿಪ್ರಾಯವು ಸ್ಪಷ್ಟವಾಗುತ್ತಿದೆ.

ಈ ಗದ್ಯ ಸಾಹಿತ್ಯದ ನ್ಯೂನತೆಯೂ ಮೆಲ್ಲಮೆಲ್ಲನೆ ನಿವೃತ್ತಿಗೊಳ್ಳುತ್ತ ಬರ ಹತ್ತಿದೆ. ಮಹನೀಯರಾದ ನಮ್ಮ ಶ್ರೀಯುತ ಮಾಸ್ತಿಯವರ ಚಿಕ್ಕ ಕತೆಗೆ ಸರಿ ದೊರೆಯಾದ ಇನ್ನೊಂದು ಕತೆ "ನಾಸ್ತಿ" ಎಂದರೆ ತಪ್ಪಾಗದೆಂದು ತೋರುತ್ತದೆ. "ಸಯ್ಯು ಕೊಂಕು"ಗಳ ನಾಟ್ಯರಂಗವೇ ಅದು ಎಂದು ಹೇಳಬಹುದು; ಭಾವ ರಸಗಳು ಹೃದಯಂಗಮವಾಗಿ ಸಾರ್ವಜನಿಕವಾಗಿ ಹೊನಲಿಡುತ್ತವೆ. ಪ್ರಪಂಚ ದೊಳಗಿನ ಪ್ರತಿಯೊಂದು ಚಿಕ್ಕ ಚಿಕ್ಕ ವಿಷಯದಲ್ಲಿಯೂ ರಸವತ್ತಾದ ಸಂಸ್ಕೃತಿ ಇದೆ. ಯಾರೂ ಉಪಯೋಗಿಸದಿದ್ದರೆ ಆ ತಿಳಿ ನೀರು ಅಲ್ಲೇ ಇಂಗಿಹೋಗುತ್ತದೆ; ಅಲ್ಲವೆ, ಹಾಳಾಗುತ್ತದೆ; ಹಾಗಾಗದಂತೆ ಆಯಾ ಸಂಸ್ಕೃತಿಯ ಹೊನಲು ಎಲ್ಲ ರೆಡೆಗೂ ಹರಿದುಬರುವಂತೆ ಶ್ರೀಯುತರು ಚಿಕ್ಕ ಕತೆಗಳೆಂಬ ತೂಬನ್ನು ಕಡಿದಿದ್ದಾರೆ.

ಶ್ರೀಯುತ ಆಲೂರರವರ ಲೆಕ್ಕಣಿಯಿಂದ ಹೊರಟ ಗದ್ಯಗಳಿಗೂ ನೂತನ ಸಾಹಿತ್ಯದಲ್ಲೊಂದು ಪ್ರಮುಖ ಸ್ಥಾನವಿದೆ. ಕನ್ನಡ ಗೀತಾರಹಸ್ಯ, ಗತವೈಭವ, ವೀರರತ್ನಗಳು ಎಂಬ ಮೂರು ಗ್ರಂಥಗಳನ್ನು ರತ್ನತ್ರಯವೆಂದು ಹೇಳಬಹುದು. ಇವರ ಪ್ರಯತ್ನದಿಂದಲೇ ಪ್ರಕಟವಾಗಿರುವ "ಆಕಾಶದೊಳಗಿನ ವೈಚಿತ್ರ್ಯ", "ಧರ್ಮಸಂಭವ" ಎಂಬ ಗ್ರಂಥಗಳೂ ಅಮೌಲ್ಯವಾದುವುಗಳೇ ಸರಿ. ಶ್ರೀಯುತ ಪಂಡಿತ ತಾರಾನಾಥರ ಲೆಕ್ಕಣಿಯು ತೂಬಿನಲ್ಲಿ ಸುರಿದ ಆ ಸಂಸ್ಕೃತಿಯ ತಿಳಿ ನೀರು ಕೆಲವರಿಗೆ ಸವಿಯಾಗದಿರಬಹುದು. ಮುಗಿಲಿನ ನೀರಿಗೆ ಮಾತ್ರವೇ ಬಾಯ್ದೆರೆವ ಚಾತಕ ಪಕ್ಷಿಗಳೂ ಇರುತ್ತವೆಯಲ್ಲವೆ? ಆದರೆ ಆ ಮಳೆ ನೀರೂ ಈ ತಿಳಿ ನೀರೂ ಕರ್ಣಾಟಕ ಸಂಸ್ಕೃತಿಗೆ ಅವಶ್ಯವೆಂದು ರಾಯರು ಎರಡಕ್ಕೂ ಎಡೆಗೊಡುತ್ತಿರುವುದು ಆನಂದಕರವು.

ಶ್ರೀ ಪಂಜೆಯವರು ಬರೆದಿರುವ "ಕೋಟಿ ಚನ್ನಯ" ಎಂಬ ಕತೆಯ ವೈಶಿಷ್ಟ್ಯವಿನ್ನೊಂದು. ತುಳು ಭಾಷೆಯ 'ಪಾಡ್ದನ' ಎಂಬ ಪುಸ್ತಕದಿಂದ ಕಥಾ ಭಾಗವನ್ನೆತ್ತಿಕೊಂಡಿದ್ದಾರೆ. ತುಳುವಿನ ಸುಡಿಗಟ್ಟು ಶೈಲಿ ಭಾವನೆಗಳು ರಾಯರ ಲೇಖನಿಯಿಂದಿಳಿದುದರಿಂದ ವಿಕೃತಿಗೊಳ್ಳದೆ ಕನ್ನಡಕ್ಕೆ ಹೊದ್ದಿಕೆಯಾಗಿ ಹೊಳೆಯು ತ್ತವೆ. ಶ್ರೀ ಮಾಸ್ತಿಯವರು ತಮ್ಮ ಚಿಕ್ಕ ಕತೆಗಳಿಂದ ವೈಯಕ್ತಿಕ ಸಂಸ್ಕೃತಿಯನ್ನು ಪ್ರಕಟಿಸಿದರೆ, ಶ್ರೀ ಪಂಜೆಯವರು ಆ ಕಾಲದ ತುಳುನಾಡಿನ ಸಂಸ್ಕೃತಿಯನ್ನು ಈ ಕಾಲದವರಿಗೆ ಸವಿಯಿಸುತ್ತಾರೆ. ರಾಯರವರ ಶೈಲಿಯಾದರೂ 'ಸಯ್ಯು ಕೊಂಕು' ಗಳ ತವರ್ಮನೆಯೇ. ಶ್ರೀ ಕೆ. ಶಂಕರ ಭಟ್ಟರು ಬರೆದ "ಹಿಡಿಂಬೆ" ಎಂಬ ಕತೆ ಇನ್ನೊಂದು. ಆ "ಪೂರ್ವದ ಹಳೆಗನ್ನಡ" ವೆಂಬುದು ಈಗಲೂ ಹಳ್ಳಿಗಳಲ್ಲಿ ಹರಡಿ ಕೊಂಡಿದೆಯೆಂದು ಮೊದಲೊಮ್ಮೆ ಹೇಳಿದೆನಷ್ಟೆ! ಆ ಹಳಗನ್ನಡವನ್ನೇ ಹೊಸತಾಗಿ ಮಾಡಿದ ಭಾಷೆ ಈ 'ಹಿಡಿಂಬೆ'ಯದು. ಎಲ್ಲವಕ್ಕೂ ಒಂದೊಂದು ದೃಷ್ಟಾಂತ ವನ್ನಾದರೂ ಕೊಟ್ಟು ಸಮರ್ಥಿಸಬೇಕೆಂಬ ಎಣಿಕೆ ಇತ್ತು. ಮಾಡುವುದೇನು? ಸಮಯದ ನ್ಯೂನತೆಯಿಂದಾಗಿ ಅಸಾಧ್ಯವಾಯಿತು. ಆದರೂ ಅವುಗಳನ್ನೋದಿ ನನ್ನಲ್ಲುಂಟಾದ ಸಂಸ್ಕೃತಿಯನ್ನೇ ಈ ರೀತಿಯಲ್ಲಿ ಸೂಚಿಸಿರುತ್ತೇನೆ. ನಮ್ಮ

ಕರ್ಣಾಟಕದಲ್ಲಿ ಪ್ರಾಂತ ಭೇದದಿಂದಾಗಿ ನೆಲೆಗೊಂಡ ಕನ್ನಡದ ಕವಲುಗಳು ಹಲವಿರುತ್ತವೆ; ಭಿನ್ನಭಾಷೆಗಳ ಸಂಪರ್ಕವೂ ಹಲವಿರುತ್ತವೆ; ಈ ಸ್ಥಿತಿ ಸಾಹಿತ್ಯಾಭಿವೃದ್ಧಿಗೊಂದು ಬಂದಣಿಕೆಯಂತೆ ಪ್ರಥಮ ದೃಷ್ಟಿಗೆ ತೋರಬಹುದು. ಆ ದೃಷ್ಟಿದೋಷಕ್ಕೆ ಹೆದರಬಾರದು. ಕನ್ನಡದ ಕವಲುಗಳನ್ನೆಲ್ಲ ಕರಗಿಸಿ 'ದೇಸಿ' ಯನ್ನಾಗಿ ಮಾಡಬೇಕು; ಪರ ಭಾಷೆಗಳ ಸಾರವನ್ನೆಲ್ಲ ಕನ್ನಡದಲ್ಲಿ ತುಂಬಬೇಕು. ಹಾಗೆ ಪ್ರಯತ್ನಿಸುವುದರಿಂದೊದಗುವ ಫಲವೂ ತೋರತೊಡಗುತ್ತಿದೆ.

ಈ ಕೆಲಸದಲ್ಲಿ ಪತ್ರಿಕೆಗಳ ಸಹಾಯವು ಅಷ್ಟಿಷ್ಟಲ್ಲ. ಪತ್ರಿಕೆಗಳ ಉದ್ದೇಶವು ಸಾಹಿತ್ಯಾಭಿವೃದ್ಧಿಯೊಂದೇ ಅಲ್ಲವಾದರೂ, ಅವುಗಳಿಂದಲೇ ಈ ಕಾರ್ಯವು ಪೂರ್ತಿಗೊಂಡು ಪ್ರಕಾಶಿಸುವುದು. ಮನೆಯನ್ನು ಎಷ್ಟು ಅಂದವಾಗಿ ಕಟ್ಟಿದರೂ ಸಾರಣೆ ಮಾಡದಿದ್ದರೆ ಶೋಭಿಸುವುದೆ? ಗೋಡೆಯ ಬಿರುಕುಗಳೆಲ್ಲ ತೆರೆದುಕೊಂಡೇ ತೋರುತ್ತವೆ.

ಈ ಪತ್ರಿಕೆಗಳಿಂದಲೇ ಭಾಷೆಗೆ ಸಾರಣೆ ಕೊಟ್ಟಂತಾಗುವುದು; ಅಥವಾ, ತೊಡವಿಗೆ "ಒಪ್ಪಂಬೂಸಿ" ದಂತಾಗುವುದೆಂದು ನನ್ನೆಣಿಕೆ. ಪತ್ರಿಕಾ ಸಂಪಾದಕರೆಲ್ಲರೂ ತಮ್ಮ ನೋಟವನ್ನು ಆ ಕಡೆಗೂ ತಿರುಗಿಸಿದರೆ ಒಳ್ಳೆಯದು.

ಸಾಹಿತ್ಯ ಸಮ್ಮೇಲನವೆಂಬುದು ವರ್ಷಕ್ಕೊಮ್ಮೆ ಜರುಗುವುದು. ಸಾಹಿತ್ಯೋದ್ಧಾರಕ್ಕಾಗಿ ಕೆಲ ಕೆಲವು ನಿರ್ಣಯಗಳನ್ನು ಮಾಡುವುದು; ಆ ಮೇಲೆ ಒಟ್ಟುಗೂಡಿ ವಿಚಾರಿಸುವುದೆಂದರೆ ಆ ಮೇಲಿನ ವರ್ಷದಲ್ಲಿ. ಅದರಿಂದಾಗಿ ಈ ವರೆಗೆ ನಿರ್ಣಯಿಸಲ್ಪಟ್ಟ ಉದ್ದೇಶಗಳು ಬಹಳ ಮಟ್ಟಿಗೆ ಕಾರ್ಯರೂಪವಾಗಿ ತಲೆದೋರಲಿಲ್ಲವೆಂದು ತೋರುತ್ತದೆ. ಆ ಉದ್ದೇಶಗಳನ್ನು ಪೂರ್ತಿಗೊಳಿಸಲಿಕ್ಕೂ, ಇತರ ಸಾಹಿತ್ಯ ಸುಧಾರಣೆಗಳನ್ನು ಒದಗಿಸಲಿಕ್ಕೂ ಸಮರ್ಥವಾದ ಒಂದು 'ಕಾರ್ಯಕಾರಿ ಮಂಡಲಿ' ನಮಗೆ ಅವಶ್ಯವೆಂದು ನನ್ನ ಭಾವನೆ. ಅಖಂಡ ಕರ್ಣಾಟಕದ ನುರಿತ ವಿದ್ವಾಂಸರೇ ಅದರಲ್ಲಿ ಸದಸ್ಯರಾಗಿರಬೇಕು. ಸದಸ್ಯರಾದರೂ ಬಹಳ ಹೆಚ್ಚಾಗಿ ಕಾರ್ಯಸಾಧನೆಗೆ ತೊಡಕಾಗುವಂತಿರಬಾರದು. ಆ ಮಂಡಲಿ ನಮ್ಮ ಸಾಹಿತ್ಯ ಪರಿಷತ್ತಿಗೆ ಸಂಪೂರ್ಣವಾಗಿ ಅಧೀನವಾಗಿರಬೇಕೆಂದು ನನ್ನೆಣಿಕೆಯಲ್ಲ; ಅದಕ್ಕೂ ಕೆಲವು ಸ್ವಾತಂತ್ರ್ಯವಿರತಕ್ಕುದು. ಯಾವ ಯಾವ ನಿಯಮಗಳಿರತಕ್ಕುದೆಂಬುದನ್ನು ಅರಿತ ವಿದ್ವಾಂಸರೇ ಆಲೋಚಿಸಿ ನಿರ್ಣಯಿಸತಕ್ಕುದು. ಆ ಮೂಲಕವಾಗಿ ಆಯಾ ಪ್ರಾಂತಗಳ ಮುಖ್ಯ ಪಟ್ಟಣಗಳಲ್ಲಿ ಮಾತ್ರವಲ್ಲ, ಹಳ್ಳಿ ಹಳ್ಳಿಗಳಲ್ಲಿಯೂ ಪುಸ್ತಕಾಲಯಗಳನ್ನು ನೆಲೆಗೊಳಿಸಬಹುದು. ಪಟ್ಟಣಗಳಿಂದಲೂ ಹೆಚ್ಚಾಗಿ ಹಳ್ಳಿಯವರಲ್ಲಿ ಸಾಹಿತ್ಯದ ಪ್ರಸಾರವಾದೀತು; ಏಕೆ? ಆಗುತ್ತದೆ. ನೋಡಿರಿ: ನಮ್ಮ ಸಾಹಿತ್ಯ ಪರಿಷತ್ತು ನೆಲೆವಡೆದು ಹದಿನೇಳು ವರ್ಷಗಳಾದರೂ, ಸಾಹಿತ್ಯ ಪರಿಷತ್ತೆಂದರೇನು? ಎಂದು ಪ್ರಶ್ನಿಸುವ ಕನ್ನಡಿಗರೀಗಲೂ ಹಳ್ಳಿಗಳಲ್ಲಿದ್ದಾರೆ. ಅವರಿಗೂ ಈಗಿನ ಸಾಹಿತ್ಯದ ಸವಿ ಗೊತ್ತಿದೆ; ಸಾಹಿತ್ಯ ಪರಿಷತ್ತಿನ ಹೊಲಬೇ ಗೊತ್ತಿಲ್ಲ. ನಮ್ಮ ಸಾಹಿತ್ಯವು ಸಾರ್ವಜನಿಕವಾಗಬೇಕಲ್ಲವೆ? ಅದರಿಂದ ನುರಿತ ಸಾಹಿತ್ಯ ಭಕ್ತರ ಸಂಘವೊಂದನ್ನು ಸ್ಥಾಪಿಸಿ ಆ ಮೂಲಕವಾಗಿ ಉದ್ಯೋಗಿಸಬೇಕೆಂದು ನನ್ನ ಸೂಚನೆ.

ಮಹನೀಯರೆ, ನಮ್ಮ ಸಂಸ್ಕೃತಿ ಉದಾತ್ತವಾಗಿ ಹಬ್ಬಬೇಕಾದರೆ ಸಾಹಿತ್ಯವು ಸಾರ್ವಜನಿಕವಾಗಬೇಕು; ಸಾರ್ವಜನಿಕವಾಗಬೇಕಾದರೆ ಭಿನ್ನ ಭಿನ್ನ ಪ್ರಾಂತಗಳಾಗಿ ತುಂಡಾದ "ಕರ್ಣಾಟಕ"ವು ಒಂದಾಗಬೇಕು; ಆ ಉದ್ದೇಶವು ಸಿದ್ಧಿಸದಿದ್ದರೆ ಈ ಎಲ್ಲಾ ಬಣ್ಣವನ್ನೂ ಮಸಿ ನುಂಗಿದಂತಾಗುವುದಲ್ಲವೆ? ಎಂಬ ಪ್ರಶ್ನೆಯೊದಗಬಹುದು. ಆದರೆ ಸಾಹಿತ್ಯ ಸುಧಾರಕರು ಹಿಂಜರಿಯಬೇಕಾಗಿಲ್ಲ; ನಮ್ಮ ಮುಂದಾಳುಗಳು ಆ ವಿಷಯದಲ್ಲಿ ಬಹಳ ಎಚ್ಚರಗೊಂಡಿರುತ್ತಾರೆ. ಈಗಿನ ರಾಜಕೀಯ ವಾತಾವರಣ ವನ್ನು ನೋಡಿದರೂ ಅಖಂಡ ಕರ್ಣಾಟಕವಾಗುವ ಲಕ್ಷಣವು ತೋರುತ್ತಿದೆ. ಆದರೆ ಆ ಫಲ ಲಾಭವನ್ನು ನಿರೀಕ್ಷಿಸಿಕೊಂಡೇ ಉದ್ಯೋಗಿಸುವುದು ನಮ್ಮ ಕರ್ತವ್ಯವಾಗ ಬೇಕೆಂದು ನಾನು ಹೇಳುವುದಿಲ್ಲ. ಅದೇನು ಒಂದು ವ್ಯಾಪಾರವೆ? ನಮಗೊದಗಿದ ಬೋಧನೆಯೆಂದರೆ "ಕರ್ಮಣ್ಯೇವಾಧಿಕಾರಸ್ತೇ" ಎಂಬುದು. ಅದರಿಂದ ಫಲದ ಗೊಡವೆಯೇ ನಮಗಿರಬಾರದು ಎಂದು ತಾತ್ಪರ್ಯವಲ್ಲ; ಸತ್ಕಾರ್ಯವನ್ನೆಸಗು ತ್ತಿರುವಾಗ ತಕ್ಕ ಸಮಯದಲ್ಲಿ ಫಲವು ತಾನಾಗಿ ಒದಗುತ್ತದೆಯೆಂದೇ ನನ್ನೆಣಿಕೆ.

ನಮ್ಮ ಕರ್ಣಾಟಕದ ಆದಿಯ ರಾಜವಂಶಜರಾದ ಕದಂಬಾದಿಗಳೆಲ್ಲರೂ ಕನ್ನಡ ದೇಳ್ಗೆಗಾಗಿ ಯತ್ನಿಸಿ ಕೃತಾರ್ಥರಾಗಿದ್ದಾರೆ. ಆದರೂ ಪ್ರಾಂತ ಭೇದದಿಂದಾಗಿ ಕನ್ನಡ ಸಾಹಿತ್ಯಕ್ಕೆ ಒದಗಿದ ನಾನಾತ್ವವನ್ನು ನಿವಾರಿಸಿ ಏಕರೂಪತೆಯನ್ನು ಒದಗಿಸಿದ ರಾಜ ನೆಂದರೆ ನೃಪತುಂಗನು. ಅವನು "ಸಭಾಸದ"ರಾದ ವಿದ್ವಾಂಸರ ಮೂಲಕವಾಗಿ ಆ ಪುಣ್ಯ ಕಾರ್ಯವನ್ನು ಮಾಡಿಸಿದನೆಂದು ತಿಳಿದುಬರುತ್ತದೆ. ಅದರಂತೆ ಈಗಿನ ಕನ್ನಡ ಸಾಹಿತ್ಯದ ಕವಲುಗಳನ್ನು ಹೋಗಲಾಡಿಸಿ ಅದನ್ನು ವೃದ್ಧಿಗೊಳಿಸುತ್ತಿರುವ ನಮ್ಮ ಸಾಹಿತ್ಯ ಪರಿಷತ್ಪೋಷಕರೂ ಕರ್ಣಾಟಕ ರಾಜರೂ ಆಗಿರುವ ಮೈಸೂರು ಶ್ರೀಮನ್ಮಹಾರಾಜ ಕೃಷ್ಣರಾಜ ಒಡೆಯರವರಿಗೆ ಆಯುರಾರೋಗ್ಯಾದಿಗಳು ಒದಗಲಿ ಎಂದು ಪರಮಾತ್ಮನನ್ನು ಪ್ರಾರ್ಥಿಸುತ್ತೇನೆ.

---

# ಕರ್ಣಾಟಕ ಸಾಹಿತ್ಯ ಪರಿಷತ್ತಿನ ವಾರ್ಷಿಕಾಧಿವೇಶನದ ಕಾರ್ಯ ವಿವರ

ಸನ್ ೧೯೩೧ನೆಯ ಇಸವಿ ಡಿಸೆಂಬರು ತಿಂಗಳು ೩೦ನೆಯ ತಾರೀಖು ಬುಧವಾರ ಪ್ರಾತಃಕಾಲ ೯ ಗಂಟೆಗೆ ಕಾರವಾರದಲ್ಲಿ, ಸಮ್ಮೇಳನದ ಅಧ್ಯಕ್ಷರ ಬಿಡಾರದಲ್ಲಿ, ಈ ಅಧಿವೇಶನವು ನಡೆಯಿತು.

## ಅಧೀಶನಕ್ಕೆ ಬಂದಿದ್ದವರು

ಮ|| ರಾ|| ಗಳಾದ:—೧. ಮುಳಿಯ ತಿಮ್ಮಪ್ಪಯ್ಯನವರು, ಮಂಗಳೂರು; ೨. ಕಡೆಂಗೋಡ್ಲು ಶಂಕರಭಟ್ಟರು, ಮಂಗಳೂರು; ೩. ಆನಂದರಾವ್ ಎಸ್. ಮುಂಡಕೂರ್, ಬಿ.ಎ., ಕಾರವಾರ; ೪. ರಂಗಪ್ಪ ಪೋತ್ದಾರ್, ಬಿ.ಎ., ಕಾರವಾರ; ೫. ರಾಘವೇಂದ್ರರಾವ್ ಸುಬ್ಬರಾವ್ ಮೂಡಕಟ್ಟೆ, ಬಿ.ಎ., ಕಾರವಾರ; ೬. ಎಚ್. ಚೆನ್ನಕೇಶವಯ್ಯಂಗಾರ್ಯರು, ಧಾರವಾಡ; ೭. ದತ್ತಾತ್ರೇಯ ರಾಮಚಂದ್ರ ಬೇಂದ್ರೆ, ಬಿ.ಎ., ಧಾರವಾಡ; ೮. ನಾರಾಯಣ ವೆಂಕಟೇಶ ಕುರಡಿ, ಧಾರವಾಡ; ೯. ಆಲೂರ ವೆಂಕಟರಾಯರು, ಬಿ.ಎ., ಎಲ್ಎಲ್.ಬಿ., ಧಾರವಾಡ; ೧೦. ಗುರುಸಿದ್ದಪ್ಪ ಮಹಾಲಿಂಗಪ್ಪ ಮಿರ್ಜಿ, ಬಿ.ಎ., ಎಲ್ಎಲ್.ಬಿ., ಹುಬ್ಬಳ್ಳಿ; ೧೧. ಬಿ. ಎಸ್. ಬೆಟಿಗೇರಿ, ಬೆಳಗಾಂವಿ; ೧೨. ಗರುಡ ಸದಾಶಿವರಾಯರು, ಹೈದರಾಬಾದು; ೧೩. ತಿರುಮಲೆ ತಾತಾಚಾರ್ಯ ಶರ್ಮರು, ಬೆಂಗಳೂರು; ೧೪. ಕಡಬದ ನಂಜುಂಡಶಾಸ್ತ್ರಿಗಳು, ಬೆಂಗಳೂರು; ೧೫. ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್ಎಲ್.ಬಿ., ಬೆಂಗಳೂರು; ೧೬. ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್., ಬೆಂಗಳೂರು; ೧೭. ನಿಟ್ಟೂರು ಶ್ರೀನಿವಾಸರಾಯರು, ಬಿ.ಎಸ್ಸಿ., ಬಿ.ಎಲ್., ಬೆಂಗಳೂರು; ೧೮. ವಿ. ಸೀತಾರಾಮಯ್ಯನವರು, ಎಂ.ಎ., ಬೆಂಗಳೂರು; ೧೯. ಬಿ. ಶಿವಮೂರ್ತಿ ಶಾಸ್ತ್ರಿಗಳು, ತುಮಕೂರು; ೨೦. ಎಚ್. ಹನುಮಂತರಾಯರು, ಕೋಲಾರ.

೧. ಈ ವಾರ್ಷಿಕಾಧಿವೇಶನಕ್ಕೆ ಸಮ್ಮೇಳನದ ಅಧ್ಯಕ್ಷರಾದ ಶ್ರೀಮಾನ್ ಮುಳಿಯ ತಿಮ್ಮಪ್ಪಯ್ಯನವರು ಅಧ್ಯಕ್ಷರಾಗಿರಬೇಕೆಂಬ ಸಲಹೆಯು ಸರ್ವಾನುಮತದಿಂದ ಅಂಗೀಕೃತವಾಯಿತು.

ವಾರ್ಷಿಕಾಧಿವೇಶನದ ಕಾರ್ಯಕ್ರಮವನ್ನು ಆರಂಭಿಸುವುದಕ್ಕೆ ಮೊದಲು ಪರಿಷತ್ತಿನ ಸದಸ್ಯರನ್ನಾಗಿ ಸೇರಿಸಿಕೊಳ್ಳಬೇಕೆಂದು ಬಂದಿದ್ದ ದರಖಾಸ್ತುಗಳನ್ನು ಪರಿಶೀಲಿಸಿ ಈ ಕೆಳಗೆ ಹೇಳಿರುವಂತೆ ಆ ಸಭ್ಯರನ್ನು ಸದಸ್ಯರನ್ನಾಗಿ ಸೇರಿಸಿಕೊಳ್ಳಲಾಯಿತು:—

ಮ|| ರಾ|| ಗಳಾದ

೧. ಆನಂದರಾವ್ ಶೇಷಗಿರಿ ಮುಂಡಕೂರ್, ಬಿ.ಎ., ಡೆಪ್ಯುಟಿ ಕಲೆಕ್ಟರ್, ಕಾರವಾರ — ಆಜೀವ ಸದಸ್ಯರು

೨. ಬಿ. ಶಿವಮೂರ್ತಿ ಶಾಸ್ತ್ರಿಗಳು, ಹುಲ್ಕುಂಟೆ ಮಠ, ತುಮಕೂರು — ,,

ಮ|| ರಾ|| ಗಳಾದ

೩. ನಾರಾಯಣ ವೆಂಕಟೇಶ ಕುರಡಿ,
ಟ್ರೈನಿಂಗ್ ಕಾಲೇಜು ಮಾಸ್ತರು, ಧಾರವಾಡ		ಆಜೀವ ಸದಸ್ಯರು

೪. ಗರುಡ ಸದಾಶಿವರಾಯರು,
ದತ್ತಾತ್ರೇಯ ನಾಟಕ ಮಂಡಲಿಯ ಯಜಮಾನರು, ಹೈದರಾಬಾದ್ ,,

೫. ಶಾಸ್ತ್ರಿ ಶಿವರಾಯರು, ಎಲ್‌ಎಲ್.ಬಿ., ಹೊನ್ನಾವರ ವಕೀಲರು		,,

೬. ಪಂಡಿತ ಮುಳಿಯ ತಿಮ್ಮಪ್ಪಯ್ಯನವರು,		ಸಾಮಾನ್ಯ ಸದಸ್ಯರು
ಕನ್ನಡ ಪಂಡಿತರು, ಸೆಂಟ್ ಅಲೋಯ್ಸಿಸ್ ಕಾಲೇಜು, ಮಂಗಳೂರು

೭. ಪಂಡಿತ ಕಡೆಂಗೋಡ್ಲು ಶಂಕರಭಟ್ಟರು,
ಸಂಪಾದಕರು, ರಾಷ್ಟ್ರಬಂಧು, ಮಂಗಳೂರು		,,

೨. ಕರ್ಣಾಟಕ ಸಾಹಿತ್ಯ ಪರಿಷತ್ತಿನ ಪ್ರಮೋದ ಸಂವತ್ಸರದ ವಾರ್ಷಿಕ ವರದಿಯನ್ನು ಅಂಗೀಕರಿಸಲಾಯಿತು.

೩. ಆಯ ವ್ಯಯ ಶೋಧಕರು ಪರಿಶೋಧಿಸಿ ವರದಿಯಲ್ಲಿ ಕೊಟ್ಟಿರುವ ಆಯ ವ್ಯಯದ ಪಟ್ಟಿಯನ್ನು ಓದಲಾಯಿತು.

ಪಟ್ಟಿಯಲ್ಲಿರುವ ವ್ಯಯ ಸಂಬಂಧವಾದ ಕೆಲವಂಶಗಳನ್ನು ವಿಶದಪಡಿಸಿದ ನಂತರ ಈ ಕೆಳಗೆ ಗುರುತಿಸಿರುವ ಅಂಶವನ್ನು ಆಯ ವ್ಯಯದ ಪಟ್ಟಿಯಲ್ಲಿ ವಿಶದೀಕರಿಸಬೇಕೆಂಬ ಶ್ರೀಮಾನ್ ಆಲೂರ ವೆಂಕಟರಾಯರ ಸೂಚನೆಯನ್ನು ಶ್ರೀಮಾನ್ ಗುರುಸಿದ್ದಪ್ಪ ಮಹಾಲಿಂಗಪ್ಪ ಮಿರ್ಜಿಯವರು ಅನುಮೋದಿಸಿದರು. ಇದಕ್ಕೆ ಸರ್ವರೂ ಒಪ್ಪಿಗೆಯನ್ನಿತ್ತರು:—

> ಇನ್ನು ಮುಂದೆ ಗ್ರಂಥಕರ್ತೃಗಳಿಗೆ ಕೊಡುವ ಬಹುಮಾನದ ವಿವರಣೆಯನ್ನೂ, ಪುಸ್ತಕ ಭಾಂಡಾಗಾರಕ್ಕೆ ಸೇರಿಸಿದ ಪುಸ್ತಕಗಳ ವಿವರಣೆಯನ್ನೂ ವರದಿಯಲ್ಲಿ ಕೊಡಬೇಕು. ಐದು ವರ್ಷಕ್ಕೊಮ್ಮೆ ಒಂದು ವಿಶೇಷ ವರದಿಯನ್ನು ಪ್ರಕಟಿಸಬೇಕು. ಹದಿನಾರು ವರ್ಷಗಳ ವರದಿಯೊಂದನ್ನು ಬರೆದು ೧೫,೦೦೦ ಪ್ರತಿಗಳನ್ನು ಮುದ್ರಣ ಮಾಡಿಸಿ, ಕರ್ಣಾಟಕದಲ್ಲೆಲ್ಲ ಹಂಚಬೇಕು. ಈ ಕೊನೆಯ ಕಾರ್ಯವನ್ನು ಶ್ರೀಮಾನ್ ತಿರುಮಲೆ ತಾತಾಚಾರ್ಯ ಶರ್ಮರವರಿಗೆ ಒಪ್ಪಿಸಬೇಕು.

ಈ ತೀರ್ಮಾನವಾದನಂತರ, ಪ್ರಮೋದ ಸಂವತ್ಸರದ ಆಯ ವ್ಯಯದ ಲೆಕ್ಕವು ಸರ್ವರಿಂದಲೂ ಅಂಗೀಕೃತವಾಯಿತು. ಈ ಲೆಕ್ಕವನ್ನು ಅತ್ಯಲ್ಪಾವಧಿಯಲ್ಲಿ ಪರಿಶೋಧನೆ ಮಾಡಿಕೊಟ್ಟುದಕ್ಕಾಗಿ ಮೈಸೂರು ಸರ್ಕಾರದ ಮಿಟಿಯೊರೊಲಾಜಿಕಲ್ ರಿಪೋರ್ಟರಾದ ಶ್ರೀಮಾನ್ ಸಿ. ಶೇಷಾಚಾರ್ಯರು, ಎಂ.ಎ. ಅವರಿಗೆ ಪರಿಷತ್ತಿನ ವಂದನೆಗಳನ್ನು ಸಮರ್ಪಿಸತಕ್ಕುದೆಂದು ತೀರ್ಮಾನಿಸಲಾಯಿತು.

೪. ಪ್ರಜೋತ್ಪತ್ತಿ ಸಂವತ್ಸರದ ಆಯ ವ್ಯಯದ ಅಂದಾಜು ಪಟ್ಟಿಯನ್ನು ಅಂಗೀಕರಿಸಲಾಯಿತು. (ಪಟ್ಟಿಯನ್ನು ಪ್ರತ್ಯೇಕವಾಗಿ ಕೊಟ್ಟಿದೆ.)

೫. ಕರ್ಣಾಟಕದ ನಾನಾ ಪ್ರಾಂತಗಳಲ್ಲಿರುವ ಸಾಹಿತ್ಯ ಸಂಘ ಮುಂತಾದುವು ಗಳನ್ನು ಪರಿಷತ್ತಿಗೆ ಅಂಗವಾಗಿ ಸೇರಿಸುವ (Affiliate) ವಿಚಾರದಲ್ಲಿ ಉಚಿತ ನಿಯಮ ಗಳನ್ನು ರಚಿಸಲು—

೧. ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್.
೨. ,, ಆಲೂರ ವೆಂಕಟರಾಯರು, ಬಿ.ಎ., ಎಲ್ಎಲ್.ಬಿ.
೩. ,, ಮಿರ್ಜಿ ಗುರುಸಿದ್ದಪ್ಪನವರು, ಬಿ.ಎ., ಎಲ್ಎಲ್.ಬಿ.
೪. ,, ಕಡೆಂಗೋಡ್ಲು ಶಂಕರಭಟ್ಟರು
೫. ,, ತಿರುಮಲೆ ತಾತಾಚಾರ್ಯ ಶರ್ಮರು
೬. ,, ಗಣೇಶ ರಾಮಯಾಜಿ
೭. ,, ನಾರಾಯಣ ವೆಂಕಟೇಶ ಕುರಡಿ
೮. ,, ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್ಎಲ್.ಬಿ. (ಕನ್ವೀನರು)

ಇವರುಗಳು ಸೇರಿರುವ ಸಮಿತಿಯು ಪ್ರವರ್ತಿಸಬೇಕೆಂದು ತೀರ್ಮಾನಿಸ ಲಾಯಿತು.

ಪರಿಷತ್ತಿನ ಅಂಗವಾಗಿ ಸೇರಲಿಚ್ಛೆಯುಳ್ಳ ಸಂಘಗಳು, ದರಖಾಸ್ತಿನ ಜೊತೆ ಯಲ್ಲಿ ಹತ್ತು ರೂಪಾಯಿಗಳ ಪ್ರವೇಶ ಧನವನ್ನೂ ಆರು ರೂಪಾಯಿಗಳ ವಾರ್ಷಿಕ ಚಂದಾವನ್ನೂ ಕೊಡಬೇಕೆಂದೂ, ಈಗ ಸಾಮಾನ್ಯ ಸದಸ್ಯರಿಗಿರುವ ಹಕ್ಕು ಬಾಧ್ಯತೆ ಗಳೇ ಅಂತಹ ಸಂಘಗಳಿಗೂ ಇರತಕ್ಕುದೆಂದೂ ತೀರ್ಮಾನಿಸಲಾಯಿತು.

೬. ಯಾವ ಯಾವ ಜಿಲ್ಲೆಗಳಿಂದ ಎಷ್ಟೆಷ್ಟು ಮಂದಿ ಪ್ರತಿನಿಧಿಗಳು (Delegates) ಸಮ್ಮೇಳನಕ್ಕೆ ಬಂದಿದ್ದರೆಂಬ ಸಂಖ್ಯೆಯನ್ನೂ, ಇತರ ಅಂಶಗಳನ್ನೂ ವಾರ್ಷಿಕ ವರದಿ ಯಲ್ಲಿ ಕೊಡಬೇಕೆಂದು ನಿರ್ಧರಿಸಲಾಯಿತು.

೭. ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರ ಚುನಾವಣೆಯು 'ಬ್ಯಾಲೆಟ್' ಮೂಲಕ ನಡೆಯಿತು.

ಶ್ರೀಮಾನ್ ಸಿಟ್ಬೂರು ಶ್ರೀನಿವಾಸರಾಯರು, ಬಿ.ಎಸ್‌ಸಿ., ಬಿ.ಎಲ್. ಅವರನ್ನೂ, ಶ್ರೀಮಾನ್ ದತ್ತಾತ್ರೇಯ ರಾಮಚಂದ್ರ ಬೇಂದ್ರೆಯವರನ್ನೂ ಮತಗಳ (Votes) ಎಣಿಕೆಗೆ ನಿಯಮಿಸಲಾಯಿತು. ಇವರು ಮತಗಳನ್ನೆಣಿಸಿ ಕೊಟ್ಟ ಪಟ್ಟಿಯಿಂದ, ಈ ಕೆಳಗೆ ಕಂಡ ಸದಸ್ಯರು ಚುನಾವಣೆಯಾದರು :—

**ಮೈಸೂರು ಪ್ರಾಂತಕ್ಕೆ—**

೧. ಶ್ರೀಮಾನ್ ಎ ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ. (ಬೆಂಗಳೂರು)
೨. ,, ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ. (ಮೈಸೂರು)
೩. ,, ಮಾಸ್ತಿ ವೆಂಕಟೇಶ ಐಯಂಗಾರ್ಯರು, ಎಂ.ಎ. (ಬೆಂಗಳೂರು)
೪. ,, ಎಂ. ಆರ್. ಶ್ರೀನಿವಾಸಮೂರ್ತಿಗಳು, ಬಿ.ಎ. (ಬೆಂಗಳೂರು)
೫. ,, ಕೋ. ಸಂಪದ್ಗಿರಿರಾಯರು, ಎಂ.ಎ. (ಬೆಂಗಳೂರು)
೬. ,, ತಿರುಮಲೆ ತಾತಾಚಾರ್ಯ ಶರ್ಮರು (ಬೆಂಗಳೂರು)

೭. ಶ್ರೀಮಾನ್ ನಿಟ್ಟೂರು ಶ್ರೀನಿವಾಸರಾಯರು, ಬಿ.ಎಸ್‌ಸಿ., ಬಿ.ಎಲ್. (ಬೆಂಗಳೂರು)
೮. ,, ವಿ. ಸೀತಾರಾಮಯ್ಯನವರು, ಎಂ.ಎ. (ಬೆಂಗಳೂರು)
೯. ,, ಟಿ. ಅಪ್ಪೂರಾಯರು, ಬಿ.ಎ., ಬಿ.ಎಲ್. (ಬೆಂಗಳೂರು)
೧೦. ,, ಕೆ. ಕೃಷ್ಣಯ್ಯಂಗಾರ್ಯರು, ಬಿ.ಎ. (ಬೆಂಗಳೂರು)
೧೧. ,, ಬಿ. ಶಿವಮೂರ್ತಿ ಶಾಸ್ತ್ರಿಗಳು (ತುಮಕೂರು)
೧೨. ,, ಎನ್. ವೆಂಕಟೇಶಯ್ಯಂಗಾರ್ಯರು, ಬಿ.ಎ. (ಬೆಂಗಳೂರು)

**ಮುಂಬಯಿ ಪ್ರಾಂತಕ್ಕೆ—**

೧. ಶ್ರೀಮಾನ್ ಗುರುಸಿದ್ದಪ್ಪ ಮಹಾಲಿಂಗಪ್ಪ ಮಿರ್ಜಿ, ಬಿ.ಎ., ಎಲ್‌ಎಲ್.ಬಿ. (ಹುಬ್ಬಳ್ಳಿ)
೨. ,, ಎಚ್. ಚೆನ್ನಕೇಶವಯ್ಯಂಗಾರ್ಯರು (ಧಾರವಾಡ)
೩. ,, ದತ್ತಾತ್ರೇಯ ರಾಮಚಂದ್ರ ಬೇಂದ್ರೆ, ಬಿ.ಎ. (ಧಾರವಾಡ)
೪. ,, ನಾರಾಯಣ ವೆಂಕಟೇಶ ಕುರಡಿ (ಧಾರವಾಡ)
೫. ,, ಭೀಮಾಜಿ ಬೆಟಿಗೇರಿ (ಬೆಳಗಾಂವಿ)
೬. ,, ರಂಗಪ್ಪ ಪೋತ್ದಾರ್, ಬಿ.ಎ. (ಕಾರವಾರ)
೭. ,, ರಾಘವೇಂದ್ರರಾವ್ ಸುಬ್ಬರಾವ್ ಮೂಡಕಟ್ಟಿ, ಬಿ.ಎ. (ಕಾರವಾರ)
೮. ,, ಆಲೂರ ವೆಂಕಟರಾಯರು, ಬಿ.ಎ., ಎಲ್‌ಎಲ್.ಬಿ. (ಧಾರವಾಡ)
೯. ,, ರಾವ್ ಸಾಹೆಬ್ ಪಿ. ಜಿ. ಹಳಕಟ್ಟಿ, ಬಿ.ಎ., ಎಲ್‌ಎಲ್.ಬಿ. (ಬಿಜಾಪುರ)

**ಹೈದರಾಬಾದು ಪ್ರಾಂತಕ್ಕೆ—**

೧. ಶ್ರೀಮಾನ್ ಗರುಡ ಸದಾಶಿವರಾಯರು (ಹೈದರಾಬಾದು)
೨. ,, ನಾರಾಯಣಶಾಸ್ತ್ರೀ ಭಾವೂಶಾಸ್ತ್ರೀ (ಕೊಪ್ಪಳ)

**ಮದರಾಸು ಪ್ರಾಂತಕ್ಕೆ—**

೧. ಶ್ರೀಮಾನ್ ಬಿ. ರಾಮರಾಯರು, ಎಂ.ಎ., ಎಲ್‌ಎಲ್.ಬಿ. (ಮದರಾಸು)
೨. ,, ಎಚ್. ತಿಮ್ಮಕೃಷ್ಣರಾಯರು, ಬಿ.ಎ., ಬಿ.ಎಲ್. (ಬಳ್ಳಾರಿ)
೩. ,, ಎನ್. ರಾಜಗೋಪಾಲಕೃಷ್ಣರಾಯರು (ಉಡಿಪಿ)

ಕೊಡಗು ಮತ್ತು ಉತ್ತರ ಕರ್ಣಾಟಕ ಸಂಸ್ಥಾನಗಳ ಪ್ರತಿನಿಧಿಗಳು ಯಾರೂ ಬರಲಿಲ್ಲವಾದುದರಿಂದ ಹಿಂದಣ ವರ್ಷದ ಸದಸ್ಯರೇ ಈ ವರ್ಷವೂ ಸದಸ್ಯರಾಗಿರತಕ್ಕು ದೆಂದು ತೀರ್ಮಾನಿಸಲಾಯಿತು.

**ಉತ್ತರ ಕರ್ಣಾಟಕ ಸಂಸ್ಥಾನಗಳಿಗೆ—**

೧. ಶ್ರೀಮಾನ್ ತಮ್ಮಪ್ಪ ಸತ್ಯಪ್ಪ ಚಿಕ್ಕೋಡಿ (ಬನಹಟ್ಟಿ)
೨. ,, ಕೆ. ಜಿ. ಕುಂದಣಗಾರ, ಎಂ.ಎ. (ಕೊಲ್ಹಾಪುರ)

**ಕೊಡಗು ಪ್ರಾಂತಕ್ಕೆ—**

೧. ಶ್ರೀಮಾನ್ ಎನ್. ಆರ್. ಸುಬ್ಬಣ್ಣಯ್ಯನವರು (ನಿಡತ)

೮. ಮ|| ರಾ|| ಆಲೂರ ವೆಂಕಟರಾಯರ ಸೂಚನೆಗಳು :—

೧. ಪರಿಷತ್ತಿನ ೯ನೆಯ ನಿಬಂಧನೆಯಲ್ಲಿ, ಇನ್ನೂ ಒಬ್ಬ ಕಾರ್ಯದರ್ಶಿಯು ಇರಬೇಕೆಂದೂ, ಅವರು ಬೆಂಗಳೂರಿನವರಾಗಿರದೆ ಹೊರಗಿನವರಾಗಿದ್ದು, ಮೇಲಿಂದ ಮೇಲೆ ಕರ್ಣಾಟಕವನ್ನು

ಸುತ್ತಾಡಿ, ಭಾಷಾ ಜಾಗೃತಿಯನ್ನು ಮಾಡುವುದಕ್ಕೆ ಬಿಡುವುಳ್ಳವರಾಗಿ ಆ ಕಾರ್ಯವನ್ನು ಮಾಡಬೇಕೆಂದೂ ತಿದ್ದುಪಡಿಯಾಗಬೇಕು.

೨. ಪರಿಷತ್ತಿನ ಕಾರ್ಯ ನಿರ್ವಾಹಕ ಮಂಡಲದ ಎರಡು ಮೂರು ಸಭೆಗಳಾದರೂ ಬೆಂಗಳೂರು ಹೊರಗಿನ ಬೇರೆ ಬೇರೆ ಸ್ಥಳಗಳಲ್ಲಿ ಕೂಡಬೇಕು.

೩. ಸಾಹಿತ್ಯ ಪರಿಷತ್ತು ಕರ್ಣಾಟಕದ ಬೇರೆ ಬೇರೆ ಸ್ಥಳಗಳಲ್ಲಿ ತನ್ನ ಶಾಖೆಗಳನ್ನು ಸ್ಥಾಪಿಸಲಿಕ್ಕೆ ಪ್ರಾರಂಭಿಸಬೇಕು; ಮತ್ತು ಆಯಾ ಜಿಲ್ಲೆ, ಅಥವಾ ಶಾಖೆಗಳ ಮುಖಾಂತರವಾಗಿ ಕೂಡಿದ ಹಣದಲ್ಲಿ ಅರ್ಧ ಹಣವನ್ನು ಆ ಜಿಲ್ಲೆಯವರು, ಅಥವಾ ಆ ಶಾಖೆಯವರು ಇಟ್ಟುಕೊಂಡು, ಮಿಕ್ಕದ್ದನ್ನು ಮುಖ್ಯ ಕಚೇರಿಗೆ ಸಲ್ಲಿಸಬೇಕು. ಈ ಸಂಬಂಧದಿಂದ ಮಿಕ್ಕ ಉಪನಿಯಮ ಗಳನ್ನು ಮಾಡುವ ಅಧಿಕಾರವನ್ನು ಕಾರ್ಯ ನಿರ್ವಾಹಕ ಮಂಡಲಕ್ಕೆ ಕೊಟ್ಟಿದೆ.

೪. ಧಾರ್ವಾಡದಲ್ಲಿ ಕೂಡಿದ ಕಾರ್ಯ ನಿರ್ವಾಹಕ ಮಂಡಲದಲ್ಲಿ ಗೊತ್ತಾದ ಪ್ರಕಾರ ಶ್ರೀ. ಆಲೂರ ವೆಂಕಟರಾಯರ ಕಡೆಗೆ ಕೊಟ್ಟಿರುವ ಒಂದು ನೂರು ರೂಪಾಯಿಗಳು ಇನ್ನೂ ವೆಚ್ಚ ವಾಗಿಲ್ಲ; ಆದರೆ ಅವರು ಬರುವ ಮೂರು ನಾಲ್ಕು ತಿಂಗಳುಗಳಲ್ಲಿ ಅದನ್ನು ಪ್ರಚಾರ ಕಾರ್ಯಕ್ಕಾಗಿ ವಿನಿಯೋಗ ಮಾಡುವ ವ್ಯವಸ್ಥೆಯನ್ನು ಮಾಡಿರುವುದರಿಂದ, ಅದರಿಂದ ಪರಿಷತ್ತಿನ ಉದ್ದೇಶಕ್ಕೆ ಸಹಾಯವಾಗುತ್ತೆಂದು ಈ ಕಾರ್ಯ ನಿರ್ವಾಹಕ ಮಂಡಲಕ್ಕೆ ಕಂಡುಬಂದರೆ, ಅವರು ಪುನಃ ಒಂದು ನೂರು ರೂಪಾಯಿಗಳನ್ನು ಈ ಸಂಬಂಧವಾಗಿ ಮುಂಜೂರು ಮಾಡಬೇಕು. ಮುಂದಿನ ಮೇ ತಿಂಗಳಲ್ಲಿ ಪರಿಷತ್ತಿನ ಕಾರ್ಯ ನಿರ್ವಾಹಕ ಸಭಾಸದರು ಕರ್ಣಾಟಕವನ್ನು ಸುತ್ತಿಬರುವ ಜಾಗೃತಿ ಮಾಡಬೇಕು.

೫. ೧೯೩೬ನೆಯ ಇಸವಿಯಲ್ಲಿ ಕರ್ಣಾಟಕದ ಕೊನೆಯ ಬಲಾಢ್ಯವಾದ ಮತ್ತು ಕನ್ನಡಿಗರೆಲ್ಲರಿಗೂ ಚಿರಕಾಲವಾಗಿ ಸ್ಫೂರ್ತಿಕೊಡುವಂಥ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ದಿವಸ ಇಡೀ ಕರ್ಣಾಟಕವು ವಿಜಯನಗರದಲ್ಲಿ ಒಂದುಗೂಡಿ ಕರ್ಣಾಟಕದ ಗತ ವೈಭವಕ್ಕೆ ತಕ್ಕಂತೆ ದೊಡ್ಡ ಪ್ರಮಾಣದಿಂದ ಷಟ್‌ಶತತಮ ಸಾಂವತ್ಸರಿಕೋತ್ಸವವನ್ನು ಜರುಗಿಸಬೇಕೆಂದೂ, ಅದಕ್ಕಾಗಿ ಕನಿಷ್ಠ ಪಕ್ಷ ಒಂದು ಲಕ್ಷ ರೂಪಾಯಿಗಳ ನಿಧಿಯನ್ನು ಕೂಡಿಸಬೇಕೆಂದೂ ಶ್ರೀ. ಆಲೂರ ವೆಂಕಟರಾಯರು ತೆಗೆದಿರುವ ಯೋಚನೆಗೆ ಈ ಸಭೆಯ ಸಂಪೂರ್ಣ ಸಹಾನುಭೂತಿಯಿರುತ್ತದೆ.

೩ ಮತ್ತು ೫ನೆಯ ಸೂಚನೆಗಳು ಸಮ್ಮೇಳನದಲ್ಲಿ ಚರ್ಚೆ ನಡೆದು ನಿರ್ಣಯ ಗಳಾದುವು. ೧, ೨ ಮತ್ತು ೪ನೆಯ ಸೂಚನೆಗಳನ್ನು ಚರ್ಚೆ ಮಾಡುವ ಆವಶ್ಯಕ ವಿಲ್ಲವೆಂದು ಸೂಚಕರು ಹಿಂದಕ್ಕೆ ತೆಗೆದುಕೊಂಡರು.

೯. ಹೋದ ವರ್ಷ ಅತ್ಯಂತ ಶ್ರಮಪಟ್ಟು ಪರಿಷತ್ತಿನ ಕಾರ್ಯಗಳನ್ನು ನಡೆ ಯಿಸಿದ ಗೌರವ ಕಾರ್ಯದರ್ಶಿಯವರಾದ ಶ್ರೀ. ಸಿ. ಕೆ. ವೆಂಕಟರಾಮಯ್ಯನವರಿಗೂ ಗೌರವ ಕೋಶಾಧ್ಯಕ್ಷರಾದ ಶ್ರೀ. ಬಿ. ವೆಂಕಟನಾರಾಯಣಪ್ಪನವರಿಗೂ ಈ ಸಭೆಯು ವಂದನೆಗಳನ್ನರ್ಪಿಸುತ್ತದೆ.

**ಸಿ. ಕೆ. ವೆಂಕಟರಾಮಯ್ಯ,**
ಗೌರವ ಕಾರ್ಯದರ್ಶಿ.

**ಮುಳಿಯ ತಿಮ್ಮಪ್ಪಯ್ಯ,**
ಸಭಾಧ್ಯಕ್ಷ.

# ಪ್ರಜೋತ್ಪತ್ತಿ ಸಂವತ್ಸರದ ಆಯ ವ್ಯಯದ ಅಂದಾಜು ಪಟ್ಟಿ

## ಆಯ

| | | ರೂ. ಆ. ಪೈ |
|---|---|---|
| ೧ | ವರ್ಷಾರಂಭದ ಶಿಲ್ಕು .. .. | ೧೭,೦೨೨—೫—೨ |
| ೨ | ತಿಂಗಳುಗಟ್ಟಲೆ ಮೈಸೂರು ಸರ್ಕಾರದಿಂದ ಬರುವ ಸಹಾಯ ದ್ರವ್ಯ .. .. | ೧,೮೦೦—೦—೦ |
| ೩ | ಚಂದಾ ಮೊಬಲಗು (ಸದಸ್ಯರಿಂದ) ಸುಮಾರು .. | ೨೦೦—೦—೦ |
| ೪ | ಪರಿಷತ್ಪತ್ರಿಕೆಯ ಚಂದಾ (ವರ್ಗಣಿದಾರರಿಂದ) (ಸುಮಾರು) .. .. | ೧೬೦—೦—೦ |
| ೫ | ಸದಸ್ಯರುಗಳಿಂದ ಬರಬೇಕಾದ ಬಾಕಿ ಚಂದಾ ಮೊಬಲಗಿನ ಪೈಕಿ ವಸೂಲಾಗಬಹುದಾದುದು (ಸುಮಾರು) .. | ೨೦೦—೦—೦ |
| ೬ | ಪುಸ್ತಕಗಳ ಮಾರಾಟದಿಂದ ,, .. | ೧೦೦—೦—೦ |
| ೭ | ಡಿಪಾಜಟ್ಟುಗಳ ಮೇಲೆ ಬರಬಹುದಾದ ಬಡ್ಡಿ ,, .. | ೩೫೦—೦—೦ |
| ೮ | ಪಂಪ ಭಾರತಕ್ಕಾಗಿ ಕೊಟ್ಟಿರುವ ಡಿಪಾಜಿಟ್ಟು ಹಣ .. | ೧೦೦—೦—೦ |
| ೯ | ಪರಿಷತ್ತಿನಲ್ಲಿರುವ ಕಾಗದದ ಬೆಲೆ (ಸುಮಾರು) .. | ೧೦—೦—೦ |
| ೧೦ | ಪರಿಷನ್ಮಂದಿರಕ್ಕಾಗಿ ಶ್ರೀಮನ್ಮಹಾರಾಜರವರಿಂದ ಬರುವ ಸಹಾಯ ದ್ರವ್ಯ .. | ೫,೦೦೦—೦—೦ |
| | ಒಟ್ಟು .. | ೨೪,೯೪೨—೫—೨ |

## ವ್ಯಯ

| | | ರೂ. ಆ. ಪೈ |
|---|---|---|
| ೧ | ಸಿಬ್ಬಂದಿಯ ವೆಚ್ಚ<br>ಸಹಾಯಕ ಕಾರ್ಯದರ್ಶಿ, ತಿಂಗಳಿಗೆ ೫೦ ರೂ. ಮೇರೆ<br>ಪಂಡಿತರು ,, ೨೫ ,,<br>ಗುಮಾಸ್ತೆ ,, ೨೫ ,,<br>ಜವಾನ ,, ೧೨ ,, | ೧,೩೪೪—೦—೦ |
| ೨ | ಮನೆಯ ಬಾಡಿಗೆ (ತಿಂಗಳಿಗೆ ೩೦ ರೂ. ಮೇರೆ) | ೩೬೦—೦—೦ |
| ೩ | ದೀಪದ ವೆಚ್ಚ .. .. | ೪೦—೦—೦ |
| ೪ | ಬರೆವಣಿಗೆಯ ಸಾಮುಗ್ರಿ .. .. | ೧೦೦—೦—೦ |
| ೫ | ಅಂಚೆಯ ಹಾಸಲು .. .. | ೨೦೦—೦—೦ |
| ೬ | ಮುದ್ರಣದ ವೆಚ್ಚ—ಪಂಪ ಭಾರತದ ಕಥೆ ಮತ್ತು ನಿಘಂಟು, ಪರಿಷತ್ಪತ್ರಿಕೆ, ಸೋಮೇಶ್ವರ ಶತಕ. ತೊರವೆ ರಾಮಾಯಣ, ಇತ್ಯಾದಿಗಳಿಗೆ | ೩,೫೦೦—೦—೦ |
| ೭ | ಪುಸ್ತಕ ಭಾಂಡಾಗಾರ .. .. | ೪೫೦—೦—೦ |
| ೮ | ವಾಚನ ಮಂದಿರ .. .. | ೧೫೦—೦—೦ |
| ೯ | ಪಂಪ ಭಾರತದ ಕಾರ್ಯ .. .. | ೪೫—೦—೦ |
| ೧೦ | ಪ್ರಚಾರ ಕಾರ್ಯ .. .. | ೨೫೦—೦—೦ |
| ೧೧ | ಸಮ್ಮೇಳನದ ವೆಚ್ಚ .. .. | ೨೫೦—೦—೦ |
| ೧೨ | ವಿಜ್ಞಾನ ಸಂಬಂಧವಾದ ಪುಸ್ತಕಗಳ ಪ್ರಕಟನೆ .. | ೨,೦೦೦—೦—೦ |
| ೧೩ | ಪರಿಷತ್ತಿನ ಕಟ್ಟಡ .. .. | ೧೬,೦೦೦—೦—೦ |
| ೧೪ | ಇತರ ಚಿಲ್ಲರೆ ವೆಚ್ಚಗಳು .. .. | ೨೫೩—೫—೨ |
| | ಒಟ್ಟು .. | ೨೪,೯೪೨—೫—೨ |

**ಸಿ. ಕೆ. ವೆಂಕಟರಾಮಯ್ಯ,** ಗೌರವ ಕಾರ್ಯದರ್ಶಿ.



# ಕನ್ನಡವೂ ಉತ್ತರ ಕನ್ನಡವೂ*

ಉತ್ತರ ಕನ್ನಡವು ಅಚ್ಚಗನ್ನಡ ನಾಡು. ಈ ನಾಡು ಪ್ರಾಚೀನ ಕಾಲದಲ್ಲಿ ನಾಗರಖಂಡಕ್ಕೆ ಸೇರಿದ್ದಿತು. ನಾಗರಖಂಡವು ಅಚ್ಚಗನ್ನಡ ನಾಡೆಂಬುದನ್ನೂ ಅಲ್ಲಿ ಕಾದಂಬರಿಯ ನಾಗವರ್ಮನಂತಹ ಅನೇಕ ಜನ ಉದ್ದಾಮ ಕವಿಗಳೂ ಕನ್ನಡದ ಅಭಿಮಾನವುಳ್ಳ ಕನ್ನಡ ರಾಜಾಧಿರಾಜರೂ ಆಗಿಹೋದರೆಂಬುದನ್ನೂ ನಾನು ಬೇರೆ ಹೇಳಬೇಕಾಗಿಲ್ಲ. ಈಚೆಗೆ ಕರ್ಣಾಟಕದ ಪಶ್ಚಿಮ ದಂಡೆಯುದ್ದಕ್ಕೂ ಹಬ್ಬಿರುವ ಕಿರಿಯಗಲದ ಬೈಲೂ, ಸಹ್ಯಾದ್ರಿಯ ಪಶ್ಚಿಮ ಭಾಗವೂ ಅದರ ಕಾಲುಬೆಟ್ಟಗಳೂ ಹಬ್ಬಿರುವ ಪ್ರದೇಶವೂ ಸೇರಿ ಕನ್ನಡ ಜಿಲ್ಹೆಯಾಯಿತು. ಇತ್ತೀಚೆಗೆ ಈ ಕನ್ನಡ ಜಿಲ್ಹೆಯು ಎರಡು ಹೋಳಾಗಿ, ಒಂದು ಭಾಗವು ಮದ್ರಾಸು ಸರಕಾರಕ್ಕೂ ಇನ್ನೊಂದು ಮುಂಬಯಿ ಸರಕಾರಕ್ಕೂ ಸೇರಿಹೋಯಿತು. ಮೊದಲು ಜಿಲ್ಹೆಯ ಸ್ಥಳವು ಹೊನ್ನಾವರ (ಪ್ರಾಚೀನಕಾಲದ ಹನುಮವರ) ವಾಗಿದ್ದುದು ಈಗ ಕಾರವಾರಕ್ಕೆ ಸ್ಥಾನಾಂತರ ಹೊಂದಿದೆ. ಅಂದಿನಿಂದ ನಾವು ಬಡಗ ಕನ್ನಡಿಗರಾಗಿ ತುಳುವ ಕನ್ನಡಿಗರಿಂದ ಬೇರೆಯಾದೆವು, ದೂರವಾದೆವು. ಇಂದಿಗೆ ಒಟ್ಟು ನಾಲ್ಕು ಲಕ್ಷ ಜನ ವಸತಿಯಿರುವ ಈ ಉತ್ತರ ಕನ್ನಡ ಜಿಲ್ಹೆಯಲ್ಲಿ ಈಗ ಎರಡೂವರೆ ಲಕ್ಷದಷ್ಟು ಜನರು ಮಾತ್ರ ಅಚ್ಚಗನ್ನಡಿಗರಾಗಿಯೇ ಉಳಿದಿದ್ದಾರೆ. ಅವರಲ್ಲಿ ಬೇರೆ ಬೇರೆ ಜಾತಿಯ ಜನರಿರುವರು. ಬನವಾಸಿಯ ಕದಂಬ ಚಕ್ರವರ್ತಿಗಳ ಕಾಲದಲ್ಲಿ ಹವ್ಯಕರು ಈ ನಾಡಿಗೆ ಬಂದವರು. ಹಾಲಕ್ಕಿಯ (ಹಾಲಿಕ) ಗೌಡರು, ಹಳೆಯ ಪೈಕದವರು, ನಾಡವರು, ಹಳ್ಳಿಯ(ವ)ರು, ಗಾ (ಗ್ರಾ)ಮನಾಯಕರು, ಕೆಲಸಿಗಳು, ಕಂಬಾರರು, ಕುಂಬಾರರು, ಮಡಿವ(ವಾ)ಳರು, ಪಟ್ಟ(ಟ) ಸಾಲಿಗರು ಮೊದಲಾದವರು ಇಲ್ಲಿಯ ನಿವಾಸಿಗಳು; ಇವರೆಲ್ಲರೂ ಅಚ್ಚಗನ್ನಡಿಗರು. ಒಂದು ಕಾಲಕ್ಕೆ ಉತ್ತರ ಕನ್ನಡವು ಜೈನರ ನೆಲೆವೀಡಾಗಿದ್ದಿತೆಂಬುದಕ್ಕೆ ಈಗಲೂ ಊರೂರಿಗಿರುವ ಜೈನ ಬಸತಿಗಳೇ ಸಾಕ್ಷಿ. ಜೈನರು ಕನ್ನಡಿಗರೆಂಬುದನ್ನೂ ಅವರಿಂದ ಕನ್ನಡ ಸಾಹಿತ್ಯಕ್ಕಾದ ಉಪಕಾರ ವೆಷ್ಟೆಂಬುದನ್ನೂ ನಾನು ಹೇಳಬೇಕಾಗಿಲ್ಲ.

ಕದಂಬರು ಉತ್ತರ ಕನ್ನಡದ ಬಹು ಭಾಗವನ್ನು ಆಳಿದ ಕನ್ನಡ ಚಕ್ರವರ್ತಿಗಳು. ಅವರ ಕಾಲದಲ್ಲಿ ಇಲ್ಲಿ ಕನ್ನಡವು ಉಚ್ಚ್ರಾಯಾವಸ್ಥೆಯಲ್ಲಿದ್ದಿತೆಂಬುದು ಹೇಳಬೇಕಾದ ಹೊಸ ಮಾತಲ್ಲ. ಆ ಕಾಲದಲ್ಲಿ ನಮ್ಮ ಈ ಭಾಗದಲ್ಲಿ ಹುಟ್ಟಿದ ಕನ್ನಡ ಕವಿಗಳ ಮತ್ತು ಕಾವ್ಯಗಳ ಸ್ಪಷ್ಟವಾದ ಉಲ್ಲೇಖವು ನಮಗೆ ತಿಳಿಯದಿರುವುದು ಬಹು ದುಃಖದ ಸಂಗತಿ. ಕನ್ನಡದಲ್ಲಿ ದೊರೆತಿರುವ ಪುರಾತನ ಶಾಸನವು ಈ ಕದಂಬ ಚಕ್ರವರ್ತಿಗಳ ಕಾಲದ್ದು; ೪–೫ನೆಯ ಶತಮಾನಗಳಲ್ಲಿ ಹುಟ್ಟಿದುದು. ಹನ್ನೊಂದ

* ಕಾರವಾರದಲ್ಲಿ ನೆರೆದ ೧೭ನೆಯ ಕರ್ಣಾಟಕ ಸಾಹಿತ್ಯ ಸಮ್ಮೇಲನಕ್ಕಾಗಿ ಬರೆದುದು.

ನೆಯ ಶತಮಾನದ ಕವಿ ಶ್ರೇಷ್ಠನಾದ ಕಾದಂಬರಿಯ ನಾಗವರ್ಮನು ಸಾಗರಖಂಡ ದವನು; ಈ ನಮ್ಮ ಕನ್ನಡ ಜಿಲ್ಲೆಗೆ ಸೇರಿದವನು. ಕಾದಂಬರಿಯ ನಾಗವರ್ಮನೆಂದು ಬೆಟ್ಟಿಟ್ಟು ಹೇಳಲು ಕಾರಣವಿದೆ. ನಾಗವರ್ಮನು ಒಬ್ಬನೇ, ಇಬ್ಬರೇ, ಮೂವರೇ ಎಂಬ ವಾದವೊಂದು ಇತ್ತೀಚೆಗೆ ಉಪಸ್ಥಿತವಾಗಿದೆ. ಕಾದಂಬರಿ, ಛಂದೋಂಬುಧಿ, ಕಾವ್ಯಾವಲೋಕನ, ವಸ್ತುಕೋಶ, ಭಾಷಾಭೂಷಣಗಳೆಲ್ಲವನ್ನೂ ಬರೆದವನು ಒಬ್ಬನೇ ನಾಗವರ್ಮನೆಂದು ಒಬ್ಬರು ಹೇಳುವರು. ಕವಿಚರಿತೆಕಾರರೂ ಕನ್ನಡದ ಆಚಾರ್ಯರೆನಿಸಿಕೊಂಡವರೂ ಆದ ಶ್ರೀ ಆರ್. ನರಸಿಂಹಾಚಾರ್ಯರವರು ಇಬ್ಬರು ನಾಗವರ್ಮರಿರುವರೆಂದು ಪ್ರತಿಪಾದಿಸಿರುವರು. ಕಾದಂಬರಿಯನ್ನೂ ಛಂದೋಂ ಬುಧಿಯನ್ನೂ ಒಬ್ಬನೇ ಬರೆದನೆನ್ನಲು ನನ್ನ ಮನಸ್ಸೊಪ್ಪುವುದಿಲ್ಲ. ಈ ವಿಷಯವನ್ನು ಹಿಂದೆ ಗೋಕರ್ಣದ ಸಾಹಿತ್ಯ ಸಮ್ಮೇಲನದಲ್ಲಿ ನನಗಿಂತ ಅಭಿಜ್ಞರಾದ ಶ್ರೀ ಚೆನ್ನಕೇಶವ ಅಯ್ಯಂಗಾರ್ಯರವರು ಕೂಲಂಕಷವಾಗಿ ಚರ್ಚಿಸಿರುವುದರಿಂದ ನಾನು ಹೆಚ್ಚು ಹೇಳ ಬೇಕಾಗಿಲ್ಲ. ಕಾದಂಬರಿಯ ನಾಗವರ್ಮನು ನಮ್ಮ ಉತ್ತರ ಕನ್ನಡ ಜಿಲ್ಹೆಯಲ್ಲಿ ಗಂಗಾವಳಿಯ ತೀರದಲ್ಲಿ ಇದ್ದವನೆಂಬ ವಿಚಾರದಲ್ಲಿ ಮಾತ್ರ ಇಲ್ಲಿ ನಾಲ್ಕು ಮಾತು ಗಳನ್ನು ಹೇಳಬೇಕಾಗಿದೆ.—

ಈ ನಾಗವರ್ಮನ ಪೋಷಕನು ಬನವಾಸಿಯ (ಸಾಗರಖಂಡದ) ರಾಜನು; ಆತನ ಹೆಸರು ಚಂದ್ರ ಎಂಬುದು ಕಾದಂಬರಿಯಿಂದಲೇ ಸಿದ್ಧವಾಗುವುದು. ಕಾದಂ ಬರಿಯ ನಾಂದಿಯ ಪದ್ಯಗಳಲ್ಲಿ ಒಂದಾದ

> ಶ್ರೀಮನ್ನಾಗೇಂದ್ರ ಭೋಗಸ್ಫುರದರುಣ ಮಣಿ ದ್ಯೋತಿ ಸಂಧ್ಯಾ ನಿಬದ್ಧ[1]
> ಪ್ರೇಮಂ ಪ್ರೋದ್ಯತ್ತರಂಗೋಚ್ಚರದಮರ ನದೀ[2] ಶೀಕರೋದಾರ ತಾರಾ।
> ರಾಮಂ ಹೇಮ ಪ್ರಭಾ ಪ್ರಸ್ಫುರಿತ ಗಿರಿಶ ಚಂಚಜ್ಜಟಾ ಜಾಲ ಜೂಟ
> ವ್ಯೋಮ ಪ್ರೋದ್ಭಾಸಿ ಚಂದ್ರಂ[3] ತ್ರಿಭುವನ ಜನಕಾನಂದಮಂ ಮಾಡುಗೆಂದುಂ॥

ಈ ಪದ್ಯದಲ್ಲಿ ಕವಿಯು ತನ್ನರಸನನ್ನೂ ಉತ್ತರ ಕನ್ನಡದ ಸೃಷ್ಟಿ ಸೌಂದರ್ಯ ವನ್ನೂ ಶ್ಲೇಷೆಯಿಂದ ವರ್ಣಿಸಿರುವನು.

ಈತನು ವರ್ಣಿಸಿರುವ ಗಂಗಾವಳಿಯ ಉಪಮಾನವನ್ನು ನೋಡಿರಿ—

> ಎರಡುಮಚಲಂಗಳೆಡೆಯೊಳ್।
> ಪರಿವಮರ ನದೀ ಪ್ರವಾಹದಿಂದೆಸೆವ ವಸುಂ।
> ಧರೆಯುಂದದಿನಲಘು ಪಯೋ।
> ಧರ ವಿಲಸಿತ ಹಾರ ಲತಿಕೆ ಸತಿ ಸೊಗಯಿಸಿದಳ್॥

ಮೂಲ ಕಾದಂಬರಿಯಲ್ಲಿ ಬಾಣ ಕವಿಯು ವಿಂಧ್ಯಾಟವಿಯನ್ನು ವರ್ಣಿಸಿದಂತೆ ನಾಗವರ್ಮನು ಸಹ್ಯಾದ್ರಿಯನ್ನು ವರ್ಣಿಸಿರುವನು.

ಆತನ ವನ ವರ್ಣನೆ, ಸಂಧ್ಯಾ ಕಾಲ ವರ್ಣನೆ, ಸರೋವರ ವರ್ಣನೆ, ವರ್ಷಾಕಾಲ ವರ್ಣನೆ—ಇವುಗಳನ್ನು ಓದಿರಿ; ಆತನು ಹೇಳುವ "ಮರದಿಂ ಮರಕ್ಕೆ ದಾಂಗುಡಿ

1. ಸೂರ್ಯಾಸ್ತ; 2. ಗಂಗಾವಳೀ ನದಿ; 3. ಸಹ್ಯಾದ್ರಿಯ ಅಡವಿ.

ಪರಿವೆಳ ಲತೆಯಂತೆ......" ಎಂಬ ಉಪಮಾನವನ್ನು ಪರಿಶೀಲಿಸಿರಿ; ಆತನು ಬರೆದಿರುವ "ಏಲಾ ಲತಾ ಕುಲ ಪೂಗ ದ್ರುಮ ನಾಳಿಕೇರ ಬಹುಳಂ", "ಮರಿಚ ಲತಾ ಪ್ರಚಯ," "ಕತ್ತಲಿಪುದಿದೇಲಾ ಲತಾ ವನ ಪ್ರೋದ್ಯಾನಂ" ಎಂಬ ಉಪ ವನ ವರ್ಣನೆಯನ್ನು ಪರೀಕ್ಷಿಸಿರಿ; "ಮಹಾ ವರಾಹ ಸಮುತ್ಖಾತ ಧರಣೀ ಮಂಡಲಮುಂ, ವೇತ್ರ ಲತಾ ದುಷ್ಪ್ರವೇಶಮುಂ, ಕೀಚಕಾವೃತಮುಂ" ಇತ್ಯಾದಿ ಯಾದ ವನ ವರ್ಣನೆಯನ್ನು ನಿರೀಕ್ಷಿಸಿರಿ. ಇವನ್ನು ಉತ್ತರ ಕನ್ನಡದ ಅಡಕೆಯ ತೋಟಗಳಲ್ಲಿಯೂ ದಟ್ಟಡವಿಗಳಲ್ಲಿಯೂ ಅಲ್ಲದೆ ಕರ್ಣಾಟಕದ ಇನ್ನಾವ ಭಾಗ ದಲ್ಲಿಯೂ ಕಾಣಲು ಸಾಧ್ಯವಿಲ್ಲ. ಈ ವರ್ಣನೆಯು ಈ ನಾಡಿನಲ್ಲಿಯೇ ಹುಟ್ಟಿ ಬೆಳೆದು ಸಂಚರಿಸಿದ ಕವಿಗಲ್ಲದೆ ಇನ್ನಾರಿಗೆ ತಾನೆ ಸಾಧ್ಯ?

ಪಂಪನು 'ವಿಕ್ರಮಾರ್ಜುನ ವಿಜಯ'ವನ್ನೂ, ರನ್ನನು 'ಸಾಹಸ ಭೀಮ ವಿಜಯ'ವನ್ನೂ ಬರೆದಂತೆ, ಕಾಮದೇವನೆಂಬ ತನ್ನ ದೊರೆಯ ವಿಜಯವನ್ನು ಕುರಿತು ಬರೆದ 'ಮದನ ವಿಜಯ'ದ ಕರ್ತೃವಾದ ಆಂಡಯ್ಯನು ಈ ನಾಗರ ಖಂಡದವನೇ ಎಂದು ಹೇಳುವುದುಂಟು. ಆತನ ಕರ್ಣಾಟಕ ದೇಶದ ವರ್ಣನೆಯು ವಿಶೇಷವಾಗಿ ನಮ್ಮ ಕನ್ನಡ ಜಿಲ್ಹೆಗೇ ಸಂಬಂಧಿಸುವುದೆಂಬುದನ್ನು ಸೂಕ್ಷ್ಮ ನಿರೀಕ್ಷಣೆಯಿಂದ ಕಂಡುಕೊಳ್ಳಬಹುದು. ಇವರು ಕನ್ನಡದ ಪೂರ್ವ ಕಾಲದ ಉದ್ದಾಮ ಕವಿಗಳು.

ಉತ್ತರ ಕನ್ನಡದ ಮಧ್ಯ ಕಾಲದ ಕನ್ನಡ ಸಾಹಿತ್ಯದ ವಿಚಾರದಲ್ಲಿ ನಾವು ಪರಿ ಶೀಲಿಸಬೇಕಾದ ಸಂಗತಿಗಳು ಹಲವಿರುವುವು: ಭಗವದ್ಗೀತೆಯ ಕನ್ನಡ ಪದ್ಯಾನು ವಾದವಾದ **ಶ್ರೀಗೀತೆ, ತುರಂಗ ಭಾರತ, ಶಂಕರ ಸಂಹಿತೆ, ವಾಲಗಳ್ಳಿಯ ವರದ ವಿಟ್ಠಲನ ಕನ್ನಡ ರಾಮಾಯಣ, ಅಮಾತ್ಯ ವೆಂಕಪ್ಪನಿಂದ ರಚಿತ ವಾದ ರಾಮಾಯಣ, ಉತ್ತರ ರಾಮಾಯಣ, ಯಾಣದ ಭೈರವ ಪುರಾಣ, ಕೃಷ್ಣಾರ್ಜುನರ ಕಾಳಗ, ನಿತ್ಯಾತ್ಮಕ ಶುಕಯೋಗಿಯ ಭಾಗವತ, ಅಧ್ಯಾತ್ಮ ರಾಮಾಯಣ, ಕಾಶೀ ಕಾಂಡ, ಬ್ರಹ್ಮೋತ್ತರ ಕಾಂಡ, ಶುಕ ಸಪ್ತತಿ ಕಥೆ, ಜ್ಞಾನ ವಾಸಿಷ್ಠ, ಯಾಜ್ಞವಲ್ಕ್ಯ ನೀತಿ** ಮುಂತಾದ ಎಷ್ಟೋ ಉದ್ಗ್ರಂಥಗಳು ಮಧ್ಯ ಕಾಲದಲ್ಲಿ ಉತ್ತರ ಕನ್ನಡದಲ್ಲಿ ಹುಟ್ಟಿದ ಷಟ್ಪದೀ ಕಾವ್ಯಗಳು. ಶ್ರೀಗೀತೆಯು ಮುದ್ರಿತವಾಗಿ ೪೦-೫೦ ವರ್ಷಗಳಾಗಿಹೋದರೂ ಅದರ ಪುನ ರ್ಮುದ್ರಣವಾಗಿಲ್ಲ; ಶಂಕರ ಸಂಹಿತೆ, ತುರಂಗ ಭಾರತಗಳ ಪ್ರತಿಗಳೂ ಸಿಕ್ಕುವುದಿಲ್ಲ. ಈ ಮೂರೂ ಮುದ್ರಿತವಾದುವುಗಳು. ಮಿಕ್ಕುವೆಲ್ಲ ಇನ್ನೂ ಅಜ್ಞಾತ ಸ್ಥಿತಿಯಲ್ಲಿಯೇ ಇವೆ. ಭಾಷೆಯ ದೃಷ್ಟಿಯಿಂದಲೂ ವಿಷಯದ ದೃಷ್ಟಿಯಿಂದಲೂ ಇವು ತುಂಬ ಮಹತ್ತ್ವವುಳ್ಳುವಾಗಿವೆ. ವಾಙ್ಮಯ ಪ್ರೇಮಿಗಳಾದ ಸರಸ್ವತೀ ಭಕ್ತರು, ಕತ್ತಲೆಯ ಕೋಣೆಯ ಸೆರೆಯಲ್ಲಿ ನರಳುತ್ತಿದ್ದು ಹುಳ ಹುಪ್ಪಡಿಗಳ ಪಾಲಾಗುತ್ತಿರುವ ಈ ಗ್ರಂಥ ಗಳನ್ನು ಉದ್ಧರಿಸುವ ಪುಣ್ಯಾತ್ಮರು, ಎಂದು ಹುಟ್ಟಿ ಬೆಳೆದು ಮುಂದೆ ಬರುವರೋ ನೋಡಬೇಕಾಗಿದೆ.

ವರದ ವಿಟ್ಠಲನ ಕನ್ನಡ ರಾಮಾಯಣವು ಉತ್ಕೃಷ್ಟ ಸುಲಭ ಸರಳ ಸರ್ವ ಜನ ಮನೋಹರವಾದ ಷಟ್ಪದೀ ಕಾವ್ಯ, ನಮ್ಮ ಉತ್ತರ ಕನ್ನಡದಲ್ಲಿ ಮನೆ ಮನೆಗಳಲ್ಲಿ ಓದುತ್ತಿರುವ ಸರ್ವ ಜನ ಸಾಹಿತ್ಯ. ಇಂತಿದ್ದರೂ ಇದನ್ನು ಮುದ್ರಿಸುವ ಕಾರ್ಯವು ಸಾಧ್ಯವಾಗಲಿಲ್ಲ. ಈ ಕಷ್ಟವನ್ನು ಕಾಣಲಾರದೆ ನನ್ನಂತಹ ಸಾಮಾನ್ಯನ ಶಕ್ತಿಗೆ ಸಾಧ್ಯವೋ ಹೇಗೆಂಬುದನ್ನು ಕೂಡ ನೋಡಿಕೊಳ್ಳದೆ ಕಾರ್ಯವನ್ನು ಆರಂಭಿಸಿದೆನು. ಆದರೆ ೫೦-೬೦ ಪುಟಗಳನ್ನು ಮುದ್ರಿಸುವುದರೊಳಗಾಗಿ ಕೈ ತಡೆದು ನಿಲ್ಲಬೇಕಾಯಿತು. ಗ್ರಂಥವು ದೊಡ್ಡದು. ಈ ಮಹಾ ಕಾವ್ಯದಲ್ಲಿ, ೫೬ ಸಂಧಿಗಳಲ್ಲಿ, ೩,೪೧೮ ಷಟ್ಪದಿಗಳಿವೆ. ಇದರೊಳಗಿನ ಕೆಲವು ಕವಿತೆಗಳನ್ನು ನೋಡಿರಿ.

ಈ ಕವಿಯ ವಿಷಯದಲ್ಲಿ ಸ್ವಲ್ಪವೇ ಸಂಗತಿಗಳು ನನಗೆ ತಿಳಿದಿವೆ. ಈತನ ಊರು ವಾಲಗಳ್ಳಿ; ಕುಟುತೆಯಿಂದ ೩ ಮೈಲು ದೂರದಲ್ಲಿದೆ. ಈತನ ಕಾಲದ ವಿಷಯದಲ್ಲಿ ಕವಿಚರಿತೆಕಾರರು ಕ್ರಿ. ಶ. ೧೭೫೧ (ಶಾ. ಶ. ೧೬೭೪) ಎಂದು ಹೇಳಿರುವರು. ಈತನ ಗ್ರಂಥದಲ್ಲಿ ಅದು ಈ ರೀತಿಯಾಗಿದೆ:—

ಸ್ವಸ್ತಿ ಶ್ರೀಮಚ್ಛಾಲಿವಾಹನ।
ವಿಸ್ತರದಲಾಳಿದಗನೆಂಬೀ ।
ವತ್ಸರವು ಸಾವಿರದ ಮೇಲರುನೂರು ಚೌಸಪ್ತಿಮೇ॥ (?)
ಮತ್ತೆ ಕೇಳ್ ಭಾವಾಖ್ಯ ವತ್ಸರ।
ದುತ್ತರೋತ್ತರ ಜ್ಯೇಷ್ಠಮಾಸ ಸಿ।
ತ ತ್ರಯೋದಶಿ ಯಿಂದುವಾರದಿ ಮುಗಿದುದೀ ಕೃತಿಯು॥

ಈತನು ತನ್ನ ಕಾವ್ಯಬಂಧದ ವಿಷಯದಲ್ಲಿ ಈ ಮಾತುಗಳನ್ನು ಹೇಳಿಕೊಂಡಿರುವನು:—

ಸುಲಿದ ರಂಭಾಫಲವನೊಲ್ಲದೆ।
ಮೆಲುವರೇ ಕಬ್ಬಿಣದ ಕಡಲೆಯ।
ಸುಲಭವಹ ಸತ್ಕಥೆಯ ಕೇಳದ ಮಹಿಯ ಮೂಢ ಜನ॥
ತಿಳಿವರೇ ಗೂಢಾರ್ಥ ಬಂಧವ।
ಸುಲಭದಿಂದೋದುತ್ತ ನಲಿಯಲಿ।
ತಿಳಿದು ನಡೆಯಲಿ ನೀತಿಯೆಂದೀ ಪರಿಯಲೆಸಗಿದೆನು॥

ಹರಿ ಕಥಾ ಪರಮಾನ್ನ ಸಸ್ತ।
ಸ್ವರ ಸುಪಾಯಸ ಗಾನ ನವ ಘೃತ।
ವೆರಸಿ ಧೃವ ಗೀತಾಳಿ ಶಾಕ ವ್ಯಂಜನಾದಿಗಳು॥
ಪರಿಮಳಿಸುವಿತಿಹಾಸ ಭಕ್ಷ್ಯವು।
ಸರಸ ಕವಿ ಬಡಿಸುವನು ಮುದದಲಿ।
ಕರೆವೆನಿದೆಯೆಡೆಮಾಡಿ ಬನ್ನಿರಿಯುಣಲು ಹಸಿದವರು॥

ತನ್ನ ಕಾವ್ಯದ ಕಥಾ ಭಾಗದ (ಶ್ರೀರಾಮ ಕಥೆಯ) ವಿಷಯವಾಗಿ ಈತನು ಹೀಗೆ ಹೇಳಿಕೊಂಡಿರುವನು :—

ಇದು ಮನೋಭಿಪ್ರಾಯ ಸಾಧಕ।
ವಿದು ಪರೇಹ ಸುಖ ಪ್ರದಾಯಕ।
ವಿದು ಸುಖಾಪ್ತಿಗೆ ಮೂಲ ಸಾಧನ ಘನ ಸುಖ ಪ್ರದವೂ॥
ಇದು ಸಕಲ ಪೌರಾಣ ವೇದದ।
ಹೃದಯ..........।
........................॥

ಮತ್ತು

ಕಿವಿಗೆ ಸೊಗಸಾಲಸ್ಯ ಭಂಜನ।
ಸವಿದೊಡಿಹ ಪರ ಸೌಖ್ಯ ಸಾಧನ।
ನವರಸಂಗಳ ಬೀಡು ಮುಕ್ತಿಗೆ ಮೂಲಭೂತವಿದು॥
ಭವ ನಿವಾರಣ ಭಾವ ಮೋಹನ।
ಭುವನ ಭೂಷಣ ರಾಮ ಕಥೆಯಿದು।
........................।

ಈತನ ಕವಿತ್ವದ ಸರಳತೆ ಮನೋಹರತೆಗಳ ಮಾದರಿಗಾಗಿ ಒಂದೆರಡು ಕವಿತೆಗಳನ್ನು ಇಲ್ಲಿ ಹೇಳಿದರೆ ಅದು ಅಪ್ರಾಸಂಗಿಕವಾಗಲಾರದು :—

ದಶರಥನು ಮಕ್ಕಳನ್ನು ಲಾಲಿಸಿದ ಬಗೆ

ಅಪ್ಪ ಬಾ ಮಣಿತಲ್ಪ ಬಾ ಕಂ।
ದರ್ಪ ಬಾ ಶ್ರುತಿತಲ್ಪ ಬಾ ಮ।
ದ್ದರ್ಪ ಬಾ ಮರಿಯಾನೆ ಬಾ ಮಾಣಿಕ್ಯ ಬಾಯೆನುತ॥
ಅಪ್ಪಿ ತೊಡುಗೆಯ ತೊಡಿಸಿ ಸುತರುಗ।
ಳೊಪ್ಪವನು ನೆರೆ ನೋಡಿ ಕಾಯುದ।
ಮುಪ್ಪ ಮರೆದಮರತೆಯ ಪಡೆದವರಂತೆ ಹಿಗ್ಗುವನು॥

ವಿಶ್ವಾಮಿತ್ರನ ಮಖ ರಕ್ಷಣೆಗೈವ ಶ್ರೀರಾಮಚಂದ್ರನು ಋತ್ವಿಜರಿಗೂ ದೇವತೆಗಳಿಗೂ ಅಭಯಕೊಟ್ಟುದು.—

ಬೆದರದಿರಿ ಧೈರ್ಯವನು ಬಿಡದಿರಿ।
ಕುದಿದು ಮಂತ್ರವ ಮರೆಯದಿರಿ ನಾವ್।
ಸದೆವೆವಸುರರನೀಗ ಲಕ್ಷ್ಮಣ ಕೆಡಹು ಕೆಡಹೆನುತ॥
ಇದಿರೊಳಾನಿಹೆ ಹಿಂದೆ ನೀನಿರು।
ತ್ರಿದಶರಂಜದೆ ಹುತವನುಣ್ಣಲಿ।
ಕದನಕಾವಿಹೆವೇಕೆ ಕಳವಳ ನಿಮಗೆ ಹೋ ಎಂದು॥

ಈತನ ಕವಿತೆಗಳಲ್ಲಿ ಶಬ್ದ ಚಮತ್ಕಾರ ಅರ್ಥ ಚಮತ್ಕಾರಗಳಿಗೂ ಕೊರತೆ ಯಿಲ್ಲ.—

ವಿಷ್ಣು ಸ್ತುತಿ

ಹರಿಯನೇರ್ದನ ಹರಿಯೊಳಿರ್ದನ।
ಹರಿಯ ಚರಣದಿ ಮೆಟ್ಟಿದಾತನ।
ಹರಿಯ ಕೊಂದನ ಹರಿಯು ಕಾಯ್ದನ ಹರಿಯ ಕಟ್ಟಿದನ॥
ಹರಿಯ ಮಗಳನು ಕೂಡಿದಾತನ।
ಹರಿಯ ಮೇಲೊರಗಿರ್ಪ ದೇವನ।
ಚರಣಕೆರಗುವೆ ವರದ ವಿಟ್ಠಲ ಸಲಹುಗನವರತ॥

ಮೃಗವ ಧರಿಸಿಹ ಹಗೆಯ ವೈರಿಯ।
ಪೆಗಲ ಮೇಲ್ಸಂಚರಿಸುತಿರ್ಪನ।
ಮಗಗೆ ಮುನಿದನ ಪುರವ ನೆಗಹಿದನನುಜ ಮರೆವೊಗಲು॥
ಬಗೆಯುದವನನು ಕೊಲಲು ಬಿಡಿಸಿದ।
ನೊಗುವಿಗೆಯ ಪದವಿಗಳನಿತ್ತಿಹ।
ನಗಲದೆನ್ನನು ವರದ ವಿಟ್ಠಲ ಸಲಹುಗನವರತ॥

ಇಂತಹ ಉತ್ತಮ ಕಾವ್ಯವನ್ನು ಬೆಳಕಿಗೆ ತರಲು ಯತ್ನಿಸಿರುವ ನನ್ನ ಕಾರ್ಯದ ಕಷ್ಟವನ್ನು ಸಹಾನುಭೂತಿಯಿಂದ ನೋಡಿ ಪ್ರೋತ್ಸಾಹಿಸಿ ಮುಂದುವರಿಸುವುದು ಕನ್ನಡಿಗರ ಕೈಯಲ್ಲಿದೆ; ಭಗವಂತನ ಪ್ರೇರಣೆಯನ್ನು ಆಶ್ರಯಿಸಿದೆ.

ಉತ್ತರ ಕನ್ನಡದ ಮಧ್ಯ ಕಾಲದ ವಾಙ್ಮಯ ವಿಚಾರವನ್ನು ಪರಿಶೀಲಿಸುವಾಗ ಯಕ್ಷಗಾನ ಪ್ರಸಂಗವನ್ನು ಕೈಬಿಡುವಂತಿಲ್ಲ. ಭಾರತ, ರಾಮಾಯಣ, ಭಾಗವತ ಗಳ ಪುಣ್ಯ ಕಥಾ ಪ್ರಸಂಗಗಳನ್ನೇ ಆಧಾರವಾಗಿಟ್ಟುಕೊಂಡು ರಚಿತವಾಗಿರುವ ಈ ಪದ್ಯ ಸಂಗ್ರಹಗಳು, ಪ್ರಸಂಗಗಳು, ಸಾಮಾನ್ಯ ಜನಪದ ಸಾಹಿತ್ಯಕ್ಕಿಂತಲೂ ಮೇಲ್ತರಗತಿಯವಾಗಿವೆ; ಷಟ್ಪದೀ ಕಾವ್ಯಗಳಿಗಿಂತಲೂ ಕಡಿಮೆಯ ತೆರದವೆಂದು ಹೇಗೂ ಹೇಳುವಂತಿಲ್ಲ. ಯಕ್ಷಗಾನ ಪ್ರಸಂಗಗಳನ್ನು ತಿದ್ದಿ ಬೆಳೆಯಿಸಿದ ಆವೃತ್ತಿಯೇ ಈಗಿನ ನಾಟಕಗಳು. ಈ ನಾಟಕಗಳ ಯುಗದಲ್ಲಿ ಯಕ್ಷಗಾನದ ಆಟಗಳೂ ಮೇಳ ಗಳೂ ಮೂಲೆಗುಂಪಾಗಿ ಅವುಗಳೊಡನೆಯೇ ಆ ಪ್ರಸಂಗಗಳೂ ಹಳೆಯ ಕಡತಗಳ ಸಂಗಡ ಕೂಡಿಹೋಗಲು ತೊಡಗಿವೆ. ಇವುಗಳಲ್ಲಿ ಹಲವು ಇನ್ನೂ ಮುದ್ರಿತವಾಗಿಲ್ಲ. ನಾಟಕಗಳಿಗೆ ಭರತ ಶಾಸ್ತ್ರಾನುಗುಣವಾದ ನಿಯಮಗಳಿದ್ದಂತೆ ಈ ಪ್ರಸಂಗಾಭಿನಯ ಗಳಿಗೂ ತಕ್ಕ ನಿರ್ಬಂಧಗಳಿದ್ದುವು. ಕಾಲಾನುಗುಣವಾದ ತಕ್ಕ ಮಾರ್ಪಾಡಿ ನೊಂದಿಗೆ ಪ್ರಕಟಿಸಿದರೆ ಇವು ಕನ್ನಡ ಸಾಹಿತ್ಯದ ಬೆಳೆವಣಿಗೆಗೆ ಸಹಾಯವಾಗುವುದ ರಲ್ಲಿ ಸಂಶಯವಿಲ್ಲ.

ಪ್ರಕೃತದಲ್ಲಿಯೂ ಉತ್ತರ ಕನ್ನಡವು ಕರ್ಣಾಟಕ ಸಾಹಿತ್ಯ ಸೇವೆಯಲ್ಲಿ ತನಗೆ ಅನುಗುಣವಾದ ಭಾಗವನ್ನು ವಹಿಸಿಕೊಂಡಿದೆಯೆಂದು ಹೇಳಬಹುದು. ಎರಡು

ಮೇಲ್ತರಗತಿಯ ವಾರಪತ್ರಿಕೆಗಳಿವೆ. ಮೂರನೆಯದೊಂದು ಅರ್ಧ ಮರಾಟಿ, ಅರ್ಧ ಕನ್ನಡ ಕೂಡಿದೆ. ಒಂದು ಮಾಸಪತ್ರಿಕೆಯು ಕನ್ನಡ ಪತ್ರಿಕೆಗಳಿಗೆ ಸಹಜವಾದ ಸಾಂಪತ್ತಿಕ ಸಂಕಟದಲ್ಲಿ ತೊಳಲಾಡುತ್ತಿದ್ದರೂ ತನ್ನ ಕರ್ತವ್ಯವನ್ನು ಶ್ರದ್ಧೆಯಿಂದ ನಡೆಯಿಸಿದೆ. ಹಲವರು ಲೇಖಕರೂ ಕೆಲವರು ಕವಿಗಳೂ ಗ್ರಂಥಕಾರರೂ ತಮ್ಮ ತಮ್ಮ ಶಕ್ತಿಗನುಗುಣವಾಗಿ ಸರಸ್ವತಿಯ ಸೇವೆಯನ್ನು ನಡೆಯಿಸಿಯೇ ಇದ್ದಾರೆ.

ಪುರಾತನ ಕಾಲದಿಂದಲೂ ಉತ್ತರ ಕನ್ನಡವು ಅಚ್ಚಗನ್ನಡ ನಾಡಾಗಿದ್ದರೂ, ಪ್ರಾಚೀನ ಕಾಲದಿಂದಲೂ ಅದು ಕನ್ನಡ ನುಡಿಯನ್ನು ಸೇವಿಸುತ್ತ ಬಂದಿದ್ದರೂ, ಮಧ್ಯ ಕಾಲದಲ್ಲಿ ಬಹು ಜನ ಕವಿಗಳು ಉದಯಿಸಿ ಉತ್ತಮೋತ್ತಮ ಗ್ರಂಥಗಳನ್ನು ರಚಿಸಿ ಕನ್ನಡದ ಸೊಬಗನ್ನು ಜನತೆಯಲ್ಲಿ ಬೀರಿದ್ದರೂ, ಕರ್ಣಾಟಕದ ಗಡಿ ನಾಡಿನಲ್ಲಿ ಕನ್ನಡಕ್ಕಿರುವ ಆಪತ್ತು ಇಲ್ಲಿಯೂ ತಪ್ಪಿದೆಯೆಂದು ಹೇಳಲಾಗುವುದಿಲ್ಲ. ಪೋರ್ತುಗೀಸರ ಕಾಲದಿಂದೀಚೆಗೆ ಇಲ್ಲಿಯ ಕನ್ನಡಕ್ಕೆ ಒಬ್ಬಳು ತಂಗಿ ಹುಟ್ಟಿದಂತಾಗಿದೆ. ಉತ್ತರ ಕನ್ನಡದಲ್ಲಿ ಒಂದೂವರೆ ಲಕ್ಷ ಜನರು ಕೊಂಕಣಿಯನ್ನಾಡುತ್ತಾರೆ. ಕೊಂಕಣಿಯು ಕನ್ನಡಕ್ಕೆ ಒಡಹುಟ್ಟಿದ ತಂಗಿಯಂತಿದೆ. ಕೊಂಕಣಿಯು ಕನ್ನಡದ ಸಹಜ ಬಂಧು. ಈ ಜಿಲ್ಹೆಯಲ್ಲಿ ಕೊಂಕಣಿಗರೂ ಕನ್ನಡಿಗರೂ ಸರಿ ಬೆರಕೆಯಾಗಿ ಪರಸ್ಪರಾವಲಂಬಿಗಳಾಗಿ ಜೀವಿಸಬೇಕಾಗಿದೆ. ಕೊಂಕಣಿಗೆ ಕನ್ನಡವೇ ಲಿಪಿ. ಇಂತಿದ್ದರೂ ಮರಾಟಿಯು ಕೊಂಕಣಿಯು ಕಾಲು ಹಿಡಿದು ಕಾಲುಂಗುರವನ್ನುಚ್ಚಿಕೊಳ್ಳುವವಳಂತೆ ಕನ್ನಡದ ಹಗೆ ಸಾಧಿಸಿಕೊಳ್ಳಲು ಇಲ್ಲಿಯೂ ಯತ್ನಿಸುತ್ತಿದೆ.

ಕೊಂಕಣಿಯು ಮರಾಟಿಯ ಮರಿಯೆಂದು ನಂಬಿದ ಕೆಲವರುಂಟು. ಅದು ಬಂಗಾಲಿಯ ವಿಕೃತರೂಪವೆಂದು ಹೇಳುವವರೂ ಇದ್ದಾರೆ. ನಾನು ಈ ಎರಡೂ ಮಾತುಗಳನ್ನು ಒಪ್ಪಿಕೊಳ್ಳಲಾರೆ. ಕೊಂಕಣಿಗೂ ಮರಾಟಿಗೂ ಯಾವ ಯಾವ ಮಾತುಗಳಲ್ಲಿ ಹೋಲಿಕೆಯಿದೆಯೆಂಬುದನ್ನು ಯಾರೂ ನಿಷ್ಕರ್ಷೆ ಮಾಡಿ ಹೇಳಿದಂತಿಲ್ಲ. ವ್ಯಾಕರಣ ವಿಚಾರದಲ್ಲಂತೂ ಕೊಂಕಣಿಗೂ ಮರಾಟಿಗೂ ಸಾಮ್ಯವು ತೀರ ಕಡಿಮೆ. ಬಂಗಾಲಿಗಳ ಮಾತಿನ ಸ್ವರ, ಆಘಾತ ಮುಂತಾದ ಕೆಲವು ವಿಚಾರಗಳು ಕೊಂಕಣಿಗೆ ಸರಿಹೊಂದುತ್ತಿವೆಯೆಂದು ಕೆಲವರು ಹೇಳುವರು. ಇಷ್ಟರಿಂದಲೇ ಅದು ಬಂಗಾಲಿಯ ವಿಕೃತ ರೂಪವೆಂದು ಹೇಗೆ ಹೇಳಬಹುದು? ಅಚ್ಚ ಬಂಗಾಲಿಯ ಶಬ್ದಗಳೂ ಪದ ಪ್ರಯೋಗಾದಿಗಳು ಎಷ್ಟು ಮಟ್ಟಿಗೆ ಕೊಂಕಣಿಯಲ್ಲಿರುವುವೆಂಬುದನ್ನು ನೋಡಿದಾಗ ಈ ಮಾತಿನ ಸಿದ್ಧತೆಯಾಗಬಹುದು. ಕೊಂಕಣಿಯು ಪ್ರಾಕೃತದ ವಿಕೃತ ರೂಪವಾಗಿರಬೇಕೆಂದು ನನ್ನ ಭಾವನೆ.

ಕೊಂಕಣಿಯನ್ನಾಡುವ ಹಲವರು ತಮ್ಮ ಉದ್ಯೋಗ ವ್ಯವಸಾಯಗಳಿಗಾಗಿ ಮುಂಬಯಿಗೆ ಹೋಗಿಬರಬೇಕಾಗುವುದು; ವರ್ಷದಲ್ಲಿ ಹೆಚ್ಚು ಕಾಲ ಅವರು ಮುಂಬಯಿಯಲ್ಲಿಯೇ ಉಳಿಯುವರು; ಮುಂಬಯಿಯಲ್ಲಿಯೇ ವಾಸವಾಗಿರುವವರೂ ಹಲವರಿದ್ದಾರೆ. ಈ ಕಾರಣದಿಂದ ಮರಾಟಿಯ ಆವಶ್ಯಕತೆಯೂ ಮೋಹವೂ ಅವರ ಮನಸ್ಸನ್ನಾಕ್ರಮಿಸಿದುವು. ಅದೇ ಕಾಲಕ್ಕೆ ಆಧುನಿಕ ಕನ್ನಡ ವಾಙ್ಮಯ

ದಲ್ಲಿಯ ಹಲವು ಕೊರತೆಗಳೂ ಕನ್ನಡಿಗರ ಅನಾದರವೂ ಆ ನಮ್ಮ ಬಂಧುಗಳ ಪ್ರೀತಿ ಸಹಾನುಭೂತಿಗಳನ್ನು ಕಳೆದುಕೊಳ್ಳಲು ಕಾರಣವಾದುವು. ಅಂತಹ ಕೆಲವರು ಮರಾಟಿಯನ್ನೇ ತಮ್ಮ ಮಾತೃಭಾಷೆಯೆಂದು ತಿಳಿಯಬೇಕೆಂದೂ ತಮ್ಮ ಮಕ್ಕಳು ಮರಿಗಳಿಗೆ ಮರಾಟಿಯನ್ನೇ ಕಲಿಸಬೇಕಲ್ಲದೆ ಕನ್ನಡವನ್ನು ಕಲಿಸಲಾಗದೆಂದೂ ಹೇಳುವರು. ಇಂತಹರು ತೀರ ಸ್ವಲ್ಪ ಜನರು; ಮಿಕ್ಕ ಕೆಲವರಿಗೆ ಕನ್ನಡದ ವಿಷಯ ದಲ್ಲಿ ಸರಿಯಾದ ತಿಳಿವಳಿಕೆಯಿಲ್ಲದುದರಿಂದ ಆ ವಿಷಯದಲ್ಲಿ ತಟಸ್ಥರಾಗಿರುವರು. ಆದರೂ, ಕೊಂಕಣಿಯನ್ನಾಡುವವರಲ್ಲಿ ಬಹು ಜನರು ಕನ್ನಡದ ಅಭಿಮಾನಿಗಳು. ಕನ್ನಡ ವಾಙ್ಮಯದ ಪ್ರಾಚೀನತೆ ಉಜ್ಜ್ವಲತೆಗಳನ್ನು ತಿಳಿದು ಕನ್ನಡ ನುಡಿಯ ಸರಸತೆಯನ್ನು ಮೆಚ್ಚಿದೊಡನೆ ಅದರ ಉತ್ಕರ್ಷತೆಗೆ ಕೈಗೊಡಲು ಅವರೆಲ್ಲರೂ ಸದಾ ಸಿದ್ಧರೆಂಬುದಕ್ಕೆ ಈ ಸಾಹಿತ್ಯ ಸಮ್ಮೇಲನವೇ ಸಾಕ್ಷಿ. ಅವರೇನು ಕನ್ನಡದ ವಿಷಯ ದಲ್ಲಿ ಅಸಡ್ಡೆಯನ್ನಾಗಲಿ ಅಪ್ರೀತಿಯನ್ನಾಗಲಿ ತೋರಿಸುವುದಿಲ್ಲ. ಆಧುನಿಕ ಮಹಾ ರಾಷ್ಟ್ರ ವಾಙ್ಮಯದ ಅಭಿವೃದ್ಧಿಯು ಅವರನ್ನು ಮೋಹಗೊಳಿಸಿ ಅತ್ತ ಸೆಳೆದು ಕೊಳ್ಳುತ್ತಲಿದೆ. ಇತ್ತೀಚೆಗೆ ಈ ಪರಿಸ್ಥಿತಿಯೂ ಬದಲಾಗಿದೆ. ಮೋಟಾರಿನ ಯುಗವು ಪ್ರಾರಂಭವಾಗುವುದಕ್ಕಿಂತ ಮುಂಚೆ ಕಾರವಾರದವರಿಗೆ ಮುಂಬಯಿಯು ಧಾರವಾಡಕ್ಕಿಂತ ಸಮೀಪವೆನಿಸುತ್ತಿದ್ದಿತು. ಈ ಸ್ಥಿತಿಯು ಈಗ ಉಳಿದಿಲ್ಲ. ಕರ್ಣಾಟ ಕದ ಮಿಕ್ಕ ಭಾಗಗಳ ವಿದ್ವಾಂಸರು ಈ ವಿಷಯದಲ್ಲಿ ಸ್ವಲ್ಪ ಮನಸ್ಸು ಹಾಕಿ ಕನ್ನಡದ ಕೆಚ್ಚನ್ನು ಅವರೆದುರಿಗಿಟ್ಟು ಅವರ ತಿಳಿವನ್ನು ತಿದ್ದಿದರೆ ಅವರೆಲ್ಲರೂ ಸಂಪೂರ್ಣ ಕನ್ನಡ ವಾಙ್ಮಯ ಪ್ರಿಯರಾಗಿ ಕನ್ನಡ ಸರಸತಿಯ ಭಕ್ತರಾಗಿ ಪರಿಣಮಿಸುವುದರಲ್ಲಿ ಸಂದೇಹವಿಲ್ಲ.

ಇನ್ನೊಂದು ಮಾತು ಹೇಳಿ ಈ ವಿಷಯವನ್ನು ಮುಗಿಸಬೇಕಾಗಿದೆ: ಉತ್ತರ ಕನ್ನಡದ ಕನ್ನಡವು ಕರ್ಣಾಟಕದ ಮಿಕ್ಕ ಭಾಗಗಳ ಕನ್ನಡಕ್ಕಿಂತಲೂ ಹೆಚ್ಚು ಶುದ್ಧ ಸ್ಥಿತಿಯಲ್ಲಿದೆಯೆಂದು ನಾನು ಧೈರ್ಯವಾಗಿ ಹೇಳಬಲ್ಲೆನು. ಅದರಲ್ಲಿ ಅಚ್ಚಗನ್ನಡದ ಪದ ಪ್ರಯೋಗಗಳು ವಿಪುಲವಾಗಿವೆ. ಅದಕ್ಕೆ ಮಿಕ್ಕ ಪ್ರದೇಶಗಳಲ್ಲಿರುವಂತೆ ಪರ ಭಾಷಾ ಸಂಪರ್ಕವು ಅಷ್ಟು ಹೆಚ್ಚಾಗಿ ಆಗಿಲ್ಲ. ಅಬ್ಬೆ, ಮಾಣಿ, ಚಿಕ್ಕಪ್ಪ, ಹಸು, ಕೂಸು, ಬೇಣ, ಮಕ್ಕಿ, ಕುಳಿ, ಕುಳ್ಳಿ, ಕೀಳಿ, ಮೆಟ್ಟುಗತ್ತಿ, ಹಲ್ಲುಗತ್ತಿ, ಪಾಗಾರ, ನಾಳಿಂಗೆ, ಮಡಗು, ಬಪ್ಪಾಗ, ಹೋಪಾಗ, ಬಪ್ಪನಡ, ಹೋಪನಡ, ಆಂ ಹೇಳಿದ್ದೆ- ಇತ್ಯಾದಿ. ಈ ಭಾಗದಲ್ಲಿ ಹೆಂಗುಸರು ಹಾಡುವ ಹಾಡುಗಳು ಎಂತಹ ಅಚ್ಚಗನ್ನಡ ಶೈಲಿಯಲ್ಲಿ ಅಚ್ಚಗನ್ನಡ ಪದ ಸಮೂಹದಿಂದ ರಂಜಿಸುತ್ತಿವೆಯೆಂಬುದನ್ನು ಪ್ರತ್ಯಕ್ಷ ಕೇಳಿದವರೇ ಹೇಳಬಲ್ಲರು.

ಒಟ್ಟಿನಲ್ಲಿ ಹೇಳುವುದಾದರೆ, ಉತ್ತರ ಕನ್ನಡ ಜಿಲ್ಹೆಯು ಬಹು ಪೂರ್ವ ಕಾಲ ದಿಂದಲೂ ಅಚ್ಚಗನ್ನಡ ನಾಡು. ಅಲ್ಲಿ ಅನೇಕ ಪ್ರತಿಭಾ ಸಂಪನ್ನರಾದ ಕವಿಗಳು ಕಾಲ ಕಾಲಕ್ಕೆ ಆಗಿಹೋಗಿದ್ದಾರೆ; ಅನೇಕ ಉತ್ಕೃಷ್ಟ ಕಾವ್ಯಗಳು ಹುಟ್ಟಿವೆ. ಆದರೆ ಆ ಕನ್ನಡಿಗರಿಗೆ ಈಗ ಬಹು ಕಷ್ಟದ ಕಾಲವೊದಗಿದೆ; ಜಗತ್ತಿನ ಜೀವನ ಕಲಹದ ಸಮಸ್ಯೆ

ಯೊಂದರಲ್ಲಿಯೇ ಅಲ್ಲದೆ ಇನ್ನೂ ಅನೇಕ ಕಷ್ಟ ಪರಂಪರೆಗಳಿಗೆ ಅವರು ಒಳಗಾಗಿದ್ದಾರೆ. ಹಳ್ಳಿಗಳಲ್ಲಿ ಅವರು ಕಾಡಿನಲ್ಲಿ ಅಡಗಿಹೋಗಿದ್ದಾರೆ. ಅಲ್ಲಿ ಅವರು ಹುಲಿ ಕರಡಿಗಳೊಡನೆ ಕಾದಾಡಿ ಬದುಕಬೇಕಾಗಿರುವಂತೆ ಅವರ ಪೂರ್ವದ ಸಾಹಿತ್ಯವು ಕೂಡ ಹುಳ ಹುಪ್ಪಡಿಗಳ ಬಾಯಿಯೊಳಗಿಂದ ತಪ್ಪಿಸಿಕೊಂಡು ಬದುಕಬೇಕಾಗಿದೆ. ಕರ್ಣಾಟಕ ಬಂಧುಗಳೂ ಸಾಹಿತ್ಯ ಪರಿಷತ್ತಿನಂತಹ ಸಮರ್ಥ ಸಂಸ್ಥೆಗಳೂ ನೆರವಾಗಿ ನಮ್ಮನ್ನೂ ನಮ್ಮ ಸಾಹಿತ್ಯವನ್ನೂ ಉಳಿಸಿಕೊಳ್ಳಬೇಕಾಗಿದೆ. ಭಗವಂತನು ಅನುಗ್ರಹಿಸಲಿ.

**ನಾರಾಯಣ ವೆಂಕಟೇಶ ಕುರಡಿ.**

---

**ವಿನಂತಿ.**—ಇಲ್ಲಿ ಹೇಳಿರುವ ಗ್ರಂಥಗಳಲ್ಲಿ ಯಾವುದಾದರೊಂದನ್ನು, ಇಲ್ಲವೆ ಹಲವನ್ನು, ಪರಿಷ್ಕರಿಸಿ ಮುದ್ರಿಸಲು ಬಯಸುವ ಮಹನೀಯರಿಗೆ ಅವುಗಳ ಹಸ್ತಲಿಖಿತ ಪ್ರತಿಗಳನ್ನು ಒದಗಿಸಿಕೊಡುವ ಕಾರ್ಯವನ್ನು ನಾನು ಆನಂದದಿಂದ ಒಪ್ಪಿಕೊಳ್ಳುವೆನು. ಅಂತಹ ಗ್ರಂಥಗಳ ಹೆಸರುಗಳನ್ನಷ್ಟೇ ಇಲ್ಲಿ ಹೇಳಿರುವೆನು. ಇವುಗಳಲ್ಲಿ ಕೆಲವು ನನ್ನಲ್ಲಿಯೇ ಇವೆ. ಮತ್ತೆ ಕೆಲವು ಶ್ರೀ ವೆಂಕಪ್ಪ ಹೆಗಡೆ ಕಡೆಕೋಡಿ ಇವರಲ್ಲಿವೆ. ಹಳ್ಳಿಗಳಲ್ಲಿ ಸಂಚರಿಸಿ ನೋಡಿದರೆ ಇಂತಹ ಇನ್ನೂ ಎಷ್ಟೋ ಉದ್ಗ್ರಂಥಗಳು ಉಪಲಬ್ಧವಾಗಬಹುದು. ಇವೆಲ್ಲ ತಾಳೆಯೋಲೆಯಲ್ಲಿ ಬರೆದುವು. ಕೆಲವನ್ನು ಮಾತ್ರ ಪ್ರತಿಮಾಡಿಸಿ ಇಟ್ಟಿರುವರು.

ಟಪಾಲಿನ ಪತ್ತೆ—

**ಶ್ರೀ ಸರಸ್ವತೀ ಮಂದಿರಮ್,**
ಧಾರವಾಡ.

**ನಾರಾಯಣ ವೆಂಕಟೇಶ ಕುರಡಿ.**

---

## ಭಾಸ ಮಹಾಕವಿಯ

# *ಅಭಿಷೇಕ ನಾಟಕ

## (ಕನ್ನಡದ ಪರಿವರ್ತನೆ)



### ಷಷ್ಠಾಂಕ

(ಬಳಿಕ ಮೂವರು ವಿದ್ಯಾಧರರು ಬರುವರು).

ಎಲ್ಲರೂ.—ಓಹೊ! ಇದೊ ಇಲ್ಲಿರುವೆವು! ಇದೊ ಇಲ್ಲಿರುವೆವು!

ಮೊದಲನೆಯಂ.—

ಮ॥ ಮೆರೆವಿಕ್ಷ್ವಾಕು ನರೇಂದ್ರ ವಂಶ ವಿಪುಲೋದ್ಯತ್ಕೇತುವಾವಂ ಕರಂ।

ಎರಡನೆಯಂ.—

ದುರುಳಂ ರಾವಣನಂ ಕೊಲಲ್ಬಗೆದವಂ ತಾನಾವನಾ ರಾಮನಾ॥

ಮೂರನೆಯಂ.—

ಧುರದೊಂದಚ್ಚರಿಯಂ ವಿಲೋಕಿಪ ವಿಶೇಷಾಸಕ್ತಿಯಿಂದೊಂದಿದಾವ್।

ಎಲ್ಲರೂ.—

ಭರದಿಂದೆಯ್ದಿದೆವಿಲ್ಲಿಗಾಗಳೆ ಗಡೈಕಿಲ್ವೆಟ್ಟಿನಾ ಕೋಡಿನಿಂ ॥೧॥

ಮೊದಲನೆಯಂ.—ಚಿತ್ರರಥ! ನೋಡು; ದೇವತೆಗಳು ದೇವರ್ಷಿಗಳು ಸಿದ್ಧರು ವಿದ್ಯಾಧರರು ಮುಂತಾಗಿ ಸರ್ವರೂ ಅಂತರಿಕ್ಷದಲ್ಲಿ ತುಂಬಿರುವರು. ಆದಕಾರಣ ನಾವು ಇವರಿರುವ ಸ್ಥಳವನ್ನೇ ಬಿಟ್ಟು ಏಕಾಂತವಾಗಿ ನಿಂತು ರಾಮ ರಾವಣರ ಯುದ್ಧವನ್ನು ನೋಡುವ.

ಇಬ್ಬರೂ.—ಹಾಗೆಯೇ ಸರಿ.

ಮೊದಲನೆಯಂ.—ಆಹ! ಈ ಸಮರಾಂಗಣವು ಭಯೋತ್ಪಾದಕವಾಗಿಯೂ ದರ್ಶನೀಯವಾಗಿಯೂ ಇರುವುದೇ ಸರಿ. ಇಲ್ಲಿಯಾದರೊ—

ಚಂ॥ ಅಸುರ ಶರೀರವೆಂಬ ಜಲದಿಂ ಕಪಿಸಂಕುಲವೆಂಬ ವೀಚಿಯಿಂ।
ದಸಿತತಿಯೆಂಬ ನಕ್ರ ಸವಿಶೇಷದಿನೀ ಸಮರಾಂಗಣಂ ವಿರಾ॥
ಜಿಸುವುದು ನೋಡ ನೋಡ ರಘುನಾಯಕ ಚಂದ್ರಮ ಬಾಣ ರಶ್ಮಿಯಿಂ।
ದೊಸೆದೊಸೆದುರ್ಕುತುರ್ಕುತೆಡೆವಿರಾಜ್ಜಿ ಸಮುದ್ರದವೋಲ್ ಸಹಾಯಕಾ॥ ೨॥

ಎರಡನೆಯಂ.—ನಿಜ, ನಿಜ! ಹಾಗೆಯೆ!

* ಕ. ಸಾ. ಪ. ಪತ್ರಿಕೆಯ ೧೬ನೆಯ ಸಂಪುಟದ ೧ನೆಯ ಸಂಚಿಕೆಯ ೩೬ನೆಯ ಪುಟದಿಂದ ಮುಂದುವರಿದುದು.

ಚಂ ॥ ತರು ಗಿರಿ ಘಾತ ಜರ್ಝರಿತ ಶೀರ್ಷರಿವರ್ ಪಿಡಿಗುರ್ದಿಸಿಂದೆ ಮೇಣ್ ।
ಹರಣಮನಿಂತು ಬಿಟ್ಟವರಿವರ್ ಗಡ ಬಲ್ಮೆಯನೊಂದಿ ಕೊರ್ಬಿ ಬೊ ॥
ಬ್ಬಿರಿವುತೆ ವಾಲಮಂ ನೆಗಪಿ ಕೋಪಿಸಿ ಕಣ್ಬಿಡುತೌಂಡುಗರ್ಚಿ ವಾ ।
ನರರಿರಿಯಲ್ಕೆ ವಜ್ರಹತ ಶೈಲದವೋಲ್ ದನುಜಾಳಿ ತೋಱುಗುಂ ॥ ೩ ॥

ಮೂರನೆಯಂ.—ಇವರನ್ನೂ ಸಹ ನೀವು ನೋಡಬೇಕು.

ಉ ॥ ಕೂರಸಿಯಂ ಕರಂ ಪಿಡಿದು ಕೋಪದೆ ಕಣ್ಬಿಡುತುರ್ಜಿ ಕೂಗುತುಂ ।
ಕೋರೆಯ ಪಲ್ಗಳಂ ಕಿಱಿದು ಕಾಱುಮ್ಗಿಲಂದದ ರಕ್ಕಸರ್ ಭಯಂ ॥
ದೋರುತೆ ಬಾಯಬಿಳ್ಚಿ ಕಪಿಸೈನ್ಯಮನೆಲ್ಲಮನೀಗಳೇ ಕೊಲ ।
ಲ್ಕಾರಿದಱಂತೆ ಬಂದು ಬಿಳುತುಂ ಭರದಿಂ ಕವಿಯುತ್ತುಮಿರ್ದಪರ್ ॥ ೪ ॥

ಮೊದಲನೆಯಂ.—ಅಹಹಾ!

ಮ ॥ ಕಣೆಯಂ ವಾನರ ಸೈನ್ಯದೊಳ್ ಮುಸಿವುತೆಚ್ಚುರ್ತಿರ್ದಪರ್ ದಾನವರ್ ।

ಎರಡನೆಯಂ.—

ಕೆಣಸಿಂ ನೈಋತ ಸೇನೆಯೊಳ್ ಮಲೆಗಳಂ ಕಿತ್ತಿಕ್ಕುವರ್ ವಾನರರ್ ॥

ಮೂರನೆಯಂ.—

ಮೊಣಕಾಲ್ಸಂಹತಿಯಿಂದೆಯುಂ ಪಿಡಿಯ ಬಲ್ಗುರ್ದಿಂದೆಯುಂ ಕಾಳೆಗಂ ।

ಎಲ್ಲರೂ.—

ಪೊಣರಲ್ ದಲ್ ಮೊದಲಾದುದೀಗಳಮಮಾ ಭೀಮಂ ಗಡಾ ನಿಟ್ಟಿಸಲ್ ॥ ೫ ॥

ಮೊದಲನೆಯಂ.—ಇದೊ! ನೋಡಿ, ರಾವಣನು!

ಚಂ ॥ ಮಿಸುನಿಯ ಕಾವನಾಂತು ಕರದೊಳ್ ಸೊಗದಿಂ ತಿರುಪುತ್ತೆ ಶಕ್ತಿಯಂ ।
ನಸು ನಿಡಿದಾದ ತನ್ನ ಕುಡು ಕೋರೆಯವಲ್ಗಳನೈದೆ ಕಾಣಿಸು ॥
ತ್ತಸವಸದಿಂದೆ ತೇರ್ಬಿಡುತೆ ರಾಘವನಂ ಸೆರೆ ನೋಡಿ ಕಾಯ್ದಪಂ ।
ಮಿಸುಪುದಯಾದ್ರಿಯೊಳ್ ಪೆಜತಿಯನೀಕ್ಷಿಸಿ ಸೈಸದ ಕೇತುವಂತೆವೋಲ್ ॥ ೬ ॥

ಎರಡನೆಯಂ.—ನೀವಿರ್ವರೂ ರಾಮನನ್ನು ಸಹ ನೋಡಿ—

ಮ ॥ ಎಡಗೆಯ್ಯೊಳ್ ಧನುವಾಂತು ಮತ್ತೆ ಬಲಗೆಯ್ಯೊಲ್ಲುತ್ತಮಂ ನಾರಸಂ ।
ಬಿಡಿದಂದಂದಿರುಪುತ್ತೆ ಭೂಮಿಯೊಳೆ ತಾಂ ಸಿಂದೊಲ್ದು ತೇಜೇರ್ದ್ದ ತ ॥
ನ್ನೆಡೆಗೆಯ್ತುರ್ಪರಿಯಂ ವಿಲೋಕಿಸುತಮಿರ್ದಪ್ಪಂ ಕರಂ ರಾಘವಂ ।
ಕಡುಗೋಪಂಬಡೆದಾಜಿಯಲ್ಲಜುಮೊಗಂ ಕ್ರೌಂಚಾದ್ರಿಯಂ ಕಂಡವೋಲ್ ॥೭॥

ಮೂರನೆಯಂ.—ಹ! ಹ!! ಹ!!!

ಕಂ ॥ ಈರ್ಗೈದುದಲೆಯನೆಸೆದಾ ।
ಸಾರ ಯಮಾಂತಕ ಸಮಾನ ಶಕ್ತ್ಯಾಯುಧಮಂ ॥
ಧೀರಂ ಬಿಲ್ಲಾಣಂ ರಘು ।
ವೀರಂ ನಗುತಿದೆ ಕೊಳೀಗಳಿರ್ಕ್ಕಡಿಗೆಯ್ದಂ ॥ ೮ ॥

ಮೊದಲನೆಯಂ.—

ಕಂ ॥ ಬರಿದಾಗುತೆ ಶಕ್ತ್ಯಾಯುಧ ।
ಮುರುಳಲ್ಕೀಕ್ಷಿಸಿ ಕೆರಳ್ದು ಕಿಸುಗಣ್ಣಿಂ ನಿ ॥
ರ್ಜರ ರಿಪು ರಾಜಂ ಸರಳ್ಗಳ ।
ಸರಿಯಂ ರಘುವರನ ಮೇಲೆ ಕಱೆಯುತ್ತಿರ್ಕುಂ ॥ ೯ ॥

ಎರಡನೆಯಂ.—ಅಹಹ! ರಾಮನ ಕಾಂತಿಯು—

ಕಂ ॥ ರಾವಣ ಧಾರಾಧರದಿಂ ।
ದೀವರ್ಪ ಕಲಂಬ ಧಾರೆಗಳ್ ತೋಱುಗುಂ ರಾ ॥
ಜೀವಾಕ್ಷಂ ರಾಮನೊಳಹ ।
ಹಾ! ವೃಷಭನ ಮೇಲುರುಳ್ವ ನೀರ್ಪನಿಗಳವೋಲ್ ॥ ೧೦ ॥

ಮೂರನೆಯಂ.—ಇವನಿವನು—

ಚಂ ॥ ಮೊನೆ ಮೊದಲೊಳ್ ವರೂಥನುನಡರ್ದು ಸುವರ್ಣಮಯಂ ಮಹಾ ಶರಾ ।
ಸನಮನೆಯಾಂತು ಕೂರ್ಗಣೆಗಳಂ ಬಿಡುತ್ತೈತರುತಿರ್ಪ ರಾಕ್ಷಸೇಂ ॥
ದ್ರನನಿದಿರಾಂತು ನೋಡ ನಡೆಗುಂ ನಡೆಯಿಂ ರಘು ರಾಮಚಂದ್ರನು ।
ರ್ಕಿನ ಗಜ ರಾಜನೊಳ್ ಗಮಿಪ ಕೂರ್ಪನೆ ಸಿಂಗಮದೆಂತುಟಂತೆವೋಲ್॥ ೧೧ ॥

ಎಲ್ಲರೂ.—ಎಲೈ! ಇದೇನು! ಈ ಸ್ಥಳವು ಪ್ರಭೆಯಿಂದ ಪ್ರಕಾಶಿಸುತ್ತಿರುವುದು!

ಮೊದಲನೆಯಂ.—ಓ! ಯುದ್ಧ ವಿಷಯದಲ್ಲುಂಟಾದ ಸಂದೇಹದಿಂದ ಮಹೇಂದ್ರನು ಮಾತಲಿಯೊಡನೆ ರಥವನ್ನು ಕಳುಹಿಸಿರುವನು.

ಎರಡನೆಯಂ.—ಬಳಿಗೆ ಬಂದ ಮಾತಲಿಯನ್ನು ಕಂಡು ಆತನ ಮಾತಿನಂತೆ ರಾಮನು ರಥವನ್ನು ಹತ್ತಿದನು.

ಮೂರನೆಯಂ.—ಇವನಾದರೆ—

ಕಂ ॥ ದನುಜ ವಿನಾಶಕಮಮೃತಾ ।
ಶನ ವರ ಜಯದರ್ಪ ದೇಶಿಕಮೆನಿಪ್ಪೀ ಸ್ಯಂ ॥
ದನದೊಳ್ ಮೆಱೆಗುಂ ಮುನ್ನಾ ।
ಪಿನಾಕಿ ಮೂವೂಱ ಮೊನೆಯೊಳೆಂತಾ ತೆಱದಿಂ ॥ ೧೨ ॥

ಮೊದಲನೆಯಂ.—ಓಹೊ! ಜಗಳವು ದೊಡ್ಡದೇ ಆಯಿತು.

ಕಂ ॥ ಕಣೆಯಂ ತುಂಡರಿಸುವ ಮಾ ।
ರ್ಗಣಂಗಳಂ ಬಿಡುವ ರಾಮ ರಾವಣರ ಮಹಾ ॥
ರಣಮಂ ನಿರುಕಿಸಿ ನಿಂದುದು ।
ಪೊಣರ್ಪುದುಮಂ ಮಱೆದು ವಾನರಾಸುರ ಸೈನ್ಯಂ ॥ ೧೩ ॥

ಎರಡನೆಯಂ.—ಆಶ್ಚರ್ಯವು!

ಚಂ ॥ ವಿರುಪ ರಥಂಗಳೊಳ್ ಕುಳಿತುಮೆಲ್ಲೆಡೆಯಂ ತೊಳಲುತ್ತೆ ಶೀಘ್ರದಿಂ ।
ಸರಳ್ಗಳನೆಚ್ಚೆಯೆಚ್ಚೆ ಮುಳಿಸಿಂ ಮಲೆವೀ ವರ ವೀರರಿರ್ವರುಂ ॥
ಕರಮುರಿಯಲ್ ಸ್ವರಸ್ಮಿಯಿನಿಳಾತಳಮಂ ದಹಿಸಲ್ಕೆ ಬಾನೊಳೊ ।
ರ್ಸರದೆ ತಿಱುಂಗುತಿರ್ಪೆರಡು ನೇಸರವೋಲ್ ಮೆರೆಯುತ್ತಮಿರ್ದಪರ್ ॥ ೧೪ ॥

ಮೂರನೆಯಂ.—ನೀವಿರ್ವರೂ ರಾವಣನನ್ನು ನೋಡಿ—

ಮ ॥ ಕಡು ಕೂರಾದ ಸರಳ್ಗಳಂ ಸೆಳೆದಿಸುತ್ತಶ್ವಂಗಳಂ ನೋಯಿಸು ।
ತ್ತೆಡೆಗೊಂಡೊಪ್ಪುಗುಮಾ ಪತಾಕಿಕೆಯುಮಂ ಪಾಱಿಗ್ಗಿಯುದ್ಧ ಬಲ್ಪಿಂದೆ ಮೇ ॥
ಣ್ಪಿಡಿದುಂ ಗರ್ವಮನತ್ತಣಿಂದೆ ಬಿಡುತಂ ಬಾಣಂಗಳಂ ರಾಮನೊಳ್ ।
ದಡಿಗಂ ಬೊಬ್ಬಿರಿಗುಂ ಕುಲುಂಕಿ ನಲಿಗುಂ ನೀಟ್ಸಿಂ ಸಮುಂತೇಡಿಕುಂ ॥ ೧೫ ॥

ಮೊದಲನೆಯಂ.—ಆಹ! ಈ ರಾಮನಾದರೆ—

ಮ ॥ ತನುಗೆಯ್ದೆಯ್ದೆ ಶರೀರಮಂ ಮನದೊಳೀಷಚ್ಛಾಂತಿಗೊಂಡೊರ್ಮೆ ಬ ।
ರ್ಪನಿತುಂ ಕೂರ್ಗ್ಗಣೆಗಂಡು ಮಾರ್ಮಸಗಿ ಚೆಂಗಣ್ದಾಳ್ದಿ ಮಧ್ಯಾಹ್ನ ಸೂ ॥
ರ್ಯನವೋಲ್ ರಾಜಿಸಿ ತಾನೆ ವೀರನೆನಿಸಿರ್ದುಂ ಮಾತಲೀ ವಾಕ್ಯದಿಂ ।
ದಿನಿಸಣ್ಮಂ ತಳೆದೆಚ್ಚನಲ್ತೆಯಿದೆಕೊಳ್ ದಿವ್ಯಾಸ್ತ್ರಮಂ ಪಾರ್ಥಿವಂ ॥ ೧೬ ॥

ಎರಡನೆಯಂ.—ಆಹ! ಈಯಸ್ತ್ರವು—

ಮ ॥ ರವಿ ವೈಶ್ವಾನರಯುಕ್ತ ತೈಕ್ಷ್ಣ್ಯ ವನಿತಂ ಸಂದೊಪ್ಪುವೀ ತೀಕ್ಷ್ಣಧಾ ।
ರೆ ವಲಂ ರಾಘವ ಬಾಹು ವೇಗದೆ ರಯಂಬೆತ್ತೆಯ್ದುಗುಂ ನೋಡ ದಾ ॥
ನವ ಚಕ್ರೇಶ್ವರನಂ ತಗುಳ್ದು ತಲೆಯಂ ಸೆಂಡಾಡಿಯಿಾಗಳ್ ಸಶೀ ।
ಘ್ರವೆಸಲ್ ಬರ್ಕುಗುಮಲ್ತೆ ಆಹ ಮಗುಟ್ದಿಂ ಸೇರಲ್ ಸರಾಧೀಶನಂ ॥ ೧೭ ॥

ಎಲ್ಲರೂ.—ಭಲೆ! ರಾವಣನು ಕೆಳಗೆ ಬಿದ್ದನು.

ಮೊದಲನೆಯಂ.—

ಕಂ ॥ ಖಳನಳಿದುದನೀಕ್ಷಿಸಿ ಪೂ ।
ಮಳೆಗಱೆಗುಂ ಗಳ ವಿಯತ್ತಳಂಗಳಿನಮರರ್ ॥
ವೊಳಗುಗುಮುಮಾ ದಿವದಿಂ ।
ದಳವಿಂದಂ ಸಮಧುರಂ ಸಕುಶಲಂ ಪಱೆಗಳ್ ॥ ೧೮ ॥

ಎರಡನೆಯಂ.—ಆಗಲಿ! ದೇವಕಾರ್ಯವು ಸಿದ್ಧಿಸಲಿ!

ಮೊದಲನೆಯಂ.—ಸರಿ, ಬನ್ನಿ. ಸರ್ವ ಹಿತನಾದ ಶ್ರೀರಾಮಚಂದ್ರನನ್ನು ನಾವೂ ಮನ್ನಣೆಗೊಳಿಸುವ.

ಇಬ್ಬರೂ.—ಅಹುದು, ಇದು ಮೊದಲನೆಯ ಕೆಲಸವು. (ಎಂದೆಲ್ಲರೂ ತೆರಳುವರು)

(ಇದು ವಿಷ್ಕಂಭಕವು)*

* ಈಯೆಡೆಯಲ್ಲಿ 'ಅರನೆಯಂಕವು' ಎಂದು ಕೆಲವು ಪಾಠಗಳಿರುವುವು.

[ಬಳಿಕ ರಾಮನು ಪ್ರವೇಶಿಸುವನು]

ರಾಮ.—

ಮ ॥ ಸರಳಿಂ ನೋಯಿಸಿ ನಾಡೆ ನೆರ್ಗಿ ರಣದೊಳ್ ರಾತ್ರಿಂಚರಾಧೀಶನಂ ।
ದೊರೆಯಂ ಮಾಡಿ ನಿಜಂ ವಿಭೀಷಣನನೀ ಲಂಕಾಪುರಕ್ಕಿಂತುಟು ॥
ತ್ವರಿಸಿದೆರ್ೂೕಳ್ಗಳಿನೇ ವಿಶೇಷ ಬಲದಿಂದಪ್ಪಾ ಪ್ರತಿಜ್ಞಾಬ್ಧಿಯಂ ।
ತೆರಳ್ವಿಂ ಸಂತವಿಸಲ್ಕೆ ಬಂಧು ಸಹಿತಾಂ ಮತ್ಕಾಂತೆಯಂ ಸೀತೆಯಂ ॥ ೧೯ ॥

ಲಕ್ಷ್ಮಣ.—(ಬಂದು) ಜಯವಾಗಲಾರ್ಯನಿಗೆ! ಪೂಜ್ಯೆಯಾದ ದೇವಿಯು ಆರ್ಯನ ಬಳಿಗೆ ಬರುತ್ತಿರುವಳು.

ರಾಮ.—(ಯೋಚಿಸಿ) ವತ್ಸ! ಲಕ್ಷ್ಮಣ—

ಕಂ ॥ ಪಗೆವನೆಯೊಳಿರ್ದಳಾಯೆಡೆ ।
ತಗದುದು ನೆಗಳ್ದಿರಲುಮಿರ್ಕುಮಾಕತದವಳಾ ॥
ನಗೆ ಮೊಗಮುಂ ನೋಳ್ಪೆನ್ನಯು ।
ಮಿಗೆ ಧೃತಿಯಂ ತಡೆಯುತಿರ್ಕ್ಕುಗುಂ ಸಿಟ್ಟೀಗಳ್ ॥ ೨೦ ॥

ಲಕ್ಷ್ಮಣ.—ಆರ್ಯನಾಜ್ಞೆಯಂತಾಗಲಿ. (ಹೋಗುವನು)

ವಿಭೀಷಣ.—ಜಯವಾಗಲಾರ್ಯನಿಗೆ! ದೇವ—

ಕಂ ॥ ನಿನ್ನಯ ತೋಳ್ಗಳ ಬಲ್ಮೆಯಿ ।
ನುನ್ನತ ಸಂಕಟಮನಳಿದ ನಿನ್ನರೆಮೆಯ್ಯಳ್ ॥
ನಿನ್ನ ಹಸಾದದೆ ಸೇರ್ದಳ ಗಳ ।
ನಿನ್ನಂ ಮುನ್ ಖಳ ಕುಲಚ್ಯುತ ಶ್ರೀಯುಂತಿರೆವೋಲ್ ॥ ೨೧ ॥

ರಾಮ.—ವಿಭೀಷಣ! ರಜನಿಚರಾವಮರ್ಶನದಿಂದ ದೋಷಯುಕ್ತೆಯೂ ಇಕ್ಷ್ವಾಕು ವಂಶಕ್ಕೆ ಕಳಂಕಭೂತೆಯೂ ಆದಾಕೆಯು ಸ್ವಲ್ಪ ಅಲ್ಲಿಯೇ ಇರಲಿ. ಲಂಕಾಧಿಪ! ತಾತನೂ ಅರಸನೂ ಎನಿಸಿದ ದಶರಥನ ಸಲುವಾಗಿ ಅವಳು ನನ್ನನ್ನು ನೋಡುವುದು ಅಯುಕ್ತವು. ಮತ್ತು—

ಕಂ ॥ ಅಳಿಗಜ್ಜಮನೊಲಿದದಜಿರೊಳ್ ।
ಮುಳುಂಗುವವನಂ ನಿವಾರಿಸುವನಾವೊನವಂ ॥
ಗೆಳೆಯನೆ ಅಂತಲ್ಲದವಂ ।
ತಿಳಿಯಲ್ ಪಗೆಯಲ್ತೆ ಪೇಟಿ ಲಂಕಾಧೀಶಾ ॥ ೨೨ ॥

ವಿಭೀಷಣ.—ಸ್ವಾಮಿಯು ಪ್ರಸನ್ನನಾಗಬೇಕು.

ರಾಮ.—ಇನ್ನುಮೇಲೆ ನೀನು ನನ್ನನ್ನು ಪೀಡಿಸಬಾರದು.

ಲಕ್ಷ್ಮಣ.—(ಪ್ರವೇಶಿಸಿ) ಆರ್ಯನಿಗೆ ಜಯವಾಗಲಿ! ಪೂಜ್ಯನ ಅಭಿಪ್ರಾಯವನ್ನು ಕೇಳಿ ಆರ್ಯೆಯು ಅಗ್ನಿಪ್ರವೇಶಾರ್ಥವಾಗಿ ಆರ್ಯನಾಜ್ಞೆಯನ್ನು ಪ್ರತೀಕ್ಷಿಸುತ್ತಿರುವಳು.

ರಾಮ.—ಲಕ್ಷ್ಮಣ! ಈ ಹದಿಬದೆಯ ಬಗೆಯಿರವನ್ನು ಅನುಸರಿಸು.

ಲಕ್ಷ್ಮಣ.—ಆರ್ಯನಾಜ್ಞೆ! (ಎಂದು ಬಂದು) ಅಯ್ಯೋ! ಕಷ್ಟವು.

ಕಂ ॥ ಸುಡಿಗೊಂಡತ್ತಿಗೆ ವಿಾಸಲ್ ।
ನಡೆವಳಿಯಂ ಕಂಡು ಮತ್ತಮಣ್ಣನ ಬೆಸನಂ ॥
ಪಿಡಿದೆನ್ನ ಜೀವಜಿ ಕೆಳೆಗಳ ।
ನಡುಸಿಲ್ಕಲಕುತ್ತಮಿರ್ಕುಮುಕಟಾ ಏವೆಂ ॥ ೨೩ ॥

ಯಾರಲ್ಲಿ?

ಹನೂಮಾನ್.—(ಬಂದು) ಕುಮಾರನಿಗೆ ವಿಜಯವಾಗಲಿ!

ಲಕ್ಷ್ಮಣ.—ಹನೂಮಾನ್! ನಿನಗೆ ಶಕ್ತಿಯಿರುವುದಾದರೆ ಆರ್ಯನು ಹೀಗೆ ಅಪ್ಪಣೆ ಮಾಡುತ್ತಿರುವನು.

ಹನೂಮಾನ್.—ಈ ವಿಷಯದಲ್ಲಿ ಕುಮಾರನು ಯೋಚಿಸುವುದೇಕೆ?

ಲಕ್ಷ್ಮಣ.—ನನ್ನ ಯೋಚನೆಯು ವ್ಯರ್ಥವಾದುದು; ಅಥವಾ, ಆರ್ಯನ ಮನೋವೃತ್ತಿಯನನುಸರಿಸುವವರಲ್ಲವೆ! ಸರಿ, ನಡೆ, ಹೋಗುವೆವು.

ಹನೂಮಾನ್.—ಕುಮಾರನಪ್ಪಣೆಯಂತೆಯೇ. (ಹೋಗುವರು)

ಲಕ್ಷ್ಮಣ.—(ಬಂದು) ಪೂಜ್ಯನು ಪ್ರಸನ್ನನಾಗಬೇಕು! ಅಚ್ಚರಿಯಚ್ಚರಿಯು! ಆರ್ಯನೆ! ಅರಳಿದ ತಾವರೆಯ ಸರಕ್ಕೆ ಜೋಡಿಯಾದ ಆರ್ಯೆಯಾದರೆ—

ಕಂ ॥ ಬರಿದೆಸಗಿ ನಿನ್ನ ಜಸಮಂ ।
ತೊರೆವುತೆ ಬಾಜ್ವಾಸೆಯಂ ದಲೀಗಳ್ ಪುಗುಗುಂ ॥
ಉರಿದುರ್ಕುವ ಕಿರ್ಚಂ ತಾ ।
ಮರೆ ಬನನುನದೆಂತುಟಂಚೆಯಂತುಟು ನಲವಿಂ ॥ ೨೪ ॥

ರಾಮ.—ಆಶ್ಚರ್ಯವಾಶ್ಚರ್ಯವು! ಲಕ್ಷ್ಮಣ! ನಿರೋಧಿಸು, ನಿರೋಧಿಸು!

ಲಕ್ಷ್ಮಣ.—ಆರ್ಯನಾಜ್ಞೆ! (ಹೋಗುವನು)

ಹನೂಮಾನ್.—(ಬಂದು) ಸ್ವಾಮಿಗೆ ಜಯವಾಗಲಿ!

ಕಂ ॥ ವಿಾಸಲ್ದೇವಿಯುರೀಗಳ್ ।
ಕೇಸುರಿವೊಕ್ಕಮುಮ ತೋರ್ವುಗೆಡದೆಯೆ ಪೊಳೆಪಿಂ ॥
ಸಾಸಿರ್ಮಡಿ ಮಿಕ್ಕು ಕರಂ ।
ಭಾಸಿಕುಗುಂ ಪುಟನುನಾಂತ ಪೊನ್ನಿನ ತೆಜಿದಿಂ ॥ ೨೫ ॥

ರಾಮ.—(ವಿಸ್ಮಯದಿಂದ) ಏನು! ಏನು!

ಲಕ್ಷ್ಮಣ.—(ಪುಗುತಂದು) ಅಹಹಾ! ಅಚ್ಚರಿಯು!

ಸುಗ್ರೀವ.—(ಒಳಪೊಕ್ಕು) ಸ್ವಾಮಿಗೆ ವಿಜಯವಾಗಲಿ!

ಕಂ ॥ ಅರರೆ ಅದಾವನಿವಂ ಕಾ ।
ಲ್ಗೆರಗಲ್ಕುಚಿತ ಸ್ವರೂಪನಿದೆ ಕೊಳ್ ಶುಭಮಿ ॥
ರ್ಪರಗುವರಿ ಸೀತೆವಿಡಿದೆ ।
ಯ್ತುರುತಿರ್ದಪನಲ್ತೆ ಅಗ್ಗಿಯತ್ತಣಿನೀಗಳ್ ॥ ೨೬ ॥

ಲಕ್ಷ್ಮಣ.—ಓಹೊ! ಭಗವಂತನಾದ ಅಗ್ನಿದೇವನು ಪೂಜ್ಯೆಯನ್ನು ಮುಂದು ಮಾಡಿಕೊಂಡು ಇತ್ತಲಾಗಿಯೇ ಬರುತ್ತಿರುವನು.

ರಾಮ.—ಅಹುದು. ಈತನು ಪೂಜ್ಯನಾದ ಯಜ್ಞಪುರುಷನು. ನಡೆಯಿರಿ, ಹತ್ತಿರ ಹೋಗುವೆವು. (ಎಂದೆಲ್ಲರೂ ಮುಂದೆ ಹೋಗುವರು)

(ಆಮೇಲೆ ಸೀತೆಯನ್ನು ಎತ್ತಿಕೊಂಡು ಅಗ್ನಿಯು ಪ್ರವೇಶಿಸುವನು)

ಅಗ್ನಿ.—ಈತನು ಭಗವಂತನಾದ ನಾರಾಯಣನು. ದೇವ! ಜಯವಾಗಲಿ!

ರಾಮ.—ಭಗವನ್! ನಿನಗೆ ನಮಸ್ಕಾರವು.

ಅಗ್ನಿ.—ದೇವೇಶನು ನನಗೆ ನಮಸ್ಕಾರವನ್ನು ಮಾಡಬಾರದು.

ಕಂ॥ ಪುರುಷೋತ್ತಮ ಕರುಣಾ ನಿಧಿ ।
ಅರಸಾ ಸ್ವೀಕರಿಸ ಸಕಲ ಭೂವಿನಮಿತೆಯಂ ॥
ಕರೆಯಿಲಿಯಂ ಸುಚರಿತೆಯಂ ।
ನಿರುಪಮೆಯಂ ಮೇಣ್ ಪುನೀತೆಯಂ ಜಾನಕಿಯಂ ॥ ೨೭ ॥

ಮತ್ತಂ—

ಕಂ॥ ಈ ನಿಮಿ ವಂಶೋದ್ಭವೆಯಂ ।
ಜಾನಕಿಯಂ ಲೋಕ ಮಾತೆ ಲಕ್ಷ್ಮಿಯೆನುತ್ತುಂ ॥
ನೀನಱಿಯೈ ತಾನೀಗಳ್ ।
ಮಾನುಷ ವಪುವಿಂದೆ ಸಾರ್ದಪಳ್ ಗಡ ನಿನ್ನಂ ॥ ೨೮ ॥

ರಾಮ.—ಅನುಗೃಹೀತನಾದೆನು.

ಕಂ॥ ಭಗವಂತ ಹವ್ಯವಾಹನ ।
ಮೃಗಾಕ್ಷಿಯಿಾ ಸೀತೆ ಪೂತೆಯೆಂಬುದನಱಿಡುಂ ॥
ಜಗದೊಂದೊಪ್ಪಿಗೆಗಾಗಿಯೆ ।
ಮಿಗೆ ಮನದಂದಿಂತುಟೀಗಳೆಸಗಿದೆನಕ್ಕುಂ ॥ ೨೯ ॥

(ತೆರೆಯಲ್ಲಿ ದೇವ ಗಂಧರ್ವರು ಗಾನ ಮಾಡುವರು)

ಮೂರು ಲೋಕಗಳಿಗೆ ಕಾರಣನಾದ ಭಗವಂತ ನಾರಾಯಣನಿಗೆ ನಮಸ್ಕಾರವು!

ಮ॥ ಬಿದಿ ತಾಂ ನಿನ್ನೆರ್ದೆ ಮೇದಿನೀತ್ರಯ ವಿಭೂ ರುದ್ರಂ ನಿನತ್ತಾಗ್ರಹಂ ।
ಬಿದು ನೇಸರ್ ನಿನತಚ್ಚಿಗಳ್ ಸುರಪತೀ ತ್ವಜ್ಜಿಹ್ವೆ ವಾಗ್ದೇವಿ ನೀಂ ॥
ತ್ರಿದಶಜ್ಯೇಷ್ಠ ಸುರೇಂದ್ರ ನಿರ್ಜರರುಮಂ ಮೂಲೋಕಮಂ ಗೆಯ್ದುವಂ ।
ಸದಯಾ! ಸೀತೆಯಿವಳ್ ಸರೋಜಗೃಹೆ ನೀಂ ಶ್ರೀಶಂ ಗಡಾ ನಿಕ್ಕುವಂ ॥ ೩೦ ॥

(ಮರಳಿ ತೆರೆಯುಲ್ಲಿ ಇತರರು ಗಾನ ಮಾಡುವರು)

ಮ॥ ಜಲದೊಳ್ ಭೂತಲಮುಬ್ಬಿರಲ್ ಗಳ ವರಾಹಾಕಾರದಿಂದೆತ್ತಿದೈ ।
ಸಲವಿಂದಾಹ ಅಡಂಗಿತಲ್ತೆ ನಿನತಾ ಮೂವಜ್ಜೆಯೊಳ್ ಮೂಜಗಂ ॥
ಸಲೆ ಸೈತಿಂತುಟು ನೀಂ ತ್ವದಿಚ್ಛೆಗೊಲಿದಾ ರೂಪಿಂದೆಯಿಾ ಯುದ್ಧದೊಳ್ ।
ಖಲನಂ ಕೊಂದು ಸುರರ್ಕಳಂ ಸಲಪಿದಂತಿಲ್ಲಿನ್ನುಮಿಾ ದೇವಿಯಂ ॥ ೩೧ ॥

ಅಗ್ನಿ—ಭದ್ರಮುಖ! ಇದೊ! ದೇವತೆಗಳು ದೇವರ್ಷಿಗಳು ಸಿದ್ಧರು ವಿದ್ಯಾಧರರು ಗಂಧರ್ವರು ಮುಂತಾಗಿ ಸರ್ವರೂ ತಮ್ಮ ವೈಭವಂಗಳಿಂದ ನಿನ್ನನ್ನು ಕೀರ್ತಿಸುತ್ತಿರುವರು.

ರಾಮ.—ಅನುಗೃಹೀತನಾದೆನು.

ಅಗ್ನಿ.—ಭದ್ರಮುಖ! ಪಟ್ಟಾಭಿಷೇಕಾರ್ಥವಾಗಿ ಹೀಗೆ ಬಿಜಯ ಮಾಡಿಸಬೇಕು.

ರಾಮ.—ಭಗವಂತನಾಜ್ಞೆ! (ತೆರಳುವರು)

(ತೆರೆಯಲ್ಲಿ)

ಜಯವಾಗಲಾರ್ಯನಿಗೆ! ವಿಜಯವಾಗಲಿ ಸ್ವಾಮಿಗೆ! ಶುಭವಾಗಲಿ ಮಂಗಳಾಂಗನಿಗೆ! ಮಹಾರಾಜನಿಗೆ ಮಂಗಳವಾಗಲಿ! ರಾವಣಾಂತಕನಿಗೆ ಕೀರ್ತಿ ವೆಗ್ಗಳಿಸಲಿ! ಆಯುಷ್ಮಂತನಿಗೆ ಚಿರಜೀವಿತವಾಗಲಿ!

ವಿಭೀಷಣ.—ಈತನು, ಈ ಮಹಾರಾಜನು—

ಕಂ॥ ಧುರದೊಳ್ ಶಪಥಾಬ್ಧಿಯನು ।
ತ್ತರಿಸೀಗಳ್ ಪಾಪ ರಹಿತೆ ದೇವಿಯ ಸಹಿತಂ ॥
ಸುರರನಿಬರಿನಭಿಷೇಕಮ ।
ನಿರದಾಂತೆಸೆದಪ್ಪನಮಲ ನಭದೊಳ್ ಪೆಱೆವೋಲ್ ॥ ೩೨ ॥

ಲಕ್ಷ್ಮಣ—ಆಶ್ಚರ್ಯವು ಆರ್ಯನ ವೈಷ್ಣವ ತೇಜಸ್ಸು!

ಕಂ॥ ಯಮ ವರುಣ ಕುಬೇರೇಂದ್ರಾ ।
ದ್ಯಮರ ಗಣಂ ಬರಿದು ಮೆಱೆಗುಮಯ್ಯನ ಮಾತಿಂ ॥
ದಮಮ ಅಭಿಷಿಕ್ತನಾರ್ಯಂ ।
ಸುಮನಸ ರಾಜತ್ವಮಾಂತ ವೃತ್ರಾರಿಯವೋಲ್ ॥ ೩೩ ॥

[ಆಮೇಲೆ ಪಟ್ಟಾಭಿಷಿಕ್ತನಾದ ರಾಮನು ಸೀತೆಯೊಡನೆ ಪ್ರವೇಶಿಸುವನು]

ರಾಮ.—ವತ್ಸ! ಲಕ್ಷ್ಮಣ!

ಮ॥ ಮುಡಿಸೂಲ್ಗಟ್ಟಿಸಿ ಮಂಗಳಾರ್ಥಮೊಲವಿಂ ಭದ್ರಾಸನಂ ಮೆಟ್ಟಿಪಾ ।
ಯೆಡೆ ತಾಯ್ನುಲ್ಮೆಗೆನತ್ತು ಮೇಲ್ಮೆಯೆಸಗಲ್ಕಾಗಳ್ ತೊಡರ್ಪಂದನೋ ॥
ಒಡಲಂ ತೆತ್ತನೊ ದೈವಕಾ ದಶರಥಂ ತಾನಿಂದು ಮೆಯ್ದೋಱು ದ ಮು ।
ಮ್ಮಡಿ ಸುಮ್ಮಾನದೆ ಮಾಡಿದಂ ಮಗುೞ್ದು ಪಟ್ಟಂಗಟ್ಟಿಪುದ್ಯೋಗಮಂ ॥೩೪॥

ಅಗ್ನಿ.—ಮಂಗಳ ಮುಖನೆ! ಮಹೇಂದ್ರನಪ್ಪಣೆಯಂತೆ ಭರತ ಶತ್ರುಘ್ನರಿಂದೊಡಗೂಡಿದ ಪ್ರಜೆಗಳು ನಿನ್ನನ್ನು ಸಾರುತ್ತಿರುವರು.

ರಾಮ.—ಭಗವನ್! ಬಹಳ ಸಂತೋಷವು.

ಅಗ್ನಿ.—ಇದೊ ಮಹೇಂದ್ರಮುಖರಾದ ಅಮೃತಾಶನರು ನಿನಗೆ ಮೇಲ್ಮೆಯನ್ನು ಕೋರುತ್ತಿರುವರು!

ರಾಮ.—ಅನುಗೃಹೀತನಾದೆನು.

ಅಗ್ನಿ.—ಭದ್ರಮುಖ! ಪುನಃ ನಿನಗಿನ್ನಾವ ಪ್ರಿಯವನ್ನೆಸಗುವೆನು?

ರಾಮ.—ಭಗವಂತನು ಪ್ರಸನ್ನನಾಗಿರುವಾಗ ನಾನು ಇದಕ್ಕಿಂತ ಹೆಚ್ಚು ಏನು ಬಯಸುವೆನು?

(ಭರತ ವಾಕ್ಯಂ)

ಕಂ || ಗೋಗಳ್ ರಜಸ್ಸನುಳಿದಿ ।
ರ್ಕೈಗಳ್ ಪರಚಕ್ರಮಿರ್ಕೆ ಶಾಂತಿಯಿನನಿಶಂ ||
ಈಗಳಿನೀ ಯಿಳೆಯನಿತಂ ।
ರಾಗದಿನಾಳ್ಗೆಮ್ಮ ರಾಜಸಿಂಹಂ ನಿರುತಂ || ೩೫ ||

(ಎಲ್ಲರೂ ತೆರಳುವರು)

—ಆರನೆಯಂಕಂ ಸಂಪೂರ್ಣಂ—

ಅಭಿಷೇಕ ನಾಟಕಂ ಸಮಾಪ್ತಂ

ಭದ್ರಂ ಶುಭಂ ಮಂಗಳಂ

ಶ್ರೀಃ

**ಪಂಡಿತ ಬಿ. ನಂಜುಂಡಸ್ವಾಮಿ.**

# ಪತ್ರ ವ್ಯವಹಾರ

[ಸೂಚನೆ.—ಲೇಖಕರ ಅಭಿಪ್ರಾಯಗಳಿಗೆ ಪರಿಷತ್ಪತ್ರಿಕೆಯ ಸಂಪಾದಕರು ಉತ್ತರವಾದಿಗಳಲ್ಲ.]

## 'ಇದೆ', 'ಇವೆ' ಮೊದಲಾದ ಕ್ರಿಯಾರೂಪಗಳ ನಿಷ್ಪತ್ತಿ—ಪ್ರತ್ಯುತ್ತರ

೧. 'ಇದೆ', 'ಇವೆ' ಮೊದಲಾದ ಕೆಲವು ಕ್ರಿಯಾರೂಪಗಳ ವಿಚಾರ—
(ಕ. ಸಾ. ಪರಿಷತ್ಪತ್ರಿಕೆ, XV. ೪ : ಜನವರಿ ೧೯೩೧)

೨. ಇದೆ, ಇವೆ ಮೊದಲಾದ ಕ್ರಿಯಾರೂಪಗಳ ಹುಟ್ಟು ಯಾವುದು ?—
ಲೇಖಕರು : ಶ್ರೀವರ್ಮಾ ವೆಂಕಟೇಶ ಪ್ರಭು (ಕ. ಸಾ. ಪರಿಷತ್ಪತ್ರಿಕೆ, XVI. ೨ : ಜೂಲೈ ೧೯೩೧)

ಮೇಲೆಕಂಡ ಲೇಖನಗಳಲ್ಲಿ ಮೊದಲನೆಯದರೊಳಗೆ ನಾನು ಸ್ಥಾಪಿಸಲು ಹೊರಟ ಅಂಶವನ್ನೂ, ಪ್ರಾಸಂಗಿಕವಾಗಿ ನಿರೂಪಿಸಿದ ಕೆಲವು ಅಭಿಪ್ರಾಯಗಳನ್ನೂ ವಿರೋಧಿಸಿ ಶ್ರೀಮಾನ್ ವೆಂಕಟೇಶ ಪ್ರಭುಗಳು ತಮ್ಮ ಲೇಖನವನ್ನು ಬರೆದಿದ್ದಾರೆ. ನನ್ನ ವಾದದ ಮೇಲೆ ಅವರು ತಂದಿರುವ ಆಕ್ಷೇಪಣೆಗಳಿಗೆ ಸಮಾಧಾನವನ್ನು ಹೇಳುವುದೇ ಈ ಪ್ರತ್ಯುತ್ತರದ ಮುಖ್ಯೋದ್ದೇಶ. ವ್ಯಾಕರಣವನ್ನು ಕುರಿತ ಚರ್ಚೆಗಳು ಶುಷ್ಕವಾಗತಕ್ಕ ಸಂಭವವೇ ಹೆಚ್ಚು. ಆದರೂ ಶ್ರೀಮಾನ್ ಪ್ರಭುಗಳ ಖಂಡನೆಯಲ್ಲಿ ನನ್ನ ಪಕ್ಷವನ್ನು ಬಾಧಿಸುವಷ್ಟು ಕಾರಣಗಳಿಲ್ಲವೆಂದು ಮನವರಿಕೆಯಾದದ್ದರಿಂದಲೂ, ಅವರು ಪ್ರತಿಪಾದಿಸಿರುವ ಅಂಶಗಳಲ್ಲಿ ಹಲವು ಚರ್ಚಾಸ್ಪದವೆಂದು ತೋರಿದ್ದರಿಂದಲೂ ನಾನು ತಟಸ್ಥಭಾವವನ್ನು ವಹಿಸದೆ ಈ ಉತ್ತರವನ್ನು ಕೊಡಬೇಕಾಯಿತು. ಶ್ರೀಮಾನ್ ಪ್ರಭುಗಳ ವಿಮರ್ಶೆಯನ್ನು ಪ್ರೇರಿಸಿದ "ಜಿಜ್ಞಾಸಾ ತೃಪ್ತಿ"ಯೇ ಈಗ ನನ್ನ ಲೇಖನಿಯನ್ನೂ ಚೋದಿಸುತ್ತಿದೆ. ಅವರಿಗೂ ನನಗೂ ಅಭಿಪ್ರಾಯ ಭೇದವು ವಿಶೇಷವಾಗಿ ಉಂಟು; ದೃಷ್ಟಿ ಭೇದವು ಕೂಡ ಉಂಟು. ಆದರೆ ಅವರ ಲೇಖನದಲ್ಲೆಲ್ಲಾ ವ್ಯಕ್ತವಾಗುವ ಸೌಜನ್ಯವನ್ನೂ ಶಾಸ್ತ್ರಪ್ರೇಮವನ್ನೂ ನಾನು ಮೊದಲಲ್ಲಿ ಮನಮುಟ್ಟಿ ಶ್ಲಾಘಿಸದೆ ಇರಲಾರೆ. ಇನ್ನು, ಈ ಲೇಖನದಲ್ಲಿ ನಾನು ತರಬಹುದಾದ ಟೀಕೆ ಖಂಡನೆಗಳು ಶಾಸ್ತ್ರ ವಿಚಾರವನ್ನು ಕುರಿತುವೇ ಹೊರತು ಅವುಗಳ ಉದ್ದೇಶ ವ್ಯಕ್ತಿ ವಿಮರ್ಶೆಯಲ್ಲವೆಂದು ಅವರಿಗೆ ಅರಿಕೆ ಮಾಡಿಕೊಳ್ಳುತ್ತೇನೆ.

ಇದು, ಇವು, ಅದು ಮೊದಲಾದ ನಿರ್ದೇಶಕ ಸರ್ವನಾಮಗಳಿಗೆ (Demonstrative Pronouns) ನಿರ್ಧಾರಣಾರ್ಥದ –ಎ ಪ್ರತ್ಯಯವು ಹತ್ತಿ ಇದೆ, ಇವೆ, ಅದೆ

ಮೊದಲಾದ ಕ್ರಿಯಾ ರೂಪಗಳು ತಲೆದೋರಿರಬೇಕು. ಇವು ಯಾವ ಕ್ರಿಯಾ ಧಾತುವಿ ನಿಂದಲೂ (ಉದಾ.—ಇರ್) ಹುಟ್ಟಿರಲಾರವು—ಎನ್ನುವುದೇ ನನ್ನ ವಾದದ ಸಾರಾಂಶ. ಶ್ರೀಮಾನ್ ಪ್ರಭುಗಳ ಅಭಿಪ್ರಾಯವು ಇದಕ್ಕೆ ಪೂರ್ಣ ವಿರುದ್ಧವಾಗಿದೆ. ಅವರ ಮತದಂತೆ, 'ಇದೆ' ಮೊದಲಾದ ರೂಪಗಳು ಸರ್ವನಾಮಗಳಿಂದ ಹುಟ್ಟುವುದು ಅಸಂಭವ; ಇರ್ ಧಾತುವಿನಿಂದ ನಿಷ್ಪನ್ನವಾದ ಇರ್ದಪುದು ಮೊದಲಾದ ಕ್ರಿಯಾಪದ ಗಳಿಂದ ಇವು ಪರಿಣಮಿಸಿರಬೇಕು.

ಶ್ರೀಮಾನ್ ಪ್ರಭುಗಳು ವೈಯಾಕರಣ ಸಂಪ್ರದಾಯವನ್ನು ತುಂಬ ಗೌರವಿಸ ತಕ್ಕವರು; ಅವರ ಲೇಖನವನ್ನು ಓದಿದ ಯಾರಿಗಾದರೂ ಇದು ವೇದ್ಯವಾಗುತ್ತದೆ. ಧಾತುವಿನ ಹಂಗೇ ಇಲ್ಲದೆ, ಸರ್ವನಾಮದಿಂದ ನೇರವಾಗಿ ಒಂದು ಕ್ರಿಯಾಪದವು ಸಿದ್ಧವಾಗುವುದು ಸಂಪ್ರದಾಯಕ್ಕೆ ಅಪರಿಚಿತವಾದ ವಿಷಯ. ನಾನು ಸೂಚಿಸಿರುವ ಈ ಬಗೆಯ ನಿಷ್ಪತ್ತಿ ಶ್ರೀಮಾನ್ ಪ್ರಭುಗಳಿಗೆ ಅಗ್ರಾಹ್ಯವಾಗುವುದಕ್ಕೆ ಅದರ ಸಂಪ್ರದಾಯ ಬಾಹಿರತೆ ಸ್ವಲ್ಪ ಮಟ್ಟಿಗಾದರೂ ಕಾರಣವೆಂದು ತೋರುತ್ತದೆ. ಆದರೆ, ಸರ್ವನಾಮಗಳು ಕ್ರಿಯಾರ್ಥಕಗಳಾಗುವ ಸಂಗತಿ ಇದುವರೆಗೆ ವೈಯಾಕರಣರ ದೃಷ್ಟಿಗೆ ಬೀಳದ ಮಾತ್ರದಿಂದಲೇ ನನ್ನ ನಿಷ್ಪತ್ತಿ ಅಶಾಸ್ತ್ರೀಯವಾಗುತ್ತದೆಯೆ? ಭಾಷೆ ಯಲ್ಲಿರುವ ಪದ ರೂಪಗಳಿಗೆ ನಿಷ್ಪತ್ತಿಯನ್ನು ಕಲ್ಪಿಸುವುದು ವ್ಯಾಕರಣದ ಮುಖ್ಯ ಕಾರ್ಯಗಳಲ್ಲಿ ಒಂದು. ಪ್ರಯೋಗದಲ್ಲಿರುವ ರೂಪಗಳನ್ನು ಶೇಖರಿಸಿ, ವಿಂಗಡಿಸಿ, ಪರಸ್ಪರ ಸಂಬಂಧವನ್ನು ಗಮನಿಸಿ ವೈಯಾಕರಣನು ಅವುಗಳ ನಿಷ್ಪತ್ತಿಯನ್ನು ಊಹಿಸ ಬೇಕು. ಭಾಷೆಯ ಚರಿತ್ರೆ ಗೊತ್ತಿದ್ದರೆ—ಭಾಷೆಯಲ್ಲಿರುವ ವರ್ಣಗಳೂ ರೂಪಗಳೂ ಮೊದಲು ಹೇಗಿದ್ದುವು, ಮುಂದೆ ಹೇಗೆ ತಿರುಗಿದುವು, ಮತ್ತೆ ಹೇಗೆ ಪರಿಣಮಿಸಿದುವು ಎಂದು ಬೇರೆ ಬೇರೆಯ ಕಾಲಗಳಲ್ಲಿ ಭಾಷೆಗಿದ್ದ ಸ್ವರೂಪವು ಗೊತ್ತಿದ್ದರೆ—ಅವನ ತರ್ಕಕ್ಕೆ ಹೆಚ್ಚು ಸಾಧನವು ದೊರೆಯುತ್ತದೆ; ಅವನ ಊಹೆ ದೃಢವಾಗುತ್ತದೆ. ಇಷ್ಟಾದರೂ ಅವನ ಮಾರ್ಗ ಊಹೆಯೇ. ಒಂದು ರೂಪವು ಹೀಗೆಯೇ ಹುಟ್ಟಿತೆನ್ನುವುದನ್ನು ಕಣ್ಣಾರೆ ಕಂಡವರು ಯಾರುಂಟು? ಪ್ರಾಚೀನ ವೈಯಾಕರಣರು ತಮ್ಮ ಸಿದ್ಧಾಂತ ಗಳನ್ನು ಅಧಿಕಾರ ಯುಕ್ತವಾದ ವಾಣಿಯಿಂದ ಸೂತ್ರಿಸಿದ್ದರೂ ಅವರು ಅವಲಂಬಿಸಿದ ಮಾರ್ಗವೂ ಊಹೆಯೇ. ಹಿಂದಿನವರ ಯುಕ್ತಿಗೂ ಪಾಂಡಿತ್ಯಕ್ಕೂ ಪೂರ್ಣ ಗೌರವ ವನ್ನು ಕೊಡೋಣ; ಆದರೆ ಹೊಸ ಅಂಶಗಳು ಗೋಚರಿಸಿ, ಹೊಸ ಬೆಳಕು ನಮ್ಮ ಕಣ್ಣನ್ನು ತೆರೆದಲ್ಲಿ ಅವರ ಸಿದ್ಧಾಂತಗಳನ್ನು ಮೀರಿ ಹೋಗುವುದಕ್ಕೂ ಹಿಂಜರಿಯ ದಿರೋಣ. ಶಾಸ್ತ್ರವು ಬೆಳೆಯುವುದು ಹೀಗೆ ತಾನೆ. ಅಲ್ಲದೆ, ಪ್ರಾಚೀನರು ರೂಪ ನಿಷ್ಪತ್ತಿಯಲ್ಲೂ ಶಬ್ದ ವರ್ಗೀಕರಣದಲ್ಲೂ ಕೆಲವು ಕಡೆಯಾದರೂ ತಪ್ಪು ಮಾಡಿಲ್ಲವೆ? ಸಂಸ್ಕೃತದ ಪಾಣಿನೀಯ ಸೂತ್ರಗಳಿಗೆ ಕೂಡ ಆಧುನಿಕ ವಿಮರ್ಶೆಯ ಕಾವು ತಟ್ಟದೆ ಹೋಗಿಲ್ಲ. ಆದ್ದರಿಂದ ಪ್ರಾಚೀನ ಪ್ರಕ್ರಿಯೆಗಳನ್ನು ಅಂಗೀಕರಿಸದಿದ್ದ ಮಾತ್ರಕ್ಕೆ "ವ್ಯಾಕರಣ ಮರ್ಯಾದೆಯ ಅವಹೇಳನ"ವಾಯಿತೆಂದು ಅಂಜದೆ, ಸಂಪ್ರದಾಯಕ್ಕೆ ಮೆಚ್ಚುವ ನಿಷ್ಪತ್ತಿಗಳನ್ನು ಕ್ಲೇಶಪಟ್ಟಾದರೂ ಹುಡುಕದೆ, ಯುಕ್ತಿ ಸಮ್ಮತವಾದ

ವಿಚಾರ ಸರಣಿಯನ್ನು ಅವಲಂಬಿಸೋಣ. ಹಾಗೆ ನಾವು ಕಂಡುಹಿಡಿಯುವ ನಿಷ್ಪತ್ತಿ ಪ್ರಕ್ರಿಯೆಗಳು ದೊರೆತಿರುವ ಪ್ರಯೋಗಗಳಿಗೆ ಅನ್ವಯಿಸಿ, ಭಾಷೆಯ ಗತಿಗೂ ಚರಿತ್ರೆಗೂ ಅನುಗುಣವಾಗಿ, ವಿಚಾರಕ್ಕೆ ಒಪ್ಪುವಂತಿದ್ದರೆ ಸರಿ.

ಇನ್ನು ಪ್ರಕೃತ ಚರ್ಚೆಯ ಕಡೆಗೆ ತಿರುಗಬಹುದು. ದ್ರಾವಿಡ ಭಾಷೆಗಳು ಸಂಯೋಜಕ ಭಾಷೆಗಳು (Agglutinative Languages). ಇವುಗಳಲ್ಲಿ ಪ್ರಕೃತಿ ಪ್ರತ್ಯಯಗಳಿಗೆ ನೀರ ಕ್ಷೀರ ಸಂಬಂಧವಿಲ್ಲ; ಅವೆರಡನ್ನೂ ಸುಲಭವಾಗಿ ಪ್ರತ್ಯೇಕಿಸಬಹುದು. ಅಲ್ಲದೆ, ಪ್ರತ್ಯಯಗಳಿಗೂ ಮೊದಲಲ್ಲಿ ಸ್ವತಂತ್ರವಾದ ಅರ್ಥ ಪ್ರಯೋಗಗಳಿದ್ದುವು. ಈ ಅಂಶವನ್ನು, ದ್ರಾವಿಡ ಭಾಷೆಗಳಲ್ಲಿ ಸರ್ವನಾಮ ಪ್ರಕೃತಿಗಳೇ ಯಥಾ ಸಂಭವವಾಗಿ ಆಖ್ಯಾತ ಪ್ರತ್ಯಯಗಳಾಗಿರುವುದರ ಜೊತೆಗೆ ನೆನೆಯಬೇಕು. (ಉದಾಹರಣೆಗೆ, ನಮ್ಮ ಚರ್ಚೆಗೆ ವಿಷಯವಾಗಿರುವ 'ಅವೆ, ಅವೆ' ಎಂಬಿವೇ ಹೊಸಗನ್ನಡದಲ್ಲಿ ವರ್ತಮಾನ ಕಾಲಕ್ಕೆ ನಪುಂಸಕ ಲಿಂಗದ ಪ್ರತ್ಯಯಗಳೂ ಆಗಿಲ್ಲವೆ?) ಇಷ್ಟೇ ಅಲ್ಲ. ಈ ವರ್ಗದ ಭಾಷೆಗಳಲ್ಲಿ ನಿಜವಾದ ಕ್ರಿಯಾ ಪದವಿಲ್ಲವೆಂದೂ, 'ಬಂದನ್' ಎಂಬ ಕ್ರಿಯಾ ಪದಕ್ಕೆ ನ್ಯಾಯವಾಗಿ 'ಬಂದ ಅವನ್' (=ಬಂದ ವ್ಯಕ್ತಿ) ಎಂದು ಮೂಲಾರ್ಥವೆಂದೂ ಭಾಷಾ ತತ್ತ್ವಜ್ಞರು ಹೇಳುತ್ತಾರೆ. ಬಂದುದು, ಬರ್ಪುದು ಮೊದಲಾದುವು ಏಕ ರೀತಿಯಲ್ಲಿ ಕ್ರಿಯಾ ಪದವೂ ಆಗುತ್ತವೆ; ಕೃದಂತವೂ ಆಗುತ್ತವೆ. ಇದೆಲ್ಲವನ್ನೂ ಪರ್ಯಾಲೋಚಿಸಿದರೆ ನನ್ನ ವಾದವು ಭಾಷಾ ಸಂಪ್ರದಾಯಕ್ಕೆ ವಿರುದ್ಧವೆನಿಸಲಾರದು, "ವಸ್ತು ಸ್ಥಿತಿಯನ್ನು ಬಿಟ್ಟು ದೂರ ಹೋಗುವಂತೆ" ತೋರಲಾರದು. ಧಾತುವಿಗೆ ಲಿಂಗ ಪುರುಷ ಸಂಜ್ಞೆಗಳನ್ನು ಕೊಟ್ಟು ಅವನ್ನು ಕ್ರಿಯಾಪದವನ್ನಾಗಿ ಮಾಡತಕ್ಕ ಸರ್ವನಾಮವು ಸ್ವತಂತ್ರವಾಗಿ ನಿಂತು ಕೇವಲ ಅಸ್ತಿತ್ವವನ್ನು ಸೂಚಿಸುವುದು ಅಷ್ಟು ಅಸಂಭವವೆ? ಇದೆ, ಇವೆ, ಅದೆ, ಅವೆ, ಅವನೆ, ಅವಳೆ, ಅವರೆ, *ಇವನೆ, *ಇವಳೆ, *ಇವರೆ ಎಂಬೀ ಕ್ರಿಯಾರ್ಥಕಗಳಿಗೂ ಇದು, ಇವು, ಅದು, ಅವು, ಅವನ್ (ನು), ಅವಳ್ (ಳು), ಅವರ್ (ರು), ಇವನ್ (ನು), ಇವಳ್ (ಳು), ಇವರ್ (ರು) ಎಂಬೀ ನಿರ್ದೇಶಕ ಸರ್ವನಾಮಗಳಿಗೂ ಇರತಕ್ಕದ್ದು "ಬರಿಯ ರೂಪ ಸಾದೃಶ್ಯ"ವಲ್ಲ; ಪೂರ್ಣವಾದ ಅರ್ಥ ಸಾದೃಶ್ಯವೂ ಇದೆ. 'ಇದು' ಎಂಬ ಸರ್ವನಾಮಕ್ಕೆ -ಎ ಎಂಬ ನಿರ್ಧಾರಣಾರ್ಥದ ಪ್ರತ್ಯಯವು ಹತ್ತಿ ಉಂಟಾದ 'ಇದೆ' ಎಂಬ ರೂಪವು ಸಹಜವಾಗಿ ಕ್ರಿಯಾರ್ಥಕವಾಗಬಹುದು. 'ಮನೆ ಇದು' ಎಂದು ನಿರ್ದೇಶಿಸುವಾಗ ಅರ್ಥವನ್ನು ದೃಢಪಡಿಸುವುದಕ್ಕಾಗಿ -ಎ (ಏ) ಎಂಬ ನಿರ್ಧಾರಣಾ (ಅವಧಾರಣಾ) ವಾಚಿ ಹತ್ತಿ 'ಮನೆ ಇದೆ (ಇದೇ)' ಎಂದಾಗುವುದಷ್ಟೆ. ಈ ನಿರ್ಧಾರಣಾ ವಾಚಿಗಳು ಅರ್ಥ ಹೀನವಾಗುವುದು ಬಲು ಸಾಮಾನ್ಯ. ಹಳಗನ್ನಡದ ಅಂತು ಎಂಬುದರ ಸಾಮಾನ್ಯಾರ್ಥವನ್ನೇ ಹೊಸಗನ್ನಡದಲ್ಲಿ 'ಅಂತೆ' (=ಅಂತು+ಎ) ಕೊಡುತ್ತಿದೆ. ಅವನೇಯೆ, ಅದೇಯೆ ಎಂಬ ಕಡೆಗಳಲ್ಲಿ ಎರಡೆರಡುಸಲ ಅವಧರಿಸಿದರೂ ನಮಗೆ ತೃಪ್ತಿ ಇನ್ನೂ ಸಾಲದು. ತಮಿಳಿನಲ್ಲಿ -ಏ ಎಂಬುದು ಎಷ್ಟೋ ಕಡೆ ಹೊಸಗನ್ನಡದ -ಉಕಾರದಂತೆ ಸುಖೋಚ್ಚಾರಣೆಯ ಸಾಧನವಾಗಿಬಿಟ್ಟಿದೆ. ಹೀಗೆಯೇ, 'ಮನೆ ಇದೆ'

ಎಂಬ ವಾಕ್ಯದಲ್ಲಿ ಅವಧಾರಣೆಯ ಭಾವ ಬೇಗ ಲುಪ್ತವಾಗಿರಬೇಕು. ಇನ್ನು, ಈ ವಾಕ್ಯದಲ್ಲಿ ಉಳಿದದ್ದು ನಿರ್ದೇಶನದ ಭಾವ ಮಾತ್ರ. ನಿರ್ದೇಶನದ ಉದ್ದೇಶ ಅಸ್ತಿತ್ವ ಸ್ಥಾಪನೆ ತಾನೆ. ಈ ರೀತಿಯಲ್ಲಿ ಇದೆ ಎಂಬುದು ಕಾಲಕ್ರಮದಲ್ಲಿ ಕೇವಲ ಅಸ್ತಿತ್ವ ವಾಚಕವಾಗುವುದು ಅಶಕ್ಯವಲ್ಲ.—ಈ ವಿವರಣೆ ಸಹಜವೆಂದು ತೋರುವ ಪಕ್ಷದಲ್ಲಿ, ಇದೆ, ಇವೆ ಮೊದಲಾದುವುಗಳ ತಳಕ್ಕೆ ಒಂದು ಧಾತು ಇರತಕ್ಕದ್ದು ಅನಾವಶ್ಯಕ ವಾಗುತ್ತದೆ.

ಇದೆ, ಇವೆ, ಅದೆ, ಅವೆ ಮೊದಲಾದ ಉದಾಹೃತ ರೂಪಗಳೆಲ್ಲವೂ ಪ್ರಥಮ ಪುರುಷವಾಚಕಗಳು. ಮಧ್ಯಮ ಪುರುಷಕ್ಕೂ ಉತ್ತಮ ಪುರುಷಕ್ಕೂ (ಇವ್ರಿ, ಇವ್ನಿ ಎಂಬ ಗ್ರಾಮ್ಯರೂಪಗಳನ್ನು ಬಿಟ್ಟರೆ) ಅದೇ ತೂಕದ ರೂಪಗಳಿಲ್ಲ. "ಇದರಿಂದಲೂ ಇವು ಸರ್ವನಾಮ ಕ್ರಿಯೆಗಳೆಂದು ಹೇಳಲಿಕ್ಕೆ ಬಲ ಸಾಲದು" ಎಂದು ಶ್ರೀಮಾನ್ ಪ್ರಭುಗಳು ನಿರ್ಣಯಿಸುತ್ತಾರೆ. ಆದರೆ ಇದು ಸಂಗತವಲ್ಲ. ಈ ಕ್ರಿಯಾರ್ಥಕಗಳೆಲ್ಲ ನಿರ್ದೇಶಕ ಸರ್ವನಾಮಗಳಿಂದ (Demonstrative Pronouns) ಮಾತ್ರ ಹುಟ್ಟಿವೆ; ವ್ಯವಹಾರದಲ್ಲಿರುವ ಪ್ರತಿಯೊಂದು ನಿರ್ದೇಶಕ ಸರ್ವನಾಮಕ್ಕೂ ಸಂವಾದಿಯಾಗಿ ಒಂದೊಂದು ಕ್ರಿಯಾರೂಪವು ದೊರೆತಿದೆ. ಪ್ರಥಮ ಪುರುಷದ ಸರ್ವನಾಮಗಳು ಮಾತ್ರ ನಿರ್ದೇಶಕಗಳು. ಉತ್ತಮ ಮಧ್ಯಮ ಪುರುಷಗಳ ಆನ್, ನೀನ್ ಮೊದಲಾದುವಕ್ಕೆ ಈ ಪ್ರಯೋಗವಿಲ್ಲ; ಅವು ಕೇವಲ ಪುರುಷ ವಾಚಕಗಳು (Personal Pronouns). ಆದ್ದರಿಂದಲೇ ಕ್ರಿಯಾರ್ಥಕಗಳು ಅವುಗಳಿಂದ ಹುಟ್ಟುವುದು ಅಸಂಭವವಾಯಿತು. ಇವ್ನಿ, ಇವ್ರಿ ಎಂಬ ರೂಪಗಳು ಕೂಡ ಇವನ್, ಇವರ್ ಎಂಬ ನಿರ್ದೇಶಕ ಸರ್ವನಾಮಗಳಿಂದಲೇ ಬಂದಿವೆ.[1] ಇವುಗಳ ಜೊತೆಗೆ ಇವ್ವೀ ಎಂಬ ಉತ್ತಮ ಪುರುಷ ಬಹುವಚನಾರ್ಥದ ರೂಪವೂ ಗ್ರಾಮ್ಯ ಭಾಷೆಯಲ್ಲಿ ಉಂಟೆಂದು ಈಚೆಗೆ ತಿಳಿಯಿತು. ಇದರಂತೆಯೇ ಮಧ್ಯಮ ಪುರುಷದ ಏಕವಚನಕ್ಕೂ ಸದ್ಯಕ್ಕೆ ನಮಗೆ ತಿಳಿಯದ ಒಂದು ರೂಪವಿದ್ದೀತು.

ಇದೆ, ಇವೆ ಮೊದಲಾದುವು ಸರ್ವನಾಮಗಳಿಂದ ನಿಷ್ಪನ್ನವೆನ್ನುವ ಪಕ್ಷದಲ್ಲಿ ಅವುಗಳನ್ನು ಯಾವ ವರ್ಗಕ್ಕೆ ಸೇರಿಸಬೇಕೆಂಬ ಪ್ರಶ್ನೆ ಶ್ರೀಮಾನ್ ಪ್ರಭುಗಳಿಗೆ ತುಂಬ ಚಿಂತೆಯನ್ನು ಕೊಟ್ಟಿದೆ: ಸರ್ವನಾಮಗಳು ನಾಮವಾಚಕಗಳಲ್ಲಿ ಸೇರುವುದರಿಂದ ಈ ರೂಪಗಳನ್ನು "ನಾಮಧಾತು-ಘಟಿತ ಕ್ರಿಯಾಪದ"ಗಳೆಂದು ಕರೆಯಬಹುದಾದರೂ, ಇಲ್ಲಿ ಧಾತು ಯಾವುದು? ಪ್ರತ್ಯಯ ಯಾವುದು? ಹಾಗೆ ವಿಭಜಿಸುವುದು ಕಷ್ಟ ವಾದದ್ದರಿಂದ ಇವನ್ನು "ಅವ್ಯಯ ಕ್ರಿಯಾಪದ"ಗಳೆಂದು ಕರೆದರೆ, ಅವ್ಯಯದ ಮೂಲ

---

1. * ಇವನೆ, * ಇವಳೆ, * ಇವರೆ—ಎಂಬೀ ರೂಪಗಳಿಗೆ ಪ್ರಯೋಗವಿನ್ನೂ ದೊರೆತಿಲ್ಲವಷ್ಟೆ. ಪ್ರಥಮ ಪುರುಷದ ಅರ್ಥವನ್ನು ಕೊಡಲು ಅವನೆ, ಅವಳೆ, ಅವರೆ ಮೊದಲಾದುವು ಇದ್ದುದರಿಂದ, ಮೇಲಿನ ರೂಪಗಳಿಗೆ ಆ ಕೆಲಸವು ಬೀಳದೆ, ಅವುಗಳನ್ನು ಉತ್ತಮ ಮಧ್ಯಮ ಪುರುಷಗಳ ಅರ್ಥದಲ್ಲಿ ಉಪಯೋಗಿಸುವ ಪ್ರವೃತ್ತಿ ಕೆಲವು ಕಡೆ ಹುಟ್ಟಿರಬಹುದು. * ಇವನೆ > ಇವ್ನಿ ; * ಇವರೆ > ಇವ್ರಿ, ಇವ್ವೀ ಎಂಬುದರ ನಿಷ್ಪತ್ತಿ ಇಷ್ಟು ಸುಗಮವಲ್ಲ.

ಶೋಧನೆ ಅಪ್ರಯೋಜಕವಾದ ಕಾರಣ,[2] ಈ ವಾದವೇ ನಿರರ್ಥಕವಾಗುವುದಿಲ್ಲವೆ? ಅಲ್ಲದೆ, ಈ ರೂಪಗಳಲ್ಲಿ ಲಿಂಗ ವಚನ ಭೇದಗಳಿರುವಾಗ[3] ಇವನ್ನು ಅವ್ಯಯವೆಂದು ಕರೆಯುವುದು ತಾನೆ ಹೇಗೆ?—ಈ ನಾಮಕರಣದ ಚರ್ಚೆ ಹೇಗೆ ಫಲಿಸಿದರೂ ನನಗೆ ಚಿಂತೆಯಿಲ್ಲ. ಪ್ರಸಕ್ತ ರೂಪಗಳನ್ನು "ಸರ್ವನಾಮ ಧಾತುಕ"ಗಳೆಂದಾದರೂ ಕರೆಯಿರಿ, "ಅವ್ಯಯ ಕ್ರಿಯಾಪದ"ಗಳೆಂದಾದರೂ ಕರೆಯಿರಿ; ಎರಡೂ ಒಪ್ಪದಿದ್ದರೆ ಸುಮ್ಮನೆ "ಕ್ರಿಯಾರ್ಥಕ", "ಕ್ರಿಯಾ ಸ್ಥಾನೀಯ" (Pro-verb) ಎನ್ನಿರಿ. ನಮಗೆ ಮುಖ್ಯವಾದದ್ದು ಮೂಲವೇ ಹೊರತು ಹೆಸರಲ್ಲ.

ಇದುವರೆಗೆ, ಉದಾಹೃತ ರೂಪಗಳು ಸರ್ವನಾಮಗಳಿಂದ ಬಂದಿಲ್ಲವೆಂಬ ಆಕ್ಷೇಪಣೆಗೆ ಉತ್ತರ ಕೊಟ್ಟದ್ದಾಯಿತು. ಚರ್ಚೆ ಇಲ್ಲಿಗೆ ಮುಗಿಯಲಿಲ್ಲ. ಈ ರೂಪಗಳೆಲ್ಲವೂ 'ಇರ್' ಧಾತುವಿನಿಂದ ನಿಷ್ಪನ್ನವಾದುವೆಂದು ಸ್ಥಾಪಿಸಲು ಶ್ರೀಮಾನ್ ಪ್ರಭುಗಳು ಪ್ರಯತ್ನಮಾಡಿದ್ದಾರೆ. ಅವರ ವಾದವನ್ನು ಇನ್ನು ವಿಮರ್ಶಿಸಬೇಕಾಗಿದೆ.

ಅಸ್ತಿತ್ವವಾಚಿಗಳಾದ ಇನ್ನೂ ಹಲವು ರೂಪಗಳು ಭಾಷೆಯ ಹೊಳೆಯ ಮೇಲೆ ನಿಲುಗಡೆಯಿಲ್ಲದೆ ತೇಲುತ್ತಿವೆ. ಉದಾ.—ಇದ್ಧಾನೆ, ಇದ್ದಾನೆ, ಅಧಾನೆ, ಐದಾನೆ, ಅಯ್ತಿ—ಇತ್ಯಾದಿ. ಇವು ಸಕಲ ಲಿಂಗ ಪುರುಷ ವಚನಗಳಲ್ಲೂ ಉಂಟು. ಶ್ರೀಮಾನ್ ಪ್ರಭುಗಳು ಇವೆಲ್ಲವನ್ನೂ ಸಂಗ್ರಹಿಸಿ, ಇದೆ, ಇವೆ ಮೊದಲಾದುವುಗಳ ಜೊತೆಗೆ ಸೇರಿಸಿ ಎಲ್ಲವಕ್ಕೂ ಇರ್ ಧಾತುವೇ ಮೂಲವೆಂದು ತೋರಿಸಲು ಹೋಗಿದ್ದಾರೆ. 'ಇದೆ, ಇವೆ' ಮೊದಲಾದ ರೂಪಗಳಿಗೆ ಹಳಗನ್ನಡದಲ್ಲೇ ಪ್ರಯೋಗವುಂಟೆಂದು ಗೊತ್ತಾಗಿರುವುದರಿಂದ, 'ಇರುತ್ತದೆ, ಇರುತ್ತವೆ' ಮೊದಲಾದ ಹೊಸಗನ್ನಡದ ಕ್ರಿಯಾಪದಗಳ ಪ್ರಸಕ್ತಿಯನ್ನು ಬಿಟ್ಟು, ಇರ್ದಪುದು, ಇರ್ದಪುವು ಮೊದಲಾದ ಹಳಗನ್ನಡ ವರ್ತಮಾನ ಕ್ರಿಯೆಗಳಿಂದಲೇ ಶ್ರೀಮಾನ್ ಪ್ರಭುಗಳು ಈ ಎಲ್ಲ ರೂಪಗಳನ್ನೂ ಸಾಧಿಸಬೇಕಾಯಿತು. ಅವರು ಕೊಟ್ಟಿರುವ ರೂಪ ನಿಷ್ಪತ್ತಿಗಳನ್ನು ಪರಿಶೀಲಿಸೋಣ:—

---

2. ಆದರೆ, ವೈಯಾಕರಣರು ಅವ್ಯಯಗಳನ್ನು "ಅಖಂಡಕೋಟಿಗೆ" ಸೇರಿಸಿದ ಮಾತ್ರಕ್ಕೆ ಅವುಗಳಲ್ಲಿ ಒಂದಕ್ಕೂ ನಿಷ್ಪತ್ತಿಯೇ ಇಲ್ಲವೆ; ಅದನ್ನು ಹುಡುಕುವುದು ಅಪ್ರಯೋಜಕವೆ? ಕೇಶಿರಾಜನು ಅವ್ಯಯವೆಂದು ಕರೆಯುವ ಎಯ್ದೆ, ಮಿಗೆ ಎಂಬಿವಕ್ಕೆ ಎಯ್ದು, ಮಿಗು ಧಾತುಗಳು ಮೂಲವಲ್ಲವೆ? ಹೊಸಗನ್ನಡದಲ್ಲಿ ಅವ್ಯಯವೆನಿಸುವ ಸಾಕು, ಬೇಕುಗಳು ಸಾಲ್, ಬೇಡು ಧಾತುಗಳಿಂದ ಸಾಲ್ಗುಂ (ಬಹುಶಃ ಸಾಲ್ಕುಂ), ಬೇಡ್ಕುಂ ಎಂಬಿವುಗಳ ಮೂಲಕ ಬಂದಿಲ್ಲವೆ?

3. ಇಲ್ಲಿ ಲಿಂಗ ವಚನ ಭೇದಗಳೆಂದರೆ ಏನು? ಇದೆ, ಇವೆ ಮೊದಲಾದ ರೂಪಗಳಲ್ಲಿ ಪ್ರತಿಯೊಂದರ ಮೂಲವೂ ಬೇರೆ ಬೇರೆ. ಈ ಮೂಲ ಸರ್ವನಾಮಗಳಿಗೆ ಲಿಂಗ ವಚನ ಭೇದಗಳುಂಟು. ಅಷ್ಟೇ ಹೊರತು, ಇದೆ ಎಂಬುದು ಉದಾಹರಣೆಗೆ ಮೂಲರೂಪವಾಗಿದ್ದು, ಅದು ಲಿಂಗ ವಚನ ವಶದಿಂದ ಭಿನ್ನ ರೂಪಗಳಾಗಿ ಪರಿಣಮಿಸುವುದಿಲ್ಲ. ಆದ್ದರಿಂದ ಈ ರೂಪಗಳನ್ನೆಲ್ಲ ಅವ್ಯಯಗಳೆಂದು ಕರೆಯಲು ಏನು ಅಡ್ಡಿ?

ಅಲ್ಲದೆ, ಅವ್ಯಯಗಳಿಗೆ ವಿಭಕ್ತಿ ಭೇದವೂ ಕೂಡದಷ್ಟೆ. ಹಾಗಾದರೆ, ಕೇಶಿರಾಜ ಭಟ್ಟಾಕಳಂಕರಿಬ್ಬರೂ ಅವ್ಯಯ ವರ್ಗದಲ್ಲಿ ಪರಿಗಣಿಸಿರುವ ಆಗಳಿಂಗೆ, ಆಗಳಿನ ಮೊದಲಾದ ರೂಪಗಳಲ್ಲಿ ವಿಭಕ್ತಿಭೇದವಿಲ್ಲವೆ? —ಕನ್ನಡಕ್ಕೆ ಅನ್ವಯಿಸುವಾಗ ಅವ್ಯಯ ಶಬ್ದದ ಅರ್ಥವನ್ನು ಹಿಗ್ಗಲಿಸಬೇಕು, ಇಲ್ಲವಾದರೆ ಅನೇಕ ಪದಗಳನ್ನು ಅವ್ಯಯಗಳ ಪಟ್ಟಿಯಿಂದ ಕಿತ್ತು ಹಾಕಬೇಕು. ಆಗಳಿಂಗೆ, ಆಗಳಿನ ಮೊದಲಾದುವನ್ನು ಭಟ್ಟಾಕಳಂಕನು ಸುಬಂತ ಪ್ರತಿರೂಪಕಾವ್ಯಯಗಳೆಂದು ಕರೆಯಬಹುದಾದರೆ, ಇದೆ, ಇವೆ ಮೊದಲಾದುವಕ್ಕೆ ತಿಙಂತ ಪ್ರತಿರೂಪಕಾವ್ಯಯಗಳೆಂಬ ಹೆಸರನ್ನು ನಾವು ಧೈರ್ಯದಿಂದ ಕೊಡಬಹುದಲ್ಲವೆ?

(ಕ) **ಇರ್ದಪ್ಪನ್** ಎಂಬುದರಿಂದ **ಇವನೆ—**

ಇರ್ದಪ್ಪನ್ > ಇರ್ಧಪನ್ > ಇದ್ಧಪನ್,
ಇದ್ಧಪನ್ > ಇದ್ಧವನ್ > ಇವನ್,
ಇವನ್ + ಎ = ಇವನೆ.

ಇಲ್ಲಿ ಹಲವು ಶಂಕೆಗಳು ಹುಟ್ಟುತ್ತವೆ. ಮೊದಲು, ಇರ್ದಪ್ಪನ್ ಎಂಬುದರ 'ದ'ಕಾರಕ್ಕೆ ಪದಮಧ್ಯದಲ್ಲಿ ಒಮ್ಮಿಂದೊಮ್ಮೆ ಮಹಾಪ್ರಾಣತ್ವವು (Aspiration) ಹೇಗೆ ಬಂದಿತು? 'ಪ್ಪ'ಕಾರದ ದ್ವಿತ್ವವು ಅಳಿದಾಗ ಅದಕ್ಕೆ ನಿಷ್ಕೃತಿ (Compensation) ಯಾಗಿ 'ದ'ಕಾರವು ಮಹಾಪ್ರಾಣವಾಯಿತೆಂದು ಭಾವಿಸುವುದಕ್ಕೆ ಪ್ರತಿಬಂಧಕ ವಾಗಿ ಇರ್ದಪನ್ ಎಂಬ ರೂಪವು ಹಳಗನ್ನಡದಲ್ಲಿಯೇ ಇದೆ. ಅದಿರಲಿ; ಇರ್ಪನ್ ಎಂಬ ಹಳಗನ್ನಡದ ರೂಪವು ನಡುಗನ್ನಡದಲ್ಲಿ ಇಪ್ಪನು > ಇಹನು ಎಂದಾಗು ವಂತೆ ಇರ್ದಪ್ಪನ್ ಎಂಬುದು ಇದ್ದಹನು ಎಂದು ತಿರುಗುವುದು ಸಾಧ್ಯವೇ ಹೊರತು ಅದು ಇದ್ಧವನ್ ಎಂದು ಆಗಿರಲಾರದು; ಇಂಥ ಪ್ರಯೋಗ ಎಲ್ಲಿಯೂ ದೊರೆತಿಲ್ಲ. ಆದರೆ, ಇದೂ ಹೋಗಲಿ. ಈ ಇದ್ಧವನ್ ಎಂಬುದರಿಂದ ಇವನ್ ಹೇಗೆ ಬಂದಿತು? 'ದ್ಧ' ಎಂಬ ಸಂಯುಕ್ತ ವ್ಯಂಜನವು ಗುರುತಿಲ್ಲದಂತೆ ಹೇಗೆ ಮಾಯವಾಯಿತು? ಭಾಷೆಗೆ ವ್ಯತ್ಯಾಸವು ಸಹಜ; ಆದರೆ ಆ ವ್ಯತ್ಯಾಸವು ವಿಶೃಂಖಲವಲ್ಲ. ಲೋಪಾ ಗಮಾದೇಶ ಪ್ರಕ್ರಿಯೆಗಳು ಅರ್ಥಪೂರ್ಣವಾದ ಸಮಂಜಸವಾದ ವಿಧಿಗಳಿಗೆ ಒಳಪಟ್ಟು ನಡೆಯುತ್ತವೆ. ಇಲ್ಲದಿದ್ದರೆ ಭಾಷಾ ಚರಿತ್ರೆ ಒಂದು ಶಾಸ್ತ್ರೀಯ ವಿಷಯವಾಗುತ್ತಿರ ಲಿಲ್ಲ. ಪ್ರಕೃತದ 'ದ್ಧ'ಕಾರವು ಪದಮಧ್ಯದಲ್ಲಿ ಸುರಕ್ಷಿತವಾಗಿದ್ದರೂ ಅದಕ್ಕೆ ಯಾವ ಭಾಷಾ ನಿಯಮದ ಸಿಡಿಲೆರಗಿ ದಗ್ಧವಾಯಿತು? ಇದು ಸ್ಪಷ್ಟವಾದ ಹೊರತು ಈ ವ್ಯುತ್ಪತ್ತಿಯನ್ನು ಅಂಗೀಕರಿಸುವುದು ಅಸಾಧ್ಯ.

(ಖ) **ಇರ್ದಪ್ಪನ್** ಎಂಬುದರಿಂದ **ಐಧಾನೆ, ಅಧಾನೆ** ಇತ್ಯಾದಿಗಳು—

ಇರ್ದಪ್ಪನ್ > ಇಧಾನೆ. ಈ ನಿಷ್ಪತ್ತಿಯನ್ನು ಶ್ರೀಮಾನ್ ಪ್ರಭುಗಳು ವಿಶದ ಪಡಿಸಿಲ್ಲ. ಆದರೂ ಅದನ್ನು ಒಪ್ಪಿಕೊಂಡು—ಇದು ಸರಿಯೆಂಬುದನ್ನು ಮುಂದೆ ತೋರಿಸಿದೆ—ಸಾಗೋಣ:

ಇಧಾನೆ > ಅ (ಉಚ್ಚಾರದ ಬೆಂಬಲಕ್ಕಾಗಿ ಆಗಮ) + ಇಧಾನೆ,
= ಅಇಧಾನೆ > ಐಧಾನೆ > ಐಧನೆ,
> ಐದನೆ (ಗ್ರಾಂಥಿಕ ರೂಪ: 'ಗೋವಿನ ಕಥೆ'ಯಲ್ಲಿ);
ಅಇಧಾನೆ > ಅಧಾನೆ (ಅಕಾರವು ಇಕಾರವನ್ನು ನುಂಗಿತು);
> ಹಾನೆ (ಇಲ್ಲಿ ಅಕಾರಕ್ಕೂ ಲೋಪ).

ಇಲ್ಲಿ, 'ಇಧಾನೆ' ಎಂಬುದನ್ನು ಉಚ್ಚರಿಸುವಾಗ 'ಇ'ಕಾರಕ್ಕೆ ಬೆಂಬಲವಾಗಿ 'ಅ'ಕಾರವು ಪದದ ಆದಿಯಲ್ಲಿ ಬರಲು ಏನು ಕಾರಣ? ಪದಾದಿಯ ಸ್ವರವು ಉರು ಳುವ ಸಂಭವವೇ ಹೆಚ್ಚು. (ಉದಾ.—ಅಧಾನೆ > ಧಾನೆ > ಹಾನೆ.) ದ್ರಾವಿಡ ಭಾಷೆ ಗಳಲ್ಲಿ ಇ, ಉ ಮೊದಲಾದ ಸ್ವರಗಳು ಪದಾದಿಯಲ್ಲಿ ಬೆಂಬಲವನ್ನೇನೋ ಪಡೆಯು

ತ್ತವೆ. ಆದರೆ ಹಾಗೆ ಬರತಕ್ಕ ಆದ್ಯಾಗಮವು ಪ್ರಕೃತೋಚಿತವಾದ ಯ್ ಅಥವಾ ವ್ ಎಂಬ ವ್ಯಂಜನವೇ ಹೊರತು, (ಉದಾ.—ಇದು, ಊರು ಎಂಬುವನ್ನು ಯಿದು, ವೂರು ಎಂದು ಉಚ್ಚರಿಸುವುದನ್ನೂ, ಕೆಲವರು ಹೀಗೆಯೇ ಬರೆಯುವುದನ್ನೂ ಗಮನಿಸಬಹುದು.) ಎಂದಿಗೂ ಸ್ವರವಲ್ಲ; ಅದರಲ್ಲೂ 'ಅ'ಕಾರದಂಥ ವಿಜಾತೀಯ ಸ್ವರವಲ್ಲ. ಹೀಗೆ ಅಇಥಾನೆ ಎಂಬ ರೂಪದ ವ್ಯುತ್ಪತ್ತಿ ಅಸಿದ್ಧವಾಯಿತು.[4]

ಇನ್ನು ಈ ಅಇಥಾನೆ ಎಂಬುದರಿಂದ ಇಕಾರವು ಸಿಡಿದುಹೋಗಿ ಅಥಾನೆ ಮೊದಲಾದ ರೂಪಗಳು ಸಿದ್ಧಿಸುವುದೂ ಹೆಚ್ಚುಕಡಿಮೆ ಇಷ್ಟೇ ಅಸಂಭವ. ಅಕಾರವು ಇಕಾರವನ್ನು ನುಂಗುವುದು ಹೇಗೆ? ಒಂದು ವೇಳೆ, ಐದಾನೆ ಎಂಬುದೇ ಮೂಲ ರೂಪ, ಇದರ ಐಕಾರವು ಅಕಾರವಾಗಿ ಪರಿಣಮಿಸಿತು ಎಂದು ಹೇಳಿದರೆ, ಪದಾದಿಯಲ್ಲಿ ಐಕಾರದಿಂದ ಅಕಾರವು ಹುಟ್ಟುವುದಕ್ಕೆ ಭಾಷೆಯಲ್ಲಿ ಎಲ್ಲೂ ನಿದರ್ಶನವಿಲ್ಲ. ಹೀಗೆ, ಅಥಾನೆ ಮೊದಲಾದ ರೂಪಗಳು ಬಂದ ಬಗೆಯನ್ನು ಒಪ್ಪುವುದೂ ಅಸಾಧ್ಯ. ಇದೇ ತರ್ಕವನ್ನನುಸರಿಸಿ ಇವನೆ, ಇದೆ ಮೊದಲಾದುವುಗಳಿಂದ ಅವನೆ, ಅದೆ ಎಂಬುವನ್ನು ಸಾಧಿಸುವುದೂ ಅಸಮ್ಮತವಾಗುತ್ತದೆ. ಸಾಲದ್ದಕ್ಕೆ, ಇವನೆ, ಇದೆ ಗಳಿಂದ ಹೊರಡಬೇಕಾದ ಅಇವನೆ, ಅಇದೆ ಗಳಿಗೆ ಪ್ರಯೋಗದ ನೆಲೆಯಾದರೂ ಎಲ್ಲಿದೆ?

(ಗ) **ಇರ್ದಪುದು** ಎಂಬುದರಿಂದ **ಇಧೆ, ಇದೆ** ಇತ್ಯಾದಿಗಳು—
ಇರ್ದಪುದು > ಇದ್ದುದು,
ಇದ್ಧುದು > ಇದ್ಧದೆ (ಉದು **ಪ್ರತ್ಯಯಕ್ಕೆ** ಬದಲು–ಅದೆ),
ಇದ್ಧದೆ > ಇಧೆ > ಇದೆ, ಅದೆ.

ಇಲ್ಲಿ, ಮೇಲಿನ ಆಕ್ಷೇಪಣೆಗಳು ಮತ್ತೆ ತಲೆಯೆತ್ತುತ್ತವೆ. ಇದ್ಧುದು, ಇದ್ಧದೆ ಎಂಬ ರೂಪಗಳಿಗೆ ಎಲ್ಲಿಯಾದರೂ ಪ್ರಯೋಗವುಂಟೆ ಎಂದು ಮೊದಲು ಕೇಳಬೇಕಾಗುತ್ತದೆ. ಇದ್ಧುದು ಪ್ರಯೋಗದಲ್ಲಿದ್ದು ಲುಪ್ತವಾಗಿರಬಹುದೆಂದು ವಾದಕ್ಕಾಗಿ ಒಪ್ಪಿದರೂ ಅದರಿಂದ ಇದ್ಧದೆ ಎಂಬುದು ಬರಲು ತಕ್ಕ ಕಾರಣವೇನು? ಹಳಗನ್ನಡದ -ಉದು ಪ್ರತ್ಯಯದ ಸ್ಥಾನದಲ್ಲಿ "ನುಡಿಗನ್ನಡ"ದ -ಅದೆ ಬಂದಿತು ಎಂದರೆ ಸಾಕೆ?

-ಅದೇ ಎಂಬ ಹೊಸಗನ್ನಡದ ಪ್ರತ್ಯಯದ ಹಿಂದೆ -ಉತ್ತ ಎಂಬ ಹೊಸ ವಿಕರಣವೂ ಬರಬೇಡವೆ? ಅಲ್ಲದೆ, ಇದ್ಧವನ್ > ಇವನ್ ಎಂಬ ನಿಷ್ಪತ್ತಿಯಲ್ಲಿರುವಂತೆಯೇ ಇದ್ಧದೆ > ಇದೆ ಎಂಬಲ್ಲಿಯೂ 'ದ್ಧ' ಏಕೆ ಉರುಳಿತೆಂದು ಮತ್ತೆ ಪ್ರಶ್ನೆ ಬರುವುದಿಲ್ಲವೆ? ಕೊನೆಗೆ, ಇದೆ > ಅದೆ ಎಂಬುದನ್ನು ಕುರಿತು ಈ ಮೊದಲೇ ಹೇಳಿದೆ.

ಹೀಗೆ ಹಿಂಡು ಹಿಂಡಾಗಿ ಹುಟ್ಟತಕ್ಕ ಸಂಶಯಗಳನ್ನು ನೋಡಿದರೆ, ಈ ನಿಷ್ಪತ್ತಿಗಳು ಕ್ಲೇಶಜನ್ಯಗಳೆಂದೂ ಭಾಷಾ ಚರಿತ್ರೆಯ ದೃಷ್ಟಿಯಿಂದ ಅನುಪಾದೇಯ

---

4. ಭಾಷೆಯಲ್ಲಿ ಅಇಥಾನೆ ಎಂಬ ರೂಪವೇ ಇದ್ದಂತಿಲ್ಲ; ಇದು ಕೇವಲ ವ್ಯಾಕರಣ ಜನ್ಯವೆಂದು ತೋರುತ್ತದೆ. ಅಯ್ದಾನೆ, ಐದಾನೆ ಎಂಬುವು ರೂಢಿಯ ರೂಪಗಳು; ಹಿಂದೆ ಗ್ರಾಂಥಿಕವಾಗಿದ್ದ ರೂಪ ಐದನೆ. ಇವುಗಳ ಮಾತು ಮುಂದೆ ಬಂದಿದೆ.

ಗಳೆಂದೂ ಹೇಳಬೇಕಾಗುತ್ತದೆ. ಶ್ರೀಮಾನ್ ಪ್ರಭುಗಳು ಈ ವಿವಿಧ ರೂಪಗಳಿಗಿರುವ ಅರ್ಥ ಸಾಮ್ಯದಿಂದ ಭ್ರಮಿಸಿ ಎಲ್ಲವನ್ನೂ ಒಂದೇ ಗುಡ್ಡೆಮಾಡಿ ಒಂದೇ ಮೂಲಕ್ಕೆ ಆರೋಪಿಸಿರುವುದು ಯುಕ್ತವಲ್ಲವೆಂದು ತೋರುತ್ತದೆ. ವಸ್ತುತಃ ಇವುಗಳನ್ನೆಲ್ಲ ವಿಂಗಡಿಸಿ ಕೆಳಗೆ ಕಂಡ ಮೂರು ವರ್ಗಗಳಿಗೆ ಸೇರಿಸುವುದು ಉಚಿತವೆನಿಸುತ್ತದೆ:—

| | | ಏಕವಚನ | ಬಹುವಚನ |
|---|---|---|---|
| I. ಪ್ರಥಮ ಪು. ಪುಲ್ಲಿಂಗ | : | ಅವನೆ, * ಇವನೆ | ಅವರೆ, * ಇವರೆ |
| ಸ್ತ್ರೀ. | : | ಅವಳೆ, * ಇವಳೆ | |
| ನಪುಂ. | : | **ಅದೆ,** ಅಧೆ | **ಅವೆ**[5] |
| | | **ಇದೆ,** ಇಧೆ | **ಇವೆ** |
| ಮಧ್ಯಮ ಪು. | : | .. | ಇವ್ ರಿ |
| ಉತ್ತಮ ಪು. | : | ಇವ್ ನಿ | ಇವ್ವೀ |

| | | ಏಕವಚನ | ಬಹುವಚನ |
|---|---|---|---|
| II. ಪ್ರಥಮ ಪು. ಪುಲ್ಲಿಂಗ | : | ಇದ್ಧಾನೆ, **ಇದ್ದಾನೆ** | **ಇದ್ದಾರೆ,** ಇದಾರೆ. |
| | | ಇಧಾನೆ, ಇದಾನೆ | ಅದಾರೆ |
| | | ಅಧಾನೆ, ಅದಾನೆ | ಹಾರೆ |
| | | ಹಾನೆ | |
| ಸ್ತ್ರೀ. | : | **ಇದ್ದಾಳೆ,** ಇದಾಳೆ[6] | |
| | | ಅದಾಳೆ (ಹಾಳೆ) | |
| ನಪುಂ. | : | ಹಾದು ? | ಇದ್ದಾವೆ, ಇದಾವೆ |
| | | | ಹಾವು ? |
| ಮಧ್ಯಮ ಪು. | : | **ಇದ್ದೀಯೆ,** ಇದೀಯೆ (ಯ) | **ಇದ್ದೀರಿ,** ಇದೀರಿ |
| | | ಇದ್ದೀ (ದ್ದಿ), ಇದೀ (ದಿ) | ಅದೀರಿ |
| | | ಅದೀ (ದಿ) | |
| ಉತ್ತಮ ಪು. | : | **ಇದ್ದೇನೆ,** ಇದೇನೆ | **ಇದ್ದೇವೆ,** ಇದೇವೆ |
| | | ಅದೇನೆ | ಅದೇವೆ |
| | | ಇದೀನಿ, ಅದೀನಿ | ಇದೀವಿ, ಅದೀವಿ |

---

5. ಈ ಪಟ್ಟಿಗಳಲ್ಲಿ ಗ್ರಂಥಪ್ರಚುರವಾದ (ಹಿಂದೆ ಮತ್ತು ಈಗ) ರೂಪಗಳನ್ನು ದೊಡ್ಡ ಅಕ್ಷರದಲ್ಲಿ ಕೊಟ್ಟಿದೆ. ಅವೆ ಎಂಬುದಕ್ಕೂ ಗ್ರಾಂಥಿಕ ಪ್ರಯೋಗವುಂಟು :

'' . . ಶುಕಪಿಕಂ | ತೊಂಡುಗೆಡೆದುಱಿ ಕೂಗಲಿಕ್ಕೆ ನವಿಲಿಸುತೆ ಭಯಂ ।
ಗೊಂಡು ಪಲ್ಗಿಱಿಯುತವೆ ದಾಳಿಂಬವಿನ್ನಾವಸಂತವೇಳೀಳೆಂದನು || ''

(ಭಾವಚಿಂತಾರತ್ನ, iv. ೧೭)

ಇದೆ, ಇವೆ ಎಂಬುವಕ್ಕೆ 'ಗಿರಿಜಾ ಕಲ್ಯಾಣ'ದಲ್ಲಿ (ಉದಾ.— iv. ೬, ೭) ಸ್ವತಂತ್ರ ಪ್ರಯೋಗವೂ ದೊರೆಯುತ್ತದೆ. 'ಭಾವಚಿಂತಾರತ್ನ'ದಲ್ಲಿಯೂ ಉಂಟು. (vii ೧೬.)

6. ಪ್ರಥಮ ಪುರುಷ ಪುಲ್ಲಿಂಗದಲ್ಲಿ ಮಾತ್ರ ಎಲ್ಲ ರೂಪಗಳನ್ನೂ ಕೊಟ್ಟಿದೆ. ಮಿಕ್ಕ ಕಡೆಗಳಲ್ಲಿ, ವಿಸ್ತರಭಯದಿಂದ ಮಹಾಪ್ರಾಣಯುಕ್ತವಾದ ರೂಪಗಳನ್ನು ಬಿಟ್ಟು ಅಲ್ಪಪ್ರಾಣವುಳ್ಳವುಗಳನ್ನೇ ಕೊಡಲಾಗಿದೆ. ಬಿಟ್ಟಿರುವ ರೂಪಗಳನ್ನು ಪ್ರಥಮ ಪುರುಷ ಪುಲ್ಲಿಂಗದಲ್ಲಿರುವಂತೆ ಊಹಿಸಿಕೊಳ್ಳಬಹುದು.

| | | ಏಕವಚನ | ಬಹುವಚನ |
|---|---|---|---|
| III. ಪ್ರಥಮ ಪು ಪುಲ್ಲಿಂಗ | : | ಅಯ್ದಾನೆ, ಐದಾನೆ **ಐದನೆ** | ಅಯ್ದಾದೆ, ಐದಾರೆ *__ಐದರೆ__* |
| ಸ್ತ್ರೀ. | : | ಅಯ್ದಾಳೆ, ಐದಾಳೆ **ಐದಳೆ** | |
| ನಪುಂ. | : | ಅಯ್ತೆ, ಐತೆ ಅಯ್ತಿ, ಐತಿ | ಅಯ್ದಾವೆ, ಐದಾವೆ |

I. ಇವುಗಳಲ್ಲಿ ಮೊದಲನೆಯ ವರ್ಗಕ್ಕೆ ಸೇರಿಸಿರುವ ರೂಪಗಳ ನಿಷ್ಪತ್ತಿಯೇ ಈ ನಮ್ಮ ಚರ್ಚೆಗೆಲ್ಲಾ ಮೂಲ ಇದನ್ನು ಕುರಿತು ದೀರ್ಘವಾಗಿ ನಿರೂಪಿಸಿದ್ದಾಗಿದೆ. ಈ ರೂಪಗಳಲ್ಲಿ ಯಾವುದೂ ಕ್ರಿಯಾಧಾತುವಿನಿಂದ ಹುಟ್ಟಿದ್ದಲ್ಲ; ಎಲ್ಲವೂ ನಿರ್ದೇಶಕ ಸರ್ವನಾಮಜನ್ಯಗಳು. (ಇಥೆ, ಅಥೆ ಎಂಬಲ್ಲಿಯ ಮಹಾಪ್ರಾಣವನ್ನು ಕುರಿತು ಮುಂದೆ ಹೇಳಿದೆ.)

II. ಎರಡನೆಯ ವರ್ಗದ ರೂಪಗಳು ಮಾತ್ರ ಇರ್ ಧಾತುವಿನಿಂದಲೇ ಬಂದಿರತಕ್ಕವು. ಇವುಗಳ ನಿಷ್ಪತ್ತಿ ಸ್ವಾರಸ್ಯವಾಗಿದೆ. ಹೊಸಗನ್ನಡದ ಭೂತ ಭವಿಷ್ಯತ್ಕಾಲ ರೂಪಗಳು ಹಳಗನ್ನಡದ ಅಯಾ ರೂಪಗಳಿಂದ ಜನಿಸಿರುವಂತೆ ವರ್ತಮಾನ ಕಾಲದ ರೂಪಗಳು ಜನಿಸಿಲ್ಲವೆಂಬುದು ಭಾಷಾ ಚರಿತ್ರೆಯಲ್ಲಿ ಪ್ರಸಿದ್ಧವಾದ ವಿಷಯ. ಉದಾಹರಣೆಗೆ, ಇರ್ದುದು=ಇದ್ದುದು>ಇದ್ದಿತು; ಇರ್ಪುದು=ಇರುವುದು. ಆದರೆ, ಇರ್ದಪನ್ ಹಳಗನ್ನಡದ ವರ್ತಮಾನ ರೂಪ, ಇರುತ್ತಾನೆ ಹೊಸಗನ್ನಡದ ರೂಪ; ಇವೆರಡಕ್ಕೆ ಸಾದೃಶ್ಯವಿಲ್ಲ: –ದಪ ಎಂಬ ಹ.ಗ. ವರ್ತಮಾನ ವಿಕರಣಕ್ಕೂ, –ಉತ್ತ (-ಉತ) ಎಂಬ ಹೊ.ಗ. ವಿಕರಣಕ್ಕೂ ಯಾವ ಸಂಬಂಧವೂ ಇಲ್ಲ. ಹಾಗಾದರೆ, ಹಳಗನ್ನಡದ ವರ್ತಮಾನ ರೂಪದ ಸಂತತಿ ವಿಚ್ಛಿನ್ನವಾಯಿತೆ? ''ಇಲ್ಲ'' ಎಂದು ಭಾಷಾ ಚರಿತ್ರಜ್ಞರು ಉತ್ತರ ಕೊಡುತ್ತಾರೆ. ಹಳಗನ್ನಡದಲ್ಲಿಲ್ಲದ ಸಂಭಾವನಾ (ಸಂಶಯಾ)ರ್ಥವೆನ್ನುವುದು ಹೊಸಗನ್ನಡದಲ್ಲಿ ಪ್ರಚುರವಾಗಿದೆಯಷ್ಟೆ. ಇದೇ ಹಳಗನ್ನಡದ ವರ್ತಮಾನಕಾಲ ರೂಪದ ನಿಜವಾದ ಸಂತಾನ; ಅರ್ಥದಲ್ಲಿ ಮಾತ್ರ ಮೊದಲಿನ ನಿಶ್ಚಯವು ಕುಗ್ಗಿ ಸಂಶಯವು ಮೂಡಿದೆ, ಅಷ್ಟೆ. ಉದಾಹರಣೆಗೆ.—

**ಇರ್ದಪನ್**>ಇದ್ದಪನ್>ಇದ್ದಹನ್ (ನು) (ಪ>ಹ)
ಇದ್ದಹನು>*ಇದ್ಧಅನು (ಮಹಾಪ್ರಾಣತ್ವ **ವಿಪರ್ಯ**ಯದಿಂದ),
*ಇದ್ಧಅನು>ಇದ್ಧಾನು (ಅ+ಅ=ಆ)
ಇದ್ಧಾನು>**ಇದ್ದಾನು** (ಮಹಾಪ್ರಾಣತ್ವ **ಲೋಪವು** ಕನ್ನಡಕ್ಕೆ ಸಹಜ.)

ಹೀಗೆಯೇ ಬಂದಪನ್>ಬಂದಾನು, ಕಂಡಪೆವು>ಕಂಡೇವು; ಇತ್ಯಾದಿ. ಈ ರೀತಿಯಲ್ಲಿ, ಹಳಗನ್ನಡದ ವರ್ತಮಾನಕಾಲ ರೂಪವು ಬೇರೆಯ ಕಾಲುವೆಗೆ ತಿರುಗಲಾಗಿ,[7] -ಉತ್ತ (-ಉತ) ಎಂಬ ವರ್ತಮಾನ ಕೃತ್ಪ್ರತ್ಯಯವನ್ನು ವರ್ತಮಾನ

7. ಹಳಗನ್ನಡದಲ್ಲಿಯೇ ಇರ್ದಪನ್ ಮೊದಲಾದುವುಗಳಲ್ಲಿ ಸಂಭಾವನಾರ್ಥದ ಧ್ವನಿಯಿದ್ದಿತೆಂದು ಕೆಲವರ ಅಭಿಪ್ರಾಯ.

ವಿಕರಣವನ್ನಾಗಿಯೂ ಮಾಡಿಕೊಂಡು ಹೊಸಗನ್ನಡಕ್ಕೆ ಹೊಸ ವರ್ತಮಾನ ಕ್ರಿಯಾ ರೂಪಗಳನ್ನು ಕಲ್ಪಿಸಿಕೊಳ್ಳಬೇಕಾಯಿತು. (ಉದಾ: ಇರುತ್ತಾನೆ, ಬರುತ್ತೇನೆ, ಇತ್ಯಾದಿ.) ಈ ವಿಷಯವನ್ನು ಇನ್ನು ವಿವರಿಸುವುದು ನಮಗೆ ಅಪ್ರಕೃತ.

ಹೊಸಗನ್ನಡಕ್ಕೆ ಇದೇ ಸಾಮಾನ್ಯ ನಿಯಮವಾದರೂ, ಇರ್ ಧಾತುವಿಗೆ ಮಾತ್ರ ಹಳೆಯ ವಾಸನೆ ಪೂರ್ಣವಾಗಿ ಬಿಡಲಿಲ್ಲ. ಇದ್ದಾನು, ಇದ್ದಾರು, ಇದ್ದೀರಿ, ಇದ್ದೇವು ಮೊದಲಾದ ಸಂಭಾವನಾ ರೂಪಗಳೂ, ಇರುತ್ತಾನೆ, ಇರುತ್ತಾರೆ, ಇರುತ್ತೀರಿ, ಇರುತ್ತೇವೆ ಮೊದಲಾದ ವರ್ತಮಾನ ರೂಪಗಳೂ ಮಿಕ್ಕ ಧಾತುಗಳಿಗಿರುವಂತೆಯೇ ಇಲ್ಲಿಯೂ ಕಾಣಬರುತ್ತವೆ. ಆದರೆ ವರ್ತಮಾನ ಕಾಲಕ್ಕೆ ಇದ್ದಾನೆ, ಇದ್ದಾರೆ, ಇದ್ದೀರಿ, ಇದ್ದೇವೆ ಮೊದಲಾದ ಪರ್ಯಾಯ ರೂಪಗಳೂ ಹೆಚ್ಚಾಗಿ ಇವೆ. ಇವು ಹಳಗನ್ನಡದ ಇರ್ದಪನ್ ಪ್ರಭೃತಿಗಳ ಔರಸ ಸಂತತಿಯೆನ್ನುವುದಕ್ಕೆ ಸಂದೇಹವೇ ಇಲ್ಲ. ಇದ್ದಾನು ಮೊದಲಾದ ರೂಪಗಳಿಗೆ ಸಂಶಯಾರ್ಥವೇ ಪ್ರಧಾನವಾಗುತ್ತಿದ್ದ ಕಾಲದಲ್ಲಿ ಅವುಗಳಿಂದ ನಿಶ್ಚಿತ ಕ್ರಿಯಾರ್ಥವನ್ನು ಮತ್ತೆ ಹೇಳಿಸಲು -ಎ ಎಂಬ ನಿರ್ಧಾರಣೆಯ ಪ್ರತ್ಯಯವು ಹತ್ತಿ ಇದ್ದಾನೆ (=ಇದ್ದಾನು+ಎ) ಮೊದಲಾದ ವರ್ತಮಾನ ಕ್ರಿಯಾರೂಪಗಳು ಹುಟ್ಟಿರಬೇಕು. ಇದ್ದೀಯೆ (ಇದ್ದೀ), ಇದ್ದೀರಿ ಎಂಬ ಮಧ್ಯಮ ಪುರುಷದ ರೂಪಗಳು ವರ್ತಮಾನಕಾಲ ಸಂಭಾವನಾರ್ಥಗಳೆರಡಕ್ಕೂ ಸಮಾನವಾಗಿವೆ. ಅಂತ್ಯ ಕಾಕುವಿನಿಂದ ಮಾತ್ರ ಕಾಲಾರ್ಥ ಭೇದವನ್ನು ಗ್ರಹಿಸಬೇಕಾಗಿದೆ.

ಇನ್ನು ನಮ್ಮ ಎರಡನೆಯ ವರ್ಗದ ರೂಪಗಳಿಗೆ ನಿಷ್ಪತ್ತಿಯನ್ನು ತೊಡಕಿಲ್ಲದೆ ಹೇಳಬಹುದು. ಉದಾಹರಣೆಗೆ —

**ಇರ್ದಪನ್** > ಇದ್ದಾಧನು > ಇದ್ದಾನು (ವಿವರವನ್ನು ಹಿಂದೆಯೇ ಕೊಟ್ಟಿದೆ),
ಇದ್ದಾಧನು+ಎ=ಇದ್ದಾಧನೆ > ಇಧಾನೆ (ದ್ವಿತ್ವ ಶೈಥಿಲ್ಯದಿಂದ);
ಇದ್ದಾನು+ಎ=ಇದ್ದಾನೆ > ಇದಾನೆ ( ,, );

**ಇರ್ದಪಯ್** > ಇದ್ದಪಯ್ > ಇದ್ದಹಯ್, (ಇದ್ದಹೈ, ಇದ್ದಹೆ),
ಇದ್ದಹಯ್ > *ಇದ್ಧಅಯ್ > *ಇದ್ದಾಧಯ್,
*ಇದ್ದಾಧಯ್ > *ಇದ್ಧೀಯ್ (ಇಲ್ಲಿ ಯಕಾರ ಸಾಹಚರ್ಯದಿಂದ ಆ > ಈ; ಕಂಡೀಯೆ, ಬಂದೀಯೆ ಮೊದಲಾದ ರೂಪಗಳನ್ನು ಹೋಲಿಸಿ),
*ಇದ್ಧೀಯ್+ಎ > ಇದ್ಧೀಯೆ > **ಇದ್ದೀಯೆ**;
ಇದ್ದೀಯೆ > ಇದ್ದೀಯ (ಎ > ಅ);
> ಇದ್ದೀ (ಯಕಾರ ಲೋಪ), ಇತ್ಯಾದಿ.

**ಇರ್ದಪಿರ್** > **ಇದ್ದೀರಿ** (ಇಲ್ಲಿ ಸ್ವರಸಾಮ್ಯದಿಂದ ಅಂತ್ಯದ -ಎಕಾರವು 'ಇ' ಆಗಿದೆ.)

ಈ ವರ್ಗದಲ್ಲಿ ಒಂದು ವಿಶೇಷವು ಕಣ್ಣಿಗೆ ಬೀಳುತ್ತದೆ: ಪ್ರಥಮ ಪುರುಷ ನಪುಂಸಕೈಕ ವಚನದಲ್ಲಿ ಹಾದು (?) ಎಂಬ ಅಪ್ರಚುರವಾದ ಗ್ರಾಮ್ಯ ರೂಪವನ್ನು ಬಿಟ್ಟರೆ ಬೇರೆ ಯಾವ ರೂಪವೂ ಇಲ್ಲ.[8] ಬಹುವಚನದ ಇದ್ದಾವೆ ಮೊದಲಾದುವಕ್ಕೆ ಕೂಡ ಗ್ರಾಂಥಿಕ ಪ್ರಯೋಗವಿಲ್ಲ; ಅವು ಗ್ರಾಮ್ಯ ಭಾಷೆಯಲ್ಲಿ ಕ್ವಚಿತ್ತಾಗಿ ಉಳಿದಿವೆ. ಮಿಕ್ಕ ಎಲ್ಲಾ ಲಿಂಗ ವಚನ ಪುರುಷಗಳಲ್ಲಿಯೂ ಗ್ರಾಂಥಿಕ ರೂಪಗಳುಂಟು. ಈ ವ್ಯತ್ಯಾಸಕ್ಕೇನು ಕಾರಣ? ಈಗ ಮೊದಲನೆಯ ವರ್ಗದ ಕಡೆಗೆ ಸ್ವಲ್ಪ ತಿರುಗೋಣ. ಅಲ್ಲಿ ಇದೆ (ಅದೆ), ಇವೆ (ಅವೆ) ಎಂಬ ನಪುಂಸಕ ಲಿಂಗದ ಏಕ ಬಹುವಚನ ರೂಪಗಳು ಮಾತ್ರ ಗ್ರಾಂಥಿಕಗಳು[9]; ಮಿಕ್ಕವು ಗ್ರಾಮ್ಯವಾಗಿ ಮಾತ್ರ ಉಳಿದಿವೆ. ಈಗ ಈ ಎರಡು ವರ್ಗಗಳಿಂದಲೂ ಗ್ರಾಂಥಿಕ ರೂಪಗಳನ್ನು ಮಾತ್ರ ಬೇರ್ಪಡಿಸಿಕೊಂಡು ಜೋಡಿಸಿದರೆ ಪಟ್ಟಿ ಹೀಗೆ ತುಂಬಿಕೊಳ್ಳುತ್ತದೆ:—

| | | ಏಕವಚನ | ಬಹುವಚನ | |
|---|---|---|---|---|
| ಪ್ರಥಮ ಪು. ಪುಲ್ಲಿಂಗ | : | ಇದ್ದಾನೆ | ಇದ್ದಾರೆ | (II) |
| ಸ್ತ್ರೀ. | : | ಇದ್ದಾಳೆ | | |
| ನಪುಂ. | : | ಇದೆ | ಇವೆ | (I) |
| ಮಧ್ಯಮ ಪು. | : | ಇದ್ದೀಯೆ | ಇದ್ದೀರಿ | (II) |
| ಉತ್ತಮ ಪು. | : | ಇದ್ದೇನೆ | ಇದ್ದೇವೆ | (II) |

ಸಂದರ್ಭ ಹೇಗೆ ನಡೆದಿರಬೇಕೆಂಬುದನ್ನು ಊಹಿಸುವುದು ಇನ್ನು ಕಷ್ಟವಲ್ಲ. ಎರಡನೆಯ ವರ್ಗದಲ್ಲಿ ಪ್ರಥಮ ಪುರುಷ ನಪುಂಸಕ ಲಿಂಗದ ರೂಪಗಳು ಮಾತ್ರ ವಿರಳ ಪ್ರಯೋಗದಿಂದಲೋ ಏಕ ಪ್ರಾಂತೀಯತೆಯಿಂದಲೋ ಗ್ರಾಮ್ಯವಾಗಿ ಪರಿಣಮಿಸಿದುವು. ಏಕವಚನದ ರೂಪಗಳಿಗೆ ಹಾಗೆ ನಿಲ್ಲುವ ಅದೃಷ್ಟವೂ ಇಲ್ಲದೆ ಹೋಯಿತು; ಅವುಗಳ ಸ್ಥಾನಕ್ಕೆ ಸಮಂಜಸವಾದ ಬೇರೆಯ ರೂಪಗಳು ಬರಬೇಕಾಯಿತು. ಈ ಗೌರವಕ್ಕೆ ಇದೆ, ಇವೆ ಎಂಬುವಕ್ಕಿಂತ ಹೆಚ್ಚು ಹಕ್ಕು ಮಿಕ್ಕ ಯಾವ ರೂಪಗಳಿಗೆ ಉಂಟು? ಇವು ಹೀಗೆ ಎರಡನೆಯ ವರ್ಗದ ಜೊತೆಯನ್ನು ಕಟ್ಟಿಕೊಂಡು ದೂರವಾದದ್ದರಿಂದ, ಮೊದಲೇ ದುರ್ಬಲವಾಗಿದ್ದ ಮೊದಲನೆಯ ವರ್ಗದ ಮಿಕ್ಕ ರೂಪಗಳಿಗೆ ಪುರಸ್ಕಾರವು ಎಂದಾದರೂ ಬರತಕ್ಕ ಆಶೆಯೇ ಉಳಿಯಲಿಲ್ಲ; ಅವು ಗ್ರಾಮ್ಯವಾಗಿಯೇ ನಿಂತುವು, ಸವೆಯುತ್ತಾ ಬಂದುವು, ಕೆಲವು ಅಳಿದೂಹೋದುವು. ಅಂತೂ, ವರ್ತಮಾನ ಕಾಲದಲ್ಲಿ ಅಸ್ತಿತ್ವವನ್ನು ಸೂಚಿಸಲು ಗ್ರಾಂಥಿಕ ರೂಪಗಳ ಒಂದು ಜೊತೆ (Set) ಎರಡು ವರ್ಗಗಳ ಸಹಕಾರದಿಂದ ಹೀಗೆ ಭರ್ತಿಯಾದ ಕೂಡಲೆ, ಉಳಿದ ಚಿಲ್ಲರೆಯ ರೂಪಗಳಿಗೆ ಎರಡರಲ್ಲೂ ಆವಶ್ಯಕತೆ ಕಡಮೆಯಾಯಿತು: ಅವುಗಳ ಪ್ರಾಬಲ್ಯ ಮುಸುಳಿತು. ಊನವೋ ಅಪೂರ್ಣವೋ ಆದ ಬೇರೆ ಬೇರೆಯ ವರ್ಗಗಳಿಂದ

8. ಸಂಭಾವನಾರ್ಥದಲ್ಲಿ ಇದ್ದಾತು, ಇದ್ದೀತು ಎಂಬಿವು ಕ್ರಮವಾಗಿ ಗ್ರಾಮ್ಯ ಗ್ರಾಂಥಿಕ ರೂಪಗಳು. ಇವಕ್ಕೆ ಸಂವಾದಿಯಾಗಿ ವರ್ತಮಾನ ಕಾಲದಲ್ಲಿ ಗ್ರಾಮ್ಯ ರೂಪಗಳಾದರೂ ನಿಲ್ಲದಿರುವುದು ಆಶ್ಚರ್ಯಕರ.

9. 'ಅದೆ, ಅವೆ' ಎಂಬಿವು ಕೂಡ ಹೊಸಗನ್ನಡದಲ್ಲಿ ಕೇವಲ ಗ್ರಾಮ್ಯಗಳಾಗಿವೆ.

ಹೀಗೆ ಹೊಸದೊಂದು ಜೊತೆಯನ್ನು ಕಟ್ಟುವುದು ಭಾಷಾ ಚರಿತ್ರೆಯಲ್ಲಿ ಅಪೂರ್ವವಲ್ಲ. ಸಂಸ್ಕೃತದಲ್ಲಿ ದೃಶ್, ಸ್ಪಶ್ (ಪಶ್ಯ್) ಧಾತು ರೂಪಗಳ ಸ್ಥಿತಿ ಹೀಗಾಗಿದೆ. ಇಂಗ್ಲಿಷಿನಲ್ಲಿ "to Be" ಧಾತ್ವರ್ಥವನ್ನು ಕೊಡುವ ರೂಪಗಳಲ್ಲಂತೂ ಒಂದೊಂದು ಒಂದೊಂದು ದಿಕ್ಕಿನಿಂದ ಬಂದದ್ದು.—ಹೀಗೆ, ಇರ್ ಧಾತು ನಿಷ್ಪನ್ನವಾದ ಇದ್ದಾನೆ, ಇದ್ದಾರೆ ಮೊದಲಾದುವುಗಳ ಜೊತೆಗೆ ಇದೆ, ಇವೆ ಎಂಬ ರೂಪಗಳು ಸೇರಿದ್ದರಿಂದಲೇ ಇವೂ ಇರ್ ಧಾತುವಿನಿಂದ ಬಂದಿರಬಹುದೆಂಬ ಭ್ರಮೆಯಾದರೂ ಹುಟ್ಟಲು ಆಸ್ಪದವಾಯಿತು.

ಇನ್ನು ಅಧಾನೆ, ಅದೇವೆ ಮೊದಲಾದ ಅಕಾರಾದಿ ರೂಪಗಳ ಬಗೆ ಹೇಗೆ? ಇವೆಲ್ಲವೂ ಇಧಾನೆ, ಇದೇವೆ ಮೊದಲಾದುವಕ್ಕೆ ಪರ್ಯಾಯ ರೂಪಗಳೆಂದು ತೋರುತ್ತದೆ. ಇದ್ಧಾನೆ, ಇದ್ದಾನೆ, ಇದ್ಧೇವೆ, ಇದ್ದೇವೆ ಎಂಬಿವು ಪ್ರಾಚೀನತರ ರೂಪಗಳೆಂದು ನೋಡಿದೆವಷ್ಟೆ. ಇವಕ್ಕೆ ಸಮನಾಗಿ ಅದ್ದಾನೆ, ಅದ್ದೇವೆ ಮೊದಲಾದುವು ಕಾಣಬರುವುದಿಲ್ಲ. ಅದಾನೆ, ಅದೇವೆ ಮೊದಲಾದುವೇ ಅಕಾರಾದಿಗಳಲ್ಲಿ ನಮಗೆ ಗೊತ್ತಿರತಕ್ಕ ಪ್ರಾಚೀನತಮ ರೂಪಗಳು. ಇದ್ದಾನೆ, ಇದ್ದೇವೆ ಎಂಬುವುಗಳ ವ್ಯಂಜನ ದ್ವಿತ್ವವು ಉಚ್ಚಾರ ಶೈಥಿಲ್ಯದಿಂದ ಏಕತ್ವಕ್ಕೆ ಆಡುವ ಭಾಷೆಯಲ್ಲಿ ತಿರುಗಿದ ಬಳಿಕ ಈ ಅಕಾರಾದಿ ರೂಪಗಳೆಲ್ಲ ತಲೆಯಿಟ್ಟಂತೆ ತೋರುತ್ತದೆ. ಹೀಗೆ ಊಹಿಸಲು ಅವಕಾಶವುಂಟು. ಇದೆ, ಇವೆ ಎಂಬ ರೂಪಗಳ ಸಂಪರ್ಕ ಸಾಹಚರ್ಯಗಳೇ ಇದ್ದಾನೆ, ಇದ್ದಾರೆ ಮೊದಲಾದುವುಗಳ ಶಿಥಿಲೋಚ್ಚಾರಣೆಗೆ ತಕ್ಕಮಟ್ಟಿಗೆ ಕಾರಣವಾಗಿರಬೇಕು; ಇದ್ದಾನೆ-ಇದ್ದಾಳೆ-ಇದೆ ಎಂಬ ಶ್ರೇಣಿಗಿಂತ ಇದಾನೆ-ಇದಾಳೆ-ಇದೆ ಎಂಬುದರಲ್ಲಿ ಧ್ವನಿ ಸಾಮರಸ್ಯವು ಹೆಚ್ಚಾಗಿದೆ. ಇನ್ನು, ಇದೆ, ಇವೆಗಳ ಬೆನ್ನಹಿಂದೆ ಅದೆ, ಅವೆ ಗಳೂ ಇದ್ದುವಷ್ಟೆ. ಅವುಗಳ ಸಾಮ್ಯದ (Analogy) ಮೇಲೆ ಎರಡನೆಯ ವರ್ಗದಲ್ಲೂ ಇದಾನೆ, ಇದಾರೆ ಎಂಬಿವಕ್ಕೆಲ್ಲಾ ಅದಾನೆ, ಅದಾರೆ ಮೊದಲಾದ ಅಕಾರಾದಿ ಪರ್ಯಾಯ ರೂಪಗಳು ಹುಟ್ಟಿರಬೇಕು. ಈ ಸಂಪರ್ಕದ ಪರಿಣಾಮವು ಇದೆ, ಅದೆ ಗಳಿಗೂ ತಟ್ಟದೆ ಹೋಗಲಿಲ್ಲ. ಇಧಾನೆ, ಅಧಾರೆ ಎಂಬ ಮಹಾಪ್ರಾಣ ಸಮೇತವಾದ ರೂಪಗಳಿಗೆ ಸರಿತೂಗುವುದಕ್ಕಾಗಿ ಇದೆ, ಅದೆ ಗಳಿಗೂ ಹೊಕ್ಕುಳು ಸೀಳಿ ಇಧೆ ಅಧೆಗಳು[10] ಉದಿಸಿರಬೇಕು. ಹೀಗೆ ಸಾಮ್ಯ ವಿಧಿಗೆ ಅವಕಾಶವು ಹೆಚ್ಚಾಗಿ ದೊರೆತದ್ದೇ ಇಲ್ಲಿಯ ರೂಪಗಳ ಅತಿವೃದ್ಧಿಗೆ ಕಾರಣವೆಂದು ತೋರುತ್ತದೆ. ಸಾಮ್ಯಕ್ಕೆ ಕಣ್ಣುಂಟೇ ಹೊರತು ಮತಿಯಿಲ್ಲ; ಶಬ್ದ ಮೂಲವನ್ನು ಶೋಧಿಸಿ

10. ಮಹಾಪ್ರಾಣವು ಅಲ್ಪಪ್ರಾಣಕ್ಕೆ ತಿರುಗುವುದೇ ದ್ರಾವಿಡ ಭಾಷೆಗಳ ಪದ್ಧತಿ. ಆದರೆ ಸಾಮ್ಯದ ಮೇಲೂ ಅವಧಾರಣೆಗಾಗಿಯೂ ಅಲ್ಪಪ್ರಾಣವಿದ್ದ ಕಡೆ ಮಹಾಪ್ರಾಣವು ತಲೆದೋರುವುದು ಅಪರಿಚಿತವಲ್ಲ. ಉದಾಹರಣೆಗೆ, ಗಾಳಿ > ಘಾಳಿ ; ವಾಪೀ > ಬಾವಿ > ಭಾವಿ ; ದೊರೆ > ಧೊರೆ. ಮಹಾಪ್ರಾಣವನ್ನು ಹೆಚ್ಚಾಗಿ ಉಪಯೋಗಿಸುವುದು ಸಿಸ್ತುಗಾರಿಕೆಯೆಂಬ ಭಾವ ಜನಸಾಮಾನ್ಯಕ್ಕೆ ಅಲ್ಲಲ್ಲಿ ಉಂಟು. ಇಧೆ, ಅಧೆ ಎಂಬ ರೂಪಗಳ ಬಳಕೆಗೆ ಇದೂ ಕಾರಣವಾಗಿರಬಹುದು. ಆದರೆ ವಾಸ್ತವವಾಗಿ, ಇಲ್ಲಿ ಚರ್ಚಿತವಾಗಿರುವ ಯಾವ ಮಹಾಪ್ರಾಣಯುಕ್ತ ರೂಪಕ್ಕೂ ರೂಢಿಯಲ್ಲಿ ಪ್ರಯೋಗವು ಅತಿ ವಿರಲ. ಸಂಭಾವನಾರ್ಥದಲ್ಲಿ ಕೂಡ ಕಂಡಾನು, ಬಂದೇವು ಎಂಬಂತೆ ರೂಪಗಳು ನಿಂತಿವೆಯೇ ಹೊರತು *'ಕಂಧಾನು, ಬಂಧೇವು' ಎಂದು ಉಳಿದಿಲ್ಲ.

ವಿಚಾರಿಸಿ ಅದಕ್ಕೆ ಅನುಗುಣವಾಗಿ ಸಾಮ್ಯವು ಪ್ರವರ್ತಿಸುವುದಿಲ್ಲ: ರೂಪ ಸಾದೃಶ್ಯವೊಂದರ ಕಡೆಗೇ ಅದರ ದೃಷ್ಟಿ—ಮೇಲಿನ ವಿವರಣೆಯಲ್ಲಿ ಊಹೆಗೆ ಕಡಿವಾಣವು ಸ್ವಲ್ಪ ಸಡಿಲಿರುವಂತೆ ತೋರಬಹುದು; ಆದರೆ ಅಕಾರಾಗಮ ಇಕಾರ ಲೋಪಗಳ ವಿಧಿಗಿಂತ ಸಾಮ್ಯವಿಧಿಯಲ್ಲಿ ಸಂಭಾವ್ಯತೆ ಹೆಚ್ಚು.

ಮತ್ತೊಂದು ಅಂಶವನ್ನು ಇಲ್ಲಿ ಸೂಚಿಸಬಹುದು. ಇರ್ ಧಾತುವಿಗೆ ಇದ್ದಾನೆ, ಇದ್ದಾರೆ ಮೊದಲಾದುವುಗಳೇ ನಿಜವಾದ ವರ್ತಮಾನ ಕ್ರಿಯಾಪದಗಳಾಗಿ ಪರಿಣಮಿಸಿವೆ; ಇರುತ್ತಾನೆ, ಇರುತ್ತಾರೆ ಮೊದಲಾದುವು ಭವಿಷ್ಯತ್ಕಾಲಾರ್ಥಕ್ಕೇ ನಿಯತವಾಗುತ್ತಿರುವುದು ಆಡುವ ಭಾಷೆಯಲ್ಲಿ ಸ್ಫುಟವಾಗಿದೆ. ಉದಾಹರಣೆಗೆ, ಅವನು ಅಲ್ಲಿ ಇದ್ದಾನೆ=He is there; ಅವನು ಅಲ್ಲಿ ಇರುತ್ತಾನೆ=He will be there. ಮಿಕ್ಕ ಧಾತುಗಳಿಂದ ಹುಟ್ಟಿದ ಬರುತ್ತಾನೆ ಮೊದಲಾದ ರೂಪಗಳು ವರ್ತಮಾನ ಭವಿಷ್ಯತ್ಕಾಲಗಳೆರಡನ್ನೂ ಸೂಚಿಸುತ್ತವೆ. ಇರ್ ಧಾತುವಿಗೆ ಮಾತ್ರ ಎರಡು ಜೊತೆ ಗ್ರಾಂಥಿಕ ರೂಪಗಳಿರುವುದರಿಂದ ಅವೆರಡಕ್ಕೆ ಈ ಕೆಲಸವು ಹಂಚಿಕೆಯಾಗುತ್ತಿರುವಂತೆ ತೋರುತ್ತದೆ. ಭಾಷೆಗೆ ಮಿತವ್ಯಯದ ದೃಷ್ಟಿಯುಂಟು. ಒಂದೇ ಕೆಲಸಕ್ಕೆ ಹಲವು ಮಂದಿ ಕೆಲಸಗಾರರು ನಿಲ್ಲುವುದನ್ನು ಅದು ಬಹು ಕಾಲ ಸಹಿಸುವುದಿಲ್ಲ.

III. ಇನ್ನು ಉಳಿದದ್ದು ಮೂರನೆಯ ವರ್ಗ. ಇಲ್ಲಿಯ ರೂಪಗಳಲ್ಲಿ ಐದನೆ ಎಂಬುದು ದೊರೆಯುತಕ್ಕದ್ದು 'ಗೋವಿನ ಕಥೆ'ಯಲ್ಲಿ ಮಾತ್ರವಲ್ಲ; 'ಹರಿಶ್ಚಂದ್ರ ಕಾವ್ಯ'ದಲ್ಲಿ,

> ಜನಪತಿ ಹರಿಶ್ಚಂದ್ರ ಬಂದು ನಮ್ಮಯ ತಪೋ
> ವನದೊಳೈದನೆ.... (ಹ. ಕಾ. ಸಂಗ್ರಹ, iv. ೨೬)

ಎಂದು ಪ್ರಾಚೀನತರ ಪ್ರಯೋಗವಿದೆ. 'ಭಾವಚಿಂತಾರತ್ನ'ದಲ್ಲಿ,

> ಜೀಯ ಬಿನ್ನಪಮರಿದ ತಲೆಯ ಪಿಡಿದೊರ್ವಬಳೆ
> ಕಾಯಜ ವಿನಾಶನಂ ನೆನೆದು ಮೊಱಿಯಿಟ್ಟೊರಲಿ
> ಬಾಯಱೆಯುತೈದಳೆ ದಯಾಭರಿತ.... (ಭಾವಚಿಂ., viii. ೩೨)

ಎಂದು ಐದಳೆ ಎಂಬ ಸ್ತ್ರೀಲಿಂಗ ರೂಪವು ದೊರೆಯುತ್ತದೆ. ಬಹುಶಃ 'ಐದರೆ' ಎಂಬುದೂ ಗ್ರಾಂಥಿಕವಾಗಿದ್ದಿರಬಹುದು. ಮಿಕ್ಕುವು ಗ್ರಾಮ್ಯವೆಂದು ತೋರುತ್ತದೆ.

ಈ ರೂಪಗಳೆಲ್ಲಕ್ಕೂ ಮೂಲವು ಏನೆಂದು ಸರಿಯಾಗಿ ಗೊತ್ತಾಗಿಲ್ಲ. ಶ್ರವಣಬೆಳ್ಗೊಳದ ಪ್ರಾಚೀನ ಶಾಸನವೊಂದರಲ್ಲಿ (ಶ್ರ. ಬೆ. ಶಾಸನಗಳು, ದ್ವಿತೀಯ ಮುದ್ರಣ, ಸಂ. ೧೨)

> ....ಚರಿತ ಶ್ರೀ ನಾಮಧೇಯ ಪ್ರಭು ಮುನಿನ್ವ್ರತಗಳ್ನೋನ್ತು ಸೌಖ್ಯಸ್ಥನಾಯ್ದಾನ್

ಎಂಬ ಕಡೆ ಆಯ್ದಾನ್ ಎಂಬ ರೂಪವು ದೊರೆಯುತ್ತದೆ. ಈ ಆಯ್ದಾನ್ ಎಂಬುದರಿಂದಲೇ ಬಹುಶಃ ನಮ್ಮ ಐದನೆ ಬಂದಿರಬೇಕೆಂದು ಕೆಲವರು ಊಹಿಸುತ್ತಾರೆ. ಸಂಸ್ಕೃತದ 'ಭೂ' ಧಾತುವಿಗೆ ಇರು, ಆಗು ಎಂಬ ಅರ್ಥಗಳೆರಡೂ ಇರುವಂತೆ,

ನಮ್ಮ 'ಆಗು' ಧಾತು ಇರ್ ಧಾತುವಿನ ಅರ್ಥವನ್ನು ಕೊಡಬಹುದೆಂದು ಒಪ್ಪೋಣ. ಆದರೆ ಆಯ್ದಾನ್ ಎಂಬುದು ಭೂತಕಾಲದ ರೂಪ (ನಪುಂಸಕಲಿಂಗದ ಆಯ್ತು ಎಂಬುದನ್ನು ಹೋಲಿಸಿ). ಇದು ಐದನೆ ಎಂಬ ವರ್ತಮಾನಕ್ರಿಯೆಯಾಗಿ ಹೇಗೆ ಮಾರ್ಪಡಬಲ್ಲುದು?

ಹಳಗನ್ನಡದಲ್ಲಿ ಎಯ್ದು (ಐದು), ಎಯ್ತರ್ (ಐತರ್) ಎಂಬ ಧಾತುಗಳಿವೆ; ಈ ಧಾತುಗಳ ಆದ್ಯಭಾಗವಾದ 'ಎಯ್' ಎಂಬುದೇ ಮೊದಲು ಸ್ವತಂತ್ರ ಧಾತುವಾಗಿದ್ದಿರಬಹುದು. (ಹ.ಗ. ದಲ್ಲಿರುವ ತಾಳ್, ತಾಳ್ದು; ತೂಳ್, ತೂಳ್ದು ಎಂಬೀ ಧಾತುಯುಗ್ಮಗಳನ್ನು ಹೋಲಿಸಿ.) ಈ ಎಯ್ ಧಾತುವಿಗೆ ಆಗು, ಇರು ಎಂಬ ಅರ್ಥಗಳಿದ್ದಿರಬಹುದು. (ತಮಿಳಿನಲ್ಲಿ ಎಯ್ದು ಧಾತುವಿಗೆ 'ಸಂಭವಿಸು', 'ಉಂಟಾಗು' ಎಂಬ ಅರ್ಥಗಳುಂಟು; ಆ ಭಾಷೆಯಲ್ಲಿ ಎಯ್ ಎಂಬ ಧಾತುವೂ ಇದ್ದಂತಿದೆ.) ಒಂದು ವೇಳೆ, ಈ ಎಯ್ (ಅಯ್, ಐ) ಎಂಬ ಧಾತುವಿನಿಂದ ನಮ್ಮ ಐದಾನೆ (ಐದನೆ), ಐದಾಳೆ (ಐದಳೆ) ಮೊದಲಾದ ರೂಪಗಳು ಉದಿಸಿರಬಹುದೆ? (*ಎಯ್ದಪನ್ > ಎಯ್ದಾನು+ಎ=ಎಯ್ದಾನೆ > ಅಯ್ದಾನೆ > ಐದಾನೆ > ಐದನೆ.) ಇದು ಬರಿಯ ಊಹೆ. ಸದ್ಯದಲ್ಲಿ ನಿಶ್ಚಿತವಾದ ಯಾವ ಅಭಿಪ್ರಾಯವನ್ನು ಪಡುವುದಕ್ಕೂ ಆಧಾರ ಸಾಲದು.

ಚರ್ಚೆಗೆ ತೆಗೆದುಕೊಂಡ ಕ್ರಿಯಾರೂಪಗಳ ಮೂಲವನ್ನೆಲ್ಲಾ ಯಥಾಮತಿ ಶೋಧಿಸಿದ್ದಾಯಿತು. ಇನ್ನು ಕೊನೆಯ ಎರಡು ಮಾತುಗಳು.—ಇವಳೆ, ಇವರೆ (ಅವಳೆ, ಅವರೆ) ಈ ಮೊದಲಾದ ಕಡೆಗಳಲ್ಲಿ "ಕೊನೆಗೆ ಸೇರಿದ 'ಎ'ಕಾರವು ನಿರ್ಧಾರಣಾರ್ಥಕವೇ ಎಂದು ಖಂಡಿತವಾಗಿ ಹೇಳುವುದಕ್ಕೆ ಧೈರ್ಯವಾಗದು. ಕನ್ನಡದಲ್ಲಿ ಎಲ್ಲ ಕ್ರಿಯಾಪದಗಳ ತುದಿಗೆ ಸೇರುವ ಐ (ಅಯ್, ಎಯ್) ಕಾರವೇ (ಉದಾ.—ಬಂದಪೆನೈ, ಬಂದನೈ, ಬರ್ಪನೈ, ಬಾರೈ, ಬಾರೆನೈ) 'ಎ'ಕಾರವಾಗಿ ನಿಲ್ಲುವುದು ಅಸಂಭವನೀಯವಲ್ಲ" ಎಂದು ಶ್ರೀಮಾನ್ ಪ್ರಭುಗಳು ಬರೆದಿದ್ದಾರೆ. ಇದನ್ನು ಒಪ್ಪಲು ತೊಂದರೆಯುಂಟು. ಬಂದಪೆನೈ, ಬಾರೈ ಎಂಬಂತೆಯೇ ಬಂದಪೆನೌ, ಬಾರೌ ಎಂಬ ರೂಪಗಳಿಗೂ ಪ್ರಯೋಗವಿದೆ. ಇಲ್ಲಿ, ಶ್ರೋತೃ ಪುಂವಾಚಕವಾಗಿದ್ದಾಗ -ಐ (ಅಯ್) ಎಂಬುದೂ, ಸ್ತ್ರೀವಾಚಕವಾಗಿದ್ದಾಗ -ಔ (ಅವ್) ಎಂಬುದೂ ಕ್ರಿಯಾಪದಕ್ಕೆ ಹತ್ತತಕ್ಕದ್ದು ಸ್ಪಷ್ಟವಾಗಿದೆ. ಹೀಗಿರುವುದರಿಂದ ಶ್ರೋತೃವಿನ ಲಿಂಗವಿವಕ್ಷೆಯಿಲ್ಲದೆ ಸಾರ್ವತ್ರಿಕವಾಗಿ ಅವನೆ, ಅವಳೆ, ಇದೆ, ಇವೆ ಮೊದಲಾದುವುಗಳಲ್ಲಿ ಹತ್ತಿರುವ -ಎ ಪ್ರತ್ಯಯವು -ಐ ಎಂಬ ಪುಲ್ಲಿಂಗವಾಚಿಯಿಂದ ಬಂದಿರತಕ್ಕ ಸಂಭವ ಕಡಮೆ. ನಿರ್ಧಾರಣಾ(ಅವಧಾರಣಾ)ರ್ಥದ -ಎಕಾರವು ಹಳಗನ್ನಡದಲ್ಲಿ, ಹೊಸಗನ್ನಡದಲ್ಲಿ, ನಾಮಪದಕ್ಕೆ, ಗುಣವಚನಕ್ಕೆ, ಸರ್ವನಾಮಕ್ಕೆ, ಕಡೆಗೆ ಕ್ರಿಯಾಪದಕ್ಕೆ ಎಲ್ಲ ಕಡೆಯೂ ಭೇದವಿಲ್ಲದೆ ಹತ್ತುತ್ತದೆ. ಆದ್ದರಿಂದ ಮೇಲೆ ಕಂಡ ಸ್ಥಳಗಳಲ್ಲಿರುವುದು ನಿರ್ಧಾರಣಾರ್ಥದ -ಎಕಾರವೆಂದು ಭಾವಿಸುವುದೇ ವಿಹಿತ.

ಬರ್‌ತಿವ್‌ನಿ ಎಂಬುದಕ್ಕೆ ಅಪೂರ್ಣ ವರ್ತಮಾನ ಕಾಲದ (Present Imperfect) ಅರ್ಥವು, ಬರ್‌ತೀನಿ ಎಂಬುದಕ್ಕೆ ಸಾಮಾನ್ಯ ವರ್ತಮಾನ ಕಾಲದ (Present Indefinite) ಅರ್ಥವೂ ಇರುವ ಕಾರಣ, ಬರ್‌ತಿವ್‌ನಿ > ಬರ್‌ತೀನಿ ಎಂಬ ಊಹೆ ಸರಿಯಲ್ಲವೆಂದು ಶ್ರೀಮಾನ್ ಪ್ರಭುಗಳು ಭಾವಿಸುತ್ತಾರೆ. ಆದರೆ ಬರ್‌ತಿವ್‌ನಿ ಎಂಬುದರ ಅರ್ಥವನ್ನು ಹೀಗೆ ವ್ಯವಸ್ಥೆ ಮಾಡುವುದಕ್ಕೆ ರೂಢಿಯ ಮಾತಿನಲ್ಲಿ ಯಾವ ಆಧಾರವೂ ಕಾಣಿಸುವುದಿಲ್ಲ. ಬರ್‌ತಿವ್‌ನಿ, ಬರ್‌ತೀನಿ ಎಂಬುವುಗಳಲ್ಲಿ ಒಂದೊಂದನ್ನು ಜನಸಮುದಾಯದಲ್ಲಿ ಒಂದೊಂದು ವರ್ಗದವರು ಪ್ರಯೋಗಿಸುತ್ತಾರೆ; ಆದರೆ ಎರಡನ್ನೂ ಸಾಮಾನ್ಯ ವರ್ತಮಾನ ಕಾಲದ ಅರ್ಥದಲ್ಲಿ (=I come) ಪ್ರಯೋಗಿಸುವುದೇ ವಾಡಿಕೆ. ಬರುತಿರ್ದಪೆಂ (=I am coming) ಎಂಬುದರಿಂದ ಬರ್‌ತಿವ್‌ನಿ ಇಳಿಯಿತೆಂದು ನಂಬಿ, ಅದಕ್ಕೆ ಸರಿಹೋಗುವಂತೆ ಬರ್‌ತಿವ್‌ನಿ ಎಂಬುದರ ಅರ್ಥವನ್ನು ನಿಯಮಿಸುವುದು ಉಚಿತವಲ್ಲ. ವೈಯಾಕರಣನಿಗೆ ಪ್ರಯೋಗವೇ ಶರಣು.

**ತೀ. ನಂ. ಶ್ರೀಕಂಠಯ್ಯ.**



---

# ವಿವಿಧ ವಿಷಯಗಳು

**೧. ಲಕ್ಷ್ಮೀಶ ಕವಿ.**—೧೯೩೧ನೆಯ ಇಸವಿ ಮೇ ತಿಂಗಳಲ್ಲಿ ಚಿಕ್ಕಮಗಳೂರಿನಲ್ಲಿ ನೆರೆದ ಏಳನೆಯ ಕರ್ಣಾಟಕ ಸಾಹಿತ್ಯ ಸಮ್ಮೇಳನವು ಮುಗಿದ ತರುವಾಯ ಪರಿಷತ್ತಿನ ಕೆಲವರು ಸದಸ್ಯರು ಕಡೂರಿಗೆ ಹತ್ತು ಮೈಲಿಗಳ ದೂರದಲ್ಲಿ ರೈಲ್ವೇ ಸ್ಟೇಷನ್ನಾಗಿರುವ ದೇವನೂರಿಗೆ ಹೋಗಿ ಅಲ್ಲಿ ದೊರೆಯಬಹುದಾದ ಲಕ್ಷ್ಮೀಶ ಕವಿಯ ಕುರುಹುಗಳನ್ನು ಸಂಗ್ರಹಿಸಿ, ಈ ದೇವನೂರೇ ಈ ಕವಿಯ ವಾಸಸ್ಥಾನವಾಗಿದ್ದಿರಬೇಕೆಂದು ಅಭಿಪ್ರಾಯಪಟ್ಟರು. ಇದಕ್ಕೆ ಮೊದಲೂ, ಈಚೆಗೂ ಈ ಕವಿಯ ವಿಚಾರದಲ್ಲಿ ಪರಿಷತ್ಪತ್ರಿಕೆಯಲ್ಲಿಯೂ ಇತರ ಪತ್ರಿಕೆಗಳಲ್ಲಿಯೂ ಲೇಖನಗಳು ಆಗಾಗ ಬರುತ್ತಿರುವುವು. ಇಂತಹ ಕವಿ ಶ್ರೇಷ್ಠನ ವಾಸಸ್ಥಾನವು ಕನ್ನಡಿಗರಿಗೆ ಯಾತ್ರಾಸ್ಥಾನವಾಗುವಂತೆ ಮಾಡಲು ದೇವನೂರಿನಲ್ಲಿ ತಕ್ಕ ಒಂದು ಭವನವನ್ನು ನಿರ್ಮಿಸಿ ಅಲ್ಲಿ ಲಕ್ಷ್ಮೀಶನ ನೆನಪನ್ನುಂಟುಮಾಡುವಂತಹ ವಸ್ತುಸಂಗ್ರಹವನ್ನು ಮಾಡಬೇಕೆಂದು ಹಿಂದೆ ಕೆಲವರು ಪ್ರಯತ್ನ ಮಾಡಿ ಸಹಾಯ ದೊರೆಯದೆ ಸುಮ್ಮನಾದರು.

ಈಚೆಗೆ, ಮೈಸೂರು ಆರ್ಕೆಯೊಲಾಜಿಕಲ್ ಇಲಾಖೆಯ ಡೈರೆಕ್ಟರಾದ ಡಾಕ್ಟರ್ ಎಂ. ಎಚ್. ಕೃಷ್ಣ, ಎಂ.ಎ., ಡಿ.ಲಿಟ್. ಅವರು ೧೯೩೯ನೆಯ ಇಸವಿಯಲ್ಲಿ ಸಂಸ್ಥಾನದಲ್ಲಿ ಸಂಚಾರ ಮಾಡುತ್ತ, ದೇವನೂರಿಗೆ ಹೋಗಿ, ಅಲ್ಲಿ ತಮ್ಮ ಗೋಚರಕ್ಕೆ ಬಂದ ವಿಷಯಗಳನ್ನು ತಮ್ಮ ಇಲಾಖೆಯ ವರದಿಯಲ್ಲಿ (೧೯೩೮–೩೯ರ ವರದಿ, ಪುಟ 10–12) ಬರೆದಿರುತ್ತಾರೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಕೊಡುತ್ತೇವೆ:—

"ಈ ಸ್ಥಳದ ಹೆಸರು ೧೩ನೆಯ ಶತಮಾನದ ಒಂದು ಶಾಸನದಲ್ಲಿ ಬಂದಿರುವುದರಿಂದ ಇದು ಕೇವಲ ಪುರಾತನವಾದುದೆಂದು ಕಂಡುಬರುತ್ತದೆ. ಇಲ್ಲಿರುವ ಸಿದ್ಧೇಶ್ವರ ದೇವಸ್ಥಾನದ ನವರಂಗದಲ್ಲಿ ಶಕ ೧೧೫೬ (ಕ್ರಿ. ಶ. ೧೨೩೪)ರ ಒಂದು ಶಾಸನವಿದೆ; ಅದರಲ್ಲಿ ದೇವನೂರಿಗೆ ಲಕ್ಷ್ಮೀನಾರಾಯಣಪುರವೆಂಬ ಹೆಸರೂ ಇದ್ದಂತೆ ಹೇಳಿದೆ. ಈ ದೇವಸ್ಥಾನದಲ್ಲಿಯ ಲಿಂಗವನ್ನು 'ಜಗನ್ನಾಥವಿಜಯ'ದ ಕರ್ತೃವಾದ ರುದ್ರಭಟ್ಟನು ನರ್ಮದಾ ನದಿಯಿಂದ ತಂದಂತೆ ಹೇಳುತ್ತಾರೆ. ವಸಿಷ್ಠಗೋತ್ರದವರಾದ ಈ ದೇವಸ್ಥಾನದ ಅರ್ಚಕರು ರುದ್ರಭಟ್ಟನ ವಂಶೀಯರೆಂದು ಹೇಳಿಕೊಳ್ಳುತ್ತಾರೆ. ಹೂತುಹೋಗಿರುವ ಕೆರೆಯ ಪಕ್ಕದಲ್ಲಿ ಒಂದು ಜೈನ ಬಸ್ತಿಯಿದ್ದಿತೆಂದು ವಾರ್ತೆಯಿದೆ.

"ಈ ಹಳ್ಳಿಯೆಲ್ಲವೂ ಲಕ್ಷ್ಮೀಶ ಕವಿಯ ನೆನಪನ್ನು ತರುವಂತಹ ಕುರುಹುಗಳಿಂದ ತುಂಬಿದೆ. ತೊಂಡುವಾಡಿಯ (Cattle-pound) ಹಿಂಭಾಗದಲ್ಲಿರುವ ಸರಕಾರದ ಜಮೀನಿನಲ್ಲಿ ಲಕ್ಷ್ಮೀಶನು ಹುಟ್ಟಿದ ಮನೆಯಿದ್ದ ಸ್ಥಳವೆಂದು ಒಂದು ಪ್ರದೇಶವನ್ನು ತೋರಿಸುತ್ತಾರೆ. ಅಲ್ಲಿ ಮನೆಯ ತಳಹದಿಯ ಮತ್ತು ನೆಲದ ಗುರುತು ಸ್ವಲ್ಪ ಮಟ್ಟಿಗೆ ಕಾಣಬರುತ್ತದೆ; ಅಲ್ಲಿ ಹಿಂದೆ ಒಂದು ಮನೆಯು ಇದ್ದಿರಬೇಕು. ಈ

ಪ್ರದೇಶಕ್ಕೆ ಸಮೀಪದಲ್ಲಿ ಎರಡು ರಸ್ತೆಗಳು ಒಂದನ್ನೊಂದು ಉತ್ತರಿಸಿಕೊಂಡು ಹೋಗುತ್ತವೆ. ಅವುಗಳಲ್ಲಿ ಒಂದು ರಸ್ತೆಯ ಪೂರ್ವ ದಿಕ್ಕಿಗಿರುವ ಒಂದು ಸಣ್ಣ ಪ್ರದೇಶವು ಕವಿಯ ಮನೆಯು ನಿಂತಿದ್ದ ಸ್ಥಳವೆನ್ನುವುದರಲ್ಲಿ ಸಂಶಯವಿಲ್ಲವೆಂದು ತೋರಿಸುತ್ತಾರೆ. ಆ ಮನೆಯ ಬಾಗಿಲು ಉತ್ತರ ದಿಕ್ಕಿಗಿದ್ದು ಮುಂದಣ ಬೀದಿಗೆ ಅಭಿಮುಖವಾಗಿದ್ದಿರಬೇಕು. ಕವಿಯ ಜ್ಞಾಪಕಾರ್ಥವಾಗಿ ಲಕ್ಷ್ಮೀಕಾಂತ ದೇವಾಲಯದ ಹಿಂಭಾಗದಲ್ಲಿ ಹಾಕಿರುವ ಶಾಸನವು ಈ ಸ್ಥಳದಲ್ಲಿ ಹಾಕಿರ ಬೇಕಾಗಿದ್ದಿತು.

"ಈ ಹಳ್ಳಿಯ ಮುಖ್ಯ ದೇವಾಲಯವು ಲಕ್ಷ್ಮೀಕಾಂತ, ಅಥವಾ ಲಕ್ಷ್ಮೀ ನಾರಾಯಣ ದೇವರದು. ತೇರು ಬೀದಿಯು ದೇವಸ್ಥಾನದ ಮುಂಭಾಗದಿಂದ ಪೂರ್ವ ದಿಕ್ಕಿಗೆ ಹೋಗುತ್ತದೆ. ದೇವಾಲಯದ ಕಟ್ಟಡವು ಸಾಮಾನ್ಯವಾದುದು; ಕಲ್ಲಿನಿಂದ ಕಟ್ಟಿದುದು; ನಯ ಕೆಲಸವೇನೂ ಕಾಣುವುದಿಲ್ಲ. ಪೂರ್ವ ದಿಕ್ಕಿನ ಮಹಾ ದ್ವಾರದ ಬಳಿ ಇಟ್ಟಿರುವ ಬಳಪದ ಆನೆಗಳೂ ಉತ್ತರ ಮಹಾ ದ್ವಾರದ ಬಳಿ ಇಟ್ಟಿರುವ ಕೆಲವು ವಿಗ್ರಹಗಳೂ ಈಗ ನಾಶವಾಗಿ ಕಾಣದೆ ಹೋಗಿರುವ ರಾಮೇಶ್ವರ ದೇವಾಲಯಕ್ಕೆ ಬಹುಶಃ ಸೇರಿದ್ದುವಿರಬಹುದು. ಗರ್ಭ ಗುಡಿಯಲ್ಲಿ, ಲಕ್ಷ್ಮಿಯನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡಿರುವ ಲಕ್ಷ್ಮೀನಾರಾಯಣ ವಿಗ್ರಹವು ಅಂದವಾಗಿದೆ; ಅದು ಹೊಯ್ಸಳರ ಕೈಗೆಲಸವೆನ್ನುವುದಕ್ಕೆ ಸ್ಪಷ್ಟವಾದ ಸಾಕ್ಷ್ಯಗಳಿವೆ; ಪ್ರಭಾವಳಿ ಯಲ್ಲಿ ವಿಷ್ಣುವಿನ ಹತ್ತು ಅವತಾರಗಳನ್ನು ಕೆತ್ತಿದೆ. ಉತ್ತರಕ್ಕೆ ಒಂದು ಜಗಲಿಯ ಮೇಲೆ ಪದ್ಮಾಸನ ಹಾಕಿಕೊಂಡು ಕೈಮುಗಿದುಕೊಂಡು ಕುಳಿತಿರುವ ಹನ್ನೊಂದು ವಿಗ್ರಹಗಳಿವೆ; ಇವುಗಳಲ್ಲೊಂದು ಲಕ್ಷ್ಮೀಕಾಂತ ಹೆಬ್ಬಾರನದೆಂದು ತೋರಿಸುತ್ತಾರೆ; ಮಿಕ್ಕ ಹತ್ತೂ, ಹೊರಗಣ ನವರಂಗದಲ್ಲಿರುವ ಎರಡು ವಿಗ್ರಹಗಳೂ ಹನ್ನೆರಡು ಮಂದಿ ಶ್ರೀವೈಷ್ಣವ ಆಳ್ವಾರರವೆಂದು ಹೇಳುತ್ತಾರೆ. ಕವಿಯ ವಿಗ್ರಹವೆಂದು ಹೇಳುವ ಪ್ರತಿಮೆಗೆ ಶಿಖಾ ಯಜ್ಞೋಪವೀತಗಳಿಲ್ಲ; ಅದೂ ಮಿಕ್ಕ ಪ್ರತಿಮೆಗಳಂತೆಯೇ ಇದೆ; ಆದುದರಿಂದ ಇದು ಕವಿಯ ಪ್ರತಿಮೆಯೆಂದು ಹೇಳುವುದಕ್ಕೆ ತಕ್ಕ ಆಧಾರವಿಲ್ಲ.

"ದೇವಸ್ಥಾನದ ಪ್ರಾಕಾರದ ಹಿಂದಣ ಗೋಡೆಯ ಬಳಿಯಲ್ಲಿರುವ ಒಂದು ಮಂಟಪದಲ್ಲಿ ಮುಂದೆ ಹೇಳುವಂತೆ ಇಂಗ್ಲಿಷು ಅಕ್ಷರಗಳು ಕೆತ್ತಿರುವ ಒಂದು ಶಾಸನವಿದೆ:

"Near this spot was born Lakshmikanta Hebbar, author of Jayamuni Bharata."

ಇದರ ಕನ್ನಡ ಭಾಷಾಂತರ:—"ಈ ಸ್ಥಳದ ಬಳಿಯಲ್ಲಿ 'ಜಯಮುನಿ ಭಾರತದ' ಕರ್ತೃವಾದ ಲಕ್ಷ್ಮೀಕಾಂತ ಹೆಬ್ಬಾರನು ಹುಟ್ಟಿದನು."

ಇದು ಈಗ ಸುಮಾರು ಇಪ್ಪತ್ತು ವರುಷಗಳ ಕೆಳಗೆ ಸ್ಥಾಪಿತವಾಯಿತು; ಇದು ಸರಿಯಾದ ಸ್ಥಳದಲ್ಲಿಲ್ಲ; ದೇವಾಲಯದಿಂದ ಪೂರ್ವಕ್ಕೆ ಅನೇಕ ನೂರು ಗಜಗಳ ದೂರದಲ್ಲಿ ಇರಬೇಕಾಗಿದ್ದಿತು.

"ಈ ಸ್ಥಳದ ತಪ್ಪೂ, ಪ್ರಸಿದ್ಧ ಗ್ರಂಥದ ಹೆಸರಿನ ತಪ್ಪೂ ಆಗದಂತೆ, ಶಾಸನವನ್ನು ಪ್ರತಿಷ್ಠೆ ಮಾಡುವ ಸಂದರ್ಭದಲ್ಲಿ, ಆರ್ಕೆಯೊಲಾಜಿಕಲ್ ಇಲಾಖೆಯವರನ್ನು ಕೇಳಬೇಕಾಗಿದ್ದಿತು" ಎಂದು ಡೈರೆಕ್ಟರವರು ಹೇಳುತ್ತಾರೆ.

"ಈ ಶಾಸನದ ಪೂರ್ವದಿಕ್ಕಿಗೆ ಒಂಬತ್ತು ಎತ್ತರವಾದ ಕಲ್ಲು ಕಂಬಗಳುಳ್ಳ ಮಂಟಪವೊಂದಿದೆ. ಇದು ನಮ್ಮ ಕವಿಯೇ ಕಟ್ಟಿದುದೆಂದು ಹೇಳುತ್ತಾರೆ. ಪೂರ್ವದಲ್ಲಿ, ವೈಶಾಖ ಶುದ್ಧ ಹುಣ್ಣಿಮೆಯ ದಿನ ಕೊಠಾರೋತ್ಸವ ಸಮಯದಲ್ಲಿ ದೇವರನ್ನು ಈ ಮಂಟಪದಲ್ಲಿ ಬಿಜಯ ಮಾಡಿಸುತ್ತಿದ್ದರಂತೆ; ತರುವಾಯ ದೇವಸ್ಥಾನದ ಸುತ್ತಲೂ ಐದು ಬಾರಿ ಪ್ರದಕ್ಷಿಣೆ ಮಾಡಿಸುತ್ತಿದ್ದರಂತೆ. ಈಗಲೂ, ಈ ಐದು ಬಾರಿ ಪ್ರದಕ್ಷಿಣೆಗಳ ಕಾಲದಲ್ಲಿ ದೇವರ ಎದುರಿಗೆ ನಡೆಯುವ ಉಪಚಾರಗಳು :—

(೧) ವೇದ ಪಾರಾಯಣ, (೨) ತಿರುವಾಯ್ಮೊಳಿಯ ಪಾರಾಯಣ, (೩) ಜೈಮಿನಿ ಭಾರತದ ಪಠನ, (೪) ಕೀರ್ತನ, (೫) ವಾದ್ಯ ಶ್ರವಣ.

"ಜೈಮಿನಿ ಭಾರತ ಕರ್ತೃವಾದ ಲಕ್ಷ್ಮೀಕಾಂತ ಹೆಬ್ಬಾರನು ತಮ್ಮ ಊರಿನವನೆಂದೂ, ಇನ್ನೂರು ವರುಷಗಳಿಗಿಂತಲೂ ಹಿಂದೆ ಜೀವಿಸಿದ್ದವನೆಂದೂ, ಆಗ ತಮ್ಮ ಊರು ಅಗ್ರಹಾರವಾಗಿದ್ದು ಅನೇಕ ಬ್ರಾಹ್ಮಣರ ವಾಸಸ್ಥಾನವಾಗಿದ್ದಿತೆಂದೂ ದೇವನೂರಿನವರು ಹೇಳುತ್ತಾರೆ. ಅಲ್ಲಿ ವಡಗಲೆ ಶ್ರೀವೈಷ್ಣವ ಹೆಬ್ಬಾರರ ನೂರು ಸಂಸಾರಗಳು ಆಗ ವಾಸವಾಗಿದ್ದುವೆಂದೂ, ಅವರೆಲ್ಲರಿಗೂ ಸಾಮಾನ್ಯವಾಗಿ ಸ್ಮಾರ್ತರೇ ಪುರೋಹಿತರಾಗಿದ್ದರೆಂದೂ, ಈ ಶ್ರೀವೈಷ್ಣವರು ಅನೇಕ ಸ್ಮಾರ್ತಾಚಾರಗಳನ್ನು ಬಳಕೆಯಲ್ಲಿಟ್ಟುಕೊಂಡಿದ್ದರೆಂದೂ ಹೇಳುತ್ತಾರೆ. ಲಕ್ಷ್ಮೀಕಾಂತ ಹೆಬ್ಬಾರನು ಆಸ್ತಿವಂತನಂತೆ; ಬಹಳ ಆಸ್ತಿಯನ್ನು ಬಿಟ್ಟುಹೋದನಂತೆ. ಈಗ ಸುಮಾರು ನಾಲ್ವತ್ತು ವರುಷಗಳ ಹಿಂದೆ, ಅದೇ ಭಾರದ್ವಾಜ ಗೋತ್ರದ ಬಳ್ಳೀಕೆರೆಯಪ್ಪನೆಂಬ ಅಡ್ಡಹೆಸರುಳ್ಳ (ಆ ಹೆಸರುಳ್ಳ ಹಳ್ಳಿಯಲ್ಲಿ ವಾಸವಾಗಿದ್ದವನು) *ವೆಂಕಟರಮಣಯ್ಯನೆಂಬ ಒಬ್ಬ ಹೆಬ್ಬಾರಯ್ಯಂಗಾರ್ಯನನ್ನು ನಮ್ಮ ಕವಿಯ ವಂಶಸ್ಥನೆಂದೂ ಆತನ ಆಸ್ತಿಯಲ್ಲೊಂದು ಭಾಗವನ್ನು ಅನುಭವಿಸುತ್ತಿರುವನೆಂದೂ ಹೇಳುತ್ತಿದ್ದರು. ಈತನು ತನ್ನ ಐವತ್ತೈದನೆಯ ವಯಸ್ಸಿನಲ್ಲಿ ಬ್ರಹ್ಮಚಾರಿಯಾಗಿ ಸತ್ತುಹೋದನು; ಈತನ ದತ್ತಪುತ್ರನು ಶ್ರೀನಿವಾಸಯ್ಯಂಗಾರ್ಯನೆಂಬಾತನು; ಈತನೂ ಈಗ ಸುಮಾರು ಇಪ್ಪತ್ತು ವರುಷಗಳ ಹಿಂದೆ ಅಪುತ್ರಕನಾಗಿ ಸತ್ತುಹೋದನು. ಈ ಗ್ರಾಮದ ಅಧಿಕಾರಿಗಳು ಹಿಂದಕ್ಕೆ ಕವಿಯ ವಂಶಕ್ಕೆ ಸೇರಿದ್ದುವೆಂದು ಈಗಲೂ ಕೆಲವು ಸ್ವತ್ತುಗಳನ್ನು ನಿರ್ದೇಶಿಸುವರು. ಕೆಲವರು ಅನ್ವೇಷಕರು ಹೈದರಾಬಾದಿನಲ್ಲಿರುವ ಸುರಪುರವು ಲಕ್ಷ್ಮೀಶನ ಜನ್ಮಸ್ಥಾನವೆಂದು ತಪ್ಪು ತಿಳಿವಳಿಕೆಯಿಂದ ನಿರ್ದೇಶಿಸುವ ಕಾರಣ, ಮೇಲೆ ಹೇಳಿದ ವಿಷಯಗಳು ವಿಚಾರಣೀಯವಾಗಿವೆ.

* ಲಕ್ಷ್ಮೀಶ ಕವಿಯ ಈಚಿನ ವಂಶಸ್ಥನ ಹೆಸರು 'ವೆಂಕಟರಮಣಯ್ಯ' ಎಂಬ ವಿಷಯವೂ, ಇಲ್ಲಿಯ ಶ್ರೀವೈಷ್ಣವರ ಪುರೋಹಿತರು ಸ್ಮಾರ್ತರಾಗಿದ್ದರೆಂಬ ವಿಷಯವೂ ನೆನಪಿನಲ್ಲಿಡತಕ್ಕವು.

—ಸಂ., ಕ. ಸಾ. ಪ. ಪ.

"ಲಕ್ಷ್ಮೀನಾರಾಯಣ ದೇವಾಲಯವು ಶಿಥಿಲವಾಗುತ್ತಿದೆ; ಇದನ್ನು ಕೂಡಲೆ ಭದ್ರಪಡಿಸಬೇಕು; ಇಲ್ಲಿ ಹಾಕಿರುವ ಶಾಸನವನ್ನು ನಿಜವಾಗಿಯೂ ಕವಿಯ ಜನ್ಮ ಸ್ಥಾನವಾದ ಪ್ರದೇಶದಲ್ಲಿ ಸ್ಥಾಪಿಸಬೇಕು; ಆತನ ಮನೆಯಿದ್ದ ಪ್ರದೇಶದ ಸುತ್ತಲೂ ಅಂದವಾದ ತೋಟವನ್ನು ಮಾಡಿ ಕೆಡದಂತೆ ಚೊಕ್ಕಟವಾಗಿಟ್ಟುಕೊಂಡಿದ್ದರೆ ಉತ್ತಮ. ಏಕೆಂದರೆ, ಮುಂದೆಯಾದರೂ ಇಲ್ಲಿಗೆ ಕನ್ನಡಿಗರು ಯಾತ್ರಾರ್ಥಿಗಳಾಗಿ ಹೆಚ್ಚು ಮಂದಿ ಬಂದಾರು."

ಮೇಲೆ ಕೊಟ್ಟಿರುವ ಡೈರೆಕ್ಟರವರ ವರದಿಯನ್ನು ನೋಡಿದರೆ ಕನ್ನಡಿಗರಾದ ನಾವು ನಮ್ಮ ಕವಿಶ್ರೇಷ್ಠರ ವಿಷಯದಲ್ಲಿ ಎಷ್ಟು ಅನಾದರಣೆ ತೋರಿಸುತ್ತಿರುವೆ ವೆಂದು ತಿಳಿಯದೆಹೋಗದು. ಲಕ್ಷ್ಮೀಶನಂತಹ ಕವಿವರ್ಯನ ಜನ್ಮಸ್ಥಾನದಲ್ಲಿ ಒಂದು ಶಾಸನವನ್ನು ಹಾಕಬೇಕಾದರೆ ಮೈಸೂರು ಸರಕಾರದ ಒಬ್ಬ ಇಂಗ್ಲಿಷು (?) ಅಧಿಕಾರಿಯು ಆಸಕ್ತಿ ವಹಿಸಬೇಕಾಯಿತೆಂದು ತೋರುವುದು. ಶಾಸನವು ಇಂಗ್ಲಿಷು ಭಾಷೆಯಲ್ಲಿ, ಅದು ಹಾಕಿರುವ ಸ್ಥಳ ತಪ್ಪು ಸ್ಥಳ, ಕಾವ್ಯದ ಹೆಸರು **ಜಯಮುನಿ** ಭಾರತ!!! ಇಂತಹ ಶಾಸನವು ಎಷ್ಟೋ ವರುಷಗಳಿಂದ ನಿಂತಿದ್ದರೂ, ಅದನ್ನು ಎಷ್ಟೋ ಮಂದಿ ಕನ್ನಡಿಗರು ನೋಡುತ್ತಿದ್ದರೂ, ಅದನ್ನು ಸರಿಪಡಿಸುವ ಪ್ರಯತ್ನ ಮಾಡಲು ಇದುವರೆಗೂ ಯಾರಿಗೂ ಹೊಳೆಯಲಿಲ್ಲ! ಈಗಲಾದರೂ ಕನ್ನಡ ದೇಶಾಭಿಮಾನಿಗಳು ಈ ಕಾರ್ಯವನ್ನು ಕೈಕೊಳ್ಳುವರೆ?

---

**೨. ಜರ್ಮನಿಯಲ್ಲಿಯ ಇಂಡಿಯಾ ವಿದ್ಯಾರ್ಥಿಗಳ ಮೊದಲನೆಯ ಸಮ್ಮೇಳನ.**—ಜರ್ಮನಿಯಲ್ಲಿ ಇಂಡಿಯಾದೇಶದ ವಿದ್ಯಾರ್ಥಿಗಳು ಅನೇಕಮಂದಿ ಇರುವರು; ಅವರಲ್ಲಿ ಮೈಸೂರು ದೇಶದವರೂ ಕೆಲವರಿರುವರು. ಈ ವಿದ್ಯಾರ್ಥಿಗಳು ಜರ್ಮನಿಯ ಮ್ಯೂನಿಚ್ ಪಟ್ಟಣದಲ್ಲಿ 'ಹಿಂದೂಸ್ಥಾನದ ವಿದ್ಯಾರ್ಥಿಗಳ ಮಂಡಲಿ' (Hindustan Students' Club of Munich) ಎಂಬ ಸಂಸ್ಥೆಯೊಂದನ್ನು ಸ್ಥಾಪಿಸಿರು ವರು. ಈ ಮಂಡಲಿಯ ಪ್ರಯತ್ನದ ಮೇಲೆ ಈ ಸಮ್ಮೇಳನವು ೧೯೩೧ನೆಯ ಅಕ್ಟೋಬರು ೨೪-೨೫ನೆಯ ತಾರೀಖುಗಳಲ್ಲಿ ನಡೆಯಿತು. ಮ್ಯೂನಿಚ್ ವಿಶ್ವವಿದ್ಯಾ ನಿಲಯದ ವೈದ್ಯ ಶಾಖೆಯ ವಿದ್ಯಾರ್ಥಿನಿಯಾದ ಶ್ರೀಮತಿ ಡಾಕ್ಟರ್ ಮೈತ್ರೇಯಿ ಬೋಸ್, ಎಂ.ಬಿ. ಅವರನ್ನು ಸ್ವಾಗತಾಧ್ಯಕ್ಷರನ್ನಾಗಿಯೂ, ಅದೇ ವಿಶ್ವವಿದ್ಯಾ ನಿಲಯದ ಗೌರವ ಸದಸ್ಯರಾದ ಡಾಕ್ಟರ್ ತಾರಕನಾಥ ದಾಸರನ್ನು ಸಮ್ಮೇಳನದ ಅಧ್ಯಕ್ಷರನ್ನಾಗಿಯೂ ಆರಿಸಿದ್ದರು. ಈ ಸಮ್ಮೇಳನದ ಪ್ರಥಮೋದ್ದೇಶವು ಜರ್ಮನಿ ಯಲ್ಲಿರುವ ಇಂಡಿಯಾ ವಿದ್ಯಾರ್ಥಿಗಳ ಅನೇಕ ಮಂಡಲಿಗಳ ಕೇಂದ್ರ ಸಂಸ್ಥೆಯೊಂದರ ಸ್ಥಾಪನೆ. ಈ ಸಂಸ್ಥೆಯು ರಾಜ್ಯವ್ಯವಹಾರ ವಿಚಾರಗಳಿಗೆ ಸ್ವಲ್ಪವೂ ಗಮನ ಕೊಡಕೂಡದು. ಜರ್ಮನಿಯ ನಾನಾ ಪ್ರಾಂತಗಳಲ್ಲಿರುವ ಬರ್ಲಿನ್, ಕೊಲೋನ್, ಫ್ರೀಬರ್ಗ್, ಹಾನೊವರ್, ಹೋಹೆನ್‌ಹೈಮ್, ಕಾರ್ಲ್ಸ್‌ರೂಹಿ, ಮ್ಯೂನಿಚ್, ಸ್ಟುಟ್‌ಗಾರ್ಟ್—ಈ ಪಟ್ಟಣಗಳಲ್ಲಿಯ ವಿಶ್ವವಿದ್ಯಾನಿಲಯಗಳಲ್ಲಿ ವಿದ್ಯಾಭ್ಯಾಸಮಾಡು

ತ್ತಿರುವ ಇಂಡಿಯಾ ವಿದ್ಯಾರ್ಥಿಗಳು ಸಮ್ಮೇಳನಕ್ಕೆ ಬಂದಿದ್ದರು. ಫ್ರಾನ್‌ಕ್‌ಫರ್ಟ್, ಹೀಡಲ್‌ಬರ್ಗ್, ಜೇನ, ಟ್ಯೂಬಿಂಗನ್—ಈ ವಿಶ್ವವಿದ್ಯಾನಿಲಯಗಳ ಇಂಡಿಯಾ ವಿದ್ಯಾರ್ಥಿಗಳು ತಾವು ಬರಲು ಉಂಟಾದ ಅನಾನುಕೂಲಗಳನ್ನು ತಿಳಿಸಿ, ಸಮ್ಮೇಳನದ ಉದ್ದೇಶದ ವಿಷಯದಲ್ಲಿ ತಮ್ಮ ಸಂಪೂರ್ಣ ಸಹಾನುಭೂತಿಯನ್ನು ಶ್ರುತಪಡಿಸಿದ್ದರು.

ಕಾರ್ಯಕ್ರಮವು ಇಂಡಿಯಾ ರಾಷ್ಟ್ರಗೀತದೊಡನೆ ಆರಂಭವಾಯಿತು. ತರುವಾಯ ಶ್ರೀಮತಿ ಮೈತ್ರೇಯಿ ಬೋಸ್ ಅವರ ಭಾಷಣವು ನಡೆಯಿತು. ಇದಾದಮೇಲೆ, ಡಾ॥ ತಾರಕನಾಥ ದಾಸರನ್ನು ಸಮ್ಮೇಳನದ ಅಧ್ಯಕ್ಷರನ್ನಾಗಿ ಸರ್ವಾನುಮತದಿಂದ ಚುನಾಯಿಸಲಾಯಿತು. ಆಮೇಲೆ ಈ ಅಧ್ಯಕ್ಷರ ಭಾಷಣವು ನಡೆಯಿತು. ಇವರ ಭಾಷಣದಲ್ಲಿಯ ಕೆಲವು ಮುಖ್ಯಾಂಶಗಳನ್ನು ಮಾತ್ರ ಇಲ್ಲಿ ಕೊಡಲಾಗಿದೆ :—

"ಇಂಡಿಯಾ ದೇಶದ ವಿದ್ಯಾರ್ಥಿ ವರ್ಗಕ್ಕೂ ಪ್ರಪಂಚದ ಇತರ ನಾಗರಿಕ ಭಾಗಗಳ ವಿದ್ಯಾರ್ಥಿ ವರ್ಗಗಳಿಗೂ ಜ್ಞಾನ, ಚಾರಿತ್ರ, ವಿನಯ ಸಂಪತ್ತಿಗಳಲ್ಲಿ ಪರಸ್ಪರ ಪ್ರಬೋಧನೆಯುಂಟಾಗುವುದಕ್ಕಾಗಿ ಇಂಡಿಯಾ ವಿದ್ಯಾರ್ಥಿಗಳೆಲ್ಲರೂ ಒಟ್ಟು ಗೂಡಿರುವ ಸಂಸ್ಥೆಯೊಂದಿರಬೇಕಾದ ಆವಶ್ಯಕತೆಯುಂಟೆಂಬುದು ಮೊದಲಿಂದಲೂ ನನ್ನ ಅಭಿಪ್ರಾಯವು. ಇಂಡಿಯಾ ದೇಶದ ವಿದ್ಯಾರ್ಥಿಗಳು ತಮ್ಮ ಪೂರ್ವದ ಜ್ಞಾನೋತ್ಕರ್ಷತೆಯನ್ನು ಮಾತ್ರ ಉಗ್ಗಡಿಸುತ್ತ, ಅದೇ ಮಾರ್ಗವನ್ನು ತಾವೂ ಅನುಸರಿಸುತ್ತ, ಪ್ರಪಂಚದ ಇತರ ನಾಗರಿಕ ಪ್ರಾಂತಗಳ ಮಾರ್ಗವನ್ನು ಸ್ವಲ್ಪವೂ ಅರಿಯದೆ ಇರುವುದು ಇವರಿಗೆ ಕ್ಷೇಮಕರವಲ್ಲ. ಇಂಡಿಯಾ ದೇಶವು ಮುಂದೆ ಅಭಿವೃದ್ಧಿ ಹೊಂದಬೇಕಾದರೆ ಇದರ ಜನಾಂಗದ ಕಾರ್ಯದಕ್ಷತೆಯು ಎಲ್ಲ ಮಾರ್ಗ ಗಳಲ್ಲಿಯೂ—ಎಂದರೆ, ವೈಜ್ಞಾನಿಕ, ಆರ್ಥಿಕ, ರಾಜಕೀಯ ಮತ್ತು ರಾಷ್ಟ್ರೀಯ ರಕ್ಷಣ—ಇವುಗಳಲ್ಲಿ ಪರಿಶ್ರಮಹೊಂದಬೇಕು. ಆದುದರಿಂದ, ಇಂಡಿಯಾ ದೇಶದ ಪ್ರತಿ ವಿದ್ಯಾರ್ಥಿಯ ಪ್ರಥಮ ಕರ್ತವ್ಯವು ತನ್ನ ಸ್ವಂತ ಪಥದಲ್ಲಿ ತಾನು ಕಾರ್ಯ ದಕ್ಷತೆಯನ್ನು ಪಡೆಯಲು ಸಾಧ್ಯವಾದಷ್ಟು ಮಟ್ಟಿಗೂ ಯತ್ನಿಸಬೇಕಾದುದು. ಇದನ್ನು ಮಾಡಿದರೆಯೇ ಅವನು ತನ್ನ ದೇಶ ಸೇವೆ ಮಾಡಿದಂತಾಗುವುದು.

"ಜರ್ಮನಿಯಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವ ಇಂಡಿಯಾ ವಿದ್ಯಾರ್ಥಿಗಳು ತಮ್ಮ ದೇಶದ ಜನರ ಕಾರ್ಯಸಾಧನ ದಕ್ಷತೆಯನ್ನು ಜರ್ಮನಿಯಲ್ಲಿರುವಷ್ಟು ಮಟ್ಟಿಗಾದರೂ ಅಭಿವೃದ್ಧಿ ಮಾಡಲು ಉಪಾಯವೇನು ? ಜರ್ಮನಿಯಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವ ಇಂಡಿಯಾ ವಿದ್ಯಾರ್ಥಿಗಳ ಮುಂದಿರುವ ಪ್ರಶ್ನೆಯು ಇದೇ!

"ಜರ್ಮನಿಯಲ್ಲಿ ಇಂಡಿಯಾ ದೇಶದ ಐದರಲ್ಲಿ ಒಂದು ಭಾಗಕ್ಕಿಂತಲೂ ಕಡಿಮೆಯಾದ ಪ್ರಜಾ ಸಂಖ್ಯೆಯಿರುವುದು. ಇಂತಹ ದೇಶವು ಅತ್ಯಂತ ಪ್ರಬಲ ರಾಜ್ಯ ಗಳ ಸಮ್ಮೇಳನದೊಡನೆ ನಾಲ್ಕು ವರುಷಗಳು ಹೋರಾಡಿ ತನ್ನ ರಾಜ್ಯದ ಗಡಿಗಳನ್ನು ಸಂರಕ್ಷಿಸಿತು ; ಸೋತಮೇಲೆ, ಇತರ ರಾಷ್ಟ್ರಗಳವರು ತನ್ನನ್ನು ನಿರ್ಮೂಲ ಮಾಡಬೇಕೆಂದು ಎಷ್ಟು ಪ್ರಯತ್ನಿಸಿದರೂ ಕುಗ್ಗದೆ, ಈಗ ತನ್ನ ಪೂರ್ವ ಸ್ಥಾನವನ್ನು ಮರಳಿ ಪಡೆದಿರುವುದು. ಈಗಲೂ ಪ್ರಪಂಚದಲ್ಲಿ ಜರ್ಮನಿಯು ಅತ್ಯಂತ ಪ್ರಬಲ

ರಾಷ್ಟ್ರಗಳಲ್ಲಿ ಒಂದಾಗಿರುವುದು. ಇದಕ್ಕೆ ಕಾರಣವು ಜರ್ಮನರ ಅಸಾಧಾರಣ ವಾದ ಧೈರ್ಯ ಸ್ಥೈರ್ಯಗಳು; ಇವರಿಗೆ ಬೇಸರವೆಂಬುದು ತಿಳಿಯದು.

"ಜರ್ಮನಿಯಲ್ಲಿ ಈಗಿರುವ ಇಂಡಿಯಾ ವಿದ್ಯಾರ್ಥಿಗಳೂ ಮುಂದೆ ಬರಲಿರುವವರೂ ಜರ್ಮನಿಯಿಂದ ಕಲಿತುಕೊಳ್ಳಬೇಕಾದ ಪಾಠವೇನೆಂದರೆ—ಪ್ರತಿಯೊಬ್ಬರೂ ತಮ್ಮ ಕಾರ್ಯದಕ್ಷತೆಯನ್ನು ಅಭಿವೃದ್ಧಿಪಡಿಸಿಕೊಂಡು, ತಮ್ಮ ಜನಾಂಗವನ್ನೆಲ್ಲ ಈಗಿರುವ ಮಂದಗತಿಯಿಂದ ಎಚ್ಚರಿಸಿ, ಅದರ ಕಾರ್ಯದಕ್ಷತೆಯನ್ನು ಕೇವಲ ಅಭಿವೃದ್ಧಿಪಡಿಸಿ, ಪ್ರಪಂಚದಲ್ಲಿ ಇಂಡಿಯಾ ದೇಶವು ನ್ಯಾಯವಾಗಿ ಮಾಡಬೇಕಾದ ಕರ್ತವ್ಯವನ್ನು ತಪ್ಪದೆ ಮಾಡಲು ಯತ್ನಿಸಬೇಕಾದುದು. ನಾನು ನಿಮಗೆ ಹೇಳಲು ಬಯಸುವ ಬುದ್ಧಿವಾದವೇನೆಂದರೆ—ಬರಿ ಚರ್ಚೆಯಿಂದ ಕಾಲಕಳೆಯಬೇಡಿರಿ; ಮಾಡಬೇಕಾದ ಕೆಲಸವನ್ನು ಸದ್ದಿಲ್ಲದಂತೆ ಮಾಡಿರಿ. ಹತ್ತು ಮಂದಿ ಸೇರಿ ಎಲ್ಲರಿಗೂ ಉಪಯೋಗವಾಗುವಂತೆ ಒಟ್ಟಿಗೆ ಕೆಲಸಮಾಡುವ ಅಭ್ಯಾಸವನ್ನು ಪಡೆಯಿರಿ.

"ವಿಜ್ಞಾನಪ್ರತಿಭೆಯಲ್ಲಿ ಜರ್ಮನರಿಗೆ ಯಾವ ವಿಧದಲ್ಲಿಯೂ ಕಡಿಮೆಯಲ್ಲವೆಂದು ಪ್ರಪಂಚಕ್ಕೆ ತೋರ್ಪಡಿಸಬಲ್ಲ ಇಂಡಿಯನರು, ತಮ್ಮ ದೇಶದ ರಾಜಕೀಯ ಪರಿಸ್ಥಿತಿಯನ್ನು ಉತ್ತಮಗೊಳಿಸಬೇಕೆಂದು ಕೂಗಾಡುವವರಿಗಿಂತಲೂ ದೇಶಕ್ಕೆ ಹೆಚ್ಚು ಉಪಕಾರ ಮಾಡತಕ್ಕವರೆಂದು ಧೈರ್ಯವಾಗಿ ಹೇಳಬಹುದು.

"ಬರಿಯ ಕೂಗಾಟದಲ್ಲಿ ಕಾಲಕಳೆಯುತ್ತಿರುವ ನಮ್ಮ ದೇಶಾಭಿಮಾನಿಗಳು ತಮ್ಮ ಜೀವಮಾನದಲ್ಲಿ ಒಂದು ವರುಷ ಕಾಲವನ್ನು ಅಥವಾ, ತಮ್ಮ ಒಂದು ವರುಷದ ವರಮಾನವನ್ನು ತಮ್ಮ ದೇಶಾಭಿವೃದ್ಧಿಗೆಂದು ಮುಡುಪುಗಟ್ಟಿಟ್ಟಲ್ಲಿ, ಇದರಿಂದುಂಟಾಗ ಬಹುದಾದ ನಿಜವಾದ ವಿದ್ಯಾಭಿವೃದ್ಧಿಯ ಮೂಲಕ ನಮ್ಮ ದೇಶದ ಪರಿಸ್ಥಿತಿಯು ಬಹಳ ಮಟ್ಟಿಗೆ ಮಾರ್ಪಾಡಾಗುವುದರಲ್ಲಿ ಸಂಶಯವಿಲ್ಲ. ನಮ್ಮ ದೇಶದ ಸಾವಿರಾರು ಮಂದಿ ವಿದ್ಯಾರ್ಥಿಗಳು ಪರದೇಶಗಳ ವಿಶ್ವವಿದ್ಯಾನಿಲಯಗಳಲ್ಲಿ ಜ್ಞಾನಾರ್ಜನೆ ಮಾಡಿರುವರು. ಆದರೆ, ತಮ್ಮ ದೇಶಕ್ಕೆ ಹಿಂದಿರುಗಿದಮೇಲೆ ಇವರಲ್ಲಿ ಮುಕ್ಕಾಲೂ ಮೂರುವೀಸ ಪಾಲು ಮಂದಿಗೆ ದೇಶಾಭಿವೃದ್ಧಿಯ ನೆನಪೇ ಇಲ್ಲದಿರುವುದು ಬಹಳ ಶೋಚನೀಯ ವಾದ ವಿಷಯ. ನೀವಾದರೂ ಹಾಗೆ ಮಾಡದೆ ದೇಶವಾತ್ಸಲ್ಯವನ್ನುಳ್ಳವರಾಗಿ, ನಿಮ್ಮ ಕೈಯಲ್ಲಾಗುವಷ್ಟು ಸಹಾಯವನ್ನು ಮಾಡಿ, ಜನರಲ್ಲಿ ಜ್ಞಾನ ಪ್ರಸಾರವನ್ನು ಮಾಡುವಿರೆಂದು ಹಾರೈಸುತ್ತೇನೆ." —*Modern Review* for December 1931.

---

**೩. ದಿವಂಗತ ಮಹಾಮಹೋಪಾಧ್ಯಾಯ ಹರಪ್ರಸಾದ ಶಾಸ್ತ್ರಿಗಳು, ಸಿ. ಐ. ಇ., ಡಿ. ಲಿಟ್.**—ಅತ್ಯಂತ ಪ್ರಸಿದ್ಧ ಸಂಸ್ಕೃತ ವಿದ್ವಾಂಸರಾಗಿದ್ದ ಹರಪ್ರಸಾದ ಶಾಸ್ತ್ರಿಗಳು ಕಳೆದ ನವೆಂಬರು ೧೭ನೆಯ ತಾರೀಖಿನ ದಿನ, ತಮ್ಮ ೭೮ನೆಯ ವಯಸ್ಸಿನಲ್ಲಿ, ಕಲ್ಕತ್ತೆಯ ತಮ್ಮ ಸ್ವಗೃಹದಲ್ಲಿ ದೈವಾಧೀನರಾದುದು ಎಲ್ಲೆಲ್ಲಿಯೂ ಕೇವಲ ಪರಿತಾಪವನ್ನುಂಟುಮಾಡಿದೆ. ಇವರು ಅನೇಕ ತಲೆಗಳಿಂದಲೂ ಪ್ರಸಿದ್ಧಿಪಡೆದ ಬ್ರಾಹ್ಮಣ ಪಂಡಿತವಂಶದಲ್ಲಿ ಜನಿಸಿದವರು. ಬಂಗಾಳದ ಪ್ರಸಿದ್ಧ ಸಂಸ್ಕೃತ ಪಂಡಿತರಲ್ಲಿ ಅರ್ಧ ಮಂದಿ ಈ ವಂಶದವರ ಶಿಷ್ಯರೆನ್ನಬಹುದು. ಹರಪ್ರಸಾದ ಶಾಸ್ತ್ರಿಗಳು ಸ್ವಪ್ರಯತ್ನ

ದಿಂದಲೇ ಮುಂದಕ್ಕೆ ಬಂದವರು ; ವಿದ್ಯಾಭ್ಯಾಸಕ್ಕೆ ತಕ್ಕ ದ್ರವ್ಯ ಸಹಾಯ ದೊರೆಯದೆ ಬಹಳ ತೊಂದರೆಪಟ್ಟವರು. ಆದರೆ, ಬಡವರಾಧಾರಿಯಾದ ಸುಪ್ರಸಿದ್ಧ ಈಶ್ವರ ಚಂದ್ರ ವಿದ್ಯಾಸಾಗರರವರು ಇವರ ವಿದ್ಯಾಭ್ಯಾಸಕ್ಕೆ ಕೇವಲ ಸಹಾಯ ಮಾಡಿದರು. ಹರಪ್ರಸಾದ ಶಾಸ್ತ್ರಿಗಳು ತಮ್ಮ ಜೀವಮಾನದ ಅರ್ಧ ಶತಮಾನ ಕಾಲವನ್ನು ಇಂಡಿಯಾ ದೇಶದ ಸಂಸ್ಕೃತ್ಯನ್ವೇಷಣಕ್ಕಾಗಿ ವ್ಯಯ ಮಾಡಿದರು. ಇವರು ಆರಂಭದಲ್ಲಿ ಉಪಾಧ್ಯಾಯ ವೃತ್ತಿಯನ್ನವಲಂಬಿಸಿ ಬಹಳ ಕಷ್ಟಪಟ್ಟವರು. ಕೆಲಸ ಮಾಡುವುದರಲ್ಲಿ ಬೇಸರಿಕೆಯೆಂಬುದು ಇವರಿಗೆ ತಿಳಿಯದು ; ತಮಗೆ ತೋರಿದುದನ್ನು ನಿರ್ಭಯವಾಗಿ ಹೇಳಿಬಿಡುತ್ತಿದ್ದರು. ಇದರಿಂದ, ಇವರು ಒರಟು ಮನುಷ್ಯರೆಂದು, ಕೆಲವು ಮಂದಿ ಇವರಲ್ಲಿ ಅಷ್ಟು ಪ್ರೀತಿಯನ್ನು ತೋರಿಸುತ್ತಿರಲಿಲ್ಲ. ಆದರೆ ಇವರಲ್ಲಿ ಹೆಚ್ಚು ಬಳಕೆಯಿದ್ದವರು ಇವರ ಅನೇಕ ಸದ್ಗುಣಗಳನ್ನು ಬಲ್ಲರು.

ಶಾಸ್ತ್ರಿಗಳು ದೊಡ್ಡ ವಿದ್ವಾಂಸರು ; ಅನೇಕ ಗ್ರಂಥಗಳನ್ನು ಓದಿದ್ದವರು. ಸಂಸ್ಕೃತದ ಹಳೆಯ ಕೈ ಬರೆಹದ ಪುಸ್ತಕಗಳನ್ನು ಇವರು ನೋಡಿರುವಷ್ಟು ಬಹುಶಃ ಮತ್ತೆ ಯಾವ ಪಂಡಿತನೂ ನೋಡಿರಲಾರನು. ಸರಕಾರದ ಪರವಾಗಿ ಸಂಸ್ಕೃತದ ಕೈ ಬರೆಹದ ಪುಸ್ತಕಗಳ ಅನ್ವೇಷಣ ಮಾಡಲು ಇವರು ೧೮೭೮ನೆಯ ಇಸವಿಯಲ್ಲಿ ಆರಂಭ ಮಾಡಿದರು. ನೇಪಾಳದ ದರಬಾರಿನ ಪುಸ್ತಕ ಭಾಂಡಾಗಾರದಲ್ಲಿರುವ ಹಸ್ತಲಿಖಿತ ಪುಸ್ತಕಗಳನ್ನು ಪರೀಕ್ಷಿಸಲು ಸರಕಾರದವರು ಇವರನ್ನು ನಿಯಾಮಕ ಮಾಡಿದರು ; ಅಲ್ಲಿ ದೊರೆಯುವ ಬಹಳ ಮುಖ್ಯವಾದ ಪುಸ್ತಕಗಳ ವಿಚಾರವನ್ನು ಇವರು ಎರಡು ದೊಡ್ಡ ಸಂಪುಟಗಳಲ್ಲಿ ವಿವರಿಸಿರುತ್ತಾರೆ. ಇವರು ತಮಗೆ ದೊರೆತ ಇಂಡಿಯಾ ದೇಶದ ಸಾಹಿತ್ಯ ಮತ್ತು ರಾಜಕೀಯ ವಿಚಾರವಾದ ಕೆಲವು ಉತ್ತಮ ಗ್ರಂಥಗಳನ್ನು ಸಂಪಾದಿಸಿ ಪ್ರಕಟಿಸಿರುತ್ತಾರೆ ; ಹಸ್ತಲಿಖಿತ ಸಂಸ್ಕೃತ ಗ್ರಂಥಗಳ ವಿವರಣ ಪಟ್ಟಿಕೆಯೊಂದನ್ನು ಪ್ರಕಟಿಸಲಾರಂಭಿಸಿ ಇದುವರೆಗೆ ಆರು ಸಂಪುಟಗಳನ್ನು ಹೊರಡಿಸಿರುತ್ತಾರೆ ; ಇದಕ್ಕೆ ಇವರು ಬರೆದಿರುವ ಉಪೋದ್ಘಾತವು ಸಂಸ್ಕೃತ ಪಂಡಿತರುಗಳಿಗೆ ಕೇವಲ ಉಪಯೋಗಕರವಾದುದು. ಈ ಕೆಲಸವು ಮುಗಿಯುವುದಕ್ಕೆ ಮೊದಲೇ ಶಾಸ್ತ್ರಿಗಳು ಅಂತರಿಸಿದುದು ಪ್ರಪಂಚಕ್ಕೆ ಬಹಳ ನಷ್ಟವನ್ನುಂಟುಮಾಡಿದೆ. ಇಷ್ಟು ವಿವಿಧ ವಿಷಯಗಳನ್ನು ತಿಳಿದು ಇಷ್ಟು ಜ್ಞಾಪಕಶಕ್ತಿಯುಳ್ಳ ಮತ್ತೊಬ್ಬರು ವಿದ್ವಾಂಸರು ದೊರೆಯುವುದು ಕಷ್ಟ. ಶಾಸ್ತ್ರಿಗಳು ಬಂಗಾಳಿಯಲ್ಲಿಯೂ ಇಂಗ್ಲಿಷಿನಲ್ಲಿಯೂ ಅನೇಕ ಲೇಖನಗಳನ್ನೂ ಕೆಲವು ಪುಸ್ತಕಗಳನ್ನೂ ಬರೆದಿರುವರು. ಬಂಗಾಳಿಯಲ್ಲಿ ಬರೆದ 'ವಾಲ್ಮೀಕಿ ಜಯ' ಎಂಬ ಗದ್ಯ ಕಾವ್ಯವು ಪಾಶ್ಚಾತ್ಯರಿಂದಲೂ ಕೇವಲ ಮನ್ನಣೆ ಹೊಂದಿ ಅನೇಕ ಪಾಶ್ಚಾತ್ಯ ಭಾಷೆಗಳಿಗೆ ಪರಿವರ್ತನವಾಗಿದೆ. ಇವರು ಅನೇಕ ವರುಷ ಬಂಗೀಯ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದರು. ಈ ಪಂಡಿತರನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಂಸ್ಕೃತ ಭಾಷಾ ವಿಶಾರದರನ್ನಾಗಿ ಕರೆಯಿಸುವ ಪ್ರಯತ್ನಗಳು ಈಗ ಕೆಲವು ವರುಷಗಳ ಹಿಂದೆ ನಡೆದು ಫಲಕಾರಿಯಾಗಲಿಲ್ಲ.

—*Modern Review* for December 1931.

---

# ಗ್ರಂಥ ವಿಮರ್ಶೆ

## ೧. ಕನ್ನಡ ಮೇಘ ಸಂದೇಶ

ಗ್ರಂಥಕರ್ತರು.—ಪಂಡಿತ ಕುಕ್ಕೆ ಸುಬ್ರಹ್ಮಣ್ಯಶಾಸ್ತ್ರಿಗಳು, ಶಿವಮೊಗ್ಗ.

ಪ್ರಕಾಶಕರು.—ಕರ್ಣಾಟಕ ಸಂಘ, ಶಿವಮೊಗ್ಗ.

ಬೆಂಗಳೂರು ಪ್ರೆಸ್ಸಿನಲ್ಲಿ ಮುದ್ರಿತವಾಯಿತು; ಕ್ರೌನ್ ಅಷ್ಟಪತ್ರ ಪುಟಗಳು ೪೮; ಬೆಲೆ ೬ ಆಣೆ; ೧೯೩೧.

ಇದು ಕುಸುಮ ಷಟ್ಪದಿಯಲ್ಲಿ ಬರೆದ ಕಾವ್ಯ. "ಕಾಳಿದಾಸನ ನುಡಿಯು ಕೋಲುಜೇನಿನ ನುಡಿ"ಯೆಂದೂ, ಅದನ್ನು ತಾವು ಕನ್ನಡಿಸಿರುವೆವೆಂದೂ, ಮೇಘ ಸಂದೇಶವು ವಿರಹದಲ್ಲಿ ಸತಿ ಪತಿಗಳಿರುವ ರೀತಿಯನ್ನು ತಿಳಿಸುವ, ಮತ್ತು ಪರಶಿವನ ಮಹಿಮೆಯನ್ನು ವರ್ಣಿಸುವ, ಮತ್ತು ಪರಮಪಾವನ ತೀರ್ಥವಿರುವ ಸ್ಥಳಗಳನ್ನು ಹೇಳುವ ಕಾವ್ಯವಲ್ಲದೆ ಬರಿ ವಿರಹ ಕಥೆಯಲ್ಲವೆಂದೂ ಗ್ರಂಥಕರ್ತರು 'ನಿವೇದನ'ದಲ್ಲಿ ಹೇಳಿರುವರು. 'ಪೂರ್ವ ಮೇಘ'ದಲ್ಲಿ ೮೫ ಪದ್ಯಗಳೂ, 'ಉತ್ತರ ಮೇಘ'ದಲ್ಲಿ ೭೧ ಪದ್ಯಗಳೂ ಇರುವುವು. ಕವಿತೆಯು ಬಹಳ ಲಲಿತವಾಗಿಯೂ ಮನೋಹರವಾಗಿಯೂ ಇದೆ. ಪುಸ್ತಕದ ರೂಪು ಮುದ್ರಣಾದಿಗಳು ಬಹಳ ಅಂದವಾಗಿವೆ.

ಕಾಳಿದಾಸನು ಯಕ್ಷ ಶಾಪಕ್ಕೆ ಕಾರಣವನ್ನು ಸ್ಪಷ್ಟಗೊಳಿಸಿಲ್ಲ. ಇದನ್ನು ವ್ಯಾಖ್ಯಾಕಾರರು ಮೂರು ತೆರನಾಗಿ ಪ್ರತಿಪಾದಿಸಿರುವರು :—(೧) ಕುಬೇರನ ಸೇವಕನಾದ ಯಕ್ಷನು ಪ್ರತಿ ದಿನವೂ ತನ್ನ ಸ್ವಾಮಿಯ ಶಿವ ಪೂಜೆಗೆ ಮಾನಸ ಸರೋವರದಲ್ಲಿ ಹೊಸತಾಗಿ ಅರಳಿದ ಕಮಲಗಳನ್ನು ತಂದೊಪ್ಪಿಸುತ್ತಿದ್ದನು. ಕಾಮಿಯಾದ ಈ ಯಕ್ಷನು ಒಂದು ದಿನ ಆಲಸ್ಯದಿಂದ ತನ್ನ ಪ್ರಿಯೆಯ ಪಕ್ಕವನ್ನು ಬೇಗ ಬಿಟ್ಟೇಳಲಾರದೆ ಹಿಂದಣ ಸಂಜೆಯಲ್ಲಿ ತಂದಿದ್ದ ಕಮಲದ ಮೊಗ್ಗೆಗಳನ್ನೇ ಶಿವ ಪೂಜೆಗೆ ಅಣಿಮಾಡಿಟ್ಟು, ತಾನು ಪೂಜಾ ಕಾಲದಲ್ಲಿ ಸನ್ನಿಹಿತನಾಗಿರದೆ, ಸತೀ ಲೋಲುಪನಾಗಿದ್ದನು. ಕುಬೇರನು ಶಿವನನ್ನು ಈ ಕಮಲಗಳಿಂದ ಪೂಜಿಸುತ್ತಿರುವಾಗ ಒಂದು ಮೊಗ್ಗೆಯಲ್ಲಿ ಅಡಗಿಕೊಂಡಿದ್ದ ಒಂದು ತುಂಬಿಯು ಕುಬೇರನ ಬೆರಳನ್ನು ಕಚ್ಚಿತು. ಇದರಿಂದ ಕುಪಿತನಾದ ಕುಬೇರನು ಯಕ್ಷನಿಗೆ, ಸ್ವಾಧಿಕಾರ ಪ್ರಮತ್ತನೆಂದು, ಶಾಪವಿತ್ತನು. (೨) ಯಕ್ಷನು ಕುಬೇರನ ಉದ್ಯಾನದ ದ್ವಾರಪಾಲಕನಾಗಿದ್ದನು. ಒಂದು ದಿನ ಇಂದ್ರನ ಐರಾವತವು ಉದ್ಯಾನಕ್ಕೆ ನುಗ್ಗಿ ಪುಷ್ಪವಾಟಿಕೆಯನ್ನು ನಾಶಗೊಳಿಸಿತು. ಇದಕ್ಕಾಗಿ ಕುಬೇರನು ಯಕ್ಷನ ಮೇಲೆ ಕೋಪಗೊಂಡು ಅವನಿಗೆ ಶಾಪವಿತ್ತನು. (೩) ಯಕ್ಷನು "ಇಂದುಮುಖಿ ಮುಡಿದಿರ್ದ ಕುಂದ ಸುಮ

ಮಾಲಿಕೆಯು ತಂದು ಧನಪತಿಗೀಯಲು'', ಅದನ್ನರಿತು ಧನಪತಿಯು, ''ನಿನ್ನೊಲವಿನಿಂದುವದನೆಯುನಗಲುತೊಂದಬುದವಿರು'' ಎಂದು ಶಪಿಸಿದನು.

ಮೂರನೆಯ ಅಭಿಪ್ರಾಯವು ಈ ಗ್ರಂಥಕರ್ತರದು.

ಈ ಕನ್ನಡ ಪದ್ಯಗಳನ್ನು ಓದುತ್ತ ಹೋದಹಾಗೆಲ್ಲ ಕಾಳಿದಾಸನ ಕಾವ್ಯದ ಪ್ರತಿಬಿಂಬವು ಹೊಳೆಯುತ್ತ ಹೋಗುವುದು. ಕಾಳಿದಾಸನ ಭಾವಗಳನ್ನು ಚೆನ್ನಾಗಿ ಅರಗಿಸಿಕೊಂಡು ಅದರ ಸಾರವನ್ನು ಗ್ರಂಥಕರ್ತರು ತಮ್ಮ ಗ್ರಂಥದಲ್ಲಿ ವ್ಯಕ್ತಗೊಳಿಸಿರುವುದರಿಂದ ಇದು ಕಾಳಿದಾಸನ ಶಕ್ತಿಯನ್ನು ಕನ್ನಡಿಗರಿಗೆ ಚೆನ್ನಾಗಿ ತಿಳಿಯಪಡಿಸುವ ಗ್ರಂಥವೆಂದು ಹೇಳಬಹುದು.

---

## ೨. ಶಿಶುಚಂದ್ರಿಕೆ

ಗ್ರಂಥಕರ್ತರು.—ಬಿ. ಶ್ರೀಕಂಠಯ್ಯನವರು, ಹಾಸನ.

ತುಮಕೂರು ಶ್ರೀ ಪಾರ್ಶ್ವನಾಥ ಪ್ರಿಂಟಿಂಗ್ ವರ್ಕ್ಸ್‌ನಲ್ಲಿ ಮುದ್ರಿತವಾಯಿತು;
ಕ್ರೌನ್ ಅಷ್ಟಪತ್ರ ಪುಟಗಳು ೫೯; ಬೆಲೆ ೫ ಆಣೆ; ೧೯೨೯.

"ಈ ಗ್ರಂಥದಲ್ಲಿ ಬಾಲಲೀಲಾ ವಿಚಾರಗಳೂ, ಬಾಲಪಾಲನ ಲಾಲನಾದಿ ವಿಷಯಗಳೂ ವರ್ಣಿತವಾಗಿರುವುದು ಮಾತ್ರವಲ್ಲದೆ, ಮಕ್ಕಳ ಪುರೋವೃದ್ಧಿಗೆ ಮೂಲ ಕಾರಣರಾದ ತಾಯಿ ತಂದೆಗಳು ತಮ್ಮ ಕರ್ತವ್ಯಗಳನ್ನು ತಿಳಿದು ಮಕ್ಕಳನ್ನು ದೈವಭಕ್ತರನ್ನಾಗಿಯೂ ದೇಶೋದ್ಧಾರಕರನ್ನಾಗಿಯೂ ಮಾಡುವುದಕ್ಕೂ, ಆ ಮಕ್ಕಳು ತಮ್ಮ ಜನನೀ ಜನಕರಿಂದ ತಾವು ಹೊಂದಿದ ಉಪಕಾರ ಪರಂಪರೆಗಳನ್ನು ಆಲೋಚಿಸಿ, ಗ್ರಹಿಸಿ, ಅವರಿಗೆ ನಿರಂತರವೂ ಕೃತಜ್ಞರಾಗಿ ಸೇವೆ ಮಾಡಿ, ತಮ್ಮ ಕರ್ತವ್ಯವನ್ನು ಉಚಿತ ಧರ್ಮದಿಂದ ನಡೆಸಿ, ಸುಗುಣಶಾಲಿಗಳೆನಿಸಿ, ಲೋಕವನ್ನೂ ಲೋಕೇಶ್ವರನನ್ನೂ ಮೆಚ್ಚಿಸಿ, ಕೀರ್ತಿ ಸೌಭಾಗ್ಯ ಸಂತೋಷಗಳನ್ನು ಪಡೆವುದಕ್ಕೂ ಸಹ ಸಾಧಕವಾದ ಅನೇಕ ಸಾರ ತತ್ವಗಳನ್ನು ಸುಲಭವಾಗಿಯೂ ಗಂಭೀರವಾಗಿಯೂ ಈ ಚಿಕ್ಕ ಪುಸ್ತಕದಲ್ಲಿ ಗ್ರಂಥಕರ್ತರು ತುಂಬಿರುತ್ತಾರೆ'' ಎಂದು ಇದಕ್ಕೆ ಬರೆದಿರುವ ಮುನ್ನುಡಿಯಲ್ಲಿ ಮ॥ ರಾ॥ ಶ್ರೀ ಬೆಳ್ಳಾವೆ ನರಹರಿಶಾಸ್ತ್ರಿಗಳು ಹೇಳಿರುತ್ತಾರೆ.

ಇದರಲ್ಲಿರುವ ನಾಲ್ಕು ಪ್ರಕರಣಗಳಲ್ಲಿ ಒಟ್ಟು ೧೫೩ ಕಂದಪದ್ಯಗಳಿವೆ; ಪದ್ಯಗಳಿಗೆ ಟಿಪ್ಪಣವನ್ನು ಅಡಿಯಲ್ಲಿ ಕೊಟ್ಟಿದೆ. ಕೆಲವು ಇಂಗ್ಲಿಷು ಪದ್ಯಗಳೂ ಇವೆ. ಹಳಗನ್ನಡ ಹೊಸಗನ್ನಡ ಮಿಶ್ರಣವು ಕೆಲವು ಕಡೆ ಅಂದವಾಗಿಲ್ಲ. ಕವಿತೆಯು ನಿರ್ದುಷ್ಟವಾಗಿದೆಯೆಂದು ಹೇಳುವುದಕ್ಕಾಗದಿದ್ದರೂ ಗ್ರಂಥಕರ್ತರ ಅಸಾಧಾರಣವಾದ ಉತ್ಸಾಹವು ಪ್ರಶಂಸನೀಯವಾಗಿದೆ.

---

## ೩. ಕೃಷ್ಣಾಕುಮಾರಿ

ಗ್ರಂಥಕರ್ತರು.—ಬೆನಗಲ್ಲ ರಾಮರಾಯರು, ಎಂ.ಎ., ಎಲ್‌ಎಲ್.ಬಿ., ಮದರಾಸು.

ಪ್ರಕಾಶಕರು.—ಬಾಲಸಾಹಿತ್ಯ ಮಂಡಲ, ಲಿಮಿಟೆಡ್, ಕೊಡಿಯಾಲಬೈಲು, ಮಂಗಳೂರು.

ದ್ವಿತೀಯ ಮುದ್ರಣ; ಕ್ರೌನ್ ಅಷ್ಟಪತ್ರ ಪುಟಗಳು ೧೧೮; ಬೆಲೆ ರೂ. ೧—೪—೦; ೧೯೩೧.

ಇದು ವಂಗ ಕವಿ ಶ್ರೀಯುತ ಮಧುಸೂದನ ದತ್ತರಿಂದ ರಚಿತವಾದ ನಾಟಕದ ಪರಿವರ್ತನೆಯೆಂದೂ, ಈ ಕಥಾನಕದ ಮೂಲವು ಟಾಡ್ (Todd) ಅವರಿಂದ ರಚಿತವಾದ ರಾಜಸ್ಥಾನದ ಇತಿಹಾಸ (Annals of Rajasthan) ದಲ್ಲಿಯದೆಂದೂ ಲೇಖಕರು ಮೊದಲನೆಯ ಮುದ್ರಣದ (1912) ಪ್ರಸ್ತಾವನೆಯಲ್ಲಿ ಹೇಳಿರುತ್ತಾರೆ. ಈ ರೂಪಕದಲ್ಲಿ ಐದು ಅಂಕಗಳೂ, ಪ್ರತಿ ಅಂಕದಲ್ಲಿಯೂ ಗರ್ಭಾಂಕಗಳೂ ಇವೆ; ಪದ್ಯಗಳೂ ರಾಗಗಳೂ ಇಲ್ಲ.

ಕಥಾಸಂವಿಧಾನವೂ ಪಾತ್ರರಚನೆಯೂ ಸಮರ್ಪಕವಾಗಿರುವುವು. ಧನದಾಸನ ಪಾತ್ರವು ಲೋಕಕ್ಕೆ ನೀತಿಬೋಧಕವಾಗಿದೆ. ದುರ್ಮಾರ್ಗದಿಂದ ಲಾಭಪಡೆಯಲು ಕಾರ್ಯತತ್ಪರರಾಗುವವರು ಅವಹೇಳನಕ್ಕೆ ಈಡಾಗಿ ಕಷ್ಟಕ್ಕೆ ಸಿಕ್ಕುವರೆಂಬ ಅಂಶವು ಚೆನ್ನಾಗಿ ಚಿತ್ರಿತವಾಗಿದೆ. ವಿಲಾಸವತಿ ಧನದಾಸರ ಸಲ್ಲಾಪಗಳಿಂದ, ವಿಲಾಸವತಿಯು ಗೃಹಿಣೀ ಧರ್ಮವನ್ನು ತ್ಯಾಗಮಾಡಿ ಧನದಾಸನ ವಂಚನೆಯಿಂದ ಜಗತ್ಸಿಂಹನ ಭೋಗಸತಿಯಾದಳೆಂದು ವರ್ಣಿತವಾಗಿದೆ. ಇದರಿಂದ ಜಗತ್ಸಿಂಹನ ಗಾಂಭೀರ್ಯಕ್ಕೆ ಲೋಪವುಂಟಾಗುವುದು. ಕೃಷ್ಣಾಕುಮಾರಿಯಲ್ಲಿ ಪ್ರಣಯಬದ್ಧನಾಗುವುದೂ ಅದಕ್ಕಾಗಿ ಯುದ್ಧಸನ್ನದ್ಧನಾಗುವುದೂ ಕ್ಷತ್ರಿಯೋಚಿತವೇ ಆದರೂ ವಿಲಾಸವತಿಯಂತಹ ಕ್ಷುಲ್ಲಕ ಸ್ತ್ರೀಯಲ್ಲಿ ಅನುರಕ್ತನಾಗುವಂತೆ ಮಾಡುವುದರಿಂದ ನಾಯಕನಿಗೆ ಒಂದು ಕಳಂಕವನ್ನು ಆರೋಪಣೆ ಮಾಡಿದಂತಾಯಿತಲ್ಲವೆ! ಇದು ನಾಟಕದ ಯಾವ ಭಾವವನ್ನೂ ಪೋಷಿಸುವಂತಿಲ್ಲ. ಕೃಷ್ಣಾಕುಮಾರಿಯ ಧೈರ್ಯಸಾಮರ್ಥ್ಯಗಳೆಲ್ಲ ಉಚಿತವಾಗಿ ವರ್ಣಿತವಾಗಿವೆ. ಆದರೆ ಆಕೆಯ ಮರಣವು ವಿಷಪಾನದಿಂದಾಯಿತೆಂದು ಇತರ ಕಡೆಗಳಲ್ಲಿ ವರ್ಣಿಸಿರುವಾಗ, ಈ ನಾಟಕದಲ್ಲಿ ಆಕೆಯೇ ಕಠಾರಿಯಿಂದ ತಿವಿದುಕೊಂಡು ಪ್ರಾಣಬಿಟ್ಟಳೆಂದು ಉಲ್ಲೇಖಿಸಿದೆ. ಒಟ್ಟಿನಲ್ಲಿ, ಈ ನಾಟಕವು ಚಿತ್ತಾಕರ್ಷಕವಾಗಿದೆಯೆಂದು ಹೇಳಬೇಕು.

ಭಾಷೆಯಲ್ಲಿ, ಅಷ್ಟು ಸಮರ್ಪಕವಾಗಿ ಕಾಣದ ಕೆಲವು ಉದಾಹರಣೆಗಳು :—

ಪುಟ ೧೬.—

ಮಹಾರಾಜರು ಈಯುಂಗರವನ್ನು ನನ್ನೊಡನೆ ಇಡುವುದಕ್ಕೆಂದು ಕೊಟ್ಟಿರುವರು.

ದೊಡ್ಡಕ್ಷರದಲ್ಲಿರುವ ಭಾಗವು, "ನನ್ನೊಡನೆ ಇಟ್ಟುಕೊಂಡಿರುವುದಕ್ಕೆಂದು" ಎಂದಿದ್ದರೆ ಉತ್ತಮವಾಗಿರುತ್ತಿದ್ದಿತು.

ಪುಟ ೧೬.—

ಮೂರವಾಡದಲ್ಲಿ ಜನರು ನೀರನ್ನು ರಕ್ಷಿಸುವಂತೆ ನೀನು ಮಹಾರಾಜರ ವಸ್ತುಗಳನ್ನು ಕಾಪಾಡುತ್ತಿರಬಹುದಲ್ಲವೇ ?

ಇಲ್ಲಿ ಕೊಟ್ಟಿರುವ ಉಪಮಾನವು ಅಪ್ರಸಿದ್ಧವಾದುದು.

ಪುಟ ೧೭.—

ಈ ಕಾಲದಲ್ಲಿ ಉಪಕಾರ ಮಾಡಿದವರಿಗೆಲ್ಲ ಅಪಕಾರಮಾಡುವುದಕ್ಕೆ ವರ್ತಿಸದೆ ಬಿಡುವುದಿಲ್ಲ.

"ಅಪಕಾರ ಮಾಡಲು ವರ್ತಿಸದೆ" ಎಂದಿದ್ದರೆ ಉತ್ತಮವು.

---

## ೪. ಮನೋರಮಾ

ಗ್ರಂಥಕರ್ತರು.—ನಾಗವಾರ ನಾರಾಯಣರಾಯರು, ಬಿ.ಎ., ಬೆಂಗಳೂರು.

ಬೆಂಗಳೂರು ಪ್ರೆಸ್ಸಿನಲ್ಲಿ ಮುದ್ರಿತವಾಯಿತು; ಕ್ರೌನ್ ಅಷ್ಟಪತ್ರ
ಪುಟಗಳು ೧೦+೮೪ ; ಬೆಲೆ ? ; ೧೯೩೧.

"ಈ ನಾಟಕವು ಕನ್ನಡ ಸಂಸ್ಕೃತ ಮಿಶ್ರ ಭಾಷೆಯಲ್ಲಿ ಪಾಠಕರಿಗಾಗಿ ಗ್ರಂಥಕರ್ತರು ರಚಿಸಿರುವ ಐದಂಕಗಳುಳ್ಳ ಉತ್ಪಾದ್ಯ ಪ್ರಕರಣವಾದ ಉಪರೂಪಕ ವನ್ನು ರಂಗಭೂಮಿಯಲ್ಲಿ ಅಭಿನಯಿಸಲು ಸಂಕ್ಷೇಪಿಸಿ ಬರೆದುದಾಗಿದೆ.

"ಇದರಲ್ಲಿ ವಸಂತಸೇನನು ನಾಯಕನು, ರಾಜಪುತ್ರನು, ಧೀರೋದಾತ್ತನು; ಮನೋರಮೆಯು ನಾಯಿಕೆ, ರಾಜಕುಮಾರಿ, ಸ್ವೀಯೆ, ಮುಗ್ಧೆ. ಇಬ್ಬರೂ ಕುಲವೈರಿ ಪ್ರಸೂತರು, ಸತ್ಯಸಂಧರು, ಸುಶೀಲರು. ಇವರು ಮೊದಲು ಕನಕಾವತಿಯ ಮಧುವನದಲ್ಲಿ ಸಂಧಿಸಿ, ಆಗ ಅವರಲ್ಲಿ ಸಹಜವಾಗಿ ಉದಯಿಸಿದ ಪ್ರೇಮಾನುರಾಗ ಗಳನ್ನು........ಪರಸ್ಪರ ದಾನಮಾಡಿ, ನಂತರ ಕಷ್ಟ ಧರ್ಮ ಸಂಕಟಗಳಿಂದ ಪೀಡಿತರಾಗಿ, ಕಡೆಗೆ ವಿಧಿವಶದಿಂದ ಅಗಲಿಹೋಗಿ, ಕಾಣದ ತಾಣಗಳಲ್ಲಿ ಭ್ರಮಿಸಿ ಬಳಲುವರು. ತರುವಾಯ ಪತಿತನೂ ಪ್ರತಿರೋಧಕನೂ ಆದ ಜಯಂತನೆಂಬ ವಂಗ ರಾಜಪುತ್ರನು ಗೈದ ಕಪಟ ದ್ರೋಹಗಳನ್ನು ಗೆದ್ದು........ಮತ್ತೊಮ್ಮೆ ಸೇರುವರು. ಈ ಹೊತ್ತಿಗೆ ಅವರ ಉಭಯ ಮನೆತನದವರಿಗೆ ಸಖ್ಯವು ಸಮನಿಸು ವುದು..........ವಸಂತಸೇನನು ಕೊನೆಗೆ ಮನೋರಮೆಯನ್ನೂ, ಮಾಳವ ಪುತ್ರಿಯಾದ ಮಾಲತಿಯನ್ನೂ, ಸಿಂಧು ಕುವರಿಯಾದ ಶರತ್ಕುಮಾರಿಯನ್ನೂ ಮದುವೆ ಯಾಗುವನು............ಇಂತು..........ಮನೋರಮೆಯ ಅಮಲ ಚರಿತೆಯಿಂದ ಪ್ರಕಾಶವಾಗುವ, 'ನಿರಂತರವೂ ಸತ್ಯವೇ ಜಯಿಸುವುದು' ಎಂಬ

ನೀತಿಯನ್ನು ಈ ನಾಟಕವು ರೂಪಿಸಿ ಬೋಧಿಸುವುದು.''—ಹೀಗೆ ಗ್ರಂಥಕರ್ತರು ತಮ್ಮ ಪೀಠಿಕೆಯಲ್ಲಿ ಹೇಳಿರುವರು.

ಈ ನಾಟಕಕ್ಕೆ ಮ॥ ರಾ॥ ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಬರೆದಿರುವ ಇಂಗ್ಲಿಷು ಮುನ್ನುಡಿಯಲ್ಲಿ—'ಕಥೆಯು ಬೇಗ ಬೇಗನೆ ಸಾಗುವುದೆಂದೂ, ದೃಶ್ಯಗಳು ಚಾತುರ್ಯದಿಂದಳವಡಿಸಿದ ವೈವಿಧ್ಯವನ್ನು ಪಡೆದಿರುವುವೆಂದೂ, ಸಂಭಾಷಣೆಗಳು ಖಚಿತವಾಗಿಯೂ ಸ್ಪಷ್ಟವಾಗಿಯೂ ಇರುವುವೆಂದೂ, ಕವಿತೆಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಆಲಂಕಾರಿಕ ವಾಗಾಡಂಬರಗಳೂ, ಶೃಂಗಾರಾದಿ ರಸೋನ್ಮಾದತೆಯೂ ಇಲ್ಲದೆ ಕವಿತೆಯು ಮನೋಹರವಾಗಿರುವುದೆಂದೂ; ಒಟ್ಟಿನಲ್ಲಿ, ಇದು ಚಿತ್ತಾಕರ್ಷಕವಾದ ಆನಂದೋತ್ಪಾದಕ ರೂಪಕವೆಂದೂ, ಪ್ರತಿಯೊಬ್ಬರೂ ಇದನ್ನು, ಮುಖ್ಯವಾಗಿ ರಂಗದಲ್ಲಿ, ನೋಡಲರ್ಹವಾದುದೆಂದೂ' ಹೇಳುತ್ತಾರೆ.

ಅಲ್ಲಲ್ಲಿ ರಾಗಗಳೂ ಪದ್ಯಗಳೂ ಬರುತ್ತವೆ.

ಭಾಷೆಯು ಸರಳವಾಗಿಯೂ ಗಂಭೀರವಾಗಿಯೂ, ಒಟ್ಟಿನಲ್ಲಿ, ದೋಷರಹಿತವಾಗಿಯೂ ಇದೆ; ಹೊಸಗನ್ನಡದಲ್ಲಿ ಬರೆದಿದ್ದರೂ, ಅಲ್ಲಲ್ಲಿ ಹಳಗನ್ನಡ ಪ್ರತ್ಯಯಗಳನ್ನುಪಯೋಗಿಸಿರುವುದು ಅಂದವಾಗಿ ಕಾಣುವುದಿಲ್ಲ. ಮುದ್ರಣವು ಅಂದವಾಗಿಯೂ ತಪ್ಪುಗಳಿಲ್ಲದೆಯೂ ಇದೆ.

ನಮಗೆ ತೋರಿದ ಕೆಲವು ಕುಂದು ಕೊರತೆಗಳನ್ನು ತಿಳಿಸುವೆವು:—

ಕಥಾ ಸನ್ನಿವೇಶವು ನಂಬಿಕೆಗರ್ಹವಾಗದಷ್ಟು ವಿಪರೀತವಾಗಿರಬಾರದು. ಅರಮನೆಯನ್ನು ಬಿಟ್ಟು ಎಂದಿಗೂ ಹೊರಕ್ಕೆ ಹೋಗದ ರಾಜಕುಮಾರಿಯು ಸಮುದ್ರದಲ್ಲೊಬ್ಬಳೇ ಒಂದು ಹಲಗೆಯಮೇಲೆ ಪ್ರಯಾಣಮಾಡುವುದೂ, ಸಿಂಧು ದೇಶದಲ್ಲಿ ಪುರುಷವೇಷದಿಂದ ರಾಜನಿವಾಸದಲ್ಲಿ ತನ್ನ ರೂಪನ್ನು ಮರೆಯಿಸಿಕೊಂಡು ಬಹು ಕಾಲವಿರುವುದೂ, ಕುಲಗೋತ್ರಗಳು ತಿಳಿಯದಿದ್ದರೂ ರಾಜಪುತ್ರಿಯು ತನ್ನನ್ನು ವರಿಸುವುದೂ, ತರುವಾಯ ತಾನು ರಾಜ್ಯಭಾರ ಮಾಡುವುದೂ—ಇವೆಲ್ಲವೂ ಸಹಜವಾದ ಸನ್ನಿವೇಶಗಳಲ್ಲ. ಹಿಂದಣ ಕಥೆಗಳು ಕೆಲವು ಇಂತಹ ಸನ್ನಿವೇಶಗಳನ್ನುಳ್ಳವುಗಳಾಗಿದ್ದರೂ, ಅವನ್ನು ಈ ಕಾಲದಲ್ಲಿ ಪುನರುಜ್ಜೀವನ ಮಾಡುವುದರಿಂದ ಫಲವಿಲ್ಲ.

ಮುಂದೆ ಕೊಡುವ ರೂಪಗಳು ಸುಷ್ಠುವಲ್ಲ:—

(ಪುಟ ೨) ಜ್ಞಾಪಿಸಿದಿ, (೩) ಪಾಸಟೆ, ಓರ್ವನು (ಇದು ಬಹಳ ಕಡೆ ಬಂದಿದೆ; 'ಒರ್ವನು' ಎಂದಿರಬೇಕು), (೭) ನಿದಾನಿಸು, ಎನ್ನುವಿ, (೧೦) ತಂಬೆಲರು, (೧೨) ತಡೆಯುವದಕ್ಕೆ, (೧೪) ನಂತರ, (೧೭) ಅಂದುಕೊಳ್ಳುವುದು, (೧೯) ಬಿಡಿಸಿಕೊಳ್ಳಲೆತ್ನಿಸುವನು, (೩೧) ಸಂಜಾತರೋಳಿವ, (೩೪) ಮತ್ಯಾರನ್ನೂ, (೩೫) ಝೂಮು, (೩೭) ಗಗನ ಮಾಳಿಗೆ, (೩೮) ಭ್ರಷ್ಠ, ಘಳಿಗೆ, (೪೦) ನಾಲಿಗೆ, (೪೮) ಗಗನದೋಳೋಲಾಡು, ಹಲಿಗೆ, (೫೧) ವರಿಸಳುಯನ್ನ, (೫೪) ಕಲ್ಯಾಣಭಾಷಿಂಗ, (೫೬) ನಾನಿನ್ನ ಸತಿ, (೭೦) ಕಠಿಣ, (೮೨) ಯಲ್ಲೆ, ಕರದೊಯ್ವರು.

## ೫. ಆಷಾಢಭೂತಿ

ಗ್ರಂಥಕರ್ತರು.—ಎ. ಎನ್. ಮೂರ್ತಿರಾಯರು, ಎಂ.ಎ., ಮೈಸೂರು.

ಪ್ರಕಾಶಕರು.—ಕರ್ಣಾಟಕ ಸಂಘ, ಮೈಸೂರು.

ಮೈಸೂರು ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್ಸಿನಲ್ಲಿ ಮುದ್ರಿತವಾಯಿತು;
ಕ್ರೌನ್ ಅಷ್ಟಪತ್ರ ಪುಟಗಳು ೧೨+೮೦; ಬೆಲೆ ೧ ರೂಪಾಯಿ; ೧೯೩೧.

ಇದು ಹೊಸ ರೀತಿಯ ಸಾಮಾಜಿಕ ದೃಶ್ಯಪ್ರಬಂಧ; ಮೋಲಿಯೇರ್ ಎಂಬ ಪ್ರಸಿದ್ಧ ಫ್ರೆಂಚು ಕವಿಯ ತಾರ್ತುಫ್ (Tartuffe) ಎಂಬ ನಾಟಕದ ಆಧಾರದ ಮೇಲೆ ಬರೆದುದು. ಇದರಲ್ಲಿ ಐದು ದೃಶ್ಯಗಳಿವೆ. "ಫ್ರೆಂಚ್ ನಾಟಕದ ಸಂವಿಧಾನ ವನ್ನು ಆಧಾರವಾಗಿಟ್ಟುಕೊಂಡು, ಕಥೆಯನ್ನು ನಮ್ಮ ಸಮಾಜ ಸ್ಥಿತಿಗೆ ಹೊಂದಿಸಿ ಕೊಳ್ಳುವುದಕ್ಕೆ ಬೇಕಾದ ಬದಲಾವಣೆಗಳನ್ನು ಮಾಡಿಕೊಂಡು ಕನ್ನಡಿಗರ ಜೀವನ ವನ್ನು ಇದರಲ್ಲಿ ಚಿತ್ರಿಸಲು ಪ್ರಯತ್ನಿಸಿದೆ" ಎಂದು ಲೇಖಕರು ಪ್ರಸ್ತಾವನೆಯಲ್ಲಿ ಬರೆದಿರುತ್ತಾರೆ.

ಈ ನಾಟಕದ ಸನ್ನಿವೇಶವನ್ನು ನಮ್ಮ ಈಗಿನ ಸಮಾಜ ಸ್ಥಿತಿಗೆ ಮಾರ್ಪಡಿಸಿ ಕೊಂಡಿರುವುದರಲ್ಲಿ ಲೇಖಕರು ತಮ್ಮ ಜಾಣ್ಮೆಯನ್ನು ತೋರಿಸಿರುತ್ತಾರೆ. ಪಾತ್ರ ರಚನೆಯೂ ಆ ಪಾತ್ರಗಳ ಸಂಭಾಷಣೆಗಳೂ ಸಹಜವಾಗಿವೆ. ತಪ್ಪುಮಾಡಿದ ಸುಬ್ಬಾಶಾಸ್ತ್ರಿಯು ತಾನು ಮಾಡಿದ ತಪ್ಪಿನ ವಿಷಯವನ್ನೇ ವಿವರಿಸಿ ಹೇಳುತ್ತ, ಶಂಕರಪ್ಪನಿಗೆ ಅದು ತತ್ತ್ವಬೋಧೆಯಾಗಿ ತೋರುವಂತೆ ಕಲ್ಪಿಸಿರುವುದು ಲೇಖಕರ ಜಾಣ್ಮೆಯನ್ನು ತೋರ್ಪಡಿಸುತ್ತದೆ.

ಈ ನಾಟಕದಲ್ಲಿ ರಾಗಗಳೂ ಪದ್ಯಗಳೂ ಇಲ್ಲ; ಭಾಷೆಯು ಕೇವಲ ಮಾತ ನಾಡುವ ಭಾಷೆಯೇ. ಮುದ್ರಣವು ತಪ್ಪಿಲ್ಲದೆಯೂ ಅಂದವಾಗಿಯೂ ಇದೆ.

---

## ೬. ಮಹಾಭಾರತಾಮೃತ

(ಸಚಿತ್ರ)

ಲೇಖಕರು.—ವೇಂಕಟೇಶ ತಿರಕೋ ಕುಲಕರಣಿ ಗಳಗನಾಥರು, ಹಾವೇರಿ.

ಬೆಂಗಳೂರು ಸಿಟಿ ಸ್ಟ್ಯಾಂಡರ್ಡ್ ಪ್ರೆಸ್ಸಿನಲ್ಲಿ ಮುದ್ರಿತವಾಯಿತು; ಕ್ರೌನ್ ಅಷ್ಟಪತ್ರ
ಪುಟಗಳು ೪೯+೫೩೨; ಬೆಲೆ ರೂ. ೩—೮—೦; ೧೯೩೧.

ಮಹಾಭಾರತದ ಆದಿಪರ್ವದ ಕಥೆಯನ್ನು ಕರ್ಣಾಟಕದ ಸುಪ್ರಸಿದ್ಧ ಲೇಖಕರಾದ ಶ್ರೀ ಗಳಗನಾಥರವರು ಈ ಸಂಪುಟದಲ್ಲಿ ಕನ್ನಡ ಗದ್ಯರೂಪವಾಗಿ ಹೇಳಿದ್ದಾರೆ; "ಮಹಾಭಾರತದ ಮರಾಠೀ ಸುರಸ ಭಾಷಾಂತರವೂ, ಶ್ರೀ ಕೃಷ್ಣರಾಜ ವಾಣೀವಿಲಾಸದ ಕನ್ನಡ ಭಾರತವೂ" ತಮಗೆ ಈ ವಿಷಯದಲ್ಲಿ ಸಹಾಯಕವಾದುವೆಂದು ಪ್ರಸ್ತಾವನೆಯಲ್ಲಿ ತಿಳಿಸಿರುತ್ತಾರೆ. ಶ್ರೀ ಕೃಷ್ಣರಾಜ

ವಾಣೀವಿಲಾಸ ಭಾರತದಂತೆ ಗ್ರಂಥವು ಸಂಸ್ಕೃತ ಮೂಲದ ಕೇವಲ ಪರಿವರ್ತನೆ ಯಾಗಿಲ್ಲ. ಆದರೆ ಮುಖ್ಯವಾದ ಕಥಾಭಾಗಗಳು ಯಾವುವನ್ನೂ ಬಿಡದೆ ಕಥೆಯನ್ನು ಗ್ರಂಥಕರ್ತರು ತಮ್ಮ ಮಾತಿನಲ್ಲಿ ಸಂಕ್ಷೇಪವಾಗಿ ಹೇಳಿರುತ್ತಾರೆ. ಪ್ರತಿ ಆಂತರಾಳಿಕ ಪರ್ವ ಮುಗಿದಮೇಲೆ, ಆ ಪರ್ವದ 'ರಹಸ್ಯ'ಗಳನ್ನು "ಶ್ರೀ ಶೇಷ ಸದ್ಗುರು-ಸೂಕ್ತಿ ರೂಪದ ರಹಸ್ಯಗಳು" ಎಂಬ ಶಿರೋನಾಮದಿಂದ ವಿವರಿಸಿರುತ್ತಾರೆ. ಈ 'ರಹಸ್ಯ'ಗಳು ಒಟ್ಟಿನಲ್ಲಿ ಸುಮಾರು ನೂರು ಪುಟಗಳಷ್ಟಾಗುವುವು; ಇವುಗಳಲ್ಲಿ ಕೆಲವು, 'ರಾಜಕೀಯ ರಹಸ್ಯ'ಗಳೆನ್ನುವರು. ಈ ಸಂಪುಟದಲ್ಲಿ ಒಟ್ಟು ೨೪ ಚಿತ್ರಪಟಗಳಿವೆ.

ಶ್ರೀ ಗಳಗನಾಥರವರು ಬರೆದು ಪ್ರಚಾರಪಡಿಸಿರುವಷ್ಟು ಕನ್ನಡ ಗ್ರಂಥಗಳನ್ನು ಮತ್ತೆ ಯಾರೊಬ್ಬರೂ ಬರೆದಿಲ್ಲವೆಂದು ನಿಸ್ಸಂಶಯವಾಗಿ ಹೇಳಬಹುದು. ಈ ಅಪರವಯಸ್ಸಿನಲ್ಲಿಯೂ ಇವರ ಉತ್ಸಾಹವೂ ಕಾರ್ಯದಕ್ಷತೆಯೂ ಅಸಾಮಾನ್ಯ ವಾಗಿರುವುವು. ಇವರ ಆರ್ಥಿಕ ಸ್ಥಿತಿಯು ಕೇವಲ ಅಸಮರ್ಪಕವಾಗಿದ್ದರೂ, ಇಂತಹ ದ್ರವ್ಯಸಾಧ್ಯವೂ ಶ್ರಮಸಾಧ್ಯವೂ ಆದ ಮಹಾಕಾರ್ಯವನ್ನು ಇವರು ಕೈಕೊಂಡು ಪ್ರತಿಜ್ಞಾರೂಢರಾಗಿರುವರು. ಇಂತಹ ಮಹನೀಯರಿಗೆ ಕನ್ನಡಿಗ ರೆಲ್ಲರೂ ತಂತಮ್ಮ ಶಕ್ತಿಯಿದ್ದಷ್ಟು ಸಹಾಯ ಮಾಡಿ ಕನ್ನಡ ಮಾತೆಯ ಸುಪುತ್ರರೆನಿಸಿ ಕೊಳ್ಳುವರೆಂದು ಹಾರೈಸುತ್ತೇವೆ.

---

## ೭. ಕಿಟ್ಟು ಬೆಟ್ಟ ಎತ್ತಿದ

ಬರೆದವರು.—ಪ್ರ. ಗೋ. ಕುಲಕರಣಿ, ಬೆಳಗಾಂವಿ.

ಪ್ರಕಾಶಕರು.—ಕರ್ಣಾಟಕ ಫೋಟೊ ಝಿಂಕೊ ವರ್ಕ್ಸ್, ಬೆಳಗಾಂವಿ.

ಕ್ರೌನ್ ಅಷ್ಟಪತ್ರ ಪುಟಗಳು ೧೬; ಬೆಲೆ ೧ ಆಣೆ ೩ ಪೈ; ೧೯೩೧.

ಇದು 'ಬಾಲಾನಂದ ಗ್ರಂಥಮಾಲೆಯ' ಮೊದಲನೆಯ ಪುಷ್ಪ. ಇದರಲ್ಲಿ ೪ ಚಿತ್ರಗಳೂ, ಮೊದಲಲ್ಲಿ ಬಣ್ಣದ ಒಂದು ಚಿತ್ರಪಟವೂ ಇವೆ. ದೊಡ್ಡದಾದ ಅಕ್ಷರ ಗಳಲ್ಲಿ ಮುದ್ರಿತವಾಗಿರುವುದರಿಂದ ಬಾಲಕ ಬಾಲಿಕೆಯರು ಓದುವುದಕ್ಕೆ ಅನುಕೂಲ ವಾಗಿದೆ. ಕಡೆಯಲ್ಲಿ ಒಂದು ಹಾಡು ಇದೆ. "೭–೧೧ ವರ್ಷ ವಯಸ್ಸಿನ ಹುಡುಗರ ಸಲುವಾಗಿ ಕಥೆಗಳನ್ನು......ಶಕ್ಯವಿದ್ದಷ್ಟು ಮಕ್ಕಳ ಭಾಷೆಯಲ್ಲಿಯೇ ಬರೆಯ ಬೇಕು" ಎಂಬುದೇ ಸಂಪಾದಕರ ಅಭಿಪ್ರಾಯ.

ಇದು ಶ್ರೀ ಕೃಷ್ಣನ ಬಾಲಲೀಲೆಯ ಕಥೆ. ಭಾಷೆಯು ಸುಲಭವಾಗಿಯೂ ಲಲಿತವಾಗಿಯೂ ಇದೆ; ಆದರೆ ಧಾರವಾಡದ್ದು. ಲೇಖಕರು ವ್ಯಾಕರಣಕ್ಕೆ ಅಷ್ಟು ಗಮನಕೊಟ್ಟಿರುವಂತಿಲ್ಲ; ಇದನ್ನು ನ್ಯೂನತೆಯೆಂದೇ ನಾವು ಎಣಿಸುವೆವು. ತಳಹದಿ ಯನ್ನು ಸರಿಯಾಗಿ ಹಾಕಬೇಡವೆ? ಮುದ್ರಣದ ತಪ್ಪುಗಳು ಇಂತಹ ಪುಸ್ತಕಗಳಲ್ಲಿ ಒಂದೂ ಇರಬಾರದು: ಪುಟಗಳು ೩–೪ರಲ್ಲಿ ಒಂದೊಂದು ತಪ್ಪಿದೆ.

ಪುಟ ೧.—

ಊರ ಜನರೆಲ್ಲರೂ ಅವನ ಪ್ರೀತಿಸುತ್ತಿದ್ದರು. ಹೆಂಗಸರು ಅವನ ಮನೆಗೆ ಕರೆಯುವರು.

ಇಲ್ಲಿ 'ಅವನನ್ನು' ಎಂದಿರಬೇಡವೆ?

ಪುಟ ೫.—

ಹಾಲು ಸೋರಹತ್ತಿದವು.

ಇದು ಹೇಗೆ ಸರಿ?

ಬೆಳಕಿಂಡಿ (ಪು. ೫), ಹಾದಿಗೆ ಕೂತು (೬), ಒನಕೆ ಗಡುತರ (೧೧), ಗಾಬರಿಸಿದರು (೧೨)—

ಇವು ಮೈಸೂರಿನವರು ಒಪ್ಪುವಂತಹ ರೂಪಗಳಲ್ಲ.

ಹುಡುಗರು ತಾವಾಗಿ ಓದಿಕೊಳ್ಳಲು ಇಂತಹ ಪುಸ್ತಕಗಳು ನೂರಾರು ಪ್ರಕಟವಾಗಬೇಕು. ಕರ್ಣಾಟಕದ ಎಲ್ಲ ಭಾಗಗಳಿಗೂ ಅನುಕೂಲಿಸುವಂತೆ ಭಾಷೆಯನ್ನು ಸ್ವಲ್ಪ ಸರಿಪಡಿಸಿದರೆ ಭಾಷೆಯ ಏಕೀಕರಣಕ್ಕೆ ಇದು ಬಹಳ ಸಹಾಯವಾಗುವುದು.

---

## ೮. 'ಸ್ವದೇಶಾಭಿಮಾನಿ'ಯ ರಜತೋತ್ಸವ ಸಂಚಿಕೆ

ಡೆಮ್ಮೈ ಅರ್ಧ ಸೈಜು ಪುಟಗಳು ೭೨; ೨೩ನೆಯ ಅಕ್ಟೋಬರ್ ೧೯೩೧.

ಈ ಸಂಚಿಕೆಯು ಬಹಳ ಅಂದವಾಗಿದ್ದು, ಅನೇಕ ಉಪಯುಕ್ತ ವಿಷಯಗಳನ್ನೊಳಕೊಂಡಿದೆ. ಯಾವುದಾದರೂ ಒಂದು ಪತ್ರಿಕೆಯು ಇಪ್ಪತ್ತೈದು ವರುಷಗಳ ಕಾಲ ನಮ್ಮ ದೇಶದಲ್ಲಿ ನಡೆಯಿತೆಂದರೆ, ಅದರ ಪ್ರಾಶಸ್ತ್ಯದ ವಿಷಯದಲ್ಲಿ ಯಾವ ಸಂಶಯವೂ ಇರಲಾರದು. ಈ ಸಂದರ್ಭದಲ್ಲಿ, 'ಸ್ವದೇಶಾಭಿಮಾನಿ'ಯನ್ನು ನಾವು ಮನಃಪೂರ್ವಕವಾಗಿ ಅಭಿನಂದಿಸುತ್ತ, ಈ ಪತ್ರಿಕೆಯು ಚಿರಕಾಲ ದೇಶಸೇವೆ ಮಾಡಿ ಅಭಿವೃದ್ಧಿ ಹೊಂದಲಿ ಎಂದು ಹರಸುತ್ತೇವೆ.

ಈ ಸಂಚಿಕೆಯಲ್ಲಿ ಸಾಹಿತ್ಯ, ದೃಶ್ಯಪ್ರಬಂಧ, ಆಧುನಿಕ ಕವಿತೆ, ಸಣ್ಣಕತೆಗಳು, ರಾಜಕೀಯ ವಿಚಾರಗಳು, ವಿದ್ಯಾಭ್ಯಾಸ, ಕಲಾ, ವಿಜ್ಞಾನ—ಇವೇ ಮೊದಲಾದ ವಿಷಯಗಳು ಪ್ರೌಢ ರೀತಿಯಲ್ಲಿ ಪ್ರಸಿದ್ಧ ಲೇಖಕರಿಂದ ಪ್ರತಿಪಾದಿತವಾಗಿವೆ.

---



# ಕರ್ಣಾಟಕ ಸಾಹಿತ್ಯ ಪರಿಷತ್ತಿನ

## ಪ್ರಮೋದ ಸಂವತ್ಸರದ ವರದಿ

೧೯೩೧

ಶ್ರೀಃ
# ಕರ್ಣಾಟಕ ಸಾಹಿತ್ಯ ಪರಿಷತ್ತು

## ಪ್ರಮೋದ ಸಂವತ್ಸರದ ವರದಿ

೧. ಕಳೆದ ವರ್ಷ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಹದಿನಾರನೆಯ ಸಮ್ಮೇಳನವು ಮೈಸೂರು ನಗರದಲ್ಲಿ ವಿಶೇಷ ವಿಜೃಂಭಣೆಯಿಂದ ನಡೆಯಿತು. ಅದೇ ಸಮಯಕ್ಕೆ ಮೈಸೂರಿನ ಕರ್ಣಾಟಕ ಸಂಘದವರು ಕುಮಾರ ವ್ಯಾಸ ಜಯಂತ್ಯುತ್ಸವವನ್ನೂ ತರುಣ ಕವಿ ಸಮ್ಮೇಳನವನ್ನೂ ಅಲ್ಲಿಯೇ ನಡೆಯಿಸಿದರು. ಕರ್ಣಾಟಕದ ನಾನಾ ಪ್ರಾಂತಗಳಿಂದ ಕನ್ನಡ ಭಾಷಾಭಿಮಾನಿಗಳು ವಿಶೇಷವಾಗಿ ಬಂದು ಕರ್ಣಾಟಕ ಭಾಷಾ ಸೇವೆಯನ್ನು ಪ್ರೀತಿಯಿಂದಲೂ ಭಕ್ತಿಯಿಂದಲೂ ನೆರವೇರಿಸಿದರು. ಹದಿನಾರನೆಯ ಕರ್ಣಾಟಕ ಸಾಹಿತ್ಯ ಸಮ್ಮೇಳನವು ಈ ರೀತಿ ವಿತರಣೆಯಿಂದ ನಡೆದುದಕ್ಕಾಗಿ ಮೈಸೂರು ಶ್ರೀಮನ್ಮಹಾರಾಜರವರಿಗೂ, ಮೈಸೂರು ವಿಶ್ವವಿದ್ಯಾನಿಲಯಕ್ಕೂ, ಅರಮನೆಯ ಅಧಿಕಾರಿಗಳಿಗೂ, ಮೈಸೂರು ನಗರದ ಪೌರ ಸಭೆಯವರಿಗೂ ಮಹಾ ಜನರಿಗೂ ಕರ್ಣಾಟಕ ಸಾಹಿತ್ಯ ಪರಿಷತ್ತು ವಿಶೇಷ ಕೃತಜ್ಞತೆಯುಳ್ಳದ್ದಾಗಿದೆ.

ನಮ್ಮ ಪರಿಷತ್ತಿನ ಹದಿನೇಳನೆಯ ಸಮ್ಮೇಳನವು ಧಾರವಾಡದಲ್ಲಿ ನಡೆಯಬೇಕೆಂದು ಅಲ್ಲಿಯ ಪ್ರತಿನಿಧಿಗಳು ಹಿಂದಣ ಸಮ್ಮೇಳನದಲ್ಲಿಯೇ ಆಹ್ವಾನವನ್ನಿತ್ತರು. ಅದನ್ನು ಪರಿಷತ್ತಿನವರು ಸಂತೋಷದಿಂದ ಸ್ವೀಕರಿಸಿದರು. ಧಾರವಾಡದ ಮಹಾ ಜನರು ಪರಿಷತ್ಸಮ್ಮೇಳನದ ವಿಚಾರವನ್ನು ಕೈಕೊಳ್ಳುವಷ್ಟರಲ್ಲಿಯೇ, ಉತ್ತರ ಕನ್ನಡದ ಜಿಲ್ಲೆಯ ಮಹಾ ಜನರ ಪರವಾಗಿ, ಶ್ರೀಮಾನ್ ರಂಗಪ್ಪ ಪೋತ್ದಾರರವರು ಕಾರವಾರದಲ್ಲಿ ಸಮ್ಮೇಳನವು ನಡೆಯಬೇಕೆಂದು ಪರಿಷತ್ತಿಗೆ ಆಹ್ವಾನವನ್ನಿತ್ತರು. ಈ ಸಲಹೆಯು ಎರಡು ಕಾರಣಗಳಿಂದ ಪರಿಷತ್ತಿನವರಿಗೆ ಆಹ್ಲಾದಕರವಾಗಿರುವುದು. ಮೊದಲನೆಯದು: ಕರ್ಣಾಟಕ ಸಾಹಿತ್ಯ ಪರಿಷತ್ಸಮ್ಮೇಳನವನ್ನು ನಡೆಯಿಸಲು ಕರ್ಣಾಟಕದ ನಾನಾ ಭಾಗಗಳವರೂ 'ನಾವು ಮುಂದು ತಾವು ಮುಂದು' ಎಂಬುದಾಗಿ ಪ್ರೀತ್ಯಭಿಮಾನಗಳಿಂದ ವರ್ತಿಸುವುದನ್ನು ನೋಡಿದರೆ, ಕನ್ನಡಿಗರೆಲ್ಲರಲ್ಲೂ ಏಕೀಭಾವವೂ ಸಹೋದರ ವಾತ್ಸಲ್ಯವೂ ಇತೋಪ್ಯಧಿಕವಾಗಿ ವೃದ್ಧಿಯನ್ನೈದಿ ಒಟ್ಟು ಕರ್ಣಾಟಕದ ಏಳಿಗೆಗೆ ಕಾರಣವಾಗುವುದೆಂಬುದು. ಎರಡನೆಯದು: ನಮ್ಮ ಸಮ್ಮೇಳನವು ಉತ್ತರ ಕನ್ನಡದ ಜಿಲ್ಲೆಯಲ್ಲಿ ಒಂದು ಸಲವೂ ನಡೆಯದೆಯಿರುವ ಕೊರತೆಯು ಈ ಮೂಲಕ ಪರಿಹಾರವಾಗುವುದೆಂಬುದು.

ಮಹನೀಯರೇ, ಶೋಚನೀಯವಾದೊಂದು ಅಂಶವನ್ನು ಈಗ ತಮ್ಮಲ್ಲಿ ಬಿನ್ನೈಸಲು ವಿಷಾದಿಸುತ್ತೇನೆ. ಪರಿಷತ್ತಿನ ದ್ರವ್ಯಾನುಕೂಲತೆಯು ದಿನೇ ದಿನೇ

ಕಡಿಮೆಯಾಗುತ್ತಿದೆ. ಸದಸ್ಯರ ಸಂಖ್ಯೆಯು ಹೆಚ್ಚುತ್ತಬರುವುದೆಂಬ ಹಾರೈಕೆಯಿಂದ ನಾವು ವರ್ಷವರ್ಷವೂ ಉತ್ತಮ ಸ್ಥಿತಿಯನ್ನು ನಿರೀಕ್ಷಿಸಿಕೊಂಡಿರುವಲ್ಲಿ ವಾಸ್ತವ ವಿದ್ಯಮಾನವು ಅದಕ್ಕೆ ವಿರುದ್ಧವಾಗಿರುವುದು. ಸದಸ್ಯರ ಸಂಖ್ಯೆಯು ವರ್ಷದಿಂದ ವರ್ಷಕ್ಕೆ ಇಳಿಮುಖವಾಗುತ್ತಿದೆ: ಶುಕ್ಲ ಸಂವತ್ಸರದಲ್ಲಿ ೧೩೩ ಇದ್ದ ಸದಸ್ಯರ ಸಂಖ್ಯೆಯು ಪ್ರಮೋದ ಸಂವತ್ಸರದಲ್ಲಿ ೧೨೪ಕ್ಕೆ ಇಳಿಯಿತು. ಇನ್ನು ಮುಂದಾದರೂ, ಕರ್ಣಾಟಕ ಸಾಹಿತ್ಯ ಪರಿಷತ್ತಿನ ಸದಸ್ಯರ ಸಂಖ್ಯೆಯು ಹೆಚ್ಚುತ್ತಹೋಗುವಂತೆ ಪ್ರಯತ್ನ ಮಾಡಬೇಕಾದುದು ಕನ್ನಡಿಗರೆಲ್ಲರ ಕರ್ತವ್ಯವಾಗಿರುವುದು.

ಮೈಸೂರು ಶ್ರೀಮನ್ಮಹಾರಾಜರವರ ಸರಕಾರದ ಅಮೋಘವಾದ ಸಹಾಯವು ಎಂದಿನಂತೆಯೇ ಪರಿಷತ್ತಿನ ಮೂಲ ಬಲವಾಗಿರುವುದು. ಪರಿಷತ್ತಿನ ಕಟ್ಟಡಕ್ಕಾಗಿ ಅವರು ಹದಿನಾರು ಸಾವಿರ ರೂಪಾಯಿಗಳಿಗೆ ಮೇಲ್ಪಟ್ಟ ಸಹಾಯವನ್ನು ಮಾಡಿರುತ್ತಾರೆ. ಶ್ರೀಮನ್ಮಹಾರಾಜರವರೂ ಶ್ರೀಮದ್ಯುವರಾಜರವರೂ ಪರಿಷತ್ತಿಗೆ ಉದಾರ ಪೋಷಣೆಯನ್ನಿತ್ತು ಕೃಪಾ ಕಟಾಕ್ಷದಿಂದ ನೋಡುತ್ತಿರುವರು. ಮೈಸೂರು ಸಂಸ್ಥಾನದ ದಿವಾನರಾದ ಅಮೀನ್-ಉಲ್-ಮುಲ್ಕ್ ಸರ್ ಮಿರ್ಜಾ ಮಹಮ್ಮದ್ ಇಸ್ಮಾಯಿಲ್, ಕೆಟಿ., ಸಿ.ಐ.ಇ., ಓ.ಬಿ.ಇ. ಅವರೂ ಪರಿಷತ್ತಿನ ವಿಷಯದಲ್ಲಿ ವಿಶೇಷ ಪ್ರೀತಿಯನ್ನು ತೋರಿಸುತ್ತ, ಎಲ್ಲ ಸಂದರ್ಭಗಳಲ್ಲಿಯೂ ಸರಕಾರದಿಂದ ಸಾಧ್ಯವಾದ ಸಹಾಯವನ್ನು ಮಾಡುತ್ತಿರುವುದಕ್ಕಾಗಿ ನಾವು ಅವರಿಗೂ ಕೇವಲ ಕೃತಜ್ಞರಾಗಿರಬೇಕು.

**೨. ಕಾರ್ಯನಿರ್ವಾಹಕ ಮಂಡಲಿ.**—ಕಳೆದ ವರ್ಷದ (೧೯೩೦ನೆಯ) ಅಕ್ಟೋಬರು ತಿಂಗಳಲ್ಲಿ ಮೈಸೂರಿನಲ್ಲಿ ನೆರೆದಿದ್ದ ಕರ್ಣಾಟಕ ಸಾಹಿತ್ಯ ಸಮ್ಮೇಳನದ ಕೊನೆಯ ದಿವಸ ನಡೆದ ಪರಿಷತ್ತಿನ ವಾರ್ಷಿಕಾಧಿವೇಶನದಲ್ಲಿ ಕೆಳಗೆ ಕಂಡಂತೆ ಪ್ರಮೋದ ಪ್ರಜೋತ್ಪತ್ತಿ ಸಂವತ್ಸರಗಳಿಗೆ ಕಾರ್ಯನಿರ್ವಾಹಕ ಮಂಡಲಿಯ ಅಧಿಕಾರಿಗಳನ್ನೂ, ಪ್ರಮೋದ ಸಂವತ್ಸರಕ್ಕೆ ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರುಗಳನ್ನೂ ಚುನಾಯಿಸಲಾಯಿತು. ಆಯಾ ಪ್ರಾಂತಕ್ಕೆ ಆಯಾ ಪ್ರಾಂತದ ಸದಸ್ಯರುಗಳು ಚುನಾಯಿಸಿದವರ ಹೆಸರನ್ನು ಇಲ್ಲಿ ಕೊಟ್ಟಿದೆ:—

### ಅಧಿಕಾರಿಗಳು

**ಅಧ್ಯಕ್ಷರು.**—ಮೈಸೂರು ಶ್ರೀಮದ್ಯುವರಾಜರವರು ಸರ್ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹಾದ್ದೂರ್, ಜಿ.ಸಿ.ಐ.ಇ. ಅವರು.

**ಉಪಾಧ್ಯಕ್ಷರು.**—ರಾಜ ಸಭಾ ಭೂಷಣ, ವಿದ್ಯಾಭೂಷಣ ಶ್ರೀಮಾನ್ ಕರ್ಪೂರ ಶ್ರೀನಿವಾಸರಾಯರು, ಬಿ.ಎಸ್‌ಸಿ., ಎಲ್.ಸಿ.ಇ.

**ಗೌ॥ ಕಾರ್ಯದರ್ಶಿಯವರು.**—ಮ॥ ರಾ॥ ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್‌ಎಲ್.ಬಿ.

**ಗೌ॥ ಕೋಶಾಧ್ಯಕ್ಷರು.**—ಮ॥ ರಾ॥ ಬೆಳ್ಳಾವೆ ವೆಂಕಟನಾರಾಯಣಪ್ಪನವರು, ಎಂ.ಎ.

# ಸದಸ್ಯರು

## ಮೈಸೂರು ಪ್ರಾಂತಕ್ಕೆ

೧. ಮ॥ ರಾ॥ ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್. (ಬೆಂಗಳೂರು)
(ಮೈಸೂರು ಅರಮನೆಯ ಪ್ರತಿನಿಧಿಗಳು ಸಹ)
೨. ,, ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ. ,,
೩. ,, ತಿರುಮಲೆ ತಾತಾಚಾರ್ಯ ಶರ್ಮರು ,,
೪. ,, ಟಿ. ಅಪ್ಪೂರಾಯರು, ಬಿ.ಎ., ಬಿ.ಎಲ್. ,,
೫. ,, ಕೆ. ಸಂಪದ್ಗಿರಿರಾಯರು, ಎಂ.ಎ. ,,
೬. ,, ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ. (ಮೈಸೂರು)
೭. ,, ವಿ. ಸೀತಾರಾಮಯ್ಯನವರು, ಎಂ.ಎ. (ಬೆಂಗಳೂರು)
೮. ,, ಸಂ. ವೆಂಕಟೇಶ ಅಯ್ಯಂಗಾರ್ಯರು, ಬಿ.ಎ. ,,
೯. ,, ಕೆ. ಕೃಷ್ಣಯ್ಯಂಗಾರ್ಯರು, ಬಿ.ಎ. ,,
೧೦. ,, ಮಾಸ್ತಿ ವೆಂಕಟೇಶ ಐಯಂಗಾರ್ಯರು, ಎಂ.ಎ. ,,
೧೧. ,, ನಿಟ್ಟೂರು ಶ್ರೀನಿವಾಸರಾಯರು, ಬಿ.ಎಸ್‌ಸಿ., ಬಿ.ಎಲ್. ,,
೧೨. ,, ಎ. ಎನ್. ನರಸಿಂಹಯ್ಯನವರು, ಎಂ.ಎ., ಎಲ್.ಟಿ. ,,

## ಮುಂಬಯಿ ಪ್ರಾಂತಕ್ಕೆ

೧. ಮ॥ ರಾ॥ ಆಲೂರ ವೆಂಕಟರಾಯರು, ಬಿ.ಎ., ಎಲ್‌ಎಲ್.ಬಿ. (ಧಾರವಾಡ)
೨. ,, ನಾರಾಯಣ ಶ್ರೀನಿವಾಸ ರಾಜಪುರೋಹಿತರು ,,
೩. ,, ಎಚ್. ಚೆನ್ನಕೇಶವಯ್ಯಂಗಾರ್ಯರು ,,
೪. ,, ನಾರಾಯಣಸ್ವಾಮಿರಾವ್ ಲೋಕೂರ, ಬಿ.ಎ., ಎಲ್‌ಎಲ್.ಬಿ. (ಬೆಳಗಾಂವಿ)
೫. ,, ರಾವ್ ಸಾಹೆಬ್ ಮ॥ ರಾ॥ ಪಿ. ಜಿ. ಹಳಕಟ್ಟಿ, ಬಿ.ಎ., ಎಲ್‌ಎಲ್.ಬಿ. (ಬಿಜಾಪುರ)
೬. ,, ರಂಗಪ್ಪ ಭೀಮಪ್ಪ ಪೋತ್ದಾರ್, ಬಿ.ಎ. (ಕಾರವಾರ)
೭. ,, ದತ್ತಾತ್ರೇಯ ರಾಮಚಂದ್ರ ಬೇಂದ್ರೆ, ಬಿ.ಎ. (ಧಾರವಾಡ)
೮. ,, ಕೃಷ್ಣಾಜೀ ಗೋವಿಂದ ಗೆಜ್ಜಿ, ಬಿ.ಎ., ಎಲ್‌ಎಲ್.ಬಿ. (ಬೆಳಗಾಂವಿ)
೯. ,, ಬಿ. ಎಸ್. ಬೆಟಗೇರಿ ,,

## ಉತ್ತರ ಕರ್ಣಾಟಕ ಸಂಸ್ಥಾನಗಳಿಗೆ

೧. ಮ॥ ರಾ॥ ತಮ್ಮಪ್ಪ ಸತ್ಯಪ್ಪ ಚಿಕ್ಕೋಡಿ (ಬನಹಟ್ಟಿ)
೨. ,, ಕೆ. ಜಿ. ಕುಂದಣಗಾರ, ಎಂ.ಎ. (ಕೊಲ್ಹಾಪುರ)

## ಹೈದರಾಬಾದು ಸಂಸ್ಥಾನಕ್ಕೆ

೧. ಮ॥ ರಾ॥ ಎಂ. ಎಸ್. ಲಕ್ಷ್ಮೀನಾರಾಯಣರಾಯರು, ಬಿ.ಎ., ಎಲ್‌ಎಲ್.ಬಿ. (ಹೈದರಾಬಾದು)
೨. ,, ನಾರಾಯಣಶಾಸ್ತ್ರೀ ಭಾವೂಶಾಸ್ತ್ರೀ (ಕೊಪ್ಪಳ)

ಕೊಡಗು ಮತ್ತು ಮದರಾಸು ಪ್ರಾಂತಗಳ ಸದಸ್ಯರು ಯಾರೂ ಬರಲಿಲ್ಲವಾದುದರಿಂದ ಹಿಂದಣ ವರ್ಷದ ಸದಸ್ಯರೇ ಈ ವರ್ಷವೂ ಸದಸ್ಯರಾಗಿರತಕ್ಕುದೆಂದು ತೀರ್ಮಾನಿಸಲಾಯಿತು :—

**ಮದರಾಸು ಪ್ರಾಂತಕ್ಕೆ**

೧. ಮ॥ ರಾ॥ ಎಚ್. ತಿಮ್ಮಕೃಷ್ಣರಾಯರು, ಬಿ.ಎ., ಬಿ.ಎಲ್. (ಬಳ್ಳಾರಿ)
೨. ,, ಎನ್. ರಾಜಗೋಪಾಲ ಕೃಷ್ಣರಾಯರು (ಉಡಿಪಿ)
೩. ,, ಬೆನಗಲ್ ರಾಮರಾಯರು, ಎಂ.ಎ., ಎಲ್‌ಎಲ್.ಬಿ. (ಮದರಾಸು)

**ಕೊಡಗು ಪ್ರಾಂತಕ್ಕೆ**

೧. ಮ॥ ರಾ॥ ಎನ್. ಆರ್. ಸುಬ್ಬಣ್ಣಯ್ಯನವರು (ನಿಡತ)

**೩. ಅಧಿವೇಶನಗಳು.**—ಈ ವರ್ಷ ನಡೆದ ಕಾರ್ಯನಿರ್ವಾಹಕ ಮಂಡಲಿಯ ಅಧಿವೇಶನಗಳು ೬ (೧೯೩೦ನೆಯ ಮೇ ೧೮, ಆಗಸ್ಟು ೧೭, ಸೆಪ್ಟಂಬರು ೨೮, ನವೆಂಬರು ೧೬, ೧೯೩೧ನೆಯ ಫೆಬ್ರವರಿ ೮ ಮತ್ತು ೨೨). ಈ ಅಧಿವೇಶನಗಳಿಗೆ ಬಂದಿದ್ದ ಸದಸ್ಯರ ಹೆಸರು ಮತ್ತು ಅಧಿವೇಶನಗಳ ಸಂಖ್ಯೆ :—

ಗೌರವ ಕೋಶಾಧ್ಯಕ್ಷರು ೬, ಗೌರವ ಕಾರ್ಯದರ್ಶಿಗಳು ೫, ಮ॥ ರಾ॥ ತಿರುಮಲೆ ತಾತಾಚಾರ್ಯ ಶರ್ಮರು ೫, ಮ॥ ರಾ॥ ಕೆ. ಸಂಪದ್ಗಿರಿರಾಯರು ೪, ಮ॥ ರಾ॥ ಕೆ. ಕೃಷ್ಣಯ್ಯಂಗಾರ್‍ಯರು ೪, ಮ॥ ರಾ॥ ಟಿ. ಅಪ್ಪೂರಾಯರು ೩, ಮ॥ ರಾ॥ ನಂ. ವೆಂಕಟೇಶ ಅಯ್ಯಂಗಾರ್‍ಯರು ೩, ಮ॥ ರಾ॥ ವಿ. ಸೀತಾರಾಮಯ್ಯನವರು ೨, ಮ॥ ರಾ॥ ಎ. ಆರ್. ಕೃಷ್ಣಶಾಸ್ತ್ರಿಗಳು ೨, ಮ॥ ರಾ॥ ನಿಟ್ಟೂರು ಶ್ರೀನಿವಾಸರಾಯರವರು ೨, ಮ॥ ರಾ॥ ಎ. ಎನ್. ನರಸಿಂಹಯ್ಯನವರು ೨, ಮ॥ ರಾ॥ ಟಿ. ಎಸ್. ವೆಂಕಣ್ಣಯ್ಯನವರು ೧, ಮ॥ ರಾ॥ ಮಾಸ್ತಿ ವೆಂಕಟೇಶಯ್ಯಂಗಾರ್‍ಯರು ೧, ಮ॥ ರಾ॥ ಎಚ್. ಚೆನ್ನಕೇಶವಯ್ಯಂಗಾರ್‍ಯರು ೧, ಮ॥ ರಾ॥ ಬಿ. ಎಂ. ಶ್ರೀಕಂಠಯ್ಯನವರು ೧.

**೪. ಸದಸ್ಯರು.**—ಪ್ರಮೋದ ಸಂವತ್ಸರಾಂತದಲ್ಲಿದ್ದ ಸದಸ್ಯರ ಸಂಖ್ಯೆ ಮೊದಲಾದುವು :—

| ತರಗತಿ | ಸದಸ್ಯರ ಸಂಖ್ಯೆ | ಈ ವರ್ಷ ವಸೂಲಾದ ಚಂದಾ ಹಣ ರೂ. ಆ. ಪೈ | ಬಾಕಿ ಬರಬೇಕಾದ ಚಂದಾ ಹಣ ರೂ. ಆ. ಪೈ |
|---|---|---|---|
| ಪ್ರದಾತೃಗಳು | ೧ | ೫೦೦–೦–೦ | .. |
| ಸಹಾಯಕರು | ೫ | ೧೦೦–೦–೦ | .. |
| ಆಜೀವ ಸದಸ್ಯರು | ೭೪ | ೧೪೧–೦–೦ | ೧೭೬–೧೨–೦ |
| ಸಾಧಾರಣ ಸದಸ್ಯರು | ೪೪ | ೧೭೫–೦–೦ | ೨೮೮–೦–೦ |
| ಒಟ್ಟು | ೧೨೪ | ೯೧೬–೦–೦ | ೪೬೪–೧೨–೦ |

ಪ್ರಮೋದ ಸಂವತ್ಸರದಲ್ಲಿ ಸಹಾಯಕರೊಬ್ಬರು ಹೊಸದಾಗಿ ಸೇರಿದರು. ಆಜೀವ ಸದಸ್ಯರಲ್ಲಿ ಮೂವರು ದೈವಾಧೀನರಾದರು, ಒಬ್ಬರು ವರ್ಗವನ್ನು ಬದಲಾ

ಯಿಸಿಕೊಂಡು ಬಂದರು, ಇಬ್ಬರು ಹೊಸದಾಗಿ ಸೇರಿದರು. ಸಾಧಾರಣ ಸದಸ್ಯರುಗಳಲ್ಲಿ ಒಬ್ಬರು ವರ್ಗವನ್ನು ಬದಲಾಯಿಸಿಕೊಂಡರು, ಮೂರು ವರ್ಷಗಳಿಂದ ಚಂದಾ ಬಾಕಿಯು ಬಾರದೆ ಇದ್ದುದರಿಂದ ಹತ್ತು ಜನರ ಹೆಸರನ್ನು ವಜಾ ಮಾಡಲಾಯಿತು, ಒಬ್ಬರು ಸದಸ್ಯತ್ವವನ್ನು ಬಿಟ್ಟುಬಿಟ್ಟರು, ಇಬ್ಬರು ಹೊಸದಾಗಿ ಸೇರಿದರು. ಪರಿಷತ್ತಿನ ಸದಸ್ಯರ ಸಂಖ್ಯೆ ವರ್ಷಾರಂಭದಲ್ಲಿ ೧೩೩ ಇದ್ದುದು ವರ್ಷಾಂತದಲ್ಲಿ ೧೨೪ಕ್ಕೆ ಇಳಿಯಿತು.

**೫. ಸಂಪಾದಕ ಮಂಡಲಿ.**—ಹಿಂದಣ ಸಂಪಾದಕ ಮಂಡಲಿಯ ಸದಸ್ಯರನ್ನೇ ಪ್ರಮೋದ ಸಂವತ್ಸರಕ್ಕೂ ಚುನಾಯಿಸಿ, ಅವರ ಜೊತೆಗೆ ಮುಂಬಯಿ ಪ್ರಾಂತದ ಮತ್ತೊಬ್ಬ ಸದಸ್ಯರನ್ನು ಸೇರಿಸಿಕೊಳ್ಳಲಾಯಿತು. ಆ ಸದಸ್ಯರ ಹೆಸರನ್ನು ಇಲ್ಲಿ ಕೊಟ್ಟಿದೆ:—

೧. ಮ|| ರಾ|| ತಿರುಮಲೆ ತಾತಾಚಾರ್ಯ ಶರ್ಮರು (ಬೆಂಗಳೂರು)
೨. ,, ಕೆ. ಕೃಷ್ಣಯ್ಯಂಗಾರ್ಯರು, ಬಿ.ಎ. ,,
೩. ,, ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್ಎಲ್.ಬಿ. ,,
೪. ,, ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ. ,,
೫. ,, ಬೆಳ್ಳಾವೆ ವೆಂಕಟನಾರಾಯಣಪ್ಪನವರು, ಎಂ.ಎ. ,,
೬. ,, ನಂ. ವೆಂಕಟೇಶಯ್ಯಂಗಾರ್ಯರು, ಬಿ.ಎ. ,,
೭. ,, ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ. (ಮೈಸೂರು)
೮. ,, ದತ್ತಾತ್ರೇಯ ರಾಮಚಂದ್ರ ಬೇಂದ್ರೆ, ಬಿ.ಎ. (ಧಾರವಾಡ)
೯. ,, ಆರ್ಕಾಟು ಭೀಮಾಚಾರ್ಯರು, ಎಂ.ಎ., ಎಲ್.ಟಿ. (ಬಳ್ಳಾರಿ)
೧೦. ,, ರಾವ್ ಸಾಹೆಬ್ ಮ|| ರಾ|| ಪಿ. ಜಿ. ಹಳಕಟ್ಟಿ, ಬಿ.ಎ., ಎಲ್ಎಲ್.ಬಿ. (ಬಿಜಾಪುರ)

ಸಂಪಾದಕ ಮಂಡಲಿಯ ಅಧಿವೇಶನಗಳು ೧೯೩೦ನೆಯ ಸೆಪಟಂಬರು ೧೦, ೧೯೩೧ನೆಯ ಮಾರ್ಚಿ ೮—ಈ ತಾರೀಖುಗಳಲ್ಲಿ ನಡೆದುವು.

**೬. ಪರಿಷತ್ತಿನ ವಾಙ್ಮಯ ಕಾರ್ಯ ವಿಚಾರ.**—

**ಪರಿಷತ್ಪತ್ರಿಕೆ.**—ಇದನ್ನು ಸಕಾಲದಲ್ಲಿ ಹೊರಡಿಸುವ ಪ್ರಯತ್ನವು ಲೇಖನಗಳ ಅಭಾವದಿಂದ ಇನ್ನೂ ಸಫಲವಾಗಲಿಲ್ಲ. ೧೯೨೯ನೆಯ ಅಕ್ಟೋಬರು ಸಂಚಿಕೆಯನ್ನು ೨೭-೫-೩೦ರಲ್ಲಿಯೂ, ೧೯೩೦ನೆಯ ಜನವರಿ ಸಂಚಿಕೆಯನ್ನು ೩೦-೮-೩೦ರಲ್ಲಿಯೂ, ಏಪ್ರಿಲ್ ಸಂಚಿಕೆಯನ್ನು ೧೭-೧೨-೩೦ರಲ್ಲಿಯೂ, ಜೂಲೈ ಸಂಚಿಕೆಯನ್ನು ೧೬-೨-೩೧ರಲ್ಲಿಯೂ ಪ್ರಕಟಿಸಲಾಯಿತು. ಇತರ ಸಂಚಿಕೆಗಳನ್ನೂ ಸಾಧ್ಯವಾದ ಮಟ್ಟಿಗೆ ಬೇಗನೆ ಪ್ರಕಟಿಸಲು ಪ್ರಯತ್ನ ನಡೆಯುತ್ತಿದೆ.

**ಪಂಪ ಭಾರತ.**—ಅನೇಕ ವರ್ಷಗಳಿಂದ ನಡೆಯುತ್ತಿದ್ದ ಈ ಗ್ರಂಥದ ಮುದ್ರಣದ ಕಾರ್ಯವು ಪೂರ್ತಿಯಾಗುತ್ತಿರುವುದಕ್ಕಾಗಿ ಸಂತೋಷಪಡಬೇಕಾಗಿದೆ. ಈ ಕಾರ್ಯವನ್ನು ಕೈಕೊಂಡು ವಿಶೇಷ ಶ್ರಮವನ್ನು ವಹಿಸಿ ಸಾಂಗವಾಗಿ ಪೂರಯಿಸಿ

ದುದಕ್ಕಾಗಿ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯವರು ಈ ಗ್ರಂಥದ ಸಂಪಾದಕರಾದ ಮ॥ ರಾ॥ ಬೆಳ್ಳಾವೆ ವೆಂಕಟನಾರಾಯಣಪ್ಪನವರಿಗೂ, ಮ॥ ರಾ॥ ತಳಕು ವೆಂಕಣ್ಣಯ್ಯನವರಿಗೂ, ಮ॥ ರಾ॥ ಪಂಡಿತರು ಕಡಬದ ನಂಜುಂಡಶಾಸ್ತ್ರಿಗಳಿಗೂ ವಂದನೆಗಳನ್ನು ಅರ್ಪಿಸುತ್ತಾರೆ.

**ಇತರ ಕಾರ್ಯಗಳು.**—ಶ್ರೀ ಕಂಠೀರವ ನರಸಿಂಹರಾಜ ಪರಿಪೋಷಿತ ಕರ್ಣಾಟಕ ವೈಜ್ಞಾನಿಕ ಗ್ರಂಥಮಾಲೆಯ ಮೊದಲನೆಯ ಗ್ರಂಥವಾದ, ಮ॥ ರಾ॥ ನಂಗಪುರಂ ವೆಂಕಟೇಶ ಅಯ್ಯಂಗಾರ್ಯರವರು ಬರೆದಿರುವ 'ಜ್ಯೋತಿರ್ವಿನೋದಿನಿ'ಯು ಪ್ರಕಟನೆಗೆ ಸಿದ್ಧವಾಗಿದೆ. ಈ ಗ್ರಂಥವನ್ನು ರಚಿಸಿ ಈ ಗ್ರಂಥಮಾಲೆಯು ಸಲಕ್ಷಣವಾಗಿ ಆರಂಭವಾಗುವಂತೆ ಸಹಾಯ ಮಾಡಿದುದಕ್ಕಾಗಿ ಪರಿಷತ್ಕಾರ್ಯನಿರ್ವಾಹಕ ಮಂಡಲಿಯವರು ಮ॥ರಾ॥ ನಂ. ವೆಂಕಟೇಶ ಅಯ್ಯಂಗಾರ್ಯರನ್ನು ಅಭಿನಂದಿಸುತ್ತಾರೆ.

ಮುಂಬಯಿಯ ಪೋಸ್ಟು ಮಾಸ್ಟರ್ ಜನರಲ್ ಅವರು ಕಳುಹಿಸಿದ ಇಂಗ್ಲಿಷಿನ ಪೋಸ್ಟಾಫೀಸು ನಮೂನೆಗಳು ಇಪ್ಪತ್ತನ್ನು ಕನ್ನಡಿಸಿ ಕಳುಹಿಸಿಕೊಡಲಾಯಿತು.

**೭. ವಾಚನ ಮಂದಿರ.**—ಈ ಮಂದಿರವು ಎಂದಿನಂತೆ ಶಂಕರಪುರ, ಬಸವನಗುಡಿ—ಈ ಪ್ರಾಂತಗಳಲ್ಲಿರುವ ವಿದ್ಯಾರ್ಥಿಗಳಿಗೂ ಪೆನ್‌ಷನ್ ನೌಕರರಿಗೂ ಹೆಚ್ಚಿನ ಉಪಯೋಗವಾಗುತ್ತಲಿದೆ.

ಈ ವಾಚನ ಮಂದಿರದಲ್ಲಿ ವಾಚಕರಿಗೆ ದೊರೆಯುವ ಪತ್ರಿಕೆಗಳು.—

**ಕನ್ನಡ.**—ಕಂಠೀರವ, ಕರ್ಮವೀರ, ಕರ್ಣಾಟಕ ವೈಭವ, ರಾಜಹಂಸ, ರಾಷ್ಟ್ರಬಂಧು, ಶ್ರೀ ಧನ್ವಂತರೀ, ಸ್ವದೇಶಾಭಿಮಾನಿ, ವಿಶ್ವಕರ್ಣಾಟಕ, ವಿಶ್ವಬಂಧು, ವೃತ್ತಾಂತ ಪತ್ರಿಕೆ, ಒಕ್ಕಲಿಗನೂ ಒಕ್ಕಲತನವೂ, ಕನ್ನಡ ಸಹಕಾರ, ಕಾದಂಬರೀ ಸಂಗ್ರಹ, ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, ಜಯಕರ್ನಾಟಕ, ದೇಶೀಯ ವಿದ್ಯಾಶಾಲಾ ಪತ್ರಿಕೆ, ಪ್ರಬುದ್ಧ ಕರ್ಣಾಟಕ, ರಂಗಭೂಮಿ, ಮೈಸೂರು ವ್ಯಾವಸಾಯಿಕ ಮತ್ತು ಪರೀಕ್ಷಕ ಸಂಘದ ಪತ್ರಿಕೆ, ಕಥಾಂಜಲಿ, ಪ್ರಬೋಧಕ, ಕಲಾ, ಸುಬೋಧ, ಮಕ್ಕಳ ಪುಸ್ತಕ.

**ತೆಲುಗು.**—ಆಂಧ್ರ ಸಾಹಿತ್ಯ ಪರಿಷತ್ಪತ್ರಿಕೆ.

**ಮರಾಠಿ.**—ವಿವಿಧ ಜ್ಞಾನ ವಿಸ್ತಾರ.

**ಇಂಗ್ಲೀಷು.**—The Daily Post, The Hindu, The Mysore Observer, The Mysore Gazette, The Indian Antiquary, The Modern Review, School Folk, The Volunteer, The Quarterly Journal of the Mythic Society, The Andhra Historical Research Institute Magazine.

**೮. ಹೋದ ಸಮ್ಮೇಳನದ ನಿರ್ಣಯಗಳ ವಿಷಯವಾಗಿ ನಡೆಯಿಸಿದ ಕಾರ್ಯಕ್ರಮ.—**

**ನಿರ್ಣಯ ೧.**—ಕನ್ನಡ ಪಂಡಿತರಿಗೂ ವಿಶ್ವವಿದ್ಯಾನಿಲಯದ ಗ್ರಾಜ್ಯುಯೇಟುಗಳಿಗೆ ದೊರೆಯುವ ಸನ್ಮಾನ ಪ್ರೋತ್ಸಾಹಗಳು ದೊರೆಯುವಂತೆ ಆಗಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

ಇದನ್ನು ಮುಂಬಯಿ, ಮದರಾಸು ಮತ್ತು ಮೈಸೂರು ವಿಶ್ವವಿದ್ಯಾನಿಲಯದವರಿಗೂ, ವಿದ್ಯಾಭ್ಯಾಸದ ಇಲಾಖೆಯ ಡೈರೆಕ್ಟರುಗಳಿಗೂ ಬರೆಯಲಾಯಿತು; ಆದರೆ ಪ್ರತ್ಯುತ್ತರವೇನೂ ಬರಲಿಲ್ಲ.

**ನಿರ್ಣಯ ೨.**—ಮೈಸೂರು, ಮುಂಬಯಿ ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡದಲ್ಲಿ ಓರಿಯಂಟಲ್ ಪರೀಕ್ಷೆಗಳನ್ನಿಡಬೇಕೆಂದು ಆಯಾ ವಿದ್ಯಾಪೀಠಗಳನ್ನು ಪ್ರಾರ್ಥಿಸಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

ಇದನ್ನು ಮೈಸೂರು ಮತ್ತು ಮುಂಬಯಿ ವಿಶ್ವವಿದ್ಯಾನಿಲಯದ ರೆಜಿಸ್ಟ್ರಾರವರಿಗೆ ಕಳುಹಿಸಲಾಯಿತು. ಎರಡು ವಿಶ್ವವಿದ್ಯಾನಿಲಯದವರೂ ನಮ್ಮ ಪತ್ರವು ತಲುಪಿತೆಂದು ಮಾತ್ರ ಉತ್ತರಕೊಟ್ಟಿರುತ್ತಾರೆ.

**ನಿರ್ಣಯ ೩.**—(೧) ಕನ್ನಡ ನಾಡಿನಲ್ಲಿ ಈಗ ಎರಡು ಭಾಷೆಗಳ ಶಾಲೆಗಳಿರುತ್ತವೆ; ಕ್ರಮವಾಗಿಯೂ ಆದಷ್ಟು ತೀವ್ರವಾಗಿಯೂ ಕನ್ನಡ ಶಾಲೆಗಳು ಮಾತ್ರವೇ ಇರುವಂತೆ ಮಾಡಲು ಕನ್ನಡ ನಾಡಿನ ಎಲ್ಲ ಸರಕಾರಗಳಿಗೂ ಮ್ಯುನಿಸಿಪಾಲಿಟಿ ಮತ್ತು ಲೋಕಲ್ ಬೋರ್ಡುಗಳಿಗೂ ಆಗ್ರಹದ ವಿನಂತಿಯನ್ನು ಮಾಡಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

(೨) ಕರ್ನಾಟಕ ಭಾಗಗಳಲ್ಲಿ, ಈಗಿರುವ ಪರಪ್ರಾಂತೀಯ ಭಾಷೆಯ ಶಾಲೆಗಳಲ್ಲಿ ಮೊದಲಿನಿಂದಲೂ ಕನ್ನಡವನ್ನೇ ಹೆಚ್ಚಾಗಿ ಕಲಿಸುವ ಏರ್ಪಾಡು ಮಾಡಿ ಕನಿಷ್ಠ ಪಕ್ಷಕ್ಕೆ ಕನ್ನಡವನ್ನು ಎರಡನೆಯ ಆವಶ್ಯಕ ಭಾಷೆಯಾಗಿಯಾದರೂ ಮಾಡಬೇಕೆಂದು ಆಯಾ ಸಂಸ್ಥೆಗಳಿಗೆ ಆಗ್ರಹಪೂರ್ವಕವಾಗಿ ಬಿನ್ನವಿಸಬೇಕಾಗಿ ಈ ಸಮ್ಮೇಳನವು ಸೂಚಿಸುತ್ತದೆ.

ಈ ನಿರ್ಣಯಗಳನ್ನು, ಹಿಂದಣ ಸಮ್ಮೇಳನಗಳಲ್ಲಿ ಮಾಡಿದ ಈ ತೆರದ ನಿರ್ಣಯಗಳನ್ನು ಕಳುಹಿಸಿದಂತೆಯೇ, ಪ್ರತಿ ಡಿಸ್ಟ್ರಿಕ್ಟಿನ ವಿದ್ಯಾಶಾಖೆಯ ಅಧಿಕಾರಿಗಳಿಗೂ, ಮ್ಯುನಿಸಿಪಾಲಿಟಿಯವರಿಗೂ ಕಳುಹಿಸಲಾಯಿತು; ಆದರೆ ಸಮರ್ಪಕವಾದ ಉತ್ತರವು ಯಾರಿಂದಲೂ ಬಂದಿರುವುದಿಲ್ಲ.

**ನಿರ್ಣಯ ೪.**—ಮುಂಬಯಿ, ಮದರಾಸು, ಹೈದರಾಬಾದು ಸರಕಾರಗಳಲ್ಲಿ ಯಾವುದರಿಂದಾಗಲಿ ಕನ್ನಡದ ಪಾಠಶಾಲೆಗಳ ಉಪಯೋಗಕ್ಕಾಗಿ ಸ್ವೀಕೃತವಾದ ಪುಸ್ತಕಗಳನ್ನು ಉಳಿದವರೆಲ್ಲರೂ ಇಡುವಂತೆ ಬೇರೆ ಬೇರೆ ಸರಕಾರದವರನ್ನು ಪರಿಷತ್ತಿನವರು ಕೇಳಿಕೊಳ್ಳಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

ಈ ನಿರ್ಣಯವನ್ನು ಮುಂಬಯಿ, ಮದರಾಸು, ಹೈದರಾಬಾದು ಮತ್ತು ಮೈಸೂರು ವಿದ್ಯಾ ಇಲಾಖೆಯ ಡೈರೆಕ್ಟರುಗಳಿಗೂ, ಆಯಾ ಸರ್ಕಾರದ ಮುಖ್ಯ ಸೆಕ್ರೆಟರಿಗಳಿಗೂ ಕಳುಹಿಸಲಾಯಿತು.

ಈ ವಿಚಾರದಲ್ಲಿ ಮದರಾಸು ವಿದ್ಯಾಭ್ಯಾಸದ ಇಲಾಖಾ ಡೈರೆಕ್ಟರವರು ಪಠ್ಯ ಪುಸ್ತಕಗಳನ್ನು ಇಲಾಖೆಯವರು ನಿಯಮಿಸುವುದಿಲ್ಲವೆಂದೂ, ಇಲಾಖೆಯವರು ಶಿಫಾರಸು ಮಾಡಿದ ಪುಸ್ತಕಗಳ ಪಟ್ಟಿಯಿಂದ, ತಮಗೆ ಬೇಕಾದುವನ್ನು ಪಾಠಶಾಲೆಗಳ ಅಧಿಕಾರಿಗಳು ಚುನಾಯಿಸುವ ಅಧಿಕಾರವುಳ್ಳವರಾಗಿರುವರೆಂದೂ, ಕನ್ನಡ ಶಾಲೆಗಳಲ್ಲಿ ಒಂದು ಪ್ರಾಂತದವರು ನಿಯಮಿಸಿದ ಪುಸ್ತಕಗಳನ್ನೇ ಮತ್ತೊಂದು ಪ್ರಾಂತದವರು ನಿಯಮಿಸುವುದು ಈಗಿನ ಪದ್ಧತಿಗೆ ವಿರುದ್ಧವಿರುವ ಕಾರಣ ಕಾರ್ಯಕಾರಿಯಾಗಿ ಪರಿಣಮಿಸುವುದಿಲ್ಲವೆಂದೂ ತಿಳಿಸಿರುವರು.

ಮೈಸೂರು ಸರಕಾರದ ಮುಖ್ಯ ಸೆಕ್ರೆಟರಿಯವರು ಮತ್ತು ಮುಂಬಯಿ ಸರಕಾರದ ಸೆಕ್ರೆಟರಿಯವರು ಈ ವಿಷಯವಾಗಿ ಪರ್ಯಾಲೋಚನೆ ಮಾಡಲು ಆಯಾ ಇಲಾಖೆಗೆ ನಮ್ಮ ನಿರ್ಣಯವನ್ನು ಕಳುಹಿಸಿರುವುದಾಗಿ ತಿಳಿಸಿರುವರು.

ಮೈಸೂರು ವಿದ್ಯಾಭ್ಯಾಸದ ಇಲಾಖೆಯವರು ಪಠ್ಯ ಪುಸ್ತಕಗಳನ್ನು ನಿಯಮಿಸುವ ವಿಚಾರದಲ್ಲಿ ಆಲೋಚನೆ ಮಾಡುತ್ತಿರುವೆವೆಂದು ತಿಳಿಸಿರುವರು.

**ನಿರ್ಣಯ ೫.**—ಕರ್ಣಾಟಕ ಸಾಹಿತ್ಯ ಪರಿಷತ್ತಿನ ಸಮ್ಮೇಳನದ ಆಶ್ರಯದಲ್ಲಿ ನಾಟಕ ಸಮ್ಮೇಳನ, ಕವಿ ಸಮ್ಮೇಳನ, ಕೀರ್ತನ ಸಮ್ಮೇಳನ ಮತ್ತು ಗಾಯಕ ಸಮ್ಮೇಳನ ಮುಂತಾದುವು ಮುಂದಿನ ವರ್ಷದಿಂದ ನಡೆಯಲು ತಕ್ಕ ಏರ್ಪಾಡನ್ನು ಮಾಡಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

ಪರಿಷತ್ಸಮ್ಮೇಳನವನ್ನು ಕೂಡಿಸುವ ಸ್ವಾಗತ ಮಂಡಲಿಯವರಿಗೆ ಈ ನಿರ್ಣಯವನ್ನು ಕಳುಹಿಸಿಕೊಟ್ಟು ಅವರು ಈ ವಿಚಾರದಲ್ಲಿ ಎಷ್ಟು ಮಾಡಲು ಸಾಧ್ಯವಾಗುವುದೋ ಅಷ್ಟು ಮಾಡತಕ್ಕದ್ದೆಂದು ಪ್ರಾರ್ಥಿಸಲಾಗುವುದು.

**ನಿರ್ಣಯ ೬.**—(೧) ಈ ಸಮ್ಮೇಳನವು ಆಲಿ ಜನಾಬ್ ಸಾಲಾರ್‌ಜಂಗ್ ಬಹಾದ್ದೂರ್ ಅವರನ್ನು ಅವರ ಸಂಸ್ಥಾನದಲ್ಲಿ ಕನ್ನಡದ ಪ್ರಾಥಮಿಕ ಶಾಲೆಗಳನ್ನು ಸ್ಥಾಪಿಸಿ ಉತ್ತೇಜನ ಕೊಟ್ಟುದಕ್ಕಾಗಿ ಅಭಿನಂದಿಸುತ್ತದೆ.

(೨) ಅದರಂತೆ ಪ್ರಾಥಮಿಕ ಶಿಕ್ಷಣದ ಫೀಜನ್ನು ಬಾಲಕರಿಂದ ವಸೂಲ್ಮಾಡದೆ ಮಾಫೀ ಮಾಡಬೇಕೆಂದು ಈ ಸಮ್ಮೇಳನವು ಬಿನ್ನವಿಸುತ್ತದೆ.

ಈ ನಿರ್ಣಯಗಳನ್ನು ನವಾಬ್ ಸಾಲಾರ್‌ಜಂಗ್ ಬಹಾದ್ದೂರ್ ಅವರಿಗೆ ಕಳುಹಿಸಲಾಯಿತು. ಅವರು ಸಮ್ಮೇಳನದ ಅಭಿನಂದನಗಳನ್ನು ಅಂಗೀಕರಿಸಿ ವಂದನೆಗಳನ್ನು ಸಮರ್ಪಿಸಿರುತ್ತಾರಲ್ಲದೆ, ಮಾಫಿಯಾಗಿ ಪ್ರಾಥಮಿಕ ಶಿಕ್ಷಣವನ್ನು ಕೊಡುವ ಆಲೋಚನೆ ಮಾಡುತ್ತಿರುವುದಾಗಿ ತಿಳಿಸಿರುತ್ತಾರೆ.

ಇತ್ತೀಚೆಗೆ, ಆ ಸಂಸ್ಥಾನದಲ್ಲಿ ಪ್ರಾಥಮಿಕ ಶಿಕ್ಷಣವು ಮಾಫಿಯಾಗಿ ಕೊಡಲ್ಪಡುತ್ತಿದೆಯೆಂದು ವೃತ್ತ ಪತ್ರಿಕೆಗಳಿಂದ ತಿಳಿಯಬಂದಿದೆ.

**ನಿರ್ಣಯ ೭.**—ಮುದ್ರಿತವಾದ ಪ್ರಾಚೀನ ಅರ್ವಾಚೀನ ಕನ್ನಡ ಪುಸ್ತಕಗಳೆಲ್ಲವೂ ಒಂದು ಕಡೆ ಇರುವಂತೆ ಸಾಹಿತ್ಯ ಪರಿಷತ್ತಿನವರು ಒಂದು ದೊಡ್ಡ ಪುಸ್ತಕಾಲಯವನ್ನೇರ್ಪಡಿಸಬೇಕೆಂದು ಈ ಸಮ್ಮೇಳನವು ಪರಿಷತ್ತಿನವರಿಗೆ ಆಗ್ರಹಪೂರ್ವಕವಾಗಿ ಸೂಚಿಸುತ್ತದೆ.

ಪರಿಷತ್ತಿನ ಧ್ಯೇಯವೂ ಇದೇ ಆಗಿದೆ. ಪುಸ್ತಕ ಭಾಂಡಾಗಾರವನ್ನು ಅಭಿವೃದ್ಧಿ ಪಡಿಸುವ ಪ್ರಯತ್ನಗಳನ್ನು ಮಾಡುತ್ತಿರಲಾಗಿದೆ.

**ನಿರ್ಣಯ ೮.**—ಕನ್ನಡ ದೇಶದಲ್ಲಿ ನಡೆಯುವ ಸರಕಾರದ ಎಲ್ಲ ವ್ಯವಹಾರಗಳನ್ನೂ ಕನ್ನಡದಲ್ಲಿಯೇ ನಡೆಯಿಸುವಂತೆ ಸರಕಾರದವರನ್ನು ಕೇಳಿಕೊಳ್ಳಬೇಕೆಂದು ಈ ಸಮ್ಮೇಳನವು ಸಲಹೆ ಮಾಡುತ್ತದೆ.

ಈ ನಿರ್ಣಯವನ್ನು ಮೈಸೂರು, ಮದರಾಸು ಮತ್ತು ಮುಂಬಯಿ ಸರ್ಕಾರದ ಮುಖ್ಯ ಸೆಕ್ರೆಟರಿಗಳಿಗೆ ಕಳುಹಿಸಲಾಯಿತು.

ಮುಂಬಯಿ ಸರ್ಕಾರದ ಸೆಕ್ರೆಟರಿಯವರು ಈ ನಿರ್ಣಯದಲ್ಲಿರುವ ಅಭಿಪ್ರಾಯದಂತೆ ಮಾಡಲು ಸಾಧ್ಯವಿಲ್ಲವೆಂದು ತಿಳಿಸಿರುವರು.

**ನಿರ್ಣಯ ೯.**—ವಿದ್ಯಾರ್ಥಿಗಳ ಅನುಕೂಲ್ಯಕ್ಕಾಗಿ ಸಾಹಿತ್ಯ ಪರಿಷತ್ಪತ್ರಿಕೆಗಳ ಸಂಚಿಕೆಗಳನ್ನು ಬೆಲೆಯಲ್ಲಿ ಕನಿಷ್ಠ ಪಕ್ಷ ಕಾಲುವಾಸಿಯಾದರೂ ರಿಯಾಯತಿ ತೋರಿಸಿಕೊಟ್ಟು ಆ ಮೂಲಕ ವಿದ್ಯಾರ್ಥಿಗಳು ಹೆಚ್ಚು ಮಂದಿ ಚಂದಾದಾರರಾಗುವಂತೆ ಮಾಡಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

ಈ ವಿಷಯವನ್ನು ಪರಿಷತ್ತಿನ ಕಾರ್ಯ ನಿರ್ವಾಹಕ ಮಂಡಲಿಯವರು ಆಲೋಚಿಸಿ ಪರಿಷತ್ಪತ್ರಿಕೆಯನ್ನು ಕಾಲೇಜುಗಳಲ್ಲಿ ಓದುವ ವಿದ್ಯಾರ್ಥಿಗಳಿಗೆ ಅರ್ಧ ಚಂದಾ ಮೊಬಲಗಿಗೆ ಕೊಡಬಹುದೆಂದು ತೀರ್ಮಾನಿಸಿರುತ್ತಾರೆ.

**ನಿರ್ಣಯ ೧೦.**—ಅಖಿಲ ಕರ್ಣಾಟಕಕ್ಕೆ ಒಂದೇ ವಿಶ್ವವಿದ್ಯಾ ನಿಲಯವಾಗುವ ವಿಷಯದಲ್ಲಿ ಪರಿಷತ್ತಿನವರು ಒಂದು ಮಂಡಲವನ್ನೇರ್ಪಡಿಸಿ, ತಮ್ಮ ಮುಖಾಂತರವಾಗಿ ಮೈಸೂರು ವಿಶ್ವವಿದ್ಯಾ ನಿಲಯವೇ ಆ ನಿಲಯವಾಗುವಂತೆ ಮಾಡಲು ಆವಶ್ಯಕವಾದ ಎಲ್ಲ ಪ್ರಯತ್ನಗಳನ್ನೂ ಆದಷ್ಟು ಕ್ಷಿಪ್ರದಲ್ಲಿ ಮಾಡಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ; ಈ ಕಾರ್ಯಗಳನ್ನು ಕೈಕೊಳ್ಳಲು ಕೆಳಗೆ ಕಂಡ ಉಪ ಮಂಡಲವೊಂದನ್ನು ನಿಯಮಿಸುತ್ತದೆ:—

೧. ಮ॥ ರಾ॥ ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್. (ಅಧ್ಯಕ್ಷರು)

೨. ,, ಆಲೂರ ವೆಂಕಟರಾಯರು, ಬಿ.ಎ., ಎಲ್‌ಎಲ್.ಬಿ. (ಧಾರವಾಡ)

೩. ,, ಕೆ. ಶಂಕರನಾರಾಯಣರಾಯರು, ಎಂ.ಎ., ಬಿ.ಎಲ್. (ಮೈಸೂರು)

೪. ,, ಬೆನಗಲ್ ರಾಮರಾಯರು, ಎಂ.ಎ., ಎಲ್‌ಎಲ್.ಬಿ. (ಮದರಾಸು)

೫. ,, ಕೆ. ಸಂಪದ್ಗಿರಿರಾಯರು, ಎಂ.ಎ. (ಬೆಂಗಳೂರು)

೬. ,, ಕೆ. ಗುರುರಾಜಾಚಾರ್ಯರು, ಬಿ.ಎ., ಎಲ್‌ಎಲ್.ಬಿ. (ಬಳ್ಳಾರಿ)

ಈ ಉಪಮಂಡಲದ ಮೆಂಬರುಗಳಿಗೆ ನಿರ್ಣಯವನ್ನು ಕಳುಹಿಸಲಾಯಿತು. ಎಲ್ಲರೂ ಒಂದು ಕಡೆ ಸಭೆ ಸೇರಲು ಅನುಕೂಲವಿದ್ದಂತೆ ಕಂಡುಬರಲಿಲ್ಲವಾಗಿ ಈ ವಿಚಾರವು ಹಾಗೆಯೇ ಉಳಿದಿದೆ.

**ನಿರ್ಣಯ ೧೧.**—ಕರ್ಣಾಟಕದ ಹೈಸ್ಕೂಲುಗಳಲ್ಲಿಯ ಶಿಕ್ಷಣಕ್ರಮದಲ್ಲಿ, ಇಂಗ್ಲಿಷ್ ಭಾಷಾ ವಿಷಯವೊಂದನ್ನು ಬಿಟ್ಟು, ಮಿಕ್ಕ ವಿಷಯಗಳೆಲ್ಲವೂ ಕನ್ನಡ ಭಾಷೆಯ ಮುಖಾಂತರವಾಗಿಯೇ ಕಲಿಸಲ್ಪಡಬೇಕೆಂದು ಈ ಸಮ್ಮೇಳನವು ವಿದ್ಯಾಭ್ಯಾಸದ ಇಲಾಖೆಯ ಅಧಿಕಾರಿಗಳಿಗೆ ಬಿನ್ನವಿಸುತ್ತದೆ.

ಈ ನಿರ್ಣಯವನ್ನು ಮುಂಬಯಿ, ಮದರಾಸು ಮತ್ತು ಮೈಸೂರು ವಿದ್ಯಾಭ್ಯಾಸದ ಇಲಾಖೆಯ ಡೈರೆಕ್ಟರುಗಳಿಗೆ ಕಳುಹಿಸಲಾಯಿತು; ಉತ್ತರವೇನೂ ಬಂದಿರುವುದಿಲ್ಲ.

**೯. ಆಯ ವ್ಯಯ.**—ಇದರ ಪಟ್ಟಿಯನ್ನು ೧೨–೧೩ನೆಯ ಪುಟಗಳಲ್ಲಿ ಕೊಟ್ಟಿದೆ. ಸಂವತ್ಸರಾದಿಯಲ್ಲಿ ನಮ್ಮಲ್ಲಿದ್ದ ಮೊಬಲಗು ರೂ. ೧೫,೭೪೭–೯–೫; ಈ ವರ್ಷ ವಸೂಲಾದದ್ದು ರೂ. ೫,೩೭೪–೦–೬; ಈ ವರ್ಷ ಪರಿಷತ್ತಿನಿಂದ ವೆಚ್ಚವಾದ ಮೊಬಲಗು ರೂ. ೪,೦೯೯–೪–೯; ಆಯಕ್ಕಿಂತಲೂ ವ್ಯಯವು ರೂ. ೧,೨೭೪–೧೧–೯ ಕಡಿಮೆಯಾಗಿದೆ: 'ಜ್ಯೋತಿರ್ವಿನೋದಿನಿ'ಯ ಪುಸ್ತಕದ ಮುದ್ರಣದ ಮತ್ತು ರಟ್ಟಿನ ವೆಚ್ಚವು ಕೊಡಬೇಕಾಗಿದೆ.

ಪ್ರಮೋದ ಸಂವತ್ಸರದ ನಮ್ಮ ಲೆಕ್ಕದ ಪುಸ್ತಕಗಳನ್ನೂ ಪಟ್ಟಿಗಳನ್ನೂ ಪರಿಶೀಲಿಸಿ ಕೊಟ್ಟುದಕ್ಕಾಗಿ ಮೈಸೂರು ಸರಕಾರದ ಮಿಟಿಯೊರೊಲಾಜಿಕಲ್ ರಿಪೋರ್ಟರು ಮ॥ ರಾ॥ ಸಿ. ಶೇಷಾಚಾರ್‍ಯರು, ಎಂ.ಎ. ಅವರಿಗೆ ಪರಿಷತ್ತು ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಅರ್ಪಿಸಬೇಕಾಗಿದೆ.

**೧೦. ಪರಿಷತ್ತಿನ ಕಟ್ಟಡ.**—ನಮ್ಮ ಉಪಾಧ್ಯಕ್ಷರಾದ ರಾಜಸಭಾಭೂಷಣ ಶ್ರೀಮಾನ್ ಕರ್ಪೂರ ಶ್ರೀನಿವಾಸರಾಯರವರ ಪ್ರೋತ್ಸಾಹದಿಂದ ಕಟ್ಟಡದ ಕೆಲಸವು ಶೀಘ್ರವಾಗಿ ನಡೆಯುತ್ತಿದೆ. ಈ ಮಹನೀಯರು ತಮ್ಮ ದೇಹಾರೋಗ್ಯವು ಬಹಳ ಹೀನಸ್ಥಿತಿಯಲ್ಲಿರುವ ಈಗಿನ ಸಂದರ್ಭದಲ್ಲಿಯೂ ಕಟ್ಟಡವನ್ನು ಬೇಗನೆ ಪೂರಯಿಸಲು ಯತ್ನಿಸುತ್ತಿರುವರು. ಇವರಿಗೆ ಭಗವಂತನು ಆರೋಗ್ಯ ಭಾಗ್ಯವನ್ನಿತ್ತು ಪರಿಷತ್ತನ್ನು ಇನ್ನೂ ಉತ್ತಮ ಸ್ಥಿತಿಗೆ ತರುವಂತೆ ಮಾಡಬೇಕೆಂಬುದೇ ನಮ್ಮೆಲ್ಲರ ಪ್ರಾರ್ಥನೆಯಾಗಿದೆ.

**೧೧. ಉಪಸಂಹಾರ.**—ಮಹನೀಯರೇ! ಇದುವರೆಗೂ ತಿಳಿಯಪಡಿಸಿದ ಸಂಗತಿಗಳಿಂದ ಪರಿಷತ್ತಿನ ಬಡತನವೂ, ಅದರ ಮುಂದಣ ಪರಿಣಾಮವೇನಾಗಬಹುದೆಂಬುದೂ ತಮಗೆ ಮನಮುಟ್ಟಿ ಗೋಚರವಾಗಿರಬಹುದು. ಇಡೀ ಕರ್ಣಾಟಕದ ಈ ಸಂಸ್ಥೆಯು ದುರವಸ್ಥೆಗೀಡಾಗದಂತೆ ಮಾಡಬೇಕಾದುದು ಪ್ರತಿಯೊಬ್ಬ ಕನ್ನಡಿಗನ ಅವಶ್ಯ ಕರ್ತವ್ಯವಾಗಿರುವುದು. ಶ್ರೀ ಕೃಷ್ಣರಾಜೇಂದ್ರ ಪ್ರಭುಗಳವರ ಹೆಸರನ್ನು ತಾಳಿರುವ ಕರ್ಣಾಟಕ ಸಾಹಿತ್ಯ ಪರಿಷನ್ಮಂದಿರವು ಇನ್ನು ಕೆಲವು ತಿಂಗಳುಗಳಲ್ಲಿಯೇ ಬೆಂಗಳೂರಿನಲ್ಲಿ ಸಿದ್ಧವಾಗಿ, ಪರಿಷತ್ತಿಗೆ ಸ್ವತಂತ್ರವಾದೊಂದು ನೆಲೆಯಾಗುವುದು. ಕನ್ನಡಿಗರೆಲ್ಲರೂ ಉತ್ಸಾಹದಿಂದ ಮುಂದೆ ಬಂದು ಪರಿಷತ್ತಿನ ಉದ್ದೇಶಗಳೆಲ್ಲವೂ ಸಾಂಗವಾಗಿ ಈಡೇರುವಂತೆ ತಪ್ಪದೆ ಸಹಾಯ ಮಾಡಬೇಕೆಂದು ನಾವು ಬೇಡಿಕೊಳ್ಳುವೆವು.

**ಸಿ. ಕೆ. ವೆಂಕಟರಾಮಯ್ಯ,**

ಗೌರವ ಕಾರ್ಯದರ್ಶಿ.

---

## ಆಸ್ತಿ ಋಣಗಳ ಪಟ್ಟಿ

(೧೯೩೧ನೆಯ ಏಪ್ರಿಲ್ ೧ನೆಯ ತಾರೀಖಿನಲ್ಲಿದ್ದಂತೆ)

| ಆಸ್ತಿ | ರೂ. ಆ. ಪೈ. | ಋಣ | ರೂ. ಆ. ಪೈ |
|---|---|---|---|
| ಪುಸ್ತಕ ವ್ಯಾಪಾರಿಗಳಿಂದ | ೨೧-೧೪-೦ | ಸಿಬ್ಬಂದಿಯ ವೆಚ್ಚ | ೬೨-೦-೦ |
| ಇತರರಿಂದ | ೧೦-೧೦-೦ | ಮನೆಯ ಬಾಡಿಗೆ | ೩೦-೦-೦ |
| ಸರ್ಕಾರದ ಗ್ರಾಂಟು | ೧೫೦-೦-೦ | ದೀಪದ ವೆಚ್ಚ | ೩-೪-೬ |
| ಬರಬಹುದಾದ ಚಂದಾ ಮೊಬಲಗು | ೫೫೦-೦-೦ | ಸಹಾಯಕರ ಮತ್ತು ಆಜೀವ ಸದಸ್ಯರ ಚಂದಾ ಮೊಬಲಗು | ೫,೧೨೩-೪-೦ |
| ಡಿಪಾಜಿಟ್ಟುಗಳು | ೧೬,೯೩೧-೧-೦ | | |
| ನಗದು ಹಣ | ೯೧-೪-೨ | | |
| ಡಿಪಾಜಿಟ್ಟುಗಳ ಬಡ್ಡಿ (ಸುಮಾರು) | ೧೦೦-೦-೦ | ಕಟ್ಟಡದ ಹಣ | ೧೧,೦೦೦-೦-೦ |
| ಕೈಯಲ್ಲಿರುವ ಅಚ್ಚಿನ ಕಾಗದ (ಸುಮಾರು) | ೧೦-೦-೦ | ವೈಜ್ಞಾನಿಕ ಗ್ರಂಥ ಪ್ರಕಟನೆಯ ಹಣ | ೨,೦೫೦-೦-೦ |
| ಕೈಯಲ್ಲಿರುವ ಪುಸ್ತಕಗಳ ಬೆಲೆ (ಸುಮಾರು) | ೧,೦೦೦-೦-೦ | ಋಣಕ್ಕಿಂತಲೂ ಆಸ್ತಿಯ ಹೆಚ್ಚು | ೬,೪೭೧-೪-೮ |
| ಪುಸ್ತಕ ಭಾಂಡಾಗಾರ (ಸುಮಾರು) | ೪,೪೦೦-೦-೦ | | |
| ಸಾಮಾನುಗಳು ವಗೈರೆ (ಸುಮಾರು) | ೧,೩೭೫-೦-೦ | | |
| ಆರಾ ಲೈಬ್ರೆರಿಯ ಪಂಪ ಭಾರತಕ್ಕಾಗಿ ಡಿಪಾಜಿಟ್ಟು | ೧೦೦-೦-೦ | | |
| ಒಟ್ಟು ರೂ. .. | ೨೪,೭೩೯-೧೩-೨ | ಒಟ್ಟು ರೂ. .. | ೨೪,೭೩೯-೧೩-೨ |

---

**ಕರ್ಣಾಟಕ ಸಾಹಿತ್ಯ**

ಪ್ರಮೋದ ಸಂವತ್ಸರದ

## ಆಯ

| | | | ರೂ. ಆ. ಪೈ |
|---|---|---|---|
| ೧. | ಹೋದ ವರುಷದ ಶಿಲ್ಕು | .. | ೧೫,೭೪೭—೯—೫ |
| ೨. | ತಿಂಗಳುಗಟ್ಟಲೆ ಸರ್ಕಾರದಿಂದ ಬಂದ ಸಹಾಯ ದ್ರವ್ಯ | .. | ೧,೮೦೦—೦—೦ |
| ೩. | ಪರಿಷತ್ತಿನ ಸದಸ್ಯರಿಂದ ಬಂದ ಚಂದಾ ಹಣ | .. | ೯೧೬—೦—೦ |
| ೪. | ಪರಿಷತ್ಪತ್ರಿಕೆಯ ಚಂದಾ ಹಣ | .. | ೧೨೪—೦—೦ |
| ೫. | ಪರಿಷತ್ತಿನ ಪುಸ್ತಕಗಳ ಮಾರಾಟದಿಂದ ಬಂದ ಹಣ | | ೧,೭೬೫—೫—೬ |
| ೬. | ಡಿಪಾಜಿಟ್ಟುಗಳ ಮೇಲೆ ಬಂದ ಬಡ್ಡಿ | .. | ೭೩೩–೧೩—೦ |
| ೭. | ಅಂಚೆಯ ಹಾಸಲು ವಗೈರೆ ವಸೂಲಾದದ್ದು | .. | ೮–೧೨—೦ |
| ೮. | ಕೊಠಡಿಯ ಬಾಡಿಗೆ | .. | ೨೦—೦—೦ |
| ೯. | ಹಿಂದಕ್ಕೆ ಬಂದ ಹಣ | .. | ೫—೬—೦ |
| ೧೦. | ಚಿಲ್ಲರೆಯ ಬಾಬು | .. | ೦–೧೨—೦ |
| | ಒಟ್ಟು | .. | ೨೧,೧೨೧—೯–೧೧ |

I have gone through the accounts and I certify that the above Statements of Receipts and Expenses are correct.

(Sd.) C. SESHACHAR, M.A.
*Auditor.*

## ಪರಿಷತ್ತು, ಬೆಂಗಳೂರು

ಆಯ ವ್ಯಯದ ಪಟ್ಟಿ

### ವ್ಯಯ

| | | ರೂ. ಆ. ಪೈ |
|---|---|---|
| ೧. | ಪರಿಷತ್ತಿನ ಆಫೀಸಿನ ಸಿಬ್ಬಂದಿಗಾಗಿ .. | ೭೨೩—೦—೦ |
| ೨. | ಪರಿಷನ್ಮಂದಿರದ ಬಾಡಿಗೆ .. .. | ೩೬೦—೦—೦ |
| ೩. | ದೀಪದ ವೆಚ್ಚ .. .. | ೪೨—೦—೦ |
| ೪. | ಬರೆವಣಿಗೆಯ ಸಾಮಗ್ರಿ .. .. | ೩೧–೧೦—೬ |
| ೫. | ಅಂಚೆಯ ಮತ್ತು ಟೆಲಿಗ್ರಾಫು ಹಾಸಲು .. | ೧೫೧—೭—೩ |
| ೬. | ಕಾಗದ, ಮುದ್ರಣ ಮತ್ತು ಬೈಂಡಿಗಾಗಿ .. | ೧,೩೭೩—೫—೦ |
| ೭. | ಪುಸ್ತಕ ಭಾಂಡಾಗಾರಕ್ಕಾಗಿ .. .. | ೫೦೫—೯—೦ |
| ೮. | ವಾಚನ ಮಂದಿರದ ಪತ್ರಿಕೆಗಳ ಚಂದಾ .. | ೧೦೭–೧೨—೦ |
| ೯. | ಸಮ್ಮೇಳನಕ್ಕಾಗಿ .. .. | ೨೪೪–೧೩—೬ |
| ೧೦. | ಪ್ರಚಾರ ಕಾರ್ಯಕ್ಕಾಗಿ .. .. | ೭೫—೦—೦ |
| ೧೧. | ಸಾಹಿತ್ಯ ಸೇವೆಯ ಬಹುಮಾನಕ್ಕಾಗಿ .. | ೧೫೦—೦—೦ |
| ೧೨. | 'ಜ್ಯೋತಿರ್ವಿನೋದಿನಿ'ಯ ಗ್ರಂಥಕರ್ತರಿಗೆ .. | ೨೫೦—೦—೦ |
| ೧೩. | 'ಜ್ಯೋತಿರ್ವಿನೋದಿನಿ'ಯ ಚಿತ್ರಗಳಿಗಾಗಿ .. | ೭೨—೯—೦ |
| ೧೪. | ಪಂಪ ಭಾರತದ ಕಾರ್ಯಕ್ಕಾಗಿ .. .. | ೫—೦—೦ |
| ೧೫. | ಇತರ ಚಿಲ್ಲರೆಯ ವೆಚ್ಚಗಳಿಗಾಗಿ .. .. | ೭—೨—೬ |
| | ಒಟ್ಟು .. | ೪,೦೯೯—೪—೯ |
| | * ಶಿಲ್ಕು ನಿಂತಿರುವುದು .. | ೧೭,೦೨೨—೫—೨ |
| | ಒಟ್ಟು .. | ೨೧,೧೨೧—೯—೧೧ |

* ಶಿಲ್ಕಿಗೆ ತಪಸೀಲು :—

ಬೆಂಗಳೂರು ಸಿಟಿ ಕೋ॥ ಸೊಸೈಟಿಯಲ್ಲಿ

| | |
|---|---|
| ಫಿ॥ ಡಿಪಾಜಿಟ್ಟು | ೧೬,೫೦೦—೦—೦ |
| ಸೇವಿಂಗ್ಸು ಬ್ಯಾಂಕು ಡಿ॥ | ೪೩೧—೧—೦ |
| ಗೌ॥ ಕಾರ್ಯದರ್ಶಿಯವರ ಬಳಿ ನಗದು | ೯೧—೪—೨ |
| ಒಟ್ಟು ರೂ. | ೧೭,೦೨೨—೫—೨ |

(Sd.) C. K. VENKATARAMAIYA, M.A., LL.B.
*Honorary Secretary.*

(Sd.) B. VENKATANARANAPPA, M.A.
*Honorary Treasurer,*

# ಪರಿಶಿಷ್ಟ

## ಕರ್ಣಾಟಕ ಸಾಹಿತ್ಯ ಪರಿಷತ್ತಿನ

## ಸದಸ್ಯರ ಪಟ್ಟಿ

(೧೯೩೧ನೆಯ ಇಸವಿ ಏಪ್ರಿಲ್ ಮೊದಲನೆಯ ತಾರೀಖಿನಲ್ಲಿದ್ದಂತೆ)

---

### ಪ್ರದಾತೃಗಳು

*೧. ರಾಜಸಭಾ ಭೂಷಣ ಮ|| ರಾ|| ಕರ್ಪೂರ ಶ್ರೀನಿವಾಸರಾಯರು, ಬಿ.ಎಸ್‌ಸಿ., ಎಲ್.ಸಿ.ಇ., ರಿ|| ಛೀಫ್ ಎಂಜನಿಯರ್, ಬೆಂಗಳೂರು.

### ಸಹಾಯಕರು

*೨. ಮ|| ರಾ|| ಕೃಷ್ಣಾಜೀ ಗೋವಿಂದ ಗೆಜ್ಜಿ, ಬಿ.ಎ., ಎಲ್‌ಎಲ್.ಬಿ., ಬೆಳಗಾಂವಿ.

*೩. ಮ|| ರಾ|| ನಾರಾಯಣಸ್ವಾಮಿ ರಾವ್ ಲೋಕೂರ, ಬೆಳಗಾಂವಿ.

೪. ರಾಜಸಭಾ ಭೂಷಣ ದಿವಾನ್ ಬಹಾದ್ದೂರ್ ಸರ್ ಕೆ. ಪಿ. ಪುಟ್ಟಣ್ಣಸೆಟ್ಟರು, ಕೆಟಿ., ಸಿ.ಐ.ಇ., ರಿ|| ಕೌನ್ಸಿಲರ್, ಬೆಂಗಳೂರು.

೫. ಮ|| ರಾ|| ಶ್ರೀನಿವಾಸರಾವ್ ಕೌಜಲಗಿ, ಬಿ.ಎ., ಎಲ್‌ಎಲ್.ಬಿ., ಬಿಜಾಪುರ.

೬. ದಿವಾನ್ ಬಹಾದ್ದೂರ್, ರಾಜಕಾರ್ಯ ಪ್ರಸಕ್ತ ಮ|| ರಾ|| ಎಂ. ಎನ್. ಕೃಷ್ಣರಾಯರು, ಬಿ.ಎ., ಬೆಂಗಳೂರು.

### ಆಜೀವ ಸದಸ್ಯರು

(ಮೈಸೂರು ದೇಶದ ಸದಸ್ಯರು)

ಮ|| ರಾ|| ಗಳಾದ

೭. ಎಸ್. ಎಮ್. ಅಪ್ಪಣ್ಣಯ್ಯಂಗಾರ್ಯರು, ಬಿ.ಎ., ಬಿ.ಎಲ್., ಅ|| ಕ|| ಕೋಲಾರ.

೮. ಪಿ. ಅಪ್ಪಾಜೀರಾಯರು, ಬಿ.ಎಸ್‌ಸಿ., 11/B, ಆರ್‌ಪತಿ ಲೇನ್, ಕಲ್ಕತ್ತ.

*೯. ಟಿ. ಅಪ್ಪೂರಾಯರು, ಬಿ.ಎ., ಬಿ.ಎಲ್., ಅಡ್ವೊಕೇಟ್, ಬೆಂಗಳೂರು.

೧೦. ಡಿ. ಆದೆಪ್ಪನವರು, ಸಾಹುಕಾರರು, 'ಚೂಡಾಮಣಿ', ಬಸವನಗುಡಿ, ಬೆಂಗಳೂರು.

೧೧. ಮಾಗಡಿ ಕರಣಿಕ ಕೃಷ್ಣಮೂರ್ತಿರಾಯರು, ಜರ್ಮೀದಾರರು, ಬಸವನಗುಡಿ.

೧೨. ಸಿ. ಕೃಷ್ಣರಾಯರು, ಬಿ.ಎ., ವಿದ್ಯಾ|| ರಿ|| ಡೆ|| ಇನ್|| ಜನರಲ್, ತುಮಕೂರು.

*೧೩. ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ., ಕನ್ನಡ ಅ|| ಪ್ರೊ|| ಬೆಂಗಳೂರು.

೧೪. ಎ. ಕೇಶವಯ್ಯನವರು, ರಿ|| ಸ್ಕೂಲ್ ಮಾಸ್ಟರು, ಚಿಕ್ಕಬಳ್ಳಾಪುರ.

೧೫. ಡಿ. ಕೊಂಗಾಡಿಯಪ್ಪನವರು, ರಿ|| ಹೆ|| ಮಾಸ್ಟರ್, ದೊಡ್ಡಬಳ್ಳಾಪುರ.

೧೬. ಎಂ. ಎನ್. ಗೋಪಾಲರಾಯರು, ಎಲೆಕ್ಟ್ರಿಕಲ್ ಡಿಪಾರ್ಟ್‌ಮೆಂಟ್, ಮಲ್ಲೇಶ್ವರ.

೧೭. ವಿ. ಆರ್. ತ್ಯಾಗರಾಜ ಅಯ್ಯರವರು, ಎಂ.ಎ., ರಿ|| ಎ|| ಕಮಿಷನರ್, ಬಸವನಗುಡಿ.

೧೮. ವೈ. ನರಸಿಂಗರಾಯರು, ಬಿ.ಎ., ಬಿ.ಎಲ್., ಸೀ|| ಅ|| ಕ|| ಬೆಂಗಳೂರು.

೧೯. ಸಿ. ಆರ್. ನರಸಿಂಹಯ್ಯಂಗಾರ್ಯರು, ಬಿ.ಎ., ಜಿಯಾಲೊಜಿಸ್ಟ್, ಕಡಕೊಳ.

---

* ಈ ಗುರುತು ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರ ಹೆಸರನ್ನು ತೋರಿಸುತ್ತದೆ.

ಮ॥ ರಾ॥ ಗಳಾದ

೨೦. ಪ್ರಾಕ್ತನ ವಿಮರ್ಶ ವಿಚಕ್ಷಣ ರಾವ್ ಬಹಾದ್ದೂರ್ ಆರ್. ನರಸಿಂಹಾಚಾರ್ಯರು, ಎಂ.ಎ., ರಿ॥ ಡೈರೆಕ್ಟರು, ಶಾಸನದ ಇಲಾಖೆ, ಮಲ್ಲೇಶ್ವರ.

೨೧. ಬಿ. ನರಹರಿ ಶಾಸ್ತ್ರಿಗಳು, ಹೆ॥ ಮಾಸ್ಟರ್, ಬಸವನಗುಡಿ.

೨೨. ಡಿ. ಕೆ. ಭಾರದ್ವಾಜರು, ವಿದ್ಯಾಭೂಷಣ, ಬಸವನಗುಡಿ.

೨೩. ವೈ. ಕೆ. ರಾಮಚಂದ್ರರಾಯರು, ಬಿ.ಎ., ಎಲ್.ಸಿ.ಇ., ರೈಲ್ವೆ ಎಂಜಿ॥ ಮೈಸೂರು.

೨೪. ರಾವ್ ಸಾಹೆಬ್ ಎಂ. ರಾಮರಾಯರು, ರಿ॥ ಫಾರೆಸ್ಟ್ ಆಫಿಸರ್, ಬಸವನಗುಡಿ.

೨೫. ಎಂ. ಎ. ರಾಮಾನುಜಯ್ಯಂಗಾರ್ಯರು, "ಕಾವ್ಯಕಲಾನಿಧಿ"ಯ ಸಂ॥ ಮೈಸೂರು.

೨೬. ವೀಣೆ ರಂಗಸ್ವಾಮಯ್ಯಂಗಾರ್ಯರು, ಜಮೀನ್‌ದಾರರು, ಶ್ರೀರಂಗಪಟ್ಟಣ.

೨೭. ರಾಜ ಕವಿ ಭೂಷಣ ಎಚ್. ಲಿಂಗರಾಜ ಅರಸಿನವರು, ಮೈಸೂರು.

೨೮. ಎಚ್. ಕೆ. ವೀರಬಸವಯ್ಯನವರು, ಬಿ.ಎ., ಬಿ.ಎಲ್., ಪ್ಲೆ॥ ವ್ಯಾ॥ ಕೋಲಾರ.

೨೯. ಎಂ. ವೆಂಕಟಕೃಷ್ಣಯ್ಯನವರು, "ಸಾಧ್ವೀ" ಸಂಪಾದಕರು, ಮೈಸೂರು.

*೩೦. ಬಿ. ವೆಂಕಟನಾರಾಯಣಪ್ಪನವರು, ಎಂ.ಎ., ರಿ॥ ಕಾಲೇಜು ಪ್ರೊ॥ ಬಸವನಗುಡಿ.

*೩೧. ಎನ್. ವೆಂಕಟೇಶ ಅಯ್ಯಂಗಾರ್ಯರು, ಬಿ.ಎ., ರಿ॥ ಮೀಟಿಯೊರೊಲಾಜಿಕಲ್ ರಿಪೋರ್ಟರು, ಚಾಮರಾಜಪೇಟೆ, ಬೆಂಗಳೂರು.

೩೨. ರಾವ್ ಬಹಾದ್ದೂರ್ ಬಿ. ವೆಂಕಟೇಶಾಚಾರ್ಯರು, ಎಂ.ಎ., ಪ್ರೊಫೆಸರ್, ಸೆಂಟ್ರಲ್ ಕಾಲೇಜು, ಬೆಂಗಳೂರು.

೩೩. ಕೆ. ಶಂಕರನಾರಾಯಣರಾಯರು, ಎಂ.ಎ., ಬಿ.ಎಲ್., ಡಿ॥ ಜಡ್ಜ್, ಮೈಸೂರು.

*೩೪. ಬಿ. ಎಮ್. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್., ಪ್ರೊಫೆಸರ್, ಸೆಂ॥ ಕಾ॥ ಬೆಂಗಳೂರು.

೩೫. ಕೆ. ಶ್ರೀನರಸಿಂಹಯ್ಯನವರು, ಎಂ.ಎ., ಎಲ್.ಟಿ., ವಿದ್ಯಾಭ್ಯಾಸದ ಇಲಾಖಾ ಡೆಪ್ಯುಟಿ ಡೈರೆಕ್ಟರು, ಮೈಸೂರು.

೩೬. ಟಿ. ಶ್ರೀನಿವಾಸರಾಘವಾಚಾರ್ಯರು, ರಿ॥ ಕನ್ನಡ ಪಂಡಿತರು, ಮೈಸೂರು.

೩೭. ಎಂ. ಶ್ರೀನಿವಾಸರಾಯರು, ಬಿ.ಎ., ರಿ॥ ಸರ್ಕಲ್ ಇನ್‌ಸ್ಪೆಕ್ಟರು, ಮೈಸೂರು.

೩೮. ಎ. ಸದಾಶಿವ್, ಮೈಸೂರು ರೈಲ್ವೆ ಛೀಫ್ ಸ್ಟೋರು ಕೀಪರು, ಮೈಸೂರು.

*೩೯. ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ., ಕನ್ನಡ ಪ್ರೊಫೆಸರು, ಮೈಸೂರು.

(ಮುಂಬಯಿ ಪ್ರಾಂತದ ಸದಸ್ಯರು)

ಮ॥ ರಾ॥ ಗಳಾದ

೪೦. ದಿವಾನ್ ಬಹಾದ್ದೂರ್ ಅಣ್ಣಾರಾವ್ ಬಿ. ಲಠ್ಠೆ, ಎಂ.ಎ., ಎಲ್‌ಎಲ್.ಬಿ., ಕೊಲ್ಹಾಪುರ.

೪೧. ಬಿ. ಪಿ. ಆಲತಗಿ, ಸ್ಕೂಲ್ಮಾಸ್ಟರು, ರಬಕವಿ.

*೪೨. ವಿ. ಬಿ. ಆಲೂರ್, ಬಿ.ಎ., ಎಲ್‌ಎಲ್.ಬಿ., ಸಾಧನಕೇರಿ, ಧಾರವಾಡ.

*೪೩. ಕೆ. ಜಿ. ಕುಂದಣಗಾರ, ಎಂ.ಎ., ಕೊಲ್ಹಾಪುರ.

*೪೪. ಎಚ್. ಚೆನ್ನಕೇಶವಯ್ಯಂಗಾರ್ಯರು, ಕನ್ನಡ ಪ್ರೊಫೆಸರ್, ಧಾರವಾಡ.

೪೫. ಆರ್. ಎ. ಜಹಗೀರ್‌ದಾರ್, ಎಂ.ಎ., ಎಲ್‌ಎಲ್.ಬಿ., ಹೈ॥ ವಕೀಲ್, ಮುಂಬಯಿ.

೪೬. ರಾವ್ ಬಹಾದ್ದೂರ್ ವಿ. ಬಿ. ಜೋಶಿ, ಬಿ.ಎ., ರಿ॥ ಪ್ರಿನ್ಸಿಪಾಲ್, ಧಾರವಾಡ.

೪೭. ಎನ್. ಆರ್. ದೇಶಪಾಂಡೆ, ಬಿ.ಎ., ಎಲ್‌ಎಲ್.ಬಿ., ಪ್ಲೀಡರು, ಧಾರವಾಡ,

ಮ॥ ರಾ॥ ಗಳಾದ

೪೮. ರಾ. ಹ. ದೇಶಪಾಂಡೆ, ಎಂ.ಎ., ಮಾಳಮಡ್ಡಿ, ಧಾರವಾಡ.

೪೯. ವಿ. ಬಿ. ಧಾರವಾರಕರ್, ಬಿ.ಎ., ಕಾಮನ ಕಟ್ಟೆ, ಧಾರವಾಡ.

೫೦. ನಾರಾಯಣ ಗುರುರಾವ್ ಜೋಷಿ, ಬಿ.ಎ., ಎಲ್‌ಎಲ್.ಬಿ., ವಕೀಲ್, ಬೆಳಗಾಂವಿ.

*೫೧. ನಾರಾಯಣ ಶ್ರೀನಿವಾಸ ರಾಜಪುರೋಹಿತರು, ಶುಕ್ರವಾರ ಪೇಟೆ, ಧಾರವಾಡ.

*೫೨. ಆರ್. ಬಿ. ಪೋತ್ದಾರ್, ಬಿ.ಎ., ಹೈಸ್ಕೂಲ್ ಮಾ॥ ಕಾರವಾರ.

೫೩. ಎಸ್. ಆರ್. ಪೋತ್ದಾರ್, ಮಾಳಮಡ್ಡಿ, ಧಾರವಾಡ.

೫೪. ಬಿ. ಬಿ. ಬಾಗಿ, ಲೆಕ್ಚರರ್, ಕರ್ಣಾಟಕ ಕಾಲೇಜು, ಧಾರವಾಡ.

*೫೫. ಬಿ. ಎಸ್. ಬೆಟಿಗೇರಿ, ಥಳಕವಾಡಿ, ಬೆಳಗಾಂವಿ.

೫೬. ವಿ. ಎನ್. ಮಗದಾಳ್, ಬಿ.ಎ., ಅಸಿಸ್ಟೆಂಟು ಎಜ್ಯುಕೇಷನಲ್ ಇನ್ಸ್‌ಪೆಕ್ಟರು, ಬೆಳಗಾಂವಿ.

೫೭. ಮಾಧವರಾವ್ ತಿರುಮಲರಾವ್ ದೇಶಪಾಂಡೆ, ಹುನ್ನೂರು.

೫೮. ವೆಂಕಟೇಶ ತಿರಕೋ ಕುಲಕರಣಿ ಗಳಗನಾಥರು, ಹಾವೇರಿ.

೫೯. ಶ್ರೀನಿವಾಸ ಪಾಂಡುರಂಗ ಕೋಟೀ, ರೇಂಜು ಫಾರೆಸ್ಟ್ ಆಫಿ॥, ತಿರವತ್ತಿ (ಉ. ಕನಡ).

೬೦. ಶ್ರೀನಿವಾಸ ರಾಜೇರಾವ ಮಂಗಳವೇಡೆ, ಪತ್ರಿಕಾ ಕರ್ತರು, ಬಾಗಲಕೋಟೆ.

೬೧. ಸಣ್ಣಪ್ಪನಾಯಿಕ ರಾಮಚಂದ್ರನಾಯಿಕ ಪಡಕೂಟ, ಹಲಸಿಗೆ (ಬೆಳಗಾಂ ಡಿ॥).

*೬೨. ರಾವ್ ಸಾಹೆಬ್ ಪಿ. ಜಿ. ಹಳಕಟ್ಟಿ, ಬಿ.ಎ., ಎಲ್‌ಎಲ್.ಬಿ., ಪಬ್ಲಿಕ್ ಪ್ರಾಸಿಕ್ಯೂಟರ್ ಮತ್ತು ಪ್ಲೀಡರ್, ಬಿಜಾಪುರ.

(ಉತ್ತರ ಕರ್ಣಾಟಕ ಸಂಸ್ಥಾನಗಳ ಸದಸ್ಯರು)

ಮ॥ ರಾ॥ ಗಳಾದ

*೬೩. ತಮ್ಮಪ್ಪ ಸತ್ಯಪ್ಪ ಚಿಕ್ಕೋಡಿ, ವರ್ತಕರು, ಬನಹಟ್ಟಿ (ಬೆಳಗಾಂ ಡಿ॥).

೬೪. ರಾಮಚಂದ್ರ ಶಂಕರ ಮಂಗಸೂಲಿ, ಶಿರಹಟ್ಟಿ (ಧಾರವಾಡ ಡಿ॥).

(ಹೈದರಾಬಾದು ಪ್ರಾಂತದ ಸದಸ್ಯರು)

ಮ॥ ರಾ॥ ಗಳಾದ

*೬೫. ನಾರಾಯಣಶಾಸ್ತ್ರೀ ಭಾವೂಶಾಸ್ತ್ರೀ, ಕೊಪ್ಪಳ.

೬೬. ರಾಘವೇಂದ್ರರಾವ್ ಚಾಕಲಬ್ಬಿ, ವಕೀಲರು, ಕೊಪ್ಪಳ.

೬೭. ಟಿ. ಆರ್. ರಾಮರಾಯರು, ಬಿ.ಎ., ಕನ್ನಡ ಪ್ರೊಫೆಸರ್, ಹೈದರಾಬಾದು.

*೬೮. ಎಂ. ಎಸ್. ಲಕ್ಷ್ಮೀನಾರಾಯಣರಾಯರು, ಬಿ.ಎ., ಎಲ್‌ಎಲ್.ಬಿ., ಹೈ ಕೋರ್ಟು ವಕೀಲರು, ಹೈದರಾಬಾದು.

೬೯. ಕೆ. ವೆಂಕಟರಾಯರು, ಕೋ-ಆಪರೆಟಿವ್ ಸೊಸೈಟಿಗಳ ಇನ್ಸ್‌ಪೆಕ್ಟರು, C/o ಕೆ. ರಾಮರಾಯರು, ಕುಲಕರ್ಣಿ, ಮಾಲ್ಕೂಲ್ ಪೋಸ್ಟು, ಎನ್.ಜಿ.ಎಸ್. ರೈಲ್ವೆ.

೭೦. ಶಂಕರರಾವ್ ಗೋಪಾಲರಾಯರು, ಮನ್ಸಬ್ದಾರ್, ಗುಲ್ಬರ್ಗ.

(ಮದರಾಸು ಪ್ರಾಂತದ ಸದಸ್ಯರು)

ಮ॥ ರಾ॥ ಗಳಾದ

೭೧. ಆರ್. ತಾತಾಚಾರ್ಯರು, ಎಂ.ಎ., ಎಲ್.ಟಿ., ಡಿಸ್ಟ್ರಿಕ್ಟು ಎಜ್ಯುಕೇಷನಲ್ ಆಫಿಸರು, ಮಂಗಳೂರು.

*೭೨. ಎಚ್. ತಿಮ್ಮಕೃಷ್ಣರಾಯರು, ಬಿ.ಎ., ಬಿ.ಎಲ್., ಹೈ॥ ವಕೀಲ್, ಬಳ್ಳಾರಿ.

*೭೩. ಎನ್. ರಾಜಗೋಪಾಲ ಕೃಷ್ಣರಾಯರು, ಜಮೀನ್ದಾರರು, ಉಡಿಪಿ.

ಮ॥ ರಾ॥ ಗಳಾದ

*೭೪. ಬಿ. ರಾಮರಾಯರು, ಎಂ.ಎ., ಎಲ್ಎಲ್.ಬಿ., ರಿ॥ ಸೀ॥ ಟ್ರಾನ್ಸ್॥ ಮದರಾಸು.

೭೫. ಪತ್ತಿಕೊಂಡ ವೆಂಗಣ್ಣನವರು, ವರ್ತಕರು, ಹೊಸಪೇಟೆ.

(ಸದಸ್ಯತ್ವಕ್ಕೆ ದರಖಾಸ್ತು ಕಳುಹಿಸದಿರುವವರು)

ಮ॥ ರಾ॥ ಗಳಾದ

೭೬. ಜಾವಳಿ ಗಣೇಶರಾಯರು, ಜಾವಳಿ (ಕಡೂರು ಡಿಸ್ಟ್ರಿಕ್ಟು).

೭೭. ತಿಮ್ಮೇಗೌಡರು, ಎಕ್ಸೈಸ್ ಕಂಟ್ರಾಕ್ಟರು, ಚಿಕ್ಕಮಗಳೂರು.

೭೮. ಪುರದಪ್ಪನವರು, ಪಟೇಲರು, ಶಿವನೆ (ಕಡೂರು ಡಿಸ್ಟ್ರಿಕ್ಟು).

೭೯. ರಾಮಸ್ವಾಮಯ್ಯನವರು, ಎಕ್ಸೈಸ್ ಕಂಟ್ರಾಕ್ಟರು, ಚಿಕ್ಕಮಗಳೂರು.

೮೦. ಹನುಮಾ ಬೋಯಿಯವರು, ಕಂಟ್ರಾಕ್ಟರು, ಲಕ್ಕವಳ್ಳಿ (ಕಡೂರು ಡಿಸ್ಟ್ರಿಕ್ಟು).

## ಸಾಮಾನ್ಯ ಸದಸ್ಯರು

(ಮೈಸೂರು ಪ್ರಾಂತದ ಸದಸ್ಯರು)

ಮ॥ ರಾ॥ ಗಳಾದ

*೮೧. ಕೆ. ಕೃಷ್ಣಯ್ಯಂಗಾರ್ಯರು, ಬಿ.ಎ., ನ್ಯಾಷನಲ್ ಹೈಸ್ಕೂಲು, ಬೆಂಗಳೂರು.

೮೨. ಬೇಲೂರು ಕೇಶವದಾಸರು, ಕೀರ್ತನಕಾರರು, ಮೈಸೂರು.

೮೩. ಎಂ. ಚೆನ್ನಕೃಷ್ಣಯ್ಯನವರು, ಕನ್ನಡ ಪಂಡಿತರು, ಹೈಸ್ಕೂಲ್, ಚಿಕ್ಕಮಗಳೂರು.

*೮೪. ತಿರುಮಲೆ ತಾತಾಚಾರ್ಯ ಶರ್ಮರು, ಸಂ॥ ''ವಿಶ್ವಕರ್ಣಾಟಕ'', ಬೆಂಗಳೂರು.

೮೫. ಕೆ. ದುಗ್ಗಪ್ಪಯ್ಯನವರು, ರಿಟೈರ್ಡ್ ರೆವಿನ್ಯೂ ಇನ್ಸ್‌ಪೆಕ್ಟರ್, ಅಗ್ರಹಾರ, ಸಾಗರ.

೮೬. ಆರ್. ನರಸಿಂಹಮೂರ್ತಿಯವರು, ಎಂ.ಎ., ಬಿ.ಎಲ್., ಯೂನಿವರ್ಸಿಟಿ ಲೈಬ್ರೇರಿಯನ್, ಮೈಸೂರು.

*೮೭. ಎ. ಆರ್. ನರಸಿಂಹಯ್ಯನವರು, ಎಂ.ಎ., ಎಲ್.ಟಿ., ಸೆಕ್ರೆಟರಿ, ಟೆಕ್ಸ್ಟ್ ಬುಕ್ ಕಮಿಟಿ, ಬೆಂಗಳೂರು.

೮೮. ಕೆ. ನಂಜುಂಡಶಾಸ್ತ್ರಿಗಳು, ಕರ್ಣಾಟಕ ಸಾಹಿತ್ಯ ಪರಿಷತ್ಪಂಡಿತರು, ಬಸವನಗುಡಿ.

೮೯. ಪಿ. ಪದ್ಮನಾಭಯ್ಯನವರು, ಹೆಡ್‌ಮಾಸ್ಟರ್, ಸೂಲಿಕುಂಟೆ (ಕೋಲಾರ ಡಿ॥).

೯೦. ಬಿ. ಪುಟ್ಟಯ್ಯನವರು, ಬಿ.ಎ., ಸೂಪರಿಂಟೆಂಡೆಂಟರು, ಗೌ॥ ಪ್ರೆಸ್, ಬೆಂಗಳೂರು.

೯೧. ಎಸ್. ಜಿ. ಬಿಂದೂರಾಯರು, ಮೈಸೂರು.

೯೨. ರಾವ್ ಬಹಾದ್ದೂರ್ ಡಾ॥ ಸಿ. ಬಿ. ರಾಮರಾಯರು, ಬಿ.ಎ., ಎಂ.ಡಿ., ಬಸವನಗುಡಿ.

೯೩. ಬಿ. ವಿ. ಲಕ್ಷ್ಮಣರಾಯರು, ರಿ॥ ಅ॥ ಕಮಿಷನರು, ಶಂಕರಪುರ, ಬೆಂಗಳೂರು.

೯೪. ಕೆ. ಲಕ್ಷ್ಮೀನರಸಿಂಹಯ್ಯನವರು, ಪೋಸ್ಟು ಮಾಸ್ಟರು, ಅಹಮ್ಮದಾಬಾದು.

೯೫. ಸಿ. ವಾಸುದೇವಯ್ಯನವರು, ವಿದ್ಯಾಭ್ಯಾಸದ ಇಲಾಖೆಯ ರಿ॥ ಅಸಿಸ್ಟೆಂಟರು, ಮಲ್ಲೇಶ್ವರ.

೯೬. ಎಂ. ವೆಂಕಟನಾರಣಪ್ಪನವರು, ಬಿ.ಎ., ಕಬ್ಬಿಣದ ಕಾರ್ಖಾನೆ, ಭದ್ರಾವತಿ.

೯೭. ಸಿ. ವೆಂಕಟರಮಣಶಾಸ್ತ್ರಿಗಳು, ''ಕಾದಂಬರೀ ಸಂಗ್ರಹ''ದ ಸಂಪಾದಕರು, ಚಾಮರಾಜನಗರ.

*೯೮. ಮಾಸ್ತಿ ವೆಂಕಟೇಶಯ್ಯಂಗಾರ್ಯರು, ಎಂ.ಎ., ಸೆನ್ಸಸ್ ಸೂಪರಿಂಟೆಂಡೆಂಟರು, ಬೆಂಗಳೂರು.

೯೯. ಬಿ. ಐ. ಶಾಮರಾಯರು, ರಿ॥ ಫಾರೆಸ್ಟ್ ಆಫಿಸರ್, ಬಸವನಗುಡಿ.

ಮ॥ ರಾ॥ ಗಳಾದ

೧೦೦. ರಾಜಕಾರ್ಯ ಪ್ರಸಕ್ತ ರಾವ್ ಬಹಾದ್ದೂರ್ ಎಂ. ಶಾಮರಾಯರು, ಎಂ.ಎ., ವಿದ್ಯಾಭ್ಯಾಸದ ರಿ॥ ಇ॥ ಜನರಲ್, ಚಾಮರಾಜಪೇಟೆ, ಬೆಂಗಳೂರು.

೧೦೧. ಎಂ. ಆರ್. ಶ್ರೀನಿವಾಸಮೂರ್ತಿಗಳು, ಬಿ.ಎ., ಹೆ॥ ಮಾ॥ ಡಿ॥ ನಾರ್ಮಲ್ ಸ್ಕೂಲ್, ಬೆಂಗಳೂರು.

*೧೦೨. ನಿಟ್ಟೂರು ಶ್ರೀನಿವಾಸರಾಯರು, ಬಿ.ಎಸ್‌ಸಿ., ಬಿ.ಎಲ್., ಅಡ್ವೊಕೇಟ್, ಬಸವನಗುಡಿ.

೧೦೩. ತಿರುಮಲೆ ಶ್ರೀನಿವಾಸಾಚಾರ್ಯರು, ಹೆ॥ ಕ್ಯಾ॥ ಸ್ಪೆಷಲ್ ಕೋರ್ಟು, ಹಾಸನ.

೧೦೪. ಸಿ. ಶೇಷಾಚಾರ್ಯರು, ಎಂ.ಎ., ಮಿಟಿಯೊರೊಲಾಜಿಕಲ್ ರಿಪೋರ್ಟರು, ಬಸವನಗುಡಿ.

*೧೦೫. ವಿ. ಸೀತಾರಾಮಯ್ಯನವರು, ಎಂ.ಎ., ಇಂಟರ್‌ಮೀಡಿಯೆಟ್ ಕಾಲೇಜು, ಚಾಮರಾಜಪೇಟೆ, ಬೆಂಗಳೂರು.

*೧೦೬. ಕೆ. ಸಂಪದ್ಗಿರಿರಾಯರು, ಎಂ.ಎ., ನ್ಯಾಷನಲ್ ಹೈಸ್ಕೂಲ್, ಬೆಂಗಳೂರು.

೧೦೭. ಎಚ್. ಹನುಮಂತಯ್ಯನವರು, ಸ್ಕೂ॥ ಹೆ॥ ಮಾ॥ ಹೆಸರುಘಟ್ಟ (ಬೆಂಗಳೂರು ತಾ॥).

೧೦೮. ಜಿ. ಹನುಮಂತರಾಯರು, ಎಂ.ಎ., ಕಾಂತರಾಜ ಅರಸರ ರೋಡು, ಮೈಸೂರು.

೧೦೯. ಎಚ್. ಹನುಮಂತರಾಯರು, ಹೈ ಸ್ಕೂಲು ರಿ॥ ಕನ್ನಡ ಪಂಡಿತರು, ಕೋಲಾರ.

೧೧೦. ಎಸ್. ಹಿರಿಯಣ್ಣಯ್ಯನವರು, ಎಂ.ಎ., ಬಿ.ಎಲ್., ರೆ॥ ಕಮಿಷನರ್, ಬೆಂಗಳೂರು.

*೧೧೧. ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್‌ಎಲ್.ಬಿ., ಗೌ॥ ಕನ್ನಡ ಟ್ರಾನ್ಸ್‌ಲೇಟರ್, ವಿಶ್ವೇಶ್ವರಪುರ, ಬೆಂಗಳೂರು.

ಮ॥ ರಾ॥ ಗಳಾದ (ಮುಂಬಯಿ ಪ್ರಾಂತದ ಸದಸ್ಯರು)

೧೧೨. ಪಂಡಿತ ಕೇಶವಶರ್ಮಾ ಗಲಗಲಿ, ಗಲಗಲಿ (ಬಿಜಾಪುರ ಡಿ॥).

*೧೧೩. ದತ್ತಾತ್ರೇಯ ರಾಮಚಂದ್ರ ಬೇಂದ್ರೆ, ಬಿ.ಎ., ಧಾರವಾಡ.

೧೧೪. ಜಿ. ಮಹಾಲಿಂಗಪ್ಪ ಮಿರ್ಜಿ, ಬಿ.ಎ., ಎಲ್‌ಎಲ್.ಬಿ., ಹೈ॥ ವಕೀಲ್, ಹುಬ್ಬಳ್ಳಿ.

೧೧೫. ವಿ. ಆರ್. ಮುಧೋಳಕರ್, ಬಿ.ಎ., ಬಿ.ಟಿ., ಟ್ರೈನಿಂಗು ಸ್ಕೂಲು, ಧಾರವಾಡ.

೧೧೬. ಆರ್. ಎಸ್. ಮೂಡಕಟ್ಟೆ, ಬಿ.ಎ., ಮಾಮಲತ್‌ದಾರರು, ಕಾರವಾರ.

೧೧೭. ಎ. ಕೆ. ಹುಯಿಲ್‌ಗೋಳ್, ಬಿ.ಎ., ಎಲ್‌ಎಲ್.ಬಿ., ಪ್ಲೀಡರ್, ಗದಗ.

೧೧೮. ಮೊಹರೆ ಹನುಮಂತರಾಯರು, 'ಕರ್ಣಾಟಕ ವೈಭವ'ದ ಸಂಪಾದಕರು, ಬಿಜಾಪುರ.

ಮ॥ ರಾ॥ ಗಳಾದ (ಮದರಾಸು ಪ್ರಾಂತದ ಸದಸ್ಯರು)

೧೧೯. ರಾವ್ ಬಹಾದ್ದೂರ್ ಎಚ್. ನಾರಾಯಣರಾಯರು, ಎಂ.ಎ., ರಿ॥ ಪ್ರೊಫೆಸರ್, 'ಶಂಕರಬಾಗ್', ಕೀಲ್ಪಾಕ್, ಮದರಾಸು.

ಮ॥ ರಾ॥ ಗಳಾದ (ಕೊಡಗಿನ ಸದಸ್ಯರು)

೧೨೦. ಸಿ. ಎ. ವೆಂಕಪ್ಪಯ್ಯನವರು, ಬಿ.ಎ., ಬಿ.ಎಲ್., ಅಡ್ವೊಕೇಟ್, ಮಡಿಕೇರಿ.

*೧೨೧. ಎ. ಆರ್. ಸುಬ್ಬಣ್ಣಯ್ಯನವರು, ಕಾಫೀ ಪ್ಲಾಂಟರು, ನಿಡತ (ಕೊಡಗು).

೧೨೨. ಎಂ. ಎಸ್. ಸುಬ್ಬರಾಯರು, ಹೆ॥ ಮಾ॥ ಪೊನ್ನಾಂಪೇಟೆ (ಕೊಡಗು).

ಮ॥ ರಾ॥ ಗಳಾದ (ಹೈದರಾಬಾದು ಪ್ರಾಂತದ ಸದಸ್ಯರು)

೧೨೩. ರೆ॥ ಕೆ. ನಾನಪ್ಪ ದೇಸಾಯಿ, ಸುರಪುರ (ಹೈದರಾಬಾದು).

೧೨೪. ಎಂ. ಸಿ. ರಂಗಯ್ಯಂಗಾರ್ಯರು, ಅಸಿಸ್ಟೆಂಟು ಸೂ॥ ಪಿ.ಡಬ್ಲ್ಯು., ಹೈದರಾಬಾದು.

2820—31 ಬೆಂಗಳೂರು ಪ್ರೆಸ್, ಮೈಸೂರು ರೋಡು, ಬೆಂಗಳೂರು ಸಿಟಿ.




ಶ್ರೀಃ

# ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ



ಸಂಪುಟ ೧೭]  ಆಂಗೀರಸ ಸಂ॥ ಚೈತ್ರ ಮಾಸ  [ಸಂಚಿಕೆ ೧

## *ಕರ್ಣಾಟಕ ಶಿಕ್ಷಾ

### II. ವರ್ಗೀಯ ವ್ಯಂಜನಗಳು

[ಹಿಂದಿನ ಲೇಖನದಲ್ಲಿ ಸ್ವರಗಳನ್ನು[1] ಕುರಿತು ವಿಚಾರ ಮಾಡಲಾಯಿತು. ಈ ಲೇಖನದಲ್ಲಿ ವರ್ಗೀಯ ವ್ಯಂಜನ[2]ಗಳನ್ನು ಕುರಿತು ಬರೆದಿದೆ. ಮುಂದಿನ ಲೇಖನದಲ್ಲಿ ಅವರ್ಗೀಯ ವ್ಯಂಜನಗಳನ್ನು ಕುರಿತು ವಿಚಾರ ಮಾಡಲಾಗುತ್ತದೆ.]

ಈಗ ಪ್ರಚಾರದಲ್ಲಿರುವ ಲಿಪಿಯಲ್ಲಿ ಸಂಸ್ಕೃತದ ಇಪ್ಪತ್ತೈದು ವರ್ಗೀಯಾಕ್ಷರಗಳನ್ನು ಅಂಗೀಕರಿಸಲಾಗಿದೆ[3]. ಆದರೂ ಕನ್ನಡದಲ್ಲಿ ಇರುವ ವರ್ಗೀಯಾಕ್ಷರಗಳು ಹದಿಮೂರು ಮಾತ್ರ ಎಂದು ಹೇಳಬಹುದು[4]. ಈಗ ಲಿಪಿಬದ್ಧವಾಗಿರುವ ಅಕ್ಷರಗಳನ್ನು ಅಲ್ಪಪ್ರಾಣ, ಮಹಾಪ್ರಾಣ, ಅನುನಾಸಿಕ ಎಂದು ಮೂರು ಗುಂಪಾಗಿ ವಿಂಗಡಿಸುತ್ತಾರೆ. ನಾವೂ ಅದೇ ವಿಭಾಗವನ್ನು ಅನುಸರಿಸಿ ವಿಚಾರ ಮಾಡುವೆವು.

---

* ಕ. ಸಾ. ಪರಿಷತ್ಪತ್ರಿಕೆಯ ೧೬ನೆಯ ಸಂಪುಟದ ೧ನೆಯ ಸಂಚಿಕೆಯ ೬ನೆಯ ಪುಟದಿಂದ ಮುಂದುವರಿದುದು.

1 Tamil grammarians designate vowels by a beautiful metaphor: Uyir or the life of a word; and consonants by My or the body.—Dr. Caldwell's *Dravidian Grammar*, page 15.

2 Tamil grammarians divide all consonants into 3 classes: (1) surds=vallinams, (2) nasals=mellinams, (3) semi-vowels=idaiyinams.—*Ibid*, page 21.

3 (*a*) ಶಬ್ದಮಣಿದರ್ಪಣದ ೪ನೆಯ ಸೂತ್ರದ ಮೇಲಿನ ವೃತ್ತಿಯನ್ನು ನೋಡಿರಿ.

(*b*) ಶಬ್ದಾನುಶಾಸನ (ಪುಟ ೧೭)—ವ್ಯಂಜನಾನಿ ತ್ರಯಸ್ತ್ರಿಂಶತ್ । ತತ್ರ ವರ್ಗಾಕ್ಷರಾಣಿ ಪಂಚವಿಂಶತಿಃ ॥

(*c*) ಡಿಟೋ ಸೂತ್ರ—ಕಾದಯೋ ವ್ಯಂಜನಂ ॥ 6 ॥ ಮಾನ್ತಾಃ ಪಂಚ ಪಂಚ ವರ್ಗಾಃ ॥

(*d*) ಶಬ್ದಮಣಿದರ್ಪಣ, ಸೂತ್ರ ೧೩.

4 ಕ, ಗ, ಚ, ಜ, ಟ, ಡ, ಣ, ತ, ದ, ನ, ಪ, ಬ, ಮ.

## ೧. ಮಹಾಪ್ರಾಣಗಳು

ಕನ್ನಡದಲ್ಲಿ ಮಹಾಪ್ರಾಣಾಕ್ಷರಗಳು ಇಲ್ಲ[5]. ಆದರೂ ಹಿಂದಿನ ವೈಯಾಕರಣಿಗಳು ಇವುಗಳನ್ನು ಪಾಠಮಾಡಿದ್ದಾರೆ[6]. ಕೇಶಿರಾಜನು "ಒಳವು ಮಹಾಪ್ರಾಣಂಗಳ್ ವಿಳಸತ್ಕರ್ಣಾಟ ಭಾಷೆಯೊಳ್ ಕೆಲವು ನಿಜೋಜ್ಜ್ವಳವಾಗಿ" ಎನ್ನುತ್ತಾನೆ. (ಸೂತ್ರ ೧೫). ಆದರೂ ವೃತ್ತಿಯಲ್ಲಿ ಕೊಟ್ಟಿರುವ ಪದಗಳಲ್ಲಿ ಎಷ್ಟು ಕನ್ನಡದವು ಎಂಬುದು ವಿಚಾರಾರ್ಹವಾಗಿದೆ. ಈ ಸಂದರ್ಭದಲ್ಲಿ ಕಾವ್ಯಾವಲೋಕನಕಾರನ ಮತವೇ ಸರಿಯೆಂದು ತೋರುತ್ತದೆ[7].

ಅನುಕರಣ ವಾಚಕಗಳಲ್ಲಿ ಬರುವ ಮಹಾಪ್ರಾಣಗಳನ್ನು ಸ್ವತಂತ್ರವಾದ ವರ್ಣಗಳು ಎನ್ನುವುದಕ್ಕಿಂತ ಅನುಕರಣ ಶಬ್ದವೆನ್ನುವುದೇ ಯೋಗ್ಯ.

ಸಂಖ್ಯಾ ವಾಚಕಗಳಲ್ಲಿ ಕಂಡುಬರುವ ಮಹಾಪ್ರಾಣಗಳಿಗೆ ಕಾರಣವು ಹೀಗಿರಬಹುದೆ?—

ಮಹಾಪ್ರಾಣವು ಬರುವ ಸಂಖ್ಯಾ ವಾಚಕಗಳು :—

(೧) ಒಂಭತ್ತು (ಅದರ ಬಳ್ಳಿಯೆಲ್ಲ), (೨) ಎಂಭತ್ತು, (೩) ತೊಂಭತ್ತು, (೪) (ಹಿಂದಿನ) ಇಚ್ಛಾಸಿರ, ಎಣ್ಛಾಸಿರ (ಅದರ ಬಳ್ಳಿಗಳು).

**೧, ೨. ಒಂಭತ್ತು, ಎಂಭತ್ತು.**—'ಒಂಭತ್ತು' ಎಂಬುದು ಬಹುಶಃ ಒಣ್+ಪತ್ತು ಎಂದಿದ್ದು, ಒಣ್ಪತ್ತು ಆಗಿ, ಅಲ್ಲಿಂದ ಅನುನಾಸಿಕದ ಪ್ರತ್ಯೇಕ ರೂಪಕ್ಕೆ ಮೂರ್ಧನ್ಯ ಸ್ವರೂಪವು ಆದೇಶವಾಗಿ ಮುಂದಿನ ಅಕ್ಷರಕ್ಕೆ ಘೋಷವತ್ತ್ವವೂ ಮಹಾಪ್ರಾಣವೂ ಬಂದಿರಬಹುದು; ಅಥವಾ, ಮೂಲ ರೂಪವು ಒಂಬತ್ತು ಎಂದಿದ್ದು ಅಲ್ಲಿ ಅಕಾಂಡವಾಗಿ ಮಹಾಪ್ರಾಣವು ತೋರಿರಬಹುದು. 'ಒ' ಎನ್ನುವಾಗ ಆಗಿನ ಬಾಯಿಯ ಸಿದ್ಧತೆಯಿಂದ, 'ಮ್ಬ' ಬರುವುದಕ್ಕೆ ತಡವಾಗುತ್ತದೆ. ಅದರಿಂದ ಉಚ್ಚಾರಣ ಸೌಕರ್ಯಕ್ಕಾಗಿ ಮಹಾಪ್ರಾಣವಾಗಿರಬಹುದು. ಮಹಾಪ್ರಾಣದಲ್ಲಿ ಗಾಳಿಯು ನುಗ್ಗುವಿಕೆಯೊಂದುಂಟು. ಅದರಿಂದ ಅನುಸ್ವಾರೋತ್ತರವರ್ತಿಯಾದ ಅಲ್ಪಪ್ರಾಣದ ಉಚ್ಚಾರಣೆಗಿಂತಲೂ ಮಹಾಪ್ರಾಣ ಸುಲಭವೆಂದು ಹೀಗಾಗಿರಬಹುದು.

---

5 (*a*) The aspirated letters and sibilants which all those (South Indian) alphabets have borrowed from Samskṛta are seldom used except in pronouncing and writing Samskṛta derivatives. Those letters are not really required for native Dravidian purposes (page 11). Tamil makes no use whatever of aspirates and has not borrowed any of these aspirated consonants of Samskṛta, not even the isolated aspirate *h*.—Dr. Caldwell's *Dravidian Grammar*, page 12.

(*b*) ಶಬ್ದಮಣಿದರ್ಪಣ, ಸೂತ್ರ ೨೫೫.

6 ಶಬ್ದಮಣಿದರ್ಪಣ, ಸೂತ್ರ ೧೪, ಪೂರ್ವಾರ್ಧ.

7 (*a*) ಕಾವ್ಯಾವಲೋಕನ, ಸೂತ್ರ ೬: ದೊರೆಕೊಂಡ ಸಂಖ್ಯೆಯೊಳಮನುಕರಣದೊಳುಂ ವರ್ತಿಕುಂ ಮಹಾಪ್ರಾಣಂಗಳ್.

(*b*) ಶಬ್ದಮಣಿದರ್ಪಣ, ಸೂತ್ರ ೧೪, ಉತ್ತರಾರ್ಧ.

(*c*) ಶಬ್ದಮಣಿದರ್ಪಣ, ಸೂತ್ರ ೨೬೨.

'ಎಂಭತ್ತು' ಎಂಬಲ್ಲಿಯೂ ಹೀಗೇ ಆಗಿರಬೇಕು.

ಹೋಲಿಕೆ.—ಒಂಟೆ, ಒಂಟಿ, ಒಂದು.

ಒಣ್+ಪತ್ತು ▷ ಒಣ್ಪತ್ತು ▷ ಒಂಭತ್ತು (ಒಂಬತ್ತು ▷ ಒಂಭತ್ತು).

ಎಣ್+ಪತ್ತು ▷ ಎಣ್ಪತ್ತು ▷ ಎಂಭತ್ತು.

ಇಲ್ಲಿ ಅನುಸ್ವಾರವು ಲೋಪವಾಗಿದ್ದರೆ, 'ಎಪ್ಪತ್ತು' ಆಗಬಹುದು. ಆದರೆ ಏಳ್+ಪತ್ತು ▷ ಏಳ್ಪತ್ತು ▷ ಎಪ್ಪತ್ತು ಬಂದಿದೆ; ಇದಕ್ಕೂ ಅದಕ್ಕೂ ಇರುವ ವ್ಯತ್ಯಾಸವನ್ನು ಸ್ಪಷ್ಟಮಾಡಲು ಅಜ್ಞಾತವಾಗಿ ನಡೆದ ಪ್ರಯತ್ನದಿಂದ 'ಎಂಭತ್ತು' ಆಗಿದ್ದರೂ ಆಗಿರಬಹುದು.

**೩. ತೊಂಭತ್ತು.**—ಮಿಕ್ಕ ಹತ್ತರ ಸಂಖ್ಯೆಗಳೆಲ್ಲವೂ ಇರ್+ಪತ್ತು, ಮೂರ್+ಪತ್ತು, ನಾಲ್ಕು+ಪತ್ತು, ಐದು+ಪತ್ತು, ಆರ್+ಪತ್ತು, ಏಳ್+ಪತ್ತು, ಎಂಟು+ಪತ್ತು ಆಗಿದ್ದರೆ ಇದು 'ತೊಂಭತ್ತು' ಆಗಿದೆ. ("ಏಕೋನ" ಎಂಬ ಮರ್ಯಾದೆಯನ್ನು ಅನುಸರಿಸಿ ಇರಬಹುದು.) ಅವುಗಳಂತೆಯೇ ಇದೂ ಆಗಿದ್ದರೆ, ಇದು ಒಂಭತ್ತು+ಪತ್ತು ಆಗಬೇಕಾಗಿದ್ದಿತು. ಆದರೆ ಒಂಭತ್ತು ಆಗಿರುವಂತೆ (ಒಣ್+ಪತ್ತು) ಇದೂ ಆಗಿದೆಯಾಗಿ (ಪತ್ತು+ಒಣ್+ಪತ್ತು ಈ ಪ್ರಕಾರವಾಗಿ) ಇದೂ ಪತ್ತೊಂಭತ್ತು ಆಗಬೇಕು. ಆದರೆ ಏಕೋನವಿಂಶತಿಯು ಪತ್ತೊಂಭತ್ತು ಬಂದಿದೆಯಾದುದರಿಂದ ಅದಕ್ಕೂ ಇದಕ್ಕೂ ವ್ಯತ್ಯಾಸವಿರಬೇಕಾಗಿ 'ಪತ್ತೊಂಭತ್ತು' ೧೯ ಆಗಿ, ೯೦ನ್ನು ಹೇಳುವ ಈ ಶಬ್ದವು ಆದ್ಯಕ್ಷರಲೋಪದೊಡನೆ, ದ್ವಿತೀಯಾಕ್ಷರದ ದ್ವಿತ್ವವೂ ಹೋಗಿ 'ತೊಂಭತ್ತು' ಆಗಿರಬೇಕು.

ಹೋಲಿಕೆ.—ಒಂಭೈನೂರು (ಮುಂಡಿಗಳಲ್ಲಿ ಅಳೆಯುವಾಗ, 'ಒಂಭ, ಹತ್ತು').

**೪. ಇರ್ಭಾಸಿರ, ಎಣ್ಭಾಸಿರ.**—ಈಬಳ್ಳಿಯಲ್ಲಿ ಬರುವ 'ಭ' ಕೂಡ ನೈಸರ್ಗಿಕವಲ್ಲ; ಈಗಂತೂ ವ್ಯವಹಾರದಲ್ಲಿ ಇಲ್ಲವೇ ಇಲ್ಲ[8].

## ೨. ಅನುನಾಸಿಕಗಳು[9]

ಕವರ್ಗ ಚವರ್ಗ ಪಂಚಮಾಕ್ಷರಗಳಾದ **ಙ, ಞ** ನಮ್ಮಲ್ಲಿ ಇಲ್ಲ; 'ಅಂಗಳ', 'ಅಂಚೆ' ಮೊದಲಾದ ಶಬ್ದಗಳಲ್ಲಿ ಎರಡಕ್ಷರಗಳ ನಡುವೆ ಮಾತ್ರ ಕೇಳಿಬಂದರೂ ಅವಕ್ಕೆ ಪ್ರತ್ಯೇಕ ಸ್ಥಿತಿಯೊಂದು ಇರುವಂತೆ ತೋರುವುದಿಲ್ಲ. (ಈ ಅಕ್ಷರಗಳಿಗೆ ಸಂಸ್ಕೃತದಲ್ಲಿ ಪ್ರಸಕ್ತಿಯಿದ್ದರೂ ಣ, ನ, ಮ ಗಳಿಗಿರುವಂತೆ ಸ್ವತಂತ್ರ ಸ್ಥಿತಿ ಇದ್ದಂತೆ ಕಂಡುಬರುವುದಿಲ್ಲ.) 'ಞ' ಯಂತೂ 'ಯ'ದ ಅನುನಾಸಿಕಕ್ಕೆ ಸರಿ ಹೋಗಿರುವುದರಿಂದ, ಅದರ ಪ್ರಸ್ತಾಪವೇ ನಮಗೆ ಬೇಕಿಲ್ಲ. ಉಳಿದ 'ಙ', ಎಳೆಯ ಮಕ್ಕಳು ಅಳುವಾಗ ಮಾತ್ರ ಸ್ಪಷ್ಟವಾಗಿತೋರಿ, ಪ್ರತ್ಯೇಕವಾಗಿ ಕಂಡುಬರುವುದಲ್ಲದೆ ಇನ್ನೆಲ್ಲಿಯೂ ಇಲ್ಲ.

---

8 ಕಾವ್ಯಾವಲೋಕನ, ಸೂತ್ರ ೧೩.
ಹೋಲಿಕೆ.—ಅಯ್ಸಾಸಿವರ್, ಪಯಿಂಜಾಸಿರಂ (ಸೂತ್ರ ೬೨).

9 ಅನುನಾಸಿಕವೆಂದೊಡೆ ಮುಖನಾಸಿಕದೊಡನೆ ಉಚ್ಚರಿಪುದು —ಶಬ್ದಮಣಿದರ್ಪಣ: ೧೫ನೆಯ ಸೂತ್ರದ ಮೇಲಿನ ವಿಚಾರ.

'ಙ' ಕೂಡ ಶಬ್ದಾದಿಯಲ್ಲಿ ಎಲ್ಲಿಯೂ ದೊರೆಯುವುದಿಲ್ಲ. ಆದರೂ, ಅದಕ್ಕೆ ಪ್ರತ್ಯೇಕ ಸ್ಥಿತಿಯುಂಟೆಂದು ಹೇಳಲು ಸಂಶಯಪಡಬೇಕಾಗಿಲ್ಲ. 'ನ, ಮ'ಗಳ ವಿಷಯದಲ್ಲಿ ಸಂದೇಹಕ್ಕೆ ಅವಕಾಶವೇ ಇಲ್ಲ.

### ೩. ಅಲ್ಪಪ್ರಾಣಗಳು[10]

ಸಂಸ್ಕೃತದಲ್ಲಿ ಇರುವ ಅಲ್ಪಪ್ರಾಣಗಳೆಲ್ಲವೂ ನಮ್ಮಲ್ಲಿ ಇವೆ; ಆದರೆ ಆಯಾ ಸ್ವರೂಪದಲ್ಲಿಯೇ ಇದ್ದಂತೆ ತೋರುವುದಿಲ್ಲ. ಈ ವಿಚಾರವನ್ನು ಕುರಿತು ಆಯಾ ಅಕ್ಷರಗಳ ಸ್ವರೂಪವನ್ನು ಪ್ರಸ್ತಾಪಿಸುವಾಗ ಹೇಳುವೆವು.

**ಕ.**— ಇದನ್ನು ಹಿಂದಿನ ವೈಯಾಕರಣಿಗಳು ಕಣ್ಠ್ಯವೆನ್ನುತ್ತಾರೆ[11]. ಕನ್ನಡದ 'ಕ' ಕಾರವು ಕಣ್ಠ್ಯವಲ್ಲ, ತಾಲವ್ಯ ಎಂದು ನಮ್ಮ ಅಭಿಪ್ರಾಯ. ಇದು 'ಚ' ಕಾರಕ್ಕಿಂತಲೂ ಭಿನ್ನವಹುದು; ಆದರೂ, ಬಾಯಿಯ ಹಿಂಭಾಗದಲ್ಲಿ ಮೂರ್ಧನ್ಯದ ಹಿಮ್ಮಗ್ಗುಲಲ್ಲಿ ಹುಟ್ಟುವುದಲ್ಲದೆ ಸಂಸ್ಕೃತದ 'ಕ' ಅಂತೆ ಕಣ್ಠ್ಯವಲ್ಲ. ಇದನ್ನು 'ಚ'ಕ್ಕಿಂತ ಬೇರೆಯೆಂದು ತೋರಿಸಲು ಪಶ್ಚಿಮ ತಾಲವ್ಯ (ಉಪಕಣ್ಠ್ಯ) ಎಂದು ಕರೆಯೋಣ.

ತಮಿಳು ಮುಂತಾದ ಸೋದರೀ ಭಾಷೆಗಳಲ್ಲಿ ಕಂಡುಬರುವ ತಾಲವ್ಯಸ್ಥಾನದಲ್ಲಿ ಈ 'ಕ'ವು ಕಂಡುಬರುವುದರಿಂದ ಈ ಅಭಿಪ್ರಾಯಕ್ಕೆ ಬಣ್ಣವೇರುತ್ತದೆ[12].

| ಕನ್ನಡ | ತೆಲುಗು | ತಮಿಳು | ಕೊಡಗು |
|---|---|---|---|
| ಕಿವಿ | ಚೆವ್ವಿ | ಶೆವಿ | .. |
| ಕಯ್ | ಚೆಯ್ | ಶೆಯ್ | .. |
| ಕೇರಿ | .. | ಚೇರಿ | .. |
| ಕಿರಿದು | .. | .. | ಚೆರಿಯ |

[ಈ ಪಟ್ಟಿಯು ಪೂರ್ಣವಾಗಿಲ್ಲ. ಯಾರಾದರೂ ಜಿಜ್ಞಾಸುಗಳು ಇದನ್ನು ಪೂರ್ಣಮಾಡುವರೇ? **ದೇ.]**

ಕನ್ನಡದಲ್ಲಿಯೇ ಚೆಂದೆಂಗು > ಕೆಂದೆಂಗು, ಚೆಂಬೊನ್ನ > ಕೆಂಬೊನ್ನ ಮೊದಲಾಗಿ ಉಂಟು. ಚಕಾರೋತ್ತರವರ್ತಿ 'ಎ'ಕಾರವು ಇದಕ್ಕೆ ಕಾರಣವಿದ್ದರೂ ಇರಬಹುದು.

ಇದನ್ನು ಉಚ್ಚರಿಸುವಾಗ ಬಾಯಿ ತೆರೆದಿರುವುದು. ನಾಲಗೆಯು 'ಅ' ಹೇಳುವಾಗ ಇರುವಂತೆ ಇದ್ದು, ಹಿನ್ನಾಲಗೆಯ ಎರಡು ಪಾರ್ಶ್ವಗಳೂ ಎದ್ದು ನಡುವೆ ಹಳ್ಳವು ಇದ್ದು, ಪಶ್ಚಿಮ ತಾಲು (ಉಪಕಣ್ಠ) ಸ್ಥಾನವನ್ನು ತಟ್ಟುವುದು; ಆಗ ಉಸಿರು ತಪ್ಪಿಸಿಕೊಂಡು ಈಚೆಗೆ ಬಂದು 'ಕ' ಆಗುವುದು.

---

10 ಶಬ್ದಮಣಿದರ್ಪಣ: ೧೪ನೆಯ ಸೂತ್ರದ ಮೇಲಿನ ವಿಚಾರ.

11 ಶಬ್ದಾನುಶಾಸನ, ಪ್ರಥಮ ಪಾದ, ೭೮ನೆಯ ಸೂತ್ರದ ಮೇಲಿನ ವೃತ್ತಿ (೭೭ನೆಯ ಪುಟ).

12 ಶಬ್ದಮಣಿದರ್ಪಣ, ಸೂತ್ರ ೨೪೯, ಯ > ಗ.

ಹೋಲಿಕೆ.—(V‾ಮಾಡು + ಕೆ > ಮಾಳ್ಕೆ. 'ಳ'ವು 'ಡ'ಕ್ಕಿಂತ ಹಿಂದೆ ನುಡಿಯುತ್ತದೆ; ಹಿಂದಕ್ಕೆ ಎಳೆಯುವ ಕಾರಣವು 'ಕ' ಇರಬಹುದು.)

**ಗ.**— ಇದು 'ಕ'ದ ಮೃದು ರೂಪವೆನ್ನಬಹುದು. ಇಲ್ಲಿ ಸ್ಪರ್ಶವು ಮೃದು ; ಮತ್ತು ಒಂದು ಸಣ್ಣ ಅಲೆತವುಂಟು (Resonance); ನಾಲಗೆಯ ನಡುವೆ 'ಕ' ಕಾರಕ್ಕಿದ್ದಷ್ಟು ಹಳ್ಳವಿರುವುದಿಲ್ಲ; ನಾಲಗೆಯ ಹೆಚ್ಚು ಭಾಗವು ತಾಲುವನ್ನು ಮುಟ್ಟುವುದು.

ಈ ವರ್ಗವು (ಕ-ಗ) ತಾಲವ್ಯವೆನ್ನಲು ಇಲ್ಲಿ ಹೆಚ್ಚು ಆಧಾರಗಳು ಸಿಕ್ಕುತ್ತವೆ. 'ಹೋಗು, ಆಗು, ಮಾಗು' ಮುಂತಾದ ಗಾಂತ (?) ಧಾತುಗಳು ಭೂತ ರೂಪವನ್ನು ಪಡೆದಾಗ 'ಹೋಯ್ತು, ಆಯ್ತು, ಮಾಯ್ತು' ಆಗುತ್ತವೆ; ದಕಾರಾದಿ ಪ್ರತ್ಯಯಗಳು ಪರವಾದಾಗ, 'ಹೋದ, ಆದ, ಮಾಗಿದ' ಆಗುತ್ತವೆ. (ಹೋಗು+ದ>ಹೋಯ್+ ದ > ಹೋದ; ಆಗು+ದ > ಆಯ್+ದ > ಆದ; ಆದರೆ 'ಮಾಗು' ಎಂಬಲ್ಲಿ ಹಿಂದಿನ ಅನುನಾಸಿಕವೂ ಮುಂದಿನ ಮೃದು ವರ್ಣವೂ 'ಗ' ಉಳಿಯುವುದಕ್ಕೆ ಕಾರಣವಿರಬಹುದು.)

ಸಂಸ್ಕೃತದ 'ಯ'ಕಾರವು ಕೆಲವೆಡೆಗಳಲ್ಲಿ 'ಗ'ಕಾರವಾಗುತ್ತದೆ: ದ್ವಿತೀಯೆ > ಬಿದಿಗೆ, ತೃತೀಯೆ > ತದಿಗೆ[13].

**ಚ.**—ಇದು ನಮ್ಮ ಮತದಂತೆ ಪೂರ್ವ ತಾಲವ್ಯ. ಇದರಲ್ಲಿ ದಂತ್ಯದ ಕಡೆಗೆ ಒಲವು ಹೆಚ್ಚಾಗಿಲ್ಲ.

ಸಂಸ್ಕೃತದ 'ಚ'ಕಾರದಲ್ಲಿ ಆ ಒಲವು ಹೆಚ್ಚೆಂದು ತೋರುತ್ತದೆ. ಸಂಸ್ಕೃತದ 'ಚ'ಕಾರವು ಅನೇಕ ಸಮಯಗಳಲ್ಲಿ ಕನ್ನಡದಲ್ಲಿ 'ಸ' ಆಗುತ್ತದೆ: ಚರ್ಮ > ಸಮ್ಮ, ಚೂರ್ಣ > ಸುಣ್ಣ, ಚೀರ > ಸೀರೆ, ಮರೀಚ > ಮೆಳಸು, ಛತ್ರಿಕಾ > ಸತ್ತಿಗೆ[13].

ಹಾಗೆಯೇ, ಸಂಸ್ಕೃತದ ಅನುಸ್ವಾರೋತ್ತರವರ್ತಿ 'ಸ'ಕಾರವು ಕನ್ನಡದ 'ಚ' ಕಾರವಾಗುತ್ತದೆ. ಅನುಸ್ವಾರದಲ್ಲಿರುವ ಅನುನಾಸಿಕತ್ವವು ಇದಕ್ಕೆ ಕಾರಣ. ಪ್ರಯತ್ನವು ನಾಸಿಕದ ಕಡೆಗೆ ಎಳೆಯುವಾಗ ದಂತ್ಯಾಕ್ಷರವು ತಾಲವ್ಯವಾಗುತ್ತದೆ: ಹಂಸ > ಅಂಚೆ, ಕಾಂಸ್ಯ > ಕಂಚು. ಈ ನಿಯಮವು ಕನ್ನಡಕ್ಕೂ ಅನ್ವಯಿಸುತ್ತದೆಂದು ತೋರುತ್ತದೆ: ಮಿಾನ್+ಸು > ಮಿಂಚು (?), ನುಣ್+ಸರ > ನುಣ್ಚರ, ಇನ್+ಸರ > ಇಂಚರ. ಆದರೆ, 'ಪವಣ್ಸರಿ.'
(ಕಾವ್ಯಾವಲೋಕನ, ಸೂತ್ರ ೧೩.)

ಬಾಯಿ ತೆರೆದಿದ್ದು, ನಾಲಗೆಯ ಕೊನೆಗೆ ಕೊಂಚ ಹಿಂದಿನ ಭಾಗವು ಎದ್ದು ತಾಲುವನ್ನು ಚೆನ್ನಾಗಿ ಚಪ್ಪರಿಸುವುದು; ನಾಲಗೆಯ ಎರಡು ಪಾರ್ಶ್ವಗಳೂ ಕೊನೆಯೂ ಕೆಳಕ್ಕೆ ಬಿದ್ದಂತಿದ್ದು ನಡುವೆಯ ಭಾಗವು ಎದ್ದಿರುವುದು.

13 ಶಬ್ದಮಣಿದರ್ಪಣ, ಸೂತ್ರ ೨೬೩.

(ಇದರಲ್ಲಿ ತೆಲುಗಿನಂತೆ ಎರಡು 'ಚ'ಗಳು ಇರಬಹುದು.) 'ಇಸು'ಗೆ ಬದಲಾಗಿ 'ಚ' ಬರುವುದುಂಟು.

**ಜ.**—ಇದೂ ಚಕಾರದಂತೆಯೇ ಹುಟ್ಟುವುದು. ಆದರೆ ಇಲ್ಲಿ ನಾಲಗೆಯ ಕೊನೆಯ ಕೆಲಸ ಹೆಚ್ಚು. ಇದರಲ್ಲಿ ಅಲೆತವುಂಟು; 'ಚ'ಕಾರಕ್ಕಿಂತ ಕೊಂಚ ಮುಂದುಗಡೆ ಹುಟ್ಟುತ್ತದೆ.

ಸಂಸ್ಕೃತದ 'ಯ'ಕಾರವು ಕನ್ನಡದಲ್ಲಿ 'ಜ'ಕಾರವಾಗುತ್ತದೆ: ಯವ > ಜವ, ಕಾರ್ಯ > ಕಜ್ಜ, ಆರ್ಯ > ಅಯ್ಯ, ಅಜ್ಜ (ಪ್ರಾಕೃತದಿಂದ ಬಂದಾಗ 'ಅಯ್ಯ', ಸಂಸ್ಕೃತದಿಂದ ನೇರವಾಗಿ ಬಂದಾಗ 'ಅಜ್ಜ' ಇರಬಹುದೆ?), ಸಂಧ್ಯಾ > ಸಂಜೆ, ವಂಧ್ಯಾ > ಬಂಜೆ.

ಇಲ್ಲಿ ಗಮನಿಸಬೇಕಾದ ಅಂಶವೊಂದುಂಟು: ಕನ್ನಡವು ವಿಜಾತೀಯ ಸಂಯುಕ್ತಾಕ್ಷರಗಳನ್ನು (ಅವರ್ಗೀಯ, ಅನುನಾಸಿಕಗಳನ್ನು ಬಿಟ್ಟು) ಸಹಿಸದು. ಇದು ದ್ರಾವಿಡ ಭಾಷೆಗಳಿಗೆಲ್ಲ ಸಾಮಾನ್ಯ ಲಕ್ಷಣವಿರಬಹುದು. ಅದರಿಂದ, ಹೀಗೆ ಎರಡು ಮೂರು ವ್ಯಂಜನಗಳು ಸೇರಿಬರುವ ಸಂಯುಕ್ತಾಕ್ಷರಗಳಲ್ಲಿ ಮೊದಲಿನದು, ಕೊನೆಯದು—ಇವನ್ನು ಇಟ್ಟುಕೊಂಡು ಮಿಕ್ಕವನ್ನು ಬಿಡುವುದು (೧); ಮೊದಲನೆಯದು ಅನುನಾಸಿಕವಲ್ಲದೆ ಹೋಗಿದ್ದರೆ ಸಾಮಾನ್ಯವಾಗಿ ಪರಾಕ್ಷರದ ರೂಪವನ್ನೇ ಹೊಂದುವುದು (೨); ಅಥವಾ, ನಡುವೆ ಒಂದು ಸ್ವರವನ್ನು ತಂದಿಡುವುದು (೩):—

(೧) ಸಂಧ್ಯಾ= ಸ ನ್ ಧ್ ಯ್ ಆ > ಸ ನ್ ಯ್ (ಜ್) ಆ (ಎ)=ಸಂಜೆ.

(೨) ಅರ್ಘ್ಯ= ಅ ರ್ ಘ್ ಯ್ ಅ > ಅ ಗ್ ಗ್ ಅ=ಅಗ್ಗ.

(೩) ಲಕ್ಷ್ಮಿ= ಲ ಕ್ ಷ್ ಮ್ ಇ > ಲ ಕ್ ಉ ಮ್ ಇ=ಲಕುಮಿ.

ಎರಡೇ ವ್ಯಂಜನಗಳಿದ್ದಲ್ಲಿ ಬಹುತರವಾಗಿ ಪೂರ್ವಾಕ್ಷರವು ದ್ವಿತ್ವವಾಗಿ ನಿಲ್ಲುವುದು: ಪಕ್ಷ= ಪ ಕ್ ಷ್ ಅ > ಪ ಕ್ ಕ್ ಅ = ಪಕ್ಕ; ಕನ್ಯಾ=ಕ ನ್ ಯ್ ಆ > ಕ ನ್ ನ್ ಎ=ಕನ್ನೆ.

ಸಟಾ > ಜಟೆ.—ಇದು 'ಸಟಾ' ಶಬ್ದವನ್ನು 'ಜಟಾ' ಶಬ್ದದೊಡನೆ ಹೊಂದಿಸಿಕೊಂಡು ಅದರಂತೆಯೇ 'ಜಟೆ' ಆಗಿರಬೇಕು. ಕನ್ನಡದಲ್ಲಿ 'ಸಟೆ' ಯೆಂಬ ಬೇರೊಂದು ಶಬ್ದವು ಇರುವುದರಿಂದ 'ಸಟಾ > ಸಟೆ' ಹೋಗಿ, 'ಜಟಾ > ಜಟೆ' ಶಬ್ದವು ಎರಡಕ್ಕೂ ಆದೇಶವಾಗಿರಬಹುದು.

**ಟ.**—ನಾಲಗೆಯು ಹೊರಳಿ, ಅದರ ಕೊನೆಯು ಸರಿಯಾಗಿ ಅಂಗಳಿಗೆ ಹೋಗಿ ತಗುಲಿ ಚಿಟಿಕೆ ಹೊಡೆದಂತೆ ಶಬ್ದಮಾಡುತ್ತದೆ. ಲೊಟ್ಟೆಹೊಡೆಯುವ ಸಂದಿನಲ್ಲಿರುವ ಎರಡಕ್ಷರಗಳಲ್ಲಿ ಮೊದಲನೆಯದು ಇದು. ಈ ಅಕ್ಷರದ ಉಚ್ಚಾರಣೆಯಲ್ಲಿ ನಾಲಗೆಯ ಕೊನೆಯಂತೆಯೇ ಮುಡಚಿದ ನಾಲಗೆಯ ಕೊನೆಯ ಭಾಗ (ಅಡಿನಾಲಗೆಯ ಕೊನೆಯ ಭಾಗ)ವನ್ನೂ ಉಪಯೋಗಿಸಬಹುದು.

ಸಂಸ್ಕೃತದ ಮೂರ್ಧನ್ಯಾಕ್ಷರಗಳು ಕನ್ನಡದಲ್ಲಿ 'ಟ' ಆಗುವುವು: ಕೃಷ್ಣ ▷ ಕಿಟ್ಟ, ಪುಷ್ಟ ▷ ಪುಟ್ಟ, ಪಿಷ್ಟ ▷ ಹಿಟ್ಟು (?).

ವರ್ಗೀಯ ಮೂರ್ಧನ್ಯದ ಸಂಬಂಧವಿಲ್ಲದೆಡೆಯಲ್ಲಿ ಇಲ್ಲ: ಹರ್ಷ ▷ ಹರಿಸ (ಹರುಸ).

**ಡ.**—ಇದು 'ಟ' ಅಂತೆಯೇ; ಅದರ ಮೃದು ರೂಪ. ಇದರಲ್ಲೂ ನಾಲಗೆಯ ಕೊನೆಯನ್ನಾಗಲೀ, ಅದರ ಅಡಿಯನ್ನಾಗಲೀ ಉಪಯೋಗಿಸಬಹುದು. ಇದರಲ್ಲಿ 'ಗ' ಕಾರಕ್ಕೆ ಬೇಕಾದಷ್ಟು ಒತ್ತಾಟವು ಇಲ್ಲ; 'ಬ' ಕ್ಕಿಂತಲೂ ಹೆಚ್ಚು ಪ್ರಯತ್ನ ಬೇಕು; ಅಲೆತವಿದೆ.

**ಣ.**—'ಡ'ದ ಅನುನಾಸಿಕ ರೂಪವಿದು. ಳ ಕಾರವೂ 'ಣ' ಆಗುವುದುಂಟು: ಮಳಲು ▷ ಮಣಲು, ಮೆಳಸು ▷ ಮೆಣಸು.

**ತ.**—ಇದು ಮುಂದಿನ ವಸಡಿನ ಮಗ್ಗುಲಲ್ಲಿ ಹುಟ್ಟುವುದು. ಇದು ದಂತ್ಯವಲ್ಲ, ಉಪದಂತ್ಯವೆನ್ನಬಹುದು. ಪೂರ್ವ ತಾಲವ್ಯ 'ಚ'ಕ್ಕಿಂತ ಮುಂದುಗಡೆಯಾಗಿ, ಸಂಸ್ಕೃತದ 'ತ'ಕ್ಕಿಂತ ಹಿಂದಾಗಿ ಹುಟ್ಟುವುದು.

ಇದನ್ನು ಉಚ್ಚರಿಸುವಾಗ 'ಕ, ಚ' ಗಳಿಗಿಂತ ಹೆಚ್ಚು ಒತ್ತಾಟ ಬೇಕು. ಇದೇ ಕಾರಣದಿಂದಲೇ, √ಸಾಯ್, √ತೆರು, √ಹೆರು ಮೊದಲಾದುವು ಭೂತ ಕೃದಂತಗಳಲ್ಲಿ ತಮ್ಮ ಅಂತ್ಯಾಕ್ಷರವನ್ನು ಇದರಂತೆ ಆಗಲು ಅವಕಾಶಕೊಡುವುವು (ಸತ್ತ, ತೆತ್ತ, ಹೆತ್ತ). √ಬರು, √ಕೊಲ್, √ನಿಲ್—ಇವು ತಮ್ಮ ರ, ಲ ಗಳನ್ನು ಅನುನಾಸಿಕ ಮಾಡಿಕೊಳ್ಳುತ್ತವೆ. ಈ ಅವರ್ಗೀಯಾಕ್ಷರಗಳಲ್ಲಿ ಅನುನಾಸಿಕ ವ್ಯಾಪ್ತಿಯಿದ್ದು ಅದು ಇಲ್ಲಿ ಪ್ರಕಟವಾಗುತ್ತದೆ. (ಮುಂದಿನ ಲೇಖನವನ್ನು ನೋಡಿರಿ.)

**ದ.**—ಇದು 'ತ' ದ ಮೃದು ರೂಪ. 'ತ'ಕಾರದಲ್ಲಿ ನಾಲಗೆಯ ಕೊನೆಯು ಮಾತ್ರ ಉಪಯುಕ್ತವಾಗುವುದು. ಇಲ್ಲಿ ನಾಲಗೆಯ ಕೊನೆಯೂ ಅದರ ಹಿಂಭಾಗವೂ ಸೇರಿಹೋಗಿ, ವಸಡಿನ ಹಿಂಗಡೆಯನ್ನು ಚೆನ್ನಾಗಿ ಒತ್ತುವುವು. ಇದರಲ್ಲಿ ಅಲೆತವುಂಟು.

**ನ.**—ಇದು 'ತ, ದ' ಎರಡೂ ಅಕ್ಷರಗಳ ಅನುನಾಸಿಕ ರೂಪ. (ಣಕಾರವು ಡಕಾರದ ಅನುನಾಸಿಕವಲ್ಲದೆ, ಟಕಾರದ ಅನುನಾಸಿಕವಲ್ಲ: ಉಚ್ಚರಿಸಿ ನೋಡಿರಿ.) ಅವರ್ಗೀಯಗಳಲ್ಲಿ ಕೆಲವು (ರ, ಲ) ಬಲು ಬೇಗ 'ನ' ಆಗುವುದುಂಟು.

(ಲ ▷ ನ)—ಲಿಂಗ ▷ ನಿಂಗ, ಕೊಲ್ ▷ ಕೊಂದ, ಸಲ್ ▷ ಸಂದ, ನಿಲ್ ▷ ನಿಂದ, ತರು ▷ ತಂದ, ಬರು ▷ ಬಂದ. ಆದರೆ, ತೆರು ▷ ತೆತ್ತ, ಹೆರು ▷ ಹೆತ್ತ. ಮಿಕ್ಕ ರಾಂತ, ಲಾಂತ ಧಾತುಗಳು ಹೀಗೆ ಆಗುವುದಿಲ್ಲ. (ಶಬ್ದಮಣಿದರ್ಪಣದ ಧಾತು ಪ್ರಕರಣವನ್ನು ನೋಡಿರಿ.)

**ಪ. ಬ. ಮ.**—ಇವು ಮೂರೂ ಓಷ್ಠ್ಯಗಳೇ. ಸಂಸ್ಕೃತದ ಅಕ್ಷರಗಳಿಗೂ ಇವಕ್ಕೂ ಭೇದವಿಲ್ಲ.

ತುಟಿಗಳು ಸೇರಿಬಿಟ್ಟಾಗ ಹುಟ್ಟುವ ಅಕ್ಷರಗಳು ಇವು. ಪ್ರಯತ್ನವು ಹೊರ ಮೊಗವಾಗಿ ತುಟಿಗಳೆರಡೂ ತಟ್ಟನೆ ಒಡೆದರೆ 'ಪ' ಆಗುವುದು. ಕೆಳದುಟಿಯು ಕೊಂಚ ಒಳಕ್ಕೆ ಹೋಗಿ ಒಡೆದರೆ 'ಬ' ಆಗುವುದು. ಇದರಲ್ಲಿ ಅಲೆತವುಂಟು. 'ಪ' ಕ್ಕೆ ಬೇಕಾದ ಪ್ರಯತ್ನಕ್ಕಿಂತ ಕೊಂಚ ಕಡಿಮೆಯಾಗಿ, 'ಬ' ದ ಅನುನಾಸಿಕ ವಾದರೆ 'ಮ' ಆಗುವುದು. ಇದೂ 'ಪ, ಬ' ಎರಡರಲ್ಲಿ ಯಾವುದರ ಅನುನಾಸಿ ಕವು ಬೇಕಾದರೂ ಆಗಬಹುದು.

ಕೆಲವೆಡೆಗಳಲ್ಲಿ ಕನ್ನಡದಲ್ಲಿ ವ, ಮ, ಪ, ಹ ಗಳು ಒಂದರ ಸ್ಥಾನದಲ್ಲಿ ಒಂದು ಬರುವುದುಂಟು[14]. (ಮುಂದಿನ ಲೇಖನ ನೋಡಿರಿ.)

**ದೇವುಡು.**

ವಿಶೇಷ.—'ಅಲೆತ' ಎಂದರೆ ಅಕ್ಷರವನ್ನು ನುಡಿಯುವಾಗ ಬಾಯಲ್ಲಿ ಸದ್ದು ಗುಡುಗಿದಂತೆ ಆಗುತ್ತದೆ. ಇದು ಕೊಂಚ ಗಮನವಿಟ್ಟು ನೋಡಿದರೆ ತಿಳಿಯುವುದು.

———

14 ಶಬ್ದಮಣಿದರ್ಪಣ—ಕೊನೆಯ ಪದ್ಯ.

# *ನಂದಳಿಕೆ ಲಕ್ಷ್ಮೀನಾರಾಯಣಪ್ಪನೂ ಶ್ರೀರಾಮ ಪಟ್ಟಾಭಿಷೇಕವೂ

ಕಡೆಯೆ ಪಾಲ್ಗಡಲನಮೃತಂ ಪುಟ್ಟುವಂತೆ ತೇ ।
ದೊಡೆ ಚಂದನಂ ಸುಗಂಧವನೀವ ತೆಱದೆ ಪುಟ ।
ಕಿಡೆ ಕಾಂಚನಂ ಕಾಂತಿ ಪೆರ್ಚುವೊಲ್ ಕರ್ಬುಗೋಲಂ ಪಿೞಿದು ಕಾಸಲೊಡನೆ ॥
ಗುಡಮೆನಿಸುತಧಿಕ ಮಧುರಂಗುಡುವ ಪರಿಯೊಳೆಡೆ ।
ಬಿಡದೆ ಶ್ರೀರಾಮ ಚರಿತಾಮೃತವ ಮಥಿಸಲ್ಕೆ ।
ಪಡೆವೆವಲೆ ಸುಜ್ಞಾನ ಪಿಂಡಮಂ ಖಂಡಮಂ ಸವಿಯಲೆನಿತಿನಿದೊ ಬೞಿಕ ॥

[ಶ್ರೀ. ಪ., ೩–೯

ಎಂಬ ಕವ್ಯುಕ್ತಿಯಂತೆ, ಶ್ರೀರಾಮ ಪಟ್ಟಾಭಿಷೇಕವೆಂಬೀ ಗ್ರಂಥವನ್ನು ಓದುತ್ತ ನಡೆದಂತೆ ಮತ್ತೆ ಮತ್ತೆ ಹೊಸ ಹೊಸ ಚಮತ್ಕೃತಿಗಳೇ ದೃಗ್ಗೋಚರವಾಗುತ್ತ ಹೋಗುತ್ತವೆ. ಆದುದರಿಂದಲೇ, ಈ ಗ್ರಂಥವನ್ನು ಈ ಮೊದಲಲ್ಲಿಯೇ ಎಷ್ಟೋ ಜನರು ವಿಮರ್ಶಿಸಿದ್ದರೂ, ಮತ್ತೂ ವಿಮರ್ಶಿಸಬೇಕೆಂಬ ಕುತೂಹಲವು ನನ್ನಲ್ಲುಂಟಾಯಿತು. ಈ ಪ್ರಕಾರ ಉದ್ಭವಿಸಿದ ಅತಿರೇಕವಾದ ಆಕಾಂಕ್ಷೆಯೇ ನನ್ನನ್ನೀ ಕೆಲಸಕ್ಕೆ ತೊಡಗಿಸಿತೇ ಹೊರತು ನನ್ನಲ್ಲಿದ್ದ ವಿಮರ್ಶಾ ಶಕ್ತಿಯಲ್ಲವೆಂದು ನಿಶ್ಶಂಕವಾಗಿ ಹೇಳುತ್ತೇನೆ.

ಉಡುಪಿ ತಾಲ್ಲೂಕಿನಲ್ಲಿಯ ನಂದಳಿಕೆಯು ಹುಟ್ಟೂರಾಗಿರುವ ಲಕ್ಷ್ಮೀನಾರಾಯಣಪ್ಪನು ಈ ಗ್ರಂಥವನ್ನು ಸರ್ವಜನ ಪ್ರಿಯವಾಗುವಂತೆ ಬರೆದಿದ್ದರೂ, ತನ್ನ ಹೆಸರಿನಿಂದ ಇದನ್ನು ಪ್ರಸಿದ್ಧಪಡಿಸದೆ, ತನ್ನ ತಾಯಿಯಾದ "ಮಹಾಲಕ್ಷ್ಮಿ"ಯ ಹೆಸರಿನಿಂದ ಬೆಳಕಿಗೆ ತಂದುದು ಈ ಕವಿಯ ಮಾತೃಭಕ್ತಿಯನ್ನೂ ಮೇಲ್ಮೆಯನ್ನೂ ತೋರಿಸುತ್ತದೆ. ನಾರಾಯಣಪ್ಪನ ಜೊತೆಯಲ್ಲಿದ್ದ ಜನರು ಈತನ ವಿಷಯದಲ್ಲಿ ಗೊತ್ತಿದ್ದ ಸತ್ಯವಾದ ಸಂಗತಿಗಳನ್ನು ಪ್ರಕಾಶಕ್ಕೆ ತಂದದ್ದರಿಂದಲೂ, ವಿದ್ವಜ್ಜನರು ಮಾಡಿದ ಶೋಧದಿಂದಲೂ, ನಾರಾಯಣಪ್ಪನೇ ಈ ಕಾವ್ಯವನ್ನು ರಚಿಸಿದವನೆಂದು ಎದೆ ತಟ್ಟಿ ಹೇಳಬಹುದು. ನಾರಾಯಣಪ್ಪನು ಕನ್ನಡದಲ್ಲಿ ಪಂಡಿತನಾಗಿದ್ದಂತೆ ಸಂಸ್ಕೃತದಲ್ಲಿಯೂ ತಮಿಳಿನಲ್ಲಿಯೂ ಪಂಡಿತನಾಗಿದ್ದನೆಂಬುದಕ್ಕೆ ಅನೇಕ ಸಂಸ್ಕೃತ ಪದ್ಯಗಳನ್ನು ರೂಪಾಂತರಿಸಿರುವುದೂ, ಅಥವಾ ಭಾಷಾಂತರಿಸಿರುವುದೂ, ಅನೇಕ ತಮಿಳು ಪದ್ಯಗಳನ್ನು ರಚಿಸಿರುವುದೂ ಸಾಕ್ಷೀಭೂತವಾಗಿದೆ. ಆದರೂ ಆತನಿಗೆ ಕನ್ನಡ ಭಾಷೆಯ ವಿಷಯವಾಗಿ ಅತುಲ ಪ್ರೇಮವೂ, ಕನ್ನಡ ಭಾಷೆಯೇ ಎಲ್ಲ ಭಾಷೆಗಳ

* ಈತನ ಸಮಗ್ರ ಚರಿತವು 'ಪ್ರಬುದ್ಧ ಕರ್ಣಾಟಕ'ದ ೭ನೆಯ ಸಂಪುಟದ ೧ನೆಯ ಸಂಚಿಕೆಯಲ್ಲಿ ಪ್ರಕಟವಾಗಿದೆ.

ಲ್ಲಿಯೂ ಮಿಗಿಲಾದುದು, ಲಲಿತವಾದುದು ಎಂಬ ಹೆಮ್ಮೆಯೂ (ದುರಹಂಕಾರವಲ್ಲ) ಇದ್ದುವೆಂಬುದಕ್ಕೆ ಮುಂದಣ ಒಂದು ಪದ್ಯವೇ ಉದಾಹರಣವಾಗಿರುತ್ತದೆ:—

ಮೃದು ಪದಾನ್ವಿತೆ ಮಂದಗತಿ ಮಂಜು ಭಾಷೆ ಭಾ ।
ಸ್ವದಮಲಿನ ಸಂಧಿ ಶೋಭಿತೆ ವರ್ಣಯುಕ್ತೆ ಷ ।
ಟ್ಪದ ವೇಣಿ ನವ ರಸ ಭರಿತೆ ಸಚ್ಚರಿತೆ ಸುನಯ ನಾತಿ ಕಠಿನ ಸ್ವಭಾವೆ ॥
ಚದುರೆ ಕನ್ನಡ ಜಾಣೆ ಸತ್ಕಳಾ ಕೋವಿದರ ।
ಹೃದಯಮಂ ತೋಷಿಸುವಳೆನೆ ರಸ ವಿಹೀನರಿಂ ।
ಗೊದಗುವಳೆ ದೈವ ಗತಿಯಿಂದೊರ್ಮೆ ಲಭಿಸಿದೊಡಮೇಂಗೆಯ್ವರಾ ಗಾಂಪರು ॥

[ಪೀಠಿಕಾ ಸಂಧಿ, ಪದ್ಯ ೭

ಇಲ್ಲಿ ವರ್ಣಿಸಿರುವಂತೆ, ಕನ್ನಡ ವಾಙ್ಮಯವು ಎಲ್ಲ ವಾಙ್ಮಯಗಳಲ್ಲಿ ಮಿಗಿಲಾದುದೂ ಲಲಿತವಾದುದೂ ಇದ್ದರೂ, ಜಗತ್ತಿನಲ್ಲಿ ಕನ್ನಡ ವಾಙ್ಮಯ ಗಂಗೆಯು ಜನಿಸಿದಂದಿನಿಂದ, ಒಂದೇ ಸವನೆ ಕ್ರಿ. ಶ. ೧೭ನೆಯ ಶತಮಾನದ ವರೆಗೆ, ಕೆಲವು ವೇಳೆ ರಭಸದಿಂದಲೂ, ಕೆಲವು ವೇಳೆ ಮಂದವಾಗಿಯೂ, ಕೆಲವು ವೇಳೆ ಅತಿ ಮಂದವಾಗಿಯೂ ಪ್ರವಹಿಸಿ, ಕ್ರಿ. ಶ. ೧೯ನೆಯ ಶತಮಾನದ ವರೆಗೆ ರಾಜಕೀಯ, ಸಾಮಾಜಿಕ, ಧಾರ್ಮಿಕ ಪರಿಸ್ಥಿತಿಯಿಂದ ಗುಪ್ತವಾಯಿತು; ಅಲ್ಲದೆ, ಗೊಡ್ಡು ಭಾಷೆಯೆಂದೂ, ನೀರಸ ಭಾಷೆಯೆಂದೂ ದೂಷಿಸಲಿಕ್ಕೆ ನಿಂದಾಸ್ಪದವಾಯಿತು. ಆದುದರಿಂದ ಈ ದೋಷಾರೋಪಣೆಯನ್ನು ದೂರೀಕರಿಸುವುದಕ್ಕಾಗಿಯೂ ನಿಂದಕರಿಗೆ ಉತ್ತರ ಕೊಡುವುದಕ್ಕಾಗಿಯೂ—

ಚೆನ್ನನೊರ್ವಂ ಮರುಳನಾದೊಡೇಂ ವಿತ್ತ ಸಂ ।
ಪನ್ನೆ ತಾಂ ಬಂಜೆಯೆನಿಸಿರ್ದೊಡೇಂ ಕನ್ನಡದೊ ।
ಳೆನ್ನ ಕಬ್ಬಂ ಬರೆಯೆವಟ್ಟೊಡೇಂ ಭಕ್ತಿ ವೈರಾಗ್ಯ ಸತ್ಕಥೆಗಳೆಸೆಯೆ ॥ [ಪೀ. ಸಂ., ೮

ಮತ್ತು,

ನಿಂದಿಸುವ ಜನರ ದುರ್ವಾಕ್ಯಮಂ ಕೇಳ್ದು ಮನ ।
ಗುಂದಿ ಮಾಣ್ಬನೆ ಕಾವ್ಯ ರಚನೆಯಂ ಕವಿ ಗುಮ್ಮ
ನಂದುದಿಪ ನೇಸಱಿಂ ಕಂಡು ದನಿಗುಡಲರ್ಕನೇಂ ಕಿರಣಮುಡಗಿಸುವನೇ ॥ [ಪೀ. ಸಂ., ೬

ಎಂದು ಪ್ರಶ್ನೆಮಾಡಿರುವನು. ಇರಲಿ; ಇಂತಹ ಹೊತ್ತಿನಲ್ಲಿಯೇ, ಕನ್ನಡವು ರಸಾತಲಕ್ಕೆ ಇಳಿದುಹೋದ ಹೊತ್ತಿನಲ್ಲಿಯೇ, ಕ್ರಿ. ಶ. ೧೮೮೫ನೆಯ ಸಂವತ್ಸರದಲ್ಲಿ, ೧೯ನೆಯ ಶತಮಾನಾಂತ್ಯದ ಕೊನೆಯ ಭಾಗದಲ್ಲಿ, ಈ ಕಾವ್ಯವು ರಚಿತವಾದುದನ್ನು ನೋಡಿದರೆ ಕನ್ನಡ ವಾಙ್ಮಯವೆಂಬ ಪುರುಷನಿಗೆ, ಎಷ್ಟೋ ದಿನಗಳ ವರೆಗೆ ಕಣ್ಣು ಕಪ್ಪಡಿಯ ಮಲದಿಂದ ತುಂಬಿದ ಗೃಹದಲ್ಲಿ ಬಂಧಿಸಿಟ್ಟು, ಒಮ್ಮೆಲೆ ಮಲಯಾಚಲದಲ್ಲಿ ಸ್ವಚ್ಛಂದವಾಗಿ ಸಂಚರಿಸಲಿಕ್ಕೆ ಬಿಟ್ಟಂತೆಯೂ, ಮರಣೋನ್ಮುಖನಿಗೆ ಅಮೃತದ ಗುಟಿಯನ್ನು ಹಾಕಿ ಪೊರೆದಂತೆಯೂ, "ಪಣ್ಣಿತ್ತು ಪಂಡಿತನ ನೆಳದಳಿರನಿಕ್ಕಿ ಕೆಂ। ಗಣ್ಣನಂ ಪಾಲೆಱೆದು ಹಂಸನಂ ವತ್ಸಮಂ। ತಣ್ಣೀರ್ಗುಡಿಸಿ........" (೪–೧೧)

ಜೋಪಾನ ಮಾಡಿದಂತೆಯೂ, ಅರ್ಥಾತ್, ಗುಪ್ತವಾಗಿದ್ದ ಕನ್ನಡವಾಙ್ಮಯ ಗಂಗೆಯು ಧೋ! ಧೋ! ಎಂದು ಪುನಃ ಹರಿಯಲಿಕ್ಕೆ ಹತ್ತಿತೆಂದು ತಿಳಿಸುವುದೇ ಈ ಲೇಖದ ಮುಖ್ಯ ಧ್ಯೇಯವು.

"ಮೂರ್ತಿ ಸಣ್ಣದಿದ್ದರೂ ಕೀರ್ತಿ ದೊಡ್ಡದು" ಎಂಬ ನಾಣ್ಣುಡಿಯಂತೆ, ಈ ಪಟ್ಟಾಭಿಷೇಕ ಗ್ರಂಥವು ಅತ್ಯಂತ ಬೆಲೆಯುಳ್ಳದ್ದಿರುತ್ತದೆ. ಏಕೆಂದರೆ, ಇದರಲ್ಲಿಯ ನಾಂದೀ ಸಂಧಿಯೂ, ಪೀಠಿಕಾ ಸಂಧಿಯೂ, ಕಥಾಪೂರ್ಣವಾದ ಉಳಿದ ಮೂರು ಸಂಧಿಗಳೂ ಕೂಡಿ ೩೫೦ ವಾರ್ಧಿಕ ಷಟ್ಪದಿಗಳಲ್ಲಿ, ವಾಲ್ಮೀಕಿ ರಚಿತ ರಾಮಾಯಣದ ಕಥೆಯನ್ನೇ ಸಂಕ್ಷಿಪ್ತದಿಂದ ಸಂಪೂರ್ಣವಾಗಿ ಹೇಳುತ್ತವೆ. ಇದರಲ್ಲಿಯ ರಾಮಾಯಣದ ಚರಿತ್ರವು ಹಳೆಯದಿದ್ದರೂ, ಶಬ್ದ ಸೌಂದರ್ಯವೂ, ವರ್ಣನಾ ವೈಚಿತ್ರ್ಯವೂ, ಅಲಂಕಾರ ವೈಭವವೂ, ನೀತಿ ವಚನಗಳ ಸಂಗ್ರಹವೂ, ಇತರ ಉತ್ತಮ ಕನ್ನಡ ಗ್ರಂಥಗಳಲ್ಲಿರುವಂತೆ ಅತ್ಯಂತ ಮನೋರಂಜಕವೂ, ಮಾರ್ಗದರ್ಶಕವೂ, ನೂತನವೂ ಆಗಿರುತ್ತದೆ. ಇದು ಕನ್ನಡದಲ್ಲಿರುವ ಯಾವ ಉತ್ತಮ ಕಾವ್ಯಕ್ಕೂ ಹಿಮ್ಮೆಟ್ಟುವಂತಿಲ್ಲ. ಇರಲಿ; ಉತ್ತಮ ಕಾವ್ಯಗಳೆಂದು ಎಂಥವುಗಳನ್ನು ಹೇಳಬೇಕು ಎಂಬುದನ್ನು ಸಂಕ್ಷಿಪ್ತವಾಗಿ ಹೇಳಿ ಮುಖ್ಯ ವಿಷಯದ ಕಡೆಗೆ ತೆರಳೋಣ.

> ಚತುರ ಪದಗತಿಯ ಸರಸ ಧ್ವನಿಯ ವರ್ಣ ಶೋ ।
> ಭಿತದಲಂಕಾರದ ಸುಲಕ್ಷಣದ ಲಾಲಿತ ।
> ಶ್ರುತಿ ರಂಜನದ.................॥

ಎಂದು ಜೈಮಿನಿಕಾರನು ಹೇಳಿರುವಂತೆ ನಾರಾಯಣಪ್ಪನೂ ತನ್ನದೊಂದು ಪದ್ಯದಲ್ಲಿ ಹೀಗೆ ಹೇಳುತ್ತಾನೆ:—

> ಯತಿ ಗಣಾಶ್ರಯಮೆನಿಸಿ ಶಬ್ದಾರ್ಥ ಭಾವದಿಂ ।
> ದತಿ ರಸಾಲಂಕಾರಮೊಪ್ಪೆ ಜೀವಾಕ್ಷರ ಸು ।
> ಗತಿಗಿರ್ಕೆಯಾಗಿ ನವ ಪದ ಪುಂಜ ರಂಜಿತ ಮನೋಜ್ಞಮೆನೆ ಕೈವಲ್ಯದ ॥
> ನುತ ಸುಕೃತ ಪದ್ಯಾವಳಿಯೆ ಇದೆನಿಸುತ್ತೆ ವಸು ।
> ಮತಿಗೆ ವಿಬುಧರ್ಕಳಿಂ ಸಂಭಾವ್ಯಮಾಗೆ..........　　[ನಾಂ. ಸಂಧಿ., ಪದ್ಯ ೬

ಮೇಲಣ ಪದ್ಯಗಳಲ್ಲಿ ವರ್ಣಿಸಿರುವಂತೆ, ಈ ಪಟ್ಟಾಭಿಷೇಕ ಕಾವ್ಯದಲ್ಲಿ ಈ ಎಲ್ಲಾ ವಿಷಯುಗಳೂ ಬಂದಿರುತ್ತವೋ ಇಲ್ಲವೋ, ವಾಚಕರ ಮನೋಭೂಮಿಯಲ್ಲಿ ಈ ಕಾವ್ಯವು "ಮಧುರ ರಸ ಝರಿ"ಯನ್ನು ಹುಟ್ಟಿಸುತ್ತದೋ ಇಲ್ಲವೋ ಎಂಬುದನ್ನು ಪರೀಕ್ಷಿಸೋಣ.

**ನಾಂದೀ ಸಂಧಿ**ಯಲ್ಲಿ ಒಟ್ಟು ಒಂಬತ್ತೇ ಪದ್ಯಗಳಿದ್ದರೂ ಇವು ಶ್ಲೇಷೆಯಿಂದ ಕೂಡಿವೆ. ಕೈಲಾಸ ಪರ್ವತವನ್ನು ವರ್ಣಿಸುವಲ್ಲಿ, ಉಡುಪಿಯಲ್ಲಿಯೇ ಇರುತ್ತಿದ್ದ ಕವಿಯ ಚಿತ್ತ ಮಂದಿರದಲ್ಲಿ ಅಲ್ಲಿಯ ಪಶ್ಚಿಮ ಘಟ್ಟದ ಮನೋಹರವಾದ ಚಿತ್ರವು ಮೂಡಿದ್ದುದರಿಂದ ಪಶ್ಚಿಮ ಘಟ್ಟದ ವರ್ಣನೆಯನ್ನು ಕವಿಯು ಸ್ವಾಭಾವಿಕವಾಗಿ ಮಾಡಲು ಕಾರಣವಾಯಿತೆಂದು ಊಹಿಸಲು ಅವಕಾಶವಿದೆ.—

ರಾಗ ಮಣಿ ರುಚಿ ರಾಜಿತೋತ್ತಮಾಂಗಂ ಸು ಪು ।
ನ್ನಾಗಾಚ್ಛ ಪುಂಡರೀಕಾಕಲಿತ ಪದ ನಮಿತ ।
ಭೋಗ ಯೋಗ್ಯಾಶ್ರಯಂ ಭುವನ ಗರ್ಭಂ ವಂಶ ಶೋಭಿತಂ ಹೈಮ ಕಟಕಂ ॥
ರಾಗ ರಸಯುತನಮಲ ಘನ ರೂಪನಚಲಂ ಸು ।
ರಾಗಮೋನ್ಮಿಲಿತ ಪ್ರದೇಶನನಿಶಂ . . . . . . . . [ನಾಂ. ಸಂ., ಪದ್ಯ ೨

ಈ ಪದ್ಯದಿಂದ, ಕವಿಯಲ್ಲಿದ್ದ ಸ್ವಗ್ರಾಮಾಭಿಮಾನವೂ ಸ್ವದೇಶಾಭಿಮಾನವೂ ವ್ಯಕ್ತವಾಗುತ್ತದೆ.

**ಪೀಠಿಕಾ ಸಂಧಿ**ಯಲ್ಲಿ ವ್ಯಾಸ, ವಾಲ್ಮೀಕಿ, ಭವಭೂತಿ, ಬಾಣ, ಜೈಮಿನಿ, ಷಡಕ್ಷರಿ ಮುಂತಾದ ಸಂಸ್ಕೃತ ಮತ್ತು ಕನ್ನಡ ಕವಿಗಳ ಸ್ತುತಿಯಿದೆ.

. . . . . . . . . . . . . . . . . . . . . . ಕವಿತಾ ಸುಲಕ್ಷಣಗಳ ॥
ಗುಟ್ಟನಱಿಯದೆ ಕಷ್ಟಸಾಧ್ಯವಹ ಕೃತಿಗೆ ಮನ ।
ಗೊಟ್ಟಳೆಂದೆನ್ನ ನಗೆಗೀಡು ಮಾಡದೆ ಜಗದಿ ।
ಪುಟ್ಟಿದವರಿಗೆ ಮನದ ಬಯಕೆ ಪಿರಿದೆಂದು ಮನ್ನಿಪುದಿದಂ ಸರ್ವ ಜನರು ॥ [ಪೀ. ಸಂ., ಪದ್ಯ ೪

ಎಂದೂ,

ಕನ್ನಡಿತಿಯೊರೆದ ನುಡಿಯೆಂದಿದಂ ಭಾವಿಸದೆ ।
ಕನ್ನಡಿಗನೊರೆದ ನುಡಿಯೆಂದು ಸಂಭಾವಿಪುದು ।
ಕನ್ನಡಿಗನೇಕ ಪೆಸರಿರ್ದೊಡೇನಕ್ಕು ಫಲಮೆಸೆವ ಮೊಗಗಾಣ್ಬುದಲ್ತೇ ॥ [ಪೀ. ಸಂ., ಪದ್ಯ ೮

ಎಂದೂ,

ಬುಧರೊಲ್ದು ಕೈಕೊಳ್ಗೆ ತಿರ್ದುಗೆ ಕೃತಿಯೊ ।
ಅಧಿಕ ದೋಷಂಗಳೇನಾನುಮುಳ್ಳೊಡೆ. . . .

ಎಂದೂ ಕವಿಯು ಹೇಳಿರುವುದರಿಂದ, ಆತನ ವಿನಯ ಸ್ವಭಾವವೂ, ಆ ಕಾಲದಲ್ಲಿ ಸ್ತ್ರೀ ಶಿಕ್ಷಣಕ್ಕೆ ಕೇವಲ ಗ್ಲಾನಿಯೊದಗಿದ್ದುದನ್ನು ನೋಡಿ ಕವಿಯು ಸ್ತ್ರೀ ಶಿಕ್ಷಣಕ್ಕೆ ಉತ್ತೇಜನ ಕೊಡುವುದಕ್ಕಾಗಿಯೇ ತನ್ನ ಜನನಿಯಾದ 'ಮಹಾಲಕ್ಷ್ಮಿ'ಯ ಹೆಸರಿನಿಂದ ಈ ಕಾವ್ಯವನ್ನು ಬರೆದಿರಬೇಕೆಂಬ ಅಭಿಪ್ರಾಯವೂ ವ್ಯಕ್ತವಾಗುವುದು.

**ಮೂರನೆಯ ಸಂಧಿ**ಯಲ್ಲಿ (೧) ವಿಭೀಷಣನ ಪಟ್ಟಾಭಿಷೇಕ, (೨) ಸಮುದ್ರ ವರ್ಣನೆ, (೩) ಕಿಷ್ಕಿಂಧಾ ಕಾಂಡದ ಸಂಕ್ಷಿಪ್ತ ಸಾರ, (೪) ಜಟಾಯುವಿನ ವಧೆ, (೫) ಪಂಚವಟೀ ವರ್ಣನೆ, (೬) ಪವನಜನ ವೇಗದ ವರ್ಣನೆ, (೭) ಭರತನು ರಾಮಾಗಮನದ ವಿಷಯದಲ್ಲಿ ಚಿಂತಾಕುಲನಾದದ್ದು—ಇವೇ ಮೊದಲಾದ ವಿಷಯಗಳು ಅಡಕವಾಗಿವೆ.

ವಿಭೀಷಣನ ಪಟ್ಟಾಭಿಷೇಕದ ವರ್ಣನೆಯು ಮೃದು ಶಬ್ದಗಳಿಂದ ಅತ್ಯಂತ ಲಲಿತವಾದದ್ದಿರುತ್ತದೆ, ನೋಡಿರಿ:—

ರಾವಣಾದ್ಯರ್ ಮಡಿಯೆ ಪೌರಜನಮೆಯ್ದೆ ಸಂ ।
ಭಾವಿಸಲ್ ಶರಣಂಗೆ ರಾಜ್ಯಪದಮಂ ಶಶಿ ವಿ ।
ಭಾವಸುಗಳಿರ್ಪನಕ ನೆಲೆಗೊಳಿಸಿ ಪಟ್ಟಾಭಿಷೇಕಮಂ ವಿರಚಿಸಿದನು ॥
ದೇವದುಂದುಭಿ ಮೊಱಗೆ ಸೋಗೆಗಣ್ಣಬಲೆಯರ್ ।
ಭಾವದಿಂ ನಲಿಯೆ ಪೂಮೞೆಗಱೆಯೆ ಬೞಕ ಸು ।
ಗ್ರೀವ ಜಾಂಬವ ಮುಖ್ಯರುಲಿದರೆಣೆಗಾಣೆವೀ ರಾಘವನ ವಚನಕೆಂದು ॥ [೩—೧೧

ಈ ಸಂಧಿಯಲ್ಲಿ ಕವಿಯು ಸಮುದ್ರವನ್ನು ವರ್ಣಿಸಿ ಅನೇಕ ಪದ್ಯಗಳನ್ನು ರಚಿಸಿದ್ದಾನೆ. ಇದು ಉಡುಪಿಯಲ್ಲಿ ತಾನು ಬಾಲ್ಯದಿಂದಲೂ ನೋಡುತ್ತಿದ್ದ ಪಶ್ಚಿಮ ಸಮುದ್ರದ ವರ್ಣನೆಯಲ್ಲದೆ ಬೇರೆಯಲ್ಲ—

ಭವನಂತೆ ಗಿರಿಸುತಾನ್ವಿತನೆಂದೆನಿಸಿ ಮನೋ ।
ಭವನಂತೆ ಮಕರ ಕೇತನನಾಗಿ ಕಮಲ ಸಂ ।
ಭವನಂತೆವೋಲ್ ಸರಸ್ವತಿಯರಸನೆಂಬ ಪೆಸರಂ ಪಡೆದು ಲೋಕಮಱೆಯೆ ॥
ಭವನಲ್ಲ ಮೇಣ್ ಮೆಯ್ಯೊಳೊಪ್ಪಿರ್ದುಮಾತ್ಮ ಸಂ ।
ಭವನಲ್ಲ ಲಾವಣ್ಯ ಲೀಲೆಯಿಂದೆಸೆದಬ್ಜ ।
ಭವನಲ್ಲ ಸಕಲ ಭುವನಾಶ್ರಯಂ ತಾನೆನಿಸುತರ್ಣವಂ ಕಣ್ಗೊಳಿಪುದು ॥ [೩—೨೭

ಈ ಪದ್ಯದಲ್ಲಿ ವಿರೋಧಾಭಾಸಾಲಂಕಾರವು ಮನೋವೇಧಕವಾಗಿ ವರ್ಣಿತವಾಗಿದೆ. ಮುಂದಣ ಪದ್ಯದಲ್ಲಿ ಶರಧಿಗೂ ಭವ ಶರಧಿಗೂ ಸಾಮ್ಯದೋರಿ ವರ್ಣಿಸಿರುವುದು ಚಿತ್ತಾಕರ್ಷಕವಾಗಿದೆ.—

ಅಡಿಗಡಿಗೆ ಬರ್ಪ ಬಲ್ದೆರೆಗಳೇ ರೋಗಂಗ ।
ಳೊಡನೇೞ್ವ ಕಲ್ಲೋಲ ಮಾಲೆಯೆ ಬೆದರ್ಕೆ ಸಂ ।
ಗಡಿಸಿರ್ಪ ಸುೞಗಳೇ ರಾಗಂಗಳೇಱೆೞಯೆ ಪಿರಿತನಂ ಬಡತನ ವಲಂ ॥
ಬಡಬಾನಲಂ ಚಿಂತೆ ದುಃಖಮೆ ಪೊನಲ್ ಬಾೞ್ಕೆ ।
ಗಡ ಗುಳ್ಳೆ ಬೆಳ್ನೊರೆಯೆ ಸಂತಸಂ ಸುಖಮೆ ಮೇಲ್ ।
ಸಿಡಿವ ಸೀರ್ಪನಿಯೆನಲ್ ಶರಧಿ ಭವ ಶರಧಿಯಂ ಪೋಲ್ತೆಸೆದುದಚ್ಚರಿಯೆನೆ ॥ [೩—೨೮

ಶ್ರೀ ರಾಮಚಂದ್ರನು ಜಟಾಯುವಿಗೂ ರಾವಣನಿಗೂ ಯುದ್ಧ ನಡೆದಿದ್ದ ಸ್ಥಳವನ್ನು ತೋರಿಸಲು, ಆಗ ಆ ಸ್ಥಳವನ್ನು ನೋಡಿದ ಕೂಡಲೆ ಸೀತೆಯ ಸ್ಥಿತಿಯು ಹೇಗಾಯಿತೆಂಬುದನ್ನು ಕವಿಯು ಮನೋರಂಜಕವಾಗಿ ವರ್ಣಿಸಿದ್ದಾನೆ.—

ಕಂದೆ ಮೊಗಸಿರಿಯೆಸಟ್ಗಿಗ್ಗಣ್ಣೊಸಱೆ ಮೈ ಬಣ್ಣ ।
ಗುಂದೆ ಬೆಮರುಣ್ಮೆ ಬಿಸುಸುಯ್ಲೆರ್ದು ಮೂಗರಳೆ ।
ಚೆಂದುಟಿಯೊಳಿಂಪಡಗೆ ಪೇೞ್ದಳಿನಿಯಂಗೆ ನಿಟ್ಟುಸಿರಿಂ ಸರೋಜಾನನೆ ॥ [೩—೩೯

ವರ್ಮದಿಂ ಖಳನನಡ್ಡೈಸಲ್ ಜಟಾಯು ನಿಜ ।
ಮರ್ಮಮಂ ಪೇೞ್ದುೞಿದನೆನಲೆತ್ತಲೆಡೆ ಸತ್ಯ ।
ಧರ್ಮಕಿನ್ನಕಟಕಟ ಖಳರಂತರಂಗಮಂ ಬಲ್ಲರಾರಿಳೆಯೊಳಿನ್ನ ॥
ಕರ್ಮಪಾಕದೊಳಸುರನುಯ್ದೊಡಂ ಕಾವೆನೆಂ ।
ದೊರ್ಮನದೊಳೊದವಿದಾಪದ್ಬಾಂಧವಂಗೆ ಸಾ ।
ಸಿರ್ಮೆ ನೆನೆ ನೆನೆದೊಡಂ ತೀರದಹಹಾ ಪರಹಿತೇಚ್ಛಕರ ಜಸಮದೆಂತೊ ॥ [೩—೪೦

ಪ್ರತಿಭಾ ಸಂಪನ್ನರು ಯಾವ ಗೃಹದಲ್ಲಿ, ಯಾವ ಸಮಾಜದಲ್ಲಿ, ಯಾವ ರಾಷ್ಟ್ರದಲ್ಲಿ ಇರುತ್ತಾರೆಯೋ, ಆ ಗೃಹವು ಗೋಕುಲದಂತೆಯೂ, ಆ ಸಮಾಜವು ಪರಮೋನ್ನತ ಸ್ಥಿತಿಯಲ್ಲಿಯೂ, ಆ ರಾಷ್ಟ್ರವು ಅತ್ಯಂತ ಉತ್ಕರ್ಷ ಸ್ಥಿತಿಯಲ್ಲಿಯೂ ಇರುತ್ತವೆ. ಆದರೆ ಅಂತಹ ಪ್ರತಿಭಾ ಸಂಪನ್ನರು ಕೆಲವು ವೇಳೆ ಇದ್ದು ಒಮ್ಮೆಲೇ ಆಯಾ ಸ್ಥಾನಗಳನ್ನು ತ್ಯಜಿಸಿದನಂತರ ಅವುಗಳ ಸ್ಥಿತಿಯು ಹೇಗಾಗುತ್ತದೆಂಬುದನ್ನು ಕವಿಯು ಪಂಚವಟಿಯ ವರ್ಣನೆಯ ಮುಂದಣ ಪದ್ಯದಲ್ಲಿ ತೋರಿಸಿರುತ್ತಾನೆ:—

ಅರಗಿಳಿಯನುಳಿದ ಪಂಜರದಂತೆ ಜೀವನಂ ।
ತೊೞಲ್ದ ತನುವಂತೆ ಭಗಣೇಶನಡಸಿರ್ದ ಕಾ ।
ರಿರುಳಿನಾಗಸದಂತೆ ತೋರ್ಪುದೆಲೆವನೆಯಂದಿನೆಡೆಯ ನೋಡಬ್ಜಾನನೆ ॥
ಪರೆದು ಕೀೞ್ಮೊಗಗೊಂಡು ಮಾಧವೀ ಲತೆಯೆ ಮಾ ।
ಮರನೊಳೊಪ್ಪಂ ಬಿಟ್ಟುದಿತ್ತಿತ್ತ ಬಾಡಿದುದು ।
ಕುರುವಕಂ ನೋಡೆಂದು ತೋಱೆ ಬೞಿಕಾ ರಥಂ ಪರೆದುದುತ್ತರಕೆ ಜವದಿ ॥ [೩—೪೨

**ಪವನಜನ ವೇಗವರ್ಣನೆ.**—ಶ್ರೀರಾಮನು ತಾನು ಮರಳಿ ಬರುತ್ತಿರುವೆನೆಂಬ ವಾರ್ತೆಯನ್ನು ಹನುಮಂತನೊಡನೆ ಭರತನಿಗೆ ಹೇಳಿಕಳುಹಿಸಿದಾಗ, ಹನುಮಂತನು ಎಷ್ಟು ವೇಗದಿಂದ ಹೋದನೆಂಬುದನ್ನು ಕವಿಯು ಹೀಗೆ ವರ್ಣಿಸಿರುವನು:—

ಏನೆಂಬೆ ಪವನಜನ ವೇಗಮಂ ರಾಘವಂ ।
ತಾನೆ ಮುಂದಟ್ಟಿದಂ ಬೞಿಕಿದಿರ್ಗೊಂಡು ಸ ।
ನ್ಮಾನಿಸಲ್ಕೆಂದು ವನ ಗಿರಿ ನದಿ ನದಂಗಳಂ ಪೇೞ್ಕಳುಪುವನೊ ಹನುಮಂ ॥
ಆ ನರೇಂದ್ರನ ಕಾಣ್ಬ ತವಕದಿಂ ತಾವೆ ಮೇಣ್ ।
ಸಾನುರಾಗದೊಳೈದುವುವೊ ತಿಳಿಯದೆನುತಲನು ।
ಮಾನಗೊಳೆ ಸಹಚರಂ ಪವನನನಿಲಜನಚಲಮುಖ್ಯಮಂ ಕಳೆದೈದಿದಂ ॥ [೩—೪೪

ಸ್ವಾರ್ಥ ಪಿಶಾಚಿಯು ಒಮ್ಮೆ ಯಾವುದೇ ಒಂದು ವ್ಯಕ್ತಿಯನ್ನು ಹಿಡಿದುಕೊಂಡಿತೆಂದರೆ, ಆ ವ್ಯಕ್ತಿಯಿಂದ ಆ ವ್ಯಕ್ತಿಯ ಆಪ್ತೇಷ್ಟರಿಗೂ, ಸಮಾಜಕ್ಕೂ ರಾಷ್ಟ್ರಕ್ಕೂ ಸಹ ಎಷ್ಟು ಹಾನಿಯಾಗುತ್ತದೆಂಬುದು ಕೈಕೆಯ ಸ್ವಾರ್ಥದ ಇತಿಹಾಸವನ್ನು ಓದಿದಂತಹ ಪ್ರತಿಯೊಂದು ವ್ಯಕ್ತಿಗೂ ಗೊತ್ತಾಗುತ್ತದೆ. ಕೈಕೆಯ ಸ್ವಾರ್ಥದಿಂದ ಎಷ್ಟು ಹಾನಿಯಾಯಿತೆಂಬುದನ್ನು ತಿಳಿಸುವುದಕ್ಕಾಗಿ ಭರತನು ಹೀಗೆ ಹೇಳುತ್ತಾನೆ:—

ತಾತಗಱಿವಂ ತಂದೆನಗ್ರುಜನ ಪೊರಡಿಸಿದೆ।
ಮಾತೆಯರ ಮುಳಿಸಿಗೆಡೆಯಾದೆ ಮೇಣ್ ಬಂಧುಗಳ।
ಮಾತಿಗೊಳಗಾದೆ ಪರಿಜನಕೆ ಕೀೞಾದೆ ಪುರಜನರ ಬಿರುನುಡಿಗೆ ತಡೆದೆ॥
ಜಾತಿ ರಾಜರ ಪೞಿವನೊಳಕೊಂಡೆ ನಾನೀ ಧ।
ರಾತಳವನಖ್ಯಾತಿಯಿಂ ಮಲಿನಗೆಯ್ದೆನೀ।
ಪಾತಕಂ ಪೋಪುದೆಂತೆಂತಗ್ರಭವನ ಪದ ಕಮಲ ದರ್ಶನಮುಪ್ಪುದೊ॥ [೩–೫೦

ಕೋಮಲಾಂಗಿಯಾದ ಸೀತೆಯು ಅರಮನೆಯ ಸೌಖ್ಯಗಳನ್ನು ತೊರೆದು ವನವಾಸದ ಕಷ್ಟವನ್ನನುಭವಿಸುತಿದ್ದುದನ್ನು ತಿಳಿದು ಭರತನು ದುಃಖಿಸುತ್ತಿದ್ದರೂ, ಪತಿ ಭಕ್ತಿ ರಸದಿಂದ ತುಂಬಿದ ಹೃದಯವುಳ್ಳವಳಾದ ಸೀತೆಯು ಇದನ್ನು ಕಷ್ಟವಾಗೆಣಿಸದೆ ವರ್ತಿಸಿದುದರಿಂದ ಆಕೆಯ ಕೀರ್ತಿಯು ಅಜರಾಮರವಾಗಿ ಉಳಿಯಲು ಕಾರಣವಾಗಿದೆ. ಇಂತಹ ಪತಿವ್ರತಾ ಶಿರೋಮಣಿಗಳಾದ ಕನ್ಯಾರತ್ನಗಳನ್ನು ಪೆತ್ತ ಭಾರತ ಮಾತೆಯೇ ಧನ್ಯಳು :—

ಇಷ್ಟದಿಂ ಕೆಳದಿಯರೊಳಾಡುತಂತಃಪುರದಿ।
ಮೃಷ್ಟಾನ್ನಮಂ ಸವಿದು ರನ್ನದೊಡವೊಳ್ಪುಡೆಯ।
ತುಷ್ಟಿಯಿಂ ಗಾಡಿ ಮಿಗೆ ಪಟ್ಟು ಮೃದು ತಲ್ಪದೊಳ್ ಶುಕನ ನುಡಿಗೇಳ್ದ್ವಿ ಸುಖಮಂ॥
ಕಷ್ಟದಿಂ ವನದೊಳೊರ್ವಳೆ ತಿರಿದು ಬೞಲುತ ನಿ।
ಕೃಷ್ಟದುಣಿಸುಂಡಱಿಯೊಳೊರಗಿ ನಾರುಡಿಗೆಯಿಂ।
ದುಷ್ಟ ಕೇಸರಿಯ ದನಿಗೇಳ್ವ ದುಃಖದಿ ತೊೞಲ್ವ ಸೀತೆಗೆ ಮನಂ ಕರಗದೇ॥ [೩–೫೨

"ಶ್ರೀಹರೀ! ನಿನ್ನ ಮಾಯೆಯು ತಿಳಿಯದಯ್ಯಾ!" ಎಂದು ಹೇಳುವ ಪುರಂದರ ದಾಸರ ಉಕ್ತಿಯು ಅಕ್ಷರಶಃ ನಿಜವಿರುತ್ತದೆ. ಏಕೆಂದರೆ, ಸಂರಕ್ಷಣೆ ಮಾಡುವುದು ಆತನ ಮನಸ್ಸಿಗೆ ಬಂದರೆ ಯಾವ ರೀತಿ ಸಂರಕ್ಷಿಸುತ್ತಾನೆಯೋ ಅದು ಯಾರಿಗೂ ತಿಳಿಯುವುದಿಲ್ಲ; ಸಂಹಾರ ಮಾಡುವುದು ಮನಸ್ಸಿನಲ್ಲಿ ಬಂದರೆ ಯಾವ ರೀತಿಯಿಂದ ಸಂಹಾರ ಮಾಡುತ್ತಾನೋ ಅದೂ ಯಾರಿಗೂ ತಿಳಿಯುವುದಿಲ್ಲ. ಅದರಂತೆಯೇ ಭರತನನ್ನು ಸಂರಕ್ಷಿಸಬೇಕೆಂಬ ವಿಚಾರವು ಜಗದ್ರಕ್ಷಕನಲ್ಲಿ ಬರಲು —

ಚಿತ್ತದೊಳೆ ಶ್ರೀರಾಮ ಮೂರ್ತಿಯಂ ಕೀರ್ತಿಯಂ।
ಪೊತ್ತಿಂತು ಜಿಹ್ವಾಗ್ರದೊಳ್ ಭರತನನವರತ।
ಸುತ್ತಿ ಬಲವರುತಿರಲ್ಕನಲನಂದನಿಲನಂದನನಿತ್ತ ಪವನಾಧ್ವದಿ॥
ಒತ್ತುಗೊಂಡೈತರಲ್ ಪೊಗೆಯ ಕುಱುಪೊಗೆಯುಲುರು।
ಪೆತ್ತಣತ್ತಂ ಧಾತ್ರಿಗಿಳಿದು ಜನರುೞಿದು ಮನ।
ಮಿತ್ತು ಕಾಣುತ್ತಿರಲ್ ಸೈಪಿಡಿದು ಕೈಪಿಡಿದು ಕಟ್ಟುಸಿರೊಳವನೆಂದನು॥ [೩–೬೩

ದಕ್ಷನಾದೊಡೆ ಸಾಹಸಂದೋರ್ಪೆ ದಿಟವೈ ಪ್ರ।
ದಕ್ಷಿಣೆಯ ಗೈವೆ ಚಲಮಂ ಪಿಡಿದು ಮೇಣಾಶು।
ಶುಶ್ರೂಣೆಯನಹಹ ನಿನ್ನವೊಲಾರುಮಂ ಕಂಡುದಿಲ್ಲ ಮೇದಿನಿಯೊಳೆತ್ತಂ॥

ದಕ್ಷಿಣಾಶೆಯದತ್ತಣಿಂ ಬರ್ಪನೆಲೆ ದೀನ ।
ರಕ್ಷಕಂ ಸತಿ ಸುಮಿತ್ರಾತ್ಮಜರ್ ಸಹಿತ ನೋ ।
ಡೀಕ್ಷಣಂ ಬರ್ದೇನಮರ್ದೆ ತಡೆ ತಡೆ ಬಿಡು ಬಿಡೀ ಮರುಳ್ತನವನಕಟ ॥  [೩—೬೪

**ನಾಲ್ಕನೆಯ ಸಂಧಿಯಲ್ಲಿ** (೧) ಶ್ರೀರಾಮನ ಆಗಮನ, (೨) ಸ್ತ್ರೀಯರೂ ಬಾಲಕರೂ ಪುರಜನರೂ ಶ್ರೀರಾಮನ ದರ್ಶನಕ್ಕಾಗಿ ಆತುರರಾದುದು, (೩) ಶ್ರೀರಾಮನು ಜಗದೀಶನೆಂದು ಸಿದ್ಧಾಂತಗೊಳಿಸಿದುದು, (೪) ಸೀತೆಯು ಭರತನಿಗೆ ಮಾಡಿದ ಉಪದೇಶ, (೫) ಅಯೋಧ್ಯಾ ಪುರವನ್ನು ಶೃಂಗರಿಸಿದ ವರ್ಣನೆ, (೬) ಶ್ರೀರಾಮನು ಅಯೋಧ್ಯಾ ಪುರ ಪ್ರವೇಶ ಮಾಡಿದ ವರ್ಣನೆ—ಇವೇ ಮೊದಲಾದ ವಿಷಯಗಳು ಅಡಕವಾಗಿವೆ.

(೧) ಶ್ರೀರಾಮನ ಆಗಮನಕ್ಕೂ ಸೂರ್ಯೋದಯಕ್ಕೂ ಕವಿಯು ಹೋಲಿಸಿದ್ದಾನೆ. ಏಕೆಂದರೆ, ಮಹಾತ್ಮರ ಆಗಮನದಿಂದ, ಅಥವಾ ಜನ್ಮ ಧಾರಣದಿಂದ, ಜನರಲ್ಲಿದ್ದ ಅಜ್ಞಾನಾಂಧಕಾರವು ತೊಲಗಿಹೋಗುತ್ತದೆ, ಜನರಲ್ಲಿಯ ಆನಂದವು ಉಕ್ಕೇರುತ್ತದೆ. ಆದುದರಿಂದ ಕವಿಯು—

. . . . . .ಪರ್ಬಿದುದು ರಾಘವನ ವಾರ್ತೆ ಪ ।
ತ್ತನದೊಳೆಲ್ಲೆಲ್ಲಿಯುಂ ಕತ್ತುರಿಯ ಪೊಱಿ ಮಾರು ।
ತನ ಕರದೊಳಿರ್ದ್ದಂತೆ ಮುನ್ನಗಲ್ದಿನನ ಬರವಂ ತೋರ್ಪರುಣನ ನೋಡೆ ॥
ಮನವೊಲಿವ ಬೆಳ್ದಾವರೆಗಳಂತೆ. . . . . . . .।
. . . . . . . . . . . . . . . . . . . . . .।
. . . . . . . . . . . . . . . . . . . . . . . . . . . . . . . .॥  [೪—೭

ಎಂದು ಹೇಳಿದ್ದಾನೆ.

(೨) ಸ್ತ್ರೀಯರು ಶ್ರೀರಾಮನನ್ನು ನೋಡುವ ಸಲುವಾಗಿ ಲಗುಬಗೆಯಿಂದ ಹೋಗಲು, ಅವರ ಅವಯವಗಳಲ್ಲಿ ಹೆಚ್ಚುಕಡಿಮೆಯಾದುದು, ಅವರ ಹಾವ ಭಾವಗಳು ಮೊದಲಾದುವನ್ನು ಕವಿಯು ಹೀಗೆ ವರ್ಣಿಸುತ್ತಾನೆ:—

ತೆಳ್ಗದಪ ದೆಸೆಯ ನೇರ್ಪಣೆ ಪೊಳೆಯೆ ಮಿಸುಗೆ ಕೌಂ ।
ಕುಟ್ಗಿಳುಂ ನಸು ಬಳ್ಕೆ ಜೋಲ್ದಾಡೆ ಮುಂಗುರುಳಿ ।
ಸಳ್ಗಣ್ಣಿಮಿರ್ದೊಪ್ಪೆ ಕನ್ನದೊಡವಲುಗೆ ಕಂಕಣ ನಿಸ್ವನಂ ಪೊಣ್ಮಿರೆ ॥
ಬೆಳ್ಗೊಡ ಮೊಲೆಗಳದಿರೆ ಚದುರೆಯೊರ್ವಳ್ ನವಿರ ।
ನೊಳ್ಗಿಯ್ಯೆ ಜಂತವಣಿಗೆಯಿನೆತ್ತಿ ಬಾಚಿ ಪೊಱಿ ।
ಟಳ್ಗದಗದಿಸೆ ನಡು ಪೊಡರೆ ಜಘನಮುಳ್ಕಿ ಮೆಲ್ಲಡಿ ನಡುಗೆ ಕಡಗಮುಲಿಯೆ ॥  [೪—೧೦

ತನ್ನ ಹೆಂಡತಿಯಾದ ಮನೋರಮೆಯು ಹೆಣಲು ಹಾಕಿಕೊಳ್ಳುತ್ತ ಕುಳಿತಿರುವ ವೇಳೆಯಲ್ಲಿ, ಕವಿಯು ಆಕೆಯನ್ನು ಕರೆಯಲು, ಆಕೆಯು ಅವಸರವಸರದಿಂದ ಬರುತ್ತಿರುವಲ್ಲಿ, ಒಯ್ಯಾರದಿಂದ ಬಂದಂತೆ ಕವಿಗೆ ಭಾಸವಾಗಿ, ಅದನ್ನೇ ಇಲ್ಲಿ

ವರ್ಣಿಸಿರಬೇಕೆಂದು ತರ್ಕಿಸಬಹುದಾಗಿದೆ. ಮತ್ತೊಂದು ವೇಳೆ, ಮನೋರಮೆಯು, ಮಲಗಿರುವ ತನ್ನ ಕೂಸನ್ನು ಮರೆತುದನ್ನೂ, ಮೊಸರಿನ ಗಡಿಗೆಯನ್ನು ಒಯ್ದು ಬೆಂಕಿಯ ಕುಂಡದಲ್ಲಿ ಇಟ್ಟುದನ್ನೂ ಕಂಡು, ಆಕೆಯನ್ನು ಹಾಸ್ಯ ಮಾಡುವ ಸಲುವಾಗಿ, ಕೆಳಗೆ ಕೊಡುವ ಕವಿತೆಯನ್ನು ಬರೆದಿರಬಹುದೋ ಏನೋ! ಏನೇ ಇರಲಿ, ಈ ಪದ್ಯವು ಹಾಸ್ಯ ರಸದಿಂದ ತುಂಬಿ ತುಳುಕುತ್ತಿದೆ. ಇದರಿಂದ, ಕವಿಯು ಸಹಜವಾಗಿ ವಿನೋದ ಸ್ವಭಾವದವನೆಂದು ವ್ಯಕ್ತವಾಗುತ್ತದೆ.—

ಪಸುರೆಲೆಯು ಚಿಲ್ಲವತ್ತಂಗೆತ್ತು ಸೂಡಿ ಮುಡಿ ।
ಗಸವಸದೆ ಕಪ್ಪೆಂದು ಕತ್ತುರಿಯ ಕಣ್ಗಿಕ್ಕಿ ।
ಪೊಸ ಕುಂಕುಮಂ ಬಗೆದು ಪಣೆಗಿಟ್ಟು ಚಂದ್ರಮಂ ಕಾಂಚಿಯಂ ಗಳಕಮರ್ಚಿ ॥
ಒಸೆದಡ್ಡಿಗೆಯ ನಡುವಿಗಳವಡಿಸಿ ಪಾಲೆಂದು ।
ಬಿಸಗಾವಿಗೆಯೊಳಿಟ್ಟು ಮಥಿತಮಂ ಪವಡಿಸಿದ ।
ಪಸುಗೂಸನುೞಿದು ಪಡಿಗಟ್ಟಿ ನಡೆದಳ್ ಕಾಂಬ ತವಕದಿಂ ಬರ್ಪವರನು ॥ [೪—೧೩

ಚಿಕ್ಕ ಚಿಕ್ಕ ಬಾಲಕರು ಶ್ರೀರಾಮನನ್ನು ನೋಡುವ ಸಲುವಾಗಿ ಎಷ್ಟು ಆತುರರಾಗಿದ್ದರೆಂಬುದನ್ನು ಕವಿಯು ಮುಂದಣ ಪದ್ಯದಲ್ಲಿ ಹೃದಯಂಗಮವಾಗಿ ವರ್ಣಿಸಿದ್ದಾನೆ.—

ಮನನಮಂ ಮಾಣ್ದು ಪುಸ್ತಕವನೊತ್ತಿಟ್ಟು ಜಾ ।
ಣ್ಮನದಾಟ ಪಾಡು ಪಂತಂಗಳಂ ಮಱೆದು ಮೇ ।
ಲಿನವಸರದೊಳಿಗಂದೊಱೆದು ತುಱುವಿಂಡನೊತ್ತಟ್ಟಿನೊಳ್ ಬಿಟ್ಟು ಜವದಿ ॥
ಅನಘರತಿವೀರರಪ್ರತಿಮ ಕುಶಲರ್ ದೀನ ।
ಮನರಗ್ರಜನ್ಮ ಬಾಹುಜ ವೈಶ್ಯ ಪಾದಜರ ।
ತನಯರೈತಂದರಾಮ್ನಾಯಗೋಚರನನಧಿರಾಜನಂ ನೋೞ್ಪೆವೆಂದು [೪—೧೪

(೩) ತರುಣಿಯೊಬ್ಬಳು ಶ್ರೀ ರಾಮಚಂದ್ರನ ವಿಚಾರವೇನೆಂದು ಕೇಳಲು ಮತ್ತೊರ್ವಳು ಈ ರೀತಿಯಾಗಿ ಉತ್ತರ ಕೊಡುವಳು :—

ನರನಂತೆ ತೋರ್ದು ದೇವರ ದೇವನೆನಿಸಿ ಸಂ ।
ಗರದಿ ರಕ್ಕಸರನಿಕ್ಕುವನಂತೆ ಕಣ್ಗೆ ಸುಂ ।
ದರನೆಣಿಸೆ ಕಿಱಿಯನೋಪಳ್ಗೆ ತರುಣಂ ಜ್ಞಾನ ವೃದ್ಧನತಿಶೂರನಿಳೆಗೆ ॥
ಧೊರೆಯಧಿಕ ಧಾರ್ಮಿಕಂ ಪಗೆಗಳ್ಗೆ ಪಗೆವನೆಲೆ ।
ತರುಣಿ ತನ್ನವರೊಳುೞಿ ಸೊಕ್ಕಿಗಂ ಸೊಕ್ಕಿಗರಿ ।
ಗಱಿಯೆ ಸದ್ಗುಣ ಮಣಿಯ ಬಣ್ಣಿಸಲ್ಕೆಂದು ಮಾರ್ನುಡಿದಳವಳೇಂ ಪ್ರೌಢೆಯೋ ॥ [೪—೧೮

"ಪಾವನಕೆ ಪಾವನಂ ಮಂಗಳಕೆ ಮಂಗಳಂ" ಎಂದು ಹೇಳಿದ ಜೈಮಿನಿಕಾರನ ಅಭಿಪ್ರಾಯವೂ, "ಚೆಲುವರ ಚೆಲ್ವ ಚೆನ್ನಿಗರ ಚೆನ್ನ ಸುವೀರರ ವೀರ" ಎಂದು ಹಾಡಿದ ರತ್ನಾಕರನ ಪದ್ಯವೂ ಈ ಸಂದರ್ಭದಲ್ಲಿ ನೆನಪಿಗೆ ಬರುತ್ತದೆ. ತಾತ್ಪರ್ಯ

ವೇನೆಂದರೆ—ಈ ಗ್ರಂಥದಲ್ಲಿ, ಇನ್ನಿತರ ಗ್ರಂಥಗಳಲ್ಲಿ ಬಂದ ವಿಷಯವೆಲ್ಲವೂ ಸಾರ ರೂಪದಿಂದ ಬಂದೇ ಇರುತ್ತದೆ. ಹೀಗಾಗಿ, ಈ ಗ್ರಂಥದಲ್ಲಿಯ ವಿಷಯವು, "ಹಿಡಿದರೆ ಹಿಡಿ ತುಂಬ, ಬಿಟ್ಟರೆ ಜಗತ್ತಿನ ತುಂಬ" ಎಂಬಂತೆ ಇರುತ್ತದೆ. ಇಷ್ಟಿದ್ದರೂ, ವಜ್ರದ ಪೆಟ್ಟಿಗೆಯಲ್ಲಿ ಮುಚ್ಚಿಟ್ಟ ಬಂಗಾರದ ಗಟ್ಟಿಯಂತಿಲ್ಲ; ತಲೆ ಬಡಿದುಕೊಂಡು, ವಿಚಾರ ಮಾಡಿ ಬೇಸತ್ತು ತಿಳಿವಂತಹ ವಿಷಯಗಳಿಂದ ತುಂಬಿಲ್ಲ. "........ಮೃದು ಪದಂಗಳನಿಟ್ಟು ರುಜು ಮಾರ್ಗದಿಂ ಸಕಲರರಿವಂತೆ ವಿರಚಿ ........"ಸಿದ ಈ ಕಾವ್ಯವು ಮಾಧುರ್ಯದಿಂದ ಕೂಡಿದೆಯೆಂದು ಬೇರೆ ಹೇಳಬೇಕೆ!

ದೈವವು ವಿಪರೀತವಾಯಿತೆಂದರೆ ಎಂಥವನ ಸ್ಥಿತಿಯಾದರೂ ವಿಪರೀತವಾಗದೆ ಇರದು. ಇದಕ್ಕೆ ಶ್ರೀರಾಮನೇ ಸಾಕ್ಷೀಭೂತನಾಗಿದ್ದಾನೆ. ಮುಂದಣ ಪದ್ಯ ದಲ್ಲಿರುವ ವ್ಯಂಗ್ಯಾರ್ಥವು ಬಹಳ ಸುಂದರವಾಗಿದೆ:—

**ಮಡದಿ ಮೆದುಗೈಯೊತ್ತುವಡಿ ನಡೆಯೆ ಕಲ್ಲೊತ್ತಿ ।**
**ದೆಡೆ ಕಾಡ ಸುತ್ತೆ ಪೂದೋಂಟಮಂ ತಿರಿವ ಕಾ ।**
**ಉಡೆನಾರನೊಳ್ಪಟ್ಟೆ ಬಿಗಿವ ನಡು ಪಟ್ಟಗೋಲೆಸೆವ ಕೈಯ್ಯೂಱಿಗೋಲಂ ॥**
**ಪಿಡಿಯೆ ತಿರೆ ಸಿರಿಪೊಱುವ ತೋಳ್ಮಡು ಬಗಲ್ಗಂಟಿ ।**
**ಗೆಡೆಯಾಗಲಿಂತು ಪೊಸ ಸೊಗವ ನೀನುಂಡುದೇ ।**
**ಕೊಡೆಯ ನಿನ್ನನುಭವಕೆ......ಮೇದಿನಿಯ.....ರಾಘವ ॥**　　[೪—೨೯

ಎಂದರೆ, ಮಡದಿಯ ಮೃದುವಾದ ಕೈಗಳಿಂದ ಒತ್ತಿಸಿಕೊಳ್ಳುವ ಕಾಲುಳ್ಳವನು ಈಗ ಕಲ್ಲು ಮುಳ್ಳುಗಳುಳ್ಳ ವನ ಪ್ರದೇಶಗಳನ್ನು ಸಂಚರಿಸಿ ಬರಬೇಕಾಯಿತು; ರಾಜ ದಂಡವನ್ನು ಹಿಡಿವ ಕೈಯಲ್ಲಿ ಊರುಗೋಲನ್ನು ಹಿಡಿಯಬೇಕಾಯಿತು. ಇಂತಹ ವಿಪತ್ತುಗಳನ್ನು ಲೋಕ ನಾಯಕನಾದ ಶ್ರೀರಾಮನು ಅನುಭವಿಸಬೇಕಾ ಯಿತು. ಈ ಜಗತ್ತಿನಲ್ಲಿ ಆಗಿಹೋದ ಪ್ರತಿ ಮನುಷ್ಯನೂ—ಮಹಾತ್ಮನೇ ಇರಲಿ, ಸಾಮಾನ್ಯನೇ ಇರಲಿ—ಒಂದೇ ಸಮನಾಗಿ ಸೌಖ್ಯದಲ್ಲಿಯೇ ಆಗಲಿ ಕಷ್ಟದಲ್ಲಿಯೇ ಆಗಲಿ ಕಾಲ ಕಳೆಯಲು ಶಕ್ಯವೇ ಇಲ್ಲ.

(೪) ಅತ್ತಿಗೆಯೆಂದರೆ ಹೆತ್ತಾಕೆಯ ಸಮಾನವೆಂದು ತಿಳಿದ ಭರತನು ವನವಾಸ ಕಷ್ಟವನ್ನು ಭೋಗಿಸಿ ಬಂದ ಸೀತೆಯನ್ನು ಕುರಿತು ಪರಿಪರಿಯಾಗಿ ಕ್ಷಮೆ ಬೇಡಿ ಕೊಳ್ಳಲು, ಶ್ರೀ ಕೃಷ್ಣನು ಅರ್ಜುನನಿಗೆ—

**ದೇಹಿನೋಽಸ್ಮಿನ್ಯಥಾ ದೇಹೇ ಕೌಮಾರಂ ಯೌವನಂ ಜರಾ ।**
**ತಥಾ ದೇಹಾಂತರ ಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥**
[ಗೀ. ಭಾ. ಟಿ., ಅ. ೧೩

**ಮಾತ್ರಾ ಸ್ಪರ್ಶಾಸ್ತು ಕೌಂತೇಯ ಶೀತೋಷ್ಣ ಸುಖ ದುಃಖದಾಃ ।**
**ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ ॥**
[ಗೀ. ಭಾ. ಟಿ. ಅ. ೧೪

ಎಂದರೆ, "ಇಂಥವನೊಬ್ಬನನ್ನು ನಾನು ಹೇಗೆ ಹೊಡೆಯಲಿ?" ಎಂಬುದೊಂದೇ ಅರ್ಜುನನ ಮನಸ್ಸಿನಲ್ಲಿಯ ಅಂಜಿಕೆ, ಅಥವಾ ಮೋಹವಾಗಿದ್ದಿತು. ಆ ಅಂಜಿಕೆಯನ್ನು ಹೋಗಲಾಡಿಸಬೇಕಾಗಿ, 'ಸಾಯುವುದೆಂದರೇನು? ಕೊಲ್ಲುವುದೆಂದರೇನು?' ಎಂಬ ವಿಚಾರವನ್ನು ಶ್ರೀ ಭಗವಂತನು ತತ್ತ್ವದೃಷ್ಟಿಯಿಂದ ಹೇಳುತ್ತಾನೆ (ಶ್ಲೋಕ ೧೧ ರಿಂದ ೩೦). ಮನುಷ್ಯನೆಂದರೆ, ದೇಹರೂಪಿಯಾದ ಸಾಮಾನ್ಯ ವಸ್ತುವಾಗಿರದೆ ಆತ್ಮ ಶರೀರಗಳ ಸಮುಚ್ಚಯವಾಗಿರುತ್ತಾನೆ. ಈ ಆತ್ಮ ಶರೀರಗಳಲ್ಲಿ, "ನಾನು" ಎಂಬ ಅಹಂಕಾರ ರೂಪದಿಂದ ವ್ಯಕ್ತನಾಗಿರುವ ಆತ್ಮನು ನಿತ್ಯನೂ ಅಮರನೂ ಆಗಿರುವನು. ಅವನು ಹಿಂದಕ್ಕೆ ಇದ್ದವನು, ಇಂದು ಇರುವವನು, ಮುಂದೆಯೂ ಇರತಕ್ಕವನು. ಅದಕ್ಕಾಗಿ, 'ಅವನು ಕೊಲ್ಲುತ್ತಾನೆ, ಸಾಯುತ್ತಾನೆ' ಎಂಬ ವ್ಯವಹೃತಿಯೇ ಅವನಿಗೆ ತಗಲುವುದಿಲ್ಲ. ಅವನ ವಿಷಯವಾಗಿ ಶೋಕಿಸುವುದೂ ಅವಶ್ಯವಿಲ್ಲ. ಇನ್ನುಳಿದುದು ದೇಹ. ಅದು ಹೇಳಿ ಕೇಳಿ ಅನಿತ್ಯವಾಗಿಯೂ ನಶ್ವರವಾಗಿಯೂ ಇದ್ದು ಇಂದಿಲ್ಲದಿದ್ದರೆ ನಾಳೆ, ನಾಳೆಯಿಲ್ಲದಿದ್ದರೆ ಇನ್ನು ನೂರು ವರುಷಕ್ಕಾದರೂ ನಷ್ಟವಾಗಿ ಹೋಗುವುದೆಂಬುದು ನಿಶ್ಚಯ. ಈ ದೇಹವು ಕಳಚಿ ಹೋದರೂ ಕರ್ಮಾನುರೂಪವಾಗಿ ಮತ್ತೊಂದು ದೇಹದ ಪ್ರಾಪ್ತಿಯಾಗದೆ ಇರದು; ಎಂದರೆ, ದೇಹದ ಚಿಂತೆಯಾದರೂ ಎಲ್ಲಿ? ಮಥಿತಾರ್ಥವೇನೆಂದರೆ, ಆತ್ಮ ಶರೀರಗಳೆರಡರ ವಿಚಾರ ಮಾಡಿದರೂ, ಮೃತನ ವಿಷಯವಾಗಿ ಶೋಕ ಮಾಡುವುದು ಹುಚ್ಚುತನವೆಂಬುದು ಸ್ಪಷ್ಟವಾಗುತ್ತದೆ. ಇದು ಹುಚ್ಚುತನವೆಂದು ಕಟ್ಟಿಕೊಂಡರೂ, ಈಗಿರುವ ದೇಹದ ನಾಶವಾಗುವಾಗ ಉಂಟಾಗುವ ಯಾತನೆಗಾದರೂ ಶೋಕ ಮಾಡುವುದು ಯುಕ್ತವಲ್ಲೆಂದು ತೋರಿಸಿಕೊಡುತ್ತಾನೆ. ಅಲ್ಲದೆ, ಯಾವ ಪುರುಷನು ಬ್ರಹ್ಮಾತ್ಮೈಕ್ಯ ಜ್ಞಾನದ ಯೋಗದಿಂದ ನಾಮ ರೂಪಾತ್ಮಕವಾದ ಜಗತ್ತು ಮಿಥ್ಯಾ ಎಂದು ತಿಳಿದಿಲ್ಲವೋ ಅವನು ಬಾಹ್ಯ ಪದಾರ್ಥದ, ಹಾಗೂ, ಇಂದ್ರಿಯಗಳ ಸಂಯೋಗದಿಂದುಂಟಾಗುವ ಶೀತೋಷ್ಣ ಸುಖ ದುಃಖಾದಿ ವಿಕಾರಗಳನ್ನು ಸತ್ಯವೆಂದು ತಿಳಿದು ಆ ವಿಕಾರಗಳು ಆತ್ಮನಿಗೆ ತಗಲುವುವೆಂದು ಗ್ರಹಿಸಿಕೊಳ್ಳುವನಾದುದರಿಂದ, ಅವನಿಗೆ ಅದರಿಂದ ದುಃಖದ ಪೀಡೆಯಾಗುತ್ತದೆ. ಆದರೆ, ಈ ವಿಕಾರಗಳೆಲ್ಲ ಪ್ರಕೃತಿ ಸಂಬಂಧವಾದುದರಿಂದ, ಆತ್ಮನು ಕರ್ತನೂ ಅಲಿಪ್ತನೂ ಎಂದು ಅರಿತವನಿಗೆ ಸುಖ ದುಃಖಗಳೆರಡೂ ಸಮಾನವೇ. ಇಂತಹ ಸಮ ಬುದ್ಧಿಯಿಂದ ನೀನು ಅವುಗಳನ್ನು ಸಹಿಸು..........

ತಾತ್ಪರ್ಯವೇನೆಂದರೆ, ಶೀತೋಷ್ಣ, ಸುಖ ದುಃಖಗಳೆಂಬ ಪದಗಳು ಉಪಲಕ್ಷಣಾತ್ಮಕವಿದ್ದು, ಅವುಗಳಲ್ಲಿ ರಾಗ ದ್ವೇಷ, ಸದಸತ್, ಮೃತ್ಯು ಅಮರತ್ವ ಮುಂತಾದ ಪರಸ್ಪರ ವಿರುದ್ಧವಾದ ದ್ವಂದ್ವಗಳ ಸಮಾವೇಶವಾಗುತ್ತದೆ. ಈ ದ್ವಂದ್ವಗಳು ಮಾಯಾ ಸೃಷ್ಟಿಯಲ್ಲಿರುವುವು. ನಿಜವಾದ ಮುಕ್ತಿಪದವು ನಾಸದೀಯ ಸೂಕ್ತದಲ್ಲಿ ವರ್ಣಿಸಿದ ಮೇರೆಗೆ, ಈ ದ್ವಂದ್ವಗಳಿಂದ ಅತೀತವಾಗಿರುವುದರಿಂದ, ಅನಿತ್ಯವಾದ ಮಾಯಾ ಸೃಷ್ಟಿಯಲ್ಲಿರುವ ಈ ದ್ವಂದ್ವಗಳನ್ನು ಸಮಾಧಾನದಿಂದ ಸಹಿಸಿಕೊಂಡು, ಇವುಗಳಿಂದ ಬುದ್ಧಿಯ ವಿಮೋಚನ ಮಾಡಿಕೊಂಡ ಹೊರತು, ಮುಕ್ತಿಯು

ಎಂದೂ ದೊರೆಯಲಾರದು ಎಂದು ಹೇಳಿರುವಂತೆ—ಲೋಕಮಾತೆಯಾದ ಸೀತೆಯು ಇದೇ ತತ್ತ್ವವನ್ನು ಭರತನಿಗೆ ಹೀಗೆ ಬೋಧಿಸುತ್ತಾಳೆ:—

ಬಸವಳಿದು ಮಱುಗದಿರ್ ನಿರ್ನೆರಂ ಭರತ ನೋ ।
ಯಿಸುವರಾರ್ ನೋವರಾರ್ ಬಗೆಯೆ ಮುಮ್ಮೈ ಮಾಟ ।
ಬೆಸುಗೆ ಗಡ ಸುಖದುಃಖಮಿರದೆ ಪಗಲಿರುಳಂತೆ ಸಹಜಮಿದು ಪುಟ್ಟಿದರ್ಗೆ ॥
ಬೆಸನಮಿಂತೆಮಗೆ ನಾಣ್ನುಡಿಗೆ ನಿನ್ನಿಂದೊದಗೆ ।
ನಸಿನಸಿನಗೆಮ್ಮತ್ರಣಿಂ ತೋಱಿ ಲೋಕದಾ ।
ಯಸಕೊರ್ವನೊರ್ವನಂ ದೂಱಿ ಮರುಳಾಗದೇಂ ಬಲ್ಲವರ್ಗೆಂದೊರೆದಳು ॥　　[೪—೩೫

ಇದರಿಂದ ಕವಿಯು ಗೀತಾರಹಸ್ಯವನ್ನು ಚೆನ್ನಾಗಿ ಅರಿತವನಾಗಿದ್ದನೆಂದೂ, 'ಭಗವದ್ಗೀತೆ'ಯನ್ನು ಈತನು ಕನ್ನಡದಲ್ಲಿ ಬರೆದನೆಂದು ಉಡುಪಿಯ ವಕೀಲರಾದ ಅಂಗಾರಸೆಟ್ಟರು ಹೇಳುತ್ತಿದ್ದುದು ನಿಶ್ಚಯವೆಂದೂ ನಂಬಲಿಕ್ಕೆ ಅಡ್ಡಿಯಿಲ್ಲ.

(೫) ರಾಮ ಲಕ್ಷ್ಮಣ ಭರತ ಶತ್ರುಘ್ನ—ಈ ನಾಲ್ವರೂ ಒಬ್ಬರೊಬ್ಬರ ಕೂಡ ಎಷ್ಟು ಪದ್ಧತಿಯಿಂದ ಲೋಕದ ರೀತಿ ನೀತಿಗಳನ್ನನುಸರಿಸಿ ನಡೆಯುತ್ತಿದ್ದರೆಂಬುದನ್ನು ಕವಿಯು ಸುಮನೋಹರವಾಗಿ ಹೇಳಿದ್ದಾನೆ. ಅದರಂತೆ ನಾವು ಆಚರಣೆಯಲ್ಲಿ ತರುತ್ತ ನಡೆದರೆ, ನಾವೂ ಲೋಕದಲ್ಲಿ ಸುಖಿಗಳಾಗಿ ಬಾಳುತ್ತೇವೆ; ನಮಗೆ ಪರಲೋಕ ಸಾಧನವೂ ಆಗುತ್ತದೆ:—

ಅಂತದಱಿಂನೊರ್ವನಗ್ರಜನೆನಿಸಿ ಪುಟ್ಟೆ ವಿಧಿ ।
ಯಿಂ ತನ್ನ ಪೊರ್ದುಗೆಯು ಹಂಗನುಱಿ ಸಲಿಸಿ ಬಗೆ ।
ಮುಂತರಿತು ಸಹಜರಂ ಪೊರೆವೊಡೆ ಗುಣಂ ಪೂರ್ವ ಸುಕೃತಿಗಲ್ಲದೆ ಬರ್ಪುದೇ ॥
ಎಂತೆಸಿಣೆ ಪೊರೆದೊಡಂ ದೂಱಿಂ ನೆರೆ ಪೊರೆಯೊಳು ಸ ।
ಮಂತವರ ಕೆಡಕು ನುಡಿಗಣ್ಣನೊಳ್ ಪೊಯ್ದಾಡು ।
ವಿಂತಹ ಸಹೋದರರ್ಗೇನೆಂಬೆ ವಂಶಕಂಟಕರಲ್ತೆ ಕೂಡಿ ಜನಿಸಿ ॥　　[೪—೪೩

ಮನೆಗೆಲಸಮಂ ತೊಱಿದು ಕಂಡಕಂಡೆಡೆ ತಿರಿದು ।
ದಿನಗಳೆದು ದುರ್ವ್ಯಸನದಿಂ ಪಿರಿಯ ಹೂಣೆಯಂ ।
ನೆನೆದು ಸರಿ ಹಸುಗೆಗುಱಿ ಪುರುಡಿ ಬೇಗುದಿಗುದಿದವನ ಸಿರಿಗೆ ಬಲ್ಮೆಯಿಂದಾ ॥
ತನ ತಪ್ಪ ಬಗೆಯೊಳಟ್ಟುಳಿಗೆಯ್ದು ಸಾರ್ದನ್ಯ ।
ರನೆ ನೆಚ್ಚಿ ಬಱಿದೆ ಪಗೆಗೊಂಡಣ್ಣನಂ ನೋಯಿ ।
ಪನುಜರ್ಗೆ ಗುರು ದೇವರೊಲ್ಮೆಯಪ್ಪುದೆ ತಪ್ಪದೆಂದೆಂದಿಗುಂ ನರಕವು ॥　　[೪—೪೪

ಪಿರಿಯನಂ ಪಿತನಂತೆ ಬಗೆದಕ್ಕಱಿಂ ಗುಣಂ ।
ಪೊರೆಯೆ ಭಯ ಭಕ್ತಿಯಿಂ ಸೇವಿಸುತೆ ವೇಳೆಯುಳ ।
ವಱಿತು ನುಡಿದುತ್ತರಕೆ ಮಾರ್ನುಡಿಯದೊಪ್ಪಿ ತಲೆವಾಗಿರ್ಪುದುಚಿತಮಂತು ॥

ಮಱಿದಾದೊಡಂ ಪುಸಿಯನುಸಿರದೊರ್ಕಟ್ಟಿನಿಂ ।
ಪರರಿಗೆಡೆಗೊಡದಿರ್ಪಿನಂ ಸೇರ್ದು ಕಣ್ಣೋಟ ।
ದಿರವಿನೋಲ್ ಪೊಂದಿರಲ್ಕವನೆ ಪಾವನನೇಕೆ ಪಲಬರೊರ್ವಂ ಸಾಲದೇ ॥　　　[೪—೪೫

(೬) ಶ್ರೀರಾಮನು ಸೀತೆಯನ್ನೊಡಗೊಂಡು ಬಂದ ಕೂಡಲೆ ಅವರನ್ನು ಸ್ವಾಗತ ಮಾಡಲಿಕ್ಕೆ ಪುರಜನರು ತಮ್ಮ ಪಟ್ಟಣವನ್ನು ಶೃಂಗರಿಸಿದ ರೀತಿಯನ್ನು ಕವಿಯು ಬಹಳ ರಮ್ಯವಾಗಿ ವರ್ಣಿಸಿದ್ದಾನೆ. ಈ ಸ್ಫೂರ್ತಿಯು ಕವಿಯಲ್ಲುಂಟಾಗಲಿಕ್ಕೆ ಒಂದು ಕಾರಣವಿದೆ: ಕವಿಯು ಬಹಳ ದಿನಗಳವರೆಗೆ ಉಡುಪಿಯಲ್ಲಿಯೇ ಇರುತ್ತಿದ್ದುದರಿಂದ ಪ್ರತಿ ಮೂರು ವರ್ಷಕ್ಕೊಮ್ಮೆ ಆಗುತ್ತಿದ್ದ ಶ್ರೀಕೃಷ್ಣನ ಉತ್ಸವವನ್ನು ಕಂಡು ಹೀಗೆ ವರ್ಣಿಸಿದ್ದಾನೆ. ಈ ವರ್ಣನೆಯು ವಿರೂಪಾಕ್ಷಕೃತ ಚೆನ್ನಬಸವ ಪುರಾಣದಲ್ಲಿಯ ಅರಮನೆಯ ವರ್ಣನೆಯನ್ನು ಬಹು ಮಟ್ಟಿಗೆ ಹೋಲುತ್ತದೆ. (ಪದ್ಯ ೪೯ರಿಂದ ೫೨ರವರೆಗೆ ಓದಿರಿ.)

ಈ ಕಾವ್ಯದಲ್ಲಿಯ ಯಾವ ಭಾಗವೂ ನೀರಸವಿಲ್ಲ. ಮುಂದೆ ಮುಂದೆ ಹೋದಂತೆ ನದಿಯ ಪ್ರವಾಹವು ವಿಸ್ತಾರವಾದ ಹಾಗೆ, ಕಾವ್ಯವು ಬಹಳ ರಸ ಭರಿತವಾಗುತ್ತ ನಡೆದಿದೆ. ಈ ರೀತಿಯಾಗಿ ಕವಿಯು ಕರ್ಣಾಟಕ ಸಾಹಿತ್ಯ ರೂಪ ಕ್ಷೇತ್ರದಲ್ಲಿ ತನ್ನ ಕಾವ್ಯ ರೂಪವಾದ ದ್ರಾಕ್ಷಿಯ ತೋಟವನ್ನೇ ನಿರ್ಮಾಣ ಮಾಡಿದ್ದಾನೆ.

ಶ್ರೀರಾಮನಿಗೆ ಮಾಡಿದ ಸ್ವಾಗತ ಸಮಾರಂಭದ ವರ್ಣನೆಯು ಕವಿಯ ಪ್ರತಿಭಾ ಶಕ್ತಿಯನ್ನು ಚೆನ್ನಾಗಿ ಹೊರಗೆಡವಿದೆ. ಈ ಭಾಗವನ್ನು ಓದಿದರೆ ರಸಿಕ ನಾದವನ ಹೃದಯಾರವಿಂದವು ವಿಕಸಿತವಾಗದೆ ಎಂದೂ ಇರದು; ಅರ್ಥಾತ್, ಪಂಡಿತರೂ ಪಾಮರರೂ ತಲೆದೂಗದೆ ಎಂದೂ ಇರಲಾರರು. ಆದರೆ ರಾಘವಾಂಕನು—

ಕವಿಯಧಿಕನಿರ್ದೊಡೇಂ ಕೇಳ್ವರಿಲ್ಲದೊಡೆ ಗಾ ।
ನ ವಿನೋದಿಯಿರ್ದೊಡೇಂ ಜಾಣರಿಲ್ಲದೊಡೆ ಜಾ ।
ತಿ ವಿದಗ್ಧೆಯಿರ್ದೊಡೇಂ ರಸಿಕರಿಲ್ಲದೊಡೆ ಪೊಸ ಪೂಮಾಲೆಯಿರ್ದೊಡೇನು ॥
ತವೆ ಮುಡಿವರಿಲ್ಲದೊಡೆ ನಾನಾ ಕಳಾ ಪ್ರೌಢ ।
ನಿವಹವಿರ್ದೇನಧಿಕ ದಾತರಿಲ್ಲದೊಡಿಂ ।
ತಿವನೈದೆ ಬಲ್ಲವರ ಪೂರ್ವಮೇಣುಳ್ಳೊಡವನೆ ದೇವನಲ್ಲದೆ ಮನುಜನೇ ॥
[ಹರಿಶ್ಚಂದ್ರ ಕಾವ್ಯ, ಸ್ಥಲ ೪—೧

ಎಂದು ಹೇಳಿರುವಂತೆ, ಓದುಗರೇ ಇಲ್ಲದಿದ್ದರೆ ಇಂತಹ ಸುಮನೋಹರ ಗ್ರಂಥಗಳನ್ನು ಬರೆದರೂ ಆಗುವುದೇನು?

(೭) ಶ್ರೀರಾಮನು ಅಯೋಧ್ಯಾ ಪುರವನ್ನು ಪ್ರವೇಶಿಸಿದಾಗ ಜನರಿಗೆ ಎಷ್ಟು ಆನಂದವಾಯಿತೆಂಬುದನ್ನು ಕವಿಯು ಬಹಳ ಸುಂದರವಾಗಿ ವರ್ಣಿಸಿದ್ದಾನೆ:—

ಪಡೆದನಂ ಕಂಡಂತೆ ಭರತನೊಂದೊರ್ಗೆ ಪೋ ।
ದೊಡೆಯನಂ ಕಂಡಂತೆ ನೀಱಿಯರ್ ದ್ವಿಜರಲ ।
ರ್ಪೊಡೆಯನಂ ಕಂಡಂತೆ ದಿಗ್ವಿಜಯಮೆಸಗಿ ಬರ್ಪರಸನಂ ಕಂಡಂತಿರೆ ॥

ನಡೆತರ್ಪ ಮಿಕ್ಕುೞಿದವರ್ ಕಂಡು ಸಂತಸದ ।
ಕಡಲೊಳೞ್ದಿರೆ ದೇವತತಿ ಪೊಗೞೆ ಗಾಡಿಯಿಂ ।
ದುಡುಪಪುರದೊಡೆಯ ಲಕ್ಷ್ಮೀಮನೋಹರನೊಡನೆ ನಿಜ ನಗರಿಯಂ ಪೊಕ್ಕನು ॥ [೪–೬೫

**ಐದನೆಯ ಸಂಧಿ**ಯಲ್ಲಿ (೧) ಕೌಸಲ್ಯೆಯ ಪುತ್ರವಾತ್ಸಲ್ಯ, (೨) ಶ್ರೀರಾಮನಲ್ಲಿದ್ದ ಸುಖದುಃಖದ ಸಮ ಭಾವನೆ, (೩) ಸುಮಿತ್ರೆಯಲ್ಲಿದ್ದ ನಿಷ್ಕಳಂಕ ಪುತ್ರಪ್ರೇಮ ಮತ್ತು ಸೀತೆಯ ಮೇಲಣ ಪ್ರೇಮ, (೪) ಸಂಕ್ಷಿಪ್ತ ರಾಮಾಯಣ, (೫) ಶ್ರೀರಾಮ ಪಟ್ಟಾಭಿಷೇಕ ವರ್ಣನೆ, (೬) ಮತ್ಸ್ಯಾವತಾರದಿಂದ ಕೃಷ್ಣಾವತಾರದ ವರೆಗಿನ ವರ್ಣನೆ, (೭) ಪಾರತಂತ್ರ್ಯದಿಂದುಂಟಾಗುವ ಕಷ್ಟ ಮತ್ತು ಸ್ವಾತಂತ್ರ್ಯದಿಂದುಂಟಾಗುವ ಸೌಖ್ಯ, (೮) ಶ್ರೀರಾಮನ ರಾಜ್ಯ ಪರಿಪಾಲನೆ—ಇವೇ ಮೊದಲಾದ ವಿಷಯಗಳು ಸಮಾವೇಶವಾಗಿವೆ.

(೧) ಹದಿನಾಲ್ಕು ವರ್ಷಗಳ ವರೆಗೆ ಶ್ರೀರಾಮನ ವಿಷಯವಾದ ಯಾವ ವೃತ್ತಾಂತವೂ ತಿಳಿಯದೆಹೋಗಲು ಕೌಸಲ್ಯೆಯು ಇನ್ನುಮೇಲೆ ತನ್ನ ಮಗನನ್ನು ಕಾಣುವುದಿಲ್ಲವೆಂದೇ ನೆನೆದು ಅತ್ಯಂತ ಭಯಗ್ರಸ್ತಳಾಗಿ —

.........................।
..........ಬರುತಿರ್ದನಾ ರಘು ।
ಪುಂಗವಂ ಸಕಲರೊಡನರಮನೆಗೆ ಬೞಿಕಿತ್ತಲಂಬೆ ಕೌಸಲ್ಯೆ ಸುತನಾ ॥
ಸಂಗತಿಯನಱಿಯದೆಣಿಕೆಯೊಳೇಗಳುಂ ಮನ ಕ ।
ರಂಗಿ ಪೂ ಮುಱಿದ ತಾವರೆವಳ್ಳಿವೋಲ್ ಬಾಡಿ ।
ತಂಗೆಯಂ ಬೈದು ವಿಧಿಯಂ ಜಱೆದು ಭೋಜನಂದೊಱೆದು ಮೈಮಱೆದು ಮೊರೆದು ॥ [೫–೧

ಈ ಪದ್ಯದ ೫ನೆಯ ಪಾದದಲ್ಲಿರುವ "ಪೂ ಮುಱಿದ ತಾವರೆವಳ್ಳಿವೋಲ್" ಎಂಬ ವಾಕ್ಯದಿಂದ, ಶ್ರೀರಾಮನು ಸೂರ್ಯಕುಲವೆಂಬ ಬಳ್ಳಿಗೆ ಪುಷ್ಪದಂತಿದ್ದನು ಎಂಬ ಅಭಿಪ್ರಾಯವಾಗುವುದು. ಇಷ್ಟೇಅಲ್ಲ, ಇಡೀ ಭರತಖಂಡವೆಂಬ ಪ್ರೇಮ ಲತೆಗೆ ಪುಷ್ಪದಂತಿದ್ದನು ಎಂದೂ ಭಾಸವಾಗುವುದು. ತಾಯಿಯೆಂಬ ಲತೆಗೂ ಪುತ್ರರೇ ಕುಸುಮಗಳಲ್ಲವೇ? ಆನಂದ ರೂಪವಾದ ಪುಷ್ಪವೇ ಇಲ್ಲದಂತಾದ ಬಳಿಕ, ಮಾತೃಹೃದಯ ರೂಪ ಲತೆಯು ಶೋಭಾರಹಿತವಾಗುವುದರಲ್ಲಿ ಏನಾಶ್ಚರ್ಯವಿದೆ? ಮತ್ತು—

ಪಿಂದೆ ಬಲ್ನೋಂಪೆಸಗಲಂತದಱಿನಾ ಮುದ್ದು ।
ಕಂದನಂ ಪಡೆದೆ ಗಡ ಮೈಯಿದರೊಳೇಂ ಪಾಪ ।
ಮಂ ದುಡಿದೆನೋ ಮಾಯವಾದನಣುಗಂ ಕೈಗಮರ್ದ ಮಣಿಯುಡುಗಿದಂತೆ ॥
ಎಂದಿಗೆ ಮುಗುೞ್ದಿನ್ನ ಕಣ್ಜಕ್ಕವಕ್ಕಿಯಾ ।
ನಂದಿಪುದೊ ರಾಮಚಂದ್ರನ ಕಂಡೆನುತ್ತಮೆಳೆ ।
ಗಂದಿ ಹಸು ಕಣ್ಮಱೆಯ ಕಱುವನಾರೈವಂತೆ ಹಂಬಲಿಸುತಿರ್ದಳಿಂತು ॥ [೫–೨

*ಈ ಪ್ರಕಾರ ಕೌಸಲ್ಯೆಯು ಪುತ್ರನಾದ ರಾಮನ ವಿಷಯವಾಗಿ ಚಿಂತಿಸಿ ಚಿಂತಿಸಿ ಅತ್ಯಂತ ಕೃಶಳಾಗಿಹೋಗಿದ್ದಳು. ಪುಟ್ಟಿದಂದಿನಿಂದಲೂ ಅನಂತವಾದ ಕಷ್ಟಗಳನ್ನನುಭವಿಸಿ, ಹೆರವರ ಮನೆಯಲ್ಲಿ ಕಾಲಿಟ್ಟು, ಸಂತತಿಯ ಉದ್ಧಾರವನ್ನೂ ತನ್ಮೂಲಕ ಜಗದುದ್ಧಾರವನ್ನೂ ಮಾಡಿ, ಅನೇಕ ಕಷ್ಟನಷ್ಟಗಳನ್ನು ಹೇಗಾದರೂ ನುಂಗಿ ಸಹನಶೀಲತೆಯ ಅಪೂರ್ವವಾದ ಆದರ್ಶವನ್ನು ಮುಂದೆ ಹಿಡಿದು, ಸ್ವಾರ್ಥತ್ಯಾಗದ ಪರಾಕಾಷ್ಠತೆಯನ್ನು ಸ್ತ್ರೀ ಜಾತಿಯು ಇಂದಿನ ವರೆಗೆ ಜಗತ್ತಿನ ಮುಂದೆ ಇಟ್ಟಿರುವುದು. ಅದನ್ನು ಜಗತ್ತು ಹೇಗೆ ಸ್ವೀಕರಿಸುವುದೋ! ಹೇಗೆ ಉಪಕೃತವಾಗುವುದೋ! ಎಂಬುದನ್ನು ಸಹೃದಯರು ತಮ್ಮ ಹೃದಯವನ್ನು ಕೇಳತಕ್ಕುದು. ಅದರಲ್ಲಿಯೂ ಮಾತೃಪ್ರೇಮವು ಪರಮ ಪವಿತ್ರತಮವಾದುದು. ಈ ಪ್ರಕಾರ ಕೌಸಲ್ಯೆಯು ರಾಮ ದರ್ಶನದ ವಿಷಯವಾಗಿ ನಿರಾಶಾಯುಕ್ತವಾದ ದುಃಖದಲ್ಲಿ ಮುಳುಗಿಹೋದ ಹೊತ್ತಿನಲ್ಲಿ, ರಾಮನ ಮಂತ್ರಿಯಾದ ಸುಮುಖನು ಬಂದು, "ಜಾನಕೀ ವಲ್ಲಭ. . . . . . . .ಸುಖದೊಳೈತಂದನನುಜಂ ಬೆರಸು ಸತಿ ಸಹಿತಮಿದೆಕೊ ನೋಡೇಳ್ವುದೆಂದು" ಎನ್ನಲು, ಆಕೆಯು ಮತ್ತಿಷ್ಟು ಆತುರಳಾಗಿ—

ನುಡಿಗಬಲೆ ತಾನೆದ್ದು ಬಯಕೆ ಪಿರಿದಾಗಲಡಿ ।
ಗಡಿಗವನೊಳಾರೈದು ವಾರ್ತೆಯಂ ರೋಮಾಂಚ ।
ಮೊಡನೆ ತಲೆದೋಱಿ ಮೈಯೇಱಿ ಸಂತಸದ ಕಂಬನಿ ಪೇಱಿ ಮೋಱೆಯರಳೆ ॥
ಕಡೆವಗಲ ಜಾದಿಮಲ್ಲಿಗೆಯಂತೆ ನಸು ನಸುಂ ।
ಪೆಡಮೆಟ್ಟೆ ದುಗುಡಮರುಣೋದಯದ ಮರ್ಬಿನೋಲ್ ।
ಕಡು ತವಕದಿಂ ನಿರೀಕ್ಷಿಸುತಿರ್ದಳಾತ್ಮಜನ ಬರವ. . . . . . . . . . ॥ [೫–೪

ಆದರೆ, ವನದಿಂದ ಮರಳಿ ಬಂದ ರಾಮನು ಮೊದಲು ಕೈಕೆ ಸುಮಿತ್ರೆಯರನ್ನು ಕಂಡು, ಬಳಿಕ ಕೌಸಲ್ಯೆಯ ದರ್ಶನಕ್ಕೆ ಹೋಗುವನು. ಇದಲ್ಲವೆ ಸ್ವಭಾವದ ಉದಾತ್ತತೆಯು!—

ದಂಡಿಗೆಯನೇರ್ದು ಬರೆ ಕೈಕೆಯರಮನೆಗಿದಿ ।
ರ್ಕಂಡಿಱಿದು ಪೊಕ್ಕೊಳಗೆ ಮಣಿಮುಗುಡಗದಿರ್ವಗಲ್ ।
ಕಂಡ ಪೊಳಪಿಂ ಬೆಳಗುವಡಿದಾವರೆಗೆ ಪುರುಡಿ ಕೊರಗೆ ಕಣ್ಣೈದಿಲಿಂತು ॥
ದುಂಡು ಮೊಗಸಸಿ ಕಂಡು ಕಂದಿತೆನೆ ತಾಯಡಿಗೆ ।
ಮಂಡೆಯಂ ಬಾಗಿರ್ದೊಡಂ ಕಣ್ಮಲರ್ಗಳಿಱಿ ।
ಗೊಂಡು ಬಾಡಿರಲಬಲೆ ನುಡಿಸದಿನಿಸುಂ ನೋಡದಿರ್ದಳತಿ ಲಜ್ಜೆಯಿಂದ ॥ [೫–೫

ನಿಜವಾಗಿಯೂ ಕೈಕೆಯು ತನಗೆ ಅಪಕಾರವನ್ನು ಮಾಡಿ ಹದಿನಾಲ್ಕು ವರ್ಷಗಳವರೆಗೆ ತನ್ನನ್ನು ದುಃಖದಲ್ಲಿ ನೂಕಿದವಳು. ಇಂಥವಳಿಗೆ ಶ್ರೀರಾಮನ ಪ್ರಥಮ

* ಇದರಲ್ಲಿಯ ಕೆಲವು ಭಾಗವನ್ನು ಜೈಮಿನಿ ಭಾರತದ ೧೪ನೆಯ ಸಂಧಿಗೆ ಬರೆದ ಟಿಪ್ಪಣಿಯ ಪುಸ್ತಕದಿಂದ ತೆಗೆದುಕೊಂಡಿದೆ. ಇದರ ಸಲುವಾಗಿ ರಂಗರಾವ ಹಿರೇಕೆರೂರ—ಇವರಿಗೆ ಲೇಖಕನು ಅತ್ಯಂತ ಆಭಾರಿಯಾಗಿದ್ದಾನೆ.

ಪ್ರಣಾಮವು! ಅಹಹಾ! ಮಹಾತ್ಮರೇ ಈ ಬಗೆಯುವರು. ಒಂದು ರೀತಿಯಾಗಿ ಕೈಕೆಯು ಉಪಕಾರ ಕರ್ತ್ರಿಯೆಂದೇ ರಾಮನು ತಿಳಿದನು; ಏಕೆಂದರೆ, ವನವಾಸಕ್ಕೆ ಹೋಗದಿದ್ದರೆ ದುಷ್ಟ ರಾಕ್ಷಸರ ಸಂಹಾರವಾಗಿ ಲೋಕೋದ್ಧಾರವೆಂತು ಆಗುತ್ತಿದ್ದಿತು?

ಈ ಸಂಧಿಯ ೫, ೭, ೮ನೆಯ ಪದ್ಯಗಳಲ್ಲಿ ಅನುಕ್ರಮವಾಗಿ ಕಾರಣೋತ್ಪ್ರೇಕ್ಷೆಯಿಂದ ಮಾಡಿದ ರೂಪಕಾಲಂಕಾರವೂ ಸ್ತ್ರೀ ವರ್ಣನೆಯೂ ಬಹಳ ಪರಿಣಾಮ ಕಾರಕವಾಗಿವೆ:—

ಕತ್ತುರಿ ಕರಂಡ ಬಾಯ್ಮನೆಯೊಳಗೆ ದಾಳಿಂಬ ।
ವಿತ್ತುವಲ್ಗಾಪಿಟ್ಟು ತೊಂಡೆವಣ್ದುಟಿದೆಱೆಯ ।
ನೆತ್ತಲುಂ ಬಿಗಿದು ಮುತ್ತುಗದಳಿರ್ನಾಲಗೆವಣೆಯೊಳಿರ್ದು ಬಾಸೆವೆಣ್ಣು ॥
ಮತ್ತೇನನೆಸಗಿದಪಳಿನಿಯನಾಲೋಕದಿಂ ।
ದಿತ್ತಲೈತಂದೊಡನೆ ನೆಲಸಿರ್ಪುದೆಂದೇಕ ।
ಚಿತ್ತದಿಂ ಮೌನಗೊಂಡಭವನಂ ಧ್ಯಾನಿಪಳೆ ವ್ರತಮೆನಿತು ಪೊಱ್ತಿರ್ಪುದು ॥ [೫—೮

ಹೊಸ ವಿಚಾರ ಹೊಸ ಪದ್ಧತಿಗಳಿಂದ ನಾರಾಯಣಪ್ಪನು ಮಾಡಿದ ಕವಿತೆಗಳಲ್ಲಿ ಇವು ಅಗ್ರೇಸರತ್ವವನ್ನು ಪಡೆದಿವೆಯೆಂದು ಹೇಳಬಹುದು. (ನಾರಾಯಣಪ್ಪನನ್ನು ಮನೆಯಲ್ಲಿ ಪ್ರೀತಿಯಿಂದ **ಮುದ್ದಣ್ಣ**ನೆಂದು ಕರೆಯುತ್ತಿದ್ದರು.)

(೨) ಸ್ವಾರ್ಥರೂಪ ದುರ್ಗುಣಯುಕ್ತಳಾದ ಕೈಕೆಯು ಶ್ರೀರಾಮನೊಡನೆ ಮಾತನಾಡದೆ ಹೋಗಲು ರಾಮನು—

..........ನಿನ್ನಣುಗನೆಱಗಿದಪ ।
ನಾಡಬಾರದೆ ಪರಸಿ ಹಿತ ವಚನಮಂ ಮುಂದೆ ।
ಜೋಡಿಸಿರ್ಪಂ ಕರವನೆಳೆಯನೀ ಲಕ್ಷ್ಮಣಂ ಕುಳ್ಳಿರಲುಸಿರಬಾರದೇ ॥
ಕಾಡಂ ತೊೞಲ್ದುಬಲ್ಬನ್ನವಡೆದೀ ಬಾಲೆ ।
ಬಾಡಿ ಬಂದಿಹಳಿವಳ ಸಂತೈಸಬಾರದೇ ।
ಬೇಡುವೆಂ.........................॥ [೫—೯

ಎನ್ನಲು, ಕೈಕೆಯು ದುಮ್ಮಾನದಿಂದ, "ಕಂದ! ಪಿಂಬಾಳುವೆಯ ಮಱೆವುದು" ಎಂದು ಅಪ್ಪಿ ಶ್ರೀರಾಮನನ್ನು ಕುಳ್ಳಿರಿಸಲು, ಶ್ರೀರಾಮನು —

ತಾಟಕಾಂತಕನಾಗಳಿಂತೆಂದನೆಮಗೆ ಪೂ ।
ದೋಟದಂತಾಯ್ತಡವಿ ರಕ್ಕಸರೊಳನುವರಂ ।
ಬೇಟೆಯಂತಾದುದೀರೇೞ್ಗಾಲಮೇೞ್ಕಿರುೞ್ಗೞಿಗೆಯೆನೆ ಖಳರುಪಟಳಂ ॥
ಆಟಕಿಮ್ಮಡಿಯೆನಿಸಿ ತೋರ್ದುದಾ ಪೊೞಲೊಳೀ ।
ಪಾಟಲಾನನೆಗೆ ನಿನ್ನೊಲ್ಮೆಯಿಂ.............।
..........ಯಿಂದೆಂದು ಸಂತೈಸಿ ಪೊರಟರ್......॥ [೫—೧೨

ಸುಖ ದುಃಖಗಳು ಸಮವೆಂದು ತಿಳಿದ ಮಹಾತ್ಮರಿಗೆ, ಧೀರರಿಗೆ, ಎಲ್ಲೆಲ್ಲಿಯೂ ಸೌಖ್ಯವೇ! ಅವರಿಗೆ ಕಾಡೇ ನಾಡು, ಎಲೆವನೆಯೇ ಅರಮನೆ!

(೩) ಬಳಿಕ ರಾಮ ಲಕ್ಷ್ಮಣರು ಸೀತಾದೇವಿಯೊಡನೆ ಸುಮಿತ್ರೆಯ ದರ್ಶನಕ್ಕೆ ಹೋಗಿ ಆಕೆಗೆರಗಲು,

.................................।
.................................ಶತ।
ಪತ್ರ ಲೋಚನೆ ಕಿಚ್ಚಿಗಿಟ್ಟ ಬೆಣ್ಣೆಯ್ಯಂತೆ ಮನಗರಗಿ ಪಿಡಿದೆತ್ತುತುಂ ॥
ಕ್ಷತ್ರ ಧರ್ಮಂ ಬಿಡದೆ ಚಿರ ಕಾಲಮುವನಿಯನ ।
ಮಿತ್ರರಿಲ್ಲೆನೆ ಪೊರೆವುದೆಂದು ರಾಘವನಂ ಸು ।
ಪುತ್ರವತಿಯೆನಿಸಿ ಬಾಲಿಂದವನಿಜಾತೆಯಂ ಪರಸಿ ಲಕ್ಷ್ಮಣಗೊರೆದಳು ॥　　[೫-೧೩

ಹೀಗೆ ಸುಮಿತ್ರೆಯಿಂದ ಮಂಗಳಾಶೀರ್ವಾದವನ್ನು ಪಡೆದು, "ರಿಂಗಣ ಗುಣಿದು ಸುಱಿದಾಡಿ ತಾಯೆಡೆಗೆ ಜವದಿಂ ಮರಳ್ವ ಕಱುವಂತೆ" ರಾಘವನು ಕೌಸಲ್ಯೆಯ ದರುಶನಕ್ಕೆ ಬರಲು, ಕೌಸಲ್ಯೆಯೂ ರಾಮನೂ ಒಬ್ಬರನ್ನೊಬ್ಬರು ಹೇಗೆ ಕಂಡರೆಂಬುದನ್ನು ಕವಿಯು ಬಹಳ ರಮ್ಯವಾಗಿ ವರ್ಣಿಸಿದ್ದಾನೆ.—

ಮುಗಿದರಳಿ ನೋೞ್ಪ ಕಣ್ಗಳ ಬಿಗಿ ಸಡಿಲ್ವ ವು ।
ರ್ವುಗಳ ಬೆಮರೊಡೆದು ನೆಱೆದುಬ್ಬುವಾನನದ ಪೊ ।
ರ್ದುಗೆಗೊಂಡ ಜಡೆಯ ತೊಡವಿಲಿ ಕೊಡಂಕೆಯ ಕುಗ್ಗಿ ನೇರಮೆಳ್ದಪ್ಪ ಗಳದ ॥
ಸುಸಿದೊಗೆದ ಮೆಯ್ಯನೀರ್ತರಗೊಂಡು ಭಾವಿಸುವ ।
ಬಗೆಯ ನಿಜಮಾತೆಯಂ ರಾಘವಂ ರಾಹು ಕೈ ।
ದೆಗೆದ ಶಶಿಯಂತೆಸೆವ ರಾಮನಂ ಕುಶಲೆಯುಂ ಕಂಡರೋರೊರ್ವರಾಗ ॥　　[೫-೧೯

ಸೆಱೆಗೊರಲ್ ನಡುಕಂ ನಿಮಿರ್ಗೂದಲೆಱೆ ಮನಂ ।
ಕಿಱು ಬೆಮರ್ ಸೊಗದ ಕಂಬನಿ ಬನ್ನದಱವು ಬೇ ।
ಸಱದಱವು ಮೋಹಮೊಗದೊಳ್ಪು ಮೈವೆಳ್ಪು ತಲೆದೋರ್ದುದಿರ್ವರೊಳೊರ್ಮೆಯೆ ॥
ಪಿರಿದೆನೆ ಪರಸ್ಪರ ಮುಖಾವಲೋಕನದಿನೀ ।
ತೆಱದೊಳನ್ಯೋನ್ಯ ದರ್ಶನ ಸುಖಂ ನಾಡೆದಾ ।
ಶರಥಿ ಕೌಸಲ್ಯೆಯರ ದರ್ಶನದ ಸುಖದಂತೆವೋಲಾದುದೆಣೆಗಾಣದೆ ॥　　[೫-೨೦

ಇದೇ ಸಂದರ್ಭವನ್ನು ವರ್ಣಿಸುವ ಜೈಮಿನಿ ಭಾರತದ ಪದ್ಯ (೧೮-೧೦) ವನ್ನಿಲ್ಲಿ ಕೊಡುವೆವು :—

ಕೈದಳದೊಳೊಯ್ಯನೊಯ್ಯನೆ ಘನ ಸ್ನೇಹದಿಂ ।
ಮೈದಡವಿ ತನಯನಂ ತಳ್ಕೈಸಿ ಮುಂಡಾಡಿ ।
ಕೈದುಗಳ ಗಾಯಮಂ ಕಂಡು ಕರಗುತ ಮಗನೆ ನಿನ್ನ ಕೋಮಲ ತನುವನು ॥

ಪೊಯ್ದುವರದಾರಕಟ ಬೆಂದುದೆನ್ನೊಡಲೆಂದು ।
ಸುಯ್ದು ಮುಗ್ಧ ಭಾವದಿಂ ತನ್ನ ಸವತಿಯಂ ।
ಬಯ್ದು ಮರುಗುವ ಮಾತೆಯಂ ನೋಡಿ ನಗುತ ಸಂತೈಸಿದಂ ರಾವಣಾರಿ ॥

*(೪) ಸಂಕ್ಷೇಪ ರಾಮಾಯಣವೆಂದು ರಾಮಾಯಣದ ಕಥೆಯೆಲ್ಲವನ್ನೂ ಹೇಳುವ "ಆದೌ ರಾಮ ತಪೋವನಾದಿ ಗಮನಂ......ಏತದ್ಧಿ ರಾಮಾಯಣಂ" ಎಂಬ ಸಂಸ್ಕೃತ ಶ್ಲೋಕವನ್ನು ಅನೇಕರು ಕೇಳಿರಬಹುದು. ಕೌಸಲ್ಯಾ ದರ್ಶನ ಕಾಲದಲ್ಲಿ ರಾಮನು ಆಕೆಯ ಅಡಿದಾವರೆಗೆರಗುವುದನ್ನು ವರ್ಣಿಸುವ ಪದ್ಯದಲ್ಲಿ—

ಕಿತ್ತಡಿಯ ಜನ್ನಮಂ ಕಾದು ಪೆಣ್ಗೈದಡಿಯಿಂ ।
ನೊತ್ತಿ ಕಲ್ಲಂ ಹರನ ಬಿಲ್ಮುಱಿದು ಭಾರ್ಗವನ ।
ನೊತ್ತಟ್ಟಿಗುೞಿದಯ್ಯನಾಣೆಯಂ ಬಿಡದಡವಿಯಂ ಸಾರ್ದು ಕೀಶರ್ಕಳ ॥
ಮೊತ್ತಮಂ ಪೊರೆದು ಕಡಲಂ ಕಟ್ಟಿ ದಾನವರ ।
ನೆತ್ತರಂ ಚೆಲ್ಲಿ ತಿರೆವೊಱೆಯುೞಿಸಿದ ಜಸವಂ ।
ಪೊತ್ತ ಭಾರಕೆ ಸಿರಂ ಬಾಗಿತೆನೆ ಮಾತೆಯಡಿಗೆಱಗಿದಂ ಶ್ರೀರಾಮನು ॥ [೫–೨೧

ರಾಮಾಯಣದ ಮುಖ್ಯ ಭಾಗಗಳೆಲ್ಲ ಹೇಳಿರುವುದು.

ಪಟ್ಟಾಭಿಷೇಕದ ಸಿದ್ಧತೆ ನಡೆದುದನ್ನು ವರ್ಣಿಸುವ ಮೊದಲು, ಸಂಧ್ಯಾ ಸಮಯದ ಮತ್ತು ಸೂರ್ಯೋದಯದ ವರ್ಣನೆಯನ್ನು ಕವಿಯು ಅತ್ಯಂತ ಚಿತ್ತಾಕರ್ಷಕವಾಗಿ ಮಾಡಿದ್ದಾನೆ.—

(೫) ಶ್ರೀರಾಮ ಪಟ್ಟಾಭಿಷೇಕ ವರ್ಣನೆಯ ಭಾಗವು ಈ ಕಾವ್ಯದ ತಿರುಳಾಗಿದೆ. ಇದರಲ್ಲಿ ಬಂದಿರುವ ಶಬ್ದ ಗಾಂಭೀರ್ಯ, ಅರ್ಥ ಗಾಂಭೀರ್ಯ, ಭಾವ ಗಾಂಭೀರ್ಯ— ಇವು ಕೇವಲ ರಸ ಭರಿತವಾಗಿವೆ.—

ತಿಳಿಗೊಳದೊಳೊಲೆವ ಕೆಂದಾವರೆಗಳಂತೆ ಪೊಂ ।
ಗಳಸ ಕುಚದಬಲೆಯರ ತನು ಸೊಬಗಿನಂತೆ ಪ್ರ ।
ಜ್ವಳಿಸಿ ಥಳ ಥಳಿಪ ಪೂರ್ಣೇಂದು ಮಂಡಲದಂತೆ ಸಿರಿಯ ಮಾಂಗಲ್ಯದಂತೆ ॥
ಪೊಳೆವಿಂದುಕಾಂತ ಭಿತ್ತಿಗಳ ಮೇಲ್ ತಣ್ಣೀರ ।
ತಳೆದು ತೇದಿಟ್ಟ ಬಾವನ್ನದಿಂಪುಗಳಂತೆ ।
ಕಳಕಳಿಸಿ ಸೊಗಸೆನಿಸಿ ಕಾಂತಿಯಿಂ ಶಾಂತಿಯಿಂ ಕಾವ್ಯ ಕಡುಸೊಂಪೀವುದು ॥

[ಲಕ್ಷ್ಮ ಕವಿಯ 'ರುಕ್ಮಾಂಗದ ಚರಿತ್ರೆ']

ಈ ರೀತಿಯಾಗಿ ಈ ಭಾಗವು ಮನಸ್ಸಿಗೆ ಆನಂದವನ್ನೂ ಸವಿಯನ್ನೂ ಕೊಡುತ್ತದೆ.—(ಪದ್ಯ ೪೬ ರಿಂದ ೬೩ ರ ವರೆಗೆ ಓದಿರಿ.)

* ಈ ಭಾಗವನ್ನು ಮ|| ಎಂ. ಪಿ. ಪೂಜಾರರವರು ಮಾಡಿದ 'ಶ್ರೀರಾಮ ಪಟ್ಟಾಭಿಷೇಕ'ದ ವಿಮರ್ಶೆಯ ಭಾಗದಿಂದ ತೆಗೆದುಕೊಂಡಿದೆ. ಇದಕ್ಕಾಗಿ ಲೇಖಕನು ಅವರಿಗೆ ಅತ್ಯಂತ ಆಭಾರಿಯಾಗಿದ್ದಾನೆ.

ಭೂ ರಮೆ ಭುಜಾಗ್ರದೊಳ್ ಭುಜ ಮಧ್ಯದೊಳ್ ಜಯ ।
ಶ್ರೀ ರಮೆ ನಿಜಾಂಕ ಬಂಧುರ ಪೀಠ ತಟದೊಳ್ ಮ ।
ನೋರಮೆ ವಿಲಾಸದಿಂ ಮೆಱೆದಿರಲ್ ದಿಕ್ಕಾಂತೆಯರ್ಗೆ ದಿಗ್ಗಜ ನಿಕರಕೆ ॥
ಸಾರ ಘನಸಾರದಣ್ಪಂ ಕೀರ್ತಿವುುಖಮಂ ಯ ।
ಶೋ ರಶ್ಮಿಯಿಂ ಪುದುಂಗೊಳಿಸಿ ಮಱೆವೊಕ್ಕ ಸುರ ।
ವಾರಮಂ ಕಾದೊಂದು ತೇಜದಿಂ ರಾಘವಂ ಸಿಂಹಾಸನದೊಳೆಸೆದನು ॥ [೫-೬೦

ಸಲೆ ನೋಡಲ್ಕೆದೆ ತಲೆಯೊಳ್ ನವಿರ್ಗಳಾಗ ಸಂ ।
ಚಲಿತ ಮಧುಪ ದ್ಯುತಿಯನಾಳ್ದಮರೆ ಕಂಬುಗಳ ।
ಹೊಳರ ಮೆಯ್ಯಿಂ ಗಳ ನಯನಮೆಸೆವ ಫಾಲ ಧೃತ ಪುನ್ನಾಗ ಶೋಭೆ ನಿಮಿರೆ ॥
ಕೆಲದೊಳಚಲಾತ್ಮಭವೆಯಿರೆ ರಾಜಮೌಳಿಯೇಂ ।
ತೊಳಗಿದನೊ * ಶಿವನೊಳಂ ತನ್ನೊಳಂ ಭೇದಮೇಂ ।
ತಿಲ ಮಾತ್ರಮಿಲ್ಲೆಂಬ ಬಿರುದನುಮೊಱಲ್ದು ಸಾರ್ಥಕವುಂ ನೆಗೞ್ವವಂತೆ ॥ [೫-೬೧

(೬) ಅವತಾರಗಳ ವರ್ಣನೆ (ಪದ್ಯ ೭೧ ರಿಂದ ೭೯ ರ ವರೆಗೆ ಓದಿರಿ.)

(೭) ಶ್ರೀರಾಮನು ಸಿಂಹಾಸನಾರೋಹಣವನ್ನು ಮಾಡಿದಾಗ ಸುರರೂ, ಮುನಿಗಳೂ, ಬ್ರಾಹ್ಮಣರೂ, "ಹೇ ರಾಮಾ! ರಾವಣನು ನಮ್ಮನ್ನು ಸೆರೆಯಲ್ಲಿಟ್ಟಾಗ—ಪಾರತಂತ್ರ್ಯದಲ್ಲಿ ಕೊಳೆಯುವಾಗ, ನಮ್ಮ ಸ್ಥಿತಿಯು ಬಹಳ ಹೀನವಾಗಿದ್ದಿತು. ಅದರಿಂದ ನಾವು ನೊಂದೆವು, ಅತ್ತೆವು, ಕಂದಿದೆವು, ಕುಂದಿದೆವು, ಬಿಸುಸುಯ್ದೆವು, ಬೈದೆವು, ಸೊರಗಿದೆವು. ರವಿ ಶಶಿಗಳ ತೇಜವು ಕೂಡ ಕಡಿಮೆಯಾದುದರಿಂದ ಅವರನ್ನೂ ಗುರುತುಹಿಡಿಯದಂತಾದೆವು. ಪಾರತಂತ್ರ್ಯದಲ್ಲಿದ್ದುದರಿಂದ ರವಿ ಶಶಿಗಳ ತೇಜವೂ ಕಡಿಮೆಯಾಯಿತೆಂದಮೇಲೆ ಮಿಕ್ಕವರ ಪಾಡೇನು? ಪುರಾಣ ಘೋಷ ಶ್ರವಣ ಮಾಡುವಂಥವರು ನಾವು ಕರ್ಕಶವಾದ ರಕ್ಕಸರ ಗರ್ಜನೆಯನ್ನು ಕೇಳುತ್ತಿರಬೇಕಾಯಿತು. ಸುರಭಿಯ ಅಮೃತದಂತಿರುವ ಹಾಲನ್ನು ಕುಡಿದು ಬೆಳೆದವರಾದ ನಾವು ರಾವಣನ ಸೆರೆಮನೆಯ ಕಾವಲುಗಾರರು ಕೊಟ್ಟ ತಂಗಳು ಕೂಳನ್ನು ತಿಂದು ಬದುಕಬೇಕಾಯಿತು; ಹೆಂಡಿರು ಮಕ್ಕಳನ್ನು ಬಿಟ್ಟು, ಗುರು ಹಿರಿಯ ಬಾಂಧವರನ್ನು ಅಗಲಿ ಹಸಿವಿನಿಂದ ಬಳಲುತ್ತ ದೇಶಭ್ರಷ್ಟರಾಗಿ ತಿರುಗಬೇಕಾಯಿತು. ದೇವ ಸಂಪದ ಸುರ ಸುರಭಿ ಕಲ್ಪ ಲತೆ—ಇವೆಲ್ಲವೂ ರಾವಣನ ಕೈಸೇರಿದುವು; ಸಂಪತ್ತು ಹರಿದುಹೋಯಿತು, ಮಾನ ಖಂಡನೆಯಾಯಿತು. ನಮ್ಮ ಮುಖ್ಯಸ್ಥನಾದ ಸರಸತಿಯರಸನೂ ರಾವಣನಲ್ಲಿ ಪಂಚಾಂಗ ಹೇಳಿ ಹೊಟ್ಟೆ

* ಜೈಮಿನಿಕಾರನಾದ ಲಕ್ಷ್ಮೀಶನು 'ಹರಿಹರ ವಿಭೇದ ಮಾಡಿದವರಿಗೆ ದುರ್ಗತಿಯಾಗಲಿ' ಎಂದು ಹೇಳಿ ತಾನು ಸ್ಮಾರ್ತ ಧರ್ಮಾನುಯಾಯಿಯೆಂಬುದನ್ನು ತಿಳಿಸಿಕೊಂಡಿರುವಂತೆ ಲಕ್ಷ್ಮೀನಾರಾಯಣಪ್ಪನೂ ಇಲ್ಲಿ ತಾನು ಸ್ಮಾರ್ತನೆಂದು ತಿಳುಹಿಸಿದ್ದಾನೆ. ಅಲ್ಲದೆ, ನಾಂದೀ ಸಂಧಿಯಲ್ಲಿ ರಾಮನಿಗೂ ಶಿವನಿಗೂ, ಸೀತೆಗೂ ಪಾರ್ವತಿಗೂ ಹೋಲಿಕೆ ಮಾಡಿ ತೋರಿಸಿರುವುದಕ್ಕೂ ಇದೇ ಕಾರಣ.

ಹೊರೆದುಕೊಳ್ಳಬೇಕಾಯಿತು. ರಾವಣನು ಕಣ್ದೆರೆದ ಕೂಡಲೆ ಯಾವ ದುಃಸ್ಥಿತಿಯು ಪ್ರಾಪ್ತವಾಗುವುದೋ, ಎಂತಹ ಕಠಿನ ದಂಡನೆಯಾಗುವುದೋ ಎಂದು ಬ್ರಹ್ಮನು ಗದಗದನೆ ನಡುಗುತ್ತಿದ್ದನು'' ಎಂದು ಆತ್ಮ ನಿವೇದನೆ ಮಾಡಿದರು. ಶ್ರೀರಾಮ ಪಟ್ಟಾಭಿಷೇಕದ ವರ್ಣನೆಯೆಂದರೆ ಶ್ರೀರಾಮನ ದಿಗ್ವಿಜಯ ವರ್ಣನೆಯೇ ಸರಿ. ಶ್ರೀರಾಮ ವಿಜಯದಿಂದ ಎಲ್ಲರಿಗೂ ಸ್ವಾತಂತ್ರ್ಯವುಂಟಾಯಿತು. ಆ ಸ್ವಾತಂತ್ರ್ಯ ದಿಂದ ಯಾರು ಯಾರಿಗೆ ಎಷ್ಟೆಷ್ಟು ಸಂತೋಷವಾಯಿತೆಂಬುದನ್ನು ಶಿವನು ಹೀಗೆ ವರ್ಣಿಸಿದ್ದಾನೆ:—

ಸುರರಿಗಭ್ಯುದಯಂ ಸುರೇಶಂಗೆ ವೈಭವಂ ।
ಸುರಮುನೀಂದ್ರರ್ಗೆ ಪರಮಾನಂದ ಸಂಪದಂ ।
ಸುರ ರಿಪುಗಳಱಿವು ಭೂಸುರರುಱಿವು ಸಮನಿಸಿತು ನಿನ್ನ ನರ ನಟನೆಯಿಂದ ॥
ಧರೆಗೆ ಮಂಗಳಮಾಯ್ತು ಮೇಣೆಮ್ಮ ಪರಿತೋಷ ।
ಶರಧಿಗುತ್ಸವಮಾಯ್ತು ಬಹುರೂಪಭೃತ್ತ್ವಮುಂ ।
ಮೆಱೆದೆ ನಿನ್ನವತರಣೆ ಲೇಸು ಪೊಸತಾದುದೆಂದಭವನಭಿವಂದಿಸಿದನು ॥ [೫—೮೯

(೮) ಶ್ರೀರಾಮನು ರಾಜ್ಯ ಪರಿಪಾಲನೆಯನ್ನು ಹೇಗೆ ಮಾಡಿದನೆಂಬುದನ್ನು ಕವಿಯು ಹೀಗೆ ವರ್ಣಿಸಿದ್ದಾನೆ:—

ನ್ಯಾಯ ಧರ್ಮವನುಱಿದು ಶಿಕ್ಷೆ ರಕ್ಷಣೆಗಳಾ ।
ಮ್ನಾಯ ಧರ್ಮವನುಱಿದು ಭಕ್ತಿ ಭಾವನೆಗಳಾ ।
ತ್ಮೀಯ ಧರ್ಮವನುಱಿದು ಸಾಮ ಸಂಗ್ರಾಮಂಗಳಾಗವೆನೆ ಧರ್ಮವಱಿತು ॥
ರಾಯರೀ ಬಱಿಯೊಳಿಂತಿರ್ದರಿಲ್ಲೆನೆ ಪೂರ್ವ ।
ದಾಯಮುಂ ಬಿಡದೆ ಶಕ್ತಿತ್ರಯಂ ತನಗೆ ಸಮ ।
ವಾಯ ಲಕ್ಷಣವಾಗೆ ಲಕ್ಷ್ಮೀಮನೋಹರಂ ಧರೆಯನಾಳುತ್ತಿರ್ದನು ॥ [೫—೯೫

ಈ ಪ್ರಸಂಗದಲ್ಲಿ ಜೈಮಿನಿಕಾರನಾದ ಲಕ್ಷ್ಮೀಶನು ಹೇಳಿದ ರಾಮ ರಾಜ್ಯ ಭಾರದ ನೆನಹು ಆಗದಿರದು.—

ಯೂಪಮಯವಾಯ್ತು ಧರೆಯೆಲ್ಲಮುಂ ವರ ಜಾತ ।
ರೂಪಮಯವಾಯ್ತು ಮನೆಯೆಲ್ಲಮುಂ ಶುಕ ಪಿಕಕ ।
ಲಾಪಮಯವಾಯ್ತು ವನಮೆಲ್ಲಮುಂ ವರ್ಧಿಪ ಪ್ರಜೆಗಳುಂ ಸಂಚರಿಸುವ ॥
ಗೋಪಮಯವಾಯ್ತು ಸಿರಿಯೆಲ್ಲಮುಂ ರತ್ನ ಪ್ರ ।
ದೀಪಮಯವಾಯ್ತು ತಮವೆಲ್ಲಮುಂ ರಘುಜ ಪ್ರ ।
ತಾಪ ಮಯವಾಯ್ತು ಮೂಜಗವೆಲ್ಲಮುಂ ದಾಶರಥಿ ರಾಜ್ಯಮಂ ಪಾಲಿಸೆ ॥

[ಜೈ. ಭಾ., ೧೮—೧೨

"ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ'' ಎಂಬಂತೆ ಕವಿಯು ಕಟ್ಟಕಡೆಗೆ ತನ್ನ ಕಾವ್ಯವನ್ನು ಮುಗಿಸುವಾಗ, ಕರ್ಣಾಟಕದ—ಉಡುಪಿಯ ವರ್ಣನೆಯನ್ನು—

ಪಡುಗಡಲ್ಗಡೆಯೊಳೇೞಿಡೆಯಂ ಭೃಗೂದ್ವಹಂ ।
ಪಡೆದನದಱೊಳ್ ಸ್ಥೈಪಿಗೆಡೆಯಾಗಿ ಕನ್ನಡದ ।
ನುಡಿವೆಣ್ಗೆ ಭರ್ತೃ ಮಂದಿರವಾಗಿ ಸುಖಕೆ ಬೀಡಾಗಿ ನಾಡಾಗಿ ಮೆರೆವ ॥
ಉಡುಪಪುರಮೆಂಬ ಸುಕ್ಷೇತ್ರಮುಂಟಲ್ಲಿ.... ।
.......................... ।
.................................... ॥ [೫–೯೭

ಇಲ್ಲಿಗೆ ಕವಿಯು ತನ್ನ ಕಾವ್ಯವನ್ನು—ಶ್ರೀರಾಮ ಪಟ್ಟಾಭಿಷೇಕವನ್ನು—ಮುಗಿಸಿರುವನು. ಷಡಕ್ಷರಿಯು ರಾಜಶೇಖರ ವಿಳಾಸ ರೂಪವಾಗಿ ಜೇಂಗೊಡವನ್ನು ಕೊಟ್ಟಂತೆಯೂ, ಗೋವಿಂದ ಕವಿಯು ನಂದಿ ಮಾಹಾತ್ಮ್ಯ ರೂಪವಾಗಿ ದ್ರಾಕ್ಷಾ ಮಧುವನ್ನು ಕೊಟ್ಟಂತೆಯೂ, ಲಕ್ಷ್ಮೀನಾರಾಯಣಪ್ಪನು ಶ್ರೀರಾಮ ಪಟ್ಟಾಭಿಷೇಕ ರೂಪವಾಗಿ ಅಮೃತದ ಬಿಂದಿಗೆಯನ್ನೇ ಕೊಟ್ಟಿದ್ದಾನೆ. ಓದುಗರು ಬೇಕಾದಷ್ಟು ಮಧುವನ್ನು ಕುಡಿದು ತೃಪ್ತಿಹೊಂದಿರಿ, ವಿದ್ಯಾವಂತರಾಗಿರಿ.

**ನಾಗರಹಳ್ಳಿ ರಂಗ**

——

# * ಶ್ರೀ ಆಳವಂದಾರ್

---

ಜೀವನ ಚರಿತ್ರೆಯ ದೃಷ್ಟಿಯಿಂದ ನೋಡಿದರೆ ಈಗ ನಾವು ಯಾವ ಮಹಾನುಭಾವರ ದಿವ್ಯ ಚರಿತ್ರೆಯನ್ನು ಬರೆಯಲು ಹೊರಟಿರುವೆವೋ ಅದಕ್ಕಿಂತಲೂ ಚಿತ್ತಾಕರ್ಷಕವಾದಂತಹ, ಅಲ್ಲದೆ ಈ ಜೀವ ಯಾತ್ರೆಯುದ್ದಕ್ಕೂ ನಮ್ಮ ಅಜ್ಞಾನ ಕೌಟಿಲ್ಯಗಳಿಂದ ನಮ್ಮರಿವಿಗೆ ಸಂತತವೂ ಗೋಚರವಾಗದಿದ್ದರೂ ನಮ್ಮ ಬೆನ್ನು ಬಳಿ ಇದ್ದುಕೊಂಡು ನಮ್ಮನ್ನು ಸುರಕ್ಷಿತವಾಗಿ ಕೊನೆಮುಟ್ಟಿಸುವ ಭಗವತ್ಕೃಪೆ ಎಂಬು ದೊಂದುಂಟೆಂಬುದಕ್ಕೆ ಅದ್ಭುತ ಪ್ರಮಾಣವನ್ನು ನಿದರ್ಶಿಸುವಂತಹ, ಜೀವನ ಚರಿತ್ರೆಗಳು ತೀರ ಕಡಿಮೆ. ಬಹುವಾಗಿ, ಪ್ರತಿಯೊಬ್ಬನ ಜೀವಯಾತ್ರೆಯಲ್ಲಿಯೂ, ಗೂಬೆಯ ಕಣ್ಣುಗಳು ಹಗಲು ಕುರುಡಾಗಿರುವಂತೆ, ಈಗ ಆಧ್ಯಾತ್ಮಿಕ ಜ್ಯೋತಿಗೆ ಅಂಧವಾಗಿರುವ ನಮ್ಮ ದೃಷ್ಟಿ ಮಾಂದ್ಯವು ಕೊಂಚ ಕಡಿಮೆಯಾಗಿ, ಭಗವತ್ಕೃಪೆ ಎಂಬ ಸೂರ್ಯಪ್ರಭೆಯು ನಿಸ್ಸಂದೇಹವಾಗಿ ವ್ಯಕ್ತವಾಗಲು, ಭಗವಂತನ ಮಹಾ ಸನ್ನಿಧಾನಕ್ಕೂ ನಮಗೂ ಇರುವ ಸಾಮೀಪ್ಯವನ್ನು ಕಂಡು ನಾವು ಸಂತೋಷ ವಿಸ್ಮಯ ಭಯಭರಿತರಾಗುವ ಸಮಯಗಳುಂಟು. ಆದರೆ ಮಾಯೆ ಎಂಬುದು ನಾನಿದ್ದೇನೆಂದು ತಲೆಯನ್ನೆತ್ತಿ ದಿವ್ಯ ಜ್ಯೋತಿಯ ಮೇಲೆ ಒಂದಾಗಲೊಂದು ಮುಸುಕನ್ನು ಎಳೆದು, ಹೇಮಂತ ಋತುವಿನ ಭಾನುಮಂಡಲವು ಮಾಯವಾಗುವಂತೆ, ಅದು ಸಂಪೂರ್ಣವಾಗಿ ಅಂತರ್ಧಾನವಾಗುವಂತೆಸಗಿ, ನಮ್ಮ ಪ್ರತಿ ನಿತ್ಯದ ಉಪ್ಪು ಹುಣಿಸೆಯ ಹಣ್ಣಿನ ವ್ಯಾಪಾರಗಳ ಗೊಂದಲಕ್ಕೆ ನಮ್ಮನ್ನು ತಳ್ಳಿಬಿಡುತ್ತದೆ. ಆದರೆ, ಆಳವಂದಾರ್ ಅವರ ವಿಷಯದಲ್ಲಿ ಹಾಗಲ್ಲ; ಭಗವದ್ವಾಣಿಯು ಆತನ ಕಿವಿಗಳಿಗೆ ಕೇಳಿಸಿತಾದ ಕಾರಣ, ಅಂದಿನಿಂದ ಬೇರೆಯ ಮನುಷ್ಯನಾದನಾತನು. ಪ್ರಾಪಂಚಿಕ ಸಂಗಗಳ, ಪ್ರಾಪಂಚಿಕ ವ್ಯಾಪಾರಗಳ, ಪ್ರಾಪಂಚಿಕ ದುಃಖಗಳ ಹಿಡಿತವು ಸಡಲಿ ಅದು ಕದಲಿಹೋಗಲು, ಈ ಭೂಮಿಯೇ ಸ್ವರ್ಗವಾಯಿತಾತನಿಗೆ. ಈ ಸ್ವರ್ಗ ಸುಖವನ್ನು ಸ್ವಾರ್ಥಪರನಾಗಿ ಹೊಟ್ಟೆಯಕಿಚ್ಚಿನಿಂದ ತಾನೊಬ್ಬನೇ ಅನುಭವಿಸಲೊಲ್ಲದೆ, ಇತರರೂ ಅದರಲ್ಲಿ ಭಾಗಿಗಳಾಗಬೇಕೆಂದು ವ್ಯಾಕುಲಿತನಾಗಿ, ಅದು ಪ್ರಾಕೃತರಿಗೂ ರುಚಿಸುವಂತೆ ಆತನು ಕೈಕೊಂಡ ಪ್ರಯತ್ನಗಳಿಂದ ಆತನಿಗೆ ಶ್ರೀ ವೈಷ್ಣವ ಗುರು ಪರಂಪರೆಯಲ್ಲಿ ಉಚ್ಚ ಪದವಿಯು ದೊರೆತಿರುವುದು. ಆತನಿಗೆ ಉತ್ತರ ಕಾಲದಲ್ಲಿ ಶ್ರೀ ರಾಮಾನುಜಾಚಾರ್ಯರಿಂದ ಸ್ಥಾಪಿತವಾದ ವಿಶಿಷ್ಟಾದ್ವೈತ ಸಿದ್ಧಾಂತವು ಆತನಿಗೆ ಬಹಳವಾಗಿ ಋಣಿ. ಒಂದು ಬಗೆಯಲ್ಲಿ, ತಮ್ಮ ಶಿಷ್ಯರಾದ ಶ್ರೀ ಶಂಕರಾಚಾರ್ಯರಿಂದ ಸ್ಥಾಪಿತವಾದ ಅದ್ವೈತ ಸಿದ್ಧಾಂತಕ್ಕೆ ಶ್ರೀ ಗೌಡಪಾದರು ಹೇಗೋ ಹಾಗೆಯೇ ಆಳವಂದಾರ್ ಅವರು ವಿಶಿಷ್ಟಾದ್ವೈತಕ್ಕೆ.

---

* ಮ|| ರಾ|| ರಾಜಂ ಅಯ್ಯರ್ ಅವರ *Rambles in the Vedanta* (ವೇದಾಂತ ವನ ವಿಹಾರ) ಎಂಬ ಪುಸ್ತಕದಲ್ಲಿ ಕೊಟ್ಟಿರುವ ಆಳವಂದಾರ್ ಅವರ ಚರಿತ್ರೆಯು ಈ ಲೇಖನಕ್ಕೆ ಆಧಾರ. ಆಳವಂದಾರ್ ಅವರ ಹೆಸರು ಕರ್ಣಾಟಕರನೇಕರಿಗೆ ತಿಳಿಯದು.

ಆಳವಂದಾರ್, ಅಥವಾ ಯಾಮುನಾಚಾರ್ಯನು (ಇದು ಆತನ ಮೊದಲನೆಯ ಹೆಸರು) ಜನ್ಮಗ್ರಹಣಮಾಡಿದುದು ಕ್ರಿ. ಶ. ಸುಮಾರು ೧೧೫೦ರಲ್ಲಿ. ಆತನ ಜನ್ಮ ಸ್ಥಾನವು ಆ ಕಾಲದ ಪಾಂಡ್ಯಮಂಡಲದ ರಾಜಧಾನಿಯಾದ ಮಧುರೆ. ಆತನ ತಂದೆಯು ಈಶ್ವರಮುನಿ. ಈತನು ಸುಪ್ರಸಿದ್ಧನಾದ ನಾಥಮುನಿ ಮಹಾಸ್ವಾಮಿಗಳ ಮಗನು. ಯಾಮುನನ ಕೌಮಾರದಲ್ಲಿಯೇ, ಎಂದರೆ ಆತನ ಹತ್ತನೆಯ ವಯಸ್ಸಿ ನಲ್ಲಿಯೇ ಆತನಿಗೆ ಪಿತೃವಿಯೋಗ ಪ್ರಾಪ್ತವಾಯಿತು. ಆತನಿಗೆ ಯಥಾಕ್ರಮದಲ್ಲಿ ಆಗಿನ ಕಾಲದ ಶಾಲಾ ವಿದ್ಯಾಭ್ಯಾಸವು ಪ್ರಾರಂಭವಾಗಲು, ಆತನು ಮೊದಲಿನಿಂದಲೂ ಅಸಾಧಾರಣವಾದ ಬಾಲಪ್ರೌಢತೆಯನ್ನು ವ್ಯಕ್ತಪಡಿಸಿದನು. ಆತನ ವಿದ್ಯಾಗುರು ವಾದ ಭಾಷ್ಯಾಚಾರ್ಯರೂ, ಆತನ ಬಂಧುಗಳೂ, ಆತನ ತಾತನೇ ಈ ಬಾಲಕನಲ್ಲಿ ಉದ್ಭವಿಸಿರುವನೆಂದು ಬಗೆದು ಆನಂದಪಟ್ಟರು. ಆತನು ವ್ಯಾಸಂಗ ಮಾಡಿದ ಪ್ರತಿಯೊಂದು ತರಗತಿಯಲ್ಲಿಯೂ ಆತನೇ ಚಿಕ್ಕುಪಾಧ್ಯಾಯನಾಗಿ ನಿಯಮಿಸಲ್ಪಟ್ಟು, ಅನೇಕ ವೇಳೆ ಪಾಠಶಾಲೆಯ ಕಾರ್ಯವನ್ನು ನೋಡಿಕೊಳ್ಳುತ್ತಿದ್ದನು. ಆತನಿಗೆ ಹನ್ನೆರಡು ತುಂಬುವುದರೊಳಗಾಗಿಯೇ ಆತನು ಸಕಲ ಶಾಸ್ತ್ರ ಪಾರಂಗತನಾದನೆಂಬ ಪ್ರತೀತಿ. ಆ ಹುಡುಗನ ಹನ್ನೆರಡನೆಯ ವಯಸ್ಸಿನಲ್ಲಿ ಆತನನ್ನು ಒಂದೇ ಸಲಕ್ಕೆ ರಾಜಪದವಿಗೊಯ್ದ ಘಟನೆಯೊಂದು ಸಂಭವಿಸಿತು: ಒಂದಾನೊಂದು ದಿವಸ ಆತನ ಪಾಠಶಾಲೆಯ ಉಪಾಧ್ಯಾಯನಾಗಿದ್ದ ಭಾಷ್ಯಾಚಾರ್ಯನು ಕಾರ್ಯಾಂತರದಿಂದ ಶಾಲೆಯನ್ನು ಬಿಟ್ಟು ಹೋಗಬೇಕಾದ ಸಂದರ್ಭವು ಒದಗಲು, ಆತನು ಶಾಲೆಯನ್ನು ಈ ಬಾಲಪ್ರೌಢನ ವಶಕ್ಕೊಪ್ಪಿಸಿ ತಾನು ಹೊರಟುಹೋದನು. ಯಾಮುನನು ಶಾಲೆಯ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತ ಪಾಠ ಹೇಳುತ್ತಿರುವಲ್ಲಿ, ಆ ಕಾಲಕ್ಕೆ ವಿದ್ವಜ್ಜನ ಕೋಲಾಹಲನೆಂಬ ದೊಡ್ಡ ಹೆಸರನ್ನು ಪಡೆದು ಸುಪ್ರಸಿದ್ಧ ನಾದ ಪಂಡಿತನು ಕಳುಹಿಸಿದ ದೂತನೊರ್ವನು ಭಾಷ್ಯಾಚಾರ್ಯನನ್ನು ಹುಡುಕಿ ಕೊಂಡು ಪಾಠಶಾಲೆಗೆ ಬಂದನು. ಈ ಕೋಲಾಹಲನಾದರೋ ಪಾಂಡ್ಯ ರಾಜ್ಯದಲ್ಲಿದ್ದ ವಿದ್ವಾಂಸರಿಗೆಲ್ಲ ಯಮಪ್ರಾಯನು. ಆತನನ್ನು ಕಂಡರೆ, ಆತನ ಹೆಸರು ಹೇಳಿದರೆ, ಎಲ್ಲರಿಗೂ ನಡುಕ. ಆತನಿಂದ ವಾದಾಹ್ವಾನವನ್ನು ಪಡೆದು ಪರಾಜಿತರಾಗದ ವಿದ್ವಾಂಸರೇ ಇರಲಿಲ್ಲ ಆ ರಾಜ್ಯದಲ್ಲಿ. ಪಾಂಡ್ಯರಾಜನು ಆತನನ್ನು ತನ್ನ ವಿಶೇಷ ಪೋಷಣೆಯಲ್ಲಿಟ್ಟುಕೊಂಡು ಆತನಿಗೆ ಪಲ್ಲಕ್ಕಿಗಳು, ಛತ್ರಗಳು, ಶಾಲುಗಳು, ದೋತರ ಗಳು, ಅನೇಕ ಮಂದಿ ಭೃತ್ಯರು—ಇವೆಲ್ಲವನ್ನು ದಯಪಾಲಿಸಿ, ಗೌರವಿಸಿ ಅತಿ ಮರ್ಯಾದೆಯಿಂದ ಕಾಣುತ್ತಿದ್ದನು. ಹೀಗಾಗಲು, ಪಂಡಿತನು ಗರ್ವದಿಂದುಬ್ಬಿ, ಸಂಸ್ಕೃತದ ಗಂಧವು ತಮಗುಂಟೆಂದು ಯಾರು ಯಾರು ಹೇಳುತ್ತಿದ್ದರೋ ಅವ ರೆಲ್ಲರೂ ತನಗೆ ಪ್ರತಿ ವರ್ಷವೂ ಕಪ್ಪವಾಗಿ ಇಷ್ಟು ಹಣವನ್ನು ಕೊಡಬೇಕೆಂದು ಕಟ್ಟು ಮಾಡಿದನು. ಬಡ ವಿದ್ವಾಂಸರು ವಿಧಿಯಿಲ್ಲದೆ ಆತನ ಆಜ್ಞೆಯನ್ನು ಪಾಲಿಸುತ್ತ ಬರಬೇಕಾಯಿತು. ಅನೇಕ ಸಂವತ್ಸರಗಳು ಈ ಮೇರೆಗೆ ಕಳೆದುಹೋದುವು. ಯಾಮುನನ ವಿದ್ಯಾಗುರುವಾದ ಭಾಷ್ಯಾಚಾರ್ಯನೂ ಕೋಲಾಹಲನಿಗೆ ಕಪ್ಪ ಕೊಡುವವರ ಗೋಷ್ಠಿಗೆ ಸೇರಿದ್ದವನಾದ ಕಾರಣ ಏನೋ ಕೆಲವು ಆರ್ಥಿಕ ನ್ಯೂನತೆಗಳ

ದೆಸೆಯಿಂದ ಕಪ್ಪವು ಬಾಕಿಬಿದ್ದಿತು. ಅದನ್ನು ಕೇಳುವುದಕ್ಕಾಗಿ ಕೋಲಾಹಲನು ದೂತನನ್ನು ಅಟ್ಟಿದ್ದನು.

ಹುಡುಗ ಯಾಮುನನು ಆ ದೂತನನ್ನು, "ನೀನು ಯಾರು? ಬಂದ ಕಾರ್ಯ ವೇನು?" ಎಂದು ವಿಚಾರಿಸಲು, ಆತನು, "ಯಾವಾತನಾದರೆ ಕವಿ ಕೇಸರಿಯೋ, ವಿದುಷಾಂಪತಿಯೋ, ಪಂಡಿತಾಂತಕನೋ, ಯಾವಾತನಾದರೆ ಕುರಿಯ ಮಂದೆಗೆ ತೋಳನೂ, ಹುಲ್ಲುಮೆದೆಗೆ ಬೆಂಕಿಯೂ, ಸರ್ಪಗಳಿಗೆ ಗರುಡನೂ ಹೇಗೋ ವಿದ್ವನ್ಮಂಡಲಿಗೆ ಆ ಪ್ರಕಾರನಾದವನೋ, ಯಾರನ್ನಾದರೆ ಲೋಕವು ವಿದ್ವಜ್ಜನ ಕೋಲಾಹಲನೆಂದು ಕೊಂಡಾಡುವುದೋ, ಅಂತಹವನ ದೂತನಯ್ಯಾ ನಾನು" ಎಂದನು. ಅದಕ್ಕೆ ಯಾಮುನನು ತಿರಸ್ಕಾರ ಸೂಚಕವಾದ ಕಂಠದಿಂದ, "ಅದೆಲ್ಲ ಸರಿಯೇ, ನಿನ್ನವನಿದ್ದಾನಲ್ಲ! ಆತನಿಗೆ ನನ್ನ ವಿದ್ಯಾಗುರುಗಳಿಂದ ಆಗಬೇಕಾದು ದೇನು?" ಎಂದು ಪ್ರಶ್ನೆಮಾಡಿದನು. "ನನ್ನವನೇ? ಇರಲಿ; ನಿನ್ನ ಯಜಮಾನನ ಯಜಮಾನನು ತನ್ನ ಗುಲಾಮನಾದ ನಿನ್ನ ಯಜಮಾನನು ಸಲ್ಲಿಸಬೇಕಾದ ಕಪ್ಪ ವನ್ನು ಕೊಡಬೇಕೆಂದು ಕೇಳುತ್ತಾನೆ" ಎಂದನು ದೂತನು. ಅದಕ್ಕೆ ಯಾಮುನನು, "ಇಷ್ಟು ದಿಟ್ಟತನ ಕೂಡದೆಂದು ಹೇಳು ನಿನ್ನವನಿಗೆ; ತನಗಿಂತಲೂ ದೊಡ್ಡವರಾದವ ರಲ್ಲಿ ವಿನೀತನಾಗಿ ನಡೆದುಕೊಳ್ಳಬೇಕೆಂಬುದು ಆತನಿಗೆ ತಿಳಿಯದೆಂದು ತೋರುತ್ತದೆ. ಸ್ವಾಭಿಮಾನದಿಂದ ಬುದ್ಧಿಹೀನನಾದವನಿಗೆ ಕಪ್ಪಕೊಡತಕ್ಕವರಲ್ಲ ನಮ್ಮ ಭಾಷ್ಯಾ ಚಾರ್ಯ ಗುರುಗಳು" ಎಂದು ಧಿಕ್ಕರಿಸಿ ಆತನನ್ನು ಕಳುಹಿಸಿಬಿಟ್ಟನು.

ಈ ಸಂವಾದ ನಡೆದ ಕೊಂಚ ಹೊತ್ತಿಗೆ ಉಪಾಧ್ಯಾಯನು ಪಾಠಶಾಲೆಗೆ ಹಿಂದಿರುಗಿ ಬಂದು, ತಾನಿಲ್ಲದ ವೇಳೆಯಲ್ಲಿ ನಡೆದ ವೃತ್ತಾಂತವನ್ನೆಲ್ಲ ಕೇಳಿ, ನೈರಾಶ್ಯ ನಾಗಿ, "ಅಯ್ಯೋ! ಕೆಟ್ಟೆನಲ್ಲ ನಾನು! ನನ್ನ ಸಂಸಾರವು ಹಾಳಾಯಿತೆ! ಕೋಲಾ ಹಲನ ಕಿವಿಗೆ ಇದು ಬಿದ್ದರೆ ಅವನು ಅದನ್ನು ದೊರೆಗೆ ವಿಜ್ಞಾಪಿಸಿ ನನ್ನನ್ನು ವಾದಕ್ಕೆಳೆಯುವನು; ನನ್ನ ತಲೆ ಹೋಗುವುದಾಗ. ಅಯ್ಯೋ! ಯಾಮುನಾ! ಯಾಮುನಾ! ಏನುಮಾಡಿದೆಯೋ ನೀನು! ನನ್ನನ್ನು ಹಾಳುಮಾಡಿಬಿಟ್ಟೆಯಲ್ಲೋ! ನಿನ್ನ ಹುಡುಗತನದಿಂದ ಕೆಟ್ಟೆನಲ್ಲೋ! ಹುಡುಗನ ವಶಕ್ಕೆ ಪಾಠಶಾಲೆಯನ್ನು ಒಪ್ಪಿಸಿ ಹುಚ್ಚನಾದೆನಲ್ಲೋ!" ಎಂದು ಬಹುವಾಗಿ ವ್ಯಸನಪಟ್ಟನು. ಯಾಮುನನು, "ಹೇ ಭಗವನ್, ಭಯವೇಕೆ? ಅವನು ತಮ್ಮನ್ನು ವಾದಕ್ಕೆಳೆದರೆ ತಮಗೆ ಪ್ರತಿನಿಧಿ ಯಾಗಿ ನಾನು ಹೋಗಿ ಆತನನ್ನು ಸೋಲಿಸಿಬರುವೆನು. ಆ ವಿಷಯದಲ್ಲಿ ತಮಗೆ ಚಿಂತೆ ಬೇಡ. ಆ ಗರ್ವಿಯನ್ನು ನಾನು ಸೋಲಿಸಬಲ್ಲೆನೆಂದು ನನಗೆ ದೃಢವಾದ ನಂಬಿಕೆ ಯುಂಟು" ಎಂದು ಗುರುವನ್ನು ಸಂತವಿಸಿದನು.

ಇಷ್ಟರಲ್ಲಿ ಆಸ್ಥಾನ ಪಂಡಿತನ ದೂತನು ಪಾಠಶಾಲೆಯಲ್ಲಿ ನಡೆದುದೆಲ್ಲವನ್ನೂ ತನ್ನ ಯಜಮಾನನಿಗೆ ವರದಿಯೊಪ್ಪಿಸಲು, ಪಂಡಿತನಿಗೆ ಕ್ರೋಧಾವೇಶವುಂಟಾಗಿ, ಅವನು ಭಾಷ್ಯಾಚಾರ್ಯರಿಗೆ ವಾದಾಹ್ವಾನವನ್ನು ಕೊಡುವುದಕ್ಕೆ ರಾಜನ ಅನುಮತಿಯನ್ನು ಪಡೆದನು. ಅದು ಭಾಷ್ಯಾಚಾರ್ಯರ ಹಸ್ತಗತವಾಗಲು, ಅವರಿಗೆ ಪ್ರಜ್ಞೆ ತಪ್ಪಿ

ನೆಲಕ್ಕೆ ಬೀಳುವಂತಾಯಿತು. ಯಾಮುನನು ಅವರನ್ನು ಸಮಾಧಾನಗೊಳಿಸಿ ಅವರಿಗೆ ಬದಲು ತಾನು ಆಹ್ವಾನವನ್ನು ಸ್ವೀಕರಿಸಿ, ಭಾಷ್ಯಾಚಾರ್ಯರಂತಹ ಮಹಾ ವಿದ್ವಾಂಸರಿಗೆ ಕೋಲಾಹಲನೊಡನೆ ಸ್ವತಃ ವಾದ ಮಾಡುವುದು ಅಗೌರವವಾದುದರಿಂದ ಅವರ ಶಿಷ್ಯನೊರ್ವನನ್ನು ಪಂಡಿತನಿಗೆ ತಕ್ಕ ಮರ್ಯಾದೆಯೊಡನೆ ರಾಜಾಸ್ಥಾನಕ್ಕೆ ಕರೆಯಿಸಿಕೊಂಡಲ್ಲಿ, ಆತನು ವಾದಕ್ಕೆ ತೊಡಗಲು ಸಿದ್ಧನೆಂದೂ, ಅಲ್ಲದಿದ್ದರೆ ವಾದವನ್ನು ಪಾಠಶಾಲೆಯಲ್ಲಿಯೇ ನಡೆಯಿಸಬಹುದೆಂದೂ, ಕೋಲಾಹಲನೂ ಅಲ್ಲಿಗೆ ಬರಬಹುದೆಂದೂ ಹೇಳಿಕಳುಹಿಸಿದನು.

ಈ ಉತ್ತರವನ್ನು ರಾಜನಿಗೂ ಆಸ್ಥಾನ ಪಂಡಿತನಿಗೂ ದೂತರು ಅರಿಕೆ ಮಾಡಿದರು. ಹುಡುಗನ ವಯಸ್ಸು ಹನ್ನೆರಡು ಮಾತ್ರವೇ ಎಂಬುದನ್ನು ರಾಜನು ತಿಳಿದು, ಅದನ್ನು ಅನುಪೇಕ್ಷ್ಯವೆಂದು ಬಗೆಯಲೊಲ್ಲದೆ, ಅದು ಹುಡುಗನ ದಿಟ್ಟತನವೆಂದರಿತು, ಅದಕ್ಕೆ ತಕ್ಕ ಶಿಕ್ಷೆಯನ್ನು ವಿಧಿಸಬೇಕೆಂದು ಇಷ್ಟಪಟ್ಟನು. ಆ ಸಮಯದಲ್ಲಿ ಆತನ ಮಗ್ಗುಲಲ್ಲಿದ್ದ ಪಟ್ಟಮಹಿಷಿಯು ಈ ವೃತ್ತಾಂತವನ್ನೆಲ್ಲ ಕೇಳಿ, "ಆ ಹುಡುಗನೇನು ಮಾಡಬಲ್ಲನೋ ಬಲ್ಲವರಾರು? ಆತನ ಶಕ್ತಿಯು ಎಂತಹದೋ! ಅರಳೆಯ ಗುಡ್ಡವನ್ನೇ ಸುಟ್ಟು ಬೂದಿ ಮಾಡಲು ಒಂದು ಕಿಡಿ ಸಾಕಷ್ಟೆ! ಯಾವ ಹುತ್ತದಲ್ಲಿ ಎಂತಹ ಸರ್ಪವಿರುವುದೋ ನಾವರಿಯೆವು. ಆದುದರಿಂದ ನಮಗೆ ತ್ವರೆ ಬೇಡ. ಹುಡುಗನನ್ನು ಪರೀಕ್ಷೆ ಮಾಡಿ, ಆತನು ಹುಡುಗಾಟಕ್ಕಾಗಿ ಈ ಪ್ರಕಾರ ಮಾಡಿರುವನೆಂಬುದಾಗಿ ಕಂಡುಬಂದಲ್ಲಿ ಅವನಿಗೆ ಶಿಕ್ಷೆಯನ್ನು ವಿಧಿಸೋಣ. ಈಗ ಅವನನ್ನು ತಕ್ಕ ಮರ್ಯಾದೆಯೊಡನೆ ಆಸ್ಥಾನಕ್ಕೆ ಬರಮಾಡಿಕೊಳ್ಳೋಣ" ಎಂದು ರಾಜನಿಗೆ ಬಿನ್ನವಿಸಿದಳು. ಈ ಸೂಚನೆಯು ಯುಕ್ತಿಯುಕ್ತವಾಗಿ ತೋರಿತಾದುದರಿಂದ, ರಾಜನು ಅದಕ್ಕೊಪ್ಪಿ ಹುಡುಗನನ್ನು ಕರೆತರುವುದಕ್ಕೆ ಆಗಿನ ಕಾಲದ ಪಂಡಿತರ ಮರ್ಯಾದೆಗೆ ತಕ್ಕಂತೆ ಪಲ್ಲಕ್ಕಿಯನ್ನೂ ಛತ್ರವನ್ನೂ ಕಳುಹಿಸಿದನು. ಪಲ್ಲಕ್ಕಿಯಲ್ಲಿ ಕುಳಿತು ಛತ್ರವನ್ನು ಹಿಡಿಸಿಕೊಂಡು ಯಾಮುನನು ರಾಜನೊಡ್ಡೋಲಗಕ್ಕೆ ಹೊರಡಲು, ಪಾಠಶಾಲೆಯ ಹುಡುಗರೆಲ್ಲರೂ ಹೊರಟರು ಅವನ ಹಿಂದೆ. ಪಲ್ಲಕ್ಕಿಯ ಮುಂದೆ, ಯಾಮುನನನ್ನು ಹೊಗಳುವುದಕ್ಕಾಗಿಯೇ ನಿಯಮಿತನಾಗಿದ್ದ ಭಟ್ಟರಾಜನೊರ್ವನು ದಾರಿಯಲ್ಲಿ, "ಅದ್ಭುತಯಾಮುನಾಚಾರ್ಯರು ಇಗೋ ಬಿಜಯಮಾಡಿಸುತ್ತಿದ್ದಾರೆ! ದಾರಿ ಬಿಡಿರಿ; ಕವಿಕೇಸರಿಗಳು ಬರುತ್ತಿದ್ದಾರೆ, ಇಗೋ ಅರಗಾಗಿರಿ! ತರ್ಕ ವ್ಯಾಕರಣ ಮೀಮಾಂಸಗಳೇ ಮೊದಲಾದ ಸಕಲ ಶಾಸ್ತ್ರ ಪಾರಂಗತರಾದವರು ಇಗೋ ದಯಮಾಡಿಸುತ್ತಿದ್ದಾರೆ! ಮಗ್ಗುಲಾಗಿರಿ. ಅವರೊಡನೆ ವಾದಿಸುವನಿಗೆ ಹಾ! ಕಷ್ಟ! ಹಾ! ಕಷ್ಟ!" ಎಂದು ಸಾರುತ್ತ ನಡೆದನು. ಹುಡುಗನು ಛತ್ರವನ್ನು ಹಿಡಿಸಿಕೊಂಡು, ಮೇಲೆ ಹೇಳಿದ ಪ್ರಕಾರ ಬಹಳ ಠೀವಿಯಿಂದ ಪಲ್ಲಕ್ಕಿಯಲ್ಲಿ ರಾಜಾಸ್ಥಾನಕ್ಕೆ ಹೋಗುವುದನ್ನು ನೋಡಿದ ದೊಡ್ಡವರೂ ಹುಡುಗರೂ ಆತನ ಹಿಂದೆಯೇ ತಂಡ ತಂಡವಾಗಿ ಹೋದುದೊಂದು ಅಚ್ಚರಿಯಲ್ಲ.

ಹುಡುಗನನ್ನು ನೋಡಿದ ರಾಜನು ಹೊಟ್ಟೆ ಬಿರಿವಂತೆ ನಕ್ಕು ತನ್ನ ರಾಣಿಯನ್ನು ಸಂಬೋಧಿಸಿ, "ನಮ್ಮ ಕೋಲಾಹಲನೊಡನೆ ವಾದ ಮಾಡುವವನು ಈ ಹುಡುಗನೇ?

ಚೆನ್ನಾಯಿತು! ಹಾಗಾದರೆ ನರಿಯು ಆನೆಯೊಡನೆ ಗುದ್ದಾಡಬಹುದಲ್ಲವೆ? ಇಂತಹ ವಿನೋದವನ್ನು ನಾನೆಂದೂ ನೋಡಿದುದಿಲ್ಲ" ಎಂದನು. ಅದಕ್ಕೆ ರಾಜ ಪತ್ನಿಯು, "ಎನ್ನೊಡೆಯಾ! ತಮ್ಮದು ತಪ್ಪು ತಿಳಿವಳಿಕೆ. ಈ ದಿವಸ ಈ ಹುಡುಗನು ವಿಜಯಿಯಾಗುವುದು ನಿಶ್ಚಯ. ಅದನ್ನು ಆತನ ಮುಖವು ಹೇಳುತ್ತಿದೆ. ಅದರಲ್ಲಿ ಒಂದು ಬಗೆಯ ಕಾಂತಿಯು ತಾಂಡವವಾಡುತ್ತಲಿದೆ. ಅದನ್ನು ನಾನು ಇನ್ನೆಲ್ಲಿಯೂ ನೋಡಿದುದಿಲ್ಲ. ಈ ಕೋಲಾಹಲನನ್ನು ಮಾತ್ರವಲ್ಲ, ಅವನ ತಾತನನ್ನೂ, ಅವನ ತಾತನ ತಾತನನ್ನೂ ಈ ಹುಡುಗನು ಸೋಲಿಸುವನೆಂಬುದು ನನಗೆ ದೃಢಪಟ್ಟಿದೆ" ಎಂದಳು.

ರಾಜ.—ಅಹುದು; ಮಣ್ಣುಕುದುರೆಗೆ ಹೊಳೆ ದಾಟುವುದಕ್ಕಾದರೆ, ಈ ಕೂಸು ನಮ್ಮ ಆಸ್ಥಾನ ಪಂಡಿತನನ್ನು ಸೋಲಿಸುವುದಕ್ಕಿಂತಲೂ ಸುಲಭವಾಗಿ ಒಂದು ಕರುವು ಸಿಂಹವನ್ನು ಕೊಲ್ಲಬಹುದಲ್ಲವೆ!"

ರಾಣಿ.—ಆ ಬಡ ಕೋಲಾಹಲನಿಗೆ ಇಂದು ದುರ್ದಿನ; ಇದು ನಿಶ್ಚಯ. ಆಗಲೇ ಆ ಹುಡುಗನದಾಗಿದೆ ಗೆಲುವು. ಪಾಂಡಿತ್ಯವೂ ಪ್ರತಿಭೆಯೂ ವಯಸ್ಸನ್ನು ಅವಲಂಬಿಸಿಲ್ಲ. ವಯಸ್ಸೇ ಪ್ರಮಾಣವಾದರೆ ನಮ್ಮೆಲ್ಲರಿಗಿಂತಲೂ ಹೆಚ್ಚು ವಯಸ್ಸಾದ ಮೋಟು ಗೋಡೆಗಳಿಲ್ಲವೇನು?

ರಾಜ.—ಇದೇನು ಈ ಪ್ರಕಾರದ ನಿನ್ನ ಹರಟೆ! ಎತ್ತಿಕೊಳ್ಳುತ್ತಲೇ ಹುಡುಗನ ಬಾಯಿ ಅಡಗಿಹೋಗುವುದನ್ನು ನೀನೇ ನೋಡುವೆ. ಅವನು ಸೋತರೆ ನನಗೇನು ಕೊಡುತ್ತೀ?

ರಾಣಿ.—ಅವನು ಹಾಗೆ ಸೋತರೆ ತಮ್ಮ ದಾಸಿಯ ದಾಸಿಯಾಗುತ್ತೇನೆ.

ರಾಜ.—ಎಲೌ ಹುಚ್ಚಳೇ! ಮಣ್ಣುದೋಣಿಯಲ್ಲಿ ಕುಳಿತು ಸಾಗರವನ್ನು ದಾಟಲು ಮುಂದುವರಿಯುವನದಾರು? ನೀನು ಆಲೋಚನೆ ಮಾಡದೆ ಮಾತನಾಡುತ್ತೀಯೆ. ಈ ಹುಡುಗನು ನಮ್ಮ ಪಂಡಿತನನ್ನು ಸೊಲಿಸಿದರೆ ಅವನಿಗೆ ಅರ್ಧ ರಾಜ್ಯವನ್ನೇ ಕೊಡುತ್ತೇನೆ.

ಮೇಲಣ ಸಂಭಾಷಣೆಯು ನಡೆಯುತ್ತಿರುವಲ್ಲಿ, ಯಾಮುನನು ರಾಜನಿಗೆ ಪ್ರಣಾಮವನ್ನು ಮಾಡುವುದಕ್ಕಾಗಿ ಕಾದಿದ್ದನು; ರಾಜನು ಅವನ ಕಡೆ ತಿರುಗಿ ನೋಡಲು, ಅವನನ್ನು ಅತ್ಯಂತ ಗಾಂಭೀರ್ಯದಿಂದ ಅಭಿವಂದಿಸಿ, ಕೋಲಾಹಲನ ಎದುರಿಗೆ ಆಸನದಲ್ಲಿ ಕುಳಿತನು. ರಾಜನ ಅನುಮತಿಯನ್ನು ಪಡೆದು ಪಂಡಿತನು ಹುಡುಗನನ್ನು ಸಂಬೋಧಿಸಿ, "ಎಲಾ, ಹುಡುಗಾ! ನಿನ್ನ ದಿಟ್ಟತನವನ್ನು ನೋಡಿ ವಿಷಾದಿಸಬೇಕಾಗಿದೆ ನಾನು. ನೀನಿನ್ನೂ ಕೂಸು; ಆದುದರಿಂದ ಅದು ಕ್ಷಮಾರ್ಹವು. ನನ್ನಿಂದೇನಾಗಬೇಕಪ್ಪ ನಿನಗೆ?" ಎಂದನು. ಯಾಮುನನು, "ತಮಗಿಷ್ಟವಾದ ವಿಷಯವಾಗಿ ನನ್ನೊಡನೆ ವಾಗ್ವಾದ ಮಾಡಬಹುದು ಈ ಒಡ್ಡೋಲಗದಲ್ಲಿ. ಆದರೆ ತಾವು ನನ್ನಿಂದ ಈ ದಿನ ಪರಾಜಿತರಾಗುವುದು ಖಂಡಿತ. ಆದುದರಿಂದ ತಮ್ಮಲ್ಲಿ ಕರುಣೆಯನ್ನಿಟ್ಟು ಹೇಳುತ್ತೇನೆ, ಕೇಳಿರಿ: ತಮಗಷ್ಟು ಹೆಮ್ಮೆ ಬೇಡ" ಎಂದನು.

ಪಂಡಿತ.—ನೀನೇ ನನ್ನನ್ನು ಸೋಲಿಸುವಾತ! ಸರಿ, ಹಾಗಾದರೆ ನಾಯಿಯು ಚಂದ್ರನನ್ನು ಹಿಡಿಯಬಹುದಲ್ಲವೆ! ಬುದ್ಧಿಯಿಲ್ಲದ ಶಿಶು ನೀನು!"

ಯಾಮುನ.—ತಮ್ಮಂತೆಯೇ ಗರ್ವದಿಂದುಬ್ಬಿದ್ದ ವಂದಿಯನ್ನು ಸೋಲಿಸಿ ಅವನನ್ನು ನೀರಿನೊಳಕ್ಕೆ ನೂಕಿದ ಅಷ್ಟಾವಕ್ರನು ಬುದ್ಧಿವಿಹೀನನಾದ ಶಿಶುವಾಗಿದ್ದನಲ್ಲವೆ! ಆ ಕಥೆ ತಮಗೆ ಗೊತ್ತೋ? ಅದು ಜ್ಞಾಪಕವಿರುವುದೋ? ಏನು ಮಹಾಶಯರೆ? ಅಪ್ಪಣೆಯಾಗಲಿ.

ಪಂಡಿತ.—ಇದೆಂತಹ ದಿಟ್ಟತನದ ಹುಡುಗ! ನಿನಗೆ ಅಕ್ಷರಾಭ್ಯಾಸವಾಗಿದೆಯೋ? ನಿನಗೆ ಓದು ಬರುವುದೋ? ತಪ್ಪಿಲ್ಲದೆ ನಿನ್ನ ಹೆಸರನ್ನು ಬರೆಯಬಲ್ಲೆಯಾ ನೀನು? ನೀನೆಂದರೇನು? ನಮ್ಮೊಡನೆ ವಾಗ್ವಾದ ಮಾಡುವುದೆಂದರೇನು? ಹಾಗಾದರೆ ಮಾರ್ಜಾಲವು ಮೃಗರಾಜನನ್ನು ಇನ್ನು ಸುಲಭವಾಗಿ ಸೋಲಿಸಬಹುದಷ್ಟೆ!

ಯಾಮುನ.—ಒಂದು ಹುಲ್ಲಿನ ಮೆದೆಯನ್ನು ಸುಟ್ಟು ಬೂದಿ ಮಾಡುವುದಕ್ಕೆ ಬೆಂಕಿಯ ಒಂದೇ ಒಂದು ಕಿಡಿ ಸಾಕಲ್ಲವೆ! ಸಿಂಹಕುಟ್ಟಿಯು ಆನೆಯನ್ನು ಕೊಲ್ಲಬಲ್ಲುದಲ್ಲವೆ! ಬೆಟ್ಟವನ್ನು ಒಡೆದು ಪುಡಿ ಮಾಡುವುದಕ್ಕೆ ಸಣ್ಣದೊಂದು ಉಳಿಯು ಸಾಲದೆ? ಒಂದು ಮಡಕೆಯ ಹಾಲು ಒಡೆದುಹೋಗುವುದಕ್ಕೆ ಬೇಕಾದ ಮಜ್ಜಿಗೆ ಎಷ್ಟು? ಒಂದು ತೊಟ್ಟು! ಸಾವಿರ ಮಂದಿಯನ್ನು ಕೊಲ್ಲಬಲ್ಲುದು ಸಾಸಿವೆಯ ಕಾಳಿನಷ್ಟು ವಿಷವು. ಸಮುದ್ರವನ್ನು ಪಾನಮಾಡಿದ ಅಗಸ್ತ್ಯನು ಉದ್ದನೋ ಗಿಡ್ಡನೋ? ಮನುಷ್ಯರ ಯೋಗ್ಯತೆಯನ್ನು ಅವರ ವಯಸ್ಸಿನಿಂದ ಪರೀಕ್ಷೆ ಮಾಡುವುದನ್ನಲ್ಲವೇ ತಾವು ಕಂಡಿರುವುದು? ತಾವು ಪಂಡಿತರೆಂದು ಜನರು ಹೇಳುತ್ತಿರುವುದುಂಟು. ಇನ್ನು ಕಾರ್ಯಕ್ಕಾರಂಭಿಸೋಣ.

ತರುವಾಯ ಪಂಡಿತನು ತರ್ಕ ವ್ಯಾಕರಣ ಮುಂತಾದ ಶಾಸ್ತ್ರಗಳಲ್ಲಿ ಯೋಗ್ಯತೆಯನ್ನು ಪರೀಕ್ಷಿಸತಕ್ಕ ನಾನಾ ಪ್ರಶ್ನೆಗಳನ್ನು ಹುಡುಕಿ ತೆಗೆದು ಅವನಿಗೆ ಹಾಕಿ ಆತನು ತನಗೆ ಮೀರಿದವನೆಂಬುದನ್ನರಿತು, "ನೀನಿನ್ನೂ ಕೂಸು, ಆದುದರಿಂದ ಶಾಸ್ತ್ರ ವಿಷಯವಾದ ಗಹನ ಪ್ರಶ್ನೆಗಳನ್ನು ಕೇಳಿ ನಿನ್ನನ್ನು ತೊಂದರೆಪಡಿಸಲು ನನಗಿಷ್ಟವಿಲ್ಲ. ಹಾಗೆ ಮಾಡುವುದು ಗುಬ್ಬಚ್ಚಿಯ ತಲೆಯಮೇಲೆ ತೆಂಗಿನಕಾಯನ್ನು ಹೊರಿಸಿದಂತೆ ಅನ್ಯಾಯವಾಗುವುದು. ಆದಕಾರಣ ನಾನು ಆ ಕಾರ್ಯದಲ್ಲಿ ಪ್ರವೃತ್ತಿಸುವುದಿಲ್ಲ. ನೀನೇ ಪ್ರಶ್ನೆಗಳನ್ನು ಕೇಳು, ನಾನು ಅವುಗಳಿಗೆ ಉತ್ತರಗಳನ್ನು ಕೊಡುವೆನು" ಎಂದನು. ಒಡನೆಯೇ ಯಾಮುನನು ಇದರಿಂದ ತನ್ನ ಪ್ರತಿವಾದಿಗಿಂತಲೂ ತನ್ನ ಕೈ ಮೇಲಾದುದನ್ನರಿತು, "ಎಂತಹ ಕೃಪೆ ತಮ್ಮದು! ಎಷ್ಟು ದಯಾಳುಗಳು ತಾವು! ಆದರೆ ತರುಣದಲ್ಲಿಯೇ ಈ ಪ್ರಕಾರ ಹೇಳುವ ವಿವೇಕವಿರಲಿಲ್ಲ ತಮಗೆ. ತಾವು ಹಾಗೆ ಮಾಡಿದ್ದಲ್ಲಿ ನನಗಾಗಿ ಪ್ರಶ್ನೆಗಳನ್ನು ಹುಡುಕಿ ತೆಗೆಯುವ ತೊಂದರೆಯು ತಮಗಿರುತ್ತಿರಲಿಲ್ಲ. ಅಲ್ಲದೆ, ಅವುಗಳಿಗೆ ನಾನು ಒಡನೆಯೇ ಕೊಟ್ಟ ಉತ್ತರಗಳಿಂದ ತಮಗುಂಟಾದ ಮಾನಹಾನಿಗೂ ಅವಕಾಶವಾಗುತ್ತಿರಲಿಲ್ಲ. ಆದರೆ ಚಿಂತೆಯಿಲ್ಲ; ತಮ್ಮ ಇಷ್ಟದಂತೆ ಸಂತೋಷದಿಂದ ನಡೆಯುವೆನು.

ನಾನು ಮೂರು ವಚನಗಳನ್ನು ಹೇಳುವೆನು. ಅವುಗಳನ್ನು ತಾವು ನಿಷೇಧಿಸಲು ಶಕ್ತರಾದರೆ ಗೆಲವು ತಮ್ಮದೆಂದೂ ಸೋಲು ನನ್ನದೆಂದೂ ಒಪ್ಪಿಕೊಳ್ಳುತ್ತೇನೆ. ಹಾಗಿಲ್ಲದ ಪಕ್ಷಕ್ಕೆ, ತಾವು ಸೋತಿರೆಂದು ಒಪ್ಪಿಕೊಳ್ಳಬೇಕು. ಈ ಕರಾರಿಗೆ ತಾವು ಒಪ್ಪುವಿರಾ?'' ಎಂದನು. ಆ ನಿಯಮವು ನ್ಯಾಯವಾದುದೆಂದೂ, ಅದು ಪಂಡಿತ ನಿಗೂ ಹಿತಕರವಾದುದೆಂದೂ ರಾಜನು ಹೇಳಲು, ಪಂಡಿತನೂ ಅದಕ್ಕೊಪ್ಪಿದನು. ಆದರೆ ಪ್ರಶ್ನೆಗಳು ರಾಮಬಾಣದಂತೆ ಹೊರಡಲು, ಪಂಡಿತನ ಆಶ್ಚರ್ಯವನ್ನು ಏನೆಂದು ಬಣ್ಣಿಸುವಾ!

ಮೊದಲನೆಯ ಪ್ರಶ್ನೆ.—''ಹೇ! ಪಂಡಿತ ಮಹಾಶಯರೇ! ತಮ್ಮ ತಾಯಿಯು ಬಂಜೆಯಲ್ಲವೆಂದು ನಾವು ಹೇಳುತ್ತೇವೆ. ಇದನ್ನು ತಾವು ನಿಷೇಧಿಸಬಲ್ಲಿರಾ?''

ಪಂಡಿತನು ವಿಷಯವನ್ನು ಕುರಿತು ದೀರ್ಘಾಲೋಚನೆ ಮಾಡಿದರೂ ಅದನ್ನು ನಿಷೇಧಿಸುವ ಉಪಾಯವು ಆತನಿಗೆ ಹೊಳೆಯಲಿಲ್ಲ. ''ನನ್ನ ತಾಯಿ ಬಂಜೆಯೇ? ಹಾಗಾದರೆ ನಾನು ಹುಟ್ಟಿದುದು ಹೇಗೆ? ವಚನವನ್ನು ನಿಷೇಧಿಸಿದರೆ ಇಲ್ಲಿ ನೆರೆದಿರು ವವರೆಲ್ಲರ ಅಪಹಾಸ್ಯಕ್ಕೆ ಗುರಿಯಾಗುವೆನು. ಆದುದರಿಂದ ಮೌನವಾಗಿರುವುದೇ ಮೇಲು'' ಎಂದು ಸುಮ್ಮನಿದ್ದನು. ಆದರೆ ಆತನ ಮುಖವು ಇಳಿಯಬಿದ್ದು ನಾಚಿಕೆ ಯಿಂದ ಅವನು ತಲೆಯನ್ನು ತಗ್ಗಿಸಿದನು. ''ಏತಕ್ಕಾಗಿ ಉತ್ತರವನ್ನು ಕೊಡದೆ ಇರುವಿರಿ?'' ಎಂದು ಯಾಮುನಾಚಾರ್ಯನು ಕೇಳಿದುದಕ್ಕೆ, ಪಂಡಿತನು ಬಾಯನ್ನು ತೆಗೆಯಲೇ ಇಲ್ಲ. ಆಗ ಅಲ್ಲಿ ನೆರೆದಿದ್ದ ನಾನಾ ಗೋತ್ರದ ಸಭ್ಯರು, ರಾಜ ಸಭೆ ಯಾದುದರಿಂದ, ತಮ್ಮ ಶ್ಲಾಘನೆಯನ್ನು ಬಹಿರಂಗಪಡಿಸದೆ ಒಳೊಳಗೆಯೇ 'ಭಲೆ! ಭಲೆ!' ಎಂದು ಕೊಂಡಾಡಿ ತಲೆದೂಗಿದರು.

ಎರಡನೆಯ ಪ್ರಶ್ನೆ.—''ಈ ನಮ್ಮ ದೊರೆಯು ಶಿಷ್ಟನೆಂದು ಹೇಳುತ್ತೇನೆ. ತಮ್ಮ ಕೈಯಲ್ಲಾದರೆ ಅದನ್ನು ನಿಷೇಧಿಸಿರಿ ನೋಡೋಣ'' ಎಂದನು ಯಾಮುನಾ ಚಾರ್ಯನು. ಇದನ್ನು ಕೇಳಿ, ಪಾಪ! ಕೋಲಾಹಲನು ಬೆರಗಾಗಿ ಬೆಚ್ಚಿಬಿದ್ದನು. ರಾಜನು ದುಷ್ಟನೆಂದು ಎಲ್ಲಾದರೂ ಹೇಳುವುದುಂಟೇ? ಅದೂ ಅವನ ಸನ್ನಿಧಾನ ದಲ್ಲಿ! ನಿಶ್ಚಯವಾಗಿಯೂ ಈ ಹಾಳು ಹುಡುಗನು ನನ್ನ ಅವತಾರ ಪೂರ್ತಿಗಾಗಿ ಬಲು ಒಳ್ಳೆಯ ಉಪಾಯವನ್ನು ಹುಡುಕಿರುವನಲ್ಲಾ! ಅಯ್ಯೋ ದೈವವೇ! ಸುಮ್ಮನಿದ್ದರೆ ಪರಾಜಿತನಾಗುವೆನು ನಾನು; ಉತ್ತರ ಕೊಟ್ಟೆನಾದರೆ ಅರಸನ ಕತ್ತಿಯು ಒಡನೆಯೇ ಎರಗುವುದು ನನ್ನ ಕತ್ತಿನ ಮೇಲೆ. ಇದೇನು ಗ್ರಹಚಾರ ನನ್ನದು! ಇನ್ನೂ ಒಂದು ಪ್ರಶ್ನೆ ಮೂರನೆಯದು ಇರುವುದಷ್ಟೆ! ಕನಿಷ್ಠಪಕ್ಷ ಅದಕ್ಕಾದರೂ ಉತ್ತರ ಕೊಡಲಾರೆನೇ ನೋಡುವ!'' ಎಂದು ಮನದಲ್ಲಿ ಚಿಂತಿಸಿ, ಸುಮ್ಮನಿದ್ದನು ಮಾತನಾಡದೆ. ರಾಜಪತ್ನಿಯ ಮುಖವು ಸಂತೋಷದಿಂದ ಅರಳಿತಾಗ; ಪ್ರೇಕ್ಷಕರು ತಮ್ಮ ಸಂತೋಷವನ್ನೂ ಶ್ಲಾಘನೆಯನ್ನೂ ಸರಿಯಾದ ರೀತಿಯಲ್ಲಿ ತೋರ್ಪಡಿಸಿದರು ಆ ಸಮಯಕ್ಕೆ ತಕ್ಕಂತೆ.

ತರುವಾಯ, ಮೂರನೆಯದಾದ ಕೊನೆಯ ಪ್ರಶ್ನೆಯು ಬಂದಿತು: ''ರಾಣಿಯು ಶುದ್ಧಳೆಂದು ಹೇಳುತ್ತೇನೆ. ತಮಗೆ ಯೋಗ್ಯತೆ ಇದ್ದರೆ ನಿಷೇಧಿಸಿರಿ''

ಎಂದನಾ ಹುಡುಗ ಯಾಮುನನು. ಇದನ್ನು ಕೇಳುತ್ತಲೆ ಸಿಡಿಲು ಬಡಿದಂತಾಯಿತು ಕೋಲಾಹಲನಿಗೆ. ಇನ್ನು ತಾನು ಕೆಟ್ಟೆನೆಂಬುದನ್ನರಿತು, ಎಷ್ಟೋ ಮಂದಿ ಘನ ವಿದ್ವಾಂಸರನ್ನು ವಾದದಲ್ಲಿ ಸೋಲಿಸಿ ಅವರಿಗೆ ಅವಮಾನ ಮಾಡಿ, ಅವರ ಬಿರುದುಗಳನ್ನೂ ಮರ್ಯಾದೆಗಳನ್ನೂ ಕಸುಕೊಂಡಿದ್ದ ತಾನು ಈ ಪಾಠಶಾಲೆಯ ವಿದ್ಯಾರ್ಥಿಯಾದ ಸಣ್ಣ ಚಿಳ್ಳೆಯಿಂದ ಪರಾಜಿತನಾಗುವುದಕ್ಕೆ ಎಡೆಗೊಟ್ಟೆನಲ್ಲಾ ಎಂದು ಲಜ್ಜೆಗೊಂಡು ತಲೆಯನ್ನು ತಗ್ಗಿಸಿದನಾ ಕೋಲಾಹಲನು. "ನಿಷೇಧಿಸಲಾಗದ ಎಷ್ಟೋ ವಚನಗಳು ಉಂಟೆಂಬ ಸುಲಭ ವಿಷಯವನ್ನು ತಿಳಿಯದೆ ಎಂತಹ ವಚನವನ್ನಾದರೂ ನಿಷೇಧಿಸಲು ದುಡುಕಿ ಒಪ್ಪಿಕೊಂಡುದು ಎಂತಹ ಹುಚ್ಚುತನದ ಕೆಲಸ! ಅಪ್ಪಪ್ಪ! ಅವೆಂತಹ ಪ್ರಶ್ನೆಗಳು! ಈಗ ನನ್ನನ್ನು ಸೋಲಿಸಿ ನೆಲಕ್ಕೆ ಮೆಟ್ಟಿರುವ ಈ ಕುಚೋದ್ಯದ ಹುಡುಗನಲ್ಲದೆ ಮತ್ತಾರು ತಾನೇ ಅಂತಹ ಪ್ರಶ್ನೆಗಳನ್ನು ಕೇಳಿಯಾರು? ನನ್ನಿಂದಲೇ ನಾನು ಕೆಟ್ಟೆನು. ಪಾಠಶಾಲೆಯ ವಿದ್ಯಾರ್ಥಿಯೊಡನೆ ವಾದ ಮಾಡುವುದು ನನಗೆ ಅಗೌರವವೆಂದು ನಾನೇಕೆ ಹಠ ಹಿಡಿಯಲಿಲ್ಲವೋ! ಈಗ ಆ ಹುಡುಗನೊಡನೆ ಸರಿ ಸಮಾನನಾಗಿ ಕುಳಿತುಕೊಳ್ಳುವುದಕ್ಕೆ ಕೂಡ ನಾನು ಅನರ್ಹನೆಂಬುದನ್ನು ಈ ಘಟನೆಯು ವ್ಯಕ್ತಪಡಿಸಿದೆ. ನಾನು ಮಾಡಬೇಕಾದುದು ಇನ್ನೇನೂ ಇಲ್ಲ; ಆಸನದಿಂದೆದ್ದು ಆಸ್ಥಾನ ಪಂಡಿತನ ಬಿರುದು ಮರ್ಯಾದೆಗಳನ್ನು ಆ ಹುಡುಗನಿಗೊಪ್ಪಿಸಿ ಆತನ ಕಾಲುಗಳಿಗೆರಗುವುದೊಂದೇ ಉಳಿದಿರುವುದು" ಎಂಬುದಾಗಿ ಅಂತರಂಗದಲ್ಲಿ ಬಗೆದು, ಪಂಡಿತನಿಗೆ ಹಾಗೆಯೇ ಆಗಬೇಕೆಂದು ನಿರೀಕ್ಷಿಸುತ್ತ ಅಲ್ಲಿ ನೆರೆದಿದ್ದ ಪ್ರೇಕ್ಷಕರ ಗುಂಪಿನ ನಗು ಅಪಹಾಸ್ಯಗಳ ಮಧ್ಯದಲ್ಲಿ ತನ್ನ ಪರಾಭವವನ್ನು ಮಾತಿಲ್ಲದೆ ಸಾರುವ ಚಿತ್ರಪಟದಂತೆ ನಿಂತುಕೊಂಡನು. ರಾಣಿಯು ಯಾಮುನನನ್ನು ಒಡನೆಯೇ ತನ್ನ ಬಳಿಗೆ ಬರಹೇಳಿ ಆತನ ತಾಯಿಯಂತೆ ಆತನನ್ನು ಅಪ್ಪಿಕೊಂಡು ಮುತ್ತಿಟ್ಟು, "ನೀನು ಯಥಾರ್ಥವಾಗಿಯೂ ಆಳವಂದಾರ್ (ಎಂದರೆ, ಆಳುವುದಕ್ಕೆ ಬಂದವನು)" ಎಂದಳು. ಅಂದಿನಿಂದ ಆತನಿಗೆ "ಆಳವಂದಾರ್" ಎಂಬ ಹೆಸರು ನಿಂತಿತು.

ರಾಜನಾದರೋ, ಆಸ್ಥಾನ ಪಂಡಿತ, ಪದಚ್ಯುತನಾದ ಕೋಲಾಹಲನ ದುರವಸ್ಥೆಯನ್ನು ನೋಡಿ ಮರುಕಗೊಂಡು ಆಳವಂದಾರನನ್ನು ಸಂಬೋಧಿಸಿ, "ಇಂದು ನಿನಗೆ ಜಯವಾಗಿರುವುದೇನೋ ದಿಟ. ನೀನು ಬಾಲಪ್ರೌಢ. ಯಥಾರ್ಥವಾಗಿಯೂ ನೀನೊಬ್ಬ ಅವತಾರ ಪುರುಷನೇ ಸರಿ. ನಿನ್ನ ಜಯವನ್ನು ನೋಡಿ ನನಗೆ ಪರಮಾನಂದ. ಆದರೆ ನೀನು ನುಡಿದ ಮೂರು ವಚನಗಳಲ್ಲಿ ಒಂದನ್ನಾದರೂ ನಿಷೇಧಿಸಬಲ್ಲೆಯಾ?" ಎಂದು ಕೇಳಲು, ಯಾಮುನನು ಪ್ರಶಾಂತನಾಗಿ, "ಮೂರನ್ನೂ ನಿಷೇಧಿಸಬಲ್ಲೆನು" ಎಂದು ಉತ್ತರವಿತ್ತನು. ಆಗ ರಾಜನಿಗೆ ಅತ್ಯಂತಾಶ್ಚರ್ಯವುಂಟಾಗಿ, "ಅದು ಹೇಗೆ?" ಎಂದು ಆತನು ಪ್ರಶ್ನೆ ಮಾಡಿದನು.

ಆಳವಂದಾರ್.—ಮೊದಲನೆಯದು: "ಒಂದು ಮರ ತೋಟವಲ್ಲ, ಒಂದು ಮಗು ಮಗುವಲ್ಲ" ಎಂಬ ಎಲ್ಲರಿಗೂ ತಿಳಿದ ನಾಣ್ಣುಡಿಗನುಸಾರವಾಗಿ ಪಂಡಿತನ ತಾಯಿಯು ಬಂಜೆ. ಪಂಡಿತನ ತಾಯಿಗೆ ಈತನೊಬ್ಬನೇ ಮಗನಿರುವುದು ಆಕೆಗೆ ಮಕ್ಕಳಿಲ್ಲದಂತೆಯೇ. ಆದುದರಿಂದ ಆಕೆಯು ಗೊಡ್ಡಿ.

ಎರಡನೆಯದು : "ರಾಜಾ ರಾಷ್ಟ್ರಕೃತಂ ಪಾಪಂ" ಎಂದರೆ, ಪ್ರಜೆಗಳ ಪಾಪಗಳು ರಾಜನಿಗೆ ಅಂಟುವುವು ಎಂಬ ನೀತಿವಾಕ್ಯಾನುಸಾರವಾಗಿ ರಾಜನು ಶಿಷ್ಟನಲ್ಲ.

ಮೂರನೆಯದು : ರಾಣಿಯು ಶುದ್ಧಳಲ್ಲ; ಏಕೆಂದರೆ, ಇತರ ಭಾರತೀಯ ಸ್ತ್ರೀಯರಂತೆ ವಿವಾಹ ಕಾಲದಲ್ಲಿ ಆಕೆಯು ಮೊದಲು ಅಗ್ನಿ ವರುಣ ಮೊದಲಾದ ದೇವತೆಗಳಿಗೆ ಅರ್ಪಿತಳಾಗಿದ್ದಾಳೆ.

ಈ ಉತ್ತರಗಳನ್ನು ಕೇಳಿದ ರಾಜನಿಗೆ ಬಹಳವಾದ ಆಶ್ಚರ್ಯವೂ ಸಂತೋಷವೂ ಉಂಟಾಗಿ, ಆತನು ಒಡನೆಯೇ ತನ್ನ ಪಟ್ಟಮಹಿಷಿಗೆ ತಾನು ಹಿಂದೆ ಮಾತು ಕೊಟ್ಟಿದ್ದಂತೆ, ಆಳವಂದಾರನನ್ನು ತನ್ನ ರಾಜ್ಯದಲ್ಲಿ ಒಂದು ದೊಡ್ಡ ಭಾಗಕ್ಕೆ ರಾಜನನ್ನಾಗಿ ನಿಯಮಿಸಿ, ಬಡ ಕೋಲಾಹಲನನ್ನು ಅವನ ವಶ ಮಾಡಿದನು. ಆಳವಂದಾರನು ರಾಜ್ಯ ಸ್ವೀಕಾರ ಮಾಡಿ ಕೋಲಾಹಲನನ್ನು ಬಿಟ್ಟುಬಿಟ್ಟನು.

ಆಳವಂದಾರನು ಅಷ್ಟು ತರುಣ ವಯಸ್ಕನಾಗಿದ್ದರೂ ಅದ್ಭುತ ಗಾಂಭೀರ್ಯದಿಂದಲೂ ನ್ಯಾಯದಿಂದಲೂ ರಾಜ್ಯವನ್ನಾಳುತ್ತ ತನ್ನ ಪ್ರಜೆಗಳ ಪ್ರೀತಿಗೆ ಅಧಿಕವಾಗಿ ಪಾತ್ರನಾದನು. ಈ ಪ್ರಕಾರ ಅನೇಕ ಸಂವತ್ಸರಗಳು ಕಳೆದುಹೋಗುತ್ತಿರುವಲ್ಲಿ, ಅಸಂಖ್ಯಾತ ಚತುರ ವಿದ್ವಾಂಸೇತರರ, ವಿವೇಕ ರಾಜರುಗಳ ಹೆಸರುಗಳಿಗೆ ಪ್ರಾಪ್ತವಾಗಿರುವ ಅಳಿವಿಗೊಳಗಾಗದಂತೆ ಈತನ ಹೆಸರನ್ನು ಶಾಶ್ವತಗೊಳಿಸುವ ಘಟನೆಯೊಂದು ಸಂಭವಿಸಿತು. ಅದು ಹಿಂದೆ ಈತನಿಗೆ ರಾಜ ಪದವಿಯನ್ನಿತ್ತ ಘಟನೆಗಿಂತಲೂ ಕಾಲ್ಪನಿಕ ಕಥಾ ಲಕ್ಷಣಾಧಿಕ್ಯವನ್ನುಳ್ಳದಾಗಿಯೂ, ಫಲಿತಾಂಶದಲ್ಲಿ ಅದಕ್ಕಿಂತಲೂ ಪ್ರಾಧಾನ್ಯಾಧಿಕ್ಯವನುಳ್ಳದಾಗಿಯೂ ಇದ್ದುದರಿಂದ, ಅದನ್ನು ಸ್ವಲ್ಪ ವಿಸ್ತಾರವಾಗಿ ವರ್ಣಿಸಲು ಅದು ಅರ್ಹವು.—

ಆಳವಂದಾರರಿಗೆ ಸುಮಾರು ಮೂವತ್ತೈದನೆಯ ವಯಸ್ಸಿನಲ್ಲಿ, ರಾಮಮಿಶ್ರ, ಅಥವಾ ಮಣಕ್ಕಾಲ್ ನಂಬಿ ಎಂಬ ನಾಮಧೇಯವುಳ್ಳ ವೃದ್ಧ ಬ್ರಾಹ್ಮಣನೊರ್ವನು ರಾಜ ಸಂದರ್ಶನಾರ್ಥವಾಗಿ ಬಂದನು. ಆದರೆ, ತಾನು ಕಡು ಬಡವನಾದುದರಿಂದ, ರಾಜನು ತನ್ನನ್ನು ಆದರದಿಂದ ಕಾಣನೆಂಬುದನ್ನರಿತು, ಸಾಮಾನ್ಯವಾಗಿ ಎಲ್ಲರಿಗೂ ರಾಜನ ಭೇಟಿಯಾಗುವಂತೆ ತನಗೂ ಆದರೆ ತಾನು ರಾಜನಿಗೆ ತಿಳಿಸಬೇಕೆಂದಿದ್ದ ಸಂದೇಶವನ್ನು ಅದಕ್ಕೆ ಯೋಗ್ಯವಾದ ಗೌರವದಿಂದ ಆತನು ಸ್ವೀಕರಿಸನೆಂದು ಬಗೆದು, ರಾಜ ಸನ್ನಿಧಾನಕ್ಕೆ ಹೋಗಲು ವಿಚಿತ್ರವಾದೊಂದುಪಾಯವನ್ನು ಹೂಡಿದನು: ಅರಮನೆಯ ಅಡುಗೆಯ ಮನೆಯ ಪಾರುಪತ್ಯಗಾರನನ್ನು ಹಿಡಿದು ಆತನ ಗೆಳೆತನವನ್ನು ಸಂಪಾದಿಸಿ, ತಾನೊಂದು ಬಗೆಯ ಶಾಕವನ್ನು (ತರಕಾರಿಯನ್ನು) ಪ್ರತಿ ನಿತ್ಯವೂ ತಂದುಕೊಡುವೆನೆಂದೂ, ಆ ಸೊಪ್ಪನ್ನು ಬೇಯಿಸಿ ಅರಸನಿಗೆ ಬಡಿಸಬೇಕೆಂದೂ ಆತನನ್ನು ಕೇಳಿಕೊಂಡನು. ಈ ಶಾಕವು ಸಾತ್ವಿಕ ಸ್ವಭಾವವುಳ್ಳದಾಗಿ ಶೈತ್ಯ ಗುಣವುಳ್ಳ ಮೂಲಿಕೆಯಾಗಿರುವುದರಿಂದ ಅದು ಯೋಗಿಗಳಿಗೆ ಪ್ರಿಯವು. ಈ ಮೇರೆಗೆ ನಂಬಿಯು ಪ್ರತಿ ದಿನವೂ ತಪ್ಪದೆ ತಂದುಕೊಡುತ್ತಿದ್ದ ಶಾಕವನ್ನು ಅಡಿಗೆ ಮಾಡಿ ರಾಜನಿಗೆ ಬಡಿಸುತ್ತಿದ್ದರು ಪರಿಚಾರಕರು. ಕೆಲವು ತಿಂಗಳು ಕಳೆದು ಆಳವಂದಾರ್

ಅರಸನಿಗೆ ಈ ಶಾಕವನ್ನು ಭುಂಜಿಸುವುದು ಅಭ್ಯಾಸವಾಗಲು, ಒಂದು ದಿನ ನಂಬಿಯು ಆ ಶಾಕವನ್ನು ಬುದ್ಧಿಪೂರ್ವಕವಾಗಿ ಅರಮನೆಗೆ ತಂದುಕೊಡದೆ ನಿಂತುಬಿಟ್ಟನು. ಆ ದಿವಸ ತಟ್ಟೆಗೆ ಅದನ್ನು ಬಡಿಸಲಿಲ್ಲವಾದ ಕಾರಣ, ಅರಸನು ಅಡುಗೆಯವನನ್ನು ಆ ಶಾಕವನ್ನೇಕೆ ಬಡಿಸಲಿಲ್ಲವೆಂದು ಕೇಳಿದುದಕ್ಕೆ, ನಂಬಿಯು ಹೂಡಿದ್ದ ಉಪಾಯವು ಅಡುಗೆಯವನಿಗೆ ತಿಳಿದಿರಲಿಲ್ಲವಾದುದರಿಂದ, ಅವನು "ಆ ಬ್ರಾಹ್ಮಣನು ಈ ದಿನ ಅದನ್ನು ತಂದುಕೊಡಲಿಲ್ಲ" ಎಂದು ಅರಿಕೆ ಮಾಡಿದನು. ಆಳವಂದಾರನು ಬೆರಗಾಗಿ "ಆ ಬ್ರಾಹ್ಮಣನೆ! ಆತನಾರು?" ಎಂದು ವಿಚಾರಿಸಿದುದಕ್ಕೆ ಬಡ ಬ್ರಾಹ್ಮಣನೊರ್ವನು ಅದನ್ನು ಪ್ರತಿ ನಿತ್ಯವೂ ತಂದುಕೊಡುತ್ತಿದ್ದನೆಂದೂ, ಆ ದಿವಸ ತಂದುಕೊಡಲಿಲ್ಲವೆಂದೂ ತಿಳಿಸಲು, ಆತನು ಮರಳಿ ಬಂದಾಗ ಆತನನ್ನು ತನ್ನ ಸನ್ನಿಧಾನಕ್ಕೆ ಕಳುಹಿಸಬೇಕೆಂದು ಕಟ್ಟುಮಾಡಿದನು. ಮರು ದಿವಸ ನಂಬಿಯು ಆ ಶಾಕವನ್ನು ತಂದುಕೊಡಲು, ಆತನು ನಿರೀಕ್ಷಿಸಿದ್ದಂತೆ ಆತನನ್ನು ಪರಿಚಾರಕರು ರಾಜನ ಬಳಿಗೆ ಕರೆದುಕೊಂಡು ಹೋದರು.

ನಂಬಿಯು ರಾಜನನ್ನು ಸಮೀಪಿಸಿದಾಗ ಆಳವಂದಾರನಿಗೆ ಏನೋ ವಿಚಿತ್ರವಾದ ವಿಕಾರವುಂಟಾಗಿ ತಾವಿರ್ವರೂ ದೀರ್ಘ ಕಾಲ ಸ್ನೇಹಿತರಾಗಿದ್ದಂತೆ ಮನಸ್ಸಿನಲ್ಲಿ ವೇದನೆ ಯುಂಟಾಯಿತು. ರಾಜನು ಆಸನದಿಂದೆದ್ದು ನಂಬಿಯನ್ನು ಆದರ ಪೂರ್ವಕವಾಗಿ ಬರಮಾಡಿಕೊಂಡು, ಆ ಶಾಕವನ್ನು ಅರಮನೆಗೆ ತಂದುಕೊಡುತ್ತಿದ್ದ ಉದ್ದೇಶ ವೇನೆಂದು ವಿಚಾರಿಸಿ, ತನ್ನಿಂದೇನಾದರೂ ಅನುಗ್ರಹವಾಗಬೇಕಾಗಿದ್ದಲ್ಲಿ ಅದನ್ನು ತಿಳಿಸಬಹುದೆಂದು ಸೂಚಿಸಿದನು. ನಂಬಿಯು, "ಅಹುದು ಮಹಾಸ್ವಾಮಿ! ತಮ್ಮಿಂದ ಅನುಗ್ರಹೀತನಾಗಬೇಕು ನಾನು; ಅದೇನೆಂದರೆ, ಸಕಾಲದಲ್ಲಿ ತಮ ಗೊಪ್ಪಿಸಬೇಕೆಂದು ತಮ್ಮ ತಾತಂದಿರು ನನಗೆ ಆಜ್ಞೆ ಮಾಡಿ ನನ್ನ ವಶಕ್ಕೆ ಕೊಟ್ಟಿರುವ ರಹಸ್ಯ ನಿಧಿಯೊಂದನ್ನು ತಾವು ದಯೆಯಿಟ್ಟು ಸ್ವೀಕರಿಸಿ ನನ್ನನ್ನು ಅನುಗ್ರಹಿಸಬೇಕು. ಆ ನಿಧಿಯನ್ನು ತಾವು ಸ್ವೀಕರಿಸಿ ನನ್ನನ್ನು ನ್ಯಾಸ ಭಾರ ಮುಕ್ತನನ್ನಾಗಿ ಮಾಡ ಬೇಕೆಂದು ಕೇಳಿಕೊಳ್ಳುವುದಕ್ಕಾಗಿ ತಮ್ಮ ಸನ್ನಿಧಾನಕ್ಕೆ ಬಂದಿದ್ದೇನೆ" ಎಂದು ಅರಿಕೆ ಮಾಡಿದನು. ಆಳವಂದಾರನಿಗೆ ಆ ಮಾತು ನಿಶ್ಚಯವಾಗಿರಬೇಕೆಂದು ತೋರಿತು; ಏಕೆಂದರೆ, ತನ್ನ ತಾತನಾದ ನಾಥಮುನಿಸ್ವಾಮಿಯು ಆತನ ಕಾಲದ ಅತ್ಯಂತ ಖ್ಯಾತಿವಂತರಲ್ಲೊಬ್ಬನಾಗಿದ್ದನು; ಅಲ್ಲದೆ, ತನ್ನಲ್ಲಿ ಆತನಿಗೆ ವಿಶೇಷ ಪ್ರೀತಿ. ಸ್ವಾಮಿಯು ಕಾಲವಾದಾಗ ಆಳವಂದಾರನು ಇನ್ನೂ ಕೂಸಾಗಿದ್ದನು. ಆದುದ ರಿಂದ, ಆತನು ಮಹತ್ತಾದ ಪಿತೃವ್ಯವನ್ನು (ಆಸ್ತಿಯನ್ನು) ರಹಸ್ಯವಾದ ಸ್ಥಳದಲ್ಲಿ ಬಚ್ಚಿಟ್ಟು ಅದನ್ನು ತಾನು ಪ್ರಾಪ್ತ ವಯಸ್ಕನಾಗಲು, ತನ್ನ ವಶಕ್ಕೊಪ್ಪಿಸಬೇಕೆಂಬ ಏರ್ಪಾಡನ್ನು ಮಾಡಿರಬಹುದೆಂದು ಆಳವಂದಾರನಿಗೆ ತೋರಿತು; ಅಲ್ಲದೆ, ತನ್ನ ನೆರೆ ಯವನೊರ್ವ ರಾಜನ ಮೇಲೆ ದಂಡೆತ್ತಿ ಹೋಗಬೇಕಾಗಿದ್ದುದರಿಂದ ಆತನಿಗೆ ಹಣವು ಬೇಕಾಗಿದ್ದಿತು. ಈ ಕಾರಣಗಳಿಂದ, ಆಳವಂದಾರನು ನಂಬಿಯನ್ನು ಆ ನಿಧಿಯಿರುವ ಸ್ಥಳವಾವುದೆಂದೂ, ಅದನ್ನು ತಾನು ಪಡೆಯುವ ಬಗೆ ಹೇಗೆಂದೂ ಆತುರದಿಂದ ಕೇಳಿದನು. ಆಗ ನಂಬಿಯು, "ತಾವು ನನ್ನೊಡನೆ ದಯಮಾಡಿಸಿದರೆ ಅದನ್ನು

ತೆಮಗೆ ತೋರಿಸುವೆನು. ಅದು ಎರಡು ನದಿಗಳ ಮಧ್ಯೇ ಸಪ್ತ ಪ್ರಾಕಾರಗಳೊಳಗಿರುತ್ತದೆ; ಮಹಾ ಸರ್ಪವೊಂದು ಅದರ ಮೇಲೆ ಕಾವಲು. ದಕ್ಷಿಣ ಸಮುದ್ರದಿಂದ ಹನ್ನೆರಡು ವರ್ಷಕ್ಕೊಮ್ಮೆ ರಾಕ್ಷಸನೊರ್ವನು ಅದರ ದರ್ಶನಕ್ಕಾಗಿ ಬರುತ್ತಾನೆ. ಮಂತ್ರ ಪೂರ್ವಕವಾಗಿ ಆ ನಿಧಿಯನ್ನು ಅಲ್ಲಿಟ್ಟಿದೆ. ಆ ರಹಸ್ಯ ಮಂತ್ರದ ಮೂಲಕವಾಗಿಯೂ, ಅಪೂರ್ವ ಗುಣಗಳುಳ್ಳ ವಿಶೇಷವಾದೊಂದು ಮೂಲಿಕೆಯ ಸಹಾಯದಿಂದಲೂ ಮಾತ್ರವೇ ಅದನ್ನು ಪಡೆಯಲಾದೀತಲ್ಲದೆ, ಸಾಮಾನ್ಯ ನಿಧಿಗಳಂತೆ ಪಶುಬಲಿಗಳಿಂದ ಆಗತಕ್ಕುದಲ್ಲ. ಅದೊಂದು ಅತಿ ಮಹತ್ತಾದ ನಿಧಿ. ಅದರ ಲಾಭದಿಂದ ಈ ಭೂಮಂಡಲದಲ್ಲಿರತಕ್ಕ ಇತರ ರಾಜರುಗಳೆಲ್ಲರಿಗಿಂತಲೂ ತಾವು ಹೆಚ್ಚಾಗಿ ಸಿರಿವಂತರಾಗುವಿರಲ್ಲದೆ, ಅದರ ಪ್ರಾಪ್ತಿಯಿಂದ ತಮ್ಮ ಶತ್ರುಗಳೆಲ್ಲರನ್ನೂ ತಾವು ಸುಲಭವಾಗಿ ಜಯಿಸಲು ಶಕ್ತರಾಗುವಿರಿ. ತಮ್ಮನ್ನು ಯಾವನೂ ಸೋಲಿಸಲಾರನು. ತಮ್ಮ ಸುವಿಖ್ಯಾತ ಪಿತಾಮಹನಾದ ನಾಥಮುನಿಸ್ವಾಮಿಗೆ ತಮ್ಮಲ್ಲಿದ್ದ ಪ್ರೇಮದಿಂದ ತಮಗೆ ಬಿಟ್ಟಿರುವ ದೊಡ್ಡ ಆಸ್ತಿ ಅದು. ದಯೆಯಿಟ್ಟು ಅದನ್ನು ಸ್ವೀಕರಿಸಿ ಈ ನನ್ನ ಭಾರವನ್ನು ಇಳಿಸಬೇಕೆಂಬುದೇ ನನ್ನ ಬಿನ್ನಹ'' ಎಂದನು. ಆಗ ಆಳವಂದಾರನು, ''ಆ ನಿಧಿಯು ಅಷ್ಟು ಅಮೂಲ್ಯವಾದುದೇ? ಅಷ್ಟು ಮಹತ್ತಾದುದೇ? ಹಾಗಿದ್ದಲ್ಲಿ ನನ್ನ ತಾತನು ಎಂತಹ ಸತ್ಪುರುಷ! ಅದನ್ನು ಅಪಹರಿಸಿ ನೀವೇ ಇಟ್ಟುಕೊಳ್ಳದೆ ಅದನ್ನು ನನಗಾಗಿ ಪಾಲಿಸಿದ ನೀವು ಎಂತಹ ಸತ್ಪುರುಷರು! ಇಗೋ ನೋಡಿರಿ! ಒಡನೆಯೇ ನನ್ನ ಸೈನ್ಯದೊಡನೆ ಪ್ರಯಾಣ ಹೊರಡುವೆನು'' ಎಂದು ನುಡಿದನು. ಅದನ್ನು ಕೇಳಿ ನಂಬಿಯು, ''ತಾವೆಷ್ಟು ಬೇಗನೆ ಹೊರಟರೆ ಅಷ್ಟು ಮೇಲು; ಆದರೆ, ತಾವು ಮಾತ್ರ ಒಂಟಿಯಾಗಿ ಬರಬೇಕು; ತಮ್ಮ ತಾತನ ಆಜ್ಞೆಯೇ ಹಾಗೆ'' ಎನ್ನಲು, ಆಳವಂದಾರನು, ''ಹಾಗೆಯೇ ಆಗಲಿ'' ಎಂದು ಮಾತುಕೊಟ್ಟು, ತಾನಿಲ್ಲದ ಸಮಯದಲ್ಲಿ ತನ್ನ ರಾಜ್ಯ ಪರಿಪಾಲನೆಗೆ ತಕ್ಕ ಏರ್ಪಾಡುಗಳನ್ನು ಮಾಡಿಟ್ಟು, ಮರು ದಿನವೇ ನಂಬಿಯ ಜೊತೆಯಲ್ಲಿ ಹೊರಟನು.

ನಂಬಿಯು ಆಳವಂದಾರನನ್ನು ಮಧುರೆಯಿಂದ ಬಲು ದೂರ ಕರೆದೊಯ್ದು, ಭೋಜನ ಕಾಲ ಸಮೀಪಿಸಲು, ಪಾರಾಯಣಕ್ಕಾಗಿ ತಾನಿಟ್ಟುಕೊಂಡಿದ್ದ ಭಗವದ್ಗೀತೆಯ ಪ್ರತಿಯನ್ನು ಹೊರಗೆ ತೆಗೆದು, ಅದರಲ್ಲಿ 'ರಾಜ ವಿದ್ಯಾ ರಾಜ ಗುಹ್ಯಂ' ಎಂಬ ಒಂಬತ್ತನೆಯ ಅಧ್ಯಾಯವನ್ನು ಪಾರಾಯಣ ಮಾಡಿದನು. ಆಳವಂದಾರನು ಅದನ್ನು ಸಮಾಧಾನ ಚಿತ್ತನಾಗಿ ಶ್ರವಣ ಮಾಡಿ, ಭೋಜನಾನಂತರ ತನಗೆ ಗೀತೋಪದೇಶವಾಗಬೇಕೆಂದು ನಂಬಿಯನ್ನು ಬೇಡಿಕೊಂಡನು. ಏಕೆಂದರೆ, ಆ ಹಿಂದಣ ಕಾಲದಲ್ಲಿ ಯೋಗ್ಯನಾದ ಗುರು ಮುಖೇನ ಮಾತ್ರವೇ ಗೀತಾಧ್ಯಯನವಾಗಬೇಕೆಂಬ ಕಠೋರ ನಿಯಮವಿದ್ದಿತು. ಯಾವವುಗಳ ದ್ವಾರಾ ತಪ್ಪು ತಿಳಿವಳಿಕೆಯನ್ನು ಪಡೆಯುವುದು ಈಗಣ ಕಾಲದಲ್ಲಿ ಸುಲಭವೋ ಅಂತಹ ಲೆಕ್ಕವಿಲ್ಲದ ಗೀತಾ ಪರಿವರ್ತನಗಳು ಆಗ ಇರಲಿಲ್ಲ. ಉಪನಿಷತ್ತುಗಳೂ ವೇದಾಂತ ಸೂತ್ರಗಳೂ, ಗೀತಾ—ಇವುಗಳನ್ನು ಯೋಗ್ಯ ಗುರು ಚರಣಗಳಲ್ಲಲ್ಲದೆ ಅಧ್ಯಯನ ಮಾಡುವುದು ದೇವ ನಿಂದೆಯೆಂಬುದು ಆಗಿನ ಎಣಿಕೆ.

ದಿವ್ಯ ರಹಸ್ಯವನ್ನೊಳಕೊಂಡಿರುವ ಈ ಪವಿತ್ರ ಗ್ರಂಥಗಳ ಸಹಾನುಭೂತಿ ರಹಿತವಾದ, ವಿಮಾರ್ಗ ದರ್ಶಕವಾದ ಆಧುನಿಕ ಪರಿವರ್ತನಗಳನ್ನು ಓದುವ ಮಹಾಶಯರು ಮೇಲಣ ಅಭಿಪ್ರಾಯವನ್ನು ಜರೆಯಬಹುದು. ಆದರೆ, ಆಳವಂದಾರರ ಕಾಲದಲ್ಲಿ ವಿದ್ಯಾರ್ಥಿಗಳ ಆಕಾಂಕ್ಷೆಯು ಜ್ಞಾನಾರ್ಜನೆಯಾಗಿದ್ದಿತೇ ವಿನಾ ಅಜ್ಞಾನ ಸಂಪಾದನೆಯಾಗಿರಲಿಲ್ಲ. ಆದುದರಿಂದ, ದೊರೆಯು ಗೀತೆಯ ಪರಮ ರಹಸ್ಯ ಜ್ಞಾನವನ್ನು ತನಗುಪದೇಶ ಮಾಡಬೇಕೆಂದು ನಂಬಿಯನ್ನು ಕೇಳಿಕೊಳ್ಳಲು, ಆತನು ಒಡನೆಯೇ 'ತಥಾಸ್ತು' ಎಂದನು. ಗೀತಾಧ್ಯಯನವು ಕ್ರಮವಾಗಿ ಪ್ರಾರಂಭವಾದುದೇ ತಡ, ಆತನ ಪೂರ್ವ ಜನ್ಮ ಸಂಸ್ಕಾರ ಸಂಚಯ ಪರಿಪಾಕದ ದ್ವಾರಾ, ಮಾನುಷ ಸಾಧಾರಣ ಜೀವನದ ಕ್ಷುದ್ರತೆಯೂ ಸಂಗ್ರಾಮವೂ ಇಲ್ಲದೆ ವಿಶಾಲತರ ಆಕಾಶ ಯುಕ್ತವಾದ, ದಿವ್ಯತರ ವಾಯುಸಮೇತವಾದ ನವ ಪ್ರಪಂಚದಲ್ಲಿ ತಾನು ಕಾಲಿಟ್ಟು ಉಸುರಾಡಿಸುವಂತೆ ಆತನಿಗೆ ಅನುಭವವಾಯಿತು. ಆಗ "ನನ್ನ ಮನೆ ನನ್ನಿನಿ ಮನೆ"ಯು ಇಂದ್ರಿಯ ಪ್ರಪಂಚವಾದ ಕಾರಾ ಗೃಹದಿಂದ ದೂರ, ಬಲು ದೂರದಲ್ಲಿರುವುದೆಂಬ ಅರಿವು ಹೊಳೆಯಿತು. ಗೀತೆಯ ದ್ವಿತೀಯಾಧ್ಯಾಯದ ಈ ಶ್ಲೋಕಗಳಿಗೆ ಬಂದಾಗ—

ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।
ಉಭಯೋರಪಿ ದೃಷ್ಟೋಽನ್ತಸ್ತ್ವನಯೋಸ್ತತ್ತ್ವದರ್ಶಿಭಿಃ ॥ (೧)

[ಇಲ್ಲದೆಯಿರುವುದಕ್ಕೆ ಇರುವಿಕೆಯಿಲ್ಲ; ಇರುವುದಕ್ಕೆ ಇಲ್ಲದಿರುವಿಕೆಯಿಲ್ಲ; ಇವೆರಡರ ನಿಶ್ಚಯವನ್ನು ತತ್ತ್ವವೇತ್ತರು ಮನಗಂಡಿರುವರು.]

ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ।
ನ ಚೈನಂ ಕ್ಲೇದಯನ್ತ್ಯಾಪೋ ನ ಶೋಷಯತಿ ಮಾರುತಃ ॥ (೨)

[ಈ ಆತ್ಮನನ್ನು ಆಯುಧಗಳು ಛೇದಿಸವು; ಈ ಆತ್ಮನನ್ನು ಅಗ್ನಿಯು ದಹಿಸದು; ಈ ಆತ್ಮನನ್ನು ನೀರು ನೆನೆಯಿಸದು; ಈ ಆತ್ಮನನ್ನು ವಾಯುವು ಒಣಗಿಸದು.]

ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ ।
ನಿತ್ಯಸ್ಸರ್ವಗತಸ್ಸ್ಥಾಣುರಚಲೋಽಯಂ ಸನಾತನಃ ॥ (೩)

[ಈ ಆತ್ಮನನ್ನು ಛೇದಿಸಲಾಗುವುದಿಲ್ಲ, ಸುಡಲಾಗುವುದಿಲ್ಲ, ನೆನೆಯಿಸಲಾಗುವುದಿಲ್ಲ, ಒಣಗಿಸಲಾಗುವುದಿಲ್ಲ. ಈ ಆತ್ಮನು ಎಲ್ಲವನ್ನೂ ವ್ಯಾಪಿಸಿರುವನು; ಸ್ಥಿರಭಾವವುಳ್ಳವನು, ಚಲಿಸದವನು, ಅನಾದಿಯಾದವನು.]

ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮುಚ್ಯತೇ ।
ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಸಿ ॥ (೪)

[ಈ ಆತ್ಮನು ವ್ಯಕ್ತನಾಗಿ ಕಾಣತಕ್ಕವನಲ್ಲ: ಇವನು ಚಿಂತಿಸಲರ್ಹನಾಗುವುದಿಲ್ಲ; ಇವನು ವಿಕಾರವನ್ನು ಹೊಂದದವನು—ಈ ಪ್ರಕಾರವಾಗಿ ಹೇಳಲ್ಪಡುತ್ತಾನೆ. ಆದುದರಿಂದ, ಈ ಪ್ರಕಾರವಾಗಿ ಈ ಆತ್ಮನನ್ನು ತಿಳಿದು ದುಃಖಪಡಲು ಯೋಗ್ಯನಾಗಲಾರೆ.]

ತಾನು ದೀರ್ಘ ಕಾಲದಿಂದ ಮರೆತಿದ್ದ ಯಾವುದೋ ಒಂದು ವಿಷಯವು ಆಳ ವಂದಾರನಿಗೆ ಜ್ಞಾಪಕಕ್ಕೆ ಬಂದಹಾಗಾಯಿತು. ಈ ಶ್ಲೋಕಗಳು ತನ್ನ ಹಳೆಯ ಗೆಳೆಯರೆಂಬುದು ತೋರಿ, ತನಗೆ ವಿಶೇಷ ಪರಿಚಯವಿದ್ದ ವಿಷಯವೊಂದು ಜ್ಞಾಪಕಕ್ಕೆ ಬರಲು, ಆತನಿಗೆ ದುಃಖವುಂಟಾಯಿತು. ಏಕೆಂದರೆ, ಅದನ್ನು ಬಹು ಕಾಲ ಮರೆತಿದ್ದ ನಲ್ಲದೆ ನಿತ್ಯವೂ, ಸರ್ವಗತವೂ, ಅಚಲವೂ, ಸ್ಥಿರವೂ ಆದ ತನ್ನಲ್ಲಿರುವ ನಿತ್ಯಾತ್ಮನನ್ನು ಬಿಟ್ಟು, ಈ ಜೀವನದ ಕ್ಷಣಭಂಗುರವಾದ ಕ್ಷುಲ್ಲಕ ಪದಾರ್ಥಗಳನ್ನು ಎದೆಗಪ್ಪಿ ಕೊಂಡು, ಈ ನೀಚ ಭೂಮಿಯಲ್ಲಿ ಒಂದು ಕ್ಷುದ್ರ ರಾಜ್ಯಕ್ಕಾಗಿ ದೇವ ರಾಜ್ಯವನ್ನು ತೊರೆದಿದ್ದನಲ್ಲವೇ! ತಾನು ಧರಿಸಿದ್ದ ಅಮೂಲ್ಯ ವಸ್ತ್ರಗಳೂ, ತನ್ನ ದೇಹವನ್ನಲಂ ಕರಿಸಿದ್ದ ಆಭರಣಗಳೂ ನೀರ್ಗುಳ್ಳೆಗಳಂತೆಯೂ ಅಸತ್ತಾಗಿಯೂ ತೋರಲು, ಅವು ಗಳನ್ನು ಕಳಚಿ ಬೀಸಾಡಿ, ದಿವ್ಯಜ್ಞಾನದ ಪರಮ ರಹಸ್ಯವನ್ನು ತನಗುಪದೇಶಿಸ ಬೇಕೆಂದು ಆಳವಂದಾರನು ನಂಬಿಯ ಪಾದಗಳಿಗೆ ಸಾಷ್ಟಾಂಗವೆರಗಿದನು; ತನ್ನ ತಾತನು ತನಗಾಗಿ ಬಿಟ್ಟಿದ್ದ ನಿಧಿಯು ಎಷ್ಟು ಮಹತ್ತಾದುದಾಗಿಯೂ ಎಷ್ಟು ಅಮೂಲ್ಯವಾದುದಾಗಿಯೂ ಇದ್ದರೂ ತನಗೆ ಇನ್ನದು ಬೇಡವೆಂದು ತಿಳಿಸಿದನು. ಏಕೆಂದರೆ, ಮುಂದೆ ತನ್ನ ರಾಜ್ಯಕ್ಕೆ ಹಿಂದಿರುಗದೆ ತನ್ನ ಹೃದ್ಗುಹೆಯಲ್ಲಿಯೇ ಹುದುಗಿ ಕೊಂಡಿರುವ ಶಾಶ್ವತ ನಿಧಿಯನ್ನು ಹುಡುಕಿ ತೆಗೆಯಲು ಭಿಕ್ಷುಕ ಜೀವನವನ್ನು ನಡೆಯಿಸುವೆನೆಂದು ಸಂಕಲ್ಪ ಮಾಡಿಕೊಂಡನು. ಈ ಶ್ರದ್ಧೆಯನ್ನೂ ಉತ್ಸಾಹವನ್ನೂ ನೋಡಿದ ನಂಬಿಯು ಅವುಗಳನ್ನು ಕೊಂಡಾಡಿ ಈ ಪ್ರಕಾರ ನುಡಿದನು: "ಎಲೈ ರಾಜನೇ! ಆಶೆಗಳ ಸಂಪೂರ್ಣ ತ್ಯಾಗವೇ ಸಂನ್ಯಾಸ; ಆದರೆ ನಿನ್ನ ಸಂಪತ್ತನ್ನೂ ರಾಜ್ಯವನ್ನೂ ಬಿಟ್ಟು ಕಳೆಯುವುದರಿಂದ ನೀನು ಸಂನ್ಯಾಸ ಮಾಡಿದಂತಾಗದು. ಏಕೆಂದರೆ, ತಿರುಕನಾಗಬೇಕೆಂಬ ಆಸೆಯು ನಿನಗಿನ್ನೂ ಇರುವುದಷ್ಟೆ! ನಿನ್ನ ಹೊರ ನೋಟವು ಈಗಿರುವಂತೆಯೇ ಇರಲಿ; ಆದರೆ ನಿನ್ನ ಮನಸ್ಸು ಮಾತ್ರ ಯಾವುದಕ್ಕೂ ಅಂಟದೆ ಇರಲಿ; ಇದೀಗ ಸಂನ್ಯಾಸದ ಗುಟ್ಟು. ಇನ್ನೂ ಹೇಳುತ್ತೇನೆ ಕೇಳು: ನಿನ್ನ ತಾತನು ನಿನಗಾಗಿ ಬಿಟ್ಟಿರುವ ಆಸ್ತಿಯನ್ನು ತಿರಸ್ಕರಿಸಬೇಡ; ಏಕೆಂದರೆ, ಅದು ನಿನ್ನ ಮೇಲಣ ಪ್ರೀತಿಯಿಂದ ನಿನಗಾಗಿ ಬಿಟ್ಟುದು. ಆದರೆ, ಅದರ ಸ್ವೀಕಾರಕ್ಕೆ ಮುಂಚೆ ನಿನಗಿಷ್ಟವಿದ್ದಲ್ಲಿ ನಾವಿಲ್ಲಿಯೇ ಕೊಂಚ ಕಾಲ ವಾಸವಾಗಿದ್ದು, ಗೀತಾ ಧ್ಯಯನವನ್ನು ಮುಗಿಸಿಕೊಂಡು, ನಿಧಿಯ ಮುಖವಾಗಿ ತೆರಳೋಣ." ಆಳವಂದಾ ರನು ಪ್ರತಿ ಮಾತಿಲ್ಲದೆ ಒಡನೆಯೇ ಇದಕ್ಕೆ ಒಪ್ಪಲು, ಗೀತಾಧ್ಯಯನವು ಕೊನೆಯ ವರೆಗೆ ಸಾವಕಾಶವಾಗಿ ನಡೆಯಿತು.

ಗೀತಾಧ್ಯಯನವು ಮುಗಿಯುವುದರೊಳಗಾಗಿ ಆಳವಂದಾರನ ಮನಸ್ಸು ಅದರ ಉಪದೇಶ ಸಾರದಿಂದ ತುಂಬಿಹೋಯಿತು. ಆತನು ಮಾಡಿದುದೇನು! ತಿಂದುದೇನು! ಆತನ ಯಜ್ಞಾರ್ಪಣವೇನು! ಕೊಟ್ಟ ದಾನವೇನು! ಆಚರಿಸಿದ ತಪವೇನು! ಇವೆಲ್ಲವನ್ನೂ ಆತನು ಭಗವದರ್ಪಣ ಮಾಡಿದುವೇ! ಇತರರ ಸುಖ ದುಃಖಗಳು ತನ್ನ ವಂತೆಯೇ ತೋರಿದುವು ಆತನ ದೃಷ್ಟಿಗೆ. ಏಕೆಂದರೆ, ಎಲ್ಲವನ್ನು ತನ್ನಲ್ಲಿಯೂ, ತನ್ನನ್ನು ಎಲ್ಲವುಗಳಲ್ಲಿಯೂ ನೋಡಿದನಾತನು.—

ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ॥
ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥

(ಗೀತಾ ಅ. ೯, ಶ್ಲೋ. ೨೬)

[ನೀನು ಶ್ರದ್ಧೆಯಿಂದರ್ಪಿಸಿದ ಒಂದು ಪತ್ರವಾಗಲಿ, ಒಂದು ಹೂ ಆಗಲಿ, ಒಂದು ಫಲವಾಗಲಿ, ನೀರಾಗಲಿ ಅದನ್ನು ನಾನು ಸ್ವೀಕರಿಸುತ್ತೇನೆ. ಏಕೆಂದರೆ, ಅವು ಶುದ್ಧಾತ್ಮರ ಶ್ರದ್ಧಾನ್ವಿತ ಅರ್ಪಣವು.]

ಈ ಸಾಕ್ಷಾದ್ಭಗವದ್ವಚನಗಳಿಂದ ಆತನ ಮನಸ್ಸು ಒಂದು ನೂತನ ಆಕಾಂಕ್ಷೆಯಿಂದ ತುಂಬಿದುದಾಗಿ, ಕೆಳಗೆ ನಿರೂಪಿತವಾಗಿರುವ ಶ್ಲೋಕಗಳಲ್ಲಿ ವ್ಯಕ್ತವಾಗಿರುವ ಭಗವಾನ್ ವಾಸುದೇವನ ಮಾತುಗಳ ಸತ್ಯವನ್ನು ತಾನು ಸಾಕ್ಷಾತ್ಕಾರ ಮಾಡಿಕೊಳ್ಳಲು ಆತನು ತೊಡಗಿದನು :—

ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ ।
ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ॥

(ಗೀತಾ ಅ. ೧೨, ಶ್ಲೋ. ೮)

[ನಿನ್ನ ಮನಸ್ಸನ್ನು ನನ್ನಲ್ಲಿ ನೆಡು; ನನ್ನಲ್ಲಿ ನಿನ್ನ ಬುದ್ಧಿಯನ್ನಿಡು; ಮುಂದೆ ನೀನು ನಿಸ್ಸಂದೇಹವಾಗಿಯೂ ನನ್ನಲ್ಲಿಯೇ ಜೀವಿಸುವೆ.]

ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।
ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥

(ಗೀತಾ ಅ. ೧೮, ಶ್ಲೋ. ೬೫)

[ನಿನ್ನ ಮನಸ್ಸು ನನ್ನಲ್ಲಿ ಉದ್ಯುಕ್ತವಾಗಿರಲಿ; ನನ್ನಲ್ಲಿ ಶ್ರದ್ಧೆಯಿರಲಿ; ನನಗಾಗಿ ಯಜ್ಞ ಮಾಡು; ನನಗೆರಗು; ನನ್ನನ್ನೇ ಹೊಂದುವೆ. ಯಥಾರ್ಥವಾಗಿ ನಿನಗೆ ಹೇಳುತ್ತೇನೆ: ನೀನು ನನಗೆ ಪ್ರಿಯನು.]

ಗೀತಾಧ್ಯಯನವು ಮುಗಿದನಂತರ ನಂಬಿಯು ತನ್ನ ಶಿಷ್ಯನಿಗೆ, ಇನ್ನು ನಿಧಿಯ ಸಂಪಾದನೆಗಾಗಿ ತನ್ನೊಡನೆ ಹೊರಡಬೇಕೆಂದು ಸೂಚಿಸಲು, ಅದಕ್ಕಾತನು ಅರೆ ಮನಸ್ಸಿನಿಂದ ಒಪ್ಪಿ, ತನ್ನ ಗುರುವಿನ ಜೊತೆಯಲ್ಲಿ ನಿಧಿಯನ್ನರಸುತ್ತ ಹೊರಟನು. ಆತನಿಗೆ ಈಗ ಸಂಪತ್ತಿನ ಮೇಲಣ (ಅದೆಷ್ಟೇ ದೊಡ್ಡದಾಗಿದ್ದರೂ) ಮೋಹವು ಬಿಟ್ಟು ಹೋಗಿದ್ದಿತು. ನಂಬಿಯು ಆತನನ್ನು ಅನೇಕ ಬ್ರಾಹ್ಮಣ ಅಗ್ರಹಾರಗಳ ಮಧ್ಯೇ ಒಯ್ದು, ಕಾವೇರಿಯನ್ನು ದಾಟಿ, ಶ್ರೀರಂಗದ ದೇವಾಲಯದೊಳಕ್ಕೆ ಕರೆದುಕೊಂಡು ಹೋಗಿ, ಗರ್ಭ ಗುಡಿಯಲ್ಲಿ ಪವಡಿಸಿರುವ ಶ್ರೀರಂಗನಾಥ ಸ್ವಾಮಿಯ ಬೃಹನ್ಮೂರ್ತಿಯನ್ನು ತೋರಿಸುತ್ತ, "ಅಗೋ ನೋಡು! ನಿನ್ನ ತಾತನು ನಿನಗೆ ಬಿಟ್ಟಿರುವ ಮಹಾ ನಿಧಿಯು ಅದು; ಅದನ್ನು ಭದ್ರವಾಗಿ ಹಿಡಿದುಕೊಂಡು ನನ್ನ ಭಾರವನ್ನು ಇಳಿಸು" ಎಂದನು. ಆಳವಂದಾರನು ಆಶ್ಚರ್ಯ ಚಕಿತನಾಗಿ ಮೂಕನಾದನಾಗ. ನಿಧಿಗಳಲ್ಲೆಲ್ಲ ಶ್ರೇಷ್ಠತಮವಾದ ಈ ನಿಧಿಯನ್ನು ತನ್ನ ತಾತನು ತನಗೆ ಬಿಟ್ಟಿದ್ದನೆಂಬುದು ಕೊಂಚವೂ ತಿಳಿಯದು ಆತನಿಗೆ. ಕ್ಷಣಮಾತ್ರದಲ್ಲಿಯೇ ಚೇತರಿಸಿಕೊಂಡು ಆಳವಂದಾರನು ತನ್ನ ತಾತನ ಕೃಪಾ ಪ್ರೇಮಗಳನ್ನು ಕೊಂಡಾಡಲು ಮಾತು ಹೊರಡದೆ, ನಂಬಿಯ ಪಾದಗಳಲ್ಲಿ ಅಡಿಗಡಿಗೆರಗುತ್ತ, ಅವುಗಳನ್ನು ಆನಂದ ಬಾಷ್ಪಗಳಿಂದ

ತೋರಿಸುತ್ತ, ತನ್ನ ಗುರುವಿಗೆ ತನ್ನ ಕೃತಜ್ಞತೆಯನ್ನು ತೋರ್ಪಡಿಸಿದನು. ತರುವಾಯ, ಶ್ರೀ ರಂಗನಾಥ ಮೂರ್ತಿಯನ್ನು ದಿಟ್ಟಿಸಿ, "ಎಲೈ ದೇವಾದಿದೇವ! ದೇವರ ದೇವ! ಮಹಾ ದೇವ! ನನ್ನ ತಾತನ ವಶದಲ್ಲಿದ್ದೆ ನೀನು; ಈಗ ಆತನು ನಿನ್ನನ್ನು ನನ್ನ ವಶಕ್ಕೊಪ್ಪಿಸಿರುವನಾದ ಕಾರಣ, ಇನ್ನು ನೀನು ನನ್ನವನು, ನನಗೆ ಸೇರಿದವನು. ನೀನು ನನ್ನ ತಾತನ ದೇವರು, ನನ್ನ ಕುಲ ದೇವರು, ನನ್ನ ದೇವರು. ಕೊನೆಗೆ, ನಿನ್ನನ್ನು ಕಂಡುಹಿಡಿದಿದ್ದೇನೆ, ಇನ್ನು ನಿನ್ನನ್ನು ಬಿಡೆನು. ಆಹಾ! ನನ್ನ ತಾತನು ನನಗೆ ಕೊಟ್ಟಿರುವುದು ಎಂತಹ ನಿಧಿ! ಅದರ ವಿಷಯವಾಗಿ, 'ಅದು ಅತ್ಯಂತ ಮಹತ್ತಾದ ನಿಧಿಯು; ಅದರ ಲಾಭದಿಂದ ಈ ಭೂಮಿಯಲ್ಲಿರುವ ಇತರ ರಾಜರುಗಳೆಲ್ಲರಿಗಿಂತಲೂ ಅಧಿಕವಾದ ಐಶ್ವರ್ಯವಂತನಾಗುವೆ' ಎಂದು ನನ್ನ ಗುರು ನಂಬಿಯು ನುಡಿದುದು ಎಷ್ಟು ಸತ್ಯ! ಆಹಾ! ಅದೆಷ್ಟು ದೊಡ್ಡದು! ಅದು ದೇಶ ಕಾಲಾತೀತವಾದುದು, ಅಖಂಡವಾದುದು, ಅಪಾರವಾದುದು. ಎಲೈ ನಿಧಿಯೇ! ನಿನ್ನ ಲಾಭದಿಂದ ಸರ್ವ ಲಾಭವಾಗುವುದೆನಗೆ; ಏಕೆಂದರೆ, ನಿನ್ನಲ್ಲಿ ಅಡಗಿರುವುದು ಸಕಲವೂ. ನಿನ್ನನ್ನರಿಯುವುದರಿಂದ ಉಳಿದುದೆಲ್ಲವನ್ನೂ ಅರಿಯುವುದಕ್ಕಿಂತ ಹೆಚ್ಚು ಪ್ರಯೋಜನವು; 'ಅದರ ಪ್ರಾಪ್ತಿಯಿಂದ ನಿನ್ನ ಶತ್ರುಗಳನ್ನು ಜಯಿಸುವೆ, ನಿನ್ನನ್ನಾರೂ ಸೋಲಿಸರು' ಎಂದು ನಂಬಿಯು ನುಡಿದ ಮಾತುಗಳು ಎಷ್ಟು ಯಥಾರ್ಥವು! ನನ್ನ ಶತ್ರುಗಳಾದ ಕಾಮ ಕ್ರೋಧ ಲೋಭ ಮೋಹ ಮುಂತಾದುವುಗಳು ನಿನ್ನ ದರ್ಶನ ಮಾತ್ರದಿಂದಲೇ ನಶಿಸಿಹೋಗುವುವು; ನನ್ನನ್ನು ಯಾರೂ ಸೋಲಿಸರು. ಏಕೆಂದರೆ, ಆ ಪುರಾಣ ಮುನಿ ವಾಮದೇವನು ಗಾಯನ ಮಾಡಿರುವಂತೆ, 'ನಾನೇ ಮನು, ನಾನೇ ಸೂರ್ಯ, ಎಲ್ಲದರಲ್ಲಿಯೂ ಇರುವ ಆತ್ಮನೇ ನಾನು,' 'ಅದು ಎರಡು ನದಿಗಳ ಮಧ್ಯದಲ್ಲಿ ಸಪ್ತ ಪ್ರಾಕಾರಗಳ ನಡುವೆ ಇರುವುದು. ಮಹಾ ಸರ್ಪವೊಂದು ಅದಕ್ಕೆ ಕಾವಲು. ಹನ್ನೆರಡು ವರ್ಷಗಳಿಗೊಮ್ಮೆ ರಾಕ್ಷಸನೊರ್ವನು ಅದರ ದರುಶನಕ್ಕಾಗಿ ಬಂದು ಹೋಗುವನು' ಎಂದು ಕಾವ್ಯ ರಸವು ಸೂಸುವಂತೆ ನಂಬಿಯು ಅದನ್ನು ವರ್ಣಿಸಿದನಲ್ಲವೆ! ಕಾವೇರೀ ಕೊಳ್ಳಿಡ—ಇವುಗಳ ಮಧ್ಯೇ ನೀನು ಶಯನ ಮಾಡಿಕೊಂಡಿದ್ದೀಯೆ! ಅಲ್ಲದೆ, ಸಂಕಲ್ಪ ವಿಕಲ್ಪಗಳೆಂಬ ಸಂತತವೂ ಹರಿಯುವ ಹೊಳೆಗಳ ಮಧ್ಯೇ ನನ್ನ ಹೃದಯದಲ್ಲಿ ಪವಡಿಸಿರುವೆ; ಸಹಸ್ರ ಶೀರ್ಷನಾದ ಆದಿಶೇಷನೇ ನಿನಗೆ ಕಾವಲು; ಹನ್ನೆರಡು ಸಂವತ್ಸರಗಳಿಗೊಮ್ಮೆ ವಿಭೀಷಣನು ನಿನ್ನಲ್ಲಿಗೆ ಬಂದುಹೋಗುತ್ತಾನೆ; ಯಥಾರ್ಥವಾಗಿಯೂ ನನ್ನೆದುರಿಗಿರುವ ಈ ನಿಧಿಯು ಮಂತ್ರ ಪೂತವಾದುದು; ಯಥಾರ್ಥವಾಗಿಯೂ ಮಂತ್ರ ಮೂಲಕವಾಗಿಯೇ ಎನಗೆ ಅದರ ಪ್ರಾಪ್ತಿ; ಧನ್ಯನಾದ ನನ್ನ ಗುರುವು ಹೇಳಿದ ಪವಿತ್ರವಾದ ಮೂಲಿಕೆ ಯಾವುದೆಂದರೆ, ನಿನಗೆ ಪರಮ ಇಷ್ಟವಾದ ತುಳಸಿ. ಎಲೈ ನಿಧಿಗಳಿಗೆಲ್ಲ ನಿಧಿಯೇ! ಇನ್ನು ನೀನು ಎಂದೆಂದಿಗೂ ನನ್ನವನು; ಹುಟ್ಟುಹಕ್ಕಿನದೆಸೆಯಿಂದ ನೀನು ನನ್ನವನು; ನಿನ್ನನ್ನು ಭದ್ರವಾಗಿ ಹಿಡಿದುಕೊಂಡು ಬಿಡೆನು" ಎಂದು ಹೇಳುತ್ತ ಮಿಂಚಿನೋಪಾದಿಯಲ್ಲಿ ಆ ಪವಿತ್ರ ಮೂರ್ತಿಯ ಮುಖವಾಗಿ ಓಡಿ, ಅದನ್ನು ಪ್ರೇಮದಿಂದ ಅಪ್ಪಿಕೊಂಡು ಮೂರ್ಛೆ

ಹೋದನು ; ದೀರ್ಘ ಕಾಲವಾದನಂತರ ಚೇತರಿಸಿಕೊಂಡು ತನ್ನ ರಕ್ಷಕನಾದ ಗುರುವನ್ನು ಸಂಬೋಧಿಸಿ, "ನನ್ನನ್ನು ಹುಡುಕಿಕೊಂಡು ಬಂದು ನಿನ್ನ ಕೃಪಾ ಛಾಯೆಯಲ್ಲಿ ನನಗೆಡೆಗೊಟ್ಟು, ಈ ಭೂಲೋಕದಲ್ಲಿ ದೇವರಿಗಿಂತಲೂ ಅತಿಶಯ ಶಾಶ್ವತವಾದ, ಅತಿಶಯ ಆವಶ್ಯಕವಾದ, ಅತಿಶಯ ಅಮೂಲ್ಯವಾದ ನಿಧಿಯು ಇಲ್ಲವೆಂದೂ, ಆ ನಿಧಿಗೆ ನನ್ನ ಹುಟ್ಟುಹಕ್ಕು ಇರುವುದೆಂದೂ ನಿಸ್ಸಂದೇಹವಾಗಿ ತೋರಿಸಿಕೊಟ್ಟುದಕ್ಕಾಗಿ ನಾನು ನಿನ್ನನ್ನು ಹೇಗೆ ತಾನೇ ಅಭಿವಂದಿಸಲಿ? ಎಲೈ ಗುರುವರ್ಯನೇ! ನನ್ನನ್ನುದ್ಧಾರ ಮಾಡುವ ಭಾರವು ನಿನ್ನದೆಂದು ನಿನ್ನನ್ನು ಹುರಿಗೊಳಿಸಿದ ನಿನ್ನ ಪ್ರೇಮದ ಮಹತ್ತ್ವವನ್ನು ಕೊಂಡಾಡಲು ನನಗೆ ಮಾತು ಬಾರದಲ್ಲಾ!" ಎಂದು ನುಡಿದನು.

ತರುವಾಯ, ಆಳವಂದಾರರು ತಮ್ಮ ರಾಜ್ಯವನ್ನು ತ್ಯಜಿಸಿ, ಉಳಿದ ಕಾಲವನ್ನು ಭಗವನ್ನಿಷ್ಠೆಯಲ್ಲಿ ಕಳೆದರೆಂಬ ಪ್ರತೀತಿ. ತಾನು ಕಾಲವಾಗಿ ಕೆಲವು ಸಂವತ್ಸರಗಳಾದ ನಂತರ, ಯಾವ ವಿಶಿಷ್ಟಾದ್ವೈತ ಮತವನ್ನಾದರೆ ಶ್ರೀ ರಾಮಾನುಜಾಚಾರ್ಯರು ಅತ್ಯಂತ ಸುಂದರವಾಗಿ ಪ್ರಕಾಶಪಡಿಸಿ ಸ್ಥಾಪಿಸಿದರೋ ಅದರ ತ್ರಯವಾದ ಚಿತ್ತು, ಅಚಿತ್ತು, ಈಶ್ವರ—ಇವುಗಳ ವಿಷಯವಾಗಿ, ಕೆಲವು ಗ್ರಂಥಗಳನ್ನು ರಚಿಸಿದರು ಆಳವಂದಾರರು. ಅವರ ಅವಸಾನ ಕಾಲದಲ್ಲಿ ಅವರು ತೀರಿಸಿಕೊಳ್ಳಲಾಗದ ಮೂರು ಆಸೆಗಳು ಅವರಿಗಿದ್ದುವಂತೆ. ಅವಕ್ಕೆ ಗುರುತಾಗಿ, ಅವರು ಕಾಲವಾದನಂತರವೂ ಅವರ ಬಲಗೈಯ ಮೂರು ಬೆರಳುಗಳು ಮುಚ್ಚಿಕೊಂಡಿದ್ದುವಂತೆ. ಅವರ ದಹನಕ್ಕೇರ್ಪಟ್ಟಿದ್ದ ಸ್ಥಳಕ್ಕೆ ಶ್ರೀ ರಾಮಾನುಜಾಚಾರ್ಯರು ಅಕಸ್ಮಾತ್ತಾಗಿ ಬರಲು, ಅವರಿಗೆ ಆಳವಂದಾರರ ಶಿಷ್ಯರು ತಮ್ಮ ಗುರುಗಳಿಗೆ ಕೈಗೂಡದಿದ್ದ ಮೂರು ಮನೋರಥಗಳನ್ನು ತಿಳಿಸಲು, ಅವುಗಳನ್ನು ತಾನು ಸಲ್ಲಿಸುವೆನೆಂದು ವಾಗ್ದಾನ ಮಾಡಿದ ಮೇಲೆ, ಆಳವಂದಾರರ ಕಳೇಬರದ ಬೆರಳುಗಳು ತೆರೆದುವೆಂಬುದು ಐತಿಹ್ಯ. ಈ ಮೂರು ಮನೋರಥಗಳು ಯಾವುವೆಂದರೆ:—(೧) ಪ್ರಸ್ಥಾನತ್ರಯವಾದ ಉಪನಿಷತ್ತುಗಳು, ವೇದಾಂತ ಸೂತ್ರಗಳು, ಗೀತಾ—ಇವುಗಳಿಗೆ ವ್ಯಾಖ್ಯಾನ ಬರೆಯುವುದು, (೨) ಪುರಾತನ ವೈಷ್ಣವ ವ್ಯಾಖ್ಯಾನಕಾರನಾದ ಪರಾಶರನ ಹೆಸರನ್ನು ಧರಿಸುವುದಕ್ಕೆ ಅರ್ಹನಾದವನಿಗೆ ಆ ನಾಮಧೇಯವನ್ನು ಕೊಡುವುದು, (೩) ನಮ್ಮಾಳ್ವಾರ್ 'ತಿರುವಾಯ್ಮೊಳಿ'ಗೆ ವ್ಯಾಖ್ಯಾನವನ್ನು ರಚಿಸುವುದು. ಕೊನೆಯದನ್ನು ಶ್ರೀ ರಾಮಾನುಜಾಚಾರ್ಯರ ಶಿಷ್ಯನೊರ್ವನು ನೆರವೇರಿಸಿದನು.

ಇಂತಹ ಮಹಾನುಭಾವರ ದಿವ್ಯ ಚರಿತ್ರೆಯ ಶ್ರವಣವಾಗಲಿ, ಮನನವಾಗಲಿ, ನಮ್ಮನ್ನು ಪುನೀತರನ್ನಾಗಿಸಗಲಿ ಎಂದು ಭಗವಂತನನ್ನು ಪ್ರಾರ್ಥಿಸುವಾ.

**ನಂ. ವೆಂಕಟೇಶ ಅಯ್ಯಂಗಾರ್, ಬಿ.ಎ.**

---

# ಜೈಮಿನಿ ಭಾರತ (ಆಶ್ವಮೇಧಿಕ ಪರ್ವ)

## * ಸಂಸ್ಕೃತ ಜೈಮಿನಿ ಭಾರತದ ಕನ್ನಡದ ಅನುವಾದ

---

### ಹತ್ತೊಂಬತ್ತನೆಯ ಅಧ್ಯಾಯ

ಬಳಿಕ ಆ ಯುದ್ಧದಲ್ಲಿ ಸುಧನ್ವನು ಗರ್ಜಿಸುತ್ತ ಸಾತ್ಯಕಿಯ ಮೇಲೆ ಎಪ್ಪತ್ತು ಬಾಣಗಳನ್ನು ಹೊಡೆದು ಅವನನ್ನು ಭೇದಿಸಲು, ಆ ಸಾತ್ಯಕಿಯು ಸುಧನ್ವನ ರಥ, ಕುದುರೆ, ಸಾರಥಿ, ಛತ್ರ, ಧ್ವಜ, ನೊಗ, ಮೂಕಿಮರ, ಗೂಡು, ಚಕ್ರಗಳು, ಗುಂಬ, ಕಡೆಯಾಣಿಗಳು—ಇವುಗಳನ್ನೆಲ್ಲ ಎಪ್ಪತ್ತೈದು ಭಲ್ಲೆಯಗಳಿಂದ ಕತ್ತರಿಸಿಹಾಕಿದನು. ಬಳಿಕ ಸುಧನ್ವನು ಸಾತ್ಯಕಿಯನ್ನು ವಿರಥನನ್ನಾಗಿ ಮಾಡಲು, ಇಬ್ಬರೂ ಬೇರೆ ರಥಗಳನ್ನೇರಿ ನಿಂತು ಅನೇಕ ಸಹಸ್ರ ಬಾಣಗಳಿಂದ ಆಕಾಶವನ್ನು ತುಂಬಿದರು. ಇಬ್ಬರೂ ಬಾಣಗಳಿಂದ ಸೀಳಿದ ದೇಹದಿಂದ ರಕ್ತ ಪ್ರವಾಹವನ್ನು ಸುರಿಸುತ್ತಿರುವವರಾಗಿ, ವಸಂತ ಕಾಲದಲ್ಲಿ ಹೂ ಬಿಟ್ಟ ಕಿಂಶುಕ ವೃಕ್ಷಗಳಂತೆ ಶೋಭಿಸುತ್ತಿದ್ದರು. ಸುಧನ್ವನು ಕೋಪಿಸಿಕೊಂಡು ಸಾತ್ಯಕಿಯ ಮೇಲೆ ಶಕ್ತ್ಯಾಯುಧವನ್ನು ಪ್ರಯೋಗಿಸಲು, ಅದರ ಹೊಡೆತದಿಂದ ಅವನು ಬಲಗುಂದಿ ಮೂರ್ಛಿತನಾದನು. ಆಗ ಬಹಳ ಹಾಹಾಕಾರವುಂಟಾಗಲು, ಸೈನ್ಯವೆಲ್ಲವೂ ಭಯದಿಂದ ಕಳವಳಿಸುತ್ತ ಹಿಮ್ಮೆಟ್ಟಿತು.

ಆಗ ಅರ್ಜುನನು, "ಎಲ್ಲಿ ಹೋಗುವೆ? ನಿಲ್ಲು" ಎಂದು ಸುಧನ್ವನನ್ನು ಕುರಿತು, "ಎಲೈ ಮಹಾ ಬಲನೇ! ನೀನು ಯುದ್ಧದಲ್ಲಿ ನಮ್ಮವರನೇಕರನ್ನು ಜಯಿಸಿದೆ. ಮಹಾತ್ಮನಾದ ಇಂದ್ರನಂತೆ ನೀನು ಮಹಾ ಬಲಶಾಲಿಯಾದವನು. ನಾನು ಪೂರ್ವದಲ್ಲಿ ದ್ರೋಣ, ಭೀಷ್ಮ, ಕೃಪ, ಕರ್ಣ, ಕಾಲಖಂಜರು, ಪರಮೇಶ್ವರ, ರಾಕ್ಷಸರು ಮೊದಲಾದವರೊಡನೆ ಬಹಳವಾಗಿ ಯುದ್ಧ ಮಾಡಿದೆನು. ಆದರೂ ನಿನ್ನನ್ನು ನೋಡಿದಷ್ಟು ಆಶ್ಚರ್ಯವು ನನಗುಂಟಾಗಲಿಲ್ಲ" ಎಂದನು. ಅದಕ್ಕೆ ಸುಧನ್ವನು, "ಎಲೈ ಅರ್ಜುನನೇ! ನೀನು ಮಾಡಿದ ಎಲ್ಲ ಯುದ್ಧಗಳಲ್ಲಿಯೂ ನಿನಗೆ ಹಿತಕರ್ತನಾದ ಶ್ರೀಕೃಷ್ಣನು ಸಾರಥಿಯಾಗಿದ್ದನು. ಈಗ ಕೃಷ್ಣನಿಲ್ಲದಿರುವುದರಿಂದ ನಿನಗೆ ಆಶ್ಚರ್ಯವು ತೋರಿತು. ಈ ನನ್ನ ಯುದ್ಧದಲ್ಲಿ ನೀನು ಶ್ರೀಕೃಷ್ಣನನ್ನು ಬಿಟ್ಟರೂ ಆತನು ನಿನ್ನನ್ನು ಹೇಗೆ ಬಿಟ್ಟನು? ನೀನು ನನ್ನೊಡನೆ ಯುದ್ಧ ಮಾಡಲು ಶಕ್ತನಾಗಿರುವೆಯೋ ಇಲ್ಲವೋ? ಹಂಸಧ್ವಜನು ನಿನ್ನ ಕುದುರೆಯನ್ನು ಯೂಪ ಸ್ತಂಭಕ್ಕೆ ಕಟ್ಟಿ ಯಥಾ ಯೋಗ್ಯವಾಗಿ ಅಶ್ವಮೇಧವನ್ನು ಮಾಡುವನು.

---

* ಕ. ಸಾ. ಪರಿಷತ್ಪತ್ರಿಕೆಯ ೧೭ನೆಯ ಸಂಪುಟದ ೩ನೆಯ ಸಂಚಿಕೆಯ ೨೫೮ನೆಯ ಪುಟದಿಂದ ಮುಂದುವರಿದುದು.

ನೀನು ಕೃಷ್ಣನೊಡನೆ ಸೇರಿ ಯುದ್ಧಕ್ಕೆ ನಿಂತರೂ ನಿನ್ನನ್ನು ನಾನು ಗೆಲ್ಲುವೆನು. ಈಗ ದೇವತೆಗಳೆಲ್ಲರೂ ನಮ್ಮಿಬ್ಬರ ಯುದ್ಧವನ್ನು ನೋಡಲಿ'' ಎಂದನು.

ಬಳಿಕ ಅರ್ಜುನನು ಕೋಪೋದ್ದೀಪಿತನಾಗಿ ನೂರಾರು ಬಾಣಗಳನ್ನು ತೊಟ್ಟನು. ಸುಧನ್ವನು ನಗುತ್ತ ಆ ದಿವ್ಯ ಬಾಣಗಳನ್ನು ಕತ್ತರಿಸಿ ಹತ್ತು ಬಾಣಗಳನ್ನು ಅರ್ಜುನನ ಮೇಲೆ ಪ್ರಯೋಗಿಸಿದನು; ಹಾಗೆಯೇ ನೂರು, ಸಾವಿರ, ಹತ್ತು ಸಾವಿರ, ಲಕ್ಷ ಸಂಖ್ಯೆಯ ಬಾಣಗಳಿಂದ ಯುದ್ಧದಲ್ಲಿ ಕುಪಿತನಾದ ಅರ್ಜುನನನ್ನು ಮುಚ್ಚಿದನು. ಅರ್ಜುನನೂ ಅವನ ಬಾಣಗಳನ್ನೆಲ್ಲ ಎಳ್ಳುಕಾಳಿನಷ್ಟು ಚೂರು ಚೂರಾಗಿ ಕಡಿದು ಪುಡಿ ಮಾಡಿ ನಾಲಗೆಯಿಂದ ಕಟವಾಯನ್ನು ಸವರಿಸಿಕೊಂಡು, ಆಗ್ನೇಯಾಸ್ತ್ರವನ್ನು ಪ್ರಯೋಗಿಸಿ ಸುಧನ್ವನ ಮೇಲೆ ಬಾಣದ ಮಳೆಯನ್ನು ಸುರಿಸಿದನು. ಆಗ ಅರ್ಜುನನ ಬಾಣಗಳಿಂದ ಆಕಾಶವು ತುಂಬಿಹೋದುದರಿಂದ ಅಲ್ಲಿ ಖಚರ ಸಂಚಾರವು ನಿಂತುಹೋಯಿತು; ಲೋಕತ್ರಯವೂ ಬಾಣಾಂಧಕಾರದಲ್ಲಿ ಬಿದ್ದು ಮುಳುಗಿತು; ಸುಧನ್ವನ ಸೈನ್ಯವು ಆಗ್ನೇಯಾಸ್ತ್ರದಿಂದ ಸುಟ್ಟುಹೋಯಿತು. ಉರಿಯನ್ನುಗುಳುತ್ತ ತನ್ನ ಸೈನ್ಯವನ್ನು ಸುಡುತ್ತಿರುವ ಬೆಂಕಿಯನ್ನು ನೋಡಿ ಸುಧನ್ವನು ಆಗ್ನೇಯಾಸ್ತ್ರ ನಿವಾರಣೆಗಾಗಿ ವಾರುಣಾಸ್ತ್ರವನ್ನು ತೆಗೆದುಕೊಂಡನು. ಅವನು ಅದನ್ನು ಧನುವಿನಲ್ಲಿ ಸಂಧಾನ ಮಾಡಿ ಬಿಡಲು, ಮೇಘಗಳು ಭೂಮಂಡಲವನ್ನೂ, ಮಿಂಚುಗಳು ಆಕಾಶವನ್ನೂ ವ್ಯಾಪಿಸಿದುವು. ಪಾಂಡವ ಬಲವು ಕಲ್ಲುಮಳೆಯಲ್ಲಿ ಮುಳುಗಿ, ಶೈತ್ಯದಿಂದ ಮೈಮರೆತು ರಣಭೂಮಿಯಲ್ಲಿ ಸುತ್ತಾಡುತ್ತಿದ್ದಿತು. ಚಾತಕಗಳಿಗೂ ನವಿಲುಗಳಿಗೂ ಬಹಳ ಆನಂದವಾಯಿತು. ಚರ್ಮವನ್ನು ಬಿಗಿದು ಮಾಡಿದ್ದ ವಾದ್ಯಗಳೆಲ್ಲವೂ ನಾಶವಾದುವು. ಚಿನ್ನದ ಸಂಪಗೆಯ ಹೂವಿನಂತಿರುವ ಶೂರರ ದೇಹಗಳಲ್ಲಿ ಧರಿಸಿದ್ದ ಮೃದುವಾದ ಬಗೆ ಬಗೆಯ ವಸ್ತ್ರಗಳು ಕಾಣಿಸದಂತಾದುವು. ನೀರು ಬಿದ್ದುದರಿಂದ ಚಾಮರಗಳೂ ಕವಚಗಳೂ ಆನೆಯ ಕುಂಭಸ್ಥಳಗಳೂ ಕಾಂತಿ ಹೀನವಾದುವು. ಬಾಣಗಳ ಗರಿಗಳುದುರಿಹೋದುದರಿಂದ ಅವು ಶತ್ರುಗಳನ್ನು ಭೇದಿಸಲಾರದೆ ಹೋದುವು. ಸೈನಿಕರು ಅತಿ ವೃಷ್ಟಿಯಿಂದ ತಮ್ಮವರನ್ನೂ ಶತ್ರುಗಳನ್ನೂ ತಿಳಿಯಲಾರದೆ ಹೋದರು. ಆಗ ಶೂರನಾದ ಅರ್ಜುನನು ವಾಯವ್ಯಾಸ್ತ್ರವನ್ನು ತೊಟ್ಟನು. ಆಗ ಬಿರುಗಾಳಿಯಿಂದ ಮೇಘಗಳೊಡೆದುಹೋದುವು; ಧ್ವಜಗಳು ಮುರಿದು ಬಿದ್ದುವು; ಆನೆ ಕುದುರೆ ಕಾಲಾಳು ಒಂಟೆ ಕತ್ತೆ—ಇವುಗಳು ಭ್ರಾಂತಿಗೊಳ್ಳುತ್ತಿದ್ದುವು. ಅಷ್ಟರಲ್ಲಿ ವೀರನಾದ ಸುಧನ್ವನು ಅರ್ಧಚಂದ್ರ ಬಾಣದಿಂದ ಅರ್ಜುನನ ಬಿಲ್ಲನ್ನೂ ಅದರ ಹುರಿಯನ್ನೂ ಕತ್ತರಿಸಿ ಮೂರು ಬಾಣಗಳಿಂದ ಅವನ ಸಾರಥಿಯನ್ನು ಹೊಡೆದು ಅವನನ್ನು ಬಾಣ ಹೀನನನ್ನಾಗಿ ಮಾಡಿ, ಕೋಪದಿಂದ ಅರ್ಜುನನನ್ನು ನೋಡಿ, "ನಿನಗೆ ಭಗವಂತನಾದ ಕೃಷ್ಣನು ಸಾರಥಿಯಾಗಿಲ್ಲ; ಸರ್ವಾಂತರ್ಯಾಮಿಯಾದ ಸಾರಥಿಯನ್ನು ಬಿಟ್ಟು ಅಲ್ಪನನ್ನು ಸಾರಥಿಯಾಗಿ ಮಾಡಿಕೊಂಡಿದ್ದೀಯೆ; ನಿನ್ನ ಪೌರುಷವು ಈಗೆಲ್ಲಿ ಹೋಯಿತು? ನನ್ನ ಬಾಣಗಳಿಂದ ನೀನು ಭಗ್ನನಾಗುವೆ. ಕೃಷ್ಣನೆಂಬ ಸಾರಥಿಯನ್ನು ಸ್ಮರಿಸು; ಇಲ್ಲದಿದ್ದರೆ ನನ್ನೆದುರಿಗೆ

ಮುರಿದುಬೀಳುವೆ" ಎಂದನು. ಅರ್ಜುನನು ಯುದ್ಧದಲ್ಲಿ ಕುದುರೆಗಳೊಡನೆ ಬಿಲ್ಲನ್ನೂ ಎಡಗೈಯಲ್ಲಿ ಸೇರಿಸಿ ಹಿಡಿದುಕೊಂಡು ಯುದ್ಧಕ್ಕಾರಂಭಿಸಿ, ಕೃಷ್ಣನನ್ನು ಸ್ಮರಿಸಿದ ಕೂಡಲೆ ಆತನು ರಥದಲ್ಲಿ ಕಾಣಿಸಿಕೊಂಡು, "ಕುದುರೆಗಳನ್ನು ಬಿಡು" ಎಂದು ಅರ್ಜುನನಿಗೆ ಹೇಳಿದನು. ಅರ್ಜುನನು, ಬಂದಿರುವ ಕೃಷ್ಣನಿಗೆ ನಮಸ್ಕರಿಸಿ ಹಗ್ಗಗಳನ್ನು ಬಿಟ್ಟು ಸಮಾಧಾನ ಚಿತ್ತನಾಗಿ ಸುಧನ್ವನ ಮೇಲೆ ಭಯಂಕರವಾದ ಬಾಣಗಳನ್ನು ಬಿಟ್ಟನು. ಅರ್ಜುನನ ರಥದಲ್ಲಿದ್ದ ಕೃಷ್ಣನನ್ನು ನೋಡಿ ಸುಧನ್ವ ನಿಂತೆಂದನು :—

"ಎಲೈ ಕೃಷ್ಣನೇ! ನೀನು ಈ ಅರ್ಜುನನಿಗಾಗಿ ಬಂದಿರುವಂತೆ ಕಾಣಿಸುತ್ತದೆ. ನೀನು ಸರ್ವವ್ಯಾಪಿಯೆಂಬುದನ್ನು ನಾನು ಬಲ್ಲೆನು." ಹೀಗೆಂದು ಹೇಳಿ, ಅರ್ಜುನನನ್ನು ನೋಡಿ, "ಕೃಷ್ಣನನ್ನು ಸಾರಥಿಯನ್ನಾಗಿ ಮಾಡಿಕೊಂಡು ನೀನು ನನ್ನನ್ನು ಜಯಿಸಲು ಪ್ರತಿಜ್ಞೆಮಾಡು. ನಾನಾದರೋ ನನ್ನ ಪೌರುಷದಿಂದ ಯುದ್ಧದಲ್ಲಿ ಲೋಕವನ್ನು ಸಂತೋಷಗೊಳಿಸುವೆನು" ಎಂದನು. ಅದಕ್ಕೆ ಅರ್ಜುನನು ಸುಧನ್ವನನ್ನು ನೋಡಿ, "ಎಲೈ ವೀರನೇ! ಈಗ ನಾನು ಮೂರು ಬಾಣಗಳಿಂದ ರಮ್ಯವಾದ ನಿನ್ನ ತಲೆಯನ್ನು ಕಡಿದು ಬೀಳಿಸುವೆನು. ಹಾಗೆ ಕೆಡಹದಿದ್ದರೆ ನಮ್ಮ ಪೂರ್ವ ಪಿತೃಗಳು ಪುಣ್ಯಹೀನರಾಗಿ ನರಕಕ್ಕೆ ಬೀಳಲಿ; ಇದು ಸತ್ಯ, ಸತ್ಯ, ಸುಳ್ಳಲ್ಲ. ನೀನು ಆತ್ಮ ರಕ್ಷಣ ಮಾಡಿಕೊಳ್ಳುವುದಲ್ಲದೆ ನಿನ್ನ ಪ್ರತಿಜ್ಞೆಯನ್ನು ಈಗ ತಿಳಿಸು" ಎಂದನು. ಅದನ್ನು ಕೇಳಿ ಸುಧನ್ವನು, "ನಿನ್ನ ಮೂರು ಬಾಣಗಳನ್ನೂ ಕೃಷ್ಣನೆದುರಿಗೆ ನಾನು ಕತ್ತರಿಸುವೆನು. ನಾನು ಹಾಗೆ ಮಾಡದಿದ್ದರೆ ನನಗೆ ಘೋರವಾದ ದುರ್ಗತಿಯುಂಟಾಗಲಿ" ಎಂದು ಹೇಳಿ ಸಂತೋಷದಿಂದ ನೂರು ಬಾಣಗಳನ್ನು ಕೃಷ್ಣನ ಎದೆಗೆ ಹೊಡೆದು ಭೇದಿಸಿದನು. ಕೃಷ್ಣ ಸಹಿತವಾಗಿ ರಥವೂ ಕುದುರೆಗಳೊಡನೆ ಮುರಿದು ಬಿದ್ದಿತು; ಅರ್ಜುನನು ಕುಂಬಾರನ ಚಕ್ರದಂತೆ ತಿರುಗುತ್ತಿದ್ದನು; ಪುನಃ ಅರ್ಜುನನನ್ನು ಹತ್ತು ಬಾಣಗಳಿಂದ ಹೊಡೆದು ಆ ಕ್ಷಣದಲ್ಲಿಯೇ ಅವನ ರಥವನ್ನು ಪಶ್ಚಿಮ ದಿಕ್ಕಿಗೆ ನಾನ್ನೂರು ಹಸ್ತ ಪ್ರಮಾಣದ ದೂರಕ್ಕೆ ತಳ್ಳಿಬಿಟ್ಟನು. ಆಗ ಕೃಷ್ಣನು, "ಎಲೈ ಪಾರ್ಥನೇ! ಶೂರನಾದ ಸುಧನ್ವನ ಪೌರುಷವನ್ನು ನೋಡು; ನೀನು ಅವನನ್ನು ಮೂರು ಬಾಣಗಳಿಂದ ಕೊಲ್ಲುವಂತೆ ವ್ಯರ್ಥವಾಗಿ ಪ್ರತಿಜ್ಞೆಮಾಡಿದೆ. ನನ್ನೊಡನೆ ಹೇಳದೆ ಈ ಸಾಹಸ ಕಾರ್ಯವನ್ನೇಕೆ ಮಾಡಿದೆ? ಜಯದ್ರಥ ಸಂಹಾರದಲ್ಲಿ ನಿನಗೆ ಎಷ್ಟು ಕಷ್ಟಗಳು ಪ್ರಾಪ್ತವಾದುವೆಂಬುದನ್ನು ಹೇಗೆ ಮರೆತೆ? ನೀನು ಹಿತಾಹಿತಗಳನ್ನು ಅರಿಯೆ. ನಾನು ರೋಷದಿಂದ ಕಾಲುಗಳಲ್ಲಿ ತುಳಿದು ರಥವನ್ನು ನಿಲ್ಲಿಸಿದರೂ ನಿಲ್ಲದೆ ಪಶ್ಚಿಮ ದಿಕ್ಕಿಗೆ ನಾನ್ನೂರು ಹಸ್ತ ಪ್ರಮಾಣ ದೂರ ಹೊಡೆದುಕೊಂಡು ಹೋಯಿತು. ಸುಧನ್ವನು ಏಕ ಪತ್ನೀ ವ್ರತವುಳ್ಳವನಾಗಿ ಕಾಣುತ್ತಾನೆ. ನಾನಾಗಲಿ ನೀನಾಗಲಿ ಆ ವ್ರತವನ್ನು ಮಾಡಲು ಶಕ್ತರಲ್ಲ. ಈ ಯುದ್ಧದಲ್ಲಿ ಬಹು ಕಷ್ಟವು ಪ್ರಾಪ್ತವಾಗುವಂತೆ ನನಗೆ ತೋರುತ್ತದೆ" ಎಂದನು. ಅದಕ್ಕೆ ಅರ್ಜುನನು, "ಎಲೈ ಗೋವಿಂದನೇ! ನೀನು ಬಂದುದರಿಂದ, ಪ್ರಾಪ್ತವಾಗುವ

ಕಷ್ಟಗಳೆಲ್ಲವೂ ನಿವಾರಣೆಯಾಗುವುವು. ನಾನು ಇವನನ್ನು ಮೂರು ಬಾಣಗಳಿಂದ ಕೊಲ್ಲುವೆನೆಂಬುದಕ್ಕೆ ಸಂದೇಹವಿಲ್ಲ" ಎಂದು ಹೇಳಿ, ಅರ್ಜುನನು ತನ್ನ ಬಾಣಗಳಿಂದ ಹತ್ತು ದಿಕ್ಕುಗಳನ್ನೂ ತುಂಬಿಸಿದನು. ಕೋಪದಿಂದ ಕೆಂಪಾದ ಕಣ್ಣುಗಳುಳ್ಳ ಸುಧನ್ವನು ಬಾಣವನ್ನಾರೋಪಿಸಿದ ಧನುವನ್ನು ತೂಗಾಡಿಸುತ್ತ ಪುನಃ ಗೋವಿಂದ ನನ್ನು ಕುರಿತು, "ಎಲೈ ಕೃಷ್ಣನೇ! ನೀನು ಪೂರ್ವದಲ್ಲಿ ಗೋವುಗಳಿಗಾಗಿ ಹೇಗೆ ಗೋವರ್ಧನ ಪರ್ವತವನ್ನು ಎತ್ತಿ ಹಿಡಿದೆಯೋ ಹಾಗೆ ಈ ಪಾಂಡವನನ್ನು ರಕ್ಷಿಸು" ಎಂದನು. ಆಗ ಪಾರ್ಥನು ಪ್ರಳಯಾಗ್ನಿಗೆ ಸಮಾನವಾದ ಬಾಣವನ್ನು ಧನುವಿನಲ್ಲಿ ಹೂಡಿ ಕೋಪದಿಂದ ಪ್ರಯೋಗಿಸಿದನು. ಪೂರ್ವದಲ್ಲಿ ಗೋವರ್ಧನವನ್ನೆತ್ತಿ ಗೋವು ಗಳನ್ನು ರಕ್ಷಿಸಿದ ಪುಣ್ಯವನ್ನು ಶ್ರೀಕೃಷ್ಣನು ಕೂಡಲೆ ಆ ಬಾಣದಲ್ಲಿ ಸೇರಿಸಿದನು. ಇವರಿಬ್ಬರ ಯುದ್ಧದ ಚಮತ್ಕಾರವನ್ನು ನೋಡುವ ಕುತೂಹಲದಿಂದ ದೇವತೆಗಳೂ ಅಪ್ಸರಸ್ತ್ರೀಯರೂ ದಿವ್ಯಾಭರಣಗಳನ್ನು ಧರಿಸಿ ವಿಮಾನಾರೂಢರಾಗಿ ಆಕಾಶದಲ್ಲಿ ಬಂದು ಸೇರಿದರು. ಸುಧನ್ವನು ಯುದ್ಧದಲ್ಲಿ ಅರ್ಜುನನಿಗೆ ಶ್ರೀಕೃಷ್ಣನು ಹಿತಚಿಂತಕ ನಾಗಿರುವುದನ್ನು ತಿಳಿದು, "ಕೃಷ್ಣಾವತಾರದಲ್ಲಿ ಸಂಪಾದಿಸಿದ ಬಹು ಪುಣ್ಯವನ್ನು ಸೇರಿಸಿರುವ ಈ ಬಾಣವನ್ನು ನಾನು ಕತ್ತರಿಸುವೆನು; ಇಲ್ಲದಿದ್ದರೆ ನಾನು ಸಂಪಾ ದಿಸಿದ ಪುಣ್ಯವು ರಾಕ್ಷಸರಿಗಾಗಿ ಹೋಗಿ ವ್ಯರ್ಥವಾಗಲಿ. ಎಲೈ ಕೃಷ್ಣನೇ! ನಾನು ಮಾಡಿರುವ ಪುಣ್ಯವನ್ನು ನೀನು ನೋಡಬೇಕೆಂದು ವಿಜ್ಞಾಪಿಸುವೆನು" ಎಂದು ಹೇಳಿ ತನ್ನ ಮೇಲೆ ಬರುತ್ತಿದ್ದ ಅರ್ಜುನನ ಬಾಣಕ್ಕೆ ಅರ್ಧಚಂದ್ರ ಬಾಣವನ್ನು ಬಿಟ್ಟು ಕತ್ತರಿಸಿ ಕೆಡವಿದನು.

ಬೇಗನೆ ಬಾಣವನ್ನು ತೊಡುವ ಸುಧನ್ವನನ್ನು ನೋಡಿ, ಎಲ್ಲ ದೇವತೆಗಳೂ ಮೂರು ಲೋಕವೂ ಆಶ್ಚರ್ಯವನ್ನು ಹೊಂದುತ್ತಿರಲು, ಅರ್ಜುನನು ಎರಡನೆಯ ಬಾಣವನ್ನು ತೊಡುತ್ತಿರುವಾಗ ಶ್ರೀಕೃಷ್ಣನು (ಪರಶುರಾಮಾವತಾರದಲ್ಲಿ) ತಾನು ಮಾಡಿದ ಭೂದಾನದ ಫಲವನ್ನೆಲ್ಲ ಪಾರ್ಥನ ರಕ್ಷಣೆಗಾಗಿ ಆ ಬಾಣದಲ್ಲಿಟ್ಟನು. ಆಗ ಸುಧನ್ವನು ಕೃಷ್ಣನನ್ನು ಕುರಿತು, "ಎಲೈ ಗೋವಿಂದನೇ! ನಿನ್ನ ಪುಣ್ಯವನ್ನೆಲ್ಲ ಸೇರಿಸಿಟ್ಟಿರುವ ಈ ಅರ್ಜುನನ ಬಾಣವನ್ನು ನಿನ್ನೆದುರಿಗೇ ಕತ್ತರಿಸುವೆನು. ಮಹಾ ಬಲಶಾಲಿಯಾದ ಧನಂಜಯನೇ! ನನ್ನ ಪ್ರತಿಜ್ಞೆಯನ್ನು ಕೇಳು: ನಾನು ಈ ಬಾಣ ವನ್ನು ಎರಡಾಗಿ ಛೇದಿಸದಿದ್ದರೆ ಅರುಂಧತೀ ಸಹಿತನಾದ ವಸಿಷ್ಠನನ್ನು ನಾನು ಕೊಂದಂತಾಗಲಿ. ನಿನ್ನ ಪರಾಕ್ರಮದಿಂದ ನಿನ್ನ ಬಾಣವನ್ನು ರಕ್ಷಿಸಿಕೊ. ಶ್ರೀ ಕೃಷ್ಣನು ತನ್ನ ಪುಣ್ಯವನ್ನೆಲ್ಲ ನಿನಗಾಗಿ ಈ ಯುದ್ಧದಲ್ಲಿ ಕೊಡುತ್ತಿರುವುದರಿಂದ ನಿನ್ನ ಶ್ರೇಯಸ್ಸು ಹೆಚ್ಚಿನದು, ನೀನೇ ಧನ್ಯನು" ಎಂದು ಹೇಳುತ್ತಿರಲು, ಪಾರ್ಥನು ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಸೂರ್ಯಮಂಡಲದಂತಿರುವ ಆ ಎರಡನೆಯ ಬಾಣವನ್ನು, ಕೃಪಣನು ತನ್ನ ಧನವನ್ನು ಬಿಡುವಂತೆ, ಬಿಟ್ಟನು. ಆಕಾಶದಲ್ಲಿ ದೇವತೆ ಗಳೂ ನೆಲದ ಮೇಲೆ ಮನುಷ್ಯರೂ, "ಅರ್ಜುನನು ಬಿಟ್ಟ ಬಾಣದಿಂದ ಬೆಂಕಿ ಎದ್ದಿದೆ, ಬಾಣವು ಆಕಾಶಕ್ಕೆ ಹೋಯಿತು, ಇದು ಪ್ರಳಯವನ್ನುಂಟುಮಾಡುವುದೋ

ಏನೋ! ಏನಾಗುವುದೋ! ಈ ಶೂರರಿಬ್ಬರಲ್ಲಿ ಯಾರು ಗೆಲ್ಲುವರೋ'' ಎಂದು ಹೇಳಿಕೊಳ್ಳುತ್ತಿದ್ದರು.

ಬಳಿಕ, ವೀರನಾದ ಸುಧನ್ವನು ಬೇಗನೆ ಪರಾಕ್ರಮದಿಂದ ಅರ್ಜುನನ ಎರಡನೆಯ ಬಾಣವನ್ನು ಮಧ್ಯಕ್ಕೆ ಕತ್ತರಿಸಿ ತನ್ನ ಸೈನ್ಯವೂ ತಂದೆಯೂ ಸಂತೋಷಪಡುವಂತೆ ಶಂಖನಾದವನ್ನು ಮಾಡಿದನು. ಬಾಣವು ಕತ್ತರಿಸಿ ಹೋದುದರಿಂದ ನೆಲವು ಅದರ ವೇಗಕ್ಕೆ ನಡುಗಿತು. ಆಗ ಕೃಷ್ಣನು ಅರ್ಜುನನನ್ನು ಕುರಿತು, "ಎಲೈ ಅರ್ಜುನನೇ! ಬಾಣವನ್ನು ತೊಡಬೇಡ; ನಾನು ಪಾಂಚಜನ್ಯ ಧ್ವನಿ ಮಾಡುವೆನು; ನನ್ನೊಡನೆಯೇ ನೀನೂ ದೇವದತ್ತವನ್ನೂದು. ನೀನು ಪರಾಕ್ರಮಶಾಲಿಯಾದ ಈ ವೀರನನ್ನು ನೋಡು. ತಮ್ಮ ಮುಖದಿಂದ ಹೊರಟ ಪ್ರತಿಜ್ಞಾ ವಚನವನ್ನು ಯಾರು ಸತ್ಯವಾಗಿ ಮಾಡುವರೋ ಅಂತಹ ಸ್ವರ್ಗಾಪೇಕ್ಷಿಗಳಾದ ಅವರ ಜನ್ಮವು ಕೀರ್ತಿಪ್ರದವೂ ಧನ್ಯವೂ ಆದುದು. ನಾನು ನನ್ನ ಪೂರ್ವ ಪುಣ್ಯವನ್ನು ಕೊಟ್ಟು ಇವನು ಬಿದ್ದುಹೋಗುವುದರಿಂದ, ಶೂರನಾದ ನೀನು ಇವನನ್ನು ಕೊಂದಹಾಗಾಗುವುದಿಲ್ಲ'' ಎಂದು ಹೇಳಿ, ತಾನು ಪಾಂಚಜನ್ಯವನ್ನು ಧ್ವನಿಮಾಡಲು, ಅರ್ಜುನನು ದೇವದತ್ತವನ್ನು ಪೂರಿಸಿದನು. ಕೃಷ್ಣನ ಪಾಂಚಜನ್ಯ ಶಬ್ದವು ಭಯಂಕರವಾಗಿ ಹೊರಟು ಭೂವ್ಯೋಮ್ಯಾಕಾಶ ಪಾತಾಳಗಳನ್ನೂ ದಿಗಂತವನ್ನೂ ವ್ಯಾಪಿಸಿ, ಪ್ರಳಯಕಾಲದಂತೆ ಎಲ್ಲವನ್ನೂ ನಡುಗಿಸಿತು. ಆಗ ಕೃಷ್ಣನು ಅರ್ಜುನನನ್ನು ನೋಡಿ, "ಎಲೈ ಪಾರ್ಥನೇ! ನನ್ನ ಅಪ್ಪಣೆಯ ಪ್ರಕಾರ ಬೇಗನೆ ಬಾಣವನ್ನು ತೊಡು'' ಎಂದನು.

ಅರ್ಜುನನು ಅದೇ ಪ್ರಕಾರ ದೃಢವಾದ ದಿವ್ಯ ಬಾಣವನ್ನು ತೆಗೆದುಕೊಳ್ಳಲು, ಕೃಷ್ಣನು ಅದರ ಪಶ್ಚಿಮ ಭಾಗದಲ್ಲಿ ಬ್ರಹ್ಮನನ್ನೂ ಮಧ್ಯದಲ್ಲಿ ಯಮನನ್ನೂ ಸೇರಿಸಿ ತಾನು ಆ ಬಾಣದ ಮೊನೆಯಲ್ಲಿ ನಿಂತು ರಾಮಾವತಾರದ ತನ್ನ ಪುಣ್ಯವನ್ನು ಅದರಲ್ಲಿಟ್ಟನು. ಅರ್ಜುನನು ಆ ಪ್ರಕಾರ ಅಂತಹ ಬಾಣವನ್ನು ತೊಟ್ಟಕೂಡಲೆ ಹಾಹಾಕಾರವುಂಟಾಯಿತು. ಆಗ ಸುಧನ್ವನು, "ಎಲೈ ಗೋವಿಂದನೇ! ವಿಶ್ವರೂಪನಾದ ನೀನು ಯುದ್ಧದಲ್ಲಿ ಅರ್ಜುನನಿಗಾಗಿ ಅವನ ಬಾಣದಲ್ಲಿ ಬಂದು ಸೇರಿ ಸಾಹಸದಿಂದ ಕೊಲ್ಲುವುದಕ್ಕೆ ಪ್ರಯತ್ನಪಟ್ಟಿರುವುದನ್ನು ನಾನು ಬಲ್ಲೆನು. ಎಲೈ ಪಾರ್ಥನೇ! ನೀನು ಜ್ಞಾಪಿಸಿಕೊ: ನಿನ್ನ ಪ್ರತಿಜ್ಞೆಯೇನು? ಅದನ್ನು ನೆರವೇರಿಸು'' ಎಂದನು. ಅದಕ್ಕೆ ಅರ್ಜುನನು "ಎಲೈ ವೀರನೇ! ನಾನು ಈ ಬಾಣದಿಂದ ಕಿರೀಟ ಸಹಿತವಾದ ನಿನ್ನ ತಲೆಯನ್ನು ಕೆಡಹದೆ ಹೋದರೆ ಹರಿ ಹರರನ್ನು ಕೊಂದ ಪಾಪವು ನನಗೆ ಬರಲಿ'' ಎಂದು ಪ್ರತಿಜ್ಞೆ ಮಾಡಿದನು. ಅದಕ್ಕೆ ಸುಧನ್ವನು, "ನಾನು ಈ ಬಾಣವನ್ನು ಕತ್ತರಿಸದೆಹೋದರೆ ಪಾಪಿಯಾದವನೊಬ್ಬನು ಕಾಶಿಗೆ ಹೋಗಿ ಅಲ್ಲಿ ಭಕ್ತನೊಬ್ಬನು ಮಣಿಕರ್ಣಿಕೆಯಲ್ಲಿ ಸ್ನಾನಮಾಡಿ ರಾತ್ರಿಯಲ್ಲಿ ಮಾಡಿದ ಶಿವ ಪೂಜೆಯನ್ನು ಕಾಲಿನಿಂದ ಒದೆದು ಕೆಡವಿದ ಪಾಪವು ನನಗುಂಟಾಗಲಿ'' ಎಂದು ಪ್ರತಿಜ್ಞೆ ಮಾಡಿದನು. ಬಳಿಕ ಅರ್ಜುನನು ಅಗ್ನಿ ಜ್ವಾಲೆಯಿಂದುರಿಯುತ್ತಿರುವ ಬಾಣವನ್ನು ಸಂಧಾನ

ಮಾಡಿ ಬಿಡಲು, ಅದು ಹೊರಟು ಆಕಾಶದಲ್ಲಿದ್ದ ಅಪ್ಸರರೂ ದೇವತೆಗಳೂ ಹೆದರಿ ಓಡಿ ಹೋಗಿ ಮನುಷ್ಯತ್ವವನ್ನು ಹೊಂದುವಂತೆ ಮಾಡಿತು. ಆ ಬಾಣದ ಶಬ್ದದಿಂದ ವಾದ್ಯಗಳೆಲ್ಲವೂ ಒಡೆದುಹೋದುವು, ಭೂಲೋಕವು ಭ್ರಮಿಸಿತು; ಸುಧನ್ವನು ಮಾತ್ರ ಮೋಹಿತನಾಗಲಿಲ್ಲ. ಅವನು ಅರ್ಜುನನನ್ನು ಕುರಿತು ಕೋಪದಿಂದ, "ಎಲೈ ಪಾರ್ಥನೇ! ಈ ಮಹಾ ಯುದ್ಧದಲ್ಲಿ ನಿನಗಾಗಿ ಈಶ್ವರನೇ ಮೊದಲಾದ ದೇವತೆಗಳೆಲ್ಲರೂ ಈ ಬಾಣವನ್ನು ರಕ್ಷಿಸಲಿ; ಇಗೋ! ನಾನು ಅದನ್ನು ಕತ್ತರಿಸುವೆನು, ಸಂದೇಹವಿಲ್ಲ" ಎಂದು ಹೇಳಿ, ಶ್ರೀಕೃಷ್ಣನನ್ನು ಕುರಿತು, "ಎಲೈ ಕೃಷ್ಣನೇ! ಅರ್ಜುನನ ಸಾರಥಿಯಾದ ನೀನು ನೃಸಿಂಹನೆಂದು ನಾನು ಬಲ್ಲೆನು; ನಾನು ಸಾಯುವುದೇನೊ ನಿಶ್ಚಯ; ಆದರೂ ಯುದ್ಧಮಾಡದಿದ್ದರೆ ಹಂಸಧ್ವಜನೂ ನಮ್ಮ ತಾಯಿಯೂ ನಾಚಿಕೆಗೀಡಾಗುವರು; ನನ್ನ ಹೆಂಡತಿಯಾದ ಪ್ರಭಾವತಿಯು ನನ್ನನ್ನು ನಿಂದಿಸುವಳು. ಈಗ ನೀನು ಇಲ್ಲಿ ಬಿಟ್ಟು ಹೋಗಕೂಡದು, ನಿಂತು ಯುದ್ಧ ಮಾಡಲೇಬೇಕು" ಎಂದು, "ಎಲೈ ಅರ್ಜುನನೇ! ನೀನು ಸ್ವಸಾಮರ್ಥ್ಯವನ್ನು ತೋರಿಸು" ಎಂದು ಹೇಳುತ್ತ, ಕೃಷ್ಣನನ್ನು ಸ್ಮರಿಸಿ ಆ ಬಾಣವನ್ನು ಕತ್ತರಿಸಲು, ಅದರಲ್ಲಿ ಅರ್ಧ ಭಾಗವು ಮಧ್ಯಕ್ಕೆ ಕತ್ತರಿಸಿ ಬಿದ್ದಿತು. ಆ ಬಾಣವು ಕತ್ತರಿಸಿಹೋದುದರಿಂದ ಹಾಹಾಕಾರವುಂಟಾಗಲು, ಯುದ್ಧ ಭೂಮಿಯಲ್ಲಿ ನಿಂತು ಸುಧನ್ವನು ತನ್ನ ತೋಳನ್ನು ತಟ್ಟಿದನು. ಆ ಬಾಣವು ನಾಶವಾಗಲು, ಚಂದ್ರ ಮಂಡಲವು ಅಳ್ಳಾಡಿಹೋಯಿತು; ಪೂರ್ವದಲ್ಲಿ ಜಲಮಯವಾಗಿದ್ದ ಆ ಚಂದ್ರ ಮಂಡಲವು ಅರ್ಜುನನ ಬಾಣನಾಶದಿಂದ ಶೋಷಿಸಿ ನಿರ್ಜಲತ್ವವನ್ನು ಹೊಂದಿತು; ಇದೊಂದು ಅದ್ಭುತವನ್ನುಂಟುಮಾಡಿತು. ಉಳಿದ ಅರ್ಧ ಬಾಣವು ಶಕ್ತಿಗುಂದದೆ ಪೌರುಷದಿಂದ ಹೊಕ್ಕು ಕರ್ಣ ಕುಂಡಲದಿಂದ ಹೊಳೆಯುತ್ತಿರುವ ಆ ಸುಧನ್ವನ ತಲೆಯನ್ನು ಕತ್ತರಿಸಿಕೊಂಡು ಹೋಯಿತು.

ಇಂತು ಸುಧನ್ವ ವಧವೆಂಬ ಹತ್ತೊಂಬತ್ತನೆಯ ಅಧ್ಯಾಯವು.

---

## ಇಪ್ಪತ್ತನೆಯ ಅಧ್ಯಾಯ

ಕತ್ತರಿಸಿಹೋದ ಸುಧನ್ವನ ತಲೆಯು ಸಂತೋಷದಿಂದ ಹರಿನಾಮ ಸ್ಮರಣೆ ಮಾಡುತ್ತ ಬೇಗನೆ ಶ್ರೀಕೃಷ್ಣನ ಪಾದ ಕಮಲದಲ್ಲಿ ಬಂದು ಬಿದ್ದಿತು. ಮುಂಡವು ರಣ ಭೂಮಿಯಲ್ಲಿ ವೇಗವಾಗಿ ಓಡಾಡುತ್ತ ಕೈಗೆ ಸಿಕ್ಕಿದ ಆನೆ ಕುದುರೆ ರಥ ಮೊದಲಾದುವನ್ನು ಕೆಡಹುತ್ತ ಅನೇಕವಾಗಿ ಪಾರ್ಥನ ಸೈನಿಕರನ್ನು ಕೊಂದಿತು. ಶ್ರೀಕೃಷ್ಣನು ತನ್ನ ಕಾಲಿನ ಮೇಲೆ ಬಿದ್ದಿರುವ ಸುಧನ್ವನ ರುಂಡವನ್ನು ಎರಡು ಕೈಗಳಿಂದಲೂ ಎತ್ತಿ ತೆಗೆದುಕೊಂಡು ನೋಡುತ್ತಿರಲು, ಅದರ ಮುಖದಿಂದ ಹೊರಟ ತೇಜಸ್ಸು ಶ್ರೀಕೃಷ್ಣನ ಮುಖದಲ್ಲಿ ಸೇರಿತು. ಬಲಶಾಲಿಯಾದ ಸುಧನ್ವನ ಮಹಿಮೆಯನ್ನು ಶ್ರೀಕೃಷ್ಣನಲ್ಲದೆ ಮತ್ತಾರೂ ಅರಿಯರು. ಬಳಿಕ ಕೃಷ್ಣನು, ಹೊಳೆಯುತ್ತಿರುವ ಕುಂಡಲಗಳಿಂದ ರಮ್ಯವಾಗಿದ್ದ ಆ ಸುಧನ್ವನ ರುಂಡವನ್ನು ತನ್ನ ಕೈಯಿಂದ

ಬೇಗನೆ ರಥದಲ್ಲಿಟ್ಟನು. ಹಂಸಧ್ವಜನು ಯುದ್ಧದಲ್ಲಿ ಮಡಿದ ತನ್ನ ಮಗನ ರುಂಡವನ್ನು ತೆಗೆದುಕೊಂಡು ನೋಡುತ್ತ ಎದುರಿಗಿಟ್ಟುಕೊಂಡು, "ಎಲೈ ಮಗನಾದ ಸುಧನ್ವನೇ! ನಾನೇನು ಮಾಡಿದೆನು? ಏಕೆ ನೀನು ಮಾತನಾಡದಿರುವೆ? ಎಲೈ ಸುವ್ರತನೇ! ನಾನು ನಿನ್ನ ತಂದೆಯೆಂಬುದನ್ನರಿಯೆಯಾ? ಕೋಪಿಸಿಕೊಂಡಿರುವೆಯೋ? ನಾನು ಪುತ್ರಪ್ರೀತಿಯನ್ನು ತೊರೆದು ನಿನ್ನನ್ನು ಕಾದೆಣ್ಣೆಯ ಕೊಪ್ಪರಿಗೆಯಲ್ಲಿ ಹಾಕಿಸಿ ದಂಡನೆ ಮಾಡಿ ಬಾಧೆಪಡಿಸಿದೆನು. ನೀನು ನಿನ್ನ ಪ್ರತಿಜ್ಞೆಯನ್ನು ನೆರವೇರಿಸಿದೆ; ಯುದ್ಧದಲ್ಲಿ ಕೃಷ್ಣಾರ್ಜುನರನ್ನು ಸಂತೋಷಪಡಿಸಿದೆ; ವಿವೇಕಿಯಾದ ನೀನು ಪ್ರಭಾವತಿಗೆ ಮನ್ಮಥ ಶಾಂತಿಯನ್ನುಂಟುಮಾಡಿದೆ" ಎಂದು ಹೇಳುತ್ತ ಮಗನ ಮುಖವನ್ನು ಸಗುತ್ತ ಮುತ್ತಿಟ್ಟು ಅವನ ಹಣೆಗೆ ತನ್ನ ಹಣೆಯನ್ನು ಸೇರಿಸಿ ರಥದಲ್ಲಿ ಕುಳಿತು ಪುನಃ ಪುತ್ರಶೋಕದಿಂದ ಪೀಡಿತನಾಗಿ, "ಎಲೈ ಮಗನೇ! ಏಳು, ಅರ್ಜುನನ ಕುದುರೆಯನ್ನು ಬಲಾತ್ಕಾರದಿಂದ ಹಿಡಿದು ತಂದು ಪ್ರದ್ಯುಮ್ನಾದಿ ವೀರರೊಡನೆ ಯುದ್ಧಮಾಡು; ತಾಯಿಯಾದ ಕುವಲೆಯು ಹೇಳಿದ ಮಾತು ಸತ್ಯವಾಯಿತು. ಸುರಥನೇ ಮೊದಲಾದ ನಿನ್ನ ಸಹೋದರರು ಕೇಳಲಿ: ನಾನು ಎಷ್ಟು ಹೇಳಿದರೂ ಈ ಸುಧನ್ವನು ಮಾತಾಡುವುದೂ ಇಲ್ಲ, ಹೋಗುವುದೂ ಇಲ್ಲ" ಎಂದನು.

ಆ ಮಾತನ್ನು ಕೇಳಿ ಸುರಥನು, "ಎಲೈ ತಂದೆಯೇ! ಯುದ್ಧದಲ್ಲಿ ಹತನಾದ ನಿನ್ನ ಮಗನ ತಲೆಯನ್ನು ಕೈಗೆ ತೆಗೆದುಕೊಂಡು ಏಕೆ ಹೀಗೆ ಪ್ರಳಾಪಿಸುತ್ತೀಯೆ?" ಎಂದನು. ಅದಕ್ಕೆ ಹಂಸಧ್ವಜನು, "ನನ್ನ ಮಗನಿಗಾಗಿ ನಾನು ಪ್ರಳಾಪಿಸುವುದಕ್ಕೆ ಕಾರಣವಿದೆ. ಅವನ ತಲೆಯು ಕತ್ತರಿಸಿ ಕೃಷ್ಣನ ಪಾದ ಕಮಲದಲ್ಲಿ ಬಿದ್ದಿತು. ಈಗ ಆ ಸ್ಥಳವನ್ನು ಬಿಟ್ಟಿತು. ಶ್ರೀಕೃಷ್ಣ ಸಾನ್ನಿಧ್ಯವು ಮಹಾ ಪುಣ್ಯವಶದಿಂದ ಲಭಿಸುವುದು; ಆತನ ವಿಯೋಗವು ಘೋರತರವಾದ ಪಾಪದಿಂದ ಸಂಘಟಿಸುವುದು. ಕೃಷ್ಣನ ಪಾದ ಕಮಲದಲ್ಲಿ ಭ್ರಮರದಂತಿದ್ದ ಸುಧನ್ವನ ತಲೆಯು ಕ್ಷಣಮಾತ್ರವೂ ಅಲ್ಲಿ ನಿಲ್ಲದೆ ಕೃಷ್ಣನನ್ನಗಲಿ ನನ್ನ ಬಳಿಗೆ ಬಂದುದರಿಂದ ಆ ಪಾತಕವು ನನಗುಂಟಾಯಿತೆಂದು ದುಃಖಿಸುತ್ತೇನೆ. ಹೊಳೆಯುತ್ತಿರುವ ಕುಂಡಲಗಳುಳ್ಳ ನಿನ್ನ ಸಹೋದರನ ತಲೆಯನ್ನು ನೋಡು; ಇದನ್ನು ಶ್ರೀಕೃಷ್ಣನ ರಥದಲ್ಲಿಯೇ ಇರಿಸುವೆನು" ಎಂದು ಹೇಳಿ ಸುಧನ್ವನ ತಲೆಯನ್ನು ಪುನಃ ಶ್ರೀಕೃಷ್ಣನ ರಥದಲ್ಲಿಯೇ ಇಟ್ಟನು. ಕೃಷ್ಣನು ಆ ತಲೆಯನ್ನು ತೆಗೆದುಕೊಂಡು ಆಕಾಶಕ್ಕೆಸೆಯಲು, ಭಕ್ತಾಭಯಪ್ರದನಾದ ಶಂಕರನು ಅದನ್ನು ತೆಗೆದುಕೊಂಡು ತನ್ನ ರುಂಡಮಾಲೆಯಲ್ಲಿ ಸೇರಿಸಿಕೊಂಡನು. ಸುರಥನು ತಮ್ಮ ತಂದೆಯ ದುಃಖವನ್ನು ಸಮಾಧಾನಗೊಳಿಸುತ್ತ, "ಎಲೈ ತಂದೆಯೇ! ಕೃಷ್ಣಾರ್ಜುನರೊಡನೆ ಈಗ ನಾನು ಮಾಡುವ ಯುದ್ಧವನ್ನು ನೋಡು; ನಿನ್ನೆದುರಿಗೆ ನಿಂತು ಎಲ್ಲ ಸೈನಿಕರೂ ನೋಡುತ್ತಿರಲಿ; ಮಹಾ ಬಲಶಾಲಿಯಾದ ನಮ್ಮ ಅಣ್ಣನನ್ನು ಕೃಷ್ಣನು ಬಾಯಲ್ಲಿ ಹಾಕಿಕೊಂಡನು. ಈಗ ನನ್ನೆದುರಿಗೆ ಆ ಕೃಷ್ಣನು ಯುದ್ಧಕ್ಕೆ ನಿಂತರೆ, ನಾನು ಅವನನ್ನೂ ರಥಿಕಶ್ರೇಷ್ಠನಾದ ಅರ್ಜುನ

ನನ್ನೂ ಭೇದಿಸುತ್ತೇನೆ'' ಎಂದು ಹೇಳಿ ಬೇಗನೆ ತನ್ನ ರಥವನ್ನು ಹತ್ತಿ ದೊಡ್ಡ ಸೈನ್ಯವನ್ನು ತೆಗೆದುಕೊಂಡು ಪಾರ್ಥನ ಮೇಲೆ ಯುದ್ಧಕ್ಕೆ ಹೊರಟನು. ಸುರಥನು ತನ್ನ ಶಂಖವನ್ನು ಪೂರಿಸಿ ಸಿಂಹನಾದವನ್ನು ಮಾಡಲು, ಭೂಮಿಯು ಒಡೆದುಹೋಗುವಂತಾಯಿತು. ಅವನು ತನ್ನ ಕೈಯಲ್ಲಿ ಧನುವನ್ನು ಹಿಡಿದು ಅರ್ಜುನನನ್ನು ಕುರಿತು, ''ಎಲೈ ಮಹಾ ಬಲಶಾಲಿಯಾದ ಅರ್ಜುನನೇ! ಈಗ ನನ್ನೊಡನೆ ಯುದ್ಧಕ್ಕೆ ನಿಲ್ಲು. ಎಲೈ ಕೃಷ್ಣನೇ! ನಾನು ನಿನ್ನ ಶತ್ರುವಾದ ಸುರಥನು; ಅರ್ಜುನನನ್ನು ಚೆನ್ನಾಗಿ ರಕ್ಷಿಸು. ಎಳೆಯ ಮಗುವು ಅವಿವೇಕದಿಂದ ಮುತ್ತುಗಳನ್ನು ಕೊಟ್ಟು ಎಲಚಿಯ ಬೀಜಗಳನ್ನು ತೆಗೆದುಕೊಳ್ಳುವ ಹಾಗೆ. ನೀನು ಸ್ವಹಾನಿಯನ್ನೂ ಅರಿಯದೆ ಹುಡುಗಾಟವನ್ನಾಡಿ ನಿನ್ನ ಪುಣ್ಯವನ್ನೆಲ್ಲ ವೆಚ್ಚಮಾಡಿ ನಮ್ಮ ಅಣ್ಣನನ್ನು ಕೊಂದೆ. ಮುತ್ತುಗಳನ್ನು ಕೊಟ್ಟು ಎಲಚಿಯ ಬೀಜಗಳಂತೆ ಅಲ್ಪ ಮೂಲ್ಯವುಳ್ಳ ಸುಧನ್ವನ ಜೀವವನ್ನು ನೀನು ತೆಗೆದುಕೊಂಡೆ. ಈ ಸಂದರ್ಭದಲ್ಲಿ ಯಾರು ಯಾರನ್ನು ವಂಚಿಸಿದಹಾಗಾಯಿತೋ ನೋಡು. ಎಲೈ ಕೇಶವನೇ! ನೀನು ಗೋಪಾಲನೇ (ದನ ಕಾಯುವವನೇ) ಸರಿ. ನನ್ನ ಮಹಿಮೆಯನ್ನು ನೀನರಿಯೆ. ನನ್ನ ಬಂಧುವಾದ ಸುಧನ್ವನು ಮೃತನಾದುದಕ್ಕೆ ನಾನು ವ್ಯಥೆಪಡುವುದಿಲ್ಲ. ಪಾರ್ಥನು ನನ್ನೆದುರಿಗೆ ನಿಂತು ಯುದ್ಧಮಾಡುವನೆಂದು ನನಗೆ ಸಂತೋಷವಾಗುತ್ತದೆ'' ಎಂದನು.

ಹೀಗೆ ಹೇಳುತ್ತಿರುವ ಸುರಥನನ್ನು ನೋಡಿ ಶ್ರೀಕೃಷ್ಣನು ಅರ್ಜುನನನ್ನು ಕುರಿತು, ''ಎಲೈ ಪಾರ್ಥನೇ! ನೀನು ಇವನೆದುರಿಗೆ ಯುದ್ಧಕ್ಕೆ ನಿಲ್ಲಬೇಡ. ಬಲಿಷ್ಠನಾಗಿಯೂ ಯುದ್ಧಕುಶಲನಾಗಿಯೂ ಇರುವ ಇವನು ಸಹೋದರವಿಯೋಗ ದುಃಖದಿಂದ ಸಂತಪ್ತನಾಗಿರುವನು. ಇತರ ಶೂರರು ಈಗ ಇವನೊಡನೆ ಯುದ್ಧಕ್ಕೆ ನಿಲ್ಲಲಿ. ನೀನು ಈಗ ಯುದ್ಧಕ್ಕೆ ನಿಂತರೆ ಮಹಾನರ್ಥಗಳುಂಟಾಗುವುವು'' ಎಂದನು. ಅದಕ್ಕೆ ಅರ್ಜುನನು, ''ಎಲೈ ಕೃಷ್ಣನೇ! ನನಗೊದಗಿದ್ದ ಅನೇಕವಾದ ಅನಿಷ್ಟಗಳನ್ನು ನೀನು ನಿವಾರಣೆ ಮಾಡಿದೆ. ಈ ಸುರಥನಿಂದ ಈಗ ಪ್ರಾಪ್ತವಾಗುವ ಅಂತಹ ಅನರ್ಥವೇನು?'' ಎಂದನು. ಅದಕ್ಕೆ ಕೃಷ್ಣನು, ''ಈ ಸುರಥನು ಯುದ್ಧದಲ್ಲಿ ಮಾಡಬೇಕೆಂದಿರುವ ದ್ವಿತೀಯ ಸೃಷ್ಟಿಯನ್ನು ನೋಡಿ ಬ್ರಹ್ಮನು ಚಿಂತಿಸುತ್ತಿರುವನು; ಅಲ್ಲದೆ, ಇವನ ಸೈನ್ಯವು ಹೆಚ್ಚಾಗಿರುವುದು; ನಿನ್ನ ಸೇನೆಯು ಅಲ್ಪವಾಗಿದೆ. ನೀನು ಪೂರ್ವದಿಂದಲೂ ನಾನು ಹೇಳಿದಂತೆಯೇ ಮಾಡುತ್ತಿದ್ದೀಯೆ. ಪ್ರದ್ಯುಮ್ನನೇ ಮೊದಲಾದ ಮಹಾವೀರರು ಯುದ್ಧಕ್ಕೆ ನಿಲ್ಲಲಿ. ಈ ಸುರಥನನ್ನು ಕೊಲ್ಲಲು ಉಪಾಯವಿಲ್ಲ. ನಾನು ನನ್ನ ಪುಣ್ಯವನ್ನೆಲ್ಲ ಕೊಟ್ಟುದರಿಂದ ಕಷ್ಟತರವಾಗಿ ಸುಧನ್ವನ ಸಂಹಾರವಾಯಿತು. ಯಾವನ ಸುಕೃತವು ಹೆಚ್ಚಾಗಿದ್ದರೂ ದುಷ್ಕೃತವು ಅಲ್ಪವಾಗಿಯಾದರೂ ಇರುವುದೋ ಅಂತಹವನನ್ನು ಜಯಿಸಲು ಸಾಧ್ಯವಾಗುವುದೆಂಬುದರಲ್ಲಿ ಸಂದೇಹವಿಲ್ಲ. ಈ ಸುರಥನ ದೇಹವು ಕೇವಲ ಪುಣ್ಯಮಯವಾದುದು. ಯಾವ ಕಾಲದಲ್ಲಿ ಮನುಷ್ಯನಿಗೆ ಪುಣ್ಯವಿಲ್ಲವೋ ಆಗ ಅವನಿಗೆ ಹುಲಿ, ಕಳ್ಳರು, ರಾಜ,

ಸರ್ಪ, ಅಗ್ನಿ—ಇವುಗಳ ಭೀತಿಯುಂಟಾಗುತ್ತದೆ; ಇದಕ್ಕೆ ಸಂದೇಹವಿಲ್ಲ. ಪುಣ್ಯ ಶಾಲಿಗಳಿಗೆ ಭಯವು ಹೇಗೆ ಬರುವುದು?" ಎಂದು ಹೇಳಿ, ಶ್ರೀಕೃಷ್ಣನು ರುಕ್ಮಿಣಿಯ ಮಗನಾದ ಪ್ರದ್ಯುಮ್ನನನ್ನು ಕರೆದು, "ಎಲೈ ಪ್ರದ್ಯುಮ್ನನೇ! ನೀನು ಸರ್ವ ಪ್ರಕಾರದಿಂದ ಬಲಶಾಲಿಗಳಾದ ಮಹಾ ವೀರರೊಡನೆ ಸೇರಿ ಯುದ್ಧದಲ್ಲಿ ಸುರಥ ನನ್ನು ಕೊಲ್ಲಬೇಕು; ನಾನು ಅರ್ಜುನನನ್ನು ಕರೆದುಕೊಂಡು ಹೋಗುವೆನು" ಎಂದು ಹೇಳಿದನು.

ಆಗ ಕೃಷ್ಣನ ಮಾತಿನ ಪ್ರಕಾರವಾಗಿ ಪ್ರದ್ಯುಮ್ನನೇ ಮೊದಲಾದ ವೀರರು ಸುರಥನ ಮೇಲೆ ಯುದ್ಧಕ್ಕೆ ಹೊರಟರು. ಕೃಷ್ಣನು ಪಾರ್ಥನ ರಥವನ್ನು ಯುದ್ಧ ಭೂಮಿಯಿಂದ ಹಿಂದಿರುಗಿಸಿ ಬೇಗನೆ ಅಲ್ಲಿಗೆ ಮೂರು ಯೋಜನದ ದೂರದಲ್ಲಿರುವ ಪ್ರದೇಶಕ್ಕೆ ಹೋಗಿ ನಿಂತನು. ಬಳಿಕ ಸುರಥನಿಗೂ ಇತರರಿಗೂ ಯುದ್ಧವು ಪ್ರಾರಂಭವಾಯಿತು. ಸುರಥನು ತನ್ನ ಸಹೋದರನನ್ನು ಕೊಂದವನ ಮೇಲೆ ಯುದ್ಧ ಮಾಡಬೇಕೆಂದು ಕೋಪದಿಂದ ಬಂದು ನೋಡಲು, ಅಲ್ಲಿ ಕೃಷ್ಣಾರ್ಜುನರು ಕಾಣಿಸಲಿಲ್ಲ. ಪ್ರತಾಪಶಾಲಿಯಾದ ಸುರಥನು, "ಸುಧನ್ವನ ಶತ್ರುವು ಯುದ್ಧ ಭೂಮಿಯಲ್ಲಿ ಕಾಣಿಸುವುದಿಲ್ಲ; ಅಲ್ಪರಾದ ಈ ಬಾಲಕರೊಂದಿಗೆ ನಾನು ಹೇಗೆ ಯುದ್ಧ ಮಾಡಲಿ? ಕೃಷ್ಣಾರ್ಜುನರಿಬ್ಬರೂ ಅಪರಾಧಿಗಳೆಂಬುದರಲ್ಲಿ ಸಂದೇಹವಿಲ್ಲ. ಅವರು ಇವರನ್ನು ಮುಂದೆ ನಿಲ್ಲಿಸಿ ತಾವೆಲ್ಲಿಯೋ ಓಡಿಹೋಗಿರುವರು. ಇವರೆಲ್ಲ ರನ್ನೂ ತಡೆದು ಯುದ್ಧದಲ್ಲಿ ಜಯಿಸಿ ಮಹಾ ಬಲಶಾಲಿಗಳಾದ ಕೃಷ್ಣಾರ್ಜುನರನ್ನು ಬಳಿಕ ಕೊಲ್ಲುವೆನು. ಇವರು ಪಾತಾಳಕ್ಕೂ ಅಂತರಿಕ್ಷಕ್ಕೂ ಎಲ್ಲಿ ಹೋದರೂ ಹೋಗಲಿ, ನೋಡಿಕೊಳ್ಳುವೆನು" ಎಂದು ನಿಶ್ಚಯಿಸಿ, ಸುರಥನು ಸೈನ್ಯವನ್ನು ಕುರಿತು, "ಕೃಷ್ಣಾರ್ಜುನರು ಎಲ್ಲಿ ಹೋದರು? ಸೈನ್ಯ ಮಧ್ಯದಲ್ಲಿ ಇರುವಂತೆ ಕಾಣಲಿಲ್ಲವಲ್ಲಾ!" ಎಂದು ಕೇಳಿದನು.

ಅದನ್ನು ಕೇಳಿ ಸೈನಿಕರು, "ಎಲೈ ಶೂರನೇ! ಭಯಗ್ರಸ್ತನಾದ ಅಲ್ಪನು ಹರಟು ವಂತೆ ಏಕೆ ಹರಟುತ್ತೀಯೆ? ಯಾರು ನಿನ್ನೆದುರಿಗೆ ನಿಂತಿರುವರೋ ಅವರೊಡನೆ ಯುದ್ಧ ಮಾಡು. ಬಳಿಕ ಕೃಷ್ಣನನ್ನೂ ನಿನ್ನ ಶತ್ರುವಾದ ಅರ್ಜುನನನ್ನೂ ಕಾಣ ಬಹುದು" ಎಂದು ಹೇಳಿ, ಎಲ್ಲರೂ ಸುರಥನನ್ನು ಮುತ್ತಿದರು. ಸುರಥನು ಆ ಮಹಾ ವೀರರನ್ನು ಬಾಣಗಳಿಂದ ಹೊಡೆದನು. ಕೆಲವರು ಬಿದ್ದರು, ಕೆಲವರು ಕತ್ತರಿಸಿ ಹೋದರು. ಗದೆಯಿಂದ ಒಡೆದ ತಲೆಗಳುಳ್ಳವರಾಗಿಯೂ ವಾಹನಗಳನ್ನು ಕಳೆದುಕೊಂಡವರಾಗಿಯೂ ಕೆಲವರು ಬಿದ್ದುಹೋದರು. ಇದರಿಂದ ಆ ಕ್ಷಣದಲ್ಲಿಯೇ ವೀರನಾದ ಸುರಥನು ಸೇನೆಯಲ್ಲೆಲ್ಲ ಹಾಹಾಕಾರವುಂಟಾಗುವಂತೆ ಮಾಡಿದನು; ವ್ಯೂಹ ಮಧ್ಯದಲ್ಲಿ ಮೂರು ಯೋಜನ ವಿಸ್ತಾರವಾಗಿದ್ದ ಸೈನ್ಯವನ್ನು ಭೇದಿಸಿ ಅಲ್ಲಿದ್ದ ಕೃಷ್ಣನನ್ನೂ ಅರ್ಜುನನನ್ನೂ ಕಂಡು ಕೃಷ್ಣನ ಸುತ್ತಲೂ ಬಾಣದ ಮಳೆಯನ್ನು ಸುರಿಸಿದನು. ಹಾಗೆಯೇ ಅರ್ಜುನನನ್ನೂ ಬಾಣದಿಂದ ಹೊಡೆಯಲು, ಅವನು ಸುರಥನನ್ನು, "ಯುದ್ಧಕ್ಕೆ ನಿಲ್ಲು ನಿಲ್ಲು" ಎಂದು ಹೇಳುತ್ತ ಸಹಸ್ರ ಬಾಣಗಳಿಂದ

ಸಾರಥಿ ಯುಕ್ತವಾದ ಸುರಥನ ರಥವನ್ನು ಹೊಡೆದು ಪತಾಕ ಸಹಿತವಾದ ಧ್ವಜ ವನ್ನೂ ಮೌರ್ವೀ ಸಹಿತವಾಗಿ ಅವನ ಬಿಲ್ಲನ್ನೂ ಕತ್ತರಿಸಿ, ರಥವನ್ನು ಎಳ್ಳಿನಂತೆ ಪುಡಿ ಪುಡಿ ಮಾಡಿದನು; ಕುದುರೆಗಳನ್ನು ಹೊಡೆದು ನೋಯಿಸಿ ಸುರಥನನ್ನೂ ಅರ್ಜು ನನು ನೂರಾರು ಬಾಣಗಳಿಂದ ಹೊಡೆದನು. ಸುರಥನು ವೀರನಾದ ಅರ್ಜುನನನ್ನು ಬಾಣಗಳಿಂದ ಮುಚ್ಚಿಬಿಟ್ಟನು. ಹೀಗೆ ಅವರಿಬ್ಬರಿಗೂ ಅನೇಕ ಶಸ್ತ್ರಾಸ್ತ್ರಗಳಿಂದ ಯುದ್ಧವು ನಡೆಯಿತು. ಕೃಷ್ಣನು ಅರ್ಜುನನನ್ನು ನೋಡಿ, "ಎಲೈ ಪಾರ್ಥನೇ! ಸುರಥನ ಧೈರ್ಯವನ್ನು ನೋಡು; ಹೇಗೆ ಯುದ್ಧ ಮಾಡುತ್ತಿರುವನು! ಸುಧನ್ವನ ವಿಯೋಗದಿಂದ ನಮ್ಮ ಸೈನ್ಯವನ್ನೆಲ್ಲ ಕೊಲ್ಲುವನು. ನಾನು ಇವನನ್ನು ಬಿಟ್ಟು ತಪ್ಪಿಸಿಕೊಂಡು ದೂರವಾಗಿ ಹೋದರೂ ಇವನು ನನ್ನನ್ನು ಬಿಡನು; ನನ್ನ ಮುಂದೆಯೂ ನಿನ್ನ ಮುಂದೆಯೂ ಕಾಣಿಸಿಕೊಂಡು ಮೇಲೆಬಿದ್ದು ಇವನೇ ಯುದ್ಧ ಮಾಡುತ್ತಿರುವನು. ಇವನು ಲೋಕವನ್ನೆಲ್ಲ ಬಾಣದಿಂದ ವ್ಯಾಪಿಸಿರುವನು. ಆದರೂ ಇವನ ಶೌರ್ಯವು ಕಡಿಮೆಯಾಗಲಿಲ್ಲ" ಎಂದನು.

ಅದನ್ನು ಕೇಳಿ ಅರ್ಜುನನು ಕೋಪಗೊಂಡು ನೂರಾರು ಬಾಣಗಳಿಂದ ಸುರಥ ನನ್ನು ಹೊಡೆದನು. ಆಗ ಸುರಥನ ರಥವು ಬೇಗನೆ ಆಕಾಶಕ್ಕೆ ಹಾರಿತು. ಅವನು ಕೃಷ್ಣನನ್ನೂ ಅರ್ಜುನನನ್ನೂ ಹರಿತವಾದ ಕಲ್ಲುಗಳಂತಿರುವ ಅನೇಕ ಚಿತ್ರ ಬಾಣ ಗಳಿಂದ ಹೊಡೆದು ನಗುತ್ತ, ಅರ್ಜುನನನ್ನು ಕುರಿತು, "ನಿನ್ನ ರಥವನ್ನು ಮುರಿದು ಹಾಕುವೆನು. ಎಲೈ ಪಾರ್ಥನೇ! ನೀನು ಅದನ್ನುಳಿಸಿಕೊ" ಎಂದನು. ಬಾಣದ ಪೆಟ್ಟಿನಿಂದ ರಥವು ಜರ್ಝರಿತವಾಗಿ ಈಶ್ವರ ಕೃಷ್ಣ ಅರ್ಜುನರೊಡನೆ ನೆಲದಲ್ಲಿ ಸುತ್ತು ತ್ತಿದ್ದಿತು. ಆಗ ಕೃಷ್ಣನು ಕೋಪದಿಂದ ರಥವನ್ನು ಕಾಲಿನಿಂದ ಮೆಟ್ಟಿ ನಿಲ್ಲಿಸಿ ನೆಲದೊಳಗೆ ಹೂಳಿಹೋಗುವಂತೆ ತುಳಿದರೂ ಅದು ಸುತ್ತುತ್ತಿದ್ದಿತಲ್ಲದೆ ನಿಲ್ಲಲಿಲ್ಲ. ಅದನ್ನು ನೋಡಿ ಕೃಷ್ಣನು ವಿಸ್ಮಿತನಾದನು. ಸುರಥನು ಪುನಃ ಕೃಷ್ಣಾರ್ಜುನರನ್ನು ಬಾಣಗಳಿಂದ ಹೊಡೆದು ಭೇದಿಸಿದನು. ರೋಷದಿಂದ ಕೃಷ್ಣನು ಪಾಂಚಜನ್ಯವನ್ನೂ ಅರ್ಜುನನು ದೇವದತ್ತವನ್ನೂ ಧ್ವನಿ ಮಾಡುತ್ತಿರಲು, ಕೃಷ್ಣನು ಅರ್ಜುನನನ್ನು ನೋಡಿ, "ನಾನು ಎಷ್ಟು ಬಗೆಯಲ್ಲಿ ಹಿಡಿದು ನಿಲ್ಲಿಸಿದರೂ ನಿನ್ನ ರಥವು ನಿಲ್ಲದೆ ಬಾಣದ ವೇಗದಿಂದ ಬಲಾತ್ಕಾರವಾಗಿ ಹಾರಿಹೋಗುತ್ತಿದೆ. ಸುರಥನನ್ನು ಈಗ ನೀನು ವಿರಥನನ್ನಾಗಿ ಮಾಡು" ಎಂದನು. ಆಗ ಅರ್ಜುನನು ಕ್ರುದ್ಧನಾಗಿ ಅದೇ ಪ್ರಕಾರ ಸಾರಥಿ ಹಯ ಧ್ವಜ ಸಹಿತವಾದ ಸುರಥನ ರಥವನ್ನು ಬಾಣಗಳಿಂದ ಶತ ಚೂರ್ಣವಾಗಿ ಮಾಡಿದನು. ಹೀಗೆ ಅರ್ಜುನನು ಯುದ್ಧದಲ್ಲಿ ಸುರಥನನ್ನು ವಿರಥ ನನ್ನಾಗಿ ಮಾಡುವಷ್ಟರಲ್ಲಿ ಹನುಮಂತನು ಅರ್ಜುನನ ರಥವನ್ನು ತನ್ನ ಬಾಲದಿಂದ ಬಿಗಿದು ಯುದ್ಧಭೂಮಿಯಲ್ಲಿ ನಿಲ್ಲಿಸಿದನು; ಕೃಷ್ಣನೂ ಆಗ ಅದನ್ನು ಚೆನ್ನಾಗಿ ಹಿಡಿದು ನಿಲ್ಲಿಸಲು, ಅದು ಓಡಿಹೋಗದೆ ಸ್ಥಿರವಾಗಿ ನಿಂತಿತು. ಆಗ ಸುರಥನು, "ಎಲೈ ಕೃಷ್ಣನೇ! ನಿನ್ನ ಭಾರದಿಂದ ಈ ರಥವು ಕಟ್ಟಿದಂತಾಗಿದೆ. ನೀವಿಬ್ಬರೂ ಇದನ್ನು ಕೆಳಕ್ಕೆ ಇಳಿಯುವಂತೆ ಮಾಡಿದ್ದೀರಷ್ಟೆ! ನಾನು ಇದನ್ನು ಪುನಃ

ಮೇಲಕ್ಕೆತ್ತಿಹಾಕುವೆನು" ಎಂದು ಹೇಳಿ ಮೂಕೀ ಮರವನ್ನು ಹಿಡಿದೆತ್ತಿ, ಮುರಿದು ಹೋಗಿದ್ದ ಆ ರಥವನ್ನು ತನ್ನ ಬಲದಿಂದೆತ್ತಿ ನಿಲ್ಲಿಸಿ, "ಎಲೈ ಪಾರ್ಥನೇ! ಈ ನಿನ್ನ ರಥವನ್ನು ಯುದ್ಧಭೂಮಿಯಲ್ಲಿ ತಪ್ಪಿಸಿ, ಸಮುದ್ರದಲ್ಲಿಯೋ, ಮೇರುವಿನಲ್ಲಿಯೋ, ಅಥವಾ ಹಸ್ತಿನಾಪುರದಲ್ಲಿಯೋ, ಅಥವಾ ಮತ್ತೆಲ್ಲಿಯೋ ಎತ್ತಿಹಾಕಲಿ?" ಎಂದು ಕೇಳಿದನು. ರಥದ ಮೇಲಿದ್ದ ಅರ್ಜುನನು ಐದು ಬಾಣಗಳಿಂದ ಸುರಥನನ್ನು ಹೊಡೆಯಲು, ಅವನು ಮೂರ್ಛಿತನಾದನು; ಅವನ ಕೈಯಿಂದ ರಥವು ಜಾರಿ ಹೋಯಿತು.

ಬಳಿಕ ಸುರಥನು ಮೂರ್ಛೆಯಿಂದೆಚ್ಚತ್ತು ಬೇರೊಂದು ರಥವನ್ನು ಹತ್ತಿ ಯುದ್ಧಕ್ಕೆ ನಿಂತನು. ಇಬ್ಬರೂ ಕೋಪದಿಂದ ಕ್ರೂರವಾದ ನೇತ್ರಗಳುಳ್ಳವರಾಗಿ ನಿಂತು, ಅರ್ಧ ಚಂದ್ರಾಕಾರವಾಗಿಯೂ, ಕರುಗಳ ಹಲ್ಲಿನ ಆಕಾರವಾಗಿಯೂ, ಹಂದಿಯ ಕಿವಿಯಂತೆಯೂ, ಹರಿತವಾದ ಮುಳ್ಳು ಮೊನೆಗಳುಳ್ಳುವಾಗಿಯೂ ಇರುವ ಬಾಣಗಳನ್ನು ಪ್ರಯೋಗಿಸಿ ಯುದ್ಧ ಮಾಡಿದರು. ಆಗ ಸುರಥನು ಪಾರ್ಥನನ್ನು ನೋಡಿ, "ನಿನ್ನ ಪ್ರತಿಜ್ಞೆಯು ಸುಳ್ಳಾಗುವುದಿಲ್ಲವೆಂದು ಪೂರ್ವದಿಂದಲೂ ಪ್ರಸಿದ್ಧಿಯಿರುವುದಷ್ಟೆ! ಈಗ ಯಾವುದಾದರೂ ಒಂದು ಸತ್ಯ ಪ್ರತಿಜ್ಞೆಯನ್ನು ಮಾಡು" ಎಂದನು. ಅದಕ್ಕೆ ಅರ್ಜುನನು, "ನಾನು ನಿನ್ನನ್ನು ನಿಮ್ಮ ತಂದೆಯ ಎದುರಿಗೆ ಕೆಡಹಿಬಿಡುತ್ತೇನೆ. ನೀನು ಮಾಡುವ ಪ್ರತಿಜ್ಞೆಯೇನು?" ಎಂದನು. ಸುರಥನು, "ನಾನು ನಿನ್ನನ್ನು ರಥದಿಂದ ನೆಲಕ್ಕೆ ಕೆಡಹುವೆನು. ಹಾಗೆ ಮಾಡದಿದ್ದರೆ ನನ್ನ ಸುಕೃತವೆಲ್ಲವೂ ನಾಶವಾಗಲಿ" ಎಂದನು.

ಅಷ್ಟರಲ್ಲಿ ಸುರಥನೂ ಅರ್ಜುನನೂ ಒಬ್ಬರನ್ನೊಬ್ಬರು ಬಾಣದ ಮಳೆಯಿಂದ ಮುಚ್ಚಿದರು. ಅರ್ಜುನನು ಸುರಥನ ನೂರೆಂಟು ರಥಗಳನ್ನು ಮುರಿದು ಹಾಕಿ ರೋಷದಿಂದ ಬಹುವಾಗಿ ಸೇನೆಯನ್ನು ಕೊಂದನು. ಸುರಥನು ಅರ್ಧಚಂದ್ರಾಕಾರವಾದ ಬಾಣದಿಂದ ಅರ್ಜುನನ ಧನುವನ್ನೂ ಮೌರ್ವಿಯನ್ನೂ ಬಾಣಗಳನ್ನೂ ಕತ್ತರಿಸಿ ಅವನನ್ನೂ ಬಾಣಗಳಿಂದ ಹೊಡೆದನು. ಅರ್ಜುನನು ಪುನಃ ಬಿಲ್ಲನ್ನು ಹೆದೆಗೊಳಿಸಿ, ವಿರಥನಾಗಿ ನಿಂತಿದ್ದ ಸುರಥನ ಬಾಹುಮೂಲವನ್ನು ಅರ್ಧಚಂದ್ರಾಕೃತಿಯ ಬಾಣದಿಂದ ಹೊಡೆಯಲು, ನಾನಾಲಂಕಾರ ಸಹಿತವಾದ ಸುರಥನ ಬಲ ದೋಳು ಕತ್ತರಿಸಿ ನೆಲಕ್ಕೆ ಬಿದ್ದಿತು. ಸುರಥನು ರೋಷದಿಂದ ಅರ್ಜುನನೆದುರಿಗೆ ನಿಂತು ಎಡಗೈಯಲ್ಲಿ ಗದೆಯನ್ನು ತೆಗೆದುಕೊಂಡು ಅರ್ಜುನನ ಕುದುರೆಗಳನ್ನೂ ಕೃಷ್ಣನನ್ನೂ ಹೊಡೆದು, ಸಾವಿರ ಆನೆಗಳನ್ನೂ ಎರಡು ಸಾವಿರ ರಥಗಳನ್ನೂ ಹತ್ತು ಸಾವಿರ ಕುದುರೆಗಳನ್ನೂ ಹೊಡೆದು ನೆಲಕ್ಕೆ ಕೆಡಹಿದನು; ಅಲ್ಲಿಂದಿಲ್ಲಿಗೆ ಓಡಾಡುತ್ತ, "ಕೃಷ್ಣನೇ! ಅರ್ಜುನನೇ! ಶೂರರಾದ ದೊರೆಗಳೇ! ನಿಲ್ಲಿ ನಿಲ್ಲಿ" ಎಂದು ಹೇಳುತ್ತ ಹತ್ತು ಸಾವಿರ ಕಾಲಾಳುಗಳನ್ನು ಕೊಂದನು. ಬಳಿಕ ಅರ್ಜುನನು ಗದೆಯನ್ನು ಹಿಡಿದಿದ್ದ ಸುರಥನ ಎಡಗೈಯನ್ನು ಕತ್ತರಿಸಿ ಕೆಡಹಿದನು. ಶೂರನಾದ ಸುರಥನು ಎರಡು ಕೈಗಳನ್ನೂ ಕಳೆದುಕೊಂಡರೂ, "ಎಲೈ ಅರ್ಜುನನೇ! ನಿನ್ನ ಶತ್ರುವಾದ

ನಾನು ಎದುರಾಗಿದ್ದೇನೆ. ನೀನು ಆತ್ಮ ರಕ್ಷಣೆ ಮಾಡಿಕೊ. ಎಲೈ ಕೃಷ್ಣನೇ! ನೀನು ನಿನ್ನ ಮಿತ್ರನನ್ನೂ ಅವನ ರಥವನ್ನೂ ರಕ್ಷಿಸು" ಎಂದು ಹೇಳುತ್ತ ಅರ್ಜುನನ ಮೇಲೆ ಬೀಳಲು ಓಡಿಬರುತ್ತಿರಲು, ಅದನ್ನು ನೋಡಿ ಅರ್ಜುನನು ನಾಲ್ಕು ಬಾಣಗಳನ್ನು ಸಂಧಾನ ಮಾಡಿ ಒಂದು ಬಾಣದಿಂದ ಸುರಥನ ಎದೆಯನ್ನು ಸೀಳಿ, ಎರಡು ಬಾಣಗಳಿಂದ ಅವನ ಪಾದಗಳನ್ನು ಕತ್ತರಿಸಿದನು. ಕಾಲಿಲ್ಲದಿದ್ದರೂ ಸುರಥನು ಅರ್ಜುನನ ರಥದ ಮೇಲೆ ಬರುತ್ತಿರಲು, ಆಗ ಅರ್ಜುನನು ಸಕಲ ದೇವಮಯವಾಗಿ ಸಂಧಾನ ಮಾಡಿದ ಮತ್ತೊಂದು ಬಾಣದಿಂದ ಅವನನ್ನು ಹೊಡೆದು, ಕುಂಡಲದಿಂದ ಪ್ರಕಾಶಮಾನವಾಗಿಯೂ ವಿಸ್ತಾರವಾದ ನೇತ್ರಗಳುಳ್ಳದಾಗಿಯೂ ಇರುವ ಸುರಥನ ಮಹಾ ಶಿರವನ್ನು ಕತ್ತರಿಸಿದನು. ಕಾಲಿಲ್ಲದೆಯೂ ತಲೆಯಿಲ್ಲದೆಯೂ ಇದ್ದ ಸುರಥನ ಮುಂಡವು ಗಿರಿ ಶಿಖರದಂತೆ ಇತ್ತತ್ತ ಓಡಾಡುತ್ತ ಅರ್ಜುನನ ಅನೇಕ ಸೇನೆಯನ್ನು ನಾಶಮಾಡಿತು. ಸುರಥನ ಶಿರಸ್ಸು ಕತ್ತರಿಸಿ ಅರ್ಜುನನ ಹಣೆಯ ಮೇಲೆ ಬೀಳಲು, ಅವನು ಮೂರ್ಛಿತನಾದನು. ಬಳಿಕ ಆ ತಲೆಯು ನೆಲಕ್ಕೆ ಬಿದ್ದು ಕೃಷ್ಣನ ಕಾಲ ಮೇಲೆ ಉರುಳಿತು.

ಇಂತು ಸುರಥ ವಧೆಯೆಂಬ ಇಪ್ಪತ್ತನೆಯ ಅಧ್ಯಾಯವು.

---

## ಇಪ್ಪತ್ತೊಂದನೆಯ ಅಧ್ಯಾಯ

ಬಳಿಕ ಕೃಷ್ಣನು ಸುರಥನ ತಲೆಯನ್ನು ಕೈಗಳಿಂದ ಎತ್ತಿ ಹಿಡಿದುಕೊಂಡು ಅರ್ಜುನನನ್ನು ನೆಲದಿಂದೆಬ್ಬಿಸಿ ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು, "ಎಲೈ ಪಾರ್ಥನೇ! ಮಹಾ ಬಾಹುವಾದ ಸುರಥನು ನನ್ನೆದುರಿಗೆ ಮಾಡಿದ ಪ್ರತಿಜ್ಞೆಯನ್ನು ನಿಶ್ಚಯವಾಗಿ ನಡೆಯಿಸಿ ಸತ್ಯವಾದಿಯೆನಿಸಿಕೊಂಡನು, ನೋಡು" ಎಂದನು. ಅದಕ್ಕೆ ಅರ್ಜುನನು, "ಇವನು ತನ್ನ ಪ್ರತಿಜ್ಞಾ ಪ್ರಕಾರವಾಗಿ ನನ್ನನ್ನು ನೆಲಕ್ಕೆ ಕೆಡಹಿದರೂ ನಿನ್ನ ಅನುಗ್ರಹದಿಂದ ನಾನು ಪುನಃ ಎದ್ದು ನಿಂತೆನು. ಇದೇನೂ ಆಶ್ಚರ್ಯವಲ್ಲ. ಇವನೇ ಧನ್ಯನು; ಇತರರು ಯಾರೂ ಅಲ್ಲ. ಆದಕಾರಣ ಇವನ ತಲೆಯನ್ನು ನನ್ನ ಕೈಗೆ ಕೊಡು. ಅದನ್ನು ಮುಟ್ಟಿ ನಮಸ್ಕರಿಸಿ ನಾನು ಶೂರನೆನಿಸಿಕೊಳ್ಳುವೆನು" ಎಂದು ಹೇಳಿ ಮೀಸೆಗಳಿಂದ ಕೂಡಿದ ಆ ತಲೆಯನ್ನು ಕೈಗೆ ತೆಗೆದುಕೊಂಡು ಅದಕ್ಕೆ ನಮಸ್ಕಾರ ಮಾಡಿದನು. ಆಗ ಶ್ರೀಕೃಷ್ಣನು ಗರುಡನನ್ನು ಸ್ಮರಿಸಲು, ಕೂಡಲೆ ಗರುಡನು ಬಂದು ಕೃಷ್ಣನಿಗೆ ನಮಸ್ಕರಿಸಿ ಅವನೆದುರಿಗೆ ನಿಂತನು. ಕೃಷ್ಣನು ಗರುಡನನ್ನು ನೋಡಿ, "ಎಲೈ ವೈನತೇಯನೇ! ನೀನು ನನ್ನ ಆಜ್ಞೆಯಂತೆ ಈ ಸುರಥನ ಶಿರಸ್ಸನ್ನು ಬೇಗನೆ ತೆಗೆದುಕೊಂಡು ಹೋಗಿ ಪ್ರಯಾಗ ತೀರ್ಥದಲ್ಲಿ ಹಾಕು" ಎಂದನು.

ಗರುಡನು ಕೃಷ್ಣನನ್ನು ಕುರಿತು, "ಎಲೈ ಕೃಷ್ಣನೇ! ಅಲ್ಲಿ ಗಂಗಾ ಯಮುನಾ ಸರಸ್ವತಿಗಳ ಜಲಮಾತ್ರವೇ ಇರುವುದು. ಈ ಶಿರಸ್ಸನ್ನು ಅಲ್ಲಿ ಹಾಕುವುದರಿಂದ ಏನು ಮಾಡಿದಹಾಗಾಗುವುದು? ಮಾಧವನಾದ ನೀನು ಇಲ್ಲಿಯೇ ಇರುವೆ. ಇದನ್ನು

ಏಕೆ ನಾನು ಅಲ್ಲಿಗೆ ತೆಗೆದುಕೊಂಡು ಹೋಗಬೇಕು? ಯಾವ ಮನುಷ್ಯನ ಅಸ್ಥಿಯು ಗಂಗಾ ನದಿಯಲ್ಲಿ ಬೀಳುವುದೋ ಅದು ಬಿದ್ದ ಕೂಡಲೆ ಅವನು ಸ್ವರ್ಗವನ್ನು ಹೊಂದಿ ಅಮೃತ ಭೋಜನ ಮಾಡುವನು. ಸುರಥನ ತೇಜಸ್ಸು ನಿನ್ನ ಮುಖದಲ್ಲಿ ಸೇರಿ ಹೋಯಿತು. ಆದರೂ ಈ ಶಿರಸ್ಸನ್ನು ಅಲ್ಲಿಗೆ ತೆಗೆದುಕೊಂಡು ಹೋಗುವೆನು. ಮಹಾತ್ಮರ ಆಜ್ಞೆಯು ದೊಡ್ಡದು. ನಾನು ನಿನ್ನ ದೂತನು. ಶಿರಸ್ಸನ್ನು ನನ್ನ ಕೈಗೆ ಕೊಡು'' ಎಂದನು. ಅದಕ್ಕೆ ಕೃಷ್ಣನು, ''ಎಲೈ ಗರುಡನೇ? ಆ ನನ್ನ ಪ್ರಯಾಗವು ಇವನಿಂದ ಪವಿತ್ರವಾಗುವುದು. ನನ್ನ ಬಂಡಾರದಲ್ಲಿ ಈ ತಲೆಯನ್ನು ಹಾಕು'' ಎಂದನು. ಗರುಡನು ಸುರಥನ ಮಹಾ ಶಿರವನ್ನು ತೆಗೆದುಕೊಂಡು ಆಕಾಶ ಮಾರ್ಗವಾಗಿ ಹೊರಟುಹೋಗುತ್ತಿರುವುದನ್ನು ಪ್ರಮಥ ಗಣ ಪರಿವೃತನಾಗಿಯೂ ವೃಷಭಾರೂಢನಾಗಿಯೂ ಪಾರ್ವತೀ ಸಮೇತನಾಗಿಯೂ ವರ ಪ್ರದನಾಗಿಯೂ ಭಗವಂತನಾಗಿಯೂ ಶೂಲ ಧರನಾಗಿಯೂ ಚರಾಚರಗಳಿಗೆ ಗುರುವಾಗಿಯೂ ಸೃಷ್ಟಿ ಕಾರಕನಾಗಿಯೂ ಸಕಲ ಲೋಕ ಪಾಲಕನಾಗಿಯೂ ಬ್ರಹ್ಮಾದಿ ದೇವತೆಗಳಿಗೆ ಸೇವ್ಯ ನಾಗಿಯೂ ಇರುವ ಪರಮೇಶ್ವರನು ಕಂಡು ಭೃಂಗಿಯನ್ನು ಕುರಿತು, ''ನೀನು ಗರುಡನ ಬಳಿಗೆ ಹೋಗು'' ಎಂದು ಕಳುಹಿಸಿದನು. ಪಾರ್ವತಿಯು ಅದನ್ನು ಕಂಡು, ''ಎಲೈ ವಿರೂಪಾಕ್ಷನೇ! ಈ ಗರುಡನು ಈಗ ತೆಗೆದುಕೊಂಡು ಹೋಗುತ್ತಿರು ವುದೇನು? ನನಗೆ ತಿಳಿಯಬೇಕೆಂಬ ಕುತೂಹಲವುಂಟಾಗಿದೆ'' ಎಂದು ಕೇಳಿದಳು. ಅದಕ್ಕೆ ಈಶ್ವರನು, ''ಎಲೈ ಶೋಭನಾಂಗಿಯೇ! ಅರ್ಜುನನು ವೀರನಾದ ಸುರಥ ನನ್ನು ಯುದ್ಧದಲ್ಲಿ ಕೊಂದನು. ಅವನ ತಲೆಯನ್ನು ಕೃಷ್ಣನ ಆಜ್ಞಾನುಸಾರವಾಗಿ ಪ್ರಯಾಗೆಯಲ್ಲಿ ಹಾಕುವುದಕ್ಕೆ ಗರುಡನು ತೆಗೆದುಕೊಂಡು ಹೋಗುತ್ತಿರುವನು. ಅದನ್ನು ನನ್ನ ಬಳಿಗೆ ತರುವುದಕ್ಕಾಗಿ ನಾನು ಭೃಂಗಿಗೆ ಹೇಳಿ ಕಳುಹಿಸಿದೆನು. ಎಲೆ ಭದ್ರೆ! ಪೂರ್ವದಲ್ಲಿ ಇವನ ಅಣ್ಣನಾದ ಸುಧನ್ವನ ಕುಂಡಲಾಲಂಕೃತವಾದ ತಲೆ ಯನ್ನು ನನ್ನ ರುಂಡಮಾಲೆಗಾಗಿ ತರಿಸಿಕೊಂಡೆನು. ಈ ಸುರಥನ ತಲೆಯು ಎರಡ ನೆಯ ಭೂಷಣವಾಗುವುದು. ಧರ್ಮಿಷ್ಠರೂ ದಾನಿಗಳೂ ಕೃತಜ್ಞರೂ ಶೂರರೂ ಜಿತ ಕಾಮರೂ ಆದವರ ತಲೆಯು ನನಗೆ ಯಾವಾಗಲೂ ಭೂಷಣವಾಗುವುದು. ಇತರರ ತಲೆಯನ್ನು ಮಾಲೆಯಲ್ಲಿ ಎಂದಿಗೂ ನಾನು ಧರಿಸುವುದಿಲ್ಲ'' ಎಂದನು.

ಈಶ್ವರನ ಮಾತನ್ನು ಕೇಳಿ ಭೃಂಗಿಯು ಬೇಗನೆ ಗರುಡನ ಬಳಿಗೆ ಹೋಗಿ, ''ಎಲೈ ಗರುಡನೆ! ಈ ತಲೆಯನ್ನು ನನಗೆ ಕೊಡು. ನೀನು ನನ್ನನ್ನು ಲಕ್ಷ್ಯ ಮಾಡದೆ ಹೋದರೆ ಬಲಾತ್ಕಾರದಿಂದ ಅದನ್ನು ತೆಗೆದುಕೊಳ್ಳುವೆನು. ನಾನು ನಿನಗೆ ಹೆದರುವು ದಕ್ಕೆ ಸರ್ಪವಲ್ಲ. ನನ್ನ ಕಠಿನತರವಾದ ಪ್ರಭಾವವನ್ನು ನೀನರಿಯೆ; ಬಿಡು, ಬಿಡು'' ಎಂದನು. ಬಳಿಕ ಗರುಡನು ಭೃಂಗಿಯನ್ನು ತನ್ನ ರೆಕ್ಕೆಗಳಿಂದ ಕೊಡಹಿ ಪ್ರಯಾಗ ತೀರ್ಥದ ಬಳಿಗೆ ಹೊರಟುಹೋದನು. ಭೃಂಗಿಯು ಭಯಂಕರವಾದ ಗರುಡನ ರೆಕ್ಕೆಯ ಗಾಳಿಯಿಂದ ಒಣಗಿದೆಲೆಯು ಹಾರಿಹೋಗುವ ಹಾಗೆ ಈಶ್ವರನ ಬಳಿಗೆ ಹಾರಿ ಹೋದನು. ಅದನ್ನು ನೋಡಿ ಪಾರ್ವತಿಯು ನಗುತ್ತ, ''ಎಲೈ ಶಿವ ದೂತನೆ!

ಯಾವನ ರೆಕ್ಕೆಯ ಗಾಳಿಯಿಂದ ನೀನು ಈಶ್ವರನ ಬಳಿಗೆ ಹಾರಿಬಂದು ಬಿದ್ದೆಯೋ ಅಂತಹ ವಿಷ್ಣುವಾಹನನಾದ ಗರುಡನನ್ನು ನೀನು ಅರಿಯೆ". "ಎಲೈ ಶಿವನೇ! ನಿನ್ನ ವಾಹನವು ಮುದಿ ಎತ್ತು, ಸಮುದ್ರವನ್ನು ಸೇರುವವಳು ನಿನ್ನ ಪ್ರಿಯೆಯು, ನಿನ್ನ ವಸ್ತ್ರವಾದರೋ ಆನೆಯ ಚರ್ಮ, ಆಯುಧವು ಖಟ್ವಾಂಗ (ಮಂಚದ ಕೋಲು); ಹೀಗಿದ್ದರೂ ನೀನು ಬಲಹೀನನಾಗಿಯೂ ಶುಷ್ಕದೇಹವುಳ್ಳವನಾಗಿಯೂ ಇರುವ ಭೃಂಗಿಯನ್ನು ಪನ್ನಗಶತ್ರುವಾಗಿಯೂ ವೀರನಾಗಿಯೂ ಇರುವ ಗರುಡನ ಬಳಿಗೆ ಕಳುಹಿಸಬಹುದೆ?" ಎಂದು ಕೇಳಲು, ಈಶ್ವರನು ಪ್ರಸನ್ನಮುಖನಾಗಿ, 'ಎಲೈ ವೃಷಭನೇ! ನೀನು ಹೋಗಿ ಗರುಡನ ಕೈಯಿಂದ ಸುರಥನ ತಲೆಯನ್ನು ತೆಗೆದುಕೊಂಡು ಬಾ, ನಮ್ಮ ದೂತನ ಬಲವು ಪಾರ್ವತಿಯು ತಿಳಿದುಕೊಂಡಿರುವಂತೆಯೇ ಸರಿ" ಎಂದು ಆಜ್ಞೆ ಮಾಡಿದನು. ಆತನ ಆಜ್ಞಾನುಸಾರ ನಂದಿಯು ಆ ತಲೆಯನ್ನು ತೆಗೆದುಕೊಂಡು ಬರುವುದಕ್ಕಾಗಿ ಕೋಪದಿಂದ ಗರುಡನ ಬಳಿಗೆ ಬರಲು, ವೃಷಭನ ನಿಶ್ವಾಸಮಾರುತದಿಂದ ಗರುಡನ ದೇಹವು ಹಾರಿ ಭೂಲೋಕವನ್ನೆಲ್ಲ ಭ್ರಮಿಸುತ್ತಿದ್ದಿತು. ಆ ನಿಶ್ವಾಸವು, ನಿಲ್ಲುವುದಕ್ಕವಕಾಶವಿಲ್ಲದಂತೆ ಗರುಡನನ್ನು ಹಾರಿಸುತ್ತಿರಲು, ಅಂಗಳದಲ್ಲಿ ಹಾರುತ್ತಿರುವ ಅರಳೆಯನ್ನು ಹಿಡಿಯಲು ಹೋದ ಆನೆಯನ್ನು ಅರಳೆಯು ಸುತ್ತಿಸುವಂತೆ, ಅವನು ಅನೇಕ ಗಿರಿ ನದೀ ಸಮುದ್ರಗಳನ್ನೂ ಸತ್ಯಲೋಕ ಕೈಲಾಸ ವೈಕುಂಠ ಮೊದಲಾದ ಲೋಕಗಳನ್ನೂ ಸುತ್ತುತ್ತ ದೈವವಶದಿಂದ ಪ್ರಯಾಗವನ್ನು ಸೇರಿ ಕೃಷ್ಣನ ಆಜ್ಞೆಯನ್ನು ನೆನೆದು ಆ ತಲೆಯನ್ನು ಪ್ರಯಾಗ ತೀರ್ಥಮಧ್ಯದಲ್ಲಿ ಹಾಕಿದನು. ಕೂಡಲೆ ನಂದಿಯು ಆ ತಲೆಯನ್ನು ತೆಗೆದುಕೊಳ್ಳಲು, ಗರುಡನು ಕೃಷ್ಣನ ಬಳಿಗೆ ನಗುತ್ತ ಹಿಂದಿರುಗಿ ಬಂದನು. ನಂದಿಯು ಆ ಶಿರವನ್ನು ಈಶ್ವರನ ಕೈಗೆ ತಂದು ಕೊಡಲು, ಹೊಳೆಯುತ್ತಿರುವ ಕುಂಡಲಗಳುಳ್ಳ ಆ ತಲೆಯನ್ನು ಈಶ್ವರನು ತನ್ನ ರುಂಡಮಾಲಿಕೆಯ ಮಧ್ಯಮಣಿಯನ್ನಾಗಿ ಮಾಡಿಕೊಂಡನು.

ಯುದ್ಧದಲ್ಲಿ ಬಿದ್ದುಹೋದ ತನ್ನ ಮಗನಾದ ಸುರಥನನ್ನು ನೋಡಿ ಹಂಸಧ್ವಜನು ಬೇಗನೆ ರಥಾರೂಢನಾಗಿ ಪಾರ್ಥನ ಮೇಲೆ ಯುದ್ಧಕ್ಕೆ ಹೊರಟನು. ಭೂಮಿಯು ನಡುಗಿತು, ಶೇಷನು ಅಳ್ಳಾಡಿಹೋದನು. ಬಲಸಹಿತನಾಗಿ ಕೋಪಾವೇಶದಿಂದ ಬರುತ್ತಿದ್ದ ಹಂಸಧ್ವಜನನ್ನು ಕಂಡು ಕೃಷ್ಣನು ರಥದಿಂದ ಕೆಳಗಿಳಿದು ತನ್ನೆರಡು ಕೈಗಳನ್ನೂ ನೀಡಿಕೊಂಡು ನಿಂತನು. ಪರಿಶುದ್ಧನಾಗಿಯೂ ವೀರನಾಗಿಯೂ ಇರುವ ಹಂಸಧ್ವಜನನ್ನು ಕುರಿತು ಶ್ರೀಕೃಷ್ಣನು, "ಎಲೈ ಆರ್ಯನೇ! ನನಗೆ ನಿನ್ನಲ್ಲಿ ಬಹಳ ಪ್ರೀತಿಯಿರುವುದು, ಯುದ್ಧಕೋಪವನ್ನೂ ಪುತ್ರಶೋಕವನ್ನೂ ಬಿಟ್ಟು ನನಗೆ ಆಲಿಂಗನ ಸುಖವನ್ನು ಕೊಡು" ಎಂದನು. ಹಂಸಧ್ವಜನು ಅದನ್ನು ಕೇಳಿ ಕೃಷ್ಣನನ್ನು ನೋಡಿ ರಥದಿಂದ ನೆಲಕ್ಕಿಳಿದು ಶ್ರೀಕೃಷ್ಣನನ್ನು ಆಲಿಂಗಿಸಿ ನಗುತ್ತ, "ಎಲೈ ಶ್ರೀಕೃಷ್ಣನೇ! ಅನಾಥನಾದ ನಾನು ನಾಥನಾದ ನಿನ್ನನ್ನು ಹೊಂದಿದ ಮೇಲೆ ನನಗೆ ಪುತ್ರಶೋಕವೆಲ್ಲಿಯದು? ಯಾವುದರ ದೆಸೆಯಿಂದಲೂ ನನಗೆ ಭಯವಿಲ್ಲ; ಯಮನಿಗೂ ನಾನು ಹೆದರುವುದಿಲ್ಲ" ಎಂದನು. ಬಳಿಕ ಕೃಷ್ಣನು

ಹಂಸಧ್ವಜನನ್ನು ಕುರಿತು, "ಕುದುರೆಯನ್ನು ಬಿಟ್ಟು ಈ ಪಾರ್ಥನನ್ನು ರಕ್ಷಿಸು. ನಾನು ಧರ್ಮನಂದನನ ಬಳಿಗೆ ಹೋಗುವೆನು. ನಾನು ಈ ಪಾರ್ಥನಿಗಾಗಿ ಹೇಗೆ ನನ್ನ ದೇಹವನ್ನು ಬಿಡಲು ಸಿದ್ಧನಾಗಿರುವೆನೋ, ಹಾಗೆ ನೀನೂ ಯುದ್ಧದಲ್ಲಿ ಈ ಅರ್ಜುನನನ್ನು ರಕ್ಷಿಸು; ನನ್ನ ಸಖನಾದ ಪಾರ್ಥನು ರಥದಲ್ಲಿ ಕುಳಿತುಕೊಂಡಿರುವನು, ನೋಡು" ಎಂದು ಹೇಳಿ ಅರ್ಜುನನನ್ನು ಕರೆತಂದು, ಕ್ಲೇಶ ನಾಶಕನಾದ ಶ್ರೀಕೃಷ್ಣನು ಅವರಿಬ್ಬರಿಗೂ ಪರಿಚಯ ಮಾಡಿಸಿ ಕುದುರೆಯನ್ನು ಬಿಡಿಸಿಕೊಂಡು ಆ ಪಟ್ಟಣದಲ್ಲಿ ಐದು ದಿನಗಳಿದ್ದು ಅಲ್ಲಿಂದ ಹಸ್ತಿನಪುರಕ್ಕೆ ಬಂದು ನಡೆದ ವೃತ್ತಾಂತವನ್ನೆಲ್ಲ ಧರ್ಮರಾಜನಿಗೆ ತಿಳಿಸಿದನು.

ಕುದುರೆಯನ್ನು ಬಿಚ್ಚಿ ಬಿಡಲು, ಅದು ಸ್ವೇಚ್ಛೆಯಾಗಿ ಭೂ ಸಂಚಾರ ಮಾಡುತ್ತ ಮುಂದಕ್ಕೆ ಹೊರಟಿತು. ಅದರ ಹಿಂದೆಯೇ ಹಂಸಧ್ವಜನನ್ನು ಕರೆದುಕೊಂಡು ಅರ್ಜುನನೂ ಹೊರಟು ಪ್ರದ್ಯುಮ್ನ ಮೊದಲಾದ ಐವರು ತನ್ನ ಬೆಂಗಾವಲಿಗಾಗಿ ಬರುತ್ತಿರಲು, ಉತ್ತರಾಭಿಮುಖವಾಗಿ ನಡೆದನು. ಕುದುರೆಯು ಬಿಟ್ಟಕೂಡಲೆ ಭಯಂಕರವಾದ ದೇಶಗಳನ್ನು ಹೊಕ್ಕಿತು. ಹಂಸಧ್ವಜ, ವಿಶಾಲಾಕ್ಷ, ಪ್ರದ್ಯುಮ್ನ, ಅನುಸಾಲ್ವ, ಸುವೇಗ—ಈ ಐದು ಮಂದಿ ರಥಿಕರೂ ಅರ್ಜುನನ ಅಂಗರಕ್ಷಕರಾಗಿರಲು, ಅರ್ಜುನನು ಕುದುರೆಯನ್ನು ಬಿಡದೆ ಹಿಂದಟ್ಟಿ ಹೋಗುತ್ತಿದ್ದನು.

ಕುದುರೆಯು ಬಾಯಾರಿ ನೀರು ಕುಡಿಯಲು ಅಲ್ಲಿದ್ದ ವಿಸ್ತಾರವಾದ ಕಮಲ ಸರೋವರವೊಂದನ್ನು ಹೊಕ್ಕಿತು. ಅಲ್ಲಿಂದ ಹಿಂದಿರುಗುವಾಗ ಅದು ಹೆಣ್ಣು ಕುದುರೆಯಾಯಿತು; ಅದನ್ನು ನೋಡಿ ಎಲ್ಲರೂ ವಿಸ್ಮಿತರಾಗಿ, "ಇದೇನು! ಈ ವನವು ಬಹಳ ಭಯಂಕರವಾಗಿದೆ! ಯಾವ ದೈವ ವಿಲಾಸದಿಂದ ಈ ಕುದುರೆಯು ಹೆಣ್ಣು ಕುದುರೆಯಾಯಿತೋ?" ಎಂದು ಚಿಂತಿಸುತ್ತ ಎಲ್ಲರೂ ಹಿಂದೆಯೇ ಬರುತ್ತಿರಲು, ಅಲ್ಲಿ ಮತ್ತೊಂದು ಸರೋವರವು ಸಿಕ್ಕಿತು. ಆ ಹೆಣ್ಣು ಕುದುರೆಯು ಆ ಸರೋವರಕ್ಕಿಳಿಯಲು ಅದು ಹೆಣ್ಣು ಹುಲಿಯಾಯಿತು. ಪಾರ್ಥನೇ ಮೊದಲಾದವರು, "ಇನ್ನೂ ಏನೇನಾಗುವುದೋ?" ಎಂದು ಹೇಳಿಕೊಳ್ಳುತ್ತಿರುವಲ್ಲಿ, ಆ ಹುಲಿಯು ಹೊರಕ್ಕೆ ಹೊರಟು ಭಯವನ್ನುಂಟುಮಾಡಿತು.

ಹೀಗೆಂದು ಜೈಮಿನಿ ಮುನಿಯು ಜನಮೇಜಯನಿಗೆ ಹೇಳಲು, ಜನಮೇಜಯನು "ಎಲೈ ಮುನಿಯೇ! ನೀನು ಹೇಳಿದುದು ಆಶ್ಚರ್ಯವಾಗಿದೆ. ಆ ವನದಲ್ಲಿದ್ದ ಸರೋವರವನ್ನು ಪ್ರವೇಶಿಸಿದ ಮಾತ್ರಕ್ಕೆ ಆ ಕುದುರೆಯು ಹೆಣ್ಣು ಕುದುರೆಯಾಗಲು ಕಾರಣವೇನು? ಆ ವನವೂ ಸರೋವರವೂ ಯಾವುವು? ಆ ಕುದುರೆಯು ಹೆಣ್ಣು ಕುದುರೆಯಾದುದೇಕೆ? ಮತ್ತೆ ಅದು ಹೆಣ್ಣು ಹುಲಿಯಾಗಲು ಕಾರಣವೇನು? ಈ ಸಂಗತಿಯು ನನಗೆ ಸಂದೇಹಾಸ್ಪದವಾಗಿದೆ. ಅದು ಪುನಃ ಕುದುರೆಯಾದುದು ಹೇಗೆ? ಇವೆಲ್ಲವನ್ನೂ ತಿಳಿಸುವವನಾಗು" ಎಂದು ಕೇಳಲು, ಜೈಮಿನಿಯು ಹೀಗೆ ಹೇಳತೊಡಗಿದನು :—

"ಎಲೈ ದೊರೆಯೇ! ಇದರ ಪೂರ್ವವೃತ್ತವನ್ನು ಹೇಳುತ್ತೇನೆ, ಕೇಳು: ಆ ವನವೂ ಸರೋವರವೂ ಉಮಾವನ ಸರೋವರಗಳೆನಿಸುವುವು. ಅಲ್ಲಿ ಉಮೆಯು ಮಹಾ ತಪಸ್ಸನ್ನು ಮಾಡಿದಳು. ಆಕೆಯು, 'ನನಗೆ ಈಶ್ವರನು ಸರ್ವದಾ ಪ್ರಸನ್ನ ನಾಗಿರಬೇಕೆಂಬ ಉದ್ದೇಶದಿಂದ ನಾನು ತಪಸ್ಸು ಮಾಡುತ್ತೇನೆ. ನನ್ನ ವಿಘ್ನವನ್ನು ಪರಿಹಾರ ಮಾಡು' ಎಂದು ಸಂಕಲ್ಪಿಸಿ, ದೇವತಾ ಪ್ರಾರ್ಥನೆ ಮಾಡಿ ಬಹು ಕಾಲ ಮಹಾ ತಪವನ್ನಾಚರಿಸಿದಳು. ಅಲ್ಲಿಗೆ ದುರಾಚಾರಪರನಾದ ರಾಕ್ಷಸನೊಬ್ಬನು ತಪೋ ವಿಘ್ನಾರ್ಥವಾಗಿ ಬಂದು ಅಲ್ಲಿರುವ ಉಮಾದೇವಿಯನ್ನು ನೋಡಿ, 'ಎಲೆ ಭದ್ರೆ! ನೀನು ಸುಂದರಿಯಾಗಿದ್ದೀಯೆ; ನಿನಗಸಾಧ್ಯವಾದುದು ಯಾವುದಿದೆ? ನಿನಗೆ ಬೇಕಾದುದೆಲ್ಲವನ್ನೂ ಕೊಡುವೆನು; ನನಗೆ ಹೆಂಡತಿಯಾಗು' ಎಂದು ಕೇಳಿದನು. ದೇವಿಯು ಅವನ ದುಷ್ಟವಾಕ್ಯಗಳನ್ನು ಕೇಳಿ ಕುಪಿತಳಾಗಿ, ರೋಷದಿಂದ ಕೆಂಪಾದ ನೇತ್ರಗಳುಳ್ಳವಳಾಗಿ, 'ಎಲೈ ದುರ್ಬುದ್ಧಿಯೇ! ನೀನು ಸುಟ್ಟು ಬೂದಿಯಾಗಿ ಹೋಗು' ಎಂದು ಶಪಿಸಿದಳು. ಈ ರೀತಿ ಅವನನ್ನು ಸುಟ್ಟು ಬೂದಿ ಮಾಡಿ ಅಲ್ಲಿದ್ದ ವನ ದೇವತೆಗಳನ್ನು ಕುರಿತು, 'ಇನ್ನುಮೇಲೆ ಈ ವನಕ್ಕೂ ಸರೋವರಕ್ಕೂ ಯಾವ ಪುರುಷಪ್ರಾಣಿಯಾಗಲಿ ನನ್ನನ್ನು ಲಕ್ಷಿಸದೆ ಮೂಢಬುದ್ಧಿಯಿಂದ ಬರುವುದೋ ಅದು ಸ್ತ್ರೀತ್ವವನ್ನು ಹೊಂದಲಿ, ಇದಕ್ಕೆ ಸಂದೇಹವಿಲ್ಲ' ಎಂದು ಹೇಳಿದಳು. ಆಗಿನಿಂದ ಯಾವನಾದರೂ ಅವಿವೇಕಿಯು ಈ ವನವನ್ನು ಪ್ರವೇಶಿಸಿದರೆ ಅವನಿಗೆ ಸ್ತ್ರೀರೂಪ ವುಂಟಾಗುತ್ತದೆ. ಆದಕಾರಣ ಆ ಕುದುರೆಯು ಸರೋವರದ ನೀರನ್ನು ಸೋಕಿದ ಮಾತ್ರಕ್ಕೆ ಹೆಣ್ಣು ಕುದುರೆಯಾಯಿತು.

ಕುದುರೆಯು ಹುಲಿಯಾದುದಕ್ಕೆ ಕಾರಣವೇನೆಂದರೆ:—ಕೃತ ಯುಗದಲ್ಲಿ ಅಕೃತ ವ್ರಣನೆಂಬ ಬ್ರಾಹ್ಮಣನು ತೀರ್ಥ ಯಾತ್ರಾ ನಿಮಿತ್ತವಾಗಿ ಭೂ ಪ್ರದಕ್ಷಿಣ ಮಾಡುತ್ತ ಹೊರಟು ಅಲ್ಲಲ್ಲಿ ತಪಸ್ಸು ಮಾಡುತ್ತ ಈ ವನಕ್ಕೆ ಬಂದು ಈ ಸರೋವರವನ್ನು ಕಂಡು ವಾರುಣ ಮಂತ್ರ ಪೂರ್ವಕವಾಗಿ ಅದರಲ್ಲಿ ಸ್ನಾನ ಮಾಡಿ ವಿಧಿ ಪ್ರಕಾರ ಆಚಮನಾದಿ ಗಳನ್ನು ಮಾಡಿ ಸರೋವರದಿಂದೀಚೆಗೆ ಹೊರಡಲು, ಅವನ ಕಾಲನ್ನು ಕ್ರೂರವಾದ ಮೊಸಳೆಯೊಂದು ಹಿಡಿದು ಕಡಿಯುತ್ತಲೂ ಒಳಗೆಳೆದುಕೊಳ್ಳುತ್ತಲೂ ಅವನನ್ನು ಬಿಡದೆ ಹೋಯಿತು. ಪುನಃ ಪುನಃ ತನ್ನನ್ನೆಳೆಯುತ್ತಿರುವ ಆ ಮೊಸಳೆಯನ್ನು ನೋಡಿ ಆ ಬ್ರಾಹ್ಮಣನು, 'ಈ ನೀರಿನಲ್ಲಿ ನನ್ನನ್ನು ಬಲವಾಗಿ ಹಿಡಿದೆಳೆಯುತ್ತಿರುವ ದುಷ್ಟ ಸತ್ತ್ವವಾವುದು? ಇದೇನು ದೈತ್ಯನೋ, ದಾನವನೋ, ಅಥವಾ ದುಷ್ಟ ಮತ್ಸ್ಯವೋ? ಈ ಕೆಟ್ಟ ನೀರಿಗೆ ನಾನೇಕೆ ಇಳಿದೆನೋ!' ಎಂದು ಚಿಂತಿಸುತ್ತ ಕೋಪದಿಂದ ಆ ನೀರನ್ನೂ ಆ ನೀರಿನಲ್ಲಿರುವ ದೇವತೆಯನ್ನೂ ಶಪಿಸಿದನು. 'ಈ ಕೆಟ್ಟ ನೀರನ್ನು ಯಾರು ಮುಟ್ಟುವರೋ ಅವರು ಹುಲಿಯಾಗಲಿ; ನನ್ನ ಮಾತು ಸುಳ್ಳಾಗದಿರಲಿ' ಎಂದು ಹೇಳಿ ಬಲಾತ್ಕಾರದಿಂದ ಮೊಸಳೆಯನ್ನು ತಪ್ಪಿಸಿ ಬಿಡಿಸಿ ಕೊಂಡು ಹೊರಟುಹೋದನು. ಆಗಿನಿಂದ ಈ ಸರೋವರವು ಶಾಪ ಗ್ರಸ್ತವಾಗಿ ಕೆಟ್ಟುಹೋಯಿತು. ಎಲೈ ಜನಮೇಜಯನೇ! ನೀನು ಕೇಳಿದ ಸಂಗತಿಯೆಲ್ಲವನ್ನೂ

ತಿಳಿಸಿದೆನು. ಹುಲಿಯು ಪುನಃ ಕುದುರೆಯಾದುದನ್ನು ಕೇಳು :—ಭಯಂಕರವಾದ ಹುಲಿಯ ರೂಪವನ್ನು ಪಡೆದ ಆ ಕುದುರೆಯನ್ನು ನೋಡಿ ಅರ್ಜುನನು, 'ಪೂರ್ವದಲ್ಲಿ ನಮ್ಮನ್ನು ಯಾವ ದೇವನ ಮಹಿಮೆಯು ಹಗಲೂ ರಾತ್ರಿಯೂ ಸೈನಿಕರನ್ನು ಮೋಹಗೊಳಿಸಿ ದುರ್ಯೋಧನನ ಭಯದಿಂದ ಬಿಡುಗಡೆಮಾಡಿತೋ, ಆ ದೇವನಾದ ಶ್ರೀಕೃಷ್ಣನು ಈ ಮಹಾ ಸಂಕಟದಲ್ಲಿ ನನ್ನನ್ನು ರಕ್ಷಿಸಲಿ, ಯುಧಿಷ್ಠಿರನ ಯಜ್ಞ ಸಿದ್ಧಿಯನ್ನು ಮಾಡಲಿ' ಎಂದು ಸರ್ವ ಭಯ ನಾಶಕನಾದ ವಿಷ್ಣುವನ್ನು ಮನಸ್ಸಿನಲ್ಲಿ ಧ್ಯಾನಿಸಿ, ಪಾರ್ಥನು ನಿರ್ಭಯನಾಗಿ ನಿಂತನು. ಆ ಕ್ಷಣದಲ್ಲಿಯೇ ಹುಲಿಯು ತನ್ನ ರೂಪವನ್ನು ಬಿಟ್ಟು ಕುದುರೆಯಾಯಿತು. ಹುಲಿಯು ಮೊದಲಿನಂತೆ ಕುದುರೆಯಾದುದನ್ನು ಕಂಡು ಎಲ್ಲರೂ ನಾನಾ ವಿಧ ವಾದ್ಯಗಳನ್ನು ಬಾರಿಸುತ್ತ ಸಂತೋಷದಿಂದ ಕುಣಿದಾಡಿದರು.

ಬಳಿಕ ಆ ಕುದುರೆಯು ಅಲ್ಲಿಂದ ಹೊರಟು ದೈವವಶದಿಂದ ನಾನಾ ವಿಧವಾಗಿ ಶೋಭಿಸುತ್ತಿರುವ ಸ್ತ್ರೀರಾಜ್ಯವನ್ನು ಪ್ರವೇಶಿಸಿತು. ಅಲ್ಲಿ ರೂಪ ಯೌವನ ಶೋಭಿತೆಯರಾದ ಸ್ತ್ರೀಯರೇ ವಾಸವಾಗಿರುವರು; ರಾಜ್ಯವಾಳುವವಳೂ ಸ್ತ್ರೀಯೆ; ಗಂಡುಸು ಅಲ್ಲಿ ಜೀವಿಸಲಾರನು. ಯಾವನಾದರೂ ಅವರ ರೂಪ ಯೌವನ ಲಾವಣ್ಯಾದಿಗಳಿಂದಲೂ, ಮುಖ ವಿಲಾಸದಿಂದಲೂ, ಕಟಾಕ್ಷದಿಂದಲೂ, ನೃತ್ತ ಗೀತಗಳಿಂದಲೂ, ಹಾಸ್ಯದಿಂದಲೂ, ಮೃದು ಭಾಷಣದಿಂದಲೂ ಮೋಹಿತನಾಗಿ ಸಹವಾಸ ಮಾಡಿದರೆ, ಆ ಸ್ತ್ರೀಯರು ಒಂದು ತಿಂಗಳು ಸರಿಯಾಗಿದ್ದು ಬಳಿಕ ಅವನನ್ನು ಕೊಲ್ಲುವರು. ಸಮು ರತವನ್ನು ಮಾಡಿ ವಿಷಮವಾದ ದಂತ ಕ್ಷತದಿಂದಲೂ, ಬಗೆ ಬಗೆಯ ನಖ ಪ್ರಹಾರಗಳಿಂದಲೂ, 'ಅಯ್ಯೋ ಕೆಟ್ಟೆನು!' ಮೊದಲಾದ ಮಾತುಗಳಿಂದಲೂ, ಏಟಿನಿಂದಲೂ, ಮುಷ್ಟಿ ಪ್ರಹಾರಗಳಿಂದಲೂ, ಹಿಡಿದು ಮುಖ ಚುಂಬನ ಮಾಡುವುದರಿಂದಲೂ, ನಾಲಗೆಯ ಹೊಡೆತದಿಂದಲೂ, ಪಕ್ಷಿಗಳ ಧ್ವನಿಯಂತಿರುವ ಮಣಿತಗಳಿಂದಲೂ, ನಮಸ್ಕಾರಗಳಿಂದಲೂ, ವಕ್ರ ದೃಷ್ಟಿಗಳಿಂದಲೂ 'ನಿನ್ನ ತೊತ್ತಾಗಿರುವೆನು' ಎಂಬ ಮಾತುಗಳಿಂದಲೂ, 'ಎಲೈ ಸುವ್ರತನೇ! ನೀನು ಬಂದೆ, ಹೊರಟು ಹೋಗುತ್ತೀಯೆ. ನೀನು ಬೇರೆ ಯಾವಳನ್ನು ನೆನಿಸಿಕೊಂಡೆ? ನಿನ್ನ ತಾಯಿಯೂ ಸಹೋದರಿಯೂ ಬಂದಿರುವರು? ನಿನ್ನ ಇಷ್ಟಾರ್ಥವು ನೆರವೇರಿತು. ನಮ್ಮ ಮನೆಯನ್ನು ಬಿಟ್ಟು ಹೋಗು' ಎಂಬುದೇ ಮೊದಲಾದ ಮಾತುಗಳಿಂದಲೂ ಅವನ ಪ್ರಾಣ ಹೋಗುವಂತೆ ಮಾಡುವರು; ಅವನು ತಾನಾಗಿಯೇ ಅಗ್ನಿ ಪ್ರವೇಶ ಮಾಡುವಂತೆ ಮಾಡುವರು. ಯಾವಳಾದರೂ ಗರ್ಭಿಣಿಯಾದರೆ ಅವಳು ಹೆಣ್ಣು ಮಗುವನ್ನು ಪ್ರಸವಿಸುವಳು. ಈ ರೀತಿಯಲ್ಲಿರುವ ಸ್ತ್ರೀರಾಜ್ಯಕ್ಕೆ ಐದು ಮಂದಿ ವೀರರ ಕಾವಲುಳ್ಳ ಆ ಕುದುರೆಯು ಹೊಕ್ಕಿತು. ಆಗ ಅರ್ಜುನನು ಈ ಮಹಾವೀರರನ್ನು ನೋಡಿ, 'ಹೆಂಗಸರ ಗುಂಪಿನಲ್ಲಿ ಸಿಕ್ಕಿದೆವು. ಇಲ್ಲಿ ಬಲಶಾಲಿನಿಯರಾದ ವಿಷ ಕನ್ಯೆಯರಿರುವರು. ಅವರು ಕುದುರೆಯನ್ನು ಹಿಡಿದುಕೊಳ್ಳುವರು. ಅದರಿಂದ ಬಹಳ ಕಷ್ಟವಾಗುವುದು' ಎಂದು ಹೇಳುತ್ತಿರುವಷ್ಟರಲ್ಲಿ, ಸಂಪಗೆಯ ಹೂವಿನ ಬಣ್ಣ

ವುಳ್ಳವರಾಗಿಯೂ, ಮುಕ್ತಾ ಮಾಲೆಯನ್ನು ಧರಿಸಿ ನಾನಾಲಂಕಾರವುಳ್ಳವರಾಗಿಯೂ, ಹಾವ ಭಾವ ವಿಲಾಸಗಳಿಂದ ಕೂಡಿದವರಾಗಿಯೂ, ಚಾಮರವನ್ನು ಕೊರಲಿಗೆ ಕಟ್ಟಿರುವ ಕುದುರೆಗಳ ಮೇಲೆ ಕುಳಿತು ಧನುರ್ಬಾಣಗಳನ್ನು ಹಿಡಿದವರಾಗಿಯೂ ಇರುವ ಸ್ತ್ರೀಯರ ಗುಂಪು ಬಂದಿತು. ಅವರಲ್ಲೊಬ್ಬಳು ಬಂದು ಕುದುರೆಯನ್ನು ಹಿಡಿದುಕೊಂಡು ಹೋದಳು. ಅವಳು ತಮ್ಮ ಒಡತಿಯ ಬಳಿಗೆ ಹೋಗಿ ಕುದುರೆಯನ್ನು ತೋರಿಸಿ, 'ಯುಧಿಷ್ಠಿರನ ಸಹೋದರನು ಈ ಕುದುರೆಗೆ ರಕ್ಷಕನಾಗಿ ಬಂದಿರುವನು; ನಿನ್ನ ಅಪ್ಪಣೆಯ ಪ್ರಕಾರ ಕುದುರೆಯನ್ನು ನಾನು ಹಿಡಿದು ತಂದೆನು; ಮುಂದೇನು ಮಾಡಬೇಕು?' ಎಂದು ಕೇಳಿದಳು. ಅದಕ್ಕೆ ರಾಣಿಯು, 'ಈ ಕುದುರೆಯನ್ನು ನಮ್ಮ ಅಶ್ವ ಶಾಲೆಗೆ ತೆಗೆದುಕೊಂಡು ಹೋಗು, ನಾನು ಪಾರ್ಥನ ಮೇಲೆ ಯುದ್ಧಕ್ಕೆ ಹೊರಡುವೆನು' ಎಂದು ಹೇಳಿದಳು. ಅವಳು ಅದೇ ಪ್ರಕಾರ ಎಲ್ಲವನ್ನೂ ಮಾಡಿದಳು. ರಾಣಿಯು ಅರ್ಜುನನ ಬಳಿಗೆ ಹೊರಟಳು.

ಇಂತು ಸ್ತ್ರೀ ರಾಜ್ಯ ಗಮನವೆಂಬ ಇಪ್ಪತ್ತೊಂದನೆಯ ಅಧ್ಯಾಯವು.

---

# ವಿವಿಧ ವಿಷಯಗಳು

**ಚಂದ್ರವಳ್ಳಿಯ ಭೂಸಂಶೋಧನ ಕಾರ್ಯಗಳು.**—ನಮ್ಮ ಭರತಖಂಡದಲ್ಲಿ ಆದಿಯಿಂದಲೂ ನಂಬಿಕೆಗರ್ಹವಾದ ಚರಿತ್ರಾಂಶಗಳು ಗ್ರಂಥಸ್ಥವಾಗಿ ದೊರೆಯುವುದು ಅಪೂರ್ವ. ಚರಿತ್ರೆಗಳೆಂದು ಹೇಳುವ ಪೂರ್ವಗ್ರಂಥಗಳಲ್ಲಿ ಯಾವುವು ನಿಶ್ಚಯಾಂಶಗಳೆಂದೂ ಯಾವುವು ಕವಿತ್ವವೆಂದೂ ಹೇಳುವುದು ಕಷ್ಟವಾಗುವುದು. ಈಚೆಗೆ ನಮ್ಮ ದೇಶದಲ್ಲಿಯೂ, ಪಾಶ್ಚಾತ್ಯರ ಸಂಪರ್ಕದಿಂದ, ನಿಜವಾದ ಚರಿತ್ರ ಗ್ರಂಥಗಳು ಹುಟ್ಟುವುದಕ್ಕೆ ಆರಂಭವಾಗಿರುವುದು. ಪೂರ್ವ ಚರಿತ್ರೆಯನ್ನು ನಿರ್ಮಾಣ ಮಾಡುವುದಕ್ಕೆ ಶಿಲಾ ಶಾಸನಗಳೂ ಭೂಮಿಯಲ್ಲಿ ದೊರೆಯುವ ಪ್ರಾಚೀನ ವಸ್ತು ಸಂಗ್ರಹವೂ ಬಹು ಮಟ್ಟಿಗೆ ಸಹಾಯವಾಗುವುವು. ಈಜಿಪ್ಟ್ ದೇಶದಲ್ಲಿಯೂ ಏಷ್ಯಾಖಂಡದ ಪಶ್ಚಿಮ ಭಾಗದಲ್ಲಿಯೂ ಭೂಸಂಶೋಧನೆಯ ಫಲವಾಗಿ ಅನೇಕ ಸಾವಿರ ವರುಷಗಳ ಚರಿತ್ರಾಂಶಗಳು ಹೊರಬಿದ್ದಿರುವುವು. ನಮ್ಮ ಭರತಖಂಡದಲ್ಲಿಯೂ ಈಚೆಗೆ ಉತ್ತರ ಪ್ರಾಂತದಲ್ಲಿ ಕೆಲವು ಭೂಸಂಶೋಧನ ಕಾರ್ಯಗಳು ನಡೆದು ಬಹಳ ಉಪಯುಕ್ತವಾದ ವಿಷಯಗಳು ತಿಳಿದುಬಂದಿವೆ; ದಕ್ಷಿಣ ಪ್ರಾಂತದಲ್ಲಿ ಈ ಭೂಸಂಶೋಧನ ಕಾರ್ಯವು ಇನ್ನೂ ನಡೆದಿಲ್ಲವೆಂದೇ ಹೇಳಬೇಕು. ಅನೇಕ ಶತಮಾನಗಳಿಂದಲೂ ಕೇವಲ ನಾಗರಿಕ ಸ್ಥಿತಿಯಲ್ಲಿದ್ದ ಬಹಳ ಪ್ರಾಚೀನವಾದ ನಮ್ಮ ಭರತಖಂಡದಲ್ಲಿ ಎಷ್ಟು ಶತಮಾನಗಳ ಚರಿತ್ರೆಯು ಭೂಗರ್ಭದಲ್ಲಿ ಅಡಗಿರುವುದೋ ಹೇಳಬಲ್ಲವರಾರು? ರಾಮಾಯಣ ಮಹಾಭಾರತಗಳಲ್ಲಿಯ ವಿಷಯಗಳು ಚರಿತ್ರಾಂಶಗಳೇ ಎಂಬುದನ್ನು ಪರೀಕ್ಷೆ ಮಾಡಬೇಕಾದರೆ ಅಯೋಧ್ಯ ಹಸ್ತಿನಾಪುರ ಪ್ರಾಂತಗಳಲ್ಲಿ ವಿಶೇಷವಾಗಿ ಭೂಸಂಶೋಧನೆ ಮಾಡಬೇಕು. ಇದಕ್ಕೆ ಅಗಾಧವಾದ ದ್ರವ್ಯವೂ ಅನ್ವೇಷಣ ಕೌಶಲವೂ ಬೇಕಾಗುವುದು.

ಈಚೆಗೆ, ಮೈಸೂರು ದೇಶದಲ್ಲಿ ವಿಶ್ವವಿದ್ಯಾನಿಲಯದ ಉಪಾಧ್ಯಕ್ಷರಾಗಿದ್ದ ಡಾಕ್ಟರ್ ಬ್ರಜೇಂದ್ರನಾಥ ಶೀಲರವರು ವಿಶ್ವವಿದ್ಯಾನಿಲಯದ ಮೂಲಕ ಕೆಲವು ಭೂಸಂಶೋಧನ ಕಾರ್ಯಗಳನ್ನು ನಡೆಯಿಸಬೇಕೆಂದು ಸಂಕಲ್ಪಿಸಿ, ಮೈಸೂರು ದೇಶದ ವಿದ್ವಾಂಸರೊಬ್ಬರನ್ನು ಭೂಸಂಶೋಧನ ಶಾಸ್ತ್ರ ಪ್ರಾವೀಣ್ಯತೆಯನ್ನು ಪಡೆದು ಬರಲು, ಲಂಡನ್ನಿಗೂ ಈಜಿಪ್ಟ್ ಮೊದಲಾದ ದೇಶಗಳಿಗೂ ಕಳುಹಿಸಿ, ಅವರು ತರಬಿಯತ್ತಾಗಿ ಬಂದನಂತರ ಅವರನ್ನು ಪ್ರಾಚೀನ ವಸ್ತ್ವನ್ವೇಷಣ ಇಲಾಖೆಯ ಚಾಲಕರನ್ನಾಗಿ (Director of Archæological Researches in Mysore) ನಿಯಮಿಸಿ ಚಿತ್ರದುರ್ಗದ ಬಳಿಯಲ್ಲಿರುವ ಚಂದ್ರವಳ್ಳಿಯೆಂಬ ಬೆಟ್ಟದ ತಪ್ಪಲಿನಲ್ಲಿ ಭೂಸಂಶೋಧನ ಕಾರ್ಯಗಳನ್ನು ನಡೆಯಿಸಲು ೧೯೦೯ಲನೆಯ ಇಸವಿಯಲ್ಲಿ ಕಳುಹಿಸಿಕೊಟ್ಟರು. ದ್ರವ್ಯಾಭಾವದಿಂದ ಈ ವಿದ್ವಾಂಸರು (ಡಾಕ್ಟರ್ ಎಂ. ಎಚ್. ಕೃಷ್ಣಯ್ಯಂಗಾರ್ಯರು, ಎಂ.ಎ., ಡಿ.ಲಿಟ್.)

ಹೆಚ್ಚು ಕೆಲಸಗಳನ್ನು ನಡೆಯಿಸಲಾಗಲಿಲ್ಲ. ಇವರು ನಡೆಯಿಸಿದ ಸ್ವಲ್ಪ ಕೆಲಸದಲ್ಲಿಯೇ ಅನೇಕ ಪ್ರಾಚೀನ ಚರಿತ್ರಾಂಶಗಳು ಹೊರಪಡಿದ್ದಿರುವುವು. ಇವನ್ನು ಸಂಕ್ಷೇಪವಾಗಿ ೧೯೦೯ನೆಯ ಸಂವತ್ಸರದ ಮೈಸೂರು ಪ್ರಾಚೀನ ವಸ್ತ್ವನ್ವೇಷಣ ಇಲಾಖೆಯ ತಮ್ಮ ವರದಿಯಲ್ಲಿ ಈ ವಿದ್ವಾಂಸರು ಪ್ರಕಟಪಡಿಸಿರುತ್ತಾರೆ. ಅದರಿಂದ ತಿಳಿದುಬರುವ ಕೆಲವಂಶಗಳನ್ನು ಮಾತ್ರ ಇಲ್ಲಿ ಸಂಕ್ಷೇಪವಾಗಿ ಹೇಳಲಾಗುವುದು :—

ಚಂದ್ರವಳ್ಳಿಯ ತಪ್ಪಲು ಚಿತ್ರದುರ್ಗದ ಹತ್ತಿರವಿರುವ ಪರ್ವತದುರ್ಗದ ಬಳಿಯಲ್ಲಿ ಪಶ್ಚಿಮಕ್ಕಿರುವುದು. ಈ ಪ್ರಾಂತದಲ್ಲಿ ಪ್ರಾಚೀನ ಪಟ್ಟಣವೊಂದಿದ್ದಿತೆಂದೂ, ಅನ್ವೇಷಣ ಮಾಡಿದಲ್ಲಿ ಪ್ರಾಚೀನ ವಸ್ತುಗಳು ಈ ಪ್ರಾಂತದಲ್ಲಿ ದೊರೆಯುವುವೆಂದೂ ಸುತ್ತು ಮುತ್ತಲಿನ ನಿವಾಸಿಗಳಲ್ಲಿ ಪ್ರತೀತಿಯಿದ್ದಿತು. ಇಲ್ಲಿ ಬೆಟ್ಟದ ಮೇಲೆ ದ್ವಾಪರಯುಗ ದಲ್ಲಿ ಹಿಡಿಂಬಾಸುರನು ವಾಸವಾಗಿದ್ದನೆಂದೂ, ಪಾಂಡವರು ಇಲ್ಲಿಗೆ ಬಂದಾಗ ಭೀಮನು ಹಿಡಿಂಬನನ್ನು ಕೊಂದ ಸ್ಥಳವು ಇದೇ ಎಂದೂ, ಇಲ್ಲಿಯ ಜನರಲ್ಲಿ ನಂಬಿಕೆ ಯಿದೆ. ಈ ಹಿಡಿಂಬಾಸುರನ ಹಲ್ಲುಗಳೆಂದು ದೊಡ್ಡ ಆನೆಯ ದವಡೆ ಹಲ್ಲಿನಂತಿರುವ ಎರಡು ಹಲ್ಲುಗಳನ್ನು ಇಲ್ಲಿಯ ಬೆಟ್ಟದ ಮೇಲಿರುವ ಹಿಡಿಂಬೇಶ್ವರ ಮತ್ತು ಸಿದ್ಧೇಶ್ವರ ದೇವಾಲಯಗಳಲ್ಲಿ ಇಟ್ಟಿರುತ್ತಾರೆ. ಕೆಲವು ಕಾಲದ ಮೇಲೆ ಈ ರಾಜ್ಯವು ಪ್ರಸಿದ್ಧ ನಾದ ಚಂದ್ರಹಾಸನ ಆಳಿಕೆಗೆ ಸೇರಿತೆಂದೂ, ಈ ರಾಜನ ರಾಜಧಾನಿಯು ಈಗಣ ಶಿವಮೊಗ್ಗ ಡಿಸ್ಟ್ರಿಕ್ಟಿನ ಉತ್ತರ ಭಾಗದಲ್ಲಿರುವ ಕುಂತಳ ನಗರ, ಅಥವಾ ಕುಪ್ಪತ್ತೂರು ಎಂಬಲ್ಲಿದ್ದಿತೆಂದೂ ಜನರ ಹೇಳಿಕೆ.

ಸರಕಾರದವರು ಈಗ ಸುಮಾರು ಒಂದು ನೂರು ವರುಷಗಳ ಹಿಂದೆ, ಈ ಪ್ರಾಂತದಲ್ಲಿ ಬಿದ್ದ ಮಳೆಯ ನೀರನ್ನು ಹತ್ತಿರವಿದ್ದ ಕೆರೆಗೆ ಸಾಗಿಸುವುದಕ್ಕಾಗಿ ಒಂದು ಕಾಲುವೆಯನ್ನು ಅಗೆಯಿಸಿದರು. ಆಗ ಅಲ್ಲಿ ಕೆಲವು ಸೀಸದ ನಾಣ್ಯಗಳು ದೊರೆತುವು. ಅವನ್ನು ಬ್ರಿಟಿಷ್ ಮ್ಯೂಸಿಯಂ ಮೊದಲಾದ ವಸ್ತುಪ್ರದರ್ಶನ ಶಾಲೆಗಳಿಗೆ ಕಳುಹಿಸಿ ಕೊಟ್ಟರು. ಇವುಗಳ ವಿಚಾರವನ್ನು ಬ್ರಿಟಿಷ್ ಮ್ಯೂಸಿಯಮ್ಮಿನ ವಸ್ತುನಿರ್ದೇಶ ಪಟ್ಟಿಕೆ (Catalogue) ಯಲ್ಲಿ ಪ್ರಕಟಿಸಿಪ್ಪಾರೆ. ಈಗ ಮೂವತ್ತು ವರುಷಗಳ ಹಿಂದೆ ಈ ಪ್ರಾಂತದಲ್ಲಿ ಖನಿಜಾನ್ವೇಷಣ ಮಾಡುತ್ತಿದ್ದ ಒಬ್ಬ ಕಾರ್ಯಕಾರನಿಗೆ ಕೆಲವು ನಾಣ್ಯ ಗಳು ದೊರೆತುವು. ಈ ವಿಷಯವನ್ನು ಆತನು ವರ್ತಮಾನ ಪತ್ರಿಕೆಗಳಲ್ಲಿ ಪ್ರಕಟ ಪಡಿಸಿದನು. ಇದನ್ನು ತಿಳಿದು ಮೈಸೂರು ಸರಕಾರದವರು ತಮ್ಮ ಪ್ರಾಚೀನ ವಸ್ತ್ವನ್ವೇಷಣ ಇಲಾಖೆಯ ಚಾಲಕರನ್ನು ಅಲ್ಲಿಗೆ ಕಳುಹಿಸಿದರು. ಅವರು ಕೆಲವು ಕಡೆಗಳಲ್ಲಿ ತೋಡಿ, ಅಲ್ಲಿ ತಮಗೆ ದೊರೆತ ವಸ್ತುಗಳ ವಿಷಯವಾಗಿ ತಮ್ಮ ೧೯೦೯ನೆಯ ವಾರ್ಷಿಕ ವರದಿಯಲ್ಲಿ ವಿಚಾರ ಮಾಡಿ, ಆ ಪ್ರಾಂತದಲ್ಲಿ ಪ್ರಾಚೀನ ಪಟ್ಟಣವೊಂದಿದ್ದಿರ ಬೇಕೆಂದೂ, ಅಲ್ಲಿ ಶಾಸ್ತ್ರೀಯವಾಗಿ ಭೂಸಂಶೋಧನ ಕಾರ್ಯವನ್ನು ನಡೆಯಿಸ ಬೇಕೆಂದೂ ಅಭಿಪ್ರಾಯಕೊಟ್ಟರು. ಮುಂದೆ ಇಪ್ಪತ್ತು ವರುಷಗಳು ಏನೂ ನಡೆಯಲಿಲ್ಲ.

೧೯೨೮ನೆಯ ಮೇ ತಿಂಗಳಲ್ಲಿ ಡಾಕ್ಟರ್ ಕೃಷ್ಣಯ್ಯಂಗಾರ್ಯರು ಈ ಕೆಲಸವನ್ನು ಮರಳಿ ಪ್ರಾರಂಭಿಸಿ ಈ ಭೂಪ್ರದೇಶದ ಮೇಲ್ಮೈಯ್ಯ ವೈಚಿತ್ರ್ಯವನ್ನು ವಿಶದವಾಗಿ

ತಿಳಿಸುವಂತೆ ಒಂದು ನಕ್ಷೆಯನ್ನು ತಯಾರಿಸಿದರು. ಈ ಕಾರ್ಯಕ್ಕಾಗಿ ಈ ಪ್ರದೇಶದಲ್ಲಿ ಸಂಚಾರ ಮಾಡುತ್ತಿರುವಾಗ ಮುಂದೆ ಹೇಳುವ ಕೆಲವು ನಿದರ್ಶನಗಳು ದೊರೆತುವು:—(೧) ಮೈಸೂರಿನ ಮುಮ್ಮಡಿ ಕೃಷ್ಣರಾಜರವರ ನಾಣ್ಯವೊಂದು. (೨) ವಿಜಯ ನಗರದ ಕೃಷ್ಣರಾಯರ ತಾಮ್ರದ ನಾಣ್ಯವೊಂದು. (೩) ಚಾಳುಕ್ಯ ಮತ್ತು ಹೊಯ್ಸಳರ ಕಾಲದ ದೇವಾಲಯಗಳೂ ಶಾಸನಗಳೂ ದೊರೆತುದರಿಂದ, ಈ ಪ್ರಾಂತ ದಲ್ಲಿ ಕ್ರಿ. ಶ. ೧೧ನೆಯ ಶತಮಾನದಿಂದ ೧೪ನೆಯ ಶತಮಾನದ ವರೆಗೆ ಜನರು ವಾಸ ವಾಗಿದ್ದಿರಬೇಕೆಂಬ ಅನುಮಾನಕ್ಕೆ ಕಾರಣವಾಯಿತು. (೪) ಈ ಪ್ರಾಂತದಲ್ಲಿ ಒಂದು ದೊಡ್ಡ ಮಳೆ ಸುರಿದನಂತರ ಶಾತವಾಹನರ ಕಾಲದ ಸೀಸದ ನಾಣ್ಯಗಳು ದೊರೆತುವು; ಮತ್ತೊಂದು ಮಳೆ ಸುರಿದ ಮೇಲೆ ರೋಮ್ ರಾಜ್ಯದ ಬೆಳ್ಳಿಯ ನಾಣ್ಯ ಗಳೂ, ಚಿನ್ನ, ಬೆಳ್ಳಿ ಮತ್ತು ತಾಮ್ರದ ಒಡವೆಗಳೂ ಹೊರಬಿದ್ದುವು. ಪೂರ್ವ ಕಾಲದ ದೊಡ್ಡ ಇಟ್ಟಿಗೆಗಳಿಂದ ಕಟ್ಟಿದ ಗೋಡೆಗಳು ಖಾತಗಳಲ್ಲಿ ಅಲ್ಲಲ್ಲಿ ಕಾಣಿಸಿಕೊಂಡುವು. ಬಣ್ಣ ಹಚ್ಚಿದ ಮತ್ತು ಸಯ ಮಾಡಿದ ಮಡಕೆಗಳು ಅಲ್ಲಲ್ಲಿ ಸಾಮಾನ್ಯವಾಗಿ ದೊರೆತುವು. ಈ ವಿಷಯಗಳೂ ಆ ಪ್ರಾಂತದಲ್ಲಿ ದೊರೆತ ಮಯೂರಶರ್ಮ ಕದಂಬನ ಶಿಲಾ ಶಾಸನವೂ, ಈ ಪ್ರಾಂತದಲ್ಲಿ ಕದಂಬರ ಆದಿ ಕಾಲದಲ್ಲಿಯೂ ಮತ್ತು ಶಾತವಾಹನರ ಕಾಲದಲ್ಲಿಯೂ ಒಂದು ಪ್ರಶಸ್ತವಾದ ಪಟ್ಟಣವಿದ್ದಿರಬೇಕೆಂಬ ವಿಷಯವನ್ನು ಸ್ಪಷ್ಟ ಗೊಳಿಸಿದುವು. (೫) ಬಣ್ಣಹಾಕಿದ ಮಡಕೆಗಳ ಹಿಂದಣ ರೀತಿಯೂ ಗವಿಗಳಲ್ಲಿ ಕಬ್ಬಿಣ ಮಾಡಲು ಪ್ರಯತ್ನಿಸಿದ ಗುರುತುಗಳೂ, ಚರಿತ್ರೆಯ ಕಾಲಕ್ಕೆ ಹಿಂದೆ ಇದ್ದಿರ ಬಹುದಾದ ಕಬ್ಬಿಣದ ಯುಗದ ಅಸ್ತಿತ್ವವನ್ನು ತೋರಿಸಲು ಸಲಹೆಕೊಟ್ಟಂತಾಯಿತು. (೬) ನೀರುಹಳ್ಳಗಳಲ್ಲಿಯೂ ನೇರಳಗೊಂದಿ ಮತ್ತು ಬಾರಳಗೊಂದಿಯ ಗವಿಗಳಲ್ಲಿಯೂ ದೊರೆತ ಶಿಲಾ ಆಯುಧಗಳು, ಈ ಚಂದ್ರವಳ್ಳಿಯ ತಪ್ಪಲಲ್ಲಿ ನೂತನ ಶಿಲಾ ಯುಗದಲ್ಲಿ ಮನುಷ್ಯನು ವಾಸವಾಗಿದ್ದಿರಬೇಕೆಂಬ ವಿಷಯವನ್ನು ತೋರಿಸಿದುವು. ಈ ವಿಷಯ ಗಳಿಂದ ತಿಳಿದುಬರುವುದೇನೆಂದರೆ:—ಚಂದ್ರವಳ್ಳಿಯಲ್ಲಿ ಭೂ ಸಂಶೋಧನೆ ಮಾಡುವುದ ರಿಂದ ತಿಳಿಯಬಹುದಾದ ಚರಿತ್ರೆಯು ಯಾವುದೋ ಒಂದೆರಡು ಶತಮಾನಗಳಿಗೆ ಮಾತ್ರ ಸಂಬಂಧಿಸಿದುದಲ್ಲವೆಂದೂ, ಕಳೆದ ಮೂರು ಸಾವಿರ ವರುಷಗಳ, ಅಥವಾ ಇದಕ್ಕಿಂತ ಹೆಚ್ಚಾದ ಕಾಲದ ಉದ್ದಕ್ಕೂ ಬಳಸಿಕೊಂಡಿರುವ ಕಾಲದ ಚರಿತ್ರೆಯೆಂದೂ ತೋರಿಬರುವುದು.

ಸರ್ವೇ ಕೆಲಸವು ಮುಗಿದ ಮೇಲೆ ಅಲ್ಲಲ್ಲಿ ಪರೀಕ್ಷಾ ಖಾತಗಳನ್ನು ಮಾಡುವ ಕೆಲಸವನ್ನು ಪ್ರಾರಂಭಿಸಲಾಯಿತು. ಕೆಲವು ಕಡೆ ಬಾವಿಗಳಂತೆ ಗುಂಡಿಗಳನ್ನೂ, ಕೆಲವು ಕಡೆ ಚರಂಡಿಗಳಂತಹ ಖಾತಗಳನ್ನೂ ಮಾಡಲಾಯಿತು. ಇದರಿಂದ ಹಳೆಯ ಪಟ್ಟಣದ ವಿಸ್ತೀರ್ಣವೇನೆಂಬುದನ್ನು ತಿಳಿಯಲು ಪ್ರಯತ್ನಿಸಿದುದಾಯಿತು. ದೊರೆತ ಪದಾರ್ಥಗಳನ್ನು ಬಹಳ ಜೋಕೆಯಿಂದ ತೆಗೆದಿಟ್ಟು ಅವು ದೊರೆತ ಸ್ಥಳವನ್ನು ನಕ್ಷೆಯ ಮೇಲೆ ಗುರುತು ಮಾಡಲಾಯಿತು. ಗೋಡೆಯೋ ತಳಹದಿಯೋ ದೊರೆತಲ್ಲಿ ಅವನ್ನು ಅಲ್ಲಿಯೇ ಬಿಟ್ಟು ಪಕ್ಕದಲ್ಲಿ ಅಗೆಯುವುದಕ್ಕೆ ಆರಂಭಿಸಿದುದಾಯಿತು. ಹೀಗೆ ನಾಲ್ವತ್ತು ಗುಂಡಿಗಳನ್ನು ಅಲ್ಲಲ್ಲಿ ಅಗೆದು ಪರೀಕ್ಷಿಸಿದುದರಲ್ಲಿ ಅನೇಕ ಮಹತ್ವದ

ವಿಷಯಗಳು ತಿಳಿಯಬಂದುವು. ಇವುಗಳ ವಿಚಾರವನ್ನೆಲ್ಲ ವರದಿಯಲ್ಲಿ ವಿಶದವಾಗಿ ಕೊಟ್ಟಿದೆ. ಕೆಲವು ಕಡೆ ಹದಿನಾಲ್ಕು ಅಡಿ ಆಳದ ವರೆಗೂ ಪದಾರ್ಥಗಳು ದೊರೆತುವು: ನಾಣ್ಯಗಳು, ಮಡಕೆಗಳು, ಮಣಿಗಳು ಮತ್ತು ಇತರ ಪುರಾತನ ವಸ್ತುಗಳು. ಕೆಲವು ಕಡೆ ಇಟ್ಟಿಗೆಯ ಹಳೆಯ ಗೋಡೆಗಳೂ, ಕೆಲಸ ಮಾಡಿದ ದೇವಸ್ಥಾನದ ಕಲ್ಲಿನ ಬಾಗಿಲುಗಳೂ ದೊರೆತುವು. ಕೆಲವು ಕಡೆ ಆರು ಬೇರೆ ಬೇರೆ ಕಾಲದ ನೆಲಗಳು ಒಂದರ ಕೆಳಗೊಂದು ಕಾಣಬಂದುವು. ಇವುಗಳಲ್ಲಿ ಎರಡು ಶಾತವಾಹನರ ಹಿಂದಣ ಕಾಲದವು, ಮೂರು ಶಾತವಾಹನರ ಕಾಲದುವು, ಉಳಿದುದು ಹೊಯ್ಸಳರ ಕಾಲದ್ದು. ಕ್ರಿಸ್ತ ಶಕದ ಆರಂಭದಲ್ಲಿ ಈ ಪಟ್ಟಣವು ಅತ್ಯುಚ್ಚಾಟ್ರಯ ಸ್ಥಿತಿಯಲ್ಲಿದ್ದಂತೆ ಕಂಡುಬರುವುದು.

೨. **ಇಂಡಿಯಾ ದೇಶದ ಪ್ರಾಚೀನ ವಸ್ತ್ವನ್ವೇಷಣ ವಿಜ್ಞಾನ ವಿಚಾರವಾದ ವಾರ್ಷಿಕ ಗ್ರಂಥ ಪರಿಚಯು.**—ಈಚೆಗೆ ಇಂಡಿಯಾ ದೇಶದಲ್ಲಿಯೂ ಪ್ರಾಚೀನ ವಸ್ತ್ವನ್ವೇಷಣ ಕಾರ್ಯಕ್ಕೆ ಹೆಚ್ಚು ಗಮನಕೊಡುತ್ತಿರುವರು. ಆದರೆ ಈ ಕಾರ್ಯಗಳು ಎಲ್ಲೆಲ್ಲಿ, ಯಾವಾಗ ನಡೆದುವು? ಅವುಗಳ ವಿಚಾರವೇನು?—ಎಂಬ ವಿಷಯಗಳು ಉತ್ತಮ ತೆರದ ಪುಸ್ತಕ ಭಾಂಡಾಗಾರಗಳಲ್ಲಿಯೂ ಕೂಡ ಸುಲಭವಾಗಿ ತಿಳಿಯುವಂತಿಲ್ಲ. ಈ ಕೊರತೆಯನ್ನು ಹೋಗಲಾಡಿಸಲು ಹಾಲೆಂಡು ದೇಶದ ಲೈಡನ್ ಪಟ್ಟಣದ ವಿಶ್ವವಿದ್ಯಾನಿಲಯದ ವಿದ್ವಾಂಸರಾದ ಓಜೆಲ್, ಕ್ರೋಮ್ ಮತ್ತು ಕ್ಯಾಮರ್ಸ್ ಎಂಬ ಮಹನೀಯರು, ೧೯೨೬ನೆಯ ಇಸವಿಯಿಂದ ಈ ವಿಷಯವಾದ ವಾರ್ಷಿಕ ಗ್ರಂಥ ಪರಿಚಯ ಪಟ್ಟಿಕೆಗಳನ್ನು ಪ್ರಕಟಪಡಿಸುತ್ತಿರುತ್ತಾರೆ. ೧೯೨೬ನೆಯ ಇಸವಿಯ ಮೊದಲ್ಗೊಂಡು ೧೯೨೯ರ ವರೆಗಿನ ಈ ವಾರ್ಷಿಕ ಪಟ್ಟಿಕೆಗಳ ನಾಲ್ಕು ಸಂಪುಟಗಳು ಕೇವಲ ಉತ್ತಮ ರೀತಿಯಲ್ಲಿ ಪ್ರಕಟವಾಗಿವೆ. ಇದರಲ್ಲಿಯ ವಿಷಯಗಳು ಇಂಡಿಯಾ ದೇಶಕ್ಕೆ ಸಂಬಂಧಪಟ್ಟುವು ಮಾತ್ರವಲ್ಲದೆ, ಸಿಲೋನ್ ಸಿಯಾಂ ಮೊದಲಾದ ಇಂಡಿಯದ ಆಚೆಯ ದೇಶಗಳು, ಇಂಡೊನೇಷ್ಯಾ, ಇರಾನ್, ಮೆಸೊಪೊಟೇಮಿಯಾ, ತುರಾನ್, ತಿಬೆಟ್, ಆಫಘಾನಸ್ಥಾನ, ದೂರದ ಪ್ರಾಚ್ಯ ದೇಶಗಳು—ಇವುಗಳ ವಿಷಯವಾಗಿಯೂ ಇರುವುವು; ಎಂದರೆ, ಇಂಡಿಯಾ ದೇಶವು ಯಾವ ಯಾವ ದೇಶಗಳ ಮೇಲೆ ತನ್ನ ಪ್ರಭಾವವನ್ನು ಹರಡಿದೆಯೋ ಆ ದೇಶಗಳೆಲ್ಲವೂ ಇದರಲ್ಲಿ ಸೇರಿರುವುವು. ಈ ಪ್ರಾಚ್ಯ ವಸ್ತ್ವನ್ವೇಷಣ ಶಾಸ್ತ್ರವು ವಾಸ್ತು ಶಾಸ್ತ್ರ, ಶಿಲ್ಪ ಶಾಸ್ತ್ರ, ಚಿತ್ರ ಕಲೆ, ವಿಗ್ರಹ ಕಲೆ, ಪ್ರಾಚೀನ ಲಿಪಿ, ಶಾಸನಗಳು, ಜ್ಯೋತಿಶ್ಶಾಸ್ತ್ರ, ಪ್ರಾಚೀನ ಚರಿತ್ರೆ, ಪ್ರಾಚೀನ ಭೂಗೋಳ ಚರಿತ್ರೆ ಮತ್ತು ಪ್ರಾಚೀನ ನಾಣ್ಯ ಶಾಸ್ತ್ರ, ಇವೆಲ್ಲವನ್ನೂ ಒಳಕೊಂಡಿದೆ. ಈ ಪಟ್ಟಿಕೆಗಳಲ್ಲಿ ಲೇಖನಗಳ ಮತ್ತು ಪುಸ್ತಕಗಳ ವಿಷಯಾನುಕ್ರಮಣಿಕೆ ಮಾತ್ರವಲ್ಲದೆ ಇವುಗಳ ಮೇಲಿನ ವಿಮರ್ಶಾತ್ಮಕವಾದ ಲೇಖನಗಳ ಸಾರಾಂಶಗಳೂ ಕೊಟ್ಟಿವೆ. ಈ ಸಂಪುಟಗಳಲ್ಲಿ ತೋರಿಬರುವ ಕಾರ್ಯ ಕೌಶಲವೂ, ವಿಚಾರಪರತೆಯೂ, ಪಾರೀಣತೆಯೂ ಅಸಮಾನವಾಗಿವೆ. ಇನ್ನು ಮೇಲೆ ಇಂಡಿಯಾ ಪ್ರಾಚೀನ ವಸ್ತ್ವನ್ವೇಷಣ ವಿಜ್ಞಾನ ವ್ಯಾಸಂಗಿಯು ಪ್ರತಿಯೊಬ್ಬನೂ, ಕರ್ಮಠರಾದ ಹಿಂದೂಗಳು ಯಾವ ಕಾರ್ಯ ಮಾಡುವುದಕ್ಕೂ ಮೊದಲು

ಪಂಚಾಂಗವನ್ನು ನೋಡುವಂತೆ, ಈ ಪುಸ್ತಕಗಳನ್ನು ನೋಡಬೇಕಾಗಿದೆ. ಈ ಪುಸ್ತಕಗಳ ಪೀಠಿಕೆಯಲ್ಲಿ ಇಂಡಿಯಾ ದೇಶವು ಕೇಂದ್ರವಾಗಿರುವ ಆಸ್ಯಾ ಪ್ರಪಂಚದಲ್ಲಿ ಆಯಾ ವರುಷ ನಡೆಯಿಸಿದ ಶೋಧನೆಗಳ ಮತ್ತು ಕಂಡುಹಿಡಿದ ಹೊಸ ವಸ್ತು ಮತ್ತು ವಿಷಯಗಳ ವಿಚಾರಗಳನ್ನು ತಕ್ಕಷ್ಟುಮಟ್ಟಿಗೆ ವಿವರಿಸಿದೆ; ಸಂದರ್ಭಕ್ಕೆ ತಕ್ಕಂತೆ ಉತ್ತಮವಾದ ಚಿತ್ರಪಟಗಳನ್ನೂ ಕೊಟ್ಟಿದೆ. ೧೯೩೬ನೆಯ ವರುಷದ ಸಂಪುಟದಲ್ಲಿ ಫೈನೋ ಎಂಬ ವಿದ್ವಾಂಸನು ಕಾಂಭೋಜ (Cambodia) ದೇಶದ ಈಶ್ವರಪುರ ದೇವಾಲಯದ ವಿಚಾರವಾಗಿ ಬರೆದಿರುವ ಲೇಖನದ ಸಾರಾಂಶವನ್ನು ಮಾದರಿಗಾಗಿ ಇಲ್ಲಿ ಕೊಡುತ್ತೇವೆ:—

> ಇದುವರೆಗೂ, ೭ನೆಯ ಜಯವರ್ಮನು ಕಾಂಭೋಜ ದೇಶದ ಕೊನೆಯ ಪ್ರಸಿದ್ಧ ರಾಜನೆಂದೂ, ಆತನ ಸಾವು ಖ್ಮೇರ್ ಸಂಸ್ಕೃತಿಯ ಅಂತ್ಯವನ್ನು ಸೂಚಿಸುತ್ತದೆಂದೂ ತಿಳಿದಿದ್ದುದಾಯಿತು. ಆದರೆ ಈಗ ನೋಡುವಲ್ಲಿ ಇದು ತಪ್ಪೆಂದೂ, ಖ್ಮೇರ್ ಸಂಸ್ಕೃತಿಯು ೧೨೦೦ನೆಯ ಇಸವಿಯಲ್ಲಿ ಅಂತ್ಯವಾಗದೆ ೧೩೫೦ನೆಯ ಇಸವಿಯ ವರೆಗೂ ಶಕ್ತಿವಂತವಾಗಿದ್ದಿತೆಂದೂ ಸ್ಪಷ್ಟವಾಗಿ ತಿಳಿದುಬರುತ್ತದೆ. ಜಯವರ್ಮನ ಆಳಿಕೆ ಮುಗಿದಮೇಲೂ, ಕಲೆಯೂ ಸಾಹಿತ್ಯವೂ ಅಭಿವೃದ್ಧಿ ಸ್ಥಿತಿಯಲ್ಲೇ ಇದ್ದುವು. ೧೩,೧೪ನೆಯ ಶತಮಾನಗಳಲ್ಲಿ ಸಂಸ್ಕೃತ ಜ್ಞಾನವು ಈ ರಾಜ್ಯದಲ್ಲಿ ಕೇವಲ ಗೌರವ ಸ್ಥಿತಿಯಲ್ಲಿದ್ದಿತೆಂದೂ, ದೊರೆಯ ಆಸ್ಥಾನದಲ್ಲಿ ಸಂಸ್ಕೃತ ಪಂಡಿತರು ವಿಶೇಷ ಗೌರವಾದರಗಳನ್ನು ಪಡೆಯುತ್ತಿದ್ದರೆಂದೂ ಕಾಣಬರುತ್ತದೆ.

ಅನ್ನಾಂ ದೇಶದಲ್ಲಿಯೂ ಬೌದ್ಧ ಪ್ರತಿಮೆಗಳು ದೊರೆತಿವೆ. ತ್ರಾಕೀನ್ ಎಂಬ ಪ್ರಾಂತದಲ್ಲಿ ಒಂದು ಸಂಸ್ಕೃತ ಶಿಲಾಲೇಖವು ದೊರೆತಿರುವುದು. ಇದು ೭ನೆಯ ಶತಮಾನದಲ್ಲಿ ಆಳುತ್ತಿದ್ದ ಪ್ರಕಾಶಧರ್ಮನೆಂಬ ರಾಜನ ಕಾಲದ್ದು. ಇದರಲ್ಲಿ ಆದಿಕವಿಯೂ ಪ್ರಸಿದ್ಧ ಋಷಿಯೂ ರಾಮಾಯಣ ಕಾವ್ಯ ನಿರ್ಮಾಣಕನೂ ಆದ ವಾಲ್ಮೀಕಿಗೆ ಒಂದು ದೇವಾಲಯವನ್ನು ಕಟ್ಟಿದ ವಿಚಾರವಿದೆ.

ಇಂಡಿಯಾ ದೇಶದ ಈ ವಿಷಯಗಳು ಪಾಶ್ಚಾತ್ಯರಾದ ಹಾಲೆಂಡು ದೇಶದ ಪಂಡಿತರಿಗೆ ಅಷ್ಟು ಮಹತ್ತ್ವವಾದುವೆಂದು ತಿಳಿದು ಅವರು ಇಷ್ಟು ಪರಿಶ್ರಮ ಪಡುತ್ತಿರುವರಲ್ಲದೆ, ನಮಗೆ "ಹಿತ್ತಿಲು ಗಿಡ ಮದ್ದಲ್ಲ" ಎಂಬಂತೆ ಅವುಗಳಲ್ಲಿ ತಕ್ಕಷ್ಟು ಆಸ್ಥೆಯಿಲ್ಲದಿರುವುದು ಅತ್ಯಂತ ಶೋಚನೀಯವಾದ ವಿಷಯವಾಗಿದೆ. ಆ ಪಂಡಿತೋತ್ತಮರು ಈ ಕಾರ್ಯವನ್ನು ದ್ರವ್ಯಾಪೇಕ್ಷೆಯಿಂದ ಮಾಡುತ್ತಿಲ್ಲ; ತಮ್ಮ ಅನೇಕ ಕಾರ್ಯಗಳೊಂದಿಗೆ, ಸಮಯ ದೊರೆತಾಗ, ಈ ಕಾರ್ಯವನ್ನೂ ಕೇವಲ ಅಸ್ವಾರ್ಥತೆಯಿಂದ ದ್ರವ್ಯಾಪೇಕ್ಷೆಯಿಲ್ಲದೆ, ಪ್ರಪಂಚಕ್ಕೆ ಉಪಯೋಗವಾಗಲೆಂದೇ ಶ್ರಮಪಟ್ಟು ಮಾಡುತ್ತಿರುವರು. ಇಷ್ಟೇ ಅಲ್ಲದೆ ಮುದ್ರಣ ಮೊದಲಾದ ಕಾರ್ಯಗಳಿಗೆ ಬಹಳ ದ್ರವ್ಯವೂ ಬೇಕಾಗಿದೆ. ಇದು ಮುಂದೆ ತಕ್ಕಷ್ಟು ದೊರೆಯುವಂತಿಲ್ಲ. ಆದುದರಿಂದ, ನಮ್ಮ ದೇಶಕ್ಕೆ ಮುಖ್ಯವಾಗಿ ಸಂಬಂಧಪಟ್ಟ ಈ ಮಹಾ ಕಾರ್ಯವು ಸಾರೋದ್ಧಾರವಾಗಿ ನಡೆಯುವಂತೆ ನಮ್ಮ ದೇಶದ ನಾನಾ ಪ್ರಾಂತಗಳ ಸರಕಾರ

ದವರೂ, ವಿಶ್ವವಿದ್ಯಾನಿಲಯಗಳೂ, ಪುಸ್ತಕ ಭಾಂಡಾಗಾರಗಳೂ, ವಿದ್ಯಾವಂತರೂ, ದ್ರವ್ಯವಂತರೂ ಆದ ಇಂಡಿಯಾ ದೇಶದ ದೊಡ್ಡಮನುಷ್ಯರೂ ಈ ಮಹನೀಯರಿಗೆ ಶಕ್ತಿ ಮೀರಿ ಸಹಾಯ ಮಾಡಬೇಕೆಂದು ಕೋರಿದೆ.

("*The Modern Review*" for January 1932.)

**೩. ಗುಜರಾತಿ ನಿಘಂಟು.**—ಗೊಂಡಲ್ ಮಹಾರಾಜರ ಅಪ್ಪಣೆಯ ಮೇರೆಗೆ ಅತ್ಯಂತ ದೊಡ್ಡದಾದ ಗುಜರಾತಿ ನಿಘಂಟುವೊಂದು ತಯಾರಾಗಿದೆಯೆಂದೂ, ಅದಕ್ಕೆ ೫ ಲಕ್ಷ ರೂಪಾಯಿಗಳು ವೆಚ್ಚವೆಂದೂ, ಅದರಲ್ಲಿ ಎರಡೂವರೆ ಲಕ್ಷ ಪದಗಳೂ ಅನೇಕ ಸಹಸ್ರ ಚಿತ್ರಗಳೂ ಗ್ರಂಥೋಕ್ತ ಉದಾಹರಣೆಗಳೂ ಇರುವುವೆಂದೂ "ಇಂಡಿಯನ್ ಡೈಲಿ ಮೈಲ್" ಎಂಬ ವರ್ತಮಾನ ಪತ್ರಿಕೆಯು ತಿಳಿಸುತ್ತದೆ.

("*The Modern Review*" for February 1932.)

ಕನ್ನಡದಲ್ಲಿ ಒಂದು ನಿಘಂಟುವಿನ ರಚನೆಯ ವಿಷಯವಾಗಿ ಮೈಸೂರು ಸರಕಾರದವರು ಈಗ ೮ ವರ್ಷಗಳಿಂದಲೂ ಇನ್ನೂ ಆಲೋಚನೆಯಲ್ಲಿಯೇ ಇರುವರು.

———



# ಗ್ರಂಥ ವಿಮರ್ಶೆ

## ೧. ಕರ್ಣಾಟಕ ಮುದ್ರಾರಾಕ್ಷಸ ನಾಟಕಂ

ಗ್ರಂಥಕರ್ತರು.—ಆಸ್ಥಾನ ಮಹಾ ವಿದ್ವಾನ್ ವೋಟಗಾನಹಳ್ಳಿ ರಾಮಶೇಷ ಶಾಸ್ತ್ರಿಗಳು, ಮೈಸೂರು.

ಮುದ್ರಣಕಾರರು.—ಕೆ. ಎನ್. ನರಸಿಂಹಯ್ಯ ಪ್ರೆಸ್, ಮೈಸೂರು.

ಕ್ರೌನ್ ಅಷ್ಟಪತ್ರ ಪುಟಗಳು ೩೪+೧೩೮+೧೦; (ಬೆಲೆ?); ೧೯೩೧.

ಮುಮ್ಮಡಿ ಕೃಷ್ಣರಾಜವೊಡೆಯರವರು ಸಿಂಹಾಸನಕ್ಕೆ ಬರಲು, ಮೈಸೂರಿಗೆ ಹೇಗೋ, ಕನ್ನಡ ಸಾಹಿತ್ಯಕ್ಕೂ ಹಾಗೆಯೇ, ಆಧುನಿಕ ಯುಗವು ಆರಂಭವಾಯಿತು. ಅವರ ಮತ್ತು ಶ್ರೀ ಚಾಮರಾಜೇಂದ್ರವೊಡೆಯರವರ ಕಾಲದಲ್ಲಿ ಹಲವು ಜನ ಉಭಯ ಭಾಷಾ ಪಂಡಿತರಾದ ಆಸ್ಥಾನ ವಿದ್ವಾಂಸರು ಸಂಸ್ಕೃತದಲ್ಲಿದ್ದ ಪುರಾಣ ಕಾವ್ಯ ನಾಟಕಾದಿ ಗ್ರಂಥಗಳನ್ನು ಕನ್ನಡಕ್ಕೆ ಭಾಷಾಂತರ ಮಾಡಿ ಆಧುನಿಕ ಕನ್ನಡ ಸಾಹಿತ್ಯವನ್ನು ವಿಸ್ತರಿಸಿದರು. 'ಕರ್ಣಾಟಕ ಮುದ್ರಾರಾಕ್ಷಸ ನಾಟಕ'ದ ಕರ್ತೃಗಳಾದ ಬ್ರ|| ಶ್ರೀ ಮಹಾ ವಿದ್ವಾನ್ ರಾಮಶೇಷ ಶಾಸ್ತ್ರಿಗಳು ಈ ಪಂಡಿತರ ಪಂಕ್ತಿಗೆ ಸೇರಿದವರು.

ಈ ಗ್ರಂಥವು 'ಕರ್ಣಾಟಕ ಗ್ರಂಥಮಾಲೆ'ಯಲ್ಲಿ (ಸಂಪುಟ ೧೧—) ಮೊದಲು, ಭಾಗ ಭಾಗವಾಗಿಯೂ ಆಮೇಲೆ ಪುಸ್ತಕ ರೂಪವಾಗಿಯೂ ಬಂತು. ಅದೇ ಪರಿಷ್ಕೃತವಾಗಿ ಈಗ ಎರಡನೆಯ ಸಾರಿ ಮುದ್ರಿಸಲ್ಪಟ್ಟಿದೆ. ಇದರಲ್ಲಿ ಮೂಲ ಗ್ರಂಥ ಕರ್ತನಾದ ವಿಶಾಖದತ್ತನ ಕಾಲ ನಿರ್ಣಯ ವಿಚಾರ ಮುಂತಾದ ಅಂಶಗಳನ್ನು ಒಳಕೊಂಡ ಉಪೋದ್ಘಾತ, ಮುದ್ರಾರಾಕ್ಷಸ ನಾಟಕದ ಪೂರ್ವ ಕಥೆ, ವಿಷಯ ಸೂಚಿಕೆ (ಕಥಾ ಸಾರಾಂಶ), ಕ್ಲಿಷ್ಟ ಪದ ಪದ್ಯಗಳ ಅರ್ಥ ತಾತ್ಪರ್ಯಾದಿಗಳು— ಇವೆಲ್ಲಾ ಸೇರಿಸಲ್ಪಟ್ಟಿರುವುದರಿಂದ ಪಾಠಕರಿಗೆ ಕವಿ ಕಾವ್ಯ ವಿಚಾರಗಳನ್ನು ತಿಳಿಯಲು ಅನುಕೂಲವಾಗಿದೆ.

'ಮುದ್ರಾರಾಕ್ಷಸ'ವು ಪ್ರೌಢ ಗ್ರಂಥ; ಆದ್ದರಿಂದ ಅದನ್ನು ಭಾಷಾಂತರ ಮಾಡಬೇಕಾದರೆ ಸಂಸ್ಕೃತ ಕನ್ನಡಗಳಲ್ಲಿ ಪಾಂಡಿತ್ಯವೂ, ಪದ್ಯ ರಚನಾಭ್ಯಾಸ ಕೌಶಲಗಳೂ ಆವಶ್ಯಕ. ಹಲವು ಸಣ್ಣ ದೊಡ್ಡ ವೃತ್ತಗಳಲ್ಲಿ ರಚಿತವಾದ ಪದ್ಯಗಳನ್ನು, ಕನ್ನಡಕ್ಕೆ ಬಳಕೆಯಾಗಿರುವ ವೃತ್ತಗಳಲ್ಲಿ ಅರ್ಥ ಹೆಚ್ಚು ಕಡಮೆಯಾಗದಂತೆ ಕನ್ನಡಿಸುವುದು ಸುಲಭವಲ್ಲ. ಆದರೂ, ಈ ನಾಟಕದ ಪದ್ಯ ಗದ್ಯಗಳನ್ನು "ಸಾಧ್ಯವಾದ ಮಟ್ಟಿಗೂ ಅನ್ಯೂನಾತಿರಿಕ್ತವಾಗಿ, ಮೂಲ ಗ್ರಂಥದ ಸ್ವಾರಸ್ಯವು ಕೆಡದಂತೆ, ಸುಲಭ ಶೈಲಿಯುಳ್ಳ ಭಾಷೆಯಿಂದ"* ಪರಿವರ್ತಿಸಿರುವುದಕ್ಕಾಗಿ ವೇ|| ಶಾಸ್ತ್ರಿಗಳು ವಂದ್ಯರು ಮತ್ತು ಅಭಿನಂದ್ಯರು.

* ಉಪೋದ್ಘಾತ, ಪುಟ ೨೭.

ಮೇಲಿನ ಅನುವಾದ ವಾಕ್ಯದಲ್ಲಿ ವಿವರಿಸಿರುವ ಭಾಷಾಂತರ ಸ್ವರೂಪವು ಬಹು ಮಟ್ಟಿಗೆ ನಿಜವಾದದ್ದು; ಆದರೆ ಅದಕ್ಕೆ ಅಪವಾದಗಳಿಲ್ಲದೆ ಇಲ್ಲ; ಅವುಗಳಲ್ಲಿ ಕೆಲವನ್ನು ಇಲ್ಲಿ ಸೂಚಿಸಿದೆ:—

**ಪುಟ ೩೧. ಕಳಭಂಗಳ್.—**

ಕಳಭವೆಂದರೆ ಆನೆಯ ಮರಿ. 'ಮಹಾಮಾತ್ಯ'ರನ್ನು ಆನೆಯ 'ಮರಿ'ಗಳಿಗೆ ಹೋಲಿಸುವುದು ಉಚಿತವಲ್ಲ. ಮೂಲದಲ್ಲಿ ಇವರನ್ನು 'ವನ ಗಜ'ಗಳಿಗೆ ಹೋಲಿಸಿದೆ.

**ಪುಟ ೩೯. ಅಪಮೃತ್ಯು.—**

ಮೂಲದಲ್ಲಿ—'ಅಪ' ಎಂಬ ಉಪಸರ್ಗ ಪ್ರಯೋಗವಿಲ್ಲ. ಅಪಮೃತ್ಯುವಿಗೂ ಮೃತ್ಯುವಿಗೂ ವ್ಯತ್ಯಾಸವಿದೆ. ಯುದ್ಧದಲ್ಲಿ ಪಡೆಯುವ ವೀರ ಮರಣವನ್ನು ರಾಕ್ಷಸನು 'ಅಪ'ಮೃತ್ಯುವೆಂದು ಕರೆಯಲಾರನು.

**ಪುಟ ೪೨. ಇಬ್ಬರ ಪ್ರಯತ್ನಗಳಿಗೂ ಸಮಯವಲ್ಲ.—**

ಸಂಸ್ಕೃತದಲ್ಲಿ 'ಅಸ್ಥಾನೇ ಯತ್ನಃ' ಎಂದಿದೆ. ಇಲ್ಲಿ 'ಅಸ್ಥಾನೇ' ಎಂದರೆ, 'ಅಯುಕ್ತ'ವೆಂದು ಅರ್ಥ ಮಾಡಿದರೆ ಚೆನ್ನಾಗಿರುತ್ತದೆ.

**ಪುಟ ೪೫. ಖಳರ್.—**

ಸಂಸ್ಕೃತದ 'ನೀಚ' ಶಬ್ದಕ್ಕೆ ಸರಿಯಾದ ಕನ್ನಡ ಶಬ್ದ 'ಕೀಳು'. ಇಲ್ಲಿ ಉತ್ತಮ ಮಧ್ಯಮರಲ್ಲದ ಅಧಮರು ವಿವಕ್ಷಿತರೇ ಹೊರತು 'ದುಷ್ಟ'ರಲ್ಲ: ಖಳ ಶಬ್ದಕ್ಕೆ ದುಷ್ಟನೆಂದರ್ಥ.

**ಪುಟ ೫೩. ಕಥೆ.—**

ಇಲ್ಲಿ ಕಥೆಯೇನೂ ಇಲ್ಲ. ಸಂಸ್ಕೃತದ 'ಕಥೆ'ಯು ಕನ್ನಡದಲ್ಲಿ 'ಮಾತು', ಅಥವಾ 'ವೃತ್ತಾಂತ'ಕ್ಕೆ ಸಮಾನ.

**ಪುಟ ೫೪. ಶಿಶುತ್ವ.—**

ಸಂ. 'ನವ ವಯಸಿ'. ರಾಜ್ಯಭಾರವನ್ನು ವಹಿಸಿರುವ ಚಂದ್ರಗುಪ್ತನನ್ನು, ಕಂಚುಕಿಯು 'ಶಿಶು'ವೆಂದಿರಲಾರನು; 'ಚಿಕ್ಕ ವಯಸ್ಸು' ಎಂದು ಅರ್ಥವಿರಬಹುದು.

**ಪುಟ ೮೫. ಈ ಜೋಯಿಸನು ಕ್ಷಪಣಕನು.—**

ಇಲ್ಲಿ ಜೋಯಿಸನನ್ನು ಉದ್ದೇಶಿಸಿ ಕ್ಷಪಣಕತ್ವವು ವಿಹಿತವಾಗಿಲ್ಲ, ವಾಕ್ಯವೂ ಮುಗಿದಿಲ್ಲ; ಮುಂದಿನ, 'ಜೀವಸಿದ್ಧಿಯು' ಎಂಬ ಮಾತನ್ನು ಇದರೊಡನೆ ಏಕಾನ್ವಯ ಮಾಡಿಕೊಳ್ಳಬೇಕು. ಆಗ "ಈ ಜೋಯಿಸನು ಕ್ಷಪಣಕನು ಜೀವಸಿದ್ಧಿಯು" ಎಂದಾಗುತ್ತದೆ. 'ಬಾಗಿಲಲ್ಲಿ ಜೋಯಿಸನಾವನಾದರೂ ಇರುವನೇ?' ಎಂಬ ರಾಕ್ಷಸನ ಪ್ರಶ್ನೆಗೆ ಪುರುಷನು 'ಕ್ಷಪಣಕನಾದ....' ಎಂದು ಆರಂಭ ಮಾಡಿ, ರಾಕ್ಷಸನ ಆತ್ಮಗತ ಭಾಷಣವಾದ ಮೇಲೆ, ಜೀವಸಿದ್ಧಿಯು (ಇದ್ದಾನೆ) ಎಂದು ಮುಗಿಸಿ ಉತ್ತರ ಕೊಡುತ್ತಾನೆ.

ಪುಟ ೧೧೮. ಬಿರಿದ ಕಲ್ಲು.—

'ಬಿರಿದ (ಸಂ. ಭಗ್ನ) ಕಲ್ಲು' ಎನ್ನುವುದಕ್ಕಿಂತ 'ಮುರಿದ' ಎಂದಿದ್ದರೆ ಚೆನ್ನಾಗಿರುತ್ತದೆ.

ಪುಟ ೧೩೦. ಅಣಕಿಸು.—

ಈ ಶಬ್ದಕ್ಕೆ ಕನ್ನಡದಲ್ಲಿ ಹೀನಾರ್ಥವಿದೆ. ಆದ್ದರಿಂದ 'ಅನುಕರಿಸು' ಎಂದರೆ ಉಚಿತವಾಗಿರುತ್ತದೆ.

ಪುಟ ೧೩೧. ಸಾಗರವೆನೆ ಪದ್ಮಂಗಳ್ಗೆ.—

(ಇದು ಪಾಠಾಂತರವಿರಬಹುದು.) 'ರತ್ನಂಗಳ್ಗೆ' ಎಂದಿದ್ದರೆ ಚೆನ್ನಾಗಿರುತ್ತದೆ.

ಪುಟ ೧೩೭. ಕಂದ ಪದ್ಯ.—

ಮೂಲದಲ್ಲಿ 'ಖಳ' ಶಬ್ದ ಪ್ರಯೋಗವಿಲ್ಲ. ಚಂದ್ರಗುಪ್ತನ ಬಾಯಲ್ಲಿ, ಈಗ, ರಾಕ್ಷಸನ ಮುಂದೆ, ಈ ಮಾತನ್ನು ಹಾಕುವುದು ಉಚಿತವಲ್ಲ. ಸಂಸ್ಕೃತ ಗ್ರಂಥದಲ್ಲಿ ರಾಕ್ಷಸನ ಸ್ನೇಹ ಲಾಭವು ಮೊದಲು ಬಂದಿದೆ. ಭಾಷಾಂತರದಲ್ಲಿಯೂ ಅದೇ ಮೊದಲು ಉಕ್ತವಾಗಿದ್ದಿದ್ದರೆ ಚಂದ್ರಗುಪ್ತನ ಉಚಿತಜ್ಞತೆಯನ್ನು ಚೆನ್ನಾಗಿ ತೋರಿಸಿದಂತಾಗುತ್ತಿತ್ತು.

ಪುಟ ೧೩೮. ಸಂಗರಮಂ ನೆರವೇರಿಸಿ.—

ಇಲ್ಲಿ 'ಸಂಗರ' ಶಬ್ದವು 'ಪ್ರತಿಜ್ಞೆ' ಎಂಬ ಅದರ ಅಪ್ರಸಿದ್ಧಾರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ.

'ಯವನ', 'ಮ್ಲೇಚ್ಛ' ಎಂಬ ಶಬ್ದಗಳನ್ನು (ಪುಟ ೧೦೦, ೧೧೬) 'ತುರುಷ್ಕ' ಎಂದು ಕನ್ನಡಿಸಿದೆ. ಇದು ಸರಿಯಲ್ಲ. ಯವನರೂ ಮ್ಲೇಚ್ಛರೆಲ್ಲರೂ 'ತುರುಷ್ಕ'ರಲ್ಲ. ಹಾಗೆಯೇ, 'ಶಾಂತಂ ಪಾಪಂ' ಎಂಬುದನ್ನು 'ಶಿವ ಶಿವ' ಎಂದು ಕನ್ನಡಿಸುವುದೂ ಸರಿಯಲ್ಲ. ಕ್ಷಪಣಕನು (ಪು. ೯೨) 'ಶಿವ ಶಿವ' ಎನ್ನಲಾರನು. 'ಕಳತ್ರ' ಶಬ್ದಕ್ಕೆ (ರೂಢವಾದ) 'ಹೆಂಡತಿ' ಎಂದು ಅರ್ಥ ಹೇಳಿದೆ. (ಕ್ಲಿಷ್ಟ ಪದಗಳ ಅರ್ಥದ ಪಟ್ಟಿ.) ಆದರೆ ಇದಕ್ಕೆ ಇಲ್ಲಿ, 'ಕಾಪಾಡಬೇಕಾದ ಪೋಷ್ಯ ವರ್ಗ, ಅಥವಾ ಪರಿವಾರ' ಎಂಬರ್ಥವಿರುವಂತಿದೆ.* ಅದೇ ಉಚಿತವಾಗಿದೆ. ಭಾಸನೂ ಈ ಶಬ್ದವನ್ನು ಈ ಅರ್ಥದಲ್ಲಿಯೇ ಪ್ರಯೋಗಿಸಿರಬಹುದು. ("ಪ್ರತಿಜ್ಞಾ ಯೌಗಂಧರಾಯಣ", ಅಂಕ I)† 'ವಿಜಯೆ'ಯನ್ನು ಭಾಸನು 'ಸ್ವಪ್ನವಾಸವದತ್ತ', 'ಪ್ರತಿಜ್ಞಾ ಯೌಗಂಧರಾಯಣ' ಮತ್ತು 'ರಾಮಾಯಣ ನಾಟಕ'ಗಳಲ್ಲಿ ಪ್ರತೀಹಾರಿಯಾಗಿಯೋ ಗೌಡಿಯಾಗಿಯೋ ತಂದಿದ್ದಾನೆ. ಮುದ್ರಾರಾಕ್ಷಸದಲ್ಲಿ ಇದೇ ಹೆಸರಿನ ಪ್ರತೀಹಾರಿಯು ಬರುವಳು (ಪು. ೯೨). ಆದ್ದರಿಂದ ಭಾಸ ವಿಶಾಖದತ್ತರ ಕೃತಿಗಳಲ್ಲಿ ಸಾದೃಶ್ಯ ಕಂಡುಬಂದರೆ ಅದು ವಿಚಾರಾರ್ಹವಾದದ್ದು.

* ಕಲತ್ರಂ, ಕುಟುಂಬವತ್ ಕೇವಲಂ ಪೋಷ್ಯಾಃ.—ವ್ಯಾಖ್ಯಾನ.

† ವೇಣುವನೇ ಕಲತ್ರಮಾವಾಸ್ಯ—

'ಬೆದೆ' ಗೆ (ಪು ೧೧) ಹೊಸ ಕನ್ನಡದಲ್ಲಿ 'ವ್ಯಥೆ' ಎಂದು ಅರ್ಥವಾಗುವುದಿಲ್ಲ; ಅಥವಾ, ಹಾಗೆ ಅರ್ಥವಾದರೂ ಜೊತೆಗೆ ಅನಿಷ್ಟವಾದ ಮತ್ತೊಂದು ಅರ್ಥವೂ ಆಗುತ್ತದೆ. ಆದ್ದರಿಂದ 'ಬೆತೆ' ಎಂದೋ ಅಥವಾ, ಮತ್ತಾವುದಾದರೋ ಶಬ್ದವನ್ನೋ ಉಪಯೋಗಿಸುವುದು ಉತ್ತಮ.

ಪುಟ ೧೯. ಬಲಗಣ್ಣನ್ನು ಮಿಟಿಕಿಸುವ ಸನ್ನೆಯನ್ನು ತಿಳಿಸಬೇಕು.

ಪುಟ ೨೫. ವಿಚಿತ್ರವಾದ ರಾಜಪ್ರಸಾದವನ್ನು ಸ್ಥಿರವಾಗನುಭವಿಸು.

ಪುಟ ೪೩. ಮಿತ್ರನು ವತ್ಸಲನೂ ಆಗಿದ್ದ ದಾರುವರ್ಮನ ವಿಯೋಗವನ್ನು ಪಡೆದೆವು?

ಪುಟ ೫೧–೫೨. ಇತ್ಯಾದಿ, ಹಾಗೆಯೇ.

ಎಂಬ ಕೆಲವು ವಾಕ್ಯಗಳು ಕನ್ನಡದ ರೂಢಿಗೆ ಸರಿಯಾಗಿಲ್ಲ.

ಭಾಷಾಂತರವು ಕೆಲವು ಕಡೆಗಳಲ್ಲಿ ಕಷ್ಟವಾಗಿದೆ; ಇದಕ್ಕೆ ಮೂಲ ಗ್ರಂಥದ ಸ್ವರೂಪವೂ ಸ್ವಲ್ಪ ಮಟ್ಟಿಗೆ ಕಾರಣ

ಮುದ್ರಣವು ಗ್ರಂಥದ ಯೋಗ್ಯತೆಗೆ ತಕ್ಕಂತಿಲ್ಲ; ಶುದ್ಧಾಶುದ್ಧ ಪತ್ರಿಕೆಗೂ ಸಿಕ್ಕದೆ ಇರುವ ಕೆಲವು ತಪ್ಪುಗಳಿವೆ. ಆದ್ದರಿಂದ ೫೬ ಮತ್ತು ೬೨ನೆಯ ಪುಟಗಳಲ್ಲಿ ಬರುವ ಎರಡು ವೃತ್ತಗಳಲ್ಲಿ ಛಂದೋಭಂಗವಾಗಿ ಅರ್ಥವಾಗುವುದಿಲ್ಲ. 'ವಿಸ್ತೃತಿ'ಗೆ ಬದಲಾಗಿ 'ವಿಸ್ಮೃತಿ' (ಪು. ೧೧೮) ಬಿದ್ದುಹೋಗಿ ಅಪಾರ್ಥವಾಗುತ್ತದೆ. ಸಂಧಿ ಸಮಾಸಗಳಾದ ಪದಗಳನ್ನು ಅಚ್ಚುಮಾಡುವಾಗ ಸಾಮಾನ್ಯವಾಗಿ ತೆಲುಗು ಮುದ್ರಣದ ಪದ್ಧತಿಯನ್ನು ಹಿಡಿದಿರುವುದರಿಂದಲೂ, ಪಾಠಕ ಸೌಕರ್ಯವನ್ನು ಲಕ್ಷ್ಯದಲ್ಲಿಟ್ಟುಕೊಳ್ಳದೆ ಇರುವುದರಿಂದಲೂ ಕೆಲವು ಕಡೆ ತಟ್ಟನೆ ಅರ್ಥವಾಗುವುದಿಲ್ಲ; ಸಂದೇಹವೂ ಬರುತ್ತದೆ.

ಉದಾ.—ಪುಟ ೩೫.—ಭೂಷಣಾವಳಿಯ ನನ್ನವರಂ; ಪುಟ ೧೨೨.—ಸುತರ್ಪಿತನಂ; ಪುಟ ೧೨೩.—ಸಖ ನಿಲ್ಲದೆ—ಇತ್ಯಾದಿ.

ಇವುಗಳಲ್ಲಿ ಎರಡನೆಯದನ್ನು ಬಿಡಿಸಿಯೂ, ಮಿಕ್ಕೆರಡನ್ನು ಕೂಡಿಸಿಯೂ ಮುದ್ರಿಸುವುದು ಉತ್ತಮ.

ಉಪೋದ್ಘಾತವು ಪ್ರೌಢವಾಗಿಯೂ, ವಿಚಾರಪೂರ್ಣವಾಗಿಯೂ ಇದೆ. (ಇದರ ಮೂರನೆಯ ಪುಟದ ಮಧ್ಯಭಾಗದಿಂದ ಇಪ್ಪತ್ತಾರನೆಯ ಪುಟದ ತುದಿಯವರೆಗೆ ಇರುವ ಭಾಗವು ಮ॥ ಎಸ್. ಶ್ರೀಕಂಠಶಾಸ್ತ್ರಿಗಳದೆಂದೂ ಮಿಕ್ಕ ಭಾಗವು ವೇ॥ ರಾಮಶೇಷಶಾಸ್ತ್ರಿಗಳದೆಂದೂ ಗ್ರಹಿಸಬೇಕೆಂದು ತೋರುತ್ತದೆ. ಇಲ್ಲದಿದ್ದರೆ, ಅದರ ಐದನೆಯ ಪುಟದಲ್ಲಿ ಬರುವ 'ನನ್ನ' ಎಂಬ ಉತ್ತಮ ಪುರುಷ ನಿರ್ದೇಶವು ಅನುಪಪನ್ನವಾಗುತ್ತದೆ.) ಇದರಲ್ಲಿ ಮ॥ ಶಾಸ್ತ್ರಿಗಳು, ವಿಲ್ಸನ್, ಕೀತ್, ಜಾಕೊಬ್, ತೆಲಂಗ್ ಮುಂತಾದ ಸಂಸ್ಕೃತವಿದ್ವಾಂಸರು ಮುದ್ರಾರಾಕ್ಷಸದ ಕಾಲವಿಚಾರವಾಗಿ ನಡೆಸಿರುವ ಸಂಶೋಧನೆಗಳನ್ನು ಖಂಡಿಸಿ, ವಿಶಾಖದತ್ತನು ತನ್ನ ಈ ನಾಟಕವನ್ನು ಕ್ರಿ. ಶ. ೩೮೮ರಲ್ಲಿ ಬರೆದಿರಬೇಕೆಂದು ನಿಶ್ಚಯಿಸಿರುವರು. ಇದು ಬಹು

ಮಟ್ಟಿಗೆ ಸಂಭವವಾಗಿರುವುದಾದರೂ ನಿರ್ವಿವಾದವಾಗಿರುವ ಸಿದ್ಧಾಂತವೇ ಎಂದು ಇನ್ನೂ ಧೈರ್ಯವಾಗಿ ಹೇಳುವಂತಿಲ್ಲ. ಪ್ರಸ್ತಾವನೆಯಲ್ಲಿ ಚಂದ್ರಗ್ರಹಣವು ಆಗಲಿಲ್ಲವೆಂದು ಸ್ಪಷ್ಟವಾಗಿ ಹೇಳಿದೆ. ಇದನ್ನು 'ವಿಶಾಖದತ್ತನು ಕಥಾ ಸಂದರ್ಭ ಕ್ಕೋಸ್ಕರ ಆಸನ್ನವಾಗಿ ಬಿಟ್ಟುಹೋಯಿತೆಂದು ಹೇಳಿರಬೇಕೆಂದು' ನಿಶ್ಚಯಿಸು ವುದಕ್ಕೆ ಪ್ರಮಾಣವೇನು? ಕೌಟಿಲ್ಯನ 'ಅರ್ಥಶಾಸ್ತ್ರ'ವು ಕ್ರಿ. ಪೂ. ಸು. ೩೦೦ರದ್ದು (ಪು. ೨೧) ಎಂದೂ, 'ಅವಂತಿ ಸುಂದರೀ' ಕಥೆಯು 'ದಂಡಿ' ರಚಿತವೆಂದೂ (ಪು. ೧೯), 'ಭಾಮಹ'ನು 'ಪ್ರಾಯಃ ಕ್ರಿ. ಶ. ನಾಲ್ಕನೆಯ ಶತಮಾನದ ಅಂತ್ಯ ಭಾಗದಲ್ಲಿದ್ದ ನೆಂದೂ' (ಪು. ೨೦) ಎಲ್ಲರೂ ಒಪ್ಪುವುದಿಲ್ಲ. ಇವುಗಳನ್ನು ಎಲ್ಲರೂ ಒಪ್ಪಲಿ ಬಿಡಲಿ; ಈ ಕಾಲ ನಿರ್ಣಯವು ಮುಂದೆ ಬದಲಾಗಲಿ, ಸ್ಥಿರಪಡಲಿ; ಅಂತು, ಈಗ ಈ ವಿಷಯವಾಗಿ ದೊರೆಯುವ ಸಾಮಗ್ರಿಗಳನ್ನೆಲ್ಲಾ ಕೂಡಿಹಾಕಿ, ಮಥಿಸಿ, ಪಾಶ್ಚಾತ್ಯ ಸಂಶೋಧನ ಕ್ರಮದ ಸ್ವರೂಪವು ಕನ್ನಡಿಗರಿಗೆ ತಿಳಿಯುವಂತೆಯೂ ಸ್ವಮತವು ವ್ಯಕ್ತವಾಗುವಂತೆಯೂ ಬರೆದಿರುವ ಮ|| ಶಾಸ್ತ್ರಿಗಳ ವಿದ್ವಲ್ಲೇಖನವು ಶ್ಲಾಘ್ಯವಾಗಿದೆ.

---

ಬಿಹಾರ್ ಮತ್ತು ಒರಿಸ್ಸಾ ಸಂಶೋಧನ ಸಂಘದ ಪತ್ರಿಕೆಯಲ್ಲಿ (ಮಾರ್ಚಿ ೧೯೩೨) ಮ|| ಕೆ. ಪಿ. ಜಯಸ್ವಾಲ್ ಅವರು ಬರೆದಿರುವ ಒಂದು ಲೇಖನದಿಂದ ಈ ನಾಟಕದ ಉಪೋದ್ಘಾತದಲ್ಲಿ ಪ್ರಸಕ್ತವಾಗಿರುವ ಕೆಲವು ಅಂಶಗಳಿಗೆ ಸಂಬಂಧಪಟ್ಟ ಹಾಗೆ ಸ್ವಲ್ಪ ವಿಷಯವಿದೆ. ಅದನ್ನು ಇಲ್ಲಿ ಸಂಗ್ರಹ ಮಾಡಿದ್ದೇವೆ:—

೧. ಅರಿಪುರ (ಉಪೋ., ಪುಟ ೧೬).—

ಇದು ಭೋಜನ ಶೃಂಗಾರ ಪ್ರಕಾಶದಲ್ಲಿ 'ಅಳಿಪುರ'ವೆಂದಿದೆ. ಇದು ಪಂಜಾಬಿನ ಜಲಂಧರ ಡಿಸ್ಟ್ರಿಕ್ಟಿನಲ್ಲಿರುವ 'ಅಲಿವಾಲ್' ಎಂಬ ಊರೋ, ಕಾಂಗ್ರಾ ಡಿಸ್ಟ್ರಿಕ್ಟಿ ನಲ್ಲಿರುವ 'ಅಲಿಪುರ್' ಎಂಬ ದುರ್ಗವೋ ಆಗಿದ್ದರೂ ಆಗಿರಬಹುದು.

೨. ದೇವೀ ಚಂದ್ರಗುಪ್ತ (ಪುಟ ೧೬).—

'ಮುದ್ರಾರಾಕ್ಷಸ', 'ದೇವೀ ಚಂದ್ರಗುಪ್ತ'ಗಳೆರಡೂ ಏಕ ಕರ್ತೃಕಗಳು. ಮುದ್ರಾರಾಕ್ಷಸವು ಇಮ್ಮಡಿ ಚಂದ್ರಗುಪ್ತನ ಜೀವಿತ ಕಾಲದಲ್ಲಿಯೂ, ದೇವೀ ಚಂದ್ರಗುಪ್ತವು ಅವನ ಅನಂತರ ಕಾಲದಲ್ಲಿಯೂ ರಚಿತವಾದವು. ಮುದ್ರಾರಾಕ್ಷಸದ ಭರತವಾಕ್ಯದಲ್ಲಿ ದೇವೀಚಂದ್ರಗುಪ್ತದ ಕಥೆಯು ಶ್ಲೇಷೆಯಿಂದ ಸೂಚಿಸಲ್ಪಟ್ಟಿದೆ.

೩. ಚಂದ್ರಗುಪ್ತನ ರಾಣಿ (ಉಪೋ., ಪುಟ ೧೬).—

ಈಕೆಯ ಹೆಸರು ಧ್ರುವದೇವಿ. ಚಂದ್ರಗುಪ್ತನು ಹೆಂಗಸಿನ ವೇಷದಿಂದ ಶಕ ಪತಿಯನ್ನು ಕೊಂದಾಗ ಆಕೆಯು ಅವನ ಅಣ್ಣನಾದ ರಾಮಗುಪ್ತನ ಹೆಂಡತಿಯಾ ಗಿದ್ದಳು. ತನ್ನ ಅಣ್ಣನ ಮರಣಾನಂತರ ಚಂದ್ರಗುಪ್ತನು ಆಕೆಯನ್ನು ತಾನೇ ಮದುವೆಯಾದನು.

೪. ವರಾಹಮೂರ್ತಿ (ಉಪೋ., ಪುಟ ೨೩).—

ಉದಯಗಿರಿಯ (ಭಿಲ್ಸ-ವಿದಿಶಾ) ಗುಹಾ ದೇವಾಲಯದಲ್ಲಿ ವರಾಹಾವತಾರವನ್ನು ಕೆತ್ತಿದೆ. ಈ ಗುಹಾಲಯವು ಎರಡನೆಯ ಚಂದ್ರಗುಪ್ತನ ಕೈಕೆಳಗಿನ ಅಧಿಕಾರಿಯಿಂದ ಮಾಡಿಸಲ್ಪಟ್ಟದ್ದು. ಮುದ್ರಾರಾಕ್ಷಸದ ಭರತವಾಕ್ಯ ಶ್ಲೋಕದಲ್ಲಿ ವರ್ಣಿತವಾದ ವರಾಹಮೂರ್ತಿಯನ್ನು ಮನಸ್ಸಿನಲ್ಲಿಟ್ಟುಕೊಂಡು ಶಿಲ್ಪಿಯು ಇಲ್ಲಿಯ ವಿಗ್ರಹವನ್ನು ಕೆತ್ತಿರಬಹುದು.

(ಈ ಗುಹಾಲಯದ ವಿಗ್ರಹವನ್ನೇ ನೋಡಿಕೊಂಡು ವಿಶಾಖದತ್ತನು ತನ್ನ ಭರತವಾಕ್ಯ ಶ್ಲೋಕವನ್ನು ಏಕೆ ಬರೆದಿರಬಾರದು? ಇದನ್ನು ಜಯಸ್ವಾಲರು ವಿಚಾರ ಮಾಡಿಲ್ಲ.)—ಇತ್ಯಾದಿ.

ಎ. ಆರ್. ಕೃ.

---

ಕನ್ನಡ

## ೨. ರಘುವಂಶ ರಹಸ್ಯ

ಅಥವಾ

ಸೂರ್ಯವಂಶದ ಅರಸರು

ಲೇಖಕರು.—ಶ್ರೀ ಬಸವರಾಜ ಶಾಸ್ತ್ರಿ ಮಲ್ಲಿನಾಥ ಶಾಸ್ತ್ರಿ
ಕೋಡಿ ಕೊಪ್ಪ ಮಠ, ವಿಜಾಪುರ.

ಪ್ರಕಾಶಕರು.—ಶ್ರೀ ಸೋಮಶೇಖರ ಶಾಸ್ತ್ರಿಗಳು, ಹುಬ್ಬಳ್ಳಿ, ಮೂರುಸಾವಿರ
ಮಠದ ಆಸ್ಥಾನ ಪಂಡಿತರು.

ಮುದ್ರಣಕಾರರು.—ಹಿತಚಿಂತಕ ಪ್ರಿಂಟಿಂಗ್ ಪ್ರೆಸ್, ವಿಜಾಪುರ.

ಕ್ರೌನ್ ಅಷ್ಟಪತ್ರ ಪುಟಗಳು ೩ + ೧೬೪ ; ಬೆಲೆ ರೂ. ೧—೪—೦ ; ೧೯೩೧.

ಭಾಷಾಂತರವು ವ್ಯಕ್ತಿಗೆ ಬದಲಾಗಿ ಮಾಡಿಟ್ಟ ವಿಗ್ರಹದಂತೆ, ಕೃತಿಗೆ ಬದಲಾಗಿ ಮಾಡಿದ ಅದರ ಪ್ರತಿಕೃತಿ. ಅದು, ಪ್ರತಿಬಿಂಬ, ಛಾಯಾಚಿತ್ರ, ಚಲನಚಿತ್ರ, ನಾಟಕ ಪಾತ್ರಗಳಂತೆ ಸ್ವರೂಪ ಸ್ವಭಾವಗಳಲ್ಲಿ ವಿಧವಿಧವಾಗಿದ್ದು, ಸಾಧನ ಸಾಮಗ್ರಿ ಕರ್ತೃ ಸಾಮರ್ಥ್ಯಗಳ ಮೇಲೆ ಅದಕ್ಕೂ ಮೂಲಕ್ಕೂ ಇರಬಹುದಾದ ಸಾದೃಶ್ಯವು ಹೆಚ್ಚು ಕಡಮೆಯಾಗುತ್ತದೆ. ಅಂತೂ, ಎರಡೂ ಎಂದಿಗೂ ಒಂದಾಗುವುದಿಲ್ಲ. ಎಂಥ ಸಮರ್ಥ ಶಿಲ್ಪಿಯೇ ಆಗಲಿ ತಾನು ಬರೆದ ಒಂದು ಚಿತ್ರವನ್ನು ತಾನೇ ನಕಲು ಮಾಡಿದರೂ ಒಂದಕ್ಕೊಂದಕ್ಕೆ ವ್ಯತ್ಯಾಸವಿದ್ದೇ ಇರುತ್ತದೆ. ಹೀಗಿರುವಾಗ, ಒಂದು ಕಾಲದಲ್ಲಿ ಹುಟ್ಟಿದ ಗ್ರಂಥವನ್ನು ಮತ್ತೊಂದು ಕಾಲದಲ್ಲಿ ಇನ್ನೊಂದು ಭಾಷೆಗೆ ಪರಿವರ್ತಿಸಿ ಅದರ ಜೀವಂತ ಪ್ರತಿಬಿಂಬವನ್ನು ಒದಗಿಸಿಕೊಡುವುದು ಸುಲಭವಲ್ಲ. ಅದರಲ್ಲಿಯೂ ಮೂಲವು ಒಬ್ಬ ಮಹಾಕವಿಯ ಉತ್ತಮ ಪದ್ಯ ಕಾವ್ಯವಾಗಿದ್ದರೆ ಅದನ್ನು ಬೇರೊಂದು

ಭಾಷೆಯ ಗದ್ಯಕ್ಕೆ ತಿರುಗಿಸುವುದು ಅಸಾಧ್ಯವೆಂದೇ ಹೇಳಬೇಕು. ಆದರೆ ಈ ಎರಡು ಭಾಷೆಗಳು ಒಂದೇ ಸಂಸ್ಕೃತಿಯುಳ್ಳ ಜನರ ಭಾಷಾ ವರ್ಗಕ್ಕೆ ಸೇರಿದ್ದು, ಒಂದೇ ಸತ್ವವುಳ್ಳವಾದರೆ, ಭಾಷಾಂತರ ಕರ್ತನಿಗೆ ಸೌಕರ್ಯವುಂಟು. ಹೀಗೆ ಯೂರೋಪು ಖಂಡದ ಭಾಷೆಗಳಲ್ಲಿ ಒಂದರಿಂದ ಮತ್ತೊಂದಕ್ಕೆ ಕಾವ್ಯ ಪರಿವರ್ತನ ಮಾಡುವುದು ಸುಲಭ; ಹಿಂದೂ ದೇಶದ ಭಾಷೆಗಳಲ್ಲಿಯೂ ಪರಸ್ಪರ ಹೀಗೆಯೇ. ಆದ್ದರಿಂದ, ಸಂಸ್ಕೃತದಿಂದ ಕನ್ನಡಕ್ಕೆ ಭಾಷಾಂತರ ಮಾಡುವುದರಲ್ಲಿ ಒಂದು ಸೌಕರ್ಯ ವಿದೆ; ಕನ್ನಡ ತೆಲುಗು ಮಲೆಯಾಳಗಳಲ್ಲಿ ಸಂಸ್ಕೃತದ ಅಂಶ ಎಷ್ಟು ತುಂಬಿ ಹೋಗಿದೆ ಎಂಬುದು ಎಲ್ಲರಿಗೂ ಗೊತ್ತಿದೆ; ಅದು ಹೆರರ ಮನೆಯನ್ನು ಭೋಗ್ಯಕ್ಕೆ ತೆಗೆದುಕೊಂಡು ಅದರಲ್ಲಿ ಸ್ವಂತ ಖರ್ಚಿನಿಂದ ಬದಲಾವಣೆಗಳನ್ನು ಮಾಡಿಸುತ್ತ, ಅದರ ರೂಪನ್ನೇ ಮಾರ್ಪುಗೊಳಿಸಿ ಯಜಮಾನನಿಗೇ ಇದು ನನ್ನ ಮನೆಯೇ? ಎಂದು ಅನುಮಾನ ಬರುವಂತೆ ಮಾಡಿದೆ. ಆದರೂ, ಪದ್ಯ ಪದ್ಯವೇ, ಗದ್ಯ ಗದ್ಯವೇ; ಕವಿಯ ಕಾವ್ಯಕ್ಕೂ ವಿದ್ವಾಂಸರ ವಚನಕ್ಕೂ ಎಷ್ಟೋ ವ್ಯತ್ಯಾಸವಿದೆ; ವ್ಯತ್ಯಾಸ ಬಂದೇ ಬರುತ್ತದೆ. ಕಾವ್ಯದಲ್ಲಿ ಕಥಾ ಶರೀರದ ಜೊತೆಗೆ ಅಂಗ ಸೌಷ್ಠವ ರೂಪ ಕಾಂತಿ ಜೀವ ಆತ್ಮ—ಇವೂ ಇರುತ್ತವೆ; ಇವುಗಳನ್ನು ಹಿಡಿದು ಭಾಷಾಂತರ ಮಾಡಿದರೆ, ಅದಕ್ಕೆ ಸ್ವತಂತ್ರ ಗ್ರಂಥವನ್ನು ಬರೆಯುವುದಕ್ಕಿಂತ ಹೆಚ್ಚು ಶ್ರಮ ಬೇಕಾಗುವುದು; ಈ ಕೆಲಸವನ್ನು ತಮ್ಮ ಅಂತರಾತ್ಮ ಒಪ್ಪುವಂತೆ ಮಾಡುವುದಕ್ಕೆ ಯಾರು ಪ್ರಯತ್ನ ಪಟ್ಟಿದ್ದಾರೆಯೋ ಅವರು ಈ ಮಾತನ್ನು ಒಪ್ಪಿಯಾರು, ಹೀಗೆಂದು ಸುಮ್ಮನಿರುವುದ ಕ್ಕಾಗುತ್ತದೆಯೇ? ಕಾಶೀಯಾತ್ರೆ ಹೋದವರು ಗಂಗಾ ನದಿಯನ್ನು ಸಂದರ್ಶಿಸಿ ಅದರಲ್ಲಿ ಸ್ನಾನ ಮಾಡಿ ಪುಣ್ಯಭಾಗಿಗಳಾದರೆ ಆ ಭಾಗ್ಯವಿಲ್ಲದ ಅವರ ನೆಂಟರಿಷ್ಟರು ಅವರು ವಿಶ್ವಾಸದಿಂದ ತುಂಬಿ ತಂದುಕೊಟ್ಟ ಥಾಲಿಯ ನೀರನ್ನು ಪ್ರೋಕ್ಷಿಸಿಕೊಂಡು ಧನ್ಯರಾಗುವಂತೆ ಕನ್ನಡಿಗರು ಅನ್ಯ ಸಾಹಿತ್ಯದ ಭಾಷಾಂತರಗಳಿಂದ ತೃಪ್ತರಾಗಬೇಕಾ ಗಿದೆ; ಗಂಗೆಯು ಬೆಳ್ಳಿ ಬಂಗಾರಗಳ ಕೊಡಗಳಲ್ಲಿ ಬಂದರೆ ಅವರ ಪುಣ್ಯ!

ರಘುವಂಶದಲ್ಲಿ ಮಹಾ ಕವಿ ಕಾಳಿದಾಸನು ಶ್ರೀರಾಮಚರಿತವೆಂಬ ರತ್ನವನ್ನು ಮಧ್ಯದಲ್ಲಿಟ್ಟು ಅದಕ್ಕೆ ಸುತ್ತ ಬಂಗಾರ ವರ್ತಿ, ಕುಂದಣ ಅರಗುಗಳಿಂದ ಗೂಡು ಕಟ್ಟಿ ಒಂದು ಸರಸ್ವತೀ ಕಂಠಾಭರಣವನ್ನು ಮಾಡಿದ್ದಾನೆ. ಇದನ್ನು ಎಲ್ಲರೂ ಓದ ಬೇಕಾದದ್ದೇ. ಸಂಸ್ಕೃತ ಸಾಹಿತ್ಯ ವಿದ್ಯಾರ್ಥಿಯು ಕಾಳಿದಾಸನ ಕಾವ್ಯವನ್ನು ಓದ ದಿದ್ದರೆ ಅವನಿಗೆ ದೊಡ್ಡ ಮೋಸವೇ ಸರಿ. ಕನ್ನಡಿಗರು, ಜೈಮಿನಿ ಭಾರತ, ರಾಜ ಶೇಖರವಿಲಾಸ, ಪಂಪ ರಾಮಾಯಣಗಳನ್ನು ಓದಿ ಅರ್ಥಮಾಡಿಕೊಳ್ಳಬಲ್ಲ ಕನ್ನಡಿಗರು, ಸ್ವಲ್ಪ ಶ್ರಮಪಟ್ಟರೆ ಇದನ್ನು ಮೂಲದಲ್ಲಿಯೇ ಓದಿ, ಅಥವಾ ಓದಿಸಿ, ಅದರ ಸೌಂದರ್ಯ ವನ್ನು ಗ್ರಹಿಸುವುದು ಕಷ್ಟವಲ್ಲ. ಆದರೂ ಕಾಳಿದಾಸನ ಕಾವ್ಯಕ್ಷೇತ್ರಕ್ಕೆ ಯಾತ್ರೆ ಹೋಗಿ ಬಂದ ಕನ್ನಡಿಗರಲ್ಲಿ ಹಲವರು ತಮ್ಮ ತಮ್ಮ ಶಕ್ತಿಗೆ ಅನುಗುಣವಾಗಿ ತೀರ್ಥ ವನ್ನು ತುಂಬಿ ತಂದುಕೊಟ್ಟಿದ್ದಾರೆ.—ಎಸ್. ಜಿ. ನರಸಿಂಹಾಚಾರ್ಯರು, ಎಂ. ಕೃಷ್ಣಪ್ಪ ನವರು, ಐ. ಶಿವರಾಮಯ್ಯನವರು, ಇತ್ಯಾದಿ—ಮ|| ಬಸವರಾಜ ಶಾಸ್ತ್ರಿಗಳು ಇಂಥವರಲ್ಲಿ ಒಬ್ಬರು. ಅವರು ಇದಕ್ಕೆ ಮೊದಲೇ "ಕಿರಾತಾರ್ಜುನೀಯ"ವನ್ನು

ಕನ್ನಡಿಸಿರುವರೆಂದೂ, ಈ "ಸೂರ್ಯವಂಶದ ಅರಸರ" ಚರಿತ್ರೆಯು ಅವರ ದ್ವಿತೀಯ ಪ್ರಯತ್ನವೆಂದೂ, ಇದು ಅದಕ್ಕಿಂತ "ಶೈಲಿಯ ಸರಳತೆಯಲ್ಲಿ ಎಷ್ಟೋ ಪಾಲು ಮಿಗಿಲಾದುದು" ಎಂದೂ, ಡಾ॥ ಶಿ. ಚ. ನಂದಿಮಠ, ಎಂ.ಎ., ಪಿಹೆಚ್.ಡಿ. (ಲಂಡನ್), ಎಂ.ಆರ್.ಎ.ಎಸ್. ಅವರ ಮುನ್ನುಡಿಯಿಂದ ತಿಳಿದುಬರುತ್ತದೆ. ಈ ಗ್ರಂಥದಿಂದ ರಘುವಂಶದ ಕಥಾಭಾಗವನ್ನು ಜಾಗ್ರತೆಯಾಗಿ ಓದಿ ತಿಳಿಯಬಹುದಾಗಿದೆ; ಮಿಕ್ಕ ಅಂಶಗಳೂ ಅಲ್ಲಲ್ಲಿ ಯಥಾ ಸಾಧ್ಯವಾಗಿ ಪ್ರತಿಬಿಂಬಿತವಾಗಿವೆ.

ಮೇಲೆ ಸೂಚಿಸಿದ ಕೆಲವು ಭಾಷಾಂತರ ತತ್ತ್ವಗಳಿಗೂ ಪ್ರಕೃತ ಗ್ರಂಥದ ಗುಣಾವಗುಣಗಳಿಗೂ ಉದಾಹರಣ ರೂಪವಾಗಿ ಇಲ್ಲಿ ಹತ್ತನೆಯ ಸರ್ಗದಿಂದ ಒಂದೆರಡು ಶ್ಲೋಕಗಳನ್ನೂ ಅವುಗಳ ಅನುವಾದಗಳನ್ನೂ ಕೊಟ್ಟಿದೆ:—

(೧) ಸಂಸ್ಕೃತ.—ಪ್ರಾಜ್ಞ್ಮಂಥಾದನಭಿವ್ಯಕ್ತ ರತ್ನೋತ್ಪತ್ತಿರಿವಾರ್ಣವಃ

ಕನ್ನಡ.—ಕಡಲು ತನ್ನನು ಕಡೆಯುವವರೆಗೂ ಮಣಿಯನ್ನು ತನ್ನ ಒಡಲೊಳಗೆ ಮಡುಗಿಕೊಂಡಿರುವಂತೆ ದಶರಥನಾದರೂ, ಒಬ್ಬ ಕಾರಣಿಕ ಮಗನನ್ನು ಹಡೆಯಬೇಕೆಂದಿದ್ದನಲ್ಲದೆ ಬಂಜೆತನಕ್ಕಾಗಿದ್ದಿಲ್ಲ.

(೨) ಸಂಸ್ಕೃತ.—ಆವಿರ್ಭೂತಮಪಾಂ ಮಧ್ಯೇ ಪಾರಿಜಾತಮಿವಾಪರಂ.

ಕನ್ನಡ.—ಶ್ರೀಹರಿಯು ಸಾಗರದ ನಡುವೆ ಹೊರಹೊರಟ ಎರಡನೆಯ ಪಾರಿಜಾತದ ತರುವಿನಂತೆ ಮೆರೆಯುತಲಿದ್ದನು.

(೩) ಸಂಸ್ಕೃತ.—ಯೋಗನಿದ್ರಾಂತ ವಿಶದೈಃ ಪಾವನೈರವಲೋಕನೈಃ ।
ಭೃಗ್ವಾದೀನನುಗೃಹ್ಣಂತಂ ಸೌಖಶಾಯನಿಕಾನ್ ಮುನೀನ್ ॥

ಕನ್ನಡ.—ಯೋಗನಿದ್ರಾವಸಾನದಲ್ಲಿ ಪ್ರಸನ್ನವೂ, ಪಾವನವೂ ಆದ ತನ್ನ ದೃಷ್ಟಿಗಳಿಂದ ವಿಷ್ಣುವು ಭೃಗು ಮೊದಲಾದ ಋಷಿಗಳನ್ನು ಅನುಗ್ರಹಿಸುತಲಿದ್ದನು.

(೪) ಸಂಸ್ಕೃತ.—ಶಬ್ದಾದೀನ್ ವಿಷಯಾನ್ ಭೋಕ್ತುಂ ಚರಿತುಂ ದುಶ್ಚರಂ ತಪಃ।
ಪರ್ಯಾಪ್ತೋಸಿ ಪ್ರಜಾಃ ಪಾತುಂ ಔದಾಸೀನ್ಯೇನ ವರ್ತಿತುಂ ॥

ಕನ್ನಡ.—ಕೃಷ್ಣಾದಿ ರೂಪದಿಂದ ವಿಷಯಗಳನ್ನು ಭೋಗಿಸಲಿಕ್ಕೂ ದುಶ್ಚರವಾದ ತಪಸ್ಸನ್ನಾಚರಿಸಲಿಕ್ಕೂ ದೈತ್ಯರನ್ನು ಮರ್ದಿಸಿ ಪ್ರಜರನ್ನು ಪಾಲಿಸುವುದಕ್ಕೂ ಔದಾಸೀನ್ಯದಿಂದಿರುವುದಕ್ಕೂ ನೀನೆ ಸಮರ್ಥನು.

ಹಲವು ಅಶುದ್ಧ ರೂಪಗಳಿವೆ: ಒಕ್ಕುಡತೆ, ಸವತೆ, ಕೂಡಿವಿಕೆ.

ಈ ಮೂರು ಉದಾಹರಣೆಗಳು ಒಂದು ಪುಟದಲ್ಲಿ (೬೧) ದೊರೆಯುತ್ತವೆ.

ಎ. ಆರ್. ಕೃ.

---

## ೩. ಸತಿ ಸಾವಿತ್ರಿ ಮಹಾತ್ಮೆ

ಅಥವಾ

ಪತಿವ್ರತಾ ಪ್ರಭಾವ

ಲೇಖಕರು.—ರಾಘವೇಂದ್ರ ಕಲ್ಲೋ ತೊರವೆ, ಇಲಕಲ್ಲ.

ಮುದ್ರಣಕಾರರು.—ಶ್ರೀ ಬನಶಂಕರೀ ಪ್ರಿಂಟಿಂಗ ಪ್ರೆಸ್, ಇಲಕಲ್ಲ.

ಕ್ರೌನ್ ಅಷ್ಟಪತ್ರ ಪುಟಗಳು ೮೦; ಬೆಲೆ ೮ ಆಣೆ; ೧೯೩೦.

ಇದರಲ್ಲಿ ೧೧ ಅಧ್ಯಾಯಗಳೂ ಒಟ್ಟು ೩೦೩ ಭಾಮಿನೀ ಷಟ್ಪದಿಗಳೂ ಇವೆ. ಈ ಗ್ರಂಥಕರ್ತರು ಕೇವಲ ಉತ್ಸಾಹಶಾಲಿಗಳು; ಇವರಲ್ಲಿ ಕವಿತಾ ಶಕ್ತಿಯಿದೆ. ಆದರೆ ಭಾಷಾ ಪಾಂಡಿತ್ಯವು ತಕ್ಕಷ್ಟು ಮಟ್ಟಿಗೆ ಕಾಣಬರುವುದಿಲ್ಲ. ಈ ಕವಿತಾ ರಚನೆಗೂ ಗ್ರಂಥ ಮುದ್ರಣಕ್ಕೂ ಇವರು ಪಟ್ಟಿರುವ ಶ್ರಮವನ್ನು 'ಪ್ರಸ್ತಾವನೆ' ಯಲ್ಲಿ ವಿಶದವಾಗಿ ವಿವರಿಸಿರುವರು. ಇದನ್ನು ನೋಡಿದರೆ ಈ ಕವಿತಾ ರಚನೆ ಮಾಡಿ ಪ್ರಕಟಪಡಿಸಲು ಇವರಿಗಿದ್ದ ಉತ್ಕಟೇಚ್ಛೆಯು ವ್ಯಕ್ತವಾಗುವುದು. ಗ್ರಂಥಕರ್ತರು ತಮ್ಮ ಕವಿತೆಯನ್ನು ಇತರರಿಗೆ ತೋರಿಸಿ ತಪ್ಪುಗಳನ್ನು ಅವರಿಂದ ತಿದ್ದಿಸಿದ್ದರೂ, ಇನ್ನೂ ಅನೇಕ ತಪ್ಪುಗಳು ಹಾಗೆಯೇ ಉಳಿದಿವೆ; ಮುದ್ರಣದ ತಪ್ಪುಗಳೂ ಹೆಚ್ಚಾಗಿಯೇ ಇವೆ. ಆದರೆ ಶೈಲಿಯು ಲಲಿತವಾಗಿರುವುದರಿಂದಲೂ ಭಾವಗಳು ಸ್ವಾಭಾವಿಕವಾಗಿಯೂ ಅಂದವಾಗಿಯೂ ವರ್ಣಿತವಾಗಿರುವುದರಿಂದಲೂ ಈ ಕವಿತೆಯು ಓದಲು ಅರ್ಹವಾಗಿದೆ. ಕ್ಲಿಷ್ಟ ಪದಗಳ ಅರ್ಥವನ್ನು ಆ ಆ ಪುಟದಲ್ಲಿಯೇ ಕೊಟ್ಟಿದೆ. ಉದಾಹರಣೆಗಾಗಿ ಎರಡು ಪದ್ಯಗಳನ್ನು ಉದ್ಧರಿಸಿ ಬರೆಯುವೆವು:—

**ಪುತ್ರಹೀನರಿಗಿಲ್ಲ ಗತಿ, ಎಂ- ।**
**ದುತ್ತಮೋತ್ತಮ ಶ್ರುತಿಗಳುರೆ ಸಾ- ।**
**ರುತ್ತಲಿರುವದು ಪುಸಿಯಹುದೆ? ದುರ್ಲಭದ ದೇಹವನು ॥**
**ಹೊತ್ತು ಸಾರ್ಥಕವೇನು? ಕರುಣಾ ।**
**ವೃತ್ತಿ ಪೋಯಿತೆ! ಪೊರೆ ಎಲ್ಲೈ ಪುರು- ।**
**ಷೋತ್ತಮನೆ ನಡುನೀರಿನೊಳು ಕೈ ಬಿಡುವುದನುಚಿತವು ॥  ೧—೨೨**

**ಧರಿಸಿದುದು ಧವಲತೆಯ ಮೊಗ-ದಾ- ।**
**ವರೆಯು, ಕೊಬ್ಬಿದುದಮಲ ಕಾಯವು ।**
**ಸರಿದವೀಕ್ಷ್ಣಗಳೊಳಗೆ, ಕಾರ್ದೊಡೆದವು ಕುಚಾಗ್ರಗಳು ॥**
**ತರತರದ ಬಯಿಕೆಗಳು ಪುಟ್ಟಿದ- ।**
**ವರಸಿ ಮನದೊಳು, ವಂಶ-ಪಾವನ ।**
**ಕರಕುವರಿ ಪೆರ್ಚುತಿರೆ ಗರ್ಭಾವಾಸದೊಳು ಭರದಿ ॥  ೪—೨**

## ೪. ಸಾಹಿತ್ಯದ ಗುಟ್ಟು

(ಒಂದು ಚರ್ಚೆ)

ಲೇಖಕರು.—ಧಾರವಾಡದ ಕರ್ನಾಟಕ ಸಂಘದ ಸಾಹಿತ್ಯ ಶಾಖೆಯವರು.

ಪ್ರಕಾಶಕರು.—ಕರ್ನಾಟಕ ಆರ್ಟ್ಸ ಕಾಲೇಜ, ಧಾರವಾಡ.

ಮುದ್ರಣಕಾರರು.—'ವಿಜಯ' ಮುದ್ರಣಾಲಯ, ಧಾರವಾಡ.

ಕ್ರೌ ಅಷ್ಟಪತ್ರ ಪುಟಗಳು ೬+೫೧; ಬೆಲೆ ೬ ಆಣೆ; ೧೯೩೨.

ಲೇಖಕರು 'ಮುಡುಪು' ಎಂಬ ತಮ್ಮ ಪೀಠಿಕೆಯಲ್ಲಿ—"ಸಾಹಿತ್ಯದ ವಿಷಯವಾಗಿ ಒಂದೊಂದು ಸಂಗತಿಯನ್ನು ಸಮಂಜಸ ಬುದ್ಧಿಗೆ ಸರಿದೋರುವಂತೆ ಚರ್ಚಿಸಿ, ಯೋಗ್ಯತೆಗೆ ಅನುಸರಿಸಿ, ಅವಸರವನ್ನು ದೊರಕಿಸಿ, ಬರೆಯಬೇಕೆಂಬುದು ನಮ್ಮ ಧ್ಯೇಯವು" ಎಂದು ಹೇಳಿದ್ದಾರೆ. ಇದಕ್ಕೆ ಮ॥ ದ. ರಾ. ಬೇಂದ್ರೆಯವರು ಬರೆದಿರುವ "ಮುನ್ನುಡಿ"ಯಲ್ಲಿ "ಸಾಹಿತ್ಯವೆಂದರೇನು?" ಎಂಬ ವಿಷಯವನ್ನು ಚರ್ಚಿಸಿ ಹೀಗೆ ಹೇಳುತ್ತಾರೆ:—

> ಇದ್ದುದನ್ನು ಇದ್ದಂತೆ ಪ್ರಾಮಾಣಿಕವಾಗಿ ತಿಳುವಳಿಕೆಯಾಗುವಂತೆ ಹೇಳಿದುದು ಶಾಸ್ತ್ರ; ಎನಿಸಿದ್ದನ್ನು ಎನಿಸಿದಂತೆ ಸಯ್ರಾಗಿಯೋ ಕೊಂಕಾಗಿಯೋ ತೋಡಿಕೊಳ್ಳುವದು ಆಡಿಕೊಳ್ಳುವದು ಸಾಹಿತ್ಯ. ಕಂಡ ವಸ್ತುಸ್ಥಿತಿಯ ಪ್ರಕಾರ, ತಿಳುವಳಿಕೆಮಾಡಿ ಕೊಡುವ ಶಕ್ತಿಯ ಪ್ರಕಾರ ಆ ಶಾಸ್ತ್ರಕ್ಕೂ ಶಾಸ್ತ್ರಜ್ಞನಿಗೂ ಕೀರ್ತಿ. ಅನುಭವಿಸಿದ ಭಾವಗಳ ಜಾತಿಯ ಪ್ರಕಾರ, ಆಡಿತೋರಿಸುವ ಚದುರು ಜಾಣ್ಮೆಯ ಪ್ರಕಾರ ಆ ಕಾವ್ಯಕ್ಕೂ ಆ ಕವಿಗೂ ಹೆಸರು. ಸಾಹಿತ್ಯ ಶಾಸ್ತ್ರದಲ್ಲಿ ಇದಷ್ಟೆ ಹುರುಳು, ಉಳಿದುದು ಹುರುಡು.

ಲೇಖಕರು ಹೀಗೆ ಹೇಳುತ್ತಾರೆ:—

> ಸಾಮಾನ್ಯವಾಗಿ ಸಾಹಿತ್ಯವೆಂದರೆ ಗ್ರಂಥ ಸಮುಚ್ಚಯ ಇಲ್ಲವೆ ವಾಙ್ಮಯ; ಭಾಷೆಯಲ್ಲಿ—ಮಾತನಾಡುವ ಭಾಷೆಯಲ್ಲಿ—ಬರೆದಿಟ್ಟ ವಿಚಾರಗಳ ಮತ್ತು ವಿಕಾರಗಳ (emotions) ಸಂಗ್ರಹ. . . . . ಈ ಪ್ರಬಂಧದಲ್ಲಿ ಉದ್ದಿಶ್ಯವಾದುದೂ ಈ ಸಾಹಿತ್ಯವೇ.

ಈ ಪ್ರಬಂಧವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿದೆ. ಮೊದಲನೆಯ ಭಾಗದಲ್ಲಿ ಸಾಹಿತ್ಯದ ಸ್ವರೂಪವನ್ನೂ, ಎರಡನೆಯದರಲ್ಲಿ ಸಾಹಿತ್ಯದ "ಒಳಕಟ್ಟ"ನ್ನೂ, ಮೂರನೆಯದರಲ್ಲಿ "ಜಗನ್ನಾಥ ವಿಜಯ"ದ ವಿಮರ್ಶಾತ್ಮಕವಾದ "ಚರ್ಚೆ"ಯನ್ನೂ, ನಾಲ್ಕನೆಯದರಲ್ಲಿ ಆಧುನಿಕ ಸಾಹಿತ್ಯದ "ದಿಗ್ದರ್ಶನ"ವನ್ನೂ ವಿವರಿಸಿದೆ. ಮೊದಲನೆಯ ಭಾಗದಲ್ಲಿ ಇಂಗ್ಲಿಷು ಸಾಹಿತ್ಯದಿಂದಲೂ ಉದಾಹರಣೆಗಳನ್ನು ಕೊಟ್ಟಿದೆ.

ಈ ಪ್ರಬಂಧವು ಪ್ರೌಢವಾಗಿಯೂ, ಉಪಯುಕ್ತ ವಿಚಾರಗಳಿಂದ ಕೂಡಿದುದಾಗಿಯೂ, ಓದುವುದಕ್ಕೆ ಬೇಸರವಿಲ್ಲದಂತೆಯೂ, ಮುದ್ರಣ ಮೊದಲಾದ ತಪ್ಪುಗಳು ಕೇವಲ ಕಡಿಮೆಯಾಗಿಯೂ ಇದೆ.

ಆದರೆ ಇದರಲ್ಲಿರುವ ಕೆಲವು ಮಾತ್ರ ದೋಷಗಳನ್ನು ತೋರಿಸಿದಲ್ಲಿ ಪ್ರಬಂಧ ವನ್ನು ಅಲ್ಲಗಳೆದಂತಾಗಲಾರದು.—

(1) ಮೊದಲನೆಯ ವಾಕ್ಯವು ಹೀಗಿರುವುದು :—

ಸಾಹಿತ್ಯವೆಂದರೇನು ಎಂಬ ಪ್ರಶ್ನೆಯೇನೋ ರಸಿಕರು ಕೇಳುವ ಮತ್ತು ಕೇಳ ಬೇಕಾದುದು.

ಇದು ಅನನ್ವಯವಾಗಿರುವುದು: 'ಕೇಳುವ' ಎಂಬ ಕೃದಂತವನ್ನು ಯಾವುದ ರಲ್ಲಿಯೂ ಅನ್ವಯ ಮಾಡಲು ಅವಕಾಶವಿಲ್ಲ.

(2) ಮುಂದಣ ಪದಗಳು ಸುಷ್ಠುವೆಂದು ತೋರುವುದಿಲ್ಲ:—

(ಪುಟ ೪) ಸಿಕ್ಕ; ೮. ಆವ್ಹಾನ; ೧೮. ಗದ್ಯದಕ್ಕಿಂತಲೂ; ೧೮. ಯಾಕೆ; ೩೨. ಬಗೆಯೋಳ್; ೩೫. ಜವ್ಹಾ; ೩೬. ಕಠಿಣ.

---

## ೫. ಸಾಹಿತ್ಯದ ಹುರುಳು

ಲೇಖಕರು.—ಪು. ತಿ. ನರಸಿಂಹಾಚಾರ್ಯರು, ಗೊರೂರು.

ಪ್ರಕಾಶಕರು.—ಕರ್ನಾಟಕ ಸಂಘ, ಗೊರೂರು.

ಮುದ್ರಣಕಾರರು.—ರಾಧಾ ಪವರ್ ಪ್ರೆಸ್, ಬೆಂಗಳೂರು ಸಿಟಿ.

ಕ್ರೌನ್ ಅಷ್ಟಪತ್ರ ಪುಟಗಳು ೧೧; ಬೆಲೆ (?); ೧೯೩೧.

ಇದು "ಗೊರೂರಿನಲ್ಲಿ ಸ್ಥಾಪಿತವಾದ ಕರ್ನಾಟಕ ಸಂಘದ ಆರಂಭೋತ್ಸವದಲ್ಲಿ ಲೇಖಕರು ಸಭಾಧ್ಯಕ್ಷರಾಗಿ ಮಾಡಿದ ಆಶು ಭಾಷಣದ ಸಾರಾಂಶ." ಸಾಹಿತ್ಯ ಪ್ರಸಾರವು ಆವಶ್ಯಕವೆಂಬುದನ್ನು ಅಂದವಾದ ಭಾಷೆಯಲ್ಲಿ ಮನಸ್ಸಿಗೆ ಹಿಡಿಯುವಂತೆ ಹೇಳಿ, "ಸಾಹಿತ್ಯವೆಂಬುದು ಜನತೆಯ ಅನುಭವಗಳ ನಿಧಿ" ಎಂದೂ, "ಇಂತಹ ಸಾಹಿತ್ಯ ಪ್ರಸಾರಕ್ಕೆ, ಸಾಹಿತ್ಯದ ಹೊನಲನ್ನು ನಿಮ್ಮ ನಾಡಿನಲ್ಲಿ, ನಿಮ್ಮ ಜನಪದದಲ್ಲಿ ಹರಿಸುವುದಕ್ಕೆ ಒಂದು ಕರ್ನಾಟಕ ಸಂಘ ಬೇಕು" ಎಂದೂ, ಇಂತಹ ಕರ್ನಾಟಕ ಸಂಘದ ಧ್ಯೇಯ ಉದ್ದೇಶಗಳು ಹೇಗಿರಬೇಕೆಂದೂ ತಿಳಿಸಿರುತ್ತಾರೆ.

ಮುದ್ರಣವು ಅಂದವಾಗಿದ್ದರೂ, ಇಷ್ಟು ಸಣ್ಣ ಪುಸ್ತಕದಲ್ಲಿ ಅನೇಕ ತಪ್ಪುಗಳು ಬಿದ್ದಿರುವುದು ಬಹಳ ಶೋಚನೀಯವಾದ ವಿಷಯ. ಇದಕ್ಕೆ ಕನ್ನಡ ಭಾಷಾಭಿಮಾನಿ ಗಳು ಇನ್ನುಮೇಲಾದರೂ ಗಮನಕೊಡುವುದು ಅತ್ಯಾವಶ್ಯಕ.

ಉದಾ.—ಜ್ಞಾನಾಥಕರೂ (ಪು. ೧); ಸ್ವಾತಂತ್ರ (೬); ವಾಂಜ್ಮಯ (೬); ಸದ್ಯ ಪರಿಸ್ಥಿತಿ (೭); ಜೀವನವದ (೭); ದರ್ಪಣಗಳಲಾರವು (೮); ಕಣ್ಣೀರೀಡಿಸುವ (೮); ಸಹೃದಯದ ಲಕ್ಷ್ಮಣ (೯); ಅಂಧ್ಯ (೧೦); ಬರ್ತ್ಯಹರಿ (೧೧).

'ಕಿಚ್ಚು' ಎಂಬ ಪದವನ್ನು 'ಉದ್ದೀಪಕ' ಎಂಬರ್ಥದಲ್ಲಿ ಎರಡು ಕಡೆ (ಪು. ೫, ೯) ಉಪಯೋಗಿಸಿರುವರು. ಇದು ರೂಢಿಯುಲ್ಲಿಲ್ಲ.

---

ಮಹಾತ್ಮಾ ಗಾಂಧಿಜಿಯವರ

## ೬. ತತ್ವಬೋಧಾಭ್ಯಾಸ

ಲೇಖಕರು.—ಪಾಟೀಲ ಕಲ್ಲನಗೌಡರು, ಬಿ.ಎ., ಹಂಸಭಾವಿ.

ಮುದ್ರಣಕಾರರು.—ಶ್ರೀ ಬಸವಲಿಂಗ ಮುದ್ರಣ ಮಂದಿರ, ಆಲಮಟ್ಟಿ.

ಕ್ರೌನ್ ಅಷ್ಟಪತ್ರ ಪುಟಗಳು ೪೯; ಬೆಲೆ ೪ ಆಣೆ; ೧೯೩೧.

ಗಾಂಧೀಜಿಯವರ "ಬೋಧವು ತಪ್ಪು ದಾರಿಯಲ್ಲಿ ಹೋಗಿ ನಷ್ಟಕಷ್ಟಗಳನ್ನನುಭವಿಸುತ್ತಿರುವ ಪ್ರತಿಯೊಂದು ವ್ಯಕ್ತಿಗೂ ಮತ್ತು ಜನಾಂಗಕ್ಕೂ ಕೈದೀಪದಂತೆ ಸಹಾಯ ಮಾಡುತ್ತಿದ್ದುದನ್ನು ಪುಣೆಯ ಕ್ರಿಸ್ತ ಸೇವಾ ಸಂಘಾಧ್ಯಕ್ಷರಾದ ಎಲ್ವಿನ್ ಸಾಹೇಬರವರು ಬಹು ಚೆನ್ನಾಗಿ ವಿವರಿಸಿದ್ದಾರೆ. ಅಂತಹ ಅತ್ಯುಪಯುಕ್ತ ವಿಚಾರಗಳು ಕೇವಲ ಕನ್ನಡವನ್ನೋದುವವರಿಗು ಕೂಡಾ ತಿಳಿಯಲೆಂದು" ಲೇಖಕರು "ಭಾಷಾಂತರಿಸಿ ಪ್ರಕಟಿಸಿ ಎಷ್ಟೋ ಪ್ರಯೋಜನವನ್ನು ಮಾಡಿದ್ದಾರೆ" ಎಂದು ಮ॥ ರಾ॥ ಶ್ರೀ ಹರ್ಡೇಕರ್ ಮಂಜಪ್ಪನವರು ಇದಕ್ಕೆ ಬರೆದಿರುವ ತಮ್ಮ ಮುನ್ನುಡಿಯಲ್ಲಿ ತಿಳಿಸಿರುತ್ತಾರೆ.

ಲೇಖಕರು ವಿಷಯಗಳನ್ನು ಸಣ್ಣ ಸಣ್ಣ ವಾಕ್ಯಗಳಲ್ಲಿ ಹೇಳಿ ಎಲ್ಲರಿಗೂ ಅರ್ಥವಾಗುವಂತೆ ಬರೆದಿದ್ದಾರೆ; ಭಾಷೆಯು ಇಂಗ್ಲಿಷಿನ 'ತರ್ಜುಮೆ'ಯಂತೆ ಕಾಣುವುದಿಲ್ಲ. ಆದರೆ ಭಾಷಾ ಸೌಷ್ಠವದಲ್ಲಿ ಸ್ವಲ್ಪಮಟ್ಟಿಗೆ ಕುಂದಿದೆಯೆಂದೇ ಹೇಳಬೇಕು. ಮುದ್ರಣದ ತಪ್ಪುಗಳೂ ಅನೇಕವಿವೆ.

---

## ೭. ಸುಶೀಲೆ

ಲೇಖಕರು.—ಟಿ. ವಿ. ವ್ಯಾಸ, ರಾಯಚೂರ.

ಪ್ರಕಾಶಕರು.—ಕರ್ನಾಟಕ ತರುಣ ಸಂಘ, ರಾಯಚೂರ.

ಮುದ್ರಣಕಾರರು.—ಶ್ರೀ ಸಾವಿತ್ರೀ ಪ್ರಿಂಟಿಂಗ್ ಹೌಸ್, ರಾಯಚೂರು.

ಫೂ॥ ಅಷ್ಟಪತ್ರ ಪುಟಗಳು ೮+೨೭; ಬೆಲೆ ೩ ಆಣೆ; ೧೯೩೨.

ಇದು ರಾಯಚೂರ ಕರ್ನಾಟಕ ತರುಣ ಸಂಘದ "ಕನ್ನಡ ಕುಸುಮ ಮಾಲೆಯ ಮೊದಲನೇ ವರ್ಷದ ಮೊದಲನೇ ಕುಸುಮ". ಇದಕ್ಕೆ "ಸಂಸ್ಕೃತಿಯ ಫಲ" ಎಂಬ ಮತ್ತೊಂದು ಹೆಸರೂ ಇಟ್ಟಿದೆ. "ಇದೀಗ ಸಿರ್ಘಾಮ ಕರ್ನಾಟಕವು ಬಹು ದಿವಸದ ನಿದ್ರೆಯಿಂದೆಚ್ಚತ್ತು ಸಾವಧಾನದಿಂದ ಪ್ರಗತಿ ಪಥದಲ್ಲಿ ಅಡಿಯಿಡಹತ್ತಿದೆ" ಎಂದೂ,

"ಸುಧಾರಣೆಯ ಪಾಶದಲ್ಲಿ ಶಿಕ್ಕು ಪಾಶ್ಚಾತ್ಯರ ನಡೆನುಡಿಗಳನ್ನು ಅಂಧ ಶ್ರದ್ಧೆಯಿಂದನುಸರಿಸಿ ತಾವು ಕೆಡುವದಲ್ಲದೆ ನಿರ್ಮಲ ಹೃದಯದ ಸ್ತ್ರೀಯರನ್ನು ಕೇಡಿಗೆಳೆದ ಅದೆಷ್ಟೊ ಭಾರತೀಯರ ಚಿತ್ರವೇ ಕತೆಯ ಜೀವನವು" ಎಂದೂ ಮ|| ರಾ|| ಶ್ರೀ ವಾಸುದೇವ ಕಡಿವಾಲ, ಬಿ.ಎ. ಅವರು ತಮ್ಮ ಮುನ್ನುಡಿಯಲ್ಲಿ ಹೇಳುತ್ತಾರೆ. ಕಥೆಯನ್ನು ಸಹಜವಾಗಿಯೂ ಅಂದವಾಗಿಯೂ ಚಿತ್ರಿಸಿದೆ. ಭಾಷೆಯಲ್ಲಿ ಅಷ್ಟೇನೂ ದೋಷಗಳು ಕಾಣಬರುವುದಿಲ್ಲ. ಆದರೆ ಲೇಖಕರು ಪದಸೌಷ್ಠವಕ್ಕೆ ಮಾತ್ರ ಸ್ವಲ್ಪವೂ ಗಮನಕೊಟ್ಟಿಲ್ಲ; ಮಾತನಾಡುವಂತೆ ಬರೆದಿರುವರು. ಇದು ಈ ಗ್ರಂಥದಲ್ಲಿರುವ ದೊಡ್ಡ ಕೊರತೆ. ಹೇಗೆಯೇ ಆಗಲಿ, ಬರೆದರೆ ಸಾಕು ಎಂಬುದನ್ನು ನಾವು ಗೌರವಿಸಲಾರೆವು. ಬರೆವಣಿಗೆಯು ಸಾಧ್ಯವಾದಮಟ್ಟಿಗೂ ತಪ್ಪುಗಳಿಲ್ಲದಂತಿರಬೇಕು; ಭಾಷೆಯನ್ನು ಪಂಡಿತರಿಂದ ತಿದ್ದಿಸಬೇಕು; ವ್ಯಾಕರಣಕ್ಕೂ ಭಾಷಾ ಮರ್ಯಾದೆಗೂ ಗಮನಕೊಡಬೇಕು. ಹೀಗೆ ಮಾಡದೆ ಪ್ರತಿಯೊಬ್ಬರೂ ತಮ್ಮ ಮನಬಂದಂತೆ ಬರೆಯತೊಡಗಿದರೆ ಕನ್ನಡ ಭಾಷೆಗೆ ನೂರಾರು ರೂಪಗಳು ಹುಟ್ಟಿ ಕನ್ನಡದ ಏಳಿಗೆಗೆ ಅವಕಾಶ ದೊರೆಯದಂತಾಗುವುದು.

ಇಷ್ಟೇ ಅಲ್ಲ; ಈ ಪುಸ್ತಕದಲ್ಲಿ ಮುದ್ರಣದ ತಪ್ಪುಗಳೂ ಹೆಚ್ಚಾಗಿಯೇ ಇರುವುವು. ನನಗೆ ಕಳುಹಿಸಿರುವ ಪುಸ್ತಕವನ್ನು ಹೊಲಿಯುವುದರಲ್ಲಿ ತಪ್ಪಾಗಿ, ನಾಲ್ಕು ಪುಟಗಳ ತಳಭಾಗದಲ್ಲಿಯ ಎರಡು ಪಙ್ಕ್ತಿಗಳು ಕತ್ತರಿಸಿ ಹೋಗಿರುವುವು. ಸಂಘದ ತರುಣರು ಇವೆಲ್ಲಕ್ಕೂ ಗಮನಕೊಟ್ಟು, ತಾವು ಮಾಡುವ ಕಾರ್ಯವನ್ನು ಜಾಗರೂಕತೆಯಿಂದ ಮಾಡಿ, ತಮ್ಮ ಸೇವೆಯನ್ನು ಸಾರ್ಥಕಗೊಳಿಸುವರೆಂದು ಹಾರೈಸುವೆವು.

ಮುಂದೆ ಕೊಡುವ ಪದ ಪ್ರಯೋಗಗಳು ಸುಷ್ಠುವಲ್ಲ, ತರುಣರ ಉಪಯೋಗಕ್ಕೆಂದು ಈ ಪಟ್ಟಿಕೆಯನ್ನು ಸಂಪೂರ್ಣವಾಗಿ ಕೊಟ್ಟಿದೆ:—

ಧೇಯ (ಈ ರೂಪವು ಅನೇಕ ಕಡೆ ಬಂದಿದೆ), ಮುಂದೊರೆಯುವಂತೆ, ಎತ್ತನೋಡಿದತ್ತ, ಸ್ವಲ್ಪು (ಅನೇಕ ಕಡೆ), ಶಿಕ್ಕು, ಶ್ರದ್ಧೆ.

(ಪು. ೧) ವಗತನ, ಮರುಕು, ಬಹಳೇ; (೨) ಸ್ವಾತಂತ್ರತೆ, ಸಿಗುತ್ತಿದ್ದಿಲ್ಲ, ದಯಾರ್ದ; (೩) ಚನ್ನಾಗಿ, ನೀತಿಯಂತಲೂ, ಘಂಟೇ ಮಾತ್ರ, ಮಾಡಿಕೊಂಡಿರುವಿ; (೪) ಮೃದ, ವೃತೋಪಾಸ, ಪತಿವೃತೆ; (೫) ಆಗಲೊಲ್ಲಿ; (೬) ಬೇಸಿಗೆ, ಅನ್ನುತಿದ್ದಳು; (೭) ಅಕಸ್ಮಾತ್ತ; (೮) ಎನನ್ನ, ಮುದುಕೆ, ಕೋಣೆ, ಕೂತುಕೊಂಡು; (೯) ವದ್ಯಾಡು, ತಂದೇತಾಯಿ, ಬಾಯಿಲೊಂದು, ಅನಿಸಿಗೊಂಡು, ದಾವುದು, ಆರಿಸಿಗೋ; (೧೦) ಎಳಿಗೆ, ಬಡತ, ನಮ್ಮತ್ತಿ; (೧೧) ಕುರುಹ, ಬೈಯ್ಯುತ್ತ, ಹಲವುತ್ತ, ಇದಿಯೇ; (೧೨) ತುಂಬಿಕೊಂಬುವ, ನಾನೋಡಿಲ್ಲ, ಪ್ರಶಂಶಯು, ಉಪನಿಷಿತ್ತನ್ನು, ಬಾಯಿಲಿ, ಖಣಿ, ಪ್ರಣಿಯ, ಹೊರ್ತು, ದೇಶಶೇವೆ, ಪಾಶ್ಚಿಮಾತ್ಯ; (೧೩) ಬಾಡಿಗೆ ತೆಗೆದುಕೊಂಡೆವು, ಹಸರು, ಕುದರೆಗಳ ಬಗ್ಗೆ, ಮರತೇಬಿಟ್ಟೆವು; (೧೪) ಮರ್ತೇ ವರ್ತಿಸಿದೆವು, ಕಡಿಮಿ, ಅಡಿಗಿಯವಳು, ಅಭ್ಯೂದಯ; (೧೫) ಪರಣೆ;

(೧೬) ನನ್ನ ಸಹಾ, ಕರಿಯುತ್ತಿದ್ದರು, ಹೊರಡೋದಿಲ್ಲ, ಕ್ಲಬ್‌ದಲ್ಲಿ, ನಡೆಸಿಯೇ, ಹುಡಿಗಿ; (೧೭) ಅವರಂತೇ, ಕನಗರಿಸುತ್ತ, ಕರತಂದಿತೋ, ತಲಿಸೂಲಿ; (೧೮) ಸುರುವು; (೧೯) ಶ್ರದ್ಧೆ, ಧಡ, ಸಾರೆ; (೨೦) ಹೋಗಲೋ ಬೇಡೋ, ನಾನಿಂತರೆ, ನನಕಿಂತಲೂ, ನಿಟ್ಟುಸುರು; (೨೧) ಕರಸೆಂದು, ಮಧ್ಯಾಹ್ನ, ಎಂಬೋ, ತುಂಬಿಬಿಟ್ಟದೆ; (೨೨) ಕರದೊಯ್ಯಿ, ಇಲ್ಲಿಯಕಿಂತಲೂ, ಬಡದಾಡು; (೨೩) ಗುರ್ತೈಸಿದೆ, ಅಂತರಂಗಿಕ ಗುಟ್ಟು, ಇಲ್ಲೇ ಇಲ್ಲ, ಶುಶ್ರೂಷೆ, ಜೋತಿ; (೨೪) ಎಚ್ಚೆತ್ತೆನು, ಶ್ವಾಸೋಚ್ಛ್ವಾಸ; (೨೫) ಪರಣಾಸಕ್ತ, ಸಿಗದೇ, ನಾಕಂಡು, ತೊಳೆಯಲೆತ್ನಿಸುವೆ, ಇಷ್ಟು ದಿನೇ; (೨೬) ನಮ್ಮಿಗೇನು, ಭಾರತೇಯರು, ಚಿಗಿತಿತು; (೨೭) ನಿಂತ ನಿಲುವಿಲಿ, ಉಸರ ಬಿಡುತ್ತಾ, ನಡಗುತ್ತ, ಕಂಠದ ಶರಗಳು, ಅಶ್ರುಧಾರೆ.

---

## ೮. ಬಲಭೀಮ ಹನುಮಾನ್‌ಜಿ

ಅನುವಾದಕರು.—ವಿಶ್ವಮಿತ್ರ, ಮಂತ್ರಿ, ಆರ್ಯ ಸಮಾಜ, ಮೈಸೂರು.

ಪ್ರಕಾಶಕರು.—ಆರ್ಯ ಸಮಾಜ, ಮೈಸೂರು.

ಮುದ್ರಣಕಾರರು.—ವಿಶ್ವಬಂಧು ಪ್ರೆಸ್, ಮೈಸೂರು.

ಕ್ರೌನ್ ಅಷ್ಟಪತ್ರ ಪುಟಗಳು ೪+೧೯; ಬೆಲೆ ೧॥೦ ಆಣೆ; ೧೯೩೨.

ಇದು "ಹನುಮಂತನು ಮನುಷ್ಯನೋ ಕಪಿಯೋ ಎಂಬ ವಿಷಯದ ವಿಮರ್ಶೆ (ಭಾರತೀಯ ಐತಿಹಾಸಿಕ ದೃಷ್ಟಿಯಿಂದ). ಔಂಧ್ ಸಂಸ್ಥಾನದ ಸ್ವಾಧ್ಯಾಯ ಮಂಡಲದ ಮಂತ್ರಿಗಳಾದ ಪಂಡಿತ ಶ್ರೀ ದಾಮೋದರ ಸಾತವಳೇಕರವರು 'ವೈದಿಕ ಧರ್ಮ'ವೆಂಬ ತಮ್ಮ ಮಾಸ ಪತ್ರಿಕೆಯಲ್ಲಿ ಹಿಂದೀ ಭಾಷೆಯಲ್ಲಿ ಬರೆದ ಲೇಖನದ ಕನ್ನಡ ಭಾಷಾನುವಾದವು." "ಹಿಂದೂಗಳೆನ್ನಿಸಿಕೊಳ್ಳುವ ನಾವು ಈಗ ನಡೆಯಿಸುತ್ತಿರುವ ಅನೇಕಾನೇಕ ಅರ್ಥವಿಲ್ಲದ ಮೂಢಾಚಾರಗಳ ದೆಸೆಯಿಂದ ಮಹಾ ಪುರುಷರ ಪವಿತ್ರ ಚರಿತ್ರೆಗಳನ್ನು ಮನನ ಮಾಡದೆ, ಅವುಗಳಿಂದುಂಟಾಗುವ ಮಹತ್ವ ಪೂರ್ಣವಾದ ಉಪದೇಶಗಳಿಂದ ವಂಚಿತರಾಗಿ, ತದ್ವಾರ ಅಧೋಗತಿಯನ್ನು ಹೊಂದುತ್ತಲಿರುತ್ತೇವೆಂದು ವಿಶದವಾಗುತ್ತದೆ" ಎಂದೂ, "ಶ್ರೀ ಆಂಜನೇಯನಂಥಾ ಮಹಾಪುರುಷನ ಗುಣಧ್ಯಾನ, ಆರಾಧನೆಗಳಿಗೆ ಬದಲು ಆರಾಧನೆಯೆಂದರೆ ಗಂಟೆ ಬಾರಿಸುವುದೇ ಎಂದು ತಿಳಿದುಕೊಂಡು ಸೊಟ್ಟಮೂತಿಯು, ಸೊಟ್ಟ ಬಾಲದ ಕಪಿರೂಪವೇ ಆಂಜನೇಯನ ರೂಪವೆಂದು ಭಾವಿಸಿ, ಆ ಮಹಾ ಪುರುಷನ ಅಪಮಾನವನ್ನು ಲೆಕ್ಕಿಸದೆ ........ ಕುರುಡನು ಕುರುಡರಿಗೆ ದಾರಿ ತೋರಿಸಿದರೆ ಹೇಗೋ ಹಾಗೆ, ಪ್ರತಿಯೊಬ್ಬರೂ ಪರರನ್ನು ಹಳ್ಳಕ್ಕೆ ತಳ್ಳಿ ತಾವೂ ಹಳ್ಳಕ್ಕೆ ಬೀಳುತ್ತಿರುವರು" ಎಂದೂ ಅನುವಾದಕರು ತಮ್ಮ ಭೂಮಿಕೆಯಲ್ಲಿ ಹೇಳಿರುವರು.

---

## ೯. ಸಹಕಾರ ಮತ್ತು ವಿದ್ಯಾಭ್ಯಾಸ

ಲೇಖಕರು.—ಎಂ. ವೆಂಕೋಬಾಚಾರ್ಯ, ಬಿ.ಎ., ಬೆಂಗಳೂರು.

ಮುದ್ರಣಕಾರರು.—ಶ್ರೀ ವೆಂಕಟೇಶ ಮುದ್ರಾಲಯ, ಶಿವಮೊಗ್ಗ.

ಪೂ|| ಅಷ್ಟಪತ್ರ ಪುಟಗಳು ೫೯ ; ಬೆಲೆ ೪ ಆಣೆ; ೧೯೩೦.

ಈ ಪುಸ್ತಕವು ಎರಡನೆಯ ಮುದ್ರಣ. ಇದರಲ್ಲಿ ಸಹಕಾರ ಮಹಿಮೆ, ಸೆಕ್ರೆಟೆರಿಗಳು ಮತ್ತು ಶಿಕ್ಷಣೆ, ಸಹಕಾರ ಮತ್ತು ವಿದ್ಯಾಭ್ಯಾಸ ಎಂಬ ಮೂರು ಭಾಗಗಳಿರುವುವು. ಲೇಖಕರು ತಾವು ತಿಳಿಸಬೇಕೆಂದಿರುವ ವಿಷಯಗಳನ್ನು ಕಥೆಯಂತೆ ಹೇಳಲು ಪ್ರಯತ್ನಿಸಿದ್ದಾರೆ. ಭಾಷೆಯು ಸಾಮಾನ್ಯವಾಗಿ ಶುದ್ಧವಾಗಿದ್ದರೂ, ಪದ ಪ್ರಯೋಗ ಮೊದಲಾದುವುಗಳಲ್ಲಿ ಅಲ್ಲಲ್ಲಿ ತಪ್ಪುಗಳು ಕಂಡುಬರುತ್ತವೆ; ಮುದ್ರಣದ ತಪ್ಪುಗಳು ಬಹಳವಾಗಿವೆ. ಮುದ್ರಣದ ರೀತಿ ಮೊದಲಾದುವು ಅಷ್ಟು ಸಮರ್ಪಕವಾಗಿಲ್ಲ.

ವಿದ್ಯಾವಂತರು ಇಂತಹ ಪುಸ್ತಕಗಳನ್ನು ವಿದ್ಯಾರ್ಥಿಗಳಿಗಾಗಿಯೂ ಜನಸಾಮಾನ್ಯರಿಗಾಗಿಯೂ ಪ್ರಕಟಿಸುವಾಗ ಗ್ರಂಥದಲ್ಲಿ ತಪ್ಪುಗಳಿಲ್ಲದಂತೆಯೂ, ಪುಸ್ತಕವು ತಕ್ಕಮಟ್ಟಿಗೆ ಅಂದವಾಗಿರುವಂತೆಯೂ ಮಾಡುವುದು ಆವಶ್ಯಕವೆಂಬ ವಿಷಯವನ್ನು ಹೆಚ್ಚಾಗಿ ಒತ್ತಿ ಹೇಳದಿರಲಾರೆವು.

**ಕೆಲವು ತಪ್ಪುಗಳು.—**

(i) **ಪುಸ್ತುಕ,** (೪) **ಅವಶ್ಯಕತೆ,** (೪, ೮) **ದುರಾದೃಷ್ಟ,** (೭, ೧೩) **ಹೊರ್ತು,** (೮) **ಬರದವ,** (೯) **ಹಣ ಕೊಡದ ವಿನಾ,** (೧೦) **ನಡೆಸಿದರು,** (೧೧) **ಕರಕೊಂಡು, ತಿಳಿಯತು,** (೧೨) **ಚನ್ನಾಗಿ,** (೧೩) **ನಡಿದು,** (೧೪) **ಮೂರ್ತಿಮತ್ತವಾಗಿ, ಪೂರ್ವೀಕರು.........**

---

## ೧೦. ವಿದ್ಯಾಭ್ಯಾಸದಲ್ಲಿ ರಸ ಪ್ರಭೇದಗಳ (Emotions) ಪ್ರಾಶಸ್ತ್ಯ

ಲೇಖಕರು.—ಡಾಕ್ಟರ್ ಕೆ. ಆರ್. ರಾಮಸ್ವಾಮಿ, ಎಂ.ಎ., ಡಿ.ಲಿಟ್.

ಮುದ್ರಣಕಾರರು.—ಸುಬೋಧ ಮುದ್ರಣಾಲಯ, ಬೆಂಗಳೂರು.

ಪೂ|| ಅಷ್ಟಪತ್ರ ಪುಟಗಳು ೩೫ ; ಬೆಲೆ ( ? ) ; ೧೯೩೦.

ಈ ಸಣ್ಣ ಪುಸ್ತಕದಲ್ಲಿ ಕೊಟ್ಟಿರುವ ವಿಷಯಗಳು ಚಿಕ್ಕ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸುವ ಉಪಾಧ್ಯಾಯರ ತಿಳಿವಳಿಕೆಗೆಂದು ತೋರುವುದು. ಇದರಲ್ಲಿ ಪೀಠಿಕೆಯೇ ಇಲ್ಲದುದರಿಂದ, ಇದು ಇಂಗ್ಲಿಷಿನಲ್ಲಿ ಬರೆದಿರುವ ಪ್ರಬಂಧದ ಭಾಷಾಂತರವೇ, ಇಲ್ಲದೆ ಲೇಖಕರ ಅಭಿಪ್ರಾಯಗಳನ್ನೊಳಕೊಂಡಿರುವ ಅವರ ಸ್ವಂತ ಲೇಖನವೇ ಎಂದು ತಿಳಿಯಲು ಸಾಧ್ಯವಿಲ್ಲ. ಭಾಷೆಯು 'ತರ್ಜುಮೆ'ಯ ಭಾಷೆಯಾಗಿ ತೋರುವುದು.

ಪುಸ್ತಕದ ಹೆಸರಿನಲ್ಲಿರುವ 'ರಸಪ್ರಭೇದಗಳ' ಎಂಬ ಭಾಗಕ್ಕೆ ಅರ್ಥ ತಿಳಿಯುವುದು ಕಷ್ಟ; ವಿಷಯ ವಿವರಣೆಯೂ ಓದುಗರ ಮನಸ್ಸು ಹಿಡಿಯುವಂತೆ ರಚಿತವಾಗಿಲ್ಲ.

ಪುಟ 16.—

> ರಸಪ್ರಭೇದಗಳ ಪ್ರಭೆಯು ಉತ್ಪನ್ನವಾಗಿ ತನ್ಮೂಲಕ ಜ್ಞಾನಾರ್ಜನೆಯು ನಡೆಯುವ ಸಮಯವು, ನಿಜವಾದ ಮತ್ತು ಪ್ರಾಮಾಣಿಕ ಉಪಾಧ್ಯಾಯನಿಗೆ ಗೂಢವಾದ ಪ್ರಶ್ನೆಗಳ ಮೂಲಕ ಅದರ ವಿಷಯವಾಗಿ ಯೋಚಿಸುವ ಅವಕಾಶವನ್ನು ಕಲ್ಪಿಸಿ ಕೊಡುವುದೆಂದು ತಿಳಿಯಬೇಕು. ಇಂತಹ ಪವಿತ್ರತನುವಾದ ಮತ್ತು ಜಾಗ್ರತೆ ಹಾರಿ ಹೋಗುವಂತಹ ಸಮಯವನ್ನೆಂದಿಗೂ ಕಳೆದುಕೊಳ್ಳಬಾರದು.

ಮೇಲೆ ಕೊಟ್ಟಿರುವ ಉದಾಹರಣೆಯಿಂದ, ಲೇಖಕರ ಅಭಿಪ್ರಾಯಗಳನ್ನು ತಿಳಿಯುವುದು ಅಷ್ಟು ಸುಲಭವಲ್ಲವೆಂದು ಕಾಣಬರುವುದು. ಈ ಪುಸ್ತಕದಲ್ಲಿ ಹೇಳಿರುವ ವಿಷಯಗಳನ್ನು ಓದುವವರ ಮನಸ್ಸಿಗೆ ಹಿಡಿಯುವಂತೆ ಸಹಜವಾದ ಭಾಷೆಯಲ್ಲಿ ವಿಸ್ತರಿಸಿ ಬರೆದಿದ್ದರೆ ಲೇಖಕರ ಶ್ರಮವು ಹೆಚ್ಚು ಸಾರ್ಥಕವಾಗುತ್ತಿದ್ದಿತೆಂದು ನಮ್ಮ ಅಭಿಪ್ರಾಯ.

---

## ೧೧. ಕನ್ನಡಿಗರ ಗುಂಪಿನ ಗುಟ್ಟು

(ಬ್ರಾಮ್ಹಣ ಬ್ರಾಮ್ಹಣೇತರ ಭೂತಚಿಕಿತ್ಸೆ)

ಲೇಖಕರು.—ಕರ್ಲಮಂಗಲದ ಶ್ರೀಕಂಠಯ್ಯನವರು, ಮಾಗಡಿ.

ಮುದ್ರಣಕಾರರು.—ಶ್ರೀಲಕ್ಷ್ಮೀವಿಲಾಸ ಮುದ್ರಾಕ್ಷರಶಾಲೆ, ಬೆಂಗಳೂರು ಸಿಟಿ.

ಡೆಮ್ಮೈ ಅಷ್ಟಪತ್ರ ಪುಟಗಳು ೭೨; ಬೆಲೆ ೮ ಆಣೆ; ೧೯೩೦.

ಈ ಪುಸ್ತಕದ ಭಾಷೆಯು ಬಹಳ ಚಿತ್ರವಾಗಿದೆ. ಅದನ್ನು ಅರ್ಥಮಾಡಿಕೊಳ್ಳುವುದು ಸುಲಭವಲ್ಲ. ಈ ರೀತಿಯಾಗಿ ಬರೆಯಲು ಲೇಖಕರ ಅಭಿಪ್ರಾಯವೇನೋ ನಮಗೆ ತಿಳಿಯದು. ಪುಸ್ತಕಕ್ಕೆ ಕೊಟ್ಟಿರುವ ಹೆಸರಿನಿಂದ ಇದರಲ್ಲಿಯ ವಿಷಯವೇನೆಂಬುದು ಗೊತ್ತಾಗಲಾರದು. "ಬ್ರಾಮ್ಹಣ ಬ್ರಾಮ್ಹಣೇತರ ಭೂತ ಚಿಕಿತ್ಸೆ" ಎಂದರೇನೋ ನಮಗೆ ತಿಳಿಯದು. 'ಭೂತ ಚಿಕಿತ್ಸೆ' ಎಂದರೆ 'ಮನುಷ್ಯನನ್ನು ಹಿಡಿದ ದೆವ್ವವನ್ನು ಬಿಡಿಸುವುದಕ್ಕೆ ಮಾಡುವ ಪ್ರಯೋಗ' ಎಂದು ನಿಘಂಟುವಿನಲ್ಲಿ ಬರೆದಿದೆ. ಪುಸ್ತಕದಿಂದ ಕೆಲವು ಉದಾಹರಣೆಗಳನ್ನು ತೆಗೆದು ಕೊಟ್ಟಲ್ಲಿ ವಾಚಕರಿಗೆ ನಮ್ಮ ಅಭಿಪ್ರಾಯವು ವ್ಯಕ್ತವಾಗುವುದು.

"ಅರಿಕೆಯ ಒಂದೆರಡು ಮಾತು" ಎಂಬುದು ಪೀಠಿಕೆ. ಅದರ ಆರಂಭದ ವಾಕ್ಯಗಳು ಹೀಗಿರುವುವು:—

> ಕಿರುಗುಳಿಯ ಕಾಲಿನಂತೆ ತಿರುಗುತ್ತಾ ಒಂದರ ಹಿಂದೊಂದು ಒಂದು ಕಾಣುವ ಅದರ ಕೆಯ್ದುವಿನಂತೆ ತೋರುತ್ತಿರುವ ನೆಲದೊಳಗಣ ಕೆಲಸಗಳನ್ನು ಬಿಡಿಸಿ ತಿಳಿಸುವುದು

ಬಲು ಬೇವಸವಾಗಿದೆ. ಅದನ್ನೆಲ್ಲಾ ತಿಳಿಸುವದೆಂದರೆ:—ಬರೆವವನಿಗೆ ಇನ್ನಾವ ತಡೆ ಇಲ್ಲದಿದ್ದರೂ ಬಾಳುವೆಯೇ ಸಾಲದುದಾಗಿದೆ. ತನಗೆ ದೊರೆತೆಡರಿನ ನಡುವಿನಲ್ಲಿ ಅದನ್ನೆಲ್ಲಾ ಬಗೆಯುದಿದ್ದರೂ, ಇದರ ಕೆಲಸವು ಹೇಗೆ ನಡೆವುದು? ಇದು ಮೊದಲು ಹೇಗಿದ್ದಿತು? ಇದರೊಂದಿಗಿರುವದರಲ್ಲಿ ಯಾವುದು ಇದರಲ್ಲಿ ಮೊದಲಿದ್ದಿತು. ಹೊಸದಾಗಿ ಉಂಟಾದವುಗಳೇನು ಮೊದಲಾದ ಮುಂತಿಳಿವೂ ಇದರ ಮೊದಲೇನು. ಇದರ ಕೆಲಸದ ಹೊರೆಯನ್ನು ಸಾಗಿಸುವುದಾವುದು, ಅದಕ್ಕೂ ಇದಕ್ಕೂ ಇರುವ ನಂಟುತನವೇನು? ಮುಂತಾದ ಮಾತುಗಳೂ ಎದುರು ಬರುತ್ತವೆ. ಈ ತೊಡಕನ್ನು ಬಿಡಿಸುವುದು ಸಮ್ಮ ಕೆಲಸವಾಗಿದೆ.

ಪುಟ ೪.—

ಈ ನೆಲದಮೇಲೆ ಬಯಲಿನಲ್ಲಿ ನಾನು (ಆತ್ಮವು) ಏರುತ್ತೇರುತ್ತಾ ಬೆಳಗೂ ಪುಟ್ಟಿನ ಬೇಸರವೂ ಕಿರಿಬಯಕೆಯೂ, ನೆಲೆಯುಪಿರಿದೂ ಒಪ್ಪುಕವೂ ಉಂಟಾಗುತ್ತಿರುತ್ತದೆ. ಇದಕ್ಕೂ ನಾನುಗೆ ಸರಿಯಾದ ತಿಳುವಿನ ಅರಸುತನವೂ ಹೊಣೆಗಾರಿಕೆಯೂ ಮೇಲಾಗಿರುತ್ತದೆ. ಈ ಸಯ್ಪಿನ ಬೀಡಿನಲ್ಲಿ ಬಲುಬಾಳುವ ಪುಟ್ಟುಗಳೂ ಬೆಳಗೊಡಲೂ ಇನ್ನು ಮೇಲೆ ಪರಿಜಳಿದ ನಾನು ನನನ್ನಿಯಾದ ಚಲುವೂ ಇರವಿನ ಹೆಚ್ಚು ಪರಿಯಿಂದ ಬೆಳಗುತ್ತಿರುತ್ತದೆ.

ಪುಟ ೧೬.—

ಕನ್ನಡಿಗರಲ್ಲಿ ಯಾವ ಗುಂಪಿನತೆಗಳೂ ಇರುವುದಿಲ್ಲಾ............ "ಕನ್ನಡದಿಂದ ತೆಲುಗು, ಅರವ, ತಮಿಳು, ತುಳು ಮೊದಲಾದ ಮಕ್ಕಳುನುಡಿಗಳು ಆಗಿರುವುವು. ಇದಕ್ಕೆಲ್ಲಾ ಹುಟ್ಟಿನ ನೆಲೆಯ ಚಲುವನ್ನು ಹೊಂದಿ ಕನ್ನಡವೇ ತಾಯಾಗಿರುವುದು"........ಸಕ್ಕದದಲ್ಲಿ ಬರೀ ಹೊಗಳಿಕೆಯಲ್ಲದೆ ತಿರುಳಿರುವುದಿಲ್ಲಾ........ಈ ಕನ್ನಡನುಡಿಯೂ, ನಾಡು ಮೊದಲು ಈ ನೆಲವೆಲ್ಲಾ ಆಗಿದ್ದುದಾಗಿ ತಿಳಿಯಬರುತ್ತದೆ.

ಪುಟ ೧೭.—

ಕನ್ನಡಿಗರು ಗುಂಪಿನ ಸೆಪದಿಂದ ಕಿತ್ತಾಡಿ ಕಾಡುತ್ತಿರುವರು. ಈ ಗುಂಪಿನ ಕಿತ್ತಾಟ (ಬ್ರಾಮ್ಮಣ ಬ್ರಾಮ್ಮಣೇತರ ಕಲಹ)ಗಳನ್ನು ನೋಡಿ ನಮಗೆ ಕರೆಗೋಳಿಸುತ್ತಿರುವದು. ಈ ಅಣ್ಣತಮ್ಮಂದಿರ ಕಿತ್ತಾಟವನ್ನು ನಿಲ್ಲಿಸಿ ಸುಮ್ಮನಿರಿಸಲಿಕ್ಕಾಗಿ, ಈ ಚಿಕ್ಕ ಕವಳಿಗೆಯು ಬರೆಯಲ್ಪಟ್ಟಿರುವದು. ಕನ್ನಡಿಗರಲ್ಲಿ ಯಾರೂ ಹೆಚ್ಚು ಕಮ್ಮಿ ಇರುವುದಿಲ್ಲವೆಂದು ತೋರಿಸಲಿಕ್ಕೆ ಇದನ್ನು ಬರೆದು ತಿಳಿಸಿದ್ದೇನೆ. ಜಾಣರಿದನ್ನು ಬಗೆಯಬೇಕು.

ಪುಟ ೨೧.—

ಈಗ ಕಿತ್ತಾಟವು ಗಡಿಮೀರುತ್ತಿರುವುದರಿಂದ ಈ ಗುಂಪಿನ ಗುಟ್ಟನ್ನು ಬರೆದಿರುವೆನು. ಇದರಲ್ಲಿ ತಪ್ಪಾಗಲಿ, ತಿದ್ದುಪಡಿಯಾಗಲಿ, ಇರದಂತೆ ಬರೆದಿರುವೆನು... ........ಇದಕ್ಕೆ ಅಚ್ಚಗನ್ನಡ ನುಡಿಗಳೇ ಸಕ್ಕವಿಲ್ಲದೇ ಮಾತುಗಳು ಬರೆಯಲ್ಪಟ್ಟಿರುವುದು.

೨೦ನೆಯ ಪುಟದಿಂದ ಮುಂದೆ, ಒಕ್ಕಲಿಗರು, ಕುರುಬರು, ಬೆಸ್ತರು, ಮಡಿವಳರು, ಕೆಲಸಿಗರು, ಹೂವಾಡಿಗರು, ಗಾಣಿಗರು, ಓಜರು, ಗೊಳ್ಳರು, ಬೇಡರು, ಸಯ್ದರು, ಮೇದರು, ದೊಂಬರು-ಕೊಲ್ಲಟ್ಟಿಗರು, ಹೊಲಿಯರು, ಮಾದಿಗರು, ಕೋಮಟಿಗರು ಇನ್ನೂ ಕೆಲವು ಕನ್ನಡಿಗರ ಗುಂಪುಗಳು—ಇವರುಗಳೆಲ್ಲರೂ ಕನ್ನಡಿಗರಲ್ಲಿ ಮಾನ್ಯರೆಂದೂ ಇವರ ಕಸಬು ಮೊದಲಾದುವು ಗಣ್ಯವಾದುವೆಂದೂ ವಿಶದವಾಗಿ ವಿವರಿಸಿದೆ.

ಪುಟ ೪೫.—'ಹೊಲಿಯ'ರ ವಿಷಯವಾಗಿ ಹೀಗೆ ಬರೆದಿದೆ:—

> ಇವರು ಹಿಂದೆ ಹೆಸರುಹೊಂದಿದ ಬಸವಣ್ಣನವರಿಂದಲೂ ಮನ್ನಿಸಲ್ಪಡುತ್ತಿದ್ದರು. ಅಚ್ಚಕನ್ನಡಿಗರಿವರು ಈ ನಾಡಿನಲ್ಲೆಲ್ಲಾ ದೊರೆಯುವರು. ಇವರ ಹಿರಿಯರೆಲ್ಲರೂ ಹಿಂದೆ ಕಾಳುಣಿಗಳೇ ಇದ್ದರು. ಬರ ಬರುತ್ತಾ ಇವರ ಪೀಳಿಗೆಯವರು ಅಡಗುಣಿಗಳಾಗಿ ಹೆಚ್ಚಿಹೋದರು.................... ಹುಟ್ಟಿನಲ್ಲಿ ಮೇಲಾಗಿ ಕನ್ನಡಿಗರಾದ ಹೊಲಿಯರು ಹೀಗಾದುದಕ್ಕಾಗಿ ಯಾರಾದರೂ ಮರುಗದಿರಲಾರರು........... ....ಮೊದಲು ಹೊಲಿಯರೆಲ್ಲರೂ ಮೇಲಾಗಿಯೇ ಬಾಳಿ, ನೂಲು ಹೊಲಿಯುವ ಕೆಲಸವನ್ನು ಮೊದಲಿಟ್ಟಿದರು..........ಕನ್ನಡಿಗರೆಲ್ಲರೂ ಅಂಟುನಂಟುಗಳ ಗೊಡವೆಯನ್ನು ಗೊತ್ತುಮಾಡದೆ ಬೆರಸಿ ಒಳ್ಪಡೆಗೆ ಬಂದರೆ ನಾಡಿನ ಮೇಲಾಗುವುದೆಂದು ನಮಗೆ ನಂಬಿಕೆಯಾಗಿರುವುದರಿಂದ ಎಲ್ಲ ಕನ್ನಡಿಗರಲ್ಲೂ ನಾವು ಆಳುಗಳಾಗಿ ಬೇಡುವೆವು.

---

## ೧೨. ಭಾರತೀಯರ ಮೇಲ್ಮೆ

ಲೇಖಕರು.—ಶ್ರೀ ನಾರಾಯಣ ಶರ್ಮಾ, ಧಾರವಾಡ.

ಪ್ರಕಾಶಕರು.—ಶ್ರೀ ಸುರೇಂದ್ರ ಶಿವರಾವ ದೇಸಾಯಿ, ಎಂ.ಎ., ಧಾರವಾಡ.

ಮುದ್ರಣಕಾರರು.—ಶ್ರೀ ಕೃಷ್ಣಾ ಪ್ರೆಸ್, ಧಾರವಾಡ.

ಕ್ರೌನ್ ಅಷ್ಟಪತ್ರ ಪುಟಗಳು ೧೦+೧೩೮ ; ಬೆಲೆ ರೂ. ೧ ; ೧೯೩೧.

ಇದು ಧಾರವಾಡದ ಕರ್ನಾಟಕ ಶಿಕ್ಷಣ ಸಮಿತಿಯ ೭ನೆಯ ಪುಸ್ತಕ. ಇದರ ಮುನ್ನುಡಿಯಲ್ಲಿ ಪ್ರಕಾಶಕರು, ನಮ್ಮ ಹಿರಿಯರು ಆಧುನಿಕ ಶಾಸ್ತ್ರಗಳಲ್ಲಿಯೂ "ನೌಕಾ ಮತ್ತು ವಿಮಾನಗಳನ್ನು ಕಟ್ಟುವದರಲ್ಲಿಯೂ ಒಳ್ಳೇ ನಿಷ್ಣಾತರಾಗಿದ್ದರು. ಅವರ ವ್ಯಾಪಾರವು ವಿಲಾಯತಿಯವರನ್ನು ಬೆರಗುಮಾಡಿತ್ತು. ಅವರು ಕೇವಲ ಧರ್ಮ ಮೂಢರಾಗಿದ್ದಿಲ್ಲ. ಪರಲೋಕ ಸುಖದಲ್ಲಿಯೆ ಮನವನ್ನಿಟ್ಟು ಇಹಲೋಕ ಯಾತ್ರೆಯನ್ನು ತಿರಸ್ಕರಿಸಿದ್ದಿಲ್ಲ. ಆ ಹಿರಿಯರ ಹಾದಿಯನ್ನೇ ನಾವು ಹಿಡಿದುಕೊಂಡು ನಡೆದರೆ ನಮಗೆ ಕ್ಷೇಮವಾಗುವದು. ಪಾಶ್ಚಿಮಾತ್ಯರ ಮಾತಿನಲ್ಲಿಯೇ ನಮ್ಮವರ ಕಿವಿ ಹಿಂಡಿ ಬುದ್ಧಿಗಲಿಸುವ ಉಪದೇಶದಿಂದ ಬರೆಯಿಸಿದ ಪುಸ್ತಕವಿದು" ಎಂದೂ,

"ನಮ್ಮ ಪ್ರತಿಬಿಂಬವನ್ನು ನಾವು ಚನ್ನಾಗಿ ನೋಡಿಕೊಂಡು ನಮ್ಮ ಅರಿವನ್ನುಂಟು ಮಾಡಿಕೊಳ್ಳಲಿಕ್ಕೆ ಅನುಕೂಲವಾಗುವಂತೆ ಪಾಶ್ಚಿಮಾತ್ಯರು ನಮ್ಮೆದುರಿಗೆ ಹಿಡಿದ ನಿಲುಗನ್ನಡಿಯಂತಿದು" ಎಂದೂ ಹೇಳಿರುತ್ತಾರೆ.

ಲೇಖಕರು ತಮ್ಮ ಪೀಠಿಕೆಯಲ್ಲಿ—ಈಗ "೨೦-೨೨ ವರ್ಷಗಳಾಚೆ ಲಾಲಾ ಹರವಿಲಾಸ ಶಾರದ ಅವರ 'Hindu Superiority' ಎಂಬ ಪುಸ್ತಕವು ನನ್ನ ಕಣ್ಣಿಗೆ ಬಿದ್ದಾಗಲೇ ಅದನ್ನು ಕನ್ನಡಿಸಬೇಕೆಂದು ಬಲು ದಿನದ ನನ್ನ ಹರಕೆಯೇನೋ ಇತ್ತು.....ಶ್ರೀ ಶಾರದಾ ಅವರ ಪುಸ್ತಕದ ಭಾಷಾಂತರವೇ ೧೯೧೪-೧೫ನೆಯ ಇಸ್ವಿಯಲ್ಲಿ ಹುಬ್ಬಳ್ಳಿಯಲ್ಲಿ ಹೊರಡುತ್ತಿದ್ದ ಸಚಿತ್ರ ಭಾರತದಲ್ಲಿ ಕೆಲ ಮಟ್ಟಿಗೆ ಪ್ರಸಿದ್ಧವಾಗಿದ್ದರೂ, ಅದು ಪೂರ್ಣವಾಗಿರಲಿಲ್ಲ; ಶ್ರೀ ಶಾರದಾ ಅವರು ತಮ್ಮ ಪುಸ್ತಕದಲ್ಲಿ ಭಾರತೀಯ ಶ್ರೇಷ್ಠತ್ವವನ್ನು ಸಿದ್ಧಗೊಳಿಸಲು ಬರಿಯ ಪಾಶ್ಚಿಮಾತ್ಯರ ನುಡಿಗಳನ್ನೇ ಸಾಕ್ಷಿಯಾಗಿ ಕೊಟ್ಟಿದ್ದರಿಂದ, ಯಾರಿಗಾದರೂ ಇಂಥ ಪುಸ್ತಕವನ್ನೋದುವ ಚಪಲ ವಾಗುವದು ಸಹಜವು.......ನಾನಾದರೂ ಶ್ರೀ ಶಾರದಾ ಅವರ ಪುಸ್ತಕವಾದ ಮೇಲೆ ಇತ್ತೀಚೆ ೨೦-೨೨ ವರ್ಷಗಳಲ್ಲಿ ಆದ ಮತ್ತೆ ಕೆಲ ಹೊಸ ಪಾಶ್ಚಾತ್ಯ ಗ್ರಂಥ ಕರ್ತರ ಗ್ರಂಥಗಳನ್ನು ಓದಿ ಆದಷ್ಟುಮಟ್ಟಿಗೆ ಎಲ್ಲ ಜನಾಂಗದ ಪ್ರಾತಿನಿಧಿಕ ಮತಗಳನ್ನೇ ಸೇರಿಸಲು ಯತ್ನಿಸಿರುವೆ.......ಹೊಸ ಭಾರತವನ್ನು ನಿರ್ಮಿಸುವ ಹೊಸ ಭಾರತೀಯರ ಕಲ್ಪನೆಯು ಇದರಿಂದ ಹೆಚ್ಚು ಉಜ್ವಲವಾಗಲೆಂದು ಹಾರೈಸುತ್ತೇನೆ" ಎಂದು ಬರೆದಿರುವರು.

ಈ ಗ್ರಂಥದಲ್ಲಿ, "ಪ್ರಾಸ್ತಾವಿಕ ಮತಗಳು, ಆರ್ಯ ಸಂಸ್ಕೃತಿಯ ಪ್ರಾಚೀನತ್ವ, ಸಾಮಾಜಿಕ ಪದ್ಧತಿ, ಸ್ತ್ರೀಯರ ಸ್ಥಾನ, ಶೀಲ ಸ್ವಭಾವಗಳು, ಸ್ವದೇಶಾಭಿಮಾನ, ಶೌರ್ಯ, ರಾಜ್ಯಭಾರ ಕ್ರಮ, ಯುದ್ಧ ಶಾಸ್ತ್ರ, ಭೌತಿಕ ಶಾಸ್ತ್ರಗಳ ಬೆಳವಣಿಗೆ, ವ್ಯಾಪಾರ, ಪರರಾಷ್ಟ್ರದವರೊಡನೆ ಸಂಬಂಧ, ದೇಶಾಂತರಗಳಲ್ಲಿ ಹಿಂದೂ ಜನರ ಒಕ್ಕಲುಗಳು, ಲಲಿತ ಕಲೆಗಳು, ವಾಙ್ಮಯ ಸಂಪತ್ತಿ, ಧರ್ಮ, ತತ್ತ್ವಜ್ಞಾನ" ಎಂಬ ೧೭ ಪ್ರಕರಣಗಳಿರುವುವು. ಇಂಗ್ಲಿಷು, ಫ್ರೆಂಚು ಮೊದಲಾದ ಪಾಶ್ಚಾತ್ಯ ವಿದ್ವಾಂಸರನೇಕರು ನಮ್ಮ ಹಿರಿಯರ ಸಂಸ್ಕೃತಿಯ ಪ್ರಾಚೀನತೆ, ಕಲಾಪ್ರೌಢಿಮೆ, ಶಕ್ತಿ ಸಾಹಸಗಳು—ಇವೇ ಮೊದಲಾದುವುಗಳ ವಿಷಯವಾಗಿ ಹೇಳಿರುವ ಪ್ರಶಂಸಾ ವಚನಗಳನ್ನು ಈ ಗ್ರಂಥದಲ್ಲಿ ಕೊಟ್ಟಿದೆ.

ಕನ್ನಡಿಗರೆಲ್ಲರೂ ಈ ಪುಸ್ತಕವನ್ನು ಓದಿ ತಮ್ಮ ಈಗಣ ದುಸ್ಸ್ಥಿತಿಯನ್ನು ನೀಗಿಕೊಳ್ಳಲು ಯತ್ನಿಸಬೇಕೆಂಬುದೇ ನಮ್ಮ ಹಾರೈಕೆ.

---

## ೧೩. ವೀರ ವಲ್ಲಭ ಭಾಯಿ

ಸಂಗ್ರಾಹಕರು.—ಅನಂತ ಅಣ್ಣಾಜಿ ಚಿಕ್ಕೋಡಿ, ಬೆಳಗಾವಿ.

ಪ್ರಕಾಶಕರು.—ತುಂಟರ ತಂಡ, ಬೆಳಗಾವಿ.

ಮುದ್ರಣಕಾರರು.—ಶ್ರೀ ಮಹಾವೀರ ಮುದ್ರಣಾಲಯ, ಬೆಳಗಾವಿ.

ಕ್ರೌನ್ ಅಷ್ಟಪತ್ರ ಪುಟಗಳು ೯೨; ಬೆಲೆ ೧೦ ಆಣೆ; ೧೯೩೧.

ಇದು ಬೆಳಗಾವಿಯ ಕರ್ಣಾಟಕ ಸಾಹಿತ್ಯ ಸೇವಾ ಮಂಡಲದ "ಒಂದಾಣೆ ಮಾಲೆಯ ಕಾಣಿಕೆಯ ಪುಷ್ಪ." ಸಂಗ್ರಾಹಕರು ತಮ್ಮ ಪೀಠಿಕೆಯಲ್ಲಿ ಹೀಗೆ ಹೇಳುತ್ತಾರೆ:—"ವಲ್ಲಭ ಭಾಯಿಯವರು ಇಂದು ಭಾರತ ರಾಷ್ಟ್ರದ ಸೂತ್ರಧಾರರಾಗಿದ್ದಾರೆ....... ಇವರ ಅತುಲವಾದ ಸ್ವಾರ್ಥ ತ್ಯಾಗ, ಅನುಪಮವಾದ ಸಾಹಸ, ಅಖಂಡವಾದ ದೇಶ ಸೇವೆ, ಅವಿಚಲವಾದ ಗುರು ಭಕ್ತಿ, ಅನುಕರಣೀಯವಾದ ಸತತೋದ್ಯೋಗ ಮೊದಲಾದ ಗುಣಗಳನ್ನು ನಾವು ಆದರ್ಶವಾಗಿ ಇಟ್ಟುಕೊಳ್ಳಬೇಕು. ಚರಿತ್ರನಾಯಕರ ಸದ್ಗುಣಗಳ ಅನುಕರಣ ಮಾಡಿದರೆ ಮಾತ್ರ ಚರಿತ್ರ ವಾಚನವು ಸಫಲವಾದಂತಾಗುವದು.......ನಮ್ಮ ಪ್ರಾಂತ ಮತ್ತು ನಮ್ಮ ಭಾಷೆಯ ಬಗ್ಗೆ ಜನಸಾಮಾನ್ಯದಲ್ಲಿ ಅಭಿಮಾನವನ್ನು ಹುಟ್ಟಿಸಬೇಕಾಗಿದೆ. ಸ್ವಭಾಷೆಯ ವಿಷಯಕ್ಕೆ ಕನ್ನಡಿಗರಲ್ಲಿ ಹಬ್ಬಿ ಹೋಗಿರುವ ಅಭಿಮಾನಶೂನ್ಯತೆಯನ್ನು ಹೋಗಲಾಡಿಸುವದು ಅತ್ಯಂತ ಅವಶ್ಯವಾಗಿದೆ..........ಮಹಾರಾಷ್ಟ್ರ ಪ್ರಾಂತಿಕ ಪರಿಷತ್ತಿನ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿದಾಗ, ವಲ್ಲಭ ಭಾಯಿಯವರು ತಮ್ಮ ಭಾಷೆಯಿಂದ ಗುಜರಾತಿಯಲ್ಲಿಯೇ ಭಾಷಣ ಮಾಡಿದ್ದಲ್ಲದೆ ಪರಿಷತ್ತಿನ ಕಾರ್ಯಕ್ರಮವನ್ನು ಬಹುಶಃ ಗುಜರಾತೀ ಭಾಷೆಯ ಮುಖಾಂತರವಾಗಿಯೇ ಸಾಗಿಸಿದರೆಂಬುದು ಸರ್ವ ಶ್ರುತವಾದ ಸಂಗತಿಯಾಗಿದೆ..........ಈ ಚರಿತ್ರೆಯ ಮೊದಲಿನ ೬೫ ಪುಟಗಳಷ್ಟು ಭಾಗವು ಶ್ರೀ ಮಹಾದೇವ ಭಾಯಿ ದೇಸಾಯಿಯವರು ಬರೆದ ಚರಿತ್ರದ ಭಾಷಾಂತರವಾಗಿದೆ. ಮುಂದಿನ ಭಾಗವು ಸ್ವತಂತ್ರವಾಗಿ ಬರೆಯಲ್ಪಟ್ಟಿದೆ."

ಇದಕ್ಕೆ ಮುನ್ನುಡಿಯನ್ನು ಬರೆದಿರುವ ದೇಶಪಾಂಡೆ ಗಂಗಾಧರ ರಾಯರು ತಮ್ಮ ಮುನ್ನುಡಿಯಲ್ಲಿ ಹೀಗೆ ಹೇಳುವರು:—"ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡು ಪಾರತಂತ್ರ್ಯ ಪಂಕದಲ್ಲಿ ಸಿಕ್ಕಿಬೀಳುವ ದೇಶಗಳಿಗೆ ತಗಲುವ ನಷ್ಟವು ಅಷ್ಟಿಷ್ಟೆಂದು ಹೇಳಲಾಗುವುದಿಲ್ಲ. ಈ ದೇಶಗಳಲ್ಲಿ ಸಮೃದ್ಧಿಯಿದ್ದರೂ ಅಲ್ಲಿಯ ಜನರ ಹೊಟ್ಟೆ ಬಟ್ಟೆಗಳಿಗೆ ಗತಿಯಿಲ್ಲದಂತಾಗುತ್ತದೆ.........ಪರತಂತ್ರ ರಾಷ್ಟ್ರಗಳಲ್ಲಿರುವ ಸರ್ವ ಸದ್ಗುಣಗಳೂ ಲಯಹೊಂದುತ್ತವೆ...........ಹಿಂದುಸ್ಥಾನದ ಆತ್ಮವು ಹಳ್ಳಿಗಳಲ್ಲಿರುವದೆಂದು ಮಹಾತ್ಮರಂತೆ ವಲ್ಲಭ ಭಾಯಿಯವರಿಗೂ ತೋರುತ್ತಿರುವದರಿಂದ ಅವರು ಹಳ್ಳಿಯ ಒಕ್ಕಲಿಗರೊಡನೆ ತಾದಾತ್ಮ್ಯ ಹೊಂದಿದರು. ..........ಪ್ರಾಂತೀಯ ಉನ್ನತಿಯನ್ನು ರಾಷ್ಟ್ರೀಯ ಉನ್ನತಿಯೊಡನೆ

ಸಮನ್ವಯಗೊಳಿಸಿ ಪ್ರಾಂತದ ಉತ್ಕರ್ಷವನ್ನು ಹೇಗೆ ಸಾಧಿಸಿಕೊಳ್ಳಬೇಕೆಂಬುದು ಸರದಾರ ವಲ್ಲಭ ಭಾಯಿಯವರ ಚರಿತ್ರದಿಂದ ಸ್ಪಷ್ಟವಾಗಿ ತಿಳಿಯುವಂತಿದೆ.''

ಲೇಖಕರು ಈ 'ರಾಷ್ಟ್ರ ಪುರುಷರ' ಜೀವನ ಚರಿತ್ರೆಯನ್ನು ಸುಲಭವಾದ ಶೈಲಿಯಲ್ಲಿ, ಓದುಗರಿಗೆ ಬೇಸರವಾಗದಂತೆ ಚಿತ್ರಿಸಿರುತ್ತಾರೆ. ಇದನ್ನು ಓದಿದಲ್ಲಿ, ಯೋಗ್ಯತೆಯುಳ್ಳ ಮನುಷ್ಯನು ಮನಸ್ಸುಮಾಡಿದರೆ ಎಂತಹ ಮಹತ್ಕಾರ್ಯವನ್ನಾದರೂ ಸಾಧಿಸಬಹುದೆಂದು ವ್ಯಕ್ತವಾಗುವುದು.

---

## ೧೪. ಅನಾಸಕ್ತಿಯೋಗ

ಅನುವಾದಕರು.—ಶ್ರೀ ದ. ಕೃ. ಭಾರದ್ವಾಜರು, ಬೆಂಗಳೂರು.

ಪ್ರಕಾಶಕರು.—ತುಳಸೀದಾಸ ರಾಮಾಯಣ ಕಾರ್ಯಾಲಯ, ಬೆಂಗಳೂರು ಸಿಟಿ.

ಮುದ್ರಣಕಾರರು.—ಬಿ. ಶ್ರೀನಿವಾಸಯ್ಯಂಗಾರ್ಯರು, ಮನವಾರ್ತೆಪೇಟೆ, ಬೆಂಗಳೂರು ಸಿಟಿ.

ಡೆಮ್ಮೈ ಅಷ್ಟಪತ್ರ ಪುಟಗಳು ೧೪+೯೩; ಬೆಲೆ ೪ ಆಣೆ; ೧೯೩೦.

ಇದು ಮಹಾತ್ಮಾ ಗಾಂಧಿಯವರು ಹಿಂದೀ ಭಾಷೆಯಲ್ಲಿ ಬರೆದ ಭಗವದ್ಗೀತೆಯ ಅನುವಾದದ ಕನ್ನಡದ ಭಾಷಾಂತರ. ಮೂಲಗ್ರಂಥದ ಪ್ರಸ್ತಾವನೆಯಲ್ಲಿ ಶ್ರೀ ಗಾಂಧಿಯವರು, ''ಗೀತೆಯ ಪ್ರತಿಯೊಂದು ಅಧ್ಯಾಯದಲ್ಲಿ ಇಂತಹ (ತಾನು, ಪರರು ಎಂಬ) ಭೇದವು ಮಿಥ್ಯೆಯೆಂದೂ ಹಾನಿಕರವೆಂದೂ ತೋರಲಾಗಿದೆ. ಗೀತೆಗೆ ನಾನು **ಅನಾಸಕ್ತಿಯೋಗ**ವೆಂಬ ಹೆಸರಿಟ್ಟಿರುವೆನು. ಅದು ಹೇಗೆ ಸಿದ್ಧವಾಗುವುದು? ಅನಾಸಕ್ತಿಯ ಲಕ್ಷಣಗಳಾವುವು?—ಇವೇ ಮೊದಲಾದ ವಿಷಯುಗಳಿಗೆ ಉತ್ತರವು ಈ ಪುಸ್ತಕದಲ್ಲಿರುವುದು'' ಎಂದೂ, ''ಈ ಅನುವಾದಕ್ಕೆ ೩೮ ವರುಷಗಳ ಆಚರಣೆಯ ಪ್ರಯತ್ನದ ಆಧಾರವಿರುವುದು'' ಎಂದೂ, ''ಗೀತೆಯು ಐತಿಹಾಸಿಕ ಗ್ರಂಥವಲ್ಲ, ಇದರಲ್ಲಿ ಭೌತಿಕ ಯುದ್ಧದ ರೂಪದಿಂದ ಪ್ರತಿಯೊಬ್ಬ ಮನುಷ್ಯನ ಹೃದಯದಲ್ಲಿ ನಿರಂತರವೂ ನಡೆಯುತ್ತಿರುವ ದ್ವಂದ್ವಯುದ್ಧದ ವರ್ಣನೆಯು ತುಂಬಿರುವುದು. ಹೃದಯಗತ ಯುದ್ಧವನ್ನು ಮನೋರಂಜಕವಾಗುವಂತೆ ಮಾಡುವುದಕ್ಕಾಗಿ ಮಾನವ ಯೋಧರ ಕಲ್ಪನೆಯನ್ನು ಮಾಡಲಾಗಿದೆ'' ಎಂದೂ, ''ಆತ್ಮಾರ್ಥಿಯಾದವನಿಗೆ ಆತ್ಮದರ್ಶನಕ್ಕೆ ಒಂದು ಅದ್ವಿತೀಯ ಉಪಾಯವನ್ನು ತೋರುವುದೇ ಗೀತೆಯ ಆಶಯವಾಗಿರುವುದು'' ಎಂದೂ, ''ಫಲಾಸಕ್ತಿಯ ಕಹಿಯಾದ ಫಲಗಳಿಂದ ಗೀತಾಕಾರನು ಅನಾಸಕ್ತಿಯ—ಕರ್ಮಫಲ ತ್ಯಾಗದ—ಸಿದ್ಧಾಂತವನ್ನು ರೂಪುಗೊಳಿಸಿ ಅದನ್ನು ಅತ್ಯಾಕರ್ಷಕ ಭಾಷೆಯಲ್ಲಿ ಜಗತ್ತಿನೆದುರಿಗೆ ಇಟ್ಟಿರುವನು.......... ಫಲತ್ಯಾಗದಿಂದ ಮನುಷ್ಯನ ಜೀವನಕ್ರಮವು ಸರಳವಾಗುವುದು, ಸರಳತೆಯಿಂದ

ಶಾಂತಿಯು ಉತ್ಪನ್ನವಾಗುವುದು. ಫಲತ್ಯಾಗವೆಂದರೆ ಪರಿಣಾಮದ ಉಪೇಕ್ಷೆಯೆಂದು ಅರ್ಥವಾಗುವುದಿಲ್ಲ. ಪರಿಣಾಮ, ಸಾಧನ ವಿಚಾರ ಮತ್ತು ಅದರ ಜ್ಞಾನವು ಅತ್ಯಂತ ಆವಶ್ಯಕವಾಗಿರುವುದು. ಇಷ್ಟನ್ನು ಮಾಡಿದನಂತರ ಯಾವ ಮನುಷ್ಯನು ಪರಿಣಾಮವನ್ನು ಇಚ್ಛಿಸದೇ ಚಿಂತಿಸದೇ ಸಾಧನೆಯಲ್ಲಿ ಮಗ್ನನಾಗಿರುವನೋ ಅವನೇ ಫಲತ್ಯಾಗಿಯು" ಎಂದೂ, "ಸತ್ಯ ಮತ್ತು ಅಹಿಂಸೆಗಳನ್ನು ಸಂಪೂರ್ಣವಾಗಿ ಪಾಲಿಸಿದ ಹೊರತು ಸಂಪೂರ್ಣ ಕರ್ಮಫಲತ್ಯಾಗವು ಅಸಂಭವವು" ಎಂದೂ ಹೇಳಿರುತ್ತಾರೆ.

ಈ ಗ್ರಂಥದಲ್ಲಿ, ಭಗವದ್ಗೀತೆಯ ಶ್ಲೋಕಗಳ ಸರಳಾನುವಾದವನ್ನು ಕ್ರಮವಾಗಿ ಬರೆದು, ಅಲ್ಲಲ್ಲಿ, ಮೇಲೆ ಸೂಚಿಸಿರುವ ಅಭಿಪ್ರಾಯಾನುಸಾರವಾಗಿ ಟಿಪ್ಪಣಿಗಳನ್ನು ಕೊಟ್ಟಿದೆ.

---

## ೧೫. ಕೇಶವದಾಸರ ಕೀರ್ತನೆಗಳು

(ಭಾಗ ೩)

ಪ್ರಕಾಶಕರು.—ಪರಮೇಶ್ವರ ಗಣೇಶ ಕರ್ಕಿ, ಎಂ.ಎ., ಎಲ್‌ಎಲ್.ಬಿ.<br>ವೆಂಕಟಸುಬ್ಬ ಗೋಪಾಲ ಹೆಗಡೆ ಕರ್ಕಿ } ಹೊನ್ನಾವರ

ಮುದ್ರಣಕಾರರು.—ಸ್ಟಾರ್ ಆಫ್ ಕೆನರಾ ಪ್ರೆಸ್, ಕುಮಟಾ.

ಡೆಮ್ಮೆ ೧೬ ಪತ್ರ ಪುಟ ೨೮; ಬೆಲೆ ೨ ಆಣೆ; ೧೯೩೧.

ಇದರಲ್ಲಿ ೬೦ ಸಣ್ಣ ಸಣ್ಣ ಕೀರ್ತನೆಗಳಿವೆ.

---

## ೧೬. ಚೈತನ್ಯ

ಸಂಪಾದಕರು.—ಸ. ವಿ. ಅರಳಿಕಟ್ಟಿ, ಇಲಕಲ್ಲ.

ಮುದ್ರಣಕಾರರು.—ಶ್ರೀ ಬನಶಂಕರೀ ಮುದ್ರಣಾಲಯ, ಇಲಕಲ್ಲ.

ಡೆಮ್ಮೆ ಅಷ್ಟಪತ್ರ ಪುಟಗಳು ೨೪; ವಾರ್ಷಿಕ ವರ್ಗಣಿ ರೂ. ೨—೪—೦; ೧೯೩೧.

ಇದೊಂದು ಮಾಸ ಪತ್ರಿಕೆ. "ಎಲ್ಲ ಬಗೆಯ ವಿಷಯಗಳಿಗೂ ಇಂಬುಗೊಟ್ಟು ಪ್ರಾಪಂಚಿಕ ಪಾರಮಾರ್ಥಿಕ ಸಂಗತಿಗಳನ್ನು ಸಮನ್ವಯ ದೃಷ್ಟಿಯಿಂದ ಪ್ರತಿಪಾದಿಸಿ ಎಲ್ಲರಲ್ಲಿಯೂ ಹೆಚ್ಚಾದ ಚೈತನ್ಯವನ್ನುಂಟುಮಾಡಿ ಸಾಹಿತ್ಯ ಸಮಾಜ ರಾಷ್ಟ್ರಗಳ ಸೇವೆಯನ್ನು ಎಡೆಬಿಡದೆ ಮಾಡಬೇಕೆಂಬುದೇ" ಈ ಪತ್ರಿಕೆಯ ಗುರಿ. ಇದರ ಮೊದಲನೆಯ ವರುಷದ ೧೦ನೆಯ ಸಂಚಿಕೆಯಲ್ಲಿ, 'ಸಾಲವೋ ಶೂಲವೋ', 'ಮಳೆಗಾಲ' ಎಂಬ ಕವಿತೆಗಳೂ, 'ಕನ್ಯಾ ವಿಕ್ರಯ' ಎಂಬ ಕಥೆಯ ಮೊದಲನೆಯ ಭಾಗವೂ, 'ಚಿತ್ತಶುದ್ಧಿ', 'ದುಡ್ಡು' ಎಂಬ ಲೇಖನಗಳೂ, 'ಇಲಕಲ್ಲ ಸಮಾಚಾರ' ಗಳೂ ಇವೆ.

---

## ೧೭. ಅಧ್ಯಾತ್ಮ ಪ್ರಕಾಶ

ಸಂಪಾದಕರು.—ವೈ. ಸುಬ್ಬರಾಯರು, ಬೆಂಗಳೂರು.

ಮುದ್ರಣಕಾರರು.—ಅಧ್ಯಾತ್ಮ ಪ್ರಕಾಶ ಮುದ್ರಣಾಲಯ, ಬೆಂಗಳೂರು ಸಿಟಿ.

ಡೆಮ್ಮೈ ಅಷ್ಟಪತ್ರ ಪುಟಗಳು ೪೦ ; ವಾರ್ಷಿಕ ಚಂದಾ ೨ ರೂಪಾಯಿ ; ೧೯೩೨.

ಇದೊಂದು ಮಾಸ ಪತ್ರಿಕೆ. "ವೈದಿಕ, ಅವೈದಿಕ ; ಹಿಂದಿನವರು, ಈಗಿನವರು; ಭರತ ಖಂಡದವರು, ಬೇರೆಯ ದೇಶದವರು—ಮುಂತಾದ ಯಾವ ಭೇದವನ್ನೂ ಲೆಕ್ಕಕ್ಕೆ ತೆಗೆದುಕೊಳ್ಳದೆ ತತ್ತ್ವವಿಚಾರವು ಯಾರಲ್ಲಿ ಎಲ್ಲಿ ಕಂಡರೂ ಸಾರಗ್ರಹಣ ದೃಷ್ಟಿಯಿಂದ ಅದನ್ನು ಬರವಾಡಿಕೊಂಡು ವಾಚಕರ ಮುಂದಿಡುವುದು ಪತ್ರಿಕೆಯ ಗುರಿಯು." "ಮತ್ತೊಬ್ಬರ ಮನಸ್ಸಿಗೆ ನೋವನ್ನುಂಟುಮಾಡದೆ ಒಳ್ಳೆಯ ಆಶಯ ದಿಂದ ಪತ್ರಿಕೆಗೆ ತಕ್ಕ ಅಳತೆಯಲ್ಲಿ ಬರೆದು ಬರುವ ಎಲ್ಲಾ ಬರವಣಿಗೆಗಳನ್ನೂ ಸಮಯ ಬಿದ್ದ ಹಾಗೆ ಆದಷ್ಟು ಬೇಗನೆ ಪ್ರಕಾಶಗೊಳಿಸುತ್ತದೆ"—ಇದೇ ಸಂಪಾದಕರ ಗುರಿ.

ಈ ಪತ್ರಿಕೆಯ ಪ್ರತಿ ಸಂಚಿಕೆಯಲ್ಲಿಯೂ ಪ್ರಸಿದ್ಧ ಗ್ರಂಥಗಳಿಂದ ಆರಿಸಿ ತೆಗೆದ ದೇವತಾ ಸ್ತೋತ್ರ ರೂಪವಾದ ಕೆಲವು ಸಂಸ್ಕೃತ ಶ್ಲೋಕಗಳನ್ನು ಆರಂಭದಲ್ಲಿ ಕೊಡುತ್ತಾರೆ. ತತ್ತ್ವವಿಚಾರವಾದ ಲೇಖನಗಳು ಓದುಗರಿಗೆ ಬೇಸರವಾಗದಂತೆ ಚಿಕ್ಕವಾಗಿದ್ದು ಸುಲಭವಾದ ಭಾಷೆಯಲ್ಲಿ ಬರೆದಿರುತ್ತವೆ. ಹಿಂದೂ ಮತದ ವಿಚಾರಗಳು ಮಾತ್ರವಲ್ಲದೆ ಇತರ ಮತಗಳ ವಿಚಾರಗಳೂ ಆಗಾಗ ಬರೆಯಲ್ಪಡುತ್ತವೆ. ಸಂಚಿಕೆಯ ಕೊನೆಯಲ್ಲಿ ಸಂಪಾದಕರ 'ಟಪ್ಪಾಲು ಪೆಟ್ಟಿಗೆ', 'ಗ್ರಂಥಗಳ ಒರೆಗಲ್ಲು', 'ಬಿಡಿ ನುಡಿಗಳು'—ಎಂಬ ಭಾಗಗಳಿರುತ್ತವೆ.

ಪ್ರಕೃತ ಸಂಚಿಕೆಯಲ್ಲಿ (ಸಂಪುಟ ೩, ಸಂಚಿಕೆ ೮; ಏಪ್ರಿಲ್ ೧೯೩೨) ಶ್ರೀರಾಮ ಸ್ತೋತ್ರವೂ, ಶ್ರೀಮದ್ವಾದಿರಾಜತೀರ್ಥ ಶ್ರೀಪಾದಂಗಳವರ 'ಚೌಪದ'ವೂ, 'ಹುಚ್ಚರ ಸಂತೆ' ಎಂಬ ಕವಿತೆಯೂ, ಮೂರು ಬಗೆಯ ಇರವುಗಳು, ಬೌದ್ಧ ಸಿದ್ಧಾಂತದ ಮೂಲ ತತ್ತ್ವಗಳು, ಹಿಂದೂ ಪುರುಷಾರ್ಥ ಚತುಷ್ಟಯ—ಎಂಬ ಲೇಖನಗಳೂ, 'ಸುರಾಭಾಂಡ', 'ಧಾತ್ರೀಹವನ' 'ಶಾಂತಾದೇವಿಯ ಸಂಸಾರ' ಎಂಬ ತತ್ತ್ವ ಬೋಧಕ ಕಥೆಗಳೂ, ಇತರ ವಿಚಾರಗಳೂ ಇವೆ.

ಈ ಪತ್ರಿಕೆಯು ಉತ್ತಮ ವರ್ಗಕ್ಕೆ ಸೇರಿದುದು. ಇದರಲ್ಲಿ ಪ್ರಕಟವಾಗುವ ವಿಷಯಗಳು ಬೋಧಪ್ರದವಾದುವು. ಭಾಷೆಯು ಸರಳವಾಗಿಯೂ ನಿರ್ದುಷ್ಟ ವಾಗಿಯೂ ಇರುವುದು. ಮುದ್ರಣದ ತಪ್ಪುಗಳು ಬಹಳ ಕಡಿಮೆ. ಇದು ಎಲ್ಲರೂ ಓದಲು ಅರ್ಹವಾಗಿರುವುದು.

ಶ್ರೀಃ

ಕರ್ಣಾಟಕ ಸಾಹಿತ್ಯ

# ಪರಿಷತ್ಪತ್ರಿಕೆ



ಸಂಪುಟ ೧೭]　　ಆಂಗೀರಸ ಸಂ॥ ಆಷಾಢಮಾಸ　　[ಸಂಚಿಕೆ ೨

## ಕರ್ಣಾಟಕ ಕವಿಚರಿತೆಯ ಅನುಬಂಧ—(೨)

[ಪ್ರಾಕ್ತನ ವಿಮರ್ಶವಿಚಕ್ಷಣ, ರಾವ್ ಬಹಾದ್ದೂರ್
ಮ॥ ರಾ॥ ಶ್ರೀ ರಾ. ನರಸಿಂಹಾಚಾರ್ಯ, ಎಂ.ಎ. ಅವರಿಂದ]

---



---

### ರೇಚಣಭಟ್ಟ, ೧೧೪೦

ಈತನು ಬಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿನ ದೇವರನಾವದಗಿ ಎಂಬ ಗ್ರಾಮದ ಮಲ್ಲಿಕಾರ್ಜುನ ದೇವಸ್ಥಾನದಲ್ಲಿರುವ ಶಾಸನವನ್ನು[1] ಬರೆದುದಾಗಿ ಆ ಶಾಸನದ ಕೊನೆಯಲ್ಲಿರುವ—

ಕಂ ॥ ಯಮ ನಿಯಮಾಗಮ ಶಾಸ್ತ್ರ । ಕ್ರಮದಿಂ ಜಪ ಹೋಮದಿಂದನುಷ್ಠಾನದೊಳಂ ॥
ವಿಮಳ ಮತಿಯಮರ ಶಕ್ತಿಗೆ । ಸುಮಾನಸಂ ಮಂಡಳೇಶ ಸೋಮ ಮಹೇಶಂ ॥

ಆಚಾರ್ಯತ್ವಮನೊಲ್ದಿ । ತಾರ್ಕಚಂದ್ರ ಸ್ಥಾಯಿಯಾಗಿ ಶಾಸನ ಕೃತಿಯಂ ॥
ರೇಚಣಭಟ್ಟಂ ವಿರಚಿಸೆ । ಭೂ ಚಕ್ರದೊಳೆಸೆಯೆ ಬರಸಿದಂ ಶಾಸನಮಂ ॥

ಎಂಬ ಪದ್ಯಗಳಿಂದ ತಿಳಿಯುತ್ತದೆ. ಇವನು ಬ್ರಾಹ್ಮಣ ಕವಿ. ಈ ಶಾಸನವು ಚಾಳುಕ್ಯ ರಾಜನಾದ ೨ನೆಯ ಜಗದೇಕಮಲ್ಲನ ಆಳಿಕೆಯ ಎರಡನೆಯ ವರ್ಷವಾದ ಸಿದ್ಧಾರ್ಥಿ ಸಂವತ್ಸರದ ಉತ್ತರಾಯಣ ಸಂಕ್ರಾಂತಿಯಲ್ಲಿ, ಎಂದರೆ ಕ್ರಿ. ಶ. ೧೧೪೦ರಲ್ಲಿ ಹುಟ್ಟಿದುದು. ಇದರಲ್ಲಿ ಜಗದೇಕಮಲ್ಲನ ಸಾಮಂತ ಶಿಲಾರವಂಶದ ಸೋಮ ದೇವನ ಆಶ್ರಿತನಾದ ಹೆಗ್ಗಡೆ ದಾವರಾಜನು ಎಳಮೆಲುನಾಡ ನಾವಿದಿಗೆಯಲ್ಲಿ

---

1. ಈ ಶಾಸನದ ಪ್ರತಿಯನ್ನು ಶ್ರೀಮಾನ್ ಪಡಗಾನೂರು ದ್ವೈಪಾಯನಾಚಾರ್ಯ ಜಹಗೀರ್‌ದಾರರವರು ಕಳುಹಿಸಿಕೊಟ್ಟಿದ್ದಾರೆ.

ಕಟ್ಟಿಸಿದ ಮಲ್ಲಿಕಾರ್ಜುನ ದೇವಸ್ಥಾನಕ್ಕೆ ಅವನ ಪ್ರಾರ್ಥನಾನುಸಾರವಾಗಿ ಸೋಮದೇವನು ಭೂಮಿಯನ್ನು ಬಿಟ್ಟಂತೆ ಹೇಳಿದೆ. ಇದರಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

ಜಗದೇಕಮಲ್ಲ

ಚಂ || ಮಗಧನನೆತ್ತಿ ಮಾಳವನನೊತ್ತಿ ಕಳಿಂಗನ ತೂಳ್ದು ಚೋಳನಂ |
ತಗುಳ್ದರೆಯಟ್ಟಿ ಗುರ್ಜರನನಾ ಸಕಳಾವನಿಯಂ ನಿಮಿರ್ಚಿ ತಾಂ ||
ಮಿಗಿಲೆನಿಸಿರ್ದ ಭೂರಿ ನಿಜ ವಿಕ್ರಮದಿಂ ನಿಜ ಬಾಹು ವೀರ್ಯದಿಂ |
ದಗಣಿತ ಕೀರ್ತಿವೆತ್ತನೆನಿಸಲ್ ನೆಗಳ್ದಿಂ ಜಗದೇಕ ವಲ್ಲಭಂ ||

ಸೋಮದೇವ

ಚಂ || ಉದಯ ಗಿರೀಂದ್ರದಿಂ ದಿನಪನಂಬುಧಿಯಿಂದಮೃತಾಂಶು ರಾಗದಿಂ |
ದುದಯಿಸುವಂದದಿಂ ನೆಗಳ್ದ ಬಾಚಲದೇವಿಗೆ ಸಿಂಹ ಭೂಭುಜಂ ||
ಗೊದವೆ ಮನೋರಥಂ ರಿಪು ನೃಪರ್ಗೆ ಮನೋವ್ಯಥೆ ಪುಟ್ಟೆ ಪುಟ್ಟಿದಂ |
ಸದಮಳ ಕೀರ್ತಿಯಂ ತಳೆದಿಳೇಶ್ವರ ಸೋಮಯ ಮಂಡಳೇಶ್ವರಂ ||

ಮೊದಲೆ ವಿಚಾರಿಸಲ್ ಖಚರರನ್ವಯಮಂತವರಿಂದೆ ಬಂದ ವಂ |
ಶದೊಳದಟಂ ಸ್ಥಿರಂ ಕಲಿ ಸಮಸ್ತ ಗುಣಾಶ್ರಯ ಸಿಂಹ ಭೂಪ ಸಿಂ ||
ಹದ ಮರಿ ಸಿಂಹಮಂ ನೆಱಿಯೆ ಪೋಲ್ವುದು ಚೋದ್ಯಮೆ ಸೋಮ ಭೂಪನಾ |
ವಿದಿತ ವಿಶುದ್ಧ ಕೀರ್ತಿ ಕುಲ ಧರ್ಮಮನಾರ್ಜಿಸೆ ಚೋದ್ಯಮಲ್ಲವೇ ||

ಹೆರ್ಗುಂಡ ದಂಡೇಶ

ಮ || ಸ್ಥಿರನೇ ಮೇರು ಗಿರೀಂದ್ರದೊಳ್ ಸೆಣಸುವಂ ಗಂಭೀರನೇ ವಾರ್ಧಿಯೊಳ್ |
ಪುರುಡಿಪ್ಪಂ ಕಲಿಯೇ ಮದೇಭ ರಿಪುವಂ ಸೀಳ್ದಿಕ್ಕುವಂ ದಾನಿಯೇ ||
ಸುರ ಗೋವರ್ಗದ ಕಾಮಧೇನುವಿನೊಳಂ ಕೋಡಿಕ್ಕುವಂ ತಾನೆನಲ್ |
ದೊರೆಯಾರ್ಪಾರ್ಸಟಿಯಿಾ ಧರಾವಳಯದೊಳ್ ಹೆರ್ಗುಂಡ ದಂಡೇಶನೊಳ್ ||

ದಾವರಾಜ

ಕಂ || ಅವರೊಳಗೆ ಮಂತ್ರಿ ರತ್ನಂ | ಭುವನ ಪ್ರಖ್ಯಾತ ಕೀರ್ತಿ ವಿಖ್ಯಾತ ಬಲಂ |
ಶಿವ ಪಾದ ಶೇಖರಂ ಭೂ | ಭುವನ ಸ್ತುತನೆನಿಸಿ ದಾವರಾಜಂ ನೆಗಳ್ದಿಂ ||

---

## ಬಾಚ, ೧೨೧೬

ಈತನು ಕುಪ್ಪಗಡ್ಡೆಯಲ್ಲಿರುವ ಒಂದು ಶಾಸನವನ್ನು[1] ಬರೆದುದಾಗಿ ಆ ಶಾಸನದ ಕೊನೆಯಲ್ಲಿರುವ, "ಈ ಪದ್ಯವ ಬಾಚ ಬರೆದಿರ್ಪುದಕೆ" ಎಂಬ ಭಾಗದಿಂದ ತಿಳಿಯುತ್ತದೆ.

1. ಮೈಸೂರು ಶಾಸನದ ಇಲಾಖೆಯ ೧೯೨೯ನೆಯ ವರ್ಷದ ವರದಿ ; ಶಾಸನ ಸಂಖ್ಯೆ ೭೩.

ಇದರಲ್ಲಿ, ಕಾದಂಬ ರಾಜನಾದ ಕಾವದೇವರಸನ ಆಳಿಕೆಯಲ್ಲಿ ನಡೆದ ಪರಿಗೆಯ ಯುದ್ಧದಲ್ಲಿ ಮಸಣನು ಕಾದಿ ಸತ್ತನೆಂಬು ಹೇಳಿದೆ.—

ಕಂ ॥ ಬಿಟ್ಟೆಯ ಹೆಬ್ಬಾರುವನಾಳ್ । ನೆಟ್ಟನೆ ಕಲಿ ಮಸಣನಾಂತು ಭೋರನೆ ಬಿಲ್ಲಂ ॥
ಕಟ್ಟಲಗೆಯ್ದುಂ ಭಯದಿಂ । ಬಿಟ್ಟೋಡಲ್ಕಿಱಿದನಂತು ಪಲರಂ ರಣದೊಳ್ ॥

---

## ಕರಿಬಸವಾರ್ಯ[1], ಸು. ೧೮೦೦

ಈತನು ಕುಮಾರ ವಿಜಯ, ರಾಜೇಶ್ವರ ಪುರಾಣ, ಭೋಗಲಿಂಗ ಶತಕ, ಬಸವ ರಗಳೆ, ಪರಾಕು ಸ್ತೋತ್ರ, ಬಸವೇಶ್ವರನ ಪರಿವರ್ಧಿನಿ, ನೀತಿ ರತ್ನಾಕರ, ಶಿವಗಣ ಸಂಗೀತ, ಗಣ ರಗಳೆ, ಅಷ್ಟಕ, ಪದಗಳು—ಇವುಗಳನ್ನು ಬರೆದಿದ್ದಾನೆ.

ಇವನು ವೀರಶೈವ ಕವಿ. ಇವನ ತಾತ ರುದ್ರಸ್ವಾಮಿ, ತಂದೆ ನೂರೊಂದಯ್ಯ, ತಾಯಿ ಗಿರಿಜಾದೇವಿ, ಹೆಂಡತಿ ರಾಚಮ್ಮ, ಗುರು ಚೆನ್ನವೀರಸ್ವಾಮಿ, ಸ್ಥಳ ಕಲ್ಬುರ್ಗಿ ಜಿಲ್ಲೆಯ ಚಿಂಚೋಳಿ ತಾಲೂಕಿನ ಐನಿಲಯ. ಇವನಿಗೆ ಉಮಾಚಲದ ಭೋಗಲಿಂಗೇಶ್ವರನ ಅನುಗ್ರಹದಿಂದ ಕವಿತಾ ಶಕ್ತಿ ಉಂಟಾಯಿತು ಎಂದು ಹೇಳಿದೆ. ಈತನು ೯೫ ವರ್ಷ ಬದುಕಿದ್ದು ೧೮೪೦ರಲ್ಲಿ ಗತಿಸಿದನೆಂದು ಹೇಳುತ್ತಾರೆ.

ಇವನ ಗ್ರಂಥಗಳಲ್ಲಿ—

### ಕುಮಾರ ವಿಜಯ

ಇದು ವಾರ್ಧಕ ಷಟ್ಪದಿಯಲ್ಲಿ ಬರೆದಿದೆ; ಪದ್ಯ ೫೨೦೦. ಈ ಕಥೆ ಸ್ಕಾಂದ ಪುರಾಣದಿಂದ ಸಂಗೃಹೀತವಾದುದು. ಕವಿ ತೆಲುಗು ಗ್ರಂಥವನ್ನು ಕನ್ನಡಿಸಿದಂತೆ ಹೇಳುತ್ತಾನೆ. ಇದರಿಂದ ಚೆನ್ನವೀರನ ಸ್ತುತಿ ರೂಪವಾದ ಒಂದು ಪದ್ಯವನ್ನು ಉದ್ಧರಿಸಿ ಬರೆಯುತ್ತೇವೆ:—

ವಾ ॥ ಕ್ಷೀರಾಬ್ಧಿಯೊಳು ಕೃಷ್ಣ ರುಚಿ ಶೇಷನೊಳು ವಿಷವು ।
ತಾರಾಧಿಪತಿಯೊಳು ಕಳಂಕ ಶ್ವೇತಾಂಭೋಜ ।
ವಾರಿಯೊಳು ಕಂಟಕಂ ವಜ್ರದೊಳು ಕರ್ಕಶಂ ನಾರದನೊಳತಿ ಕೈತವಂ ॥
ಶಾರದಾಭ್ರದೊಳಸ್ಥಿರತ್ವ ಹೇಮಾದ್ರಿಯೊಳು ।
ಸಾರ ಶೈತ್ಯಂ ನಭೋ ವಾರಣದೊಳುನ್ಮದಂ ।
ಸೇರಿದುದೆನುತ ಪಱಿದು ಸುಯಶಂ ವಿರಾಜಿಸಿತು ಶ್ರೀ ಚೆನ್ನವೀರೇಂದ್ರನಾ ॥

ಇವನ ಇತರ ಗ್ರಂಥಗಳು ನಮಗೆ ದೊರೆತಿಲ್ಲ.

ಕವಿಯ ಮಗನಾದ ವೀರಬಸವಯ್ಯನೂ, ಕವಿಯ ಕಕ್ಕನ ಮಗನಾದ ಬಕ್ಕಪ್ಪಯ್ಯನೂ, ಇವನ ಮಗನಾದ ವೀರಸಂಗಯ್ಯನೂ ಕವಿತೆಗಳನ್ನು ರಚಿಸಿರುವರೆಂದೂ, ಅವರ ಕವಿತೆಗಳಲ್ಲಿ ಕ್ರಮವಾಗಿ ಮರುಳಸಿದ್ಧ, ಗುರುಲಿಂಗ, ಬಸವಲಿಂಗ ಎಂಬ ಮುದ್ರಿಕೆಗಳು ಇರುವುವೆಂದೂ ತಿಳಿಯುತ್ತದೆ.[2]

---

1. ಶಿವಾನುಭವ VI, ೨೩೩. 2. ಅದೇ ೨೩೮–೯.

# ಶಾಸನ ಪದ್ಯ ಮಂಜರಿ (ಅನುಬಂಧ)—(೫೧)

[ಪ್ರಾಕ್ತನ ವಿಮರ್ಶ ವಿಚಕ್ಷಣ, ರಾವ್ ಬಹಾದ್ದೂರ್
ಮ|| ರಾ|| ಶ್ರೀ ರಾ. ನರಸಿಂಹಾಚಾರ್ಯ, ಎಂ.ಎ. ಅವರಿಂದ]



## ಜೂರದ[1] ಶಾಸನ, ಸು. ೯೫೦

(ಎಪಿಗ್ರಾಫಿಯಾ ಇಂಡಿಕ, XIX, 287)

ಇದರಲ್ಲಿ, ಆನೆವೆಡೆಂಗ, ಪರಾಂಗನಾ ಪುತ್ರ ಎಂಬಿವೇ ಮೊದಲಾದ ಬಿರುದುಗಳುಳ್ಳ ರಾಷ್ಟ್ರಕೂಟ ರಾಜನಾದ ಮೂರನೆಯ ಕೃಷ್ಣರಾಜನ, ಅಥವಾ ಕನ್ನರನ ಪ್ರಶಸ್ತಿ ಇದೆ.—

ಕಂ || ಭಾರತದೊಳಿೞಿದನಿಂದ್ರನೊ|ಳೋರಾಸನ ಜಾಣನೆನಿಪ ಪಾಂಡ್ಯನ ಕುಲಮಂ |
ಬೇರಿಂದೆ ಕಿೞ್ತು ಚೋೞನ | ಬೇರಂ ಬೇರಿಂದೆ ಕಿೞ್ತನಾನೆವೆಡೆಂಗಂ ||

ಸೋಲದೆ ಪರವನಿತೆಗೆ ಕಣ್ | ಸೋಲದು ಮೊಲೆವಾಲನೂಡಿ ನಡಪಿದ ತಾಯಿಂ |
ಮೇಲೆನೆ ಬಗೆಗುಂ ನೋಡಿರೆ | ಸೋಲದು ಚಿತ್ತಂ ಪರಾಂಗನಾ ಪುತ್ರಕನಾ ||

ನೋಡಿರೆ ಪರ ವಧುಗೆ ಮನಂ | ಕೂಡದು ಸೂೞ್ಸೂೞಿಂಕೊಳೆತ್ತಿ ನಡಪಿದ ತೋಳುಂ |
ಡಾಡಿದ ಮೊಲೆ ಬಸಿಱೊಳಗಿ|ರ್ದಾಡಿದ ಚಿತ್ತಂ ಪರಾಂಗನಾ ಪುತ್ರಕನಾ ||

(ಕೊನೆಯಲ್ಲಿ, 'ಚಂದಯ್ಯಂ ಬರೆಯಿಸಿದಂ ಚಿಮ್ಮಯ್ಯಂ ಬರೆದಂ' ಎಂದಿದೆ. ಚಿಮ್ಮಯ್ಯನು ಲೇಖಕನೇ ಹೊರತು ಕವಿಯಲ್ಲ ಎಂದು ತೋರುತ್ತದೆ.)

## ಬೆಳಗಾಮಿ ಶಾಸನ, ೧೦೨೪

(ಮೈಸೂರು ಶಾಸನದ ಇಲಾಖೆಯ ೧೯೨೯ನೆಯ ವರ್ಷದ ವರದಿ ; ಶಾಸನ ಸಂಖ್ಯೆ ೬೫, ಪೂರ್ವ ಭಾಗ)

ಇದರಲ್ಲಿ, ಚಾಳುಕ್ಯ ರಾಜನಾದ ಜಗದೇಕಮಲ್ಲನು ಕುಂದರಾಜನ ವಿಜ್ಞಾಪನದಿಂದ ಕಲಿದೇವೇಶ್ವರ ಸ್ವಯಂಭು ದೇವರಿಗೋಸ್ಕರ ಶಿವಶಕ್ತಿ ಪಂಡಿತರ ಕಾಲಂ ಕರ್ಚಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.—

1. ಮಧ್ಯಮ ಇಂಡಿಯಾ ಪ್ರಾಂತದಲ್ಲಿರುವ ಮೈಹಾರ್ ಎಂಬ ರಾಷ್ಟ್ರದಲ್ಲಿ, ಜಬ್ಬಲ್‌ಪುರದ ಸಮೀಪದಲ್ಲಿರುವ ಒಂದು ಹಳ್ಳಿ.

ಜಗದೇಕಮಲ್ಲ (ಜಯಸಿಂಹ)

ಚಂ ॥ ಉಱದಿದಿರೆತ್ತಿ ಬಂದ ಮಧುರಾಂತಕ ಚೋೞನ ಸೈನ್ಯಮೆಲ್ಲಮಂ ।
ಕಿಱುದೊಱೆ ಕಟ್ಟೆಗಟ್ಟುವಿನಮುಳ್ಕುಱೆ ಕೂರಸಿಯಿಂದಡುರ್ತು ತ ॥
ತ್ತಱದಱದೊಟ್ಟೆ ಕಂಚಿ ಗುಱಯಪ್ಪಿನೆಗಂ ಬೆದಱಟ್ಟೆ ಚೋೞನಂ ।
ಮೆರೆದನುದಗ್ರ ಬಾಹು ಬಳಮಂ ಜಯಸಿಂಹ ಮಹಾ ಮಹೀಭುಜಂ ॥

---

## ಹಳೆಯಬೀಡು ಶಾಸನ, ೧೦೬೨

(ಮೈಸೂರು ಶಾಸನದ ಇಲಾಖೆಯ ೧೯೨೧ನೆಯ ವರ್ಷದ ವರದಿ ; ಶಾಸನ ಸಂಖ್ಯೆ ೧೨)

ಇದರಲ್ಲಿ, ಹೊಯ್ಸಳ ರಾಜನಾದ ನೃಪಕಾಮನ ಮಗ ವಿನಯಾದಿತ್ಯನು ದೋರ ಸಮುದ್ರದ ಕೆರೆಗೆ ತೂಬನಿಕ್ಕಿಸಿ ಬಿತ್ತುವಟ್ಟವನ್ನು ಬಿಟ್ಟಂತೆ ಹೇಳಿದೆ.—

ಕಂ ॥ ಅನುಪಮನೆನಿಸಿದ ನೃಪ ಕಾಮನಾಮವೊಯ್ಸಳನ ನಂದನಂ ಜಗದಧಿಕಂ ।
ವಿನಯಾದಿತ್ಯಂ ಪೊಯ್ಸಳನೆನಿಸಿ ಚಿರಂ ಗಂಗವಾಡಿಯಂ ಪಾಳಿಸುತುಂ ॥

ಮ ॥ ಅದಟಂ ದೋರಸಮುದ್ರದೊಳ್ ಸಮುದಿತೋದ್ಯಚ್ಛ್ರೀ ಸಮಾಲಿಂಗಿತಾ ।
ಭ್ಯುದಯಂ ಸತ್ಸುಖ ಸಂಕಥಾ ಬಿನದದಿಂ ರಾಜ್ಯಂ ಗೆಯುತ್ತಿರ್ದು ಜೀ ।
ವ ದಯೋಪೇತನುದಗ್ರ ವೈರಿ ಬಳ ನಿರ್ಘಾತಂ ವಿಶೇಷ ಪ್ರಭಾ ।
ಸ್ಪದನೀ ತೂಂಬನುದಾತ್ತನಿಕ್ಕಿಸಿದನಾಚಂದ್ರಾರ್ಕ ತಾರಂಬರಂ ॥

ಕಂ ॥ ರಕ್ಕಸವೊಯ್ಸಳನುಗ್ರ ಚಳಕ್ಕಂ ಯಾದವ ಕುಳಾಂಬುಜಾರ್ಕಂ ಮುದದಿಂ ।
ದಿಕ್ಕಿಸಿದನೆಸೆವಿನಂ ಮೇಲಕ್ಕಮನೀ ಕೆಱೆಗೆ ರಾಜಮಾಂಧಾತ ನೃಪಂ ॥

---

## ಲಕ್ಷ್ಮೇಶ್ವರದ ಶಾಸನ[1], ೧೦೭೪

ಇದರಲ್ಲಿ, ಚಾಳುಕ್ಯ ರಾಜನಾದ ಭುವನೈಕಮಲ್ಲನ (೧೦೬೮–೧೦೭೬) ಮಹಾ ಸಾಮಂತ ಜಯಕೇಶಿ ಲಕ್ಷ್ಮೇಶ್ವರದ ಪೆರ್ಮಾಡಿ ಬಸದಿಗೆ ಕೆಲವು ತೆರೆಗಳನ್ನು ಬಿಟ್ಟಂತೆ ಹೇಳಿದೆ.—

ಪುಲಿಗೆರೆ (ಪುರಿಕರ)

ಶಾ ॥ ನಾನಾ ದ್ವೀಪದೊಳಗ್ರಿಮಂ ನೆಗಲ್ದ ಜಂಬೂ ದ್ವೀಪಮಾ ದ್ವೀಪದೊಳ್ ।
ನಾನಾ ಕ್ಷೇತ್ರದೊಳುತ್ತಮಂ ಭರತಮಾ ಭೂಭಾಗದೊಳ್ ಕುಂತಲಂ ॥
ತಾನತ್ಯೂರ್ಜಿತಮಲ್ಲಿ ಭೋಗಿ ಜನ ರಮ್ಯಂ ಬೆಳ್ವೊಲಂ ತನ್ಮುಖ ।
ಸ್ಥಾನಂ ಶೋಭಿಕುಮಾಗಡುಂ ಪುರಿಕರ ಶ್ರೀರಾಜಧಾನ್ಯಾಹ್ವಯಂ ॥

---

1. ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, XIV, ೨೮೧. ಅಚ್ಚಿಗೆ ಕೊಟ್ಟ ಪ್ರತಿಯಲ್ಲಿ ಕೆಲವು ತಪ್ಪುಗಳು ಬಿದ್ದಿವೆ:—'ಕುಂತಲಂ' ಎಂಬುದಕ್ಕೆ 'ಕುಂತಮಂ', 'ಚಂದಿಕಬ್ಬೆಯುಂ' ಎಂಬುದಕ್ಕೆ 'ಚಂದಿಕಬ್ಬೆ', 'ವಿದ್ವಿಣ್ನೃಪತಿ' ಎಂಬುದಕ್ಕೆ 'ವಿದ್ವದ್ ನೃಪತಿ', 'ದಳಿಪಿಲ್ಲದೆ' ಎಂಬುದಕ್ಕೆ 'ದಳಿಬಲ್ಲದೆ', 'ಗಳಗಳನೆ' ಎಂಬುದಕ್ಕೆ 'ಗಳ್‌ಗಳನೆ'.

ಜಯಕೇಶಿಯ ತಂದೆ ಇಂದ್ರಕೇಶಿ

ಕಂ || ಪುರಿಕರ ಪುರವರ ಪರಮೇ।ಶ್ವರನುಜ್ವಳ ಕೀರ್ತಿ ಸಗರ ಮಾರ್ತಾಂಡಂ ಕೇ ।
ಸರಿ ಕೇತು ರಾಷ್ಟ್ರಕೂಟಕ । ವರನಾ ತ್ರಿಶತಕ್ಕಮಿಂದ್ರಕೇಶಿ ನರೇಂದ್ರಂ ||

ಇವನ ಹೆಂಡತಿ ಚಂದಿಕಬ್ಬೆ

ಕಂ || ಆತನ ಪಿರಿಯರಸಿ ಗುಣಾ।ನ್ವಿತೆ ಪತಿವ್ರತೆ ಚರಿತ್ರವತಿ ವಿಶದ ಗುಣಾ ।
ಖ್ಯಾತವತಿ ಸತ್ಯವತಿ ಧಾ।ತ್ರೀತಳದೊಳ್ ಚಂದಿಕಬ್ಬೆಯಂ ಪೊಗೞದರಾರ್ ||

ಜಯಕೇಶಿ

ಕಂ || ಶ್ರೀ ರಮಣಿಗೆ ಸಮರ ಜಯ । ಶ್ರೀ ರಮಣಿಗೆ ತಾರ ಹಾರ ಶಶಿ ವಿಶದ ಯಶಃ ।
ಶ್ರೀ ರಮಣಿಗೆ ಸಕಲ ವಚಃ । ಶ್ರೀ ರಮಣಿಗೆ ರಮಣನಲ್ತೆ ಜಯಕೇಶಿ ನೃಪಂ ||

ಅಂತೆನಿಸಿದ ಜಯಲಕ್ಷ್ಮೀ । ಕಾಂತಂ ದುಷ್ಪ್ರಾಪ್ಯ ಚಯಕಿದಾಸೀಂತನ ರೇ ।
ವಂತಂ ವಿದ್ವಿಣ್ಣೃಪತಿ ಕೃ।ತಾಂತಂ ಸುಖದಿಂದಮಿರ್ದ್ದ ಜಯಕೇಶಿ ನೃಪಂ ||

(ಪೆರ್ಮಾಡಿ ಬಸದಿಗೆ ತೆರೆಗಳಂ ಬಿಟ್ಟಂ)

ಫಲಶ್ರುತಿ

ಕಂ || ತಿಳಿದಿನಿತು ತೆಱೆಯುಮಂ ಕಾ।ದಳಿಪಿಲ್ಲದೆ ನೆಗೞ್ದರೆಯ್ದುವರ್ ಸುರ ಪುರಮಂ ।
ಪೞಿಗಳ್ಕದೞಿವ ಪಾತಕ।ರೞಿವರ್ ಗೞ ಗೞನೆ ನರಕ ಗತಿಗನವರತಂ ||

---

## ಬೆಳಗಾಮಿ ಶಾಸನ, ೧೦೮೧

(ಮೈಸೂರು ಶಾಸನದ ಇಲಾಖೆಯ ೧೯೨೯ನೆಯ ವರ್ಷದ ವರದಿ;
ಶಾಸನ ಸಂಖ್ಯೆ ೬೫, ಉತ್ತರ ಭಾಗ)

ಇದರಲ್ಲಿ, ಚಾಳುಕ್ಯ ರಾಜನಾದ ತ್ರಿಭುವನಮಲ್ಲನ ಆಳಿಕೆಯಲ್ಲಿ ಅವನ ತಮ್ಮ ಪಲ್ಲವ ಪೆರ್ಮಾನಡಿ ಜಯಸಿಂಹನ ಮಹಾಪ್ರಧಾನ ತಂಬರಸನು ಕಲಿದೇವೇಶ್ವರ ಸ್ವಯಂಭು ದೇವರಿಗಾಗಿ ಶಿವಶಕ್ತಿ ಪಂಡಿತರ ಶಿಷ್ಯ ರುದ್ರಶಕ್ತಿ ಪಂಡಿತರಿಗೆ ಭೂಮಿಯನ್ನು ಕೊಟ್ಟಂತೆ ಹೇಳಿದೆ.—

ತ್ರೈಲೋಕ್ಯಮಲ್ಲ

ಕಂ || ಎನಿಸಿದ ಜಯಸಿಂಹ ಮಹೀ।ಶನ ತನಯಂ ನಿಜ ಭುಜೋಗ್ರ ಕೌಕ್ಷೇಯಕ ವಾ।
ರಿ ನಿಮಜ್ಜದಖಿಳ ಸಮದಾ । ರಿ ನೃಪಂ ತ್ರೈಲೋಕ್ಯಮಲ್ಲನಾಹವಮಲ್ಲಂ ||

ತ್ರಿಭುವನಮಲ್ಲ

ಕಂ || ಅವರೊಳ್ ನೆಗೞ್ದಂ ಹರಿಮೂ।ರ್ತಿ ವಿಧೂಜ್ವಳ ಕೀರ್ತಿ ಚಂಡದೋರ್ವಿಕ್ರಮಶಾ ।
ಳಿ ವಿರೋಧಿ ಶೈಳ ದಂಭೋ।ಳಿ ವಿಕ್ರಮಾದಿತ್ಯ ದೇವನದಟರ ದೇವಂ ||

ಮ || ಕದಪಂ ಪೊಯ್ಸಂದುದರ್ಕೇಗೊಳಿಸಿ ತಿವುಳನಂ ಗಂಡುದೋಱಲ್ಕೆ ನೊತ್ತಂ ।
ಬದೆ ಮೂಗಿಟ್ಟೇಱದಂ ಮಾಳವನನಿರದೆ ಸಜ್ಜಿಂಬಿನಂ ಮೆಟ್ಟಿ ಸೀಳ್ದ ।
ಕ್ಕಿದನಂಗಾಧೀಶನಂ ರಾಯರನೆ ಬದಿಮೊಲಂಗೊಂಡು ತಂದೞ್ತಿಯಿಂ ದೀ ।
ವದ ರಾಯವರ್ಮಾಡಿ ಕಾರಾ ಗೃಹದೊಳಿರಿಸಿದಂ ವಿಕ್ರಮಾದಿತ್ಯ ದೇವಂ ||

ಶಾ ॥ ಧಾರಾ ನಾಥ ಮಹಾ ಭಯ ಜ್ವರಕರಂ ಚೋಳೋಗ್ರ ಕಾಳಾಂತಕಂ ।
ಸೌರಾಷ್ಟ್ರಾಂಗ ಕಳಿಂಗ ವಂಗ ಮಗಧಾಂಧ್ರಾವಂತಿ ಪಾಂಚಾಳ ನಾ ।
ನಾ ರಾಜಾವಳಿ ಮೌಳಿ ಲಾಳಿತ ಪದಂ ಪೂರ್ವಾಪರಾಂಭೋಧಿ ವೇ ।
ಳಾರಾಮಾಂತರ ಶೈಳ ಕೇಳಿ ವಿಭವಂ ಚಾಳುಕ್ಯ ದಿಕ್ಕುಂಜರಂ ॥

ಕಂ ॥ ಕರಿಯರೆನಿಪ ಪರ ಮಹೀಪರ ಬಿರುದಿನ ಗರಿಮುಮುರಗು ಕರಗುವ ತೆಱದಿಂ ।
ದಿರದೆ ಕ ಗುವಿನಮುರಿವರಿ । ವರಿದುದು ತೇಜಂ ಪ್ರತಾಪ ಕಾಳಾನಳನಾ ॥

ಅಣಿಯರ ಬಿರುದಂ ಚೋಳಂ । ಗಣಿಕಾ ಸಂದೋಹದಂತೆ ಮುಡಿಯಂ ಪೊತ್ತಂ ।
ಕಣಯಮನಿಕ್ಕುವನೆಂದೊಡೆ । ಪೊಣರ್ವದಟರುಮೊಳರೆ ರಾಯ ಕೋಳಾಹಳನೊಳ್ ॥

ಇವನ ತಮ್ಮ ಜಯಸಿಂಹ

ಮ ॥ ವಿನಯಕ್ಕಾಸ್ಪದಮಾದ ವಿಕ್ರಮ ನೊಳಂಬಂ ವಿಕ್ರಮಾದಿತ್ಯ ದೇ ।
ವನ ಚಿತ್ತಕ್ಕವಳಂಬಮಾದ ಕೆಳೆಯಂ ಚಾಳುಕ್ಯ ರಾಮ ಕ್ಷಿತೀ ।
ಶನ ಕೊಂಡಾಟದ ಕೂರ್ಮೆವೆತ್ತಣುಗದಮ್ಮಂ ರಾಯಕಂದರ್ಪ ದೇ ।
ವನ ಸಮ್ಮೋಹನ ಪುಷ್ಪ ಬಾಣಮೆನಲಿನ್ನೇವಣ್ಣಿಪಂ ಬಣ್ಣಿಪಂ ॥

ತಂಬರಸ

ಮ ॥ ಸ್ರ ॥ ಧುರದೊಳ್ ಮಾಱಾಂತ ಚೋಳಾವನಿಪನನದಟಿಂ ಗೆಲ್ದವಂ ಸಂದ ಕಾಂಚೀ ।
ಪುರಮಂ ಕೋಪಾಗ್ನಿಯಿಂ ಸುಟ್ಟವನತುಳ ಬಳೋಪೇತ ವೀರಾರಿ ಧಾತ್ರೀ ।
ಶ್ವರರಂ ದೋರ್ಗರ್ವದಿಂ ಬಂಧನ ಪದವಿಯೊಳುಯ್ದಿಟ್ಟವಂ ಮಾಳನಾಥೀ ।
ಶ್ವರನಂ ಬೆಂಕೊಂಡವಂ ಕೇರಳನನಲೆದವಂ ತಂಬ ದಂಡಾಧಿನಾಥಂ ॥

ಮಲೆಯೇಱಿಂ ಕೊಂಬು ಕೊಂಬೇಱಿ ಲೆಗಳನಲೆದುದ್ವೃತ್ತ ವಿದ್ವಿಷ್ಟ ಭೂಭೃ ।
ತ್ಕುಳಮಂ ಶೌರ್ಯಾವಳಂಬಂ ವಿಜಿತ ರಿಪು ಬಳಂ ತಂಬ ದಂಡಾಧಿನಾಥಂ ।
ತಲೆಯಂ ಸೆಂಡಾಡುವಂ ಕಂಡಮನಿರದೆ ಮರುಳ್ಗಳ್ಗೆ ಕೊಟ್ಟಿಕ್ಕುವಂ ದೋ ।
ರ್ವಳದಿಂದಾಟಂದು ಮಾಱಾಂಪದಟರೊಳರೆ ಪೇೞಿ್ವಳವಂಗಂ ಜವಂಗಂ ॥

ಉದಧಿ ವ್ಯಾವೇಷ್ಟಿತೋರ್ವೀತಳಮನೆಮಗೆ ನಿಷ್ಕಂಟಕಂ ಮಾಡಿ ಮತ್ತಂ ।
ಕದನ ಕ್ರೀಡಾರ್ಥಿಯಂ ಸೇವುಣನನವನತಂ ಮಾಡಿ ಚೋಳೇಶ ರಾಜ್ಯಾ ।
ಸ್ಪದಮಂ ದೋರ್ಗರ್ವದಿಂ ಸಾಧಿಸಿ ಪಡೆಯಲೊಡರ್ಚಿಟ್ಟಪಂ ಧಾತ್ರಿಗೆಲ್ಲಂ ।
ಪದಪಿಂದೊತ್ತಿತ್ತಪಂ ಕೇವಳಮೆ ಜನ ನುತಂ ತಂಬನೆಂಬಂ ನೊಳಂಬಂ ॥

ಖಸ ಕರ್ಣಾಟಾಂಧ್ರ ವಂಗ ದ್ರವಿಳ ಮಗಧ ನೇಪಾಳ ಕಾಳಿಂಗ ಪಾಂಚಾ ।
ಳ ಸುರಾಷ್ಟ್ರಾನೇಕ ದೇಶಾವನಿಪರನಲೆದಾಟಂದು ಬೆಂಕೊಂಡು ಕೀರ್ತಿ ।
ಪ್ರಸರಂ ದಿಕ್ಚಕ್ರದೊಳ್ ವರ್ತಿಸೆ ರಿಪು ಗಜ ವಾರಾಂಗನಾಸ್ವಂಗಳೊಳ್ ನಿ ।
ಪ್ಪೊಸವಂ ತಂದಿತ್ತನಾಳ್ದಂಗಖಿಳ ಜನ ನುತಂ ತಂಬ ದಂಡಾಧಿನಾಥಂ ॥

ಕಂ ॥ ತಂಬಂ ನಿರ್ಜಿತ ವೈರಿ ಕದಂಬಂ ಕವಿ ಗಮಕ ವಾದಿ ನಳಿನೀ ದಿನಕೃ ।
ದ್ಬಿಂಬಂ ತರ್ಪಿತ ಬುಧ ನಿಕುರುಂಬಂ ಚಾಳುಕ್ಯ ರಾಜ್ಯ ಮೂಳ ಸ್ತಂಭಂ ॥

### ಫಲಸ್ತುತಿ

ಕಂ || ಈ ದತ್ತಿಯನನುನಯದಿಂ । ಕಾದ ಮಹಾ ಪುರುಷನಮಳ ಗಂಗಾ ನದಿಯೊಳ್ ।
ವೇದ ವಿದುಗಳ್ಗೆ ಸಾಸಿರ । ಗೋದಾನಮನಿತ್ತುದೊಂದು ಪದಮಂ ಪಡೆಗುಂ ||

---

## ಲಕ್ಷ್ಮೇಶ್ವರದ ಶಾಸನ[1], ೧೧೬೬

ಇದರಲ್ಲಿ, ಕಲಚುರ್ಯ ರಾಜನಾದ ಬಿಜ್ಜಳನ ಆಳಿಕೆಯಲ್ಲಿ ಅವನ ದಂಡನಾಯಕ ಶ್ರೀಧರನು ಪುಲಿಗೆರೆಯಲ್ಲಿ ಬ್ರಹ್ಮಪುರಿಯನ್ನು ಕಟ್ಟಿಸಿ ಬ್ರಾಹ್ಮಣರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.—

### ಬಿಜ್ಜಳ

ಕಂ || ಶ್ರೀಮತ್ಕಳಚುರ್ಯ ಕುಳೋ।ದ್ದಾಮಂ ನೆಗೞ್ದಿಂ ಧರಿತ್ರಿಯೊಳ್ ಜಯಲಕ್ಷ್ಮೀ ।
ಧಾಮಂ ಪಾಳಿತ ನಿಬುಧ।ಸ್ತೋಮಂ ಬಿಜ್ಜಳ ನೃಪಾಳನಹಿತ ಕರಾಳಂ ||

ಮ || ಧರೆಯಂ ಪೀಡಿಸಿ ಸೊರ್ಕಿದಕ್ಕುದಲೆವಾಯ್ವುದ್ವೃತ್ತರಂ ವೈರಿ ಭೂ ।
ಪರನುನ್ಮೂಳಿಸಿದಂ ಸ್ವ ಬಾಹು ಬಳದಿಂ ವಿಶ್ವಂಭರಾ ಭಾರಮಂ ||
ಪಿರಿದುಂ ತಾಳ್ದಿದನಾತ್ಮ ಬಾಹುತಳದೊಳ್ ಮಿಕ್ಕನ್ಯ ಭೂಪಾಳರೊಳ್ ।
ದೊರೆಯೇ ಬಾಷ್ಪ ವಿಕೀರ್ಣ ವೈರಿ ವನಿತಾ ದೃಕ್ಕಜ್ಜಳಂ ಬಿಜ್ಜಳಂ ||

ಚಂ || ಪರ ನೃಪರಂಜಿ ತೆತ್ತ ಧನಮುಂ ವನಿತಾ ಜನಮುಂ ವಿಭೂಷಣಾಂ ।
ಬರ ಗಜ ವಾಜಿ ಸಂಕುಳಮುಮಲ್ಲದೆ ಮಿಕ್ಕ ನೃಪಾಳರಂತಿರ ||
ಜ್ಜರ ಪಡೆದಿತ್ತ ರಾಜ್ಯ ವಿಭವಕ್ಕನುರಾಗದ ಮುಯ್ಯನಾಂಪನೇ ।
ಸ್ಫುರಿತತರ ಪ್ರತಾಪ ನಿಧಿ ಭಾಪ್ಪುರೆ ಬಿಜ್ಜಳ ಭೂಮಿಪಾಳಕಂ ||

ಧರೆಯೊಳ್ ವಿಕ್ರಮ ಚಕ್ರವರ್ತಿಯೆನಿಸಿರ್ದಾ ಬಿಜ್ಜಳೋರ್ವೀಶ ಭೇ ।
ಕರ ಭೇರೀ ರವಮೊರ್ಮೊದಲ್ ನೆಗೞೆ ಕೇಳ್ದಾ ಗೂರ್ಜರಂ ಕೂಡೆ ಜ||
ರ್ಜರನಾದಂ ಕುಸಿದಂ ಖಸಂ ನಡುಗಿ ಕಂಡಂ ಪಾಂಡ್ಯನಂದಂಜಿ ಬ ।
ರ್ಬರನುರ್ಬಂ ಬಿಸುಟೋಡಿದಂ ಭಯದೆ ಪೊಕ್ಕಂ ಮಾಳವಂ ಮಾಳವಂ ||

### ಅಗಸ್ತ್ಯಮುನಿ

ಕಂ || ಕಮಳಭವಾನ್ವಯದೊಳಗು।ತ್ತಮನಖಿಳ ಜಗದ್ವಿನೂತನೆಸೆದಿರ್ದನಗ ।
ಸ್ತ್ಯ ಮುನೀಂದ್ರಂ ಸುರ ನುತನನು।ಪಮಿತ ಮಹಾ ಮಹಿಮನಖಿಳ ಮುನಿಜನ ಸೇವ್ಯಂ ||

---

1. ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, XIV, 285.—ಅಚ್ಚಿಗೆ ಕೊಟ್ಟ ಪ್ರತಿಯಲ್ಲಿ ಕೆಲವು ತಪ್ಪುಗಳು ಬಿದ್ದಿವೆ:—'ವನಧಿವ್ಯಾವೃತ' ಎಂಬುದಕ್ಕೆ 'ವನ ದಿವ್ಯಾವೃತ', 'ಪೀಡಿಸಿ' ಎಂಬುದಕ್ಕೆ 'ಪಿಡಿಗಿ', 'ಪರನುನ್ಮೂಳಿಸಿದಂ' ಎಂಬುದಕ್ಕೆ 'ಪರನನ್ಮಾಳಿಸಿತಂ', 'ನೆಗಳೆಕೇಳ್ದಾ' ಎಂಬುದಕ್ಕೆ 'ನೆಗಳಿಗೆಳ್ದಾ', 'ಖಸಂ' ಎಂಬುದಕ್ಕೆ 'ಬಸಂ', 'ಬಿಸುಟೋಡಿದಂ' ಎಂಬುದಕ್ಕೆ 'ಬಿಸುದಾಡಿದಂ', 'ಚತುರಾಘಾಟ' ಎಂಬುದಕ್ಕೆ 'ಚತುರಾಪೂಟ', 'ಫಲಿಸಾಸ' ಎಂಬುದಕ್ಕೆ 'ಪುಲಿಸಾಸ.

## ಶ್ರೀಧರನ ತಾತ ದಾಸಿರಾಜ

ಎನೆ ನೆಗೞ್ದಗಸ್ತ್ಯ ಗೋತ್ರದೊ । ಳನುಪಮಿತಂ ದಾಸಿರಾಜ ದಂಡಾಧೀಶಂ ।
ಜನತಾ ಸಂಸ್ತುತ್ಯಂ ಖ್ಯಾ। ತನಾದನಾಶ್ರಿತ ಸಮಾಜ ದಿವಿಜ ಮಹೀಜಂ ॥

## ಇವನ ಹೆಂಡತಿ ದುಗ್ಗಣವ್ವೆ

ಆತನ ಕುಲವಧು ಗುಣ ಗಣ । ನೂತನ ಮಣಿ ಭೂಷಣಾವಳಂಬಿನಿ ಭುವನ ।
ಖ್ಯಾತ ಪತಿವ್ರತೆಯಾದಳ್ । ಭೂತಳದೊಳ್ ದುಗ್ಗಣವ್ವೆಯೆಂಬಳ್ ಪೆಸರಿಂ ॥

## ಶ್ರೀಧರನ ತಂದೆ ಹರಿಯಣಯ್ಯ

ಕಂ॥ ಅವರ್ಗೆ ಸುತಂ ಪುಟ್ಟಿದನು।ತ್ಸವದಿಂದಂ ಹರಿಯಣಯ್ಯ ದಂಡಾಧೀಶಂ ।
ಭುವನ ಜನ ಸ್ತುತನಾಶ್ರಿತ । ನಿವಹ ಮನೋರಥ ಫಳ ಪ್ರದಾಮರ ಭೂಜಂ ॥

ಜಗದೊಳ್ ಶ್ರೀಕರಣೈಕಾ।ಗ್ರಗಣ್ಯನನುಪಮಿತ ಪುಣ್ಯನೆಸೆದಿರ್ದಂ ಚಾ ।
ರು ಗುಣಾಭಿರಾಮನಂಭೋ।ಧಿ ಗಭೀರಂ ಹರಿಯಣಯ್ಯ ದಂಡಾಧೀಶಂ ॥

## ಇವನ ಹೆಂಡತಿ ಮುದ್ದಿಕವ್ವೆ

ಆತನ ಕುಲವಧು ಭೂಧರ । ಜಾತೆಗೆ ಸೀತೆಗೆ ಪಯೋಧಿ ಜಾತೆಗೆ ಪಂಕೇ ।
ಜಾತಾಸ್ಯ ಜಾತೆಗೆಣೆಯೆನೆ । ಭೂತಳದೊಳ್ ಮುದ್ದಿಕವ್ವೆ ಪೆಸರ್ವಡೆದಿರ್ದಳ್ ॥

## ಶ್ರೀಧರನ ಅಣ್ಣ ಮಾಚಿ ದಂಡಾಧಿಪ

ಮ ॥ ಸ್ರ ॥ ಕ್ಷಿತಿಯೊಳ್ ವಿಖ್ಯಾತನಾದಂ ಸಕಳ ಗುಣಗಣಾಳಂಕೃತಂ ಬಿಜ್ಜಳೋರ್ವೀ ।
ಪತಿ ಪಾದಾಂಭೋಜ ಭೃಂಗಂ ಕುಮುದ ಧವಳ ಚಂಚದ್ಯಶೋವಲ್ಲರೀ ವೇ ॥
ಲ್ಲಿತ ದಿಗ್ಭಾಳಂ ಸುರೇಂದ್ರಾವನಿಧರ ನಿಭ ಧೈರ್ಯಂ ಬೃಹತ್ತ್ಯಾಗ ಸಂತ ।
ರ್ಪಿತ ದೀನಾನಾಥ ಸಾರ್ಥಂ ನಿರುಪಮ ಮಹಿಮಂ ಮಾಚಿ ದಂಡಾಧಿನಾಥಂ ॥

ಕಂ ॥ ಈ ಚತುರುದಧಿ ಪರೀತ ಧ।ರಾ ಚಕ್ರಂ ಪದಪಿನಿಂದೆ ಬಣ್ಣಿಸೆ ನೆಗೞ್ದಂ ।
ಮಾಚಿ ನೃಪಂ ಶಿಬಿ ರವಿಜ ದ।ಧೀಚಿಗಳಿಂದಧಿಕವೆನಿಪ ವಿತರಣ ಗುಣದಿಂ ॥

## ಶ್ರೀಧರ ದಂಡನಾಥ

ಕಂ ॥ ಆ ರಾಜ ಶಿಖಾಮಣಿ ಪದ । ನೀರಜ ಭೃಂಗಂ ವಿನೂತ ವಿಜಯೋತ್ತುಂಗಂ ।
ಧಾರಿಣಿಯೊಳ್ ನೆಗೞ್ದಿರ್ದಂ । ಧೀರಂ ಶ್ರೀಧರ ಚಮೂಪನಂಗಜ ರೂಪಂ ॥

ಮ ॥ ಸ್ರ ॥ ಚರಿತಂ ಗಾಂಗೇಯನೊಳ್ ಪಾಸಟಿ ಚತುರತೆ ವಾಕ್ಕಾಮಿನೀ ನಾಥನೊಳ್ ತಾಂ ।
ಸರಿ ಗಾಂಭೀರ್ಯಂ ಪಯೋರಾಶಿಯೊಳೆಣೆ ನಿಜ ವಿಕ್ರಾಂತಮಿಂದ್ರಾರಿಯೊಳ್ ಪೋ ॥
ದೊರೆ ತನ್ನೊಂದಾರ್ಪು ವಿದ್ಯಾಧರ ಪತಿಯೊಳಣಂ ಪಾಟಿಯೆಂದೆಂದು ವಿಶ್ವಂ ।
ಭರೆಯೆಲ್ಲಂ ಬಣ್ಣಿಕುಂ ಶ್ರೀಧರನನನುದಿನಂ ನಿರ್ಭರಾನಂದದಿಂದಂ ॥

ಕಂ || ಕಲಿ ಮಳ ಕಳಂಕ ಪಂಕಮು|ನಲಿವಂ ತನ್ನೊಂದು ಚಾರು ಚರಿತ ಸುಧಾ ನಿ |
ರ್ಮಲ ಜಳದಿಂದಮೆನಲ್ ಭೂ | ತಲದೊಳ್ ಶ್ರೀಧರನ ಸರಿಗೆ ವರ್ಷವನಾವಂ ||

ಅವರಿವರುವರೊಳ್ಳಿದರೆಂ|ಬ ವಿವಾದಮದೇಕೆ ಸಕಳ ಗುಣ ಗಣದಿಂದಂ |
ಭುವನತ್ರಯದೊಳಗೊಳ್ಳಿದ|ನಿವನೊರ್ವಂ ಶ್ರೀಧರಂ ಚಮೂಪತಿ ತಿಳಕಂ ||

## ಹಿಪ್ಪರಿಗೆ ಶಾಸನ, ೧೧೯೨

ಈ ಶಾಸನವು[1] ಬಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿನ ಹಿಪ್ಪರಿಗೆ ಎಂಬ ಗ್ರಾಮದ ಕಲ್ಲಿನಾಥ ದೇವಸ್ಥಾನದಲ್ಲಿದೆ. ಇದರಲ್ಲಿ, ಸೇವುಣ ರಾಜನಾದ ಭಿಲ್ಲಮನ ಆಳಿಕೆಯಲ್ಲಿ ಸರ್ವಾಧಿಕಾರಿ ಮಲ್ಲೆಯ ಸಾಹಣಿಯೂ ಮಹಾ ಮಂಡಲೇಶ್ವರ ಗೋಣರಸ ಮುಂತಾದವರೂ ಕಲ್ಲಿನಾಥ ದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ:

ಕುಂತಳ ದೇಶ

ಕಂ || ಅಂತೆನಿಸಿದಮರ ಗಿರಿಯಿಂ|ದಂ ತೆಂಕಣ ದೆಸೆಯೊಳೆಸೆವ ಭಾರತ ವರ್ಷಾ |
ಭ್ಯಂತರದೊಳಿಳಾಕಾಂತೆಯ | ಕುಂತಳಮೆನೆ ಚೆಲ್ವನಾಯ್ತು ಕುಂತಳ ದೇಶಂ ||

ಹಿಪ್ಪರಿಗೆ

ಆ ಪುರವರದುದ್ಯಾನಂ | ಶ್ರೀ ಪದದಿಂ ಮೆಱೆವ ದಿವಿಜ ಭವನದೆ ಜಂಬೂ |
ದ್ವೀಪಕ್ಕೆ ಶೋಭೆಯಿತ್ತಪು|ದಾ ಪೊಱಲ್ತಂ ದೇವ ಭೋಗಿ ಮುನಿ ಸಂಕುಳದಿಂ ||

## ಕುಪ್ಪಗಡ್ಡೆ ವೀರಗಲ್ಲು, ೧೨೫೪

(ಮೈಸೂರು ಶಾಸನದ ಇಲಾಖೆಯ ೧೯೨೯ನೆಯ ವರ್ಷದ ವರದಿ; ಶಾಸನ ಸಂಖ್ಯೆ ೭೨)

ಇದರಲ್ಲಿ, ಬೀರದೇವರಸನಿಗೂ ಬಿದಿರೂರ ಈಡುಸಾಮಂತನಿಗೂ ನಡೆದ ಯುದ್ಧದಲ್ಲಿ ಮಾಳಿಗನು ಪರಾಕ್ರಮವನ್ನು ತೋರಿಸಿ ಸುರ ಲೋಕ ಪ್ರಾಪ್ತನಾದ ನೆಂದು ಹೇಳಿದೆ.—

ಚಂ || ಬಿರುದರ ಬಿಂಕಮಂ ಮುಱಿದು ಬಿಂಕದ ಗಂಡರನೊಕ್ಕಲಿಕ್ಕಿ ಸಂ |
ಗರದೆಡೆಯಲ್ಲಿ ಮಾರ್ಮಲೆವ ವೈರಿ ಶಿರಂಗಳ ಸೆಂಡನಾಡಿ ತ |
ತ್ತುರಗ ಖುರ ಪ್ರಘಾತದೆಡೆ ತೂಳ್ದು ತೆರಳ್ಚಿದನಂದು ಮೆಚ್ಚುತುಂ |
ಧರೆ ಪೊಗೞಲ್ಕೆ ವೀರ ವರನಗ್ಗದ ಮಾಳಿಗನಾಜ ರಂಗದೊಳ್ ||

1. ಇದರ ಪ್ರತಿಯನ್ನು ಶ್ರೀಮಾನ್ ಪಡಗಾನೂರು ದ್ವೈಪಾಯನಾಚಾರ್ಯ ಜಹಗೀರ್‌ದಾರರವರ ಕಳುಹಿಸಿಕೊಟ್ಟಿದ್ದಾರೆ.

# ನಿಡುಗಲ್ಲು ಅರಸುಗಳ ವಂಶಾವಳಿ*

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರುಷಂಗಳು ೧೦೩೮ ವಿಜಯ ಸಂವತ್ಸರ....ಲ್ಲು ಉತ್ತರ ದೇಶದಲ್ಲಿ ವಿಜಯಾಪುರವೆಂಬ........ದಲ್ಲಿ ಹರತಿಸಾರವಾಡ ಎಂಬ ..... ..............................

...................................................... ಸಂಧ್ಯಾವಂದನೆಯ ಕಾಲದಲ್ಲಿ ಅರ್ಘ್ಯವನ್ನು ಸೂರ್ಯನಿಗೆ ಕೊಡುತ್ತ ಇರಲು ಆ ಕನ್ನಿಕೆಯನ್ನು ಸೂರ್ಯನು ಮೋಹಿಸಿದನು. ಆ ಕ್ಷಣದಲ್ಲಿ ಗರ್ಭ ಚಿಹ್ನೆಗಳು ಕಾಣಲ್ಪಟ್ಟು ಏಳು ವರ್ಷದ ಕನ್ನಿಕೆಗೆ ಪುತ್ರ ಜನನವಾಯಿತು. ಮಾತಾ ಪಿತೃಗಳು ಅಣ್ಣ ತಮ್ಮಂದಿರು ಭಯಪಟ್ಟು ಈ ಶಿಶುವನ್ನು ತೆಗೆದುಕೊಂಡು ಹೋಗಿ ತಿಪ್ಪೆಯ ಮೇಲೆ ಬಿಸುಟು ಬಾ ಎಂದು ದಾಸಿಯ ಸಂಗಡ ಕಳುಹಿಸಿದಲ್ಲಿ ಆ ದಾಸಿ ತೆಗೆದುಕೊಂಡು ಹೋಗಿ ದೊಡ್ಡ ಕಂಪಳದ ಧರಣೀ ಕಾಮನಾಯಕನ ದೊಡ್ಡಿಯಲ್ಲಿ ದೊಡ್ಡ ತಿಪ್ಪೆಯೊಳಗೆ ಗೂಡು ಮಾಡಿ ಶಿಶುವನ್ನು ಇಟ್ಟುಬಂದಳು. ಅಲ್ಲಿ ಧರಣೀ ಕಾಮನಾಯಕನ ಎಮ್ಮೆಗಳೊಳಗೆ ಅವಸರಧಾನಿ ಎಂಬ ಎಮ್ಮೆ ತ್ರಿಕಾಲದಲ್ಲೂ ಈ ಕಾಮನಾಯಕಗೆ ಹಾಲು ಕೊಡುತ್ತ ಇರಲಾಗಿ ಆ ದಿನ ಉದಯಕ್ಕೆ ಆಯೆಮ್ಮೆ ಹೋಗಿ ತಿಪ್ಪೆಯ ಮೇಲೆ ಇದ್ದ ಶಿಶುವಿಗೆ ಮೊಲೆಕೊಟ್ಟು ಬಂದಂಥ ಎಮ್ಮೆಯನ್ನು ಪೂರ್ವ ಪ್ರಕಾರಕ್ಕೆ ಹಾಲು ಕರೆಯಲಾಗಿ ಮೊಲೆಯಲ್ಲಿ ಹಾಲು ಇಲ್ಲದ ಕಾರಣ ಇದು ಏನೋ ವಿಚಿತ್ರವೆಂದು ಕೀಲಾರಿಯನ್ನು ಕರಸಿ ..............................

..................................ಇರ್ವರು ಬಂದು ಶಿಶುವಿಗೆ ಹಾಲು ಕೊಡುತ್ತ ಇರುವುದು ನೋಡಿ ಆಶ್ಚರ್ಯಪಟ್ಟು ನಮಗೆ ಪುತ್ರರು ಇಲ್ಲದ ಕಾರಣ ಮಹಾದೇವ ಕರುಣಿಸಿದನು ಎಂದು ಆ ತಿಪ್ಪೆಯ ಮೇಲೆ ಇದ್ದ ಶಿಶುವನ್ನು ಮನೆಗೆ ತೆಗೆದುಕೊಂಡು ಹೋಗಿ ತಿಪ್ಪರಾಜ ಎಂಬ ಹೆಸರಿಟ್ಟು ನಾಮಕರಣ ಮಾಡಿ ಸಂರಕ್ಷಣೆ ಮಾಡುತ್ತ ಇರಲಾಗಿ ಆ ರಾಜ್ಯಕ್ಕೆ ಮಹಾ ಕ್ಷಾಮ ಬಂದುದರಿಂದ ಆ ಕಂಪಳದ ಚಿಕ್ಕನ ಗವ್ರಡನ ಕುಮಾರ್ತಿಯರು ಮುದ್ದಮ್ಮ ಬೀರಮ್ಮ ಎಂಬವರು ವಿಜಯಾಪುರದ ಒಳಕ್ಕೆ ಹಾಲು ಮೊಸರು ತೆಗೆದುಕೊಂಡು ಹೋಗಿ ಪ್ರತಿ ದಿನದಲ್ಲೂ

---

* ಈ ನಿಡುಗಲ್ಲು ಅರಸುಗಳ ವಂಶಾವಳಿಯ ಕಾಗದದ ಪ್ರತಿಯನ್ನು ಶ್ರೀಮಾನ್ ಹೆಚ್. ವಿ. ವೆಂಕಟರಾಮಯ್ಯಂಗಾರ್, ಎಂ.ಎ. ಅವರು, ಚರಿತ್ರಕ್ಕೆ ಸಂಬಂಧಪಡುವುದರಿಂದ, ನನ್ನ ಕೈಗೆ ಸೇರಿದರೆ ಪ್ರಯೋಜನಕಾರಿಯಾಗಬಹುದೆಂದು, ಸುಮಾರು ೮-೯ ವರ್ಷಗಳ ಕೆಳಗೆ ನನ್ನಲ್ಲಿಗೆ ಕಳುಹಿಸಿಕೊಟ್ಟರು; ನನ್ನ ಕಾಗದಗಳ ಗುಂಪಿನಲ್ಲಿ ಸೇರಿಹೋಗಿದ್ದಿತು. ಈಚೆಗೆ ನನ್ನ ದೃಷ್ಟಿಗೆ ಬಿದ್ದುದರಿಂದ, ಇದನ್ನು ಮುದ್ರಿಸಿದರೆ ಕನ್ನಡಿಗರಿಗೆ ಪ್ರಯೋಜನವಾಗಬಹುದೆಂದು ಅಕ್ಷರ ಸ್ಖಾಲಿತ್ಯಗಳನ್ನು ಮಾತ್ರ ತಿದ್ದಿ ಕಳುಹಿಸಿಕೊಟ್ಟಿದ್ದೇನೆ. ಬರೆವಣಿಗೆ ಸುಮಾರು ೬೦, ೭೦ ವರುಷದ್ದು.

ರಾ. ನರಸಿಂಹಾಚಾರ್ಯ, ಎಂ.ಎ.

ಮಾರಿಕೊಂಡು ಬರುತ ಇರಲಿಕ್ಕಾಗಿ ಒಂದು ದಿವಸ ಆ ಬಿಜಾಪುರದ ಪಾದಷಾಯಿ ಈ ಸ್ತ್ರೀಯರನ್ನು ನೋಡಿ ಈ ಸ್ಫುರದ್ರೂಪಿಗಳು ಯಾರು, ಎಲ್ಲಿಯವರು ಎಂದು ಅಲ್ಲಿ ಇದ್ದ ಸಾಮಾಜಿಕರನ್ನು ವಿಚಾರಣೆ ಮಾಡಿದಲ್ಲಿ ಆ ಸಾಮಾಜಿಕರು ಬಂದು ಹೆಂಗಸ ರನ್ನು ನೀವು ಯಾರು ಎಂದು ಕೇಳಲಾಗಿ ನಾವು ಕಂಪಳದ ಚಿಕ್ಕನ ಗವುಡನ ಮಕ್ಕಳು ಎಂಬದಾಗಿ ಹೇಳಿದ್ದರಿಂದ ಈ ಮಾತು ಪಾದಷಾಯಿಗೆ ತಿಳಿಸಿದಲ್ಲಿ ಊಳಿಗದವರನ್ನು ಕಳುಹಿಸಿ ಆ ಸ್ತ್ರೀಯರನ್ನು ಕರೆದುಕೊಂಡು ಬನ್ನಿ ಎಂದು ಹೇಳಿದ್ದರಿಂದ ಆ ಊಳಿಗ ದವರು ಚಿಕ್ಕನ ಗವುಡ ಇವನ ತಮ್ಮ ಭೂಪನ ಗವುಡ ಈ ಉಭಯತ್ರರ ಬಳಿಗೆ ಬಂದು ......ಅಪ್ಪಣೆ ಆಗಿ ಇದೆ ಈ ಹೆಂಗಸರನ್ನು ಕರೆದುಕೊಂಡು ಬರಬೇಕೆಂಬದಾಗಿ ಹೇಳಿದ್ದರಿಂದ........ಇಬ್ಬರು ಸಿಟ್ಟು ಮಾಡಿ............ಉಡಾಯಿಸಿ ಈ ರಾಜ್ಯದಲ್ಲಿ ಇರಬಾರದು ಎಂದು ಧರಣೀ ಕಾಮನಾಯಕ........ಕರಸಿಕೊಂಡು ಯೋಚಿಸಿ ಈ ಕನ್ನಿಕೆಗಳನ್ನು ಹಿಡಿದುಕೊಟ್ಟು ನಾವು ಇಲ್ಲಿ ಇರುವುದು ಯುಕ್ತ ವಲ್ಲವೆಂದು ಆ ಕನ್ನಿಕೆಗಳನ್ನು ಕರೆದುಕೊಂಡು ಕಂಪಳ ಸಹ ದಕ್ಷಿಣ ದೇಶಕ್ಕೆ ಬರುವ ಉದ್ದಿಶ್ಯವಾಗಿ ಹೊರಟರು.

ಈ ವರ್ತಮಾನವನ್ನು ಊಳಿಗದವರು ಹೋಗಿ ನಮ್ಮನ್ನು ಉಡಾಯಿಸಿದರು ಎಂದು ಪಾದಷಾಯಿ ಬಳಿಗೆ ಹೋಗಿ ಮನವೆ ಮಾಡಿದ್ದರಿಂದ ಪಾದಷಾಯಿ ಸಿಟ್ಟು ಮಾಡಿ ಕೆಲವು ಪವುಜು ಸುದಾ ಹೊರಟು ಬಂದು ಹೋಗುವಂಥ ಕಂಪಳದವರನ್ನು ಬೆನ್ನುಹತ್ತಿದಲ್ಲಿ ಈ ಕಂಪಳದವರು ದಕ್ಷಿಣ ದೇಶಕ್ಕೆ ಜಾಗ್ರತೆಯಾಗಿ ಬರುತ್ತ ಇರು ವಲ್ಲಿ ಮಧ್ಯೇ ನರ್ಮದಾ ಪ್ರವಾಹ ಕಟ್ಟಿ ಇತ್ತು. ಪಾದಷಾಯಿ ಕೈಗೆ ಸಿಕ್ಕಬಾರದು ಎಂದು ಆಲೋಚನೆ ಮಾಡಿ ಈ ಚಿಕ್ಕನ ಗವುಡ ಇವನ ತಮ್ಮ ಭೂಪನ ಗವುಡ ಸಹ ಗಂಗಾದೇವಿ ಹಾದಿ ಬಿಟ್ಟಲ್ಲಿ ಭೂಪನ ಗವುಡನು ತನ್ನ ಶಿರಸ್ಸು ಕೊಡುತ್ತೇನೆ ಎಂದು ಪ್ರಾರ್ಥನೆ ಮಾಡಿಕೊಂಡದ್ದರಿಂದ ಈ ಗಂಗಾದೇವಿ ಮಾರ್ಗಕೊಟ್ಟಳು. ಕಂಪಳ ಸಹ ಯಾವತ್ತೂ ತಟಾದು ಬಂದರು. ಆ ಪಾದಷಾಯಿ ಪವುಜಿಗೆ ಪ್ರವಾಹ ಅಡ್ಡ ವಾದ್ದರಿಂದ ಆತನು ಪವುಜು ಸಹ ಹಿಂದಕ್ಕೆ ಹೋದನು. ಈ ಭೂಪನ ಗವುಡನು ಪ್ರಾರ್ಥನೆಯ ಪ್ರಕಾರಕ್ಕೆ ಗಂಡುಕತ್ತರಿಯಿಂದ ಶಿರಸ್ಸು ಕೊಯ್ದು ಪ್ರಾರ್ಥನೆ ಸಲ್ಲಿಸಿದನು.

ತರುವಾಯ ಈ ಕಂಪಳದ ಕಾಮನಾಯಕ, ಚಿಕ್ಕನ ಗವುಡ, ಕಂಪಳ ಸಹ ಯಾವತ್ತು ಜನವೂ ಬಂದು ಪಂಪಾ ತೀರದಲ್ಲಿ ರೊಪ್ಪ ಹಾಕಿಕೊಂಡು ಆ ಶಿಶುವನ್ನು ಕಾಪಾಡಿಕೊಂಡು ಇದ್ದರು. ಆ ಶಿಶು ಎಂಟು ಹತ್ತು ವರುಷದವನಾಗಿ ತನ್ನ ಓರಗೆ ಹುಡುಗರ ಸಂಗಡ ಆಡುತ್ತ ಇರಲಾಗಿ ನರಪತಿ ಕೃಷ್ಣರಾಯರವರು ಚತುರಂಗ ಬಲ ಸಮೇತರಾಗಿ ಬೇಟೆಯಾಡುತ್ತ ಇರಲಾಗಿ ಅಲ್ಲಿ ಒಂದು ಶಾರ್ದೂಲ ಇದ್ದದ್ದರಿಂದ ಅದನ್ನು ಹೊಡೆಯಬೇಕೆಂದು ಅನೇಕ ಜನರು ಬೆನ್ನುಹತ್ತಿದ್ದರಿಂದ ಕೆಲವು ಜನರನ್ನು ಹತಮಾಡಿ ಈ ಚಿಕ್ಕವರೊಡನೆ ಆಡುತ್ತ ಇದ್ದವನ ಸಮೀಪಕ್ಕೆ ಬಂದ ಆ ಶಾರ್ದೂಲ ವನ್ನು ಕೆಲವು ಚಿಕ್ಕವರು ನೋಡಿ ಭಯಪಡುತ್ತ ಇರಲಾಗಿ ಭಯಪಡಬೇಡಿ ಎಂದು

ಧೈರ್ಯವ ಕೊಟ್ಟು ಈ ತಿಪ್ಪನಾಯಕ ಎಂಬ ಹುಡುಗನು ಧನುರ್ಬಾಣಗಳಿಂದ ಸಂಹರಿಸಿ ಆ ಹುಡುಗರು ಸಹ ತಮ್ಮ ದೊಡ್ಡಿಗೆ ಹೋದನು. ಸಂಗಡಲೇ ಬಲ ಸಹಿತ ವಾಗಿ ಆ ಶಾರ್ದೂಲ ಸತ್ತುಬಿದ್ದು ಇದ್ದ ಬಳಿಗೆ ಬಂದು ನೋಡಿ ರಾಯರು ಇದ ಯಾರು ಕೊಂದರು ಎಂಬುದಾಗಿ ವಿಚಾರಣೆ ಮಾಡಿದಲ್ಲಿ ಈ ಕಂಪಳದ ಧರಣೀಕಾಮ ನಾಯಕನ ಹುಡುಗ ಕೊಂದನು ಎಂದು ಅರಿಕೆ ಮಾಡಿದ ಕಾರಣ ಆಶ್ಚರ್ಯಪಟ್ಟು ಆ ದೊಡ್ಡಿ ಕಾಮನಾಯಕನನ್ನು ಕರೆಸ್ಸಿ ಶಾರ್ದೂಲವನ್ನು ಕೊಂದ ಹುಡುಗನನ್ನು ಕರೆದುಕೊಂಡು ಬಾ ಎಂದು ಹೇಳಲಾಗಿ ಈ ತಿಪ್ಪರಾಜನೆಂಬ ಹುಡುಗನನ್ನು ಕರೆದು ಕೊಂಡು ಬಂದು ತೋರಿಸಿದ್ದರಿಂದ ಸಂತೋಷಪಟ್ಟು ತೊಡೆಯ ಮೇಲೆ ಕೂರಿಸಿ ಕೊಂಡು ನೀನು ಯಾರ ಮಗನು ಎಂದು ಕೇಳುವಲ್ಲಿ ಸ್ವಾಮಿ! ನಾನು ದೊಡ್ಡ ಕಂಪಳದ ಧರಣೀ ಕಾಮನಾಯಕನ ಮಗನೆಂದು ಹೇಳಲಾಗಿ ಆ ಕಾಮನಾಯಕನನ್ನು ಕರೆಸಿ ಈ ಹುಡುಗನು ಯಾರು ಎಂದು ಕೇಳಿದ್ದರಿಂದ ಕಾಮನಾಯಕನು ಸ್ವಾಮಿ! ನಮ್ಮ ತಿಪ್ಪೆಯಲ್ಲಿ ಈ ಶಿಶು ಇದ್ದದ್ದರಿಂದ ನಾನು ತಂದು ಸಾಕಿದೆನೆಂದು ಮನವೆ ಮಾಡಿದಲ್ಲಿ ಭೂಮಿ ನಮ್ಮದು ತಿಪ್ಪೆ ನಮ್ಮ ಅಧೀನ ಶಿಶು ನಿನಗೆ ಸಂಬಂಧವಿಲ್ಲ ಎಂದು ಸಾಕಿದವರಿಗೆ ಸಂತೋಷಪಡಿಸಿ ಈ ಹುಡುಗನನ್ನು ಕರೆದುಕೊಂಡು ಹೋಗಿ ತಮ್ಮ ಬಳಿ ಇದ್ದ ಕೆಂಚಪ್ಪನಾಯಕರ ಕೊಮಾರ್ತಿ ವೀರಮ್ಮ ಎಂಬ ಕನ್ನಿಕೆಯನ್ನು ಆತಗೆ ವಿವಾಹ ಮಾಡಿಸಿ ಆ ಕಾಮನಾಯಕ ಎಂಬವನು ದೊಡ್ಡಿ ಹಾಕಿಕೊಂಡು ಇದ್ದದ್ದಕ್ಕೆ ಕಾಮಲಾಪುರವೆಂಬ ಹೆಸರಿಟ್ಟು ಈ ಗ್ರಾಮ ನೀನು ಅನುಭವಿಸಿಕೊಂಡು ನಮ್ಮ ಸಮೀಪಕ್ಕೆ ಬರುತ್ತ ಇರು ಎಂಬುದಾಗಿ ಅಪ್ಪಣೆ ಕೊಟ್ಟರು. ಅದೇ ಪ್ರಕಾರಕ್ಕೆ ರಾಯರ ಸಮೀಪಕ್ಕೆ ಹೋಗಿಬರುತ್ತ ಇರುವಲ್ಲಿ ಕೆಲವು ದಿವಸದ ಮೇಲೆ ಡಿಲ್ಲಿ ಪಾದಷಾಯಿ ಬಳಿಯಣಿಂದ ಬಹು ಪ್ರಸಿದ್ಧ ಸಾಧಕಾಭ್ಯಾಸನಾದ ಬಹದರ ಮಲಕ ನೆಂಬ ಆಯುಗಾರ ಬಂದು ವಿಜಯನಗರದಲ್ಲಿ ಇದ್ದ ನಲವತ್ತೆಂಟು ಪಂಚ ಕಲಶಗಳು ಇಟ್ಟಂಥ ಗರುಡಿಗಳ ಬಳಿಗೆ ಬಂದು ಮಾತಿನಿಂದ ಅಲ್ಲಿ ಇದ್ದ ಸಾಧಕಗಳವರನ್ನು ತಿರಸ್ಕರಿಸಿ ರಾಯರ ಸಮೀಪಕ್ಕೆ ಬಂದು ತನ್ನ ಸಂಗಡ ಸಾಧಕ ಯುದ್ಧಕ್ಕೆ ಜೋಡು ಕಟ್ಟಿಸಬೇಕೆಂದೂ ಇಲ್ಲದಿದ್ದರೆ ಈ ನಲವತ್ತೆಂಟು ಗರುಡಿಗಳ ಕಲಶಗಳ ತೆಗೆಸ ಬೇಕೆಂದೂ ತನ್ನ ಪವುರುಷದ ಮಾತುಗಳ ಆಡಿಕೊಂಡಲ್ಲಿ ರಾಯರು ಆತನ ಮಾತ ಕೇಳಿ ಮನಸಾ ಬಹು ಕೋಪದಿಂದ ಸಮೀಪದಲ್ಲಿದ್ದಂಥ ಜನರನ್ನೂ ಉಭಯ ಪಾರ್ಶ್ವದಲ್ಲಿ ಇದ್ದ ಸಮಸ್ತ ಜನರನ್ನೂ ನೋಡಿದರೂ ಸಮಸ್ತರೂ ಸುಮ್ಮನೆ ಇದ್ದ ಕಾರಣ ರಾಯರು ಮನಸಾ ಯೋಚನೆಯಲ್ಲಿ ಇದ್ದದ್ದು ತಿಳಿದು ಈ ತಿಪ್ಪರಾಜನು ಸ್ವಾಮಿ! ಇದು ಎಷ್ಟರ ಕಾರ್ಯ! ಇವನ ಮೇಲೆ ತನಗೆ ಅಪ್ಪಣೆ ಕೊಡಬೇಕೆಂದು ಅರಿಕೆ ಮಾಡಿ ಕೊಂಡದ್ದರಿಂದ ನೀನು ಹುಡುಗ ಆತನ ಮೇಲೆ ನೀನು ನಿರ್ವಾಹ ಮಾಡೀಯಾ ಎಂದು ರಾಯರು ಹೇಳಲಾಗಿ ಆ ತಿಪ್ಪರಾಜ ತನ್ನಲ್ಲಿ ಇದ್ದ ವಿದ್ಯಾ ಪರೀಕ್ಷೆ ಬಲ ಸಾಮರ್ಥ್ಯ ಪರಾಕ್ರಮ ಸಹ ಖಾತರ ಜಮೆ ಆಗುವ ಹಾಗೆ ತೋರಿದಲ್ಲಿ ರಾಯರು ಸಂತೋಷ ಪಟ್ಟು ಜಯಿಸಾನು ಎಂದು ತಿಳಿದು ಉಭಯತ್ರರಿಗೂ ಉದ್ದಿ ಕಟ್ಟಿ ಬಿಟ್ಟರು. ಆ ಬಹದರ ಮಲಕನ ಬಲಗೈಯಲ್ಲಿ ಕತ್ತಿ ಒಂದು, ಎಡಗೈಯಲ್ಲಿ ಗುಜ್ಜಗತ್ತಿ ಒಂದು,

ನಡುವಿನ ಒಳಗೆ ಚಾಕು, ತಿಪ್ಪರಾಜನ ಬಲಗೈಯಲ್ಲಿ ಕಟ್ಟಾರಿ, ಎಡಗೈಯಲ್ಲಿ ಚಿರತ ಕಟ್ಟಿಗೆ ಸಂಗಡ ಉಭಯತ್ರರೂ ತಾವು ಕಲಿತ ವಿದ್ಯೆಯ ಸಂಗಡ ಬಹುಶಃ ಯುದ್ಧ ಮಾಡಿದರು. ಆದರೂ ತಿಪ್ಪರಾಜನ ಮೇಲೆ ಬಹದರ ಮಲಕನ ಸಾಮರ್ಥ್ಯ ಲೇಶ ನಡೆಯ ಲಿಲ್ಲ. ತಿಪ್ಪರಾಜ ತನ್ನ ಕಯ್ಯಲ್ಲಿದ್ದ ಕಟ್ಟಾರಿಯ ಮೊನೆಗೆ ಕಸ್ತೂರಿ ಹಚ್ಚಿಕೊಂಡು ತನ್ನ ಸಾಧಕ ಚಮತ್ಕೃತಿಯಿಂದ ಅವನ ಪೆಟ್ಟು ತಪ್ಪಿಸಿಕೊಂಡು ಬಹದರ ಮಲಕನ ಹಣೆಗೆ ಕಸ್ತೂರಿ ತಿಲಕ ಕಟ್ಟಾರಿ ಮೊನೆಯಿಂದ ಹಚ್ಚಿ ನನ್ನ ಕೈ ಮಿಂಚಿತು ನೋಡಿಕೋ ಎಂಬುದಾಗಿ ಹೇಳಲಾಗಿ ಆ ಬಹದರ ಮಲಕನು ನಾನು ಬರುವಾಗ ತಿಲಕ ಹಚ್ಚಿಕೊಂಡು ಇದ್ದೆನು ನೀನು ಹಚ್ಚಿದ್ದೇ ಉಂಟಾದರೆ ಪುನಃ ಅದೇ ಸ್ಥಳದಲ್ಲಿ ಕಟ್ಟಾರಿ ಮೊನೆ ತಗಲಿಸಿದರೆ ಯಥಾರ್ಥ ಇರಬಹುದು ಎಂದು ಎನಲಾಗಿ ಅದೇ ಮೇರೆಗೆ ಕಟ್ಟಾರಿಯ ಹಣೆಯ ಮೇಲೆ ಗುದ್ದಿದಲ್ಲಿ ತಲೆ ಒಡೆದು ಮುಕ್ತನಾದನು. ತರುವಾಯ ರಾಯರು ಸಂತೋಷಪಟ್ಟು ಈ ತಿಪ್ಪರಾಜನನ್ನು ತಮ್ಮ ಬಳಿಯಲ್ಲಿ ಕೂರಿಸಿಕೊಂಡು ತಮಗೆ ಸಲ್ಲತಕ್ಕ ಬಿರುದುಗಳ ಅಪ್ಪಣೆಕೊಟ್ಟ ವಿವರ—ಭೂಚಕ್ರದ ಕೊಡೆ, ನೀಲಿ ಕೊಡೆ, ಬಸವನ ಟೆಕ್ಕೆ, ಕಾಚಮ ವುಡಾಸು, ಪಂಚ ವರ್ಣದ ವುಡಾಸು, ಧವಳ ಶಂಖ ಚಕ್ರ ಭಾರಿ ನಿಗಳ ಇವು ಮೊದಲಾದ್ದು ರಾಯರು ಬಿರುದು ಗಳು ಕೊಟ್ಟು ಭಟರ ಸಂಗಡ ಕಸ್ತೂರೀ ಕೋಲಾಹಲ, ಕಟ್ಟಾರಿ ಚೆಲ್ವರ ಗಂಡ, ಬಹದರ ಮಲಕ ಸಪ್ತಾಂಗ ಹರಣ, ಸಿಂಹ ಲಲಾಟ ಗಂಡಭೇರುಂಡ, ಕಲಿ ಭಾಷಿಂಗ ಎಂಬ ಪದ್ದು ಕೊಟ್ಟು ಹರತಿ ಸಾರವಾಡ ಎಂಬ ಅರುವತ್ತಾರು ಸಾವಿರ ಸೀಮೆ ಎಂಬ ಸ್ಥಲ ಅಪ್ಪಣೆ ಕೊಡಿಸಿ ಪಟ್ಟಾಭಿಷೇಕಮಂ ಮಾಡಿಸಿ ಸುಖದಲ್ಲಿ ಪುತ್ರ ಪೌತ್ರ ಪಾರಂಪರ್ಯವಾಗಿ ಶಾಶ್ವತವಾಗಿ ರಾಜ್ಯವಾಳಿಕೊಂಡು ಅನುಭವಿಸಿಕೊಂಡು ಇರು ಎಂಬುದಾಗಿ ಅಪ್ಪಣೆ ಕೊಟ್ಟದ್ದರಿಂದ ಹರತಿ ಸಾರವಾಡಕ್ಕೆ ಬಂದರು.

ಇದೇ ಪ್ರಕಾರಕ್ಕೆ ತಿಪ್ಪರಾಜ, ಕಾಮನಾಯಕ, ಅಬ್ಬಿನಾಯಕ ಈ ಮೂರು ಪೀಡಿಯಿಂದ ಈ ರಾಜ್ಯ ಅನುಭವಿಸಿಕೊಂಡು ಇರಲಿಕ್ಕಾಗಿ ಈ ಅಬ್ಬಿನಾಯಕಗೆ ಈಶ್ವರನಾಯಕ, ಬೊಮ್ಮನಾಯಕ ಎಂಬ ಇಬ್ಬರು ಪುತ್ರರು ಸಂತಾನವಾಗಿ ಈಶ್ವರ ನಾಯಕನು ಹರತಿ ಸಾರವಾಡದ ಸೀಮೆಯ ದೊರೆತನ ಮಾಡಿಕೊಂಡು ನಿಂತನು. ಬೊಮ್ಮನಾಯಕನು ರಾಯರ ಸಂಗಡ ಅಪ್ಪಣೆ ತೆಗೆದುಕೊಂಡು ಬಂದು ವೇದಾವತೀ ತೀರದಲ್ಲಿ ಬಹಳ ಅರಣ್ಯ ಇದ್ದದ್ದರಿಂದ ನೋಡಿ ಇದು ಸ್ಥಳ ನಿರ್ದೇಶ ಮಾಡಬೇಕು ಎಂದು ಪುನಃ ರಾಯರ ಬಳಿಗೆ ಬಂದು ದಕ್ಷಿಣ ದೇಶದಲ್ಲು ವೇದಾವತೀ ತೀರದಲ್ಲಿ ಬಹಳ ಅರಣ್ಯವಿದೆ; ಇದಕ್ಕೆ ಅಪ್ಪಣೆ ದಯಪಾಲಿಸಿದಲ್ಲಿ ಗಿಡ ಕಡಿಸಿಕೊಂಡು ಗ್ರಾಮಗಳ ನಿರ್ಮಾಣ ಮಾಡಿಕೊಳ್ಳುತ್ತೇನೆ ಎಂಬುದಾಗಿ ಅರಿಕೆ ಮಾಡಿಕೊಂಡದ್ದರಿಂದ ಅದೇ ಪ್ರಕಾರಕ್ಕೆ ಅಪ್ಪಣೆ ಕೊಟ್ಟರು. ಆ ತರುವಾಯ ವೇದಾವತೀ ತೀರದಲ್ಲು ಗೋತಟಾಕ ಎಂಬ ಗ್ರಾಮವನ್ನು ಕಟ್ಟಿಸಿ ಕೆಲವು ದಿವಸ ಅಲ್ಲಿ ಇದ್ದು ಚಳ್ಳಕೆರೆ ಎಂಬ ಗ್ರಾಮ ನಿರ್ಮಾಣ ಮಾಡಿ ಆ ತರುವಾಯ ಕೆಲವು ದಿವಸದ ಮೇಲೆ ದೊಡ್ಡೇರಿ ಎಂಬ ಗ್ರಾಮ ನಿರ್ಮಾಣ ಮಾಡಿ ನೆಲ ಕೋಟೆ ಕಟ್ಟಿಸಿ ಇದಕ್ಕೆ ಸಲ್ಲುವಂಥ ಸೀಮೆ ಪಶ್ಚಿಮಕ್ಕೆ ತಳಕು,

ಗೋಣೂರು ಕಣಿವೆ ಪರಿಯಂತವೂ ಪೂರ್ವಕ್ಕೆ ನಿಡುಗಲ್ಲು ಎಂಬ ಸ್ಥಳ ಗುಡ್ಡಗಳು ಬಹಳವಾಗಿ ಇದ್ದದ್ದರಿಂದ ಇದು ಸ್ಥಳ ಆಸರೆಯಾಗಿದೆ ಎಂಬುದಾಗಿ ಇಲ್ಲಿಗೆ ಕೆಲವು ದಿವಸದ ಮೇಲೆ ಬಂದು ಮಲೆ ನೆಲ ಕೋಟೆ ಪೇಟೆ ಮುಂತಾದ್ದು ನಿರ್ಮಾಣ ಮಾಡಿಸಿ ಕೊಂಡು ವ್ಯಯ ಸಂವತ್ಸರದ ಆರಭ್ಯ ಆನಂದ ಸಂವತ್ಸರದ ವರೆಗೂ ೨೧ ವರುಷ ದೊರೆತನ ಮಾಡಿದರು. ಅನಂತರ ತಮ್ಮ ಪುತ್ರನಾದಂಥ ಹಿರಿಯ ಒಡೆಯರೆಂಬ ಈಶ್ವರ ನಾಯಕರಿಗೆ ಪಟ್ಟಾಭಿಷೇಕವಂ ಮಾಡಿಸಿ ತಾವು ಸ್ವರ್ಗಸ್ಥರಾದರು. ಈಶ್ವರ ನಾಯಕರು ತಾರಣ ಸಂವತ್ಸರದ ವರೆಗೆ ೩೦ ವರುಷ ದೊರೆತನ ಮಾಡಿ ಕಾಲವಾದರು. ಇವರ ಮಕ್ಕಳು ಚಿಕ್ಕಳನಾಯಕರು ಆಂಗೀರಸ ಸಂವತ್ಸರದ ವರೆಗೆ ೪೮ ವರುಷ ಪ್ರಭುತ್ವ ಮಾಡುತ್ತ ಇದ್ದಲ್ಲಿ ಇವರ ಮಕ್ಕಳು ಹೊಟ್ಟಳನಾಯಕರಿಗೆ ಪಟ್ಟಾಭಿಷೇಕವಂ ಮಾಡಿ ಆಂಗೀರಸ ಸಂವತ್ಸರದ ಆರಭ್ಯ ಕ್ರೋಧಿ ಸಂವತ್ಸರದ ವರೆಗೆ ೩೨ ವರುಷ ಪರಿಯಂತಕ್ಕೂ ಪಶ್ಚಿಮ ರಾಜ್ಯ ದೊಡ್ಡೇರಿ ಸೀಮೆ ಯಾವತ್ತೂ ಇದಕ್ಕೆ ಸಲ್ಲುವಂಥ ಸೀಮೆ ಸಹ ದೊರೆತನ ಮಾಡಿ ತಮ್ಮ ಮಕ್ಕಳು ಬಸಪ್ಪನಾಯಕರಿಗೆ ಪಟ್ಟಾಭಿಷೇಕ ಮಾಡಿ ತಾವು ಸ್ವರ್ಗಸ್ಥರಾದರು. ಈ ಬಸಪ್ಪನಾಯಕರು ಕ್ರೋಧಿ ಸಂವತ್ಸರದ ಆರಭ್ಯ ಬಹುಧಾನ್ಯ ಸಂವತ್ಸರದ ವರೆಗೆ ೩೪ ವರುಷ ಪ್ರಭುತ್ವ ಮಾಡಿದರು. ಇವರಿಗೆ ಮುಮ್ಮಡಿ ಹೊಟ್ಟಳನಾಯಕರೆಂಬ ಪುತ್ರರಾಗಿ ಬಹುಧಾನ್ಯ ಸಂವತ್ಸರದ ಆರಭ್ಯ ವಿಜಯ ಸಂವತ್ಸರದ ವರೆಗೆ ೭೬ ವರುಷ ಪ್ರಭುತ್ವ ಮಾಡುತ್ತ ಇರಲಿಕ್ಕಾಗಿ ಇವರಿಗೆ ತಿಮ್ಮಳನಾಯಕರು ಎಂಬವರು ಪುತ್ರರಾಗಿ ಪ್ರಮಾದೀಚ ಸಂವತ್ಸರ ಪರಿಯಂತಕ್ಕೂ ೨೦ ವರುಷ ಪ್ರಭುತ್ವ ಮಾಡುತ್ತ ಇದ್ದು ಶಿರೆ ಗೋಣೂರು ಕಣಿವೆ ಮುಂತಾದ ಸರಹದ್ದು ಪರಿಯಂತಕ್ಕೂ ಯಾವತ್ತು ರಾಜ್ಯವೂ ಆಳುತ್ತ ಇರಲಿಕ್ಕಾಗಿ ಇಷ್ಟರಲ್ಲಿ ದೊಡ್ಡೇರಿ ನೆಲಕೋಟೆ ಅವಾಂತರಗಳಿಗೆ ಸ್ಥಳ ಮುಸ್ತಕೀಮು ಬಂದೋಬಸ್ತು ಇಲ್ಲವಾದ ಕಾರಣ ನಿಡುಗಲ್ಲು ಸ್ಥಳ ಗುಡ್ಡ ಸ್ಥಳ ಆಸರೆಯಾಗಿದೆ ಅಲ್ಲಿ ಹೋಗಿ ಬಂದೋಬಸ್ತು ಮಾಡಿಸಿಕೊಂಡು ಅಲ್ಲಿಂದ ಸದರಿ ದೊಡ್ಡೇರಿ ಮುಂತಾದ ಸೀಮೆ ವಿಚಾರಿಸಿಕೊಂಡು ಅದೂ ಇದೂ ಉಭಯ ಸ್ಥಳಗಳು ದೊಡ್ಡೇರಿ ಸೀಮೆ ನಿಡುಗಲ್ಲು ಸೀಮೆ ಸಹ ಬಂದೋಬಸ್ತು ಮಾಡಿಸತಕ್ಕ ಬಗ್ಗೆ ನಿಡುಗಲ್ಲಿಗೆ ಬಂದು ಉಭಯ ಸ್ಥಳಗಳು ಬಹು ದಿವಸ ಪ್ರಭುತ್ವ ಇದ್ದಲ್ಲಿ ಇವರಿಗೆ ವೀರ ಹೊಟ್ಟಳನಾಯಕರೆಂಬ ಪುತ್ರರಾಗಿ ಕೆಲವು ದಿವಸದ ಮೇಲೆ ಮಕ್ಕಳಿಗೆ ಪಟ್ಟಾಭಿಷೇಕವಂ ಮಾಡಿ ತಾವು ಸ್ವರ್ಗಸ್ಥರಾದರು. ಈ ವೀರ ಹೊಟ್ಟಳನಾಯಕರು ಹೇವಿಳಂಬಿ ಸಂವತ್ಸರದ ಪರ್ಯಂತಕ್ಕೂ ೪೪ ವರುಷ ಪ್ರಭುತ್ವ ಮಾಡಿ ಸ್ವರ್ಗಸ್ಥರಾದರು. ಇವರ ಕುಮಾರರು ಮುಮ್ಮಡಿ ಹೊಟ್ಟಳನಾಯಕರಿಗೆ ಪಟ್ಟಾಭಿಷೇಕವಂ ಮಾಡಲಾಗಿ ಇವರು ಸೌಮ್ಯ ಸಂವತ್ಸರದ ವರೆಗೆ ೭೩ ವರುಷ ಪ್ರಭುತ್ವ ಮಾಡಿದರು. ಆ ತರುವಾಯ ಅವರ ಪುತ್ರರಾದಂಥ ಹಿರಿಯ ವೀರ ತಿಮ್ಮಳನಾಯಕರಿಗೆ ಪ್ರಭುತ್ವವಾಗಿ ಪೈಂಗಳ ಸಂವತ್ಸರದ ವರೆಗೆ ೬೯ ವರುಷ ಆದ ತರುವಾಯ ಕಾಲವಾದರು. ಆ ತರುವಾಯ ಇವರ ತಮ್ಮಗಳು ಚಿಕ್ಕ ವೀರ ತಿಮ್ಮಳನಾಯಕರಿಗೆ ಪಟ್ಟಾಭಿಷೇಕವಾಗಿ ಸಾಧಾರಣ ಸಂವತ್ಸರದ ವರೆಗೆ ೫೩ ವರುಷ ದೊರೆತನ ಮಾಡಿ ತಮ್ಮ ಕುಮಾರರಾದ ಮುಮ್ಮಡಿ

ವೀರ ಹೊಟ್ಟಳನಾಯಕರಿಗೆ ಪಟ್ಟಾಭಿಷೇಕವಂ ಮಾಡಿ ತಾವು ಕಾಲವಾದರು. ಈ ಮುಮ್ಮಡಿ ವೀರ ಹೊಟ್ಟಳನಾಯಕರು ವಿಕ್ರಮ ಸಂವತ್ಸರದ ವರೆಗೆ ೩೦ ವರುಷ ದೊರೆತನ ಮಾಡಿ ತಮ್ಮ ಪುತ್ರರಾದ ವೀರ ಮುಮ್ಮಡಿ ಹೊಟ್ಟಳನಾಯಕರು ಶಾರ್ವರಿ ಸಂವತ್ಸರದ ಪರ್ಯಂತಕ್ಕು ೮೧ ವರುಷ ಪ್ರಭುತ್ವ ಮಾಡುತ್ತ ಇದ್ದಲ್ಲಿ ಇಷ್ಟರಲ್ಲಿ ಮೊಗಲಾಯಿ ತಾಲ್ಲೂಕು ಪೈಕಿ ಒಬ್ಬ ಸರದಾರ ಖಾಸಿಂಖಾನನೆಂಬವನು ಬಹು ಸೈನ್ಯದಿಂದ ಉತ್ತರ ದೇಶದಿಂದ ಬಂದು ದೊಡ್ಡೇರಿ ಸ್ಥಳ ನೆಲಕೋಟೆ ಮೈದಾನವಾಗಿದೆ ಎಂಬುದಾಗಿ ಸನ್ನಾಹ ಮಾಡಿಕೊಂಡು ಈ ಸ್ಥಳ ತನ್ನ ಸ್ವಾಧೀನ ಮಾಡಿಕೊಳ್ಳಬೇಕೆಂದು ಆ ಸಮೀಪದಲ್ಲಿ ಆಸರೆ ಮಾಡಿಕೊಂಡು ಪವುಜು ಸುದಾ ಇಳಿದು ಬಹಳ ಯುದ್ಧ ಮಾಡಿ ಈ ದೊಡ್ಡೇರಿ ಸ್ಥಳ ಇದರ ಹೊಂದಿದ ಸೀಮೆ ಸಹ ಲೂಟಿ ಮಾಡಿ ದೊಡ್ಡೇರಿಗೆ ಸಲ್ಲುವ ಸೀಮೆ ಸಹ ತನ್ನ ಸ್ವಾಧೀನ ಮಾಡಿಕೊಂಡು ತನ್ನ ಕಡೆಯಿಂದ ಕೆಲವು ಪವುಜು ಸಹ ಈ ದೊಡ್ಡೇರಿ ಸ್ಥಳದಲ್ಲು ಇಟ್ಟು ಮುಂದಕ್ಕೆ ಸೀರ್‍ಯದ ಕಡೆಗೆ ಹೋದನು. ಆ ತರುವಾಯ ಕೆಲವು ದಿವಸ ಹೋದ ಮೇಲೆ ಮುಮ್ಮಡಿ ಹೊಟ್ಟಳನಾಯಕರು ನಿಡುಗಲ್ಲು ಸ್ಥಳದಲ್ಲಿ ಇರುತ್ತಲಿರಲಿಕ್ಕಾಗಿ ಚಿತ್ರದುರ್ಗದ ಬರಮುನನಾಯಕರು ಬಂದು ಈ ದೊಡ್ಡೇರಿ ಸೀಮೆ ಇದಕ್ಕೆ ಸಲುವಂಥ ಸೀಮೆ ಸಹ ಸಂಸ್ಥಾನಗಳ ಹೊಂದಿದ್ದ ಸೀಮೆ ಮೊಗಲಾಯಿ ಯವರು ಮಧ್ಯೇ ರಾಜ್ಯದಲ್ಲು ಇರಲೀಸಬಾರದು ಎಂಬುದಾಗಿ ಕೆಲವು ಭಾರಿ ಪವುಜು ಸುದಾ ಚಿತ್ರದುರ್ಗದಿಂದ ತೆಗೆದುಕೊಂಡು ಏಕಾಏಕಿ ಬಂದು ಈ ದೊಡ್ಡೇರಿ ಯಲ್ಲಿ ಇದ್ದ ಠಾಣೆದಾರ ಅನೇಕ ಜನರನ್ನು ಹೊಡೆದು ಸಂಹಾರ ಮಾಡಿ ಈ ಬರಮುನ ನಾಯಕರು ದೊಡ್ಡೇರಿ ಸೀಮೆ ಯಾವತ್ತು ಸಹ ತಾವು ಠಾಣೆ ಹಾಕಿಕೊಂಡ ಕಾರಣ ಆ ತದಾರಭ್ಯ ನಿಡುಗಲ್ಲು ಸ್ಥಳ ಅದಕ್ಕೆ ಸಲ್ಲುವ ಸೀಮೆ ಸಹ ಪ್ರಭುತ್ವ ಮಾಡುತ್ತ ಇದ್ದಲ್ಲಿ ಇವರ ಮಕ್ಕಳು ಹೊಟ್ಟಳನಾಯಕರಿಗೆ ಕೆಲವು ದಿವಸ ಹೋದ ತರುವಾಯ ಪಟ್ಟಾಭಿಷೇಕವಂ ಮಾಡಿ ಆಂಗೀರಸ ಸಂವತ್ಸರದ ವರೆಗೆ ೩೨ ವರುಷ ದೊರೆತನ ಮಾಡಿ ಕಾಲವಾದರು. ಇವರ ಮಕ್ಕಳು ಮುಮ್ಮಡಿ ಹೊಟ್ಟಳನಾಯಕರು ಬಹುಧಾನ್ಯ ಸಂವತ್ಸರದ ವರೆಗೆ ೭ ವರುಷ ಪ್ರಭುತ್ವ ಮಾಡಿ ಆ ತರುವಾಯ ಕಾಲ ವಾದರು. ಇವರ ಮಕ್ಕಳು ವೀರ ತಿಮ್ಮಳನಾಯಕರು ಶೋಭಕೃತ್ ಸಂವತ್ಸರದ ವರೆಗೆ ೨೫ ವರುಷ ಪ್ರಭುತ್ವ ಮಾಡುತ್ತ ಇದ್ದಲ್ಲಿ ನವಾಬ ಬಹದರರು ಎಂಬವರಿಗೆ ರಾಜ್ಯ ಯಾವತ್ತು ಅವರ ಸ್ವಾಧೀನ ನಡೆಯಿತು. ಆ ತರುವಾಯ ಕೆಲವು ಇದೇ ಪ್ರಕಾರಕ್ಕೆ ಬಹದರರ ದಿವಸದಲ್ಲು ಅವರ ಸ್ವಾಧೀನದಿಂದ ಸಾವಿರ ಜನ ನೂರು ಕುದುರೆ ಸಹ ನವಾಬರ ಸವಾರಿಯ ಸಂಗಡಲೇ ಹಾಜರು ಇರಬೇಕು ಎಂಬುದಾಗಿ ನವಾಬರು ಕರೆಸಿ ಅಪ್ಪಣೆ ಕೊಟ್ಟದ್ದರಿಂದ ಪವುಜು ಸುದಾ ಮೂರು ವರುಷದ ಪರ್ಯಂತ ನವಾಬ ಬಹದರರ ಸಂಗಡ ಇದ್ದರು. ಈಚೆಗೆ ಬಹದರರ ಮಕ್ಕಳು ಟೀಪು ಸುಲತಾನರ ದಿವಸದಲ್ಲು ಒಂದು ವರುಷ ಪರ್ಯಂತಕ್ಕೂ ಸಂಸ್ಥಾನ ಖಾಯಂ ಇಟ್ಟು ಇದ್ದರು. ಆ ತರುವಾಯ ಭಾರಿ ಖಂಡಣೆ ಕೊಡುವಂತೆ ಟೀಪು ಸುಲತಾನರ ಅಪ್ಪಣೆ ಆದ್ದರಿಂದ ನಮ್ಮಿಂದ ನಿರ್ವಾಹವಿಲ್ಲ ಇದುವರೆಗೆ ಸಂಸ್ಥಾನ ಬಹಳ ಚೈತನ್ಯ ತಪ್ಪಿತು ಯಾವ ಪ್ರಕಾರಕ್ಕೆ ಅಪ್ಪಣೆ ಕೊಟ್ಟರೆ ಅದೇ ಪ್ರಕಾರಕ್ಕೆ ನಡೆದುಕೊಳ್ಳಲಾದೀತು

ಎಂಬುದಾಗಿ ಹೇಳಿಕೊಂಡ ಕಾರಣ ಆದರೂ ಚಿಂತೆಯೇನು ಕೆಲವು ಗ್ರಾಮುಗಳು ನಿಷ್ಕರ್ಷೆ ಮಾಡಿಕೊಡುತ್ತೇವೆ ಸೀಮೆ ತಮ್ಮ ಸ್ವಾಧೀನಕ್ಕೆ ಬಿಡುವಂತೆ ಅಪ್ಪಣೆ ಆದ್ದರಿಂದ ಅದೇ ಪ್ರಕಾರಕ್ಕೆ ಕಬೂಲಾಗಿ ಕೇಳಲಾಗಿ ಹಿರಿಯ ಚೆಲ್ಲೂರು, ಚಿಕ್ಕ ಚೆಲ್ಲೂರು, ಓಬನಹಳ್ಳಿ, ಕಡೆಹೂಡೆ ಈ ನಾಲ್ಕು ಗ್ರಾಮುಗಳು ಮನೆ ಖರ್ಚಿಗೆ ಅಪ್ಪಣೆ ಕೊಟ್ಟರು. ಆ ತರುವಾಯ ಶೋಭಕೃತ್ ಸಂವತ್ಸರದಲ್ಲೂ ಟೀಪು ಸುಲತಾನರು ಠಾಣೆ ಹಾಕಿಸಿದ್ದರು. ಆ ತರುವಾಯ ವೀರ ತಿಮ್ಮಳನಾಯಕರು ಟೀಪು ಸುಲತಾನರು ಪವುಜು ಸುದಾ ಕೊಡೆಯಾಲದ ಬಳಿ ಇದ್ದರು. ಸರ್ಕಾರದ ಕೆಲಸದ ಮೇಲೆ ಕೊಡೆಯಾಲದ ಬಳಿಯಲ್ಲಿ ಪವುಜಿನ ಸಂಗಡಲೇ ವೀರ ತಿಮ್ಮಳನಾಯಕರು ಇರುತ್ತ ಇರಲಾಗಿ ಅಲ್ಲಿ ಕಾಲವಾದರು. ಆ ತರುವಾಯ ಅವರ ಮಕ್ಕಳು ಹೊಟ್ಟಳ ನಾಯಕರು ಸಹ ಈಚೆಗೆ ಸೌಮ್ಯ ಸಂವತ್ಸರದ ಪರ್ಯಂತಕ್ಕೂ ಸದರಿ ಅಪ್ಪಣೆ ಕೊಟ್ಟ ನಾಲ್ಕು ಗ್ರಾಮುಗಳ ಜಹಗೀರು ಅನುಭವಿಸಿಕೊಳ್ಳುತ್ತ ಇದ್ದರು. ಆ ತರುವಾಯ ಈ ನಾಲ್ಕು ಗ್ರಾಮುಗಳೂ ಜಪ್ತಿ ಆದವು. ಮುಮ್ಮಡಿ ಹೊಟ್ಟಳನಾಯಕರು ಹಾಜರಿದ್ದಾರೆ.

---

ನರಪತಿಗಳು ಕೃಷ್ಣರಾಯರವರು ಅರಸುಗಳಿಗೆ ಅಪ್ಪಣೆ ದಯಪಾಲಿಸಿದ ನಿರೂಪ ಪ್ರತಿ ನಕಲು ವಿವರ—

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರುಷಂಗಳು ೧೪೭೨ನೆಯ ವಿಕ್ರಮ ಸಂವತ್ಸರ ಕಾರ್ತಿಕ ಬ ೨ಲ್ಲು ಶ್ರೀಮದ್ರಾಜಾಧಿರಾಜ ರಾಜ ಪರಮೇಶ್ವರ ಶ್ರೀ ವೀರ ಪ್ರತಾಪ ಶ್ರೀ ವೀರ ಚಿಕ್ಕವೆಂಕಟಪತಿರಾಯರವರು ಪೃಥ್ವೀ ಸಾಮ್ರಾಜ್ಯವಂ ಗೈವ ಕಾಲದಲ್ಲಿ ವೀರ ಹೊಟ್ಟಳನಾಯಕರಿಗೆ ರಾಯಸದ ಪ್ರತಿ॥ ಪೂರ್ವಕ್ಕೆ ನಿಮಗೆ ಸಲ್ಲುವಂಥ ದೊಡ್ಡೇರಿ ಸೀಮೆ, ಸೀರ್‍ಯ, ತಾವರೆಗೆರೆ, ಹಿರಿಯೂರು, ಐಮಂಗಲ, ನಿಡುಗಲ್ಲು ದುರ್ಗ ಇದಕ್ಕೆ ಸಲ್ಲುವಂಥ ಸೀಮೆ ಸಹ ಪುತ್ರ ಪೌತ್ರ ಪಾರಂಪರ್ಯವಾಗಿ ಅನುಭವಿಸಿಕೊಂಡು ಇಹುದು ಎಂದು ಅಪ್ಪಣೆ ಪಾಲಿಸಿದ ವಿವರ—

ದೊಡ್ಡೇರಿ ಸೀಮೆಗೆ ಪೂರ್ವ ದಿಕ್ಕಿಗೆ ಜಾಜೂರು, ಕಾಮಸಮುದ್ರ, ಹಗಲಂ ಬಲ್ ಮೆಳೆ ಮೇರೆ. ಪಶ್ಚಿಮ ದಿಕ್ಕಿಗೆ ಗೋಣೂರು ಮೇರೆ. ಉತ್ತರ ದಿಕ್ಕಿಗೆ ಬಸವನ ಹಳ್ಳಿ, ಭೈರವನ ತಿಪ್ಪೆ ಹೊಲ ಮೇರೆ. ದಕ್ಷಿಣ ದಿಕ್ಕಿಗೆ ಗಣಜದ ಹಳ್ಳ, ದಂಬಳದ ಹೊಲ ಮೇರೆ. ಈ ಮೇರೆ—

ನಿಡುಗಲ್ಲು ಪೂರ್ವ ದಿಕ್ಕಿಗೆ ಪಲ್ಲವಳ್ಳು ಪಾಗುಂಡೆ. ಪಶ್ಚಿಮ ದಿಕ್ಕಿಗೆ ಕೇತ ಗುಂಡನ ಹಳ್ಳಿ ಗೊಲ್ಲನಕುಂಟೆ. ಉತ್ತರ ದಿಕ್ಕಿಗೆ ಪೆಣ್ಣೋಬನ ಹಳ್ಳಿ ಬಳಿಯಣ ಮುಂಡು ಬಂಡೆ. ದಕ್ಷಿಣಕ್ಕೆ ಹುಲಿಗೆರೆ ಮೇರೆ. ಈ ಮೇರೆಗೆ ರಾಜ್ಯ ದಯಪಾಲಿಸಿ ದಂಥ ಪ್ರತಿ ವಿವರ—

---

ಶುಭಮಸ್ತು

# ಹೊಸಕೋಟೆ ಪಾಳೆಯಗಾರರ ವಂಶವೃಕ್ಷ



# *ಪಾಂಡ್ಯ ಕ್ಷ್ಮಾಪತಿ ಮತ್ತು ಅವನ ಭವ್ಯಾನಂದ ಶಾಸ್ತ್ರ

---

ಪಾಂಡ್ಯವು ದಕ್ಷಿಣ ಭಾರತದ ದಕ್ಷಿಣ ಸೀಮಾಸ್ಥಿತ ಸಮುದ್ರ ತೀರವರ್ತಿಯಾದ ಒಂದು ಪ್ರಾಚೀನ ರಾಜ್ಯವು: ವರ್ತಮಾನ ತಿರುವಾಂಕೂರು ರಾಜ್ಯ; ಮದ್ರಾಸಿನ ದಕ್ಷಿಣ ಭೂಪ್ರದೇಶ; ಕೊಚ್ಚಿ ರಾಜ್ಯದ ಪೂರ್ವ; ಹಾಗೂ, ಇಲ್ಲಿಯ ಮನಾರ್ ಉಪ ಸಾಗರಕ್ಕೆ ಉತ್ತರ ದಿಕ್ಕಿನಲ್ಲಿರುವ ವಿಸ್ತೀರ್ಣವಾದ ಭೂಭಾಗ. ಇವೇ ಒಂದು ಸಮಯ ಪಾಂಡ್ಯ ದೇಶವಾಗಿತ್ತೆಂದು ವಿದ್ವಾಂಸರ ಮತವಾಗಿದೆ. ಪಾಂಡ್ಯ ದೇಶವು ಅತಿ ಪ್ರಾಚೀನ ಕಾಲದಿಂದ ಪ್ರಸಿದ್ಧವಾಗಿದೆ. ಈ ಮಾತು ಪಾಣಿನಿಯ ಅಷ್ಟಾಧ್ಯಾಯೀ, ರಾಮಾಯಣ, ಮಹಾಭಾರತ, ಮಹಾವಂಶ ಮೊದಲಾದ ಪ್ರಾಚೀನ ಗ್ರಂಥಗಳ ಹೊರತು ಸ್ಟ್ರಾಬೊ, ಪ್ಲಿನೊ, ಪ್ಲೂಟಾರ್ಕ್ ಎಂಬ ಆದಿ ಪಾಶ್ಚಾತ್ಯ ಐತಿಹಾಸಿಕ ವಿದ್ವಾಂಸರ ವರ್ಣನೆಗಳಿಂದಲೂ ಸಿದ್ಧವಾಗುತ್ತದೆ. ಇದೇ ರಾಜ್ಯದ ಉಲ್ಲೇಖವನ್ನು **ಮೇಗಸ್ಥಾನೀಜ**ನು "ಪಾಂಡಿಯನ್", **ಪೆರಿಪ್ಲಸ**ನು "ಪಾಂಡಿಮಂಡಲ", ಹಾಗೆಯೇ **ಟಲೇಮೀ**ನಿಯನು Pandian is Mediterranean, ಹಾಗೂ Modura Regia Pandionis ಎಂಬ ಹೆಸರುಗಳಿಂದ ಮಾಡಿರುವರು. ಪ್ರಾಚೀನ ಸಮಯದಲ್ಲಿ ಇದರ ರಾಜಧಾನಿಯು ಮಧುರಾಪುರಿಯಾಗಿತ್ತು. ಕೆಲವು ಸಮಯ ರಾಮೇಶ್ವರ ದಲ್ಲಿಯೂ ಇದರ ರಾಜಧಾನಿಯು ಇತ್ತೆಂದು ತಿಳಿದುಬಂದಿದೆ.

'ಹಿಂದೀ ವಿಶ್ವಕೋಶ'ದ ಹದಿಮೂರನೆಯ ಭಾಗದಲ್ಲಿ ವಿಸ್ತೃತ ವರ್ಣನೆ ಯೊಡನೆ ಪಾಂಡ್ಯರಾಜರ ಒಂದು ತಾಲಿಕೆಯು ಮುದ್ರಣವಾಗಿದೆ. ಅದರಲ್ಲಿ ವರ್ಣಿ ಸಲ್ಪಟ್ಟ ದೊರೆಗಳ ಹೊರತು ಇದೇ ವಂಶದ ಶಾಖೆಯೊಂದು ದಕ್ಷಿಣ ಕನ್ನಡ ಜಿಲ್ಲೆ ಯಲ್ಲಿಯೂ ರಾಜ್ಯ ಶಾಸನವನ್ನು ಮಾಡುತ್ತಿತ್ತು. ಆ ದೊರೆಗಳ ರಾಜಧಾನಿಯು ಬಾರ ಕೂರಾಗಿತ್ತು. ತತ್ಸಮಯ, ಬಾರಕೂರು ದಕ್ಷಿಣದಲ್ಲಿ ಒಂದು ಸಮೃದ್ಧಶಾಲಿಯಾದ ನಗರವಾಗಿತ್ತು. (ವೀರವರ್ಷ ೪, ಅಂಶ ೧೨–೧೩ರಲ್ಲಿ ಪ್ರಕಟವಾದ ನನ್ನ ಬಾರಕೂರು ಲೇಖನವನ್ನು ನೋಡಿರಿ.) ಈ ವಂಶದ ದೊರೆಗಳ ತಾಲಿಕೆಯು ಈ ಪ್ರಕಾರವಾಗಿದೆ:– (೧) ದೇವ ಪಾಂಡ್ಯ, (೨) ಜಯ, ಅಥವಾ ಭೂತಾಳ ಪಾಂಡ್ಯ, (೩) ವಿದ್ಯುಮ್ನ ಪಾಂಡ್ಯ, (೪) ವೀರ ಪಾಂಡ್ಯ, (೫) ಚಿತ್ರವೀರ್ಯ ಪಾಂಡ್ಯ, (೬) ದೇವವೀರ ಪಾಂಡ್ಯ, (೭) ಬಲ ವೀರ ಪಾಂಡ್ಯ, (೮) ಜಯವೀರ ಪಾಂಡ್ಯ, ('ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ'ವನ್ನು ನೋಡಿರಿ.) ಪ್ರಸಿದ್ಧ ಲೇಖಕರಾದ ಶ್ರೀಯುತ ತಾತಾಚಾರ್ಯರೇ

---

* ಪರಿಷತ್ಪತ್ರಿಕೆಯ ಸುಜ್ಞ ಪಾಠಕರ ಮುಂದೆ ಒಬ್ಬ ಅಪರಿಚಿತ ಸಂಸ್ಕೃತ ಕವಿ, ಹಾಗೂ ಅವನ ಕೃತಿಯ ಪರಿಚಯವನ್ನು ಉಪಸ್ಥಿತ ಮಾಡಬೇಕೆಂದಿರುತ್ತೇನೆ. ಈ ಕವಿಯ ಹೆಸರು ಪಾಂಡ್ಯ ಕ್ಷ್ಮಾಪತಿ; ಅವನ ಕೃತಿಯ ಹೆಸರು ಭವ್ಯಾನಂದ ಶಾಸ್ತ್ರ. ನಾನು ಕವಿಯ ಕೃತಿಯ ಪರಿಚಯದೊಡನೆ ಅವನ ಜೀವ ನಿಯ ಮುಖ್ಯ ಮುಖ್ಯ ಘಟನೆಗಳನ್ನೂ ಉಲ್ಲೇಖಿಸಬೇಕೆಂದಿದ್ದೆನು. ಆದರೆ ಕೇವಲ ಪ್ರಯತ್ನಪಟ್ಟರೂ ಕವಿಯ ವಿಶೇಷ ಪರಿಚಯವು ಉಪಲಬ್ಧವಾಗದಿರುವುದು ಖೇದ!—ಲೇಖಕ.

ಮೊದಲಾದ ಕೆಲವು ವಿದ್ವಾಂಸರು ಪಾಂಡ್ಯ ವಂಶವನ್ನು ಜೈನ ರಾಜ ವಂಶವನ್ನಾಗಿ ಹೇಳಿರುತ್ತಾರೆ. ಆದರೆ ಹಲವು ವಿದ್ವಾಂಸರು ಅವರ ಈ ಮತವನ್ನು ಒಪ್ಪುವುದಿಲ್ಲ. ಇರಲಿ; ಮಧುರೆಯ ಶಾಸಕರಾದ ಪಾಂಡ್ಯ ದೊರೆಗಳಲ್ಲಿ ಹಲವರು ಭಿನ್ನ ಭಿನ್ನ ಕಾರಣ ಗಳಿಂದ ಬೇರೆಬೇರೆ ಧರ್ಮವನ್ನು ಗ್ರಹಣೆ ಮಾಡಿದರೂ ದಕ್ಷಿಣ ಕನ್ನಡ ಜಿಲ್ಲೆಯ ಈ ವಂಶದ ಎಲ್ಲಾ ದೊರೆಗಳು ಜೈನ ಧರ್ಮಾವಲಂಬಿಗಳೇ ಆಗಿದ್ದರೆಂಬುದು ಹಲವು ಪ್ರಮಾಣಗಳಿಂದ ಸಿದ್ಧವಾಗುತ್ತದೆ. ಇದೇ ವಂಶದ ದೊರೆಯಾದ ಭೂತಾಳ ಪಾಂಡ್ಯ ನಿಂದ ಪ್ರಚಲಿತವಾದ ಅಳಿಯ ಸಂತಾನದ ಕಟ್ಟು ಈಗಲೂ ಅಲ್ಲಿಯ ಜೈನರಲ್ಲಿ ವ್ಯವಹಾರದಲ್ಲಿದೆ.—

> **ನಾನಾ ನವ್ಯ ರಸಾಸ್ಪದಂ ಬುಧಜನಾನಂದಾಪ್ತು ಪೂರಪ್ರದಂ ।**
> **ಭವ್ಯಾಹ್ಲಾದ ಸಮರ್ಪಣೈಕ ನಿಪುಣಂ ಗ್ರಂಥಂ ಪ್ರಬೋಧಾಕರಂ ॥**
> **ಯುಕ್ತ್ಯಾಶ್ರೀ ಜಿನದತ್ತ ಭೂಮಿಪ ಮಹಾ ವಂಶಾಬ್ಧಿ ಪೂರ್ಣೇಂದುನಾ ।**
> **ಪಾಂಡ್ಯ ಕ್ಷ್ಮಾಪತಿನಾ ವಿಶುದ್ಧ ಮತಿನಾ ಸೌಖ್ಯಾಶ್ರಯಂ ನಿರ್ಮಿತಂ ॥**

ಭವ್ಯಾನಂದ ಶಾಸ್ತ್ರದ ಈ ಅಂತಿಮ ಪದ್ಯದಿಂದ, ಪಾಂಡ್ಯ ಕ್ಷ್ಮಾಪತಿಯು ಈ ವಂಶದ ರಾಜನಾಗಿರದೆ ಜಿನದತ್ತರಾಯ ವಂಶದ ರಾಜನಾಗಿದ್ದನೆಂಬುದು ಸ್ಪಷ್ಟವಾಗಿ ತಿಳಿಯುವುದು. ಈಗ ನಾವು, ಜಿನದತ್ತರಾಯನು ಯಾರು? ಅವನ ವಂಶದ ದೊರೆಗಳ ಹೆಸರಿನ ಕೊನೆಯಲ್ಲಿ ಪಾಂಡ್ಯ ಶಬ್ದವು ಎಂದಿನಿಂದ ಮತ್ತು ಏಕೆ ಸೇರಿಸಲ್ಪಡುತ್ತಿತ್ತು? ಎಂಬುದನ್ನು ವಿಚಾರ ಮಾಡೋಣ. ಪೂರ್ವ ಕಾಲದಲ್ಲಿ ಉತ್ತರ ಮಧುರೆ (ಮಥುರೆ) ಯಲ್ಲಿ ಉಗ್ರ ವಂಶ ಶ್ರೇಷ್ಠರಾದ ವೀರನಾರಾಯಣನೇ ಮೊದಲಾದ ಹಲವು ರಾಜರು ರಾಜ್ಯಭಾರವನ್ನು ಮಾಡಿದರು. ಹಿಂದೆ ಇದೇ ವಂಶದ ದೊರೆಯಾದ ಸಾಕಾರ ಮಹಾರಾಜನು ಉಕ್ತ ಉತ್ತರ ಮಧುರೆಯಲ್ಲಿ ರಾಜ್ಯ ಶಾಸನವನ್ನು ಮಾಡುತ್ತ ಒಂದು ದಿವಸ ಒಬ್ಬ ಬೇಡನ ರೂಪವತಿ ಕನ್ಯೆಯಲ್ಲಿ ಮುಗ್ಧನಾಗಿ ತನ್ನ ಸುಶೀಲೆಯಾದ ಧರ್ಮಪತ್ನಿ ಶ್ರೀಯಲಾದೇವಿ, ಹಾಗೂ ಪುತ್ರ ಶ್ರೇಷ್ಠನಾದ ಜಿನದತ್ತರಾಯ—ಇವ ರನ್ನು ತ್ಯಾಗ ಮಾಡಿದನು. ಹಿಂದೆ ಒಂದು ದಿವಸ, ದೊರೆಯಾದ ಸಾಕಾರ ಮಹಾ ರಾಜನು ಬೇಡನ ಕನ್ಯೆಯಾದ ಪದ್ಮಿನಿಯ ಕಟು ಪ್ರೇರಣೆಯಿಂದ ಜಿನದತ್ತನನ್ನು ಕೊಲ್ಲಿಸುವುದಕ್ಕಾಗಿ ಸಿದ್ಧನಾದನು. ಈ ಕ್ರೂರ ಸಮಾಚಾರವು ಸತೀಮಣಿಯಾದ ಶ್ರೀಯಲೆಗೂ ಗೊತ್ತಾಯಿತು. ತತ್‌ಕ್ಷಣವೇ ಆಕೆಯು ಕುಲದೇವಿಯಾದ ಪದ್ಮಾ ವತಿಯ ಮೂರ್ತಿಯೊಡನೆ ತನ್ನ ಪ್ರಿಯ ಪುತ್ರನಾದ ಜಿನದತ್ತನನ್ನು ಮಧುರೆಯಿಂದ ಕಳುಹಿಸಿಬಿಟ್ಟಳು. ಜಿನದತ್ತನು ಅಲ್ಲಿಂದ ಹೊರಟು ಕೆಲವು ದಿನಗಳ ಮೇಲೆ ವರ್ತಮಾನ ಮೈಸೂರು ರಾಜ್ಯಾಂತರ್ಗತವಾದ ಹೊಂಬುಚ್ಚಕ್ಕೆ ಬಂದು ಸೇರಿ, ಅಲ್ಲಿ ಅವನು ಕೆಲವು ಬಲಶಾಲಿಗಳಾದ ಬೇಡರ ಸಹಾಯದಿಂದ ರಾಜ್ಯವನ್ನು ಸ್ಥಾಪಿಸಿ ಶಾಸನವನ್ನು ಮಾಡತೊಡಗಿದನು. ಜಿನದತ್ತನು ದಕ್ಷಿಣ ಮಧುರೆಯ ಪೂರ್ವೋಕ್ತ ಪ್ರಸಿದ್ಧ ಪಾಂಡ್ಯ ವಂಶದ ರಾಜನಾದ ವೀರಪಾಂಡ್ಯನ ಮಕ್ಕಳಾದ ಪದ್ಮಿನಿ, ಹಾಗೂ ಮನೋರಮೆ—ಇವರನ್ನು ವಿವಾಹ ಮಾಡಿಕೊಂಡನು. ಇವರಿಗೆ ಪಾರ್ಶ್ವಚಂದ್ರ

ಮತ್ತು ನೇಮಿಚಂದ್ರ ಎಂಬ ಇಬ್ಬರು ಪುತ್ರರು ಜನಿಸಿದರು. ಪಾರ್ಶ್ವಚಂದ್ರನು ತನ್ನ ಶಾಸನ ಕಾಲದಲ್ಲಿ ಪೂರ್ವದಲ್ಲಿ ಭೈರವಿ ಪದ್ಮಾವತಿಯಿಂದ ತನ್ನ ತಂದೆಯು ರಕ್ಷಿಸಲ್ಪಟ್ಟದ್ದರಿಂದ ತನ್ನ ಹೆಸರಿನ ಮುಂದೆ ಭೈರವ ಶಬ್ದವನ್ನೂ, ತನ್ನ ತಾಯಿಯು ಪಾಂಡ್ಯ ರಾಜನ ಪುತ್ರಿಯಾದುದರಿಂದ ಅದೇ ಭೈರವ ಶಬ್ದದ ಮೊದಲು ಪಾಂಡ್ಯ ಶಬ್ದವನ್ನೂ ಸೇರಿಸಿ ತಾನು ಪಾರ್ಶ್ವಚಂದ್ರ ಪಾಂಡ್ಯ ಭೈರವನೆಂಬ ಹೆಸರಿನಿಂದ ವಿಖ್ಯಾತನಾದನು. ಇವನ ಹಿಂದಿನ ಈ ವಂಶದ ದೊರೆಗಳೆಲ್ಲ ಇವನಂತೆಯೇ ತಮ್ಮ ತಮ್ಮ ಹೆಸರಿನ ಕೊನೆಯಲ್ಲಿ "ಪಾಂಡ್ಯ ಭೈರವ ರಾಜ" ಎಂದು ಸೇರಿಸುತ್ತ ಹೋದರು.

ಇದೇ ವಂಶದ ದೊರೆಗಳು ಹಿಂದೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿಯೂ ಆಳುತ್ತಿದ್ದರು. ಇವರ ರಾಜಧಾನಿ ಕಾರ್ಕಳದ ಹಿರಿಯಂಗಡಿ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ರಾಜ್ಯ ಶಾಸನವನ್ನು ಮಾಡಿದ ಈ ವಂಶದ ದೊರೆಗಳ ತಾಲಿಕೆಯು ಈ ಪ್ರಕಾರವಾಗಿದೆ:—(೧) ಭೈರವರಾಯ, (೨) ಪಾಂಡ್ಯದೇವರಸ, ಅಥವಾ ಪಾಂಡ್ಯ ಚಕ್ರವರ್ತಿ, (೩) ಲೋಕನಾಥ ದೇವರಸ, (೪) ವೀರಪಾಂಡ್ಯ ದೇವರಸ, (೫) ರಾಮನಾಥ ಅರಸ, (೬) ಭೈರರಸ ಒಡೆಯ, (೭) ವೀರ ಪಾಂಡ್ಯ ಭೈರರಸ ಒಡೆಯ, (೮) ಅಭಿನವ ಪಾಂಡ್ಯ ದೇವ, ಅಥವಾ ಪಾಂಡ್ಯ ಚಕ್ರವರ್ತಿ, (೯) ಹಿರಿಯ ಭೈರವದೇವ ಒಡೆಯ, (೧೦) ಇಮ್ಮಡಿ ಭೈರವರಾಯ, (೧೧) ಪಾಂಡ್ಯಪ್ಪ ಒಡೆಯ, (೧೨) ಇಮ್ಮಡಿ ಭೈರವರಾಯ, (೧೩) ರಾಮನಾಥ ಒಡೆಯ, (೧೪) ವೀರ ಪಾಂಡ್ಯ (ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸವನ್ನು ನೋಡಿರಿ). ಮೇಲೆ ಕೊಟ್ಟ ತಾಲಿಕೆಯಲ್ಲಿ ತೋರುವ ದೊರೆಗಳಲ್ಲಿ ಕವಿ ಶ್ರೇಷ್ಠನಾದ ಪಾಂಡ್ಯ ಕ್ಷ್ಮಾಪತಿಯು ಇಂಥವನೇ ಎಂದು ನಿರ್ಧರಿಸುವುದು ಕಷ್ಟ. ಈ ವಿಷಯವನ್ನು ನಿರ್ಧರಿಸುವುದಕ್ಕೆ ನಮಗೆ ಪ್ರಬಲವಾದ ಪ್ರಮಾಣಗಳು ಬೇಕಾಗಿವೆ. ಕವಿಯು ಈ ತನ್ನ ಗ್ರಂಥದಲ್ಲಿ ವರ್ಧಮಾನ, ದೇವಚಂದ್ರ, ನಾಗಚಂದ್ರ—ಈ ಮೂರು ಮಂದಿಗಳನ್ನು ಸ್ತುತಿಸಿರುತ್ತಾನೆ. ಆದರೆ, ಈ ಹೆಸರಿನ ಹಲವು ಕವಿಗಳು ಆಗಿಹೋಗಿರುತ್ತಾರೆ. (೧) ವರ್ಧಮಾನ (ಹಸ್ತಿಮಲ್ಲನ ಅಣ್ಣ).—ಇವನು ಗಣರತ್ನ ಮಹೋದಧಿ, ನೇಮಿದೂತ ಕಾವ್ಯ—ಇವುಗಳನ್ನು ಬರೆದಿರುತ್ತಾನೆ. ಇವನ ಸಮಯವು ಅಜ್ಞಾತವಾಗಿದೆ. (೨) ವರ್ಧಮಾನ.—ಇವನು ತತ್ತ್ವ ನಿಶ್ಚಯ, ದ್ವಾದಶಾಂಗ ಚರಿತ, ವರಾಂಗ ಚರಿತ—ಇವುಗಳನ್ನು ಬರೆದಿರುತ್ತಾನೆ. ಇವನ ಸಮಯವೂ ಅಜ್ಞಾತವಾಗಿದೆ. (೩) ವರ್ಧಮಾನ.—ಇವನು ದಶಭಕ್ತಿಯನ್ನು ಬರೆದಿರುತ್ತಾನೆ. ಇವನ ಸಮಯವು ಸುಮಾರು ಕ್ರಿ. ಶ. ೧೬೦೦. ಇವನು ನಗರದ ೪೬ನೆಯ ಶಾಸನವನ್ನೂ ಬರೆದಿರುತ್ತಾನೆ. (ಕನ್ನಡ ಕವಿಚರಿತೆ, ದ್ವಿ. ಭಾಗ, ಪುಟ ೩೦೭.) (೪) ವರ್ಧಮಾನ.—ಇವನು ಕಾತಂತ್ರವಿಸ್ತರವನ್ನು ಬರೆದಿರುತ್ತಾನೆ. ತನ್ನ ಗ್ರಂಥದಲ್ಲಿ ಕವಿಯು ಅಲ್ಪ ಸ್ವಲ್ಪ ಪರಿಚಯವೂ ದೊರೆಯದಿರುವುದರಿಂದ ಇವನ ಸಮಯವೂ ಅಜ್ಞಾತವಾಗಿಯೇ ಇದೆ. (೧) ನಾಗಚಂದ್ರ ಯತಿ.—ಇವನು ಲಬ್ಧಸಾರಕ್ಕೆ ಟೀಕೆಯನ್ನು ಬರೆದಿರುತ್ತಾನೆ. ಇವನ ಕಾಲವು ಅಜ್ಞಾತವಾಗಿದೆ. (೨) ನಾಗಚಂದ್ರ.—ಇವನು ಕನ್ನಡ ಕವಿ. ಇವನ ಸಮಯವು ೧೧೦೫. (ಕನ್ನಡ ಕವಿಚರಿತೆ, ಪ್ರ. ಭಾಗ, ಪುಟ ೮೦.) (೧) ದೇವಚಂದ್ರ.—ಇವನು ರಾಜಾವಳಿ ಕಥೆ ಮುಂತಾದುವುಗಳನ್ನು

ಬರೆದಿರುತ್ತಾನೆ. ಇವನ ಸಮಯ ಕ್ರಿ. ಶ. ಸುಮಾರು ೧೭೭೦ರಿಂದ ೧೮೪೧. (ಕನ್ನಡ ಕವಿಚರಿತೆ, ತೃ. ಭಾಗ, ಪುಟ ೧೪೭.) (೨) ದೇವಚಂದ್ರ.—ಇವನು ಶ್ರೀಪಾಲಚರಿತೆಯ ಕರ್ತನು. ಇವನ ಸಮಯವು ಕ್ರಿ. ಶ. ಸುಮಾರು ೧೬೫೦. (ಕನ್ನಡ ಕವಿಚರಿತೆ, ತೃ. ಭಾಗ.) ಮೇಲೆ ಹೇಳಿದ ಕವಿಗಳಲ್ಲಿ ಹಲವರು ಗೃಹಸ್ಥರಾಗಿರುವರು. ಕಾರ್ಕಳದ ಕಲ್ಯಾಣಕೀರ್ತಿಯ ಜಿನಯಜ್ಞ ಫಲೋದಯವೆಂಬ ಗ್ರಂಥದಿಂದ ವರ್ಧಮಾನ ನೆಂಬೊಬ್ಬ ಕವಿಯು ಲಲಿತಕೀರ್ತಿಯ ಶಿಷ್ಯನಾಗಿದ್ದನೆಂದು ತಿಳಿದುಬರುತ್ತದೆ. ಅತಃ, ನಾಗಚಂದ್ರ ಮತ್ತು ದೇವಚಂದ್ರ—ಇವರೂ ಪ್ರಾಯಃ ಲಲಿತಕೀರ್ತಿಯ ಶಿಷ್ಯ ರಾಗಿದ್ದರೂ ಇರಬಹುದು. ಇರಲಿ; ಈ ವಂಶದ ದೊರೆಗಳು ಜ್ಞಾನಚಂದ್ರಾ ಭ್ಯುದಯ, ಜಿನಯಜ್ಞ ಫಲೋದಯ—ಇವುಗಳ ಕರ್ತನಾದ ಕಲ್ಯಾಣಕೀರ್ತಿ, ಭರತೇಶ್ವರ ವೈಭವ, ಶತಕತ್ರಯಿ ಮುಂತಾದುವುಗಳ ಲೇಖಕನಾದ ರತ್ನಾಕರಸಿದ್ಧ ಮುಂತಾದ ಹಲವು ಜೈನ ಕವಿಗಳಿಗೆ ಆಶ್ರಯವನ್ನು ಕೊಟ್ಟಿದ್ದರು. ಇನ್ನು, ಭವ್ಯಾ ನಂದ ಶಾಸ್ತ್ರದ ವಿಷಯವಾಗಿ ಕೊಂಚ ವಿಚಾರ ಮಾಡೋಣ:—ಈ ಭವ್ಯಾನಂದ ಶಾಸ್ತ್ರವು ೧೧೫ ಶ್ಲೋಕಗಳ ಒಂದು ಸಣ್ಣ ಗ್ರಂಥ. ಗ್ರಂಥವು ಆಕಾರದಲ್ಲಿ ಸಣ್ಣ ದಾಗಿದ್ದರೂ ಸಂಪೂರ್ಣ ಗ್ರಂಥ ಮಾಧುರ್ಯ ಸೌಕುಮಾರ್ಯಾದಿ ಕಾವ್ಯೋಚಿತವಾದ ಗುಣಗಳಿಂದ ತುಂಬಿದೆ. ಇದರಲ್ಲಿ ದೇವ, ಗುರು, ಶಾಸ್ತ್ರ—ಇವುಗಳ ವಿವೇಚನಾತ್ಮಕ ಲಕ್ಷಣವೂ, ಕಷಾಯವನ್ನು ತ್ಯಾಗಮಾಡಬೇಕೆಂಬ ಉಪದೇಶವೂ, ಸ್ತ್ರೀಸುಖದ ನಿಸ್ಸಾರತೆಯೂ, ಮೋಕ್ಷವನ್ನು ಪಡೆಯಬೇಕೆಂಬ ಸಂದೇಶವೂ ವರ್ಣಿಸಲ್ಪಟ್ಟಿವೆ.

**ಕೆ. ಭುಜಬಲಿ ಶಾಸ್ತ್ರೀ.**

---

# ಕಣಿಕನ ಕುಟಿಲ ನೀತಿ

ಮಹಾಭಾರತದಲ್ಲಿಯ ಕಣಿಕನೂ, ರಾಮಚಂದ್ರನಿಗೆ ಉಪದೇಶ ಮಾಡಿದ ರಾಮಾಯಣದಲ್ಲಿಯ ಜಾಬಾಲಿಯೂ ಒಂದೇ ವರ್ಗದವರು. ಇವರು ಚಾರ್ವಾಕನ ಅಣ್ಣತಮ್ಮಂದಿರೆಂದೆನ್ನಲಿಕ್ಕೆ ಅಡ್ಡಿಯಿಲ್ಲ. ಪಾಶ್ಚಾತ್ಯ ದೇಶದಲ್ಲಿ ಆಧಿ ಭೌತಿಕ ಸುಖ ವಾದವೊಂದಿದೆ. ಅದರಲ್ಲಿಯ ಒಂದು ವರ್ಗದವರೂ ಇದೇ ಮಾದರಿಯವರು. ಕಣಿಕನ ಕುಟಿಲ ನೀತಿಯ ಮಾದರಿಯನ್ನು ತೋರಿಸುವುದಕ್ಕಾಗಿ ಮಹಾಭಾರತದ ಆದಿ ಪರ್ವದ ೧೪೦ನೆಯ ಅಧ್ಯಾಯದಲ್ಲಿ ಉಕ್ತವಾದ ವಿಚಾರಗಳನ್ನಿಲ್ಲಿ ಸಂಗ್ರಹವಾಗಿ ಹೇಳುತ್ತೇವೆ.—

"ಪಾಂಡವರು ಬಲೋತ್ಸಿಕ್ತರೂ ವೀರರೂ ಆದದ್ದನ್ನು ಕೇಳಿ ಅಸೂಯೆಪಟ್ಟು ಧೃತರಾಷ್ಟ್ರನು ಚಿಂತಾಯುಕ್ತನಾಗಿ, ಮಂತ್ರಜ್ಞನೂ ರಾಜ ಶಾಸ್ತ್ರಾರ್ಥ ವಿಶಾರದನೂ ಆದ ಕಣಿಕನನ್ನು ಕರೆಯಿಸಿಕೊಂಡು, 'ಪಾಂಡವರೊಡನೆ ಸಂಧಿಯನ್ನು ಮಾಡಿಕೊಳ್ಳಬೇಕೋ ವಿಗ್ರಹವನ್ನು ಮಾಡಬೇಕೋ, ಕಣಿಕನೇ! ನಿಶ್ಚಯವಾಗಿ ಹೇಳು' ಎನ್ನಲು, ಅವನು 'ನನ್ನ ಮಾತುಗಳ ಬಗ್ಗೆ ನೀವು ಅಸೂಯೆಪಡದಿದ್ದರೆ ನನ್ನ ಅಭಿಪ್ರಾಯವನ್ನು ಹೇಳುವೆನು' ಎಂದು ತನ್ನ ಪುರಾಣವನ್ನು ಬಿಚ್ಚಿದ್ದಾನೆ. ಅವನು ತನ್ನ ತೀಕ್ಷ್ಣವಾದ ರಾಜ ಶಾಸ್ತ್ರಾರ್ಥ ದರ್ಶನವನ್ನು ಹೀಗೆ ಹೇಳುವನು:—

ಯಾವಾಗಲೂ ದಂಡವನ್ನು ಎತ್ತಿ ಹಿಡಿಯಬೇಕು; ಯಾವಾಗಲೂ ಪೌರುಷ ವನ್ನು ಪ್ರಕಟಿಸುತ್ತಿರಬೇಕು; ಅಪಕೃಷ್ಟರನ್ನು ಕೇವಲ ಬೆದರಿಸಬೇಕು; ದಂಡವನ್ನು ಎತ್ತಿ ಅವರನ್ನು ನಾಶಪಡಿಸುವ ಕಾರಣವಿಲ್ಲ. ಸಮಾನರಾದವರಲ್ಲಿ ಪೌರುಷವನ್ನು ತೋರಿಸಬೇಕು; ಅಂಥವರನ್ನು ಉತ್ಕೃಷ್ಟ ಬಲ ಸಂಪಾದಿಸಿ ನಾಶಪಡಿಸಬೇಕು. ತನಗಿಂತ ಮೇಲಾದವರಿದ್ದರೆ ಅವರಿಗೆ ತನ್ನ ಛಿದ್ರಗಳನ್ನೂ ನ್ಯೂನತೆಯನ್ನೂ ತೋರಿಸಬಾರದು. ಶತ್ರುವಿನ ಕೋಶ ಬಲಾದಿಗಳ ಛಿದ್ರಗಳನ್ನು ತಿಳಿದುಕೊಳ್ಳ ಬೇಕು.*

ಯಾವಾಗಲೂ ದಂಡವನ್ನು ಎತ್ತಿ ಹಿಡಿದಿದ್ದರೆ ಜನರು ಬೆದರುತ್ತಾರೆ. ಎಲ್ಲ ಕಾರ್ಯಗಳನ್ನೂ ದಂಡದಿಂದಲೇ ಸಾಧ್ಯಮಾಡಿಕೊಳ್ಳಬೇಕು. ತನ್ನ ಹುಳುಕು ಗಳನ್ನು ಮುಚ್ಚಿಕೊಳ್ಳಬೇಕು; ಶತ್ರುವಿನ ಹುಳುಕುಗಳನ್ನು ಹುಡುಕುತ್ತಿರಬೇಕು. ಕೂರ್ಮವು ತನ್ನ ಅಂಗಗಳನ್ನು ಮುಚ್ಚಿಕೊಳ್ಳುವಂತೆ ಚಾಣನು ತನ್ನ ಛಿದ್ರಗಳನ್ನು ಆಚ್ಛಾದಿಸಬೇಕು. ಶತ್ರು ನಾಶವನ್ನು ಒಮ್ಮೆ ಆರಂಭಿಸಿದ ಬಳಿಕ ಬಿಡಬಾರದು. ಮುಳ್ಳನ್ನು ಅರ್ಧ ಮಾತ್ರ ತೆಗೆದುಬಿಟ್ಟರೆ ಹುಣ್ಣನ್ನು ಹುಟ್ಟಿಸುವುದು.

* ನಿತ್ಯಮುದ್ಯತ ದಂಡಃ ಸ್ಯಾತ್ | ನಿತ್ಯಂ ನಿವೃತ ಪೌರುಷಃ ||
ಅಚ್ಛಿದ್ರಚ್ಛಿದ್ರದರ್ಶೀಸ್ಯಾತ್ | ಪರೇಷಾಂ ವಿವರಾನುಗಃ ||

ಅಪಕಾರಿಯಾದ ಶತ್ರುವಿನ ವಧವೇ ಪ್ರಶಸ್ತವೆಂದು ಹೇಳುವರು. ಅವನು ಸುವಿದೀರ್ಣನಾಗುವಂತೆ, ಇಲ್ಲವೆ ಸುಪಲಾಯನ ಹೊಂದುವಂತೆ ಮಾಡಬೇಕು. ಅವನ ಆಪತ್ಕಾಲವನ್ನು ಕಂಡುಹಿಡಿದು ಕಾರ್ಯ ಮಾಡಬೇಕು; ಆಗ ಉಳಿದ ವಿಚಾರವನ್ನು ಮಾಡಕೂಡದು. ಶತ್ರುವು ದುರ್ಬಲನೆಂದು ಉಪೇಕ್ಷೆಯನ್ನು ಮಾಡಕೂಡದು. ಅಗ್ನಿಯು ಅಲ್ಪವಾದರೂ ಆಶ್ರಯದ ಬಲದಿಂದ ವನವನ್ನೆಲ್ಲ ದಹಿಸುವುದು. ತನಗೆ ಅರಿಷ್ಟ ಕಾಲ ಬಂದಾಗ, ಅಂಥ ಕಾಲದಲ್ಲಿ ಅಂಧನಾಗಿ ಆಚರಿಸಬೇಕು. ಪ್ರಸಂಗ ವಿಶೇಷದಲ್ಲಿ ಬಾಧಿರ್ಯವನ್ನಾದರೂ ನಟಿಸಬೇಕು.* ಜನರು ಅಪಮಾನ ಮಾಡಿದರೆ, ನೋಡದಿದ್ದವರಂತೆ, ಕೇಳದಿದ್ದವರಂತೆ ನಡೆಯಬೇಕು. ಪ್ರಸಂಗ ಬಂದಾಗ ಕ್ಷಾತ್ರ ಧರ್ಮವನ್ನು ಬದಿಗಿಕ್ಕಿ, ಭಿಕ್ಷಾಚರ್ಯವನ್ನು ಚರಿಸಬೇಕು; ತೃಣಮಯ ಚಾಪ ವನ್ನು ಮಾಡಬೇಕು. ಮೃಗಗಳನ್ನು ಬೇಡರು ಮಲಗಿ ಕೊಲ್ಲುವಂತೆ ಮೃಗಶಾಯಿಕೆ ಯನ್ನು ಮಾಡಿ ಮಲಗಿಕೊಂಡು ಕಾರ್ಯವನ್ನು ಸಾಧಿಸಬೇಕು.

ಶತ್ರುವು ಅಳವಿನಲ್ಲಿ ಬಂದಾಗ, ಸಾಂತ್ವಾದಿ ಉಪಾಯಗಳಿಂದ ಅವನನ್ನು ನಾಶ ಗೊಳಿಸಬೇಕು; ಶರಣಾಗತನೆಂದು ಅವನಲ್ಲಿ ಕರುಣೆಯನ್ನು ಮಾಡಕೂಡದು. ಪೂರ್ವಾಪಕಾರಿಯಾದ ಅಮಿತ್ರನನ್ನು ದಾನಾದಿಗಳಿಂದಾದರೂ ವ್ಯವಸ್ಥಿಪಡಿಸಬೇಕು. ಪರಪಕ್ಷದ ಮೂಲವನ್ನೇ ಆದಿತಃ ಕಡಿದೊಗೆಯಬೇಕು; ಬಳಿಕ ತತ್ಪಕ್ಷೀಯರ, ತತ್ಸಹಾಯಕರ ಮೂಲವನ್ನೇ ಛೇದಿಸಿ ಒಗೆದರೆ ತಜ್ಜೀವಿಗಳ ಕಥೆಯೆಲ್ಲ ಮುಗಿದು ಹೋಗುವುದು. ವನಸ್ಪತಿಯ ಮೂಲವನ್ನೇ ಕಡಿದು ಒಗೆದರೆ ಟೊಂಗೆಗಳು ಹೇಗೆ ನಿಲ್ಲುವುವು? ಏಕಾಗ್ರಚಿತ್ತನಾಗಿ ತನ್ನ ವಿವರಗಳನ್ನು ತೋರಿಸದೆ ಶತ್ರುವಿನ ವಿವರ ಗಳನ್ನು ನೋಡುತ್ತಿರಬೇಕು. ರಾಜನು ನಿತ್ಯ ಉದ್ವಿಗ್ನನಾಗಿಯೇ ಆಚರಿಸುತ್ತಿರ ಬೇಕು; ಎಂದರೆ, ಶತ್ರುವಿನ ಬಗ್ಗೆ ನಿಃಶಂಕಿತನಾಗಿರಕೂಡದು. ಅಗ್ನಿಯ ಆಧಾನ ವನ್ನು ಮಾಡಿಯಾಗಲಿ, ಯಜ್ಞವನ್ನು ನೆರವೇರಿಸಿಯಾಗಲಿ, ಕಾಷಾಯ ವಸ್ತ್ರವನ್ನು ಉಟ್ಟುಕೊಂಡಾಗಲಿ, ಜಟೆಯನ್ನು ಧರಿಸಿಯಾಗಲಿ, ಕೃಷ್ಣಾಜಿನವನ್ನು ಹೊದೆದಾಗಲಿ, ಜನರಿಗೆ ವಿಶ್ವಾಸವನ್ನು ಹುಟ್ಟಿಸಿ, ಬಳಿಕ ತೋಳದಂತೆ ಕಾಯಕವನ್ನು ನಡೆಯಿಸಬೇಕು. ಕಾರ್ಯಸಾಧನೆಯಲ್ಲಿ ಶೌಚವೂ ಧರ್ಮವೂ ಅಂಕುಶದಂತೆ ಪ್ರಯೋಜನಕ್ಕೆ ಬರುತ್ತವೆ. ಗಿಡವನ್ನು ಬಗ್ಗಿಸಿ, ಬಳಿಕ ಫಲಿತ ಶಾಖೆಗಳನ್ನು ಸವರಬೇಕು.† ಲೋಕ ದಲ್ಲಿ ಫಲಾರ್ಥಕ್ಕಾಗಿ ಪುರುಷರ ಸಮಾರಂಭವಿರುತ್ತದೆ. ಕಾಲವು ವಿಪರೀತವಿರುವ ವರೆಗೆ ಶತ್ರುವನ್ನು ಹೆಗಲಮೇಲೆ ಹೊತ್ತುಕೊಂಡು ತಿರುಗಬೇಕು; ಅನುಕೂಲ ಕಾಲವು ಬಂದೊಡನೆಯೇ, ಕೊಡವನ್ನು ಇಕ್ಕರಿಸುವಂತೆ ಕಲ್ಲಿಗಿಕ್ಕರಿಸಬೇಕು. ಅಮಿತ್ರನು ಬಹಳ ದೈನ್ಯವನ್ನು ತೋರಿಸಿ ಮಾತನಾಡಿದರೂ ಅವನನ್ನು ಬಿಡ ಲಿಕ್ಕಾಗದು. ಅಪಕಾರಿಯ ಮೇಲೆ ಕೃಪೆಯನ್ನು ತೋರಿಸಕೂಡದು; ಸಾಂತ್ವನ ದಿಂದಾಗಲಿ ದಾನದಿಂದಾಗಲಿ ಅವನನ್ನು ವಿನಾಶಗೊಳಿಸಬೇಕು; ಭೇದ ದಂಡ ಮೊದಲಾದ ಸರ್ವೋಪಾಯಗಳಿಂದ ಅವನನ್ನು ವಿನಾಶಪಡಿಸಬೇಕು.

---

* ಅಂಧಸ್ಯಾದಂಧ ವೇಲಾಯಾಮ್ | ಬಾಧಿರ್ಯಮಪಿ ಚಾಶ್ರಯೇತ್ ||

† ಅನಾಮ್ಯ ಫಲಿತಾಂ ಶಾಖಾಂ | ಪಕ್ವಂ ಪಕ್ವಂ ಪ್ರಶಾಂತಯೇತ್ ||

ಸಾಂತ್ವನದಿಂದ, ಭೇದದಿಂದ, ದಂಡದಿಂದ, ದಾನದಿಂದ ಅಮಿತ್ರನನ್ನು ಹೇಗೆ ನಾಶಗೊಳಿಸಬೇಕೆಂಬ ಧೃತರಾಷ್ಟ್ರನ ಪ್ರಶ್ನೆಗೆ ಪುನಃ ಕಣಿಕನು ಒಂದು ಕಥೆಯನ್ನು ಹೇಳುತ್ತಾನೆ:—

ರಾಜನೀತಿ ಶಾಸ್ತ್ರಾರ್ಥ ದರ್ಶಿಯಾದ ಸ್ವಾರ್ಥ ಪಾಂಡಿತ್ಯವನ್ನು ಪಡೆದ ನರಿಯೊಂದಿದ್ದಿತು. ಅದಕ್ಕೆ ಹುಲಿ ಇಲಿ ತೋಳ ಮುಂಗುಲಿಗಳು ಗೆಳೆಯರಾಗಿದ್ದರು. ಅವು ಅಡವಿಯಲ್ಲಿ ಒಂದು ಮೃಗ ಯೂಥ ಪತಿಯನ್ನು ಕಂಡವು. ಆ ಚಿಗರೆಯು ಹರೆಯದಿಂದ, ವೇಗದಿಂದ ಬಲಿಷ್ಠವಾದುದರಿಂದ ಅನೇಕ ಸಾರಿ ಯತ್ನಿಸಿದರೂ ಅದನ್ನು ಕೊಲ್ಲುವುದು ವ್ಯಾಘ್ರಾದಿಗಳಿಗೆ ಅಶಕ್ಯವಾಯಿತು. ಜಂಬುಕವು ಆಲೋಚನೆಯನ್ನು ಹೇಳಿತು: ಚಿಗರೆ ಮಲಗಿದಾಗ ಇಲಿಯು ಅದರ ಕಾಲುಗಳನ್ನು ಕಡಿಯಲಿ; ಬಳಿಕ ಹುಲಿಯು ಅದನ್ನು ಹಿಡಿದುಕೊಳ್ಳಲಿ; ತರುವಾಯ ನಾವೆಲ್ಲರೂ ಸಂತುಷ್ಟರಾಗಿ ಅದನ್ನು ಭಕ್ಷಿಸುವಾ.

ಬಳಿಕ ನರಿಯ ಆಲೋಚನೆಯಂತೆ ಇಲಿಯು ಚಿಗರೆಯ ಪಾದಗಳನ್ನು ಕಡಿಯಿತು, ವ್ಯಾಘ್ರವು ಮೃಗವನ್ನು ಕೊಂದಿತು. ಆ ತರುವಾಯ ನರಿಯು ಹೇಳಿದುದೇನೆಂದರೆ:—'ನೀವೆಲ್ಲರೂ ಸ್ನಾನ ಮಾಡಿ ಬನ್ನಿರಿ; ನಾನು ಇದನ್ನು ರಕ್ಷಿಸುತ್ತಿರುವೆನು, ಚಿಂತೆ ಬಿಡಿರಿ.' ಶೃಗಾಲ ವಚನದಿಂದ ಎಲ್ಲವೂ ಸ್ನಾನಕ್ಕಾಗಿ ನದಿಗೆ ಹೋದುವು. ಆಲೋಚನೆಯನ್ನು ಮಾಡುತ್ತ ಜಂಬುಕವು ಅಲ್ಲಿಯೇ ಕುಳಿತಿತು. ಮಹಾ ಬಲಿಷ್ಠವಾದ ಹುಲಿಯು ಸ್ನಾನ ಮಾಡಿ ಮೊದಲೇ ಬಂದು ಚಿಂತಾಕುಲಿತ ಮಾನಸವಾದ ನರಿಯನ್ನು ನೋಡಿ, 'ನಮ್ಮಲ್ಲಿಯ ಬುದ್ಧಿಮಂತರಲ್ಲಿ ವರಿಷ್ಠನಾದ ನೀನೇಕೆ ಶೋಕಿಸುತ್ತಿರುವೆ? ಈ ಹೊತ್ತು ನಾವೆಲ್ಲರೂ ಮಾಂಸವನ್ನು ಭಕ್ಷಿಸಿ ವನದಲ್ಲಿ ಸ್ವಚ್ಛಂದವಾಗಿ ವಿಹಾರ ಮಾಡುವಾ' ಎಂದಿತು.

ಜಂಬುಕವು ಹೇಳಿದುದೇನೆಂದರೆ:—"ಮಹಾರಾಯಾ! ಏನು ಹೇಳಲಿ? ಇಲಿಯಾಡಿದ ಮಾತನ್ನು ಕೇಳು: 'ಮೃಗರಾಜನೆಂದೆನಿಸಿಕೊಂಡ ಹುಲಿಯ ಬಲಕ್ಕೆ ಧಿಕ್ಕಾರವಿರಲಿ. ನಾನು ಈ ಹೊತ್ತು ಮೃಗವನ್ನು ಕೊಂದಿರುವೆನು. ನನ್ನ ಬಾಹುಬಲವನ್ನು ಅವಲಂಬಿಸಿ ಇಂದು ಹುಲಿಗೆ ತೃಪ್ತಿ.' ಇಲಿಯಂತಹ ಕ್ಷುಲ್ಲಕ ಪ್ರಾಣಿಯು ಹೀಗೆ ಗರ್ಜಿಸುತ್ತಿರುವಲ್ಲಿ ಭಕ್ಷ್ಯವು ನನಗೆ ಹೇಗೆ ರುಚಿಸಬೇಕು?"

ವ್ಯಾಘ್ರವು ಇದನ್ನು ಕೇಳಿ, "ಇಲಿಯು ಹೀಗೆ ನುಡಿಯುತ್ತಿದ್ದರೆ ಅದರ ನುಡಿಯಿಂದ ನಾನೊಂದು ಪಾಠವನ್ನು ಕಲಿತಂತಾಯಿತು: ಸ್ವಬಾಹುಬಲವನ್ನು ಅವಲಂಬಿಸಿ ನಾನು ಅನ್ಯ ಮೃಗಗಳನ್ನು ಕೊಂದು ಮಾಂಸವನ್ನು ಭಕ್ಷಿಸುವೆನು" ಎಂದು ಹೇಳಿ ಅಡವಿಯಲ್ಲಿ ಹೊರಟುಹೋಯಿತು.

ಬಳಿಕ ಇಲಿಯು ಬಂದಿತು. ನರಿಯು ಅದರೊಡನೆ ಈ ರೀತಿಯಾಗಿ ನುಡಿಯಿತು:—

ಅಪ್ಪಾ ಮೂಷಕವೇ! ನಿನಗೆ ಕಲ್ಯಾಣವಾಗಲಿ. ಮುಂಗುಲಿಯಾಡಿದ ಮಾತನ್ನು ನಿನಗೆ ಹೇಳುತ್ತೇನೆ ಕೇಳು: 'ಮೃಗದ ಮಾಂಸವು ನನಗೆ ರುಚಿಸುವುದಿಲ್ಲ.

ಏಕೆಂದರೆ, ಅದು ವ್ಯಾಘ್ರ ನಖ ಸ್ಪರ್ಶದಿಂದ ದೂಷಿತವಾಗಿದೆ; ಅದು ನನಗೆ ಪಚನವಾಗಲಾರದು. ನಾನು ಇಲಿಯನ್ನು ಭಕ್ಷಿಸಬೇಕೆಂದು ಯೋಚಿಸಿದ್ದೇನೆ. ನೀನು ಅನುಮೋದನವನ್ನು ಕೊಡು' ಎಂದಿತು. ಈ ವಾಕ್ಯವನ್ನು ಕೇಳಿ ಮೂಷಕವು ಸಂತ್ರಸ್ತವಾಗಿ ಬಿಲವನ್ನು ಸೇರಿತು.

ತರುವಾಯ ತೋಳವು ಸ್ನಾನಮಾಡಿ ಬಂದಿತು. ಅದನ್ನು ಕಂಡು ನರಿಯು, "ಮಹಾರಾಯಾ! ಏನು ಹೇಳಲಿ? ಹುಲಿರಾಯನು ಸಿಟ್ಟುಗೊಂಡು ತನ್ನ ಹೆಂಡತಿಯನ್ನು ಕರೆದುಕೊಂಡುಬರಲಿಕ್ಕೆ ಹೋಗಿರುವನು. ಇಂದು ದಂಪತಿ ಭೋಜನವೆಂದು ಕಾಣುತ್ತದೆ. ನಿನಗೆ ತಿಳಿದುದನ್ನು ಮಾಡು" ಎಂದು ನುಡಿಯಿತು. ಈ ಪ್ರಕಾರವಾದ ಜಂಬುಕದ ವಚನವನ್ನು ಕೇಳಿ ತೋಳವು ಮೈಮುದುಡಿಕೊಂಡು ಓಡಿ ಹೋಯಿತು.

ಬಳಿಕ ಮುಂಗುಲಿಯು ಬಂದಿತು. ನರಿಯು ಅದನ್ನು ಕುರಿತು ಗರ್ಜಿಸಿ, "ಮೃಗರಾಜನೆಂದೆನಿಸಿಕೊಂಡ ಹುಲಿಯೂ, ಬುದ್ಧಿಮಂತನಾದ ಮೂಷಕವೂ, ತೋಳನೂ ನನ್ನ ಬಾಹುಬಲದಿಂದ ನಿರ್ಜಿತರಾಗಿ ಓಡಿಹೋದರು. ನಿನಗೆ ಪರಾಕ್ರಮವಿದ್ದರೆ ನನ್ನೊಡನೆ ಯುದ್ಧಮಾಡಿ ಈ ಮಾಂಸವನ್ನು ಭಕ್ಷಿಸು" ಎನ್ನಲು, "ಅವರೆಲ್ಲರನ್ನೂ ನೀನು ಗೆದ್ದಿರುವಲ್ಲಿ ನನ್ನ ಪಾಡೇನು? ನೀನು ವೀರವರನು" ಎಂದು ನುಡಿದು ಮುಂಗುಲಿಯೂ ಓಡಿಹೋಯಿತು.

ಈ ಮೇರೆಗೆ ಅವೆಲ್ಲವೂ ಓಡಿಹೋದ ಬಳಿಕ ನರಿಯು ಸಂತೋಷಪಟ್ಟು ಸನ್ಮಂತ್ರ ನಿಶ್ಚಯದ ಬಲದಿಂದ ಮಾಂಸವನ್ನು ಭಕ್ಷಿಸಿತು.

ಈ ನೀತಿಯನ್ನವಲಂಬಿಸಿ ಭೂಪತಿಯು ಸುಖವಾಗಿ ಬಳೆಯಬೇಕು.

ಭಯೇನ ಭೇದಯೇತ್ ಭೀರುಂ । ಶೂರಮಂಜಲಿಕರ್ಮಣಾ ॥
ಲುಬ್ಧಮರ್ಥಪ್ರದಾನೇನ । ಸಮಂ ನ್ಯೂನಂ ತಥೌಜಸಾ ॥

[ಅಂಜುಗುಳಿಯನ್ನು ಭಯದಿಂದಲೂ, ಶೂರನನ್ನು ಅಂಜಲಿಕರ್ಮ (ನಮಸ್ಕಾರ) ದಿಂದಲೂ, ಲುಬ್ಧನನ್ನು ಅರ್ಥದಿಂದಲೂ, ಸಮಾನನನ್ನೂ ನ್ಯೂನನನ್ನೂ ಪರಾಕ್ರಮದಿಂದಲೂ ಭೇದಿಸಬೇಕು.]

ಧೃತರಾಷ್ಟ್ರ ರಾಜನೇ! ಇನ್ನೂ ಕೇಳು, ಹೇಳುವೆನು: ಐಸಿರಿಯನ್ನು ಬಯಸಿದ ಇವನು ಪುತ್ರನು, ಇವನು ಗೆಳೆಯನು, ಇವನು ತಂದೆಯು, ಇವನು ತಮ್ಮನು ಎಂದು ಯಾರನ್ನೂ ಗಣಿಸತಕ್ಕುದಲ್ಲ. ಶಪಥದಿಂದಾಗಲಿ, ಅರ್ಥದಾನದಿಂದಾಗಲಿ ಅರಿಯನ್ನು ಹಿಂಸಿಸಬೇಕು. ಕಾಪಟ್ಯವನ್ನು ಆಶ್ರಯಿಸಿದರೂ ಅಡ್ಡಿಯಿಲ್ಲ; ಶತ್ರುವನ್ನು ಎಂದೂ ಉಪೇಕ್ಷಿಸತಕ್ಕುದಲ್ಲ. ಇಬ್ಬರೂ ಸಂಶಯಿತರಾಗಿರಲು (ಗೆಲ್ಲುವುದರ ಬಗ್ಗೆ) ನನ್ನ ಮಾತಿನಲ್ಲಿ ಶ್ರದ್ಧೆಯುಳ್ಳವನು ಏಳಿಗೆಯನ್ನು ಹೊಂದುವನು. *ಗುರುವಾದರೂ, ಉನ್ಮತ್ತನಾಗಿ ಕಾರ್ಯಾಕಾರ್ಯವನ್ನು ತಿಳಿಯದವನಾಗಿದ್ದರೆ, ಉನ್ಮಾರ್ಗಗಾಮಿಯಾದರೆ, ಅವನ ಶಾಸನವು ನ್ಯಾಯ್ಯವಾದುದು. ಸಿಟ್ಟು

* ಗುರೋರಪಿಯುವಾಲಿಪ್ತಂ । ಕಾರ್ಯಾಕಾರ್ಯಮಜಾನತಃ ॥
ಉತ್ಪಥಪ್ರತಿಪನ್ನಸ್ಯ । ನ್ಯಾಯ್ಯಂ ಭವತಿ ಶಾಸನೇ ॥

ಗೊಂಡರೂ ಸಿಟ್ಟನ್ನು ತೋರಿಸದೆ ಶಾಂತಿಯನ್ನು ನಟಿಸಬೇಕು; ನಗೆ ಮೊಗದೊಡನೆ ಮಾತನಾಡಬೇಕು; ಕೋಪದಿಂದ ಕೂಡಿ ಎರಗನೆಯವರ ಕುತ್ಸನವನ್ನು ಮಾಡ ಕೂಡದು. ಹೊಡೆಯುವುದಕ್ಕಿಂತ ಪೂರ್ವದಲ್ಲಿ ಸವಿಯಾಗಿ ಮಾತನಾಡಬೇಕು; ಹೊಡೆಯುವಾಗಂತೂ ದ್ರಾಕ್ಷಾಪಾಕದ ನುಡಿಗಳು; ಹೊಡೆದ ಬಳಿಕ ಕರುಣೆ ತೋರಿಸಬೇಕು; ಅವರೊಡನೆ ಅಶ್ರುಗಳನ್ನು ಸುರಿಸಬೇಕು.* ಸಾಂತ್ವನ ಧರ್ಮಾರ್ಥ ವೃತ್ತಿಗಳಿಂದ ಪರರ ವಿಶ್ವಾಸವು ತನ್ನಲ್ಲಾಗುವಂತೆ ಮಾಡಬೇಕು. ಕಾಲದಲ್ಲಿ ಶತ್ರುವು ಹಾದಿಬಿಟ್ಟು ನಡೆದಾಗ ಹೊಡೆಯಬೇಕು. ಘೋರಾಪರಾಧವನ್ನು ಮಾಡಿದರೂ ಧರ್ಮವನ್ನು ಆಶ್ರಯಿಸಿ ನಿಲ್ಲುವವನ ದೋಷವು, ಕಪ್ಪು ಮೋಡಗಳಿಂದ ಪರ್ವತವು ಮುಚ್ಚಲ್ಪಡುವಂತೆ, ಆಚ್ಛಾದಿತವಾಗುತ್ತದೆ.

ಪ್ರತ್ಯುತ್ಥಾನ, ಆಸನ, ಸಂಪ್ರದಾನಗಳು, ಕಾರ್ಯಸಾಧನೆಯ ಅಂಗಗಳು. ಅಶಂಕಿತರಿಂದ ಕೂಡ ಶಂಕಿಸಬೇಕು; ಶಂಕಿತರಿಂದ ಶಂಕಿಸಬೇಕೆಂದು ಹೇಳುವ ಕಾರಣವೇ ಇಲ್ಲ. ಅಶಂಕ್ಯರಿಂದ ಉತ್ಪನ್ನವಾದ ಭಯವು ಕೂಡ ಮೂಲವನ್ನು ಕತ್ತರಿಸುವುದು. ಅವಿಶ್ವಾಸಿಯಲ್ಲಿ ವಿಶ್ವಾಸವನ್ನಿಡಕೂಡದು. ವಿಶ್ವಾಸಿಯಲ್ಲಿಯೂ ಕೂಡ ಅತಿವಿಶ್ವಾಸವನ್ನಿಡಲಾಗದು. ವಿಶ್ವಾಸದಿಂದ ಹುಟ್ಟಿದ ಭಯವು ಮೂಲ ವನ್ನು ಕತ್ತರಿಸುವುದು. ಸಮ್ಯಕ್ ಪರೀಕ್ಷಿಸಿ ಅಲ್ಲಲ್ಲಿ ಚಾರರನ್ನಿಡಬೇಕು. ಪಾಷಂಡ ರನ್ನೂ ತಾಪಸರನ್ನೂ ಪರರಾಷ್ಟ್ರಗಳಲ್ಲಿ ಯೋಜಿಸಬೇಕು. ಉದ್ಯಾನಗಳಲ್ಲಿ, ವಿಹಾರಗಳಲ್ಲಿ, ದೇವಾಯತನಗಳಲ್ಲಿ, ಪಾನಾಗಾರಗಳಲ್ಲಿ, ರಥ್ಯೆಗಳಲ್ಲಿ, ತೀರ್ಥಗಳಲ್ಲಿ, ಚತ್ವರ(ಚತುಷ್ಪಥ)ಗಳಲ್ಲಿ, ಕೂಪಗಳಲ್ಲಿ, ಪರ್ವತಗಳಲ್ಲಿ, ವನಗಳಲ್ಲಿ, ನದಿಗಳಲ್ಲಿ ಚಾರರನ್ನು ತಿರುಗಾಡಿಸಬೇಕು. ಹೃದಯದಲ್ಲಿ ಹದನನಾಗಿದ್ದರೂ ಮಾತಿನಲ್ಲಿ ವಿನೀತನಾಗಿರಬೇಕು; ರೌದ್ರಕರ್ಮಗಳನ್ನು ನೆರವೇರಿಸುತ್ತಿದ್ದರೂ ಮಧುರ ಭಾಷಣವನ್ನು ಬಿಡಲಾಗದು. ಅಂಜಲಿ, ಶಪಥ, ಸಾಂತ್ವನ, ಶಿರಸಾಪಾದವಂದನ—ಇವು ಐಸಿರಿಯನ್ನು ಬಯಸುವವನ ಕಾರ್ಯಸಾಧನೆಯ ಅಂಗಗಳು. ಸುಪುಷ್ಪಿತ ನಾದರೂ ಫಲಿತನಾಗಬಾರದು; ಪುಷ್ಪಿತ ಶಬ್ದದಿಂದಲೇ ಫಲಾಸೆಯನ್ನು ತೋರಿಸ ಬೇಕು; ಫಲಿತನಾದರೂ ದುರಾರೋಹನಾಗಬೇಕು. ದರ್ಶಿತಫಲವು ದೊರೆಯುವ ಹೊತ್ತಿನಲ್ಲಿ ವಿಘ್ನವನ್ನು ಯೋಜಿಸಬೇಕು. ಪಕ್ವವಾದಂತೆ ತೋರಿದರೂ ಆಮ (ಅಪಕ್ವ)ನಾಗಿರಬೇಕು. ಧನಾದಿಗಳ ವ್ಯಯದಿಂದ ಶತ್ರುಗಳನ್ನು ಪೋಷಿಸ ಬಾರದು.† ಮೃದುವಾದ, ಇಲ್ಲವೆ ದಾರುಣವಾದ ಕರ್ಮದಿಂದ, ಮೊದಲು ದೀನನಾದ

---

* ಪ್ರಹರಿಷ್ಯನ್ ಪ್ರಿಯಂ ಬ್ರೂಯಾತ್ | ಪ್ರಹರನ್ನಪಿ ಭಾರತ ||
ಪ್ರಹೃತ್ಯಚ ಕೃಪಾಯೀತ | ಶೋಚೇತ ಚ ರುದೇತಚ ||
ಅಪಿ ಘೋರಾಪರಾಧಸ್ಯ | ಧರ್ಮಮಾಶ್ರಿತ್ಯ ತಿಷ್ಠತಾ ||
ಸಹಿ ಪ್ರಚ್ಛಾದ್ಯತೇ ದೋಷಃ | ಶೈಲೋ ಮೇಘೈರಿವಾಸಿತೈಃ ||

† ಸುಪುಷ್ಪಿತಃ ಸ್ಯಾದಫಲಃ | ಫಲವಾನ್ ಸ್ಯಾದ್ದುರಾರುಹಃ ||
ಆಮಹಸ್ಯಾತ್ ಪಕ್ವ ಸಂಕಾಶೋ | ನಚ ಜೀರ್ಯೇತ ಕರ್ಹಿಚಿತ್ ||
ಕರ್ಮಣಾಯೇನಕೇನೈವ | ಮೃದುನಾ ದಾರುಣೇನಚ ||
ಉದ್ಧರೇದ್ದೀನಮಾತ್ಮಾನಂ | ಸಮರ್ಥೋ ಧರ್ಮಮಾಚರೇತ್ ||

ತನ್ನ ಉದ್ಧಾರವನ್ನು ಮಾಡಿಕೊಂಡು, ಸಮರ್ಥನಾದ ಬಳಿಕ ಧರ್ಮವನ್ನು ಮಾಡಬೇಕು.

ಸಂಕಟವನ್ನು ಕಾಣದೆ ಮನುಷ್ಯನು ಕಲ್ಯಾಣವನ್ನು ಕಾಣಲಾರನು ; ಸಂಕಟವನ್ನು ಕಂಡು ಅದರೊಳಗಿಂದ ಮುಕ್ತನಾದರೆ ಕಲ್ಯಾಣವನ್ನು ಕಾಣುವನು. ಶತ್ರುಗಳೊಡನೆ ಸಂಧಾನವನ್ನು ಮಾಡಿ ಸುಖದಿಂದ ಮಲಗಿಕೊಂಡರೆ, ಗಿಡದ ತುದಿಯಲ್ಲಿ ಮಲಗಿಕೊಂಡವನಂತೆ ಪತಿತನಾದ ಬಳಿಕವೇ ಎಚ್ಚರಗೊಳ್ಳುವನು. ಚಾರರು ಜಿನ್ನಟ್ಟಿದರೂ ತನ್ನ ಆಕಾರವನ್ನು ಮುಚ್ಚಿಕೊಳ್ಳುತ್ತಿರಬೇಕು. ಐಸಿರಿಯನ್ನು ಬಯಸುವವನು ಉತ್ಸಾಹಶಾಲಿಯಾಗಿರಬೇಕು ; ಮಿತ್ರರಿಗಾಗಲಿ, ರಿಪುಗಳಿಗಾಗಲಿ ಇವನ ಕೃತ್ಯಗಳು ತಿಳಿಯಕೂಡದು ; ಸುಪರ್ಯವಸಾನವನ್ನು ಹೊಂದಿದರೂ, ಆರಬ್ಧಗಳಾದಂತೆ ಕಾಣುತ್ತಿರಬೇಕು. ಭಯವು ಬಾರದಿರುವ ವರೆಗೆ ಭೀತನಂತೆ ಪ್ರತಿಕರಿಸಬೇಕು ; ಭಯವು ಬಂದ ಬಳಿಕ ಅಭೀತನಾಗಿ ಪ್ರಹಾರ ಮಾಡಬೇಕು. ದಂಡದಿಂದ ಉಪನತನಾದ ಶತ್ರುವನ್ನು ಅನುಗ್ರಹಿಸುವವನು, ಹೇಸರಗತ್ತೆಯು ಗರ್ಭವನ್ನು ಅನುಗ್ರಹಿಸಿದಂತೆ ಮೃತ್ಯುವನ್ನೇ ಹೊಂದುವನು. ಬುದ್ಧಿ ಕ್ಷಯದಿಂದ ಎಲ್ಲ ಪ್ರಯೋಜನಗಳೂ ವಿಾರಿಹೋಗುವುವು. ಶತ್ರುವು ಬಾಲನೆಂದು ಉಪೇಕ್ಷಿಸಿದರೆ ತಾಲದಂತೆ ಮೂಲವನ್ನೂರುವನು. ಅರಣ್ಯದಲ್ಲಿ ಬಿಡಲ್ಪಟ್ಟ ಅಗ್ನಿಯು ತೀವ್ರವಾಗಿ ವೃದ್ಧಿಹೊಂದಿ ವನವನ್ನೇ ಸುಡುವುದರಿಂದ ಅದನ್ನು ಅಲ್ಪವೆಂದು ಅಲಕ್ಷಿಸಕೂಡದು. ಆಶೆಯನ್ನು * ಕಾಲದಿಂದ ಕೂಡಿಸಬೇಕು. ಕಾಲವನ್ನು ವಿಘ್ನದಿಂದ ಯೋಜಿಸಬೇಕು. ವಿಘ್ನವನ್ನು ಕಾರಣದಿಂದ, ಕಾರಣವನ್ನು ಕಾರಣಾಂತರದಿಂದ ಹೇಳುತ್ತ ಹೋಗಬೇಕು.

ಕಣಿಕ ವಿಚಾರಗಳಲ್ಲಿ ಕೆಲವು ವ್ಯಾವಹಾರಿಕ ದೃಷ್ಟಿಗೆ ಗ್ರಾಹ್ಯವಾಗಿ ತೋರಿದರೂ ಇದರಿಂದ ಶಾಶ್ವತ ಕಲ್ಯಾಣವೆಂದಿಗೂ ಆಗಲಾರದು. ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನು ಆಸುರೀ ಸಂಪತ್ತಿಯವರ ವಿಚಾರಗಳನ್ನು ಹೇಳಿದ್ದಾನೆ. ಅವು ಈ ಮಾದರಿಯವೇ. ಅವುಗಳ ಸಮಾಚಾರವನ್ನು ಭಗವಾನ್ ಶ್ರೀ ಕೃಷ್ಣನು ಯಥೇಷ್ಟವಾಗಿ ತೆಗೆದುಕೊಂಡಿರುವನು :—

"ಪ್ರವೃತ್ತಿ ಯಾವುದು ? ನಿವೃತ್ತಿ ಯಾವುದು ? ಆಸುರ ಜನರಿಗೆ ತಿಳಿಯುವುದೇ ಇಲ್ಲ ; ಶೌಚವನ್ನಿವರರಿಯರು, ಆಚಾರವನ್ನರಿಯರು ; ಜಗದೊಡೆಯನ ಮೇಲೆ ಕೂಡ ಇವರ ವಿಶ್ವಾಸವಿಲ್ಲ ; ಸ್ವಾರ್ಥವೇ ಇವರ ಪರಮ ಪುರುಷಾರ್ಥವಲ್ಲ ; ಜಗತ್ತಿನ ಕ್ಷಯಕ್ಕಾಗಿ ಇವರು ಉಗ್ರ ಕರ್ಮವನ್ನಾರಂಭಿಸುವರು ; ಕಾಮವನ್ನು ಆಶ್ರಯಿಸುವರು ; ದಂಭಮಾನ ಮದಾನ್ವಿತರಿವರು. ಸಾಯುವ ವರೆಗೆ ಇವರಿಗೆ ಚಿಂತೆ ತಪ್ಪದು ; ಕಾಮೋಪ ಭೋಗವೇ ಪರಮ ಪುರುಷಾರ್ಥವೆಂದು ತಿಳಿಯುವರು ; ಆಶಾ ಪಾಶಗಳಿಂದ ಬದ್ಧರಾಗಿ, ಕಾಮ ಕ್ರೋಧ ಪರಾಯಣರಾಗಿ, ಕಾಮ ಭೋಗಾರ್ಥವಾಗಿ

* ಆಶಾಂ ಕಾಲವತೀಂ ಕುರ್ಯಾತ್ | ಕಾಲಂ ವಿಘ್ನೇನ ಯೋಜಯೇತ್ |
ವಿಘ್ನಂ ನಿಮಿತ್ತತೋ ಬ್ರೂಯಾತ್ | ನಿಮಿತ್ತಂ ವಾಪಿ ಹೇತುತಃ ||

ಅನ್ಯಾಯದಿಂದ ಅರ್ಥಸಂಚಯವನ್ನು ಮಾಡುವರು ; ಇದು ಈ ಹೊತ್ತು ದೊರೆತಿದೆ, ನಾಳೆ ಇದನ್ನು ದೊರೆಯಿಸಿಕೊಳ್ಳುವೆನು ; ಇದು ನನಗುಂಟು, ಇದನ್ನು ಗಳಿಸುವೆನು ; ಈ ಶತ್ರುವು ಕೊಲ್ಲಲ್ಪಟ್ಟನು, ನಾಳೆ ಮತ್ತೊಬ್ಬನನ್ನು ಕೊಲ್ಲುವೆನು ; ನಾನೇ ಈಶ್ವರ, ನಾನೇ ಭೋಗಿ, ನಾನೇ ಸಿದ್ಧ, ನಾನೇ ಬಲಿಷ್ಠ, ನಾನೇ ಧನಿಕ, ನಾನೇ ಕುಲೀನ, ನನ್ನ ಸಮಾನರಾರು ?—ಎಂದು ಅಜ್ಞಾನದಿಂದ ಕೂಡಿಕೊಂಡು ಅನೇಕ ಭ್ರಾಂತಿಯಿಂದ ಮೋಹಗೊಂಡು ಕಾಮಾಸಕ್ತರಾಗಿ ನರಕದಲ್ಲಿ ಬೀಳುವರು. ಇಂತಹ ಆಸುರ ಪ್ರಕೃತಿ ಯವರನ್ನು ಅಲ್ಲಿಯೇ ನೂಕುವೆನು—ಇತ್ಯಾದಿ, ಭಗವಂತನಾದ ಶ್ರೀ ಕೃಷ್ಣನ ವಿಚಾರ ಗಳನ್ನು ನೋಡಿದರೆ, ರಾಮಾಯಣದ ಜಾಬಾಲಿಯ ವಿಚಾರಗಳಾಗಲಿ, ಚಾರ್ವಾಕನ ವಿಚಾರ ಸರಣಿಯಾಗಲಿ, ಮಹಾಭಾರತದ ಕಣಿಕನ ಕುಟಿಲ ನೀತಿಯಾಗಲಿ, ಅವು ಗಳನ್ನು ಎದುರಿಸಿ ನಿಲ್ಲಲಾರವು. ಆರ್ಯರ ಶ್ರೇಷ್ಠವಾದ ಉದಾತ್ತ ತತ್ತ್ವಜ್ಞಾನ ವಿಚಾರಗಳ ಮುಂದೆ ಇವು ಸೂರ್ಯನ ಎದುರಿಗೆ ಹೊನ್ನೆಯ ಹುಳದಂತೆ ನಿಷ್ಪ್ರಭ ವಾಗುವುವು. ಸೂರ್ಯ ಚಂದ್ರರು ಅಸ್ತವಿದ್ದಾಗ ಹೊನ್ನೆಯ ಹುಳದ ಬೆಳಕು.

**ಪಂಡಿತ ಕೇಶವಶರ್ಮಾ ಗಲಗಲಿ.**




---

# ಜೈಮಿನಿ ಭಾರತ (ಅಶ್ವಮೇಧಿಕ ಪರ್ವ)

## *ಸಂಸ್ಕೃತ ಜೈಮಿನಿ ಭಾರತದ ಕನ್ನಡದ ಅನುವಾದ

---

### ಇಪ್ಪತ್ತೆರಡನೆಯ ಅಧ್ಯಾಯ

ಚಂದ್ರಾನನೆಯರಾದ ಲಕ್ಷ ಜನ ತುರಗಾರೂಢೆಯರೂ, ಪೀನೋನ್ನತ ಕುಚೆಯರಾದ ಲಕ್ಷ ಜನ ಗಜ ಕುಂಭಾರೂಢೆಯರೂ, ಲಕ್ಷ ಜನ ರಥಾರೋಹಣ ಮಾಡಿ ಬಂದಿರುವ ಸ್ತ್ರೀಯರೂ, ಮೂರು ಲಕ್ಷ ಜನ ಪದಾತಿ ಸೈನಿಕ ಸ್ತ್ರೀಯರೂ ಪ್ರಮೀಳೆಯೆಂಬ ತಮ್ಮ ರಾಣಿಯೊಡನೆ ಯುದ್ಧಕ್ಕೆ ಹೊರಟುಬಂದು ಅರ್ಜುನನನ್ನು ಮುತ್ತಿದರು. ಆಗ ಪ್ರಮೀಳೆಯು ಅರ್ಜುನನನ್ನು ಕುರಿತು, "ನಾನು ಕುದುರೆಯನ್ನು ಹಿಡಿದಿರುವೆನು; ಅದನ್ನು ನೀನು ಬಿಡಿಸಿಕೊಳ್ಳಲಪೇಕ್ಷಿಸುವೆಯಾದರೆ ನನ್ನ ಮೇಲೆ ಯುದ್ಧ ಮಾಡು; ನಿನ್ನ ಸೈನ್ಯವನ್ನು ನಾನು ಧ್ವಂಸ ಮಾಡುವೆನು. ನನ್ನ ಹೊಡೆತವನ್ನು ಬಹಳ ಧೈರ್ಯದಿಂದ ಸಹಿಸು" ಎಂದು ಹೇಳಿದಳು. ಅವಳು ನಸುನಗುತ್ತ ಮೊದಲು ತೀಕ್ಷ್ಣಗಳಾದ ನೇತ್ರಭಾವಗಳಿಂದ ಹೊಡೆದು ಬಳಿಕ ಕುಚಾಗ್ರಕ್ಕೆ ಸಮಾನವಾದ ಹರಿತವುಳ್ಳವುಗಳಾಗಿಯೂ, ಪರ್ವತಗಳನ್ನು ಭೇದಿಸುವ ಸಾಮರ್ಥ್ಯವುಳ್ಳವುಗಳಾಗಿಯೂ ಇರುವ ಬಾಣಗಳನ್ನು ಅರ್ಜುನನ ಎದೆಗೆ ಗುರಿಯಿಟ್ಟು ಹೊಡೆದಳು. ಅಷ್ಟರಲ್ಲಿ ಇತರ ಸ್ತ್ರೀಯರು ಅವನ ಅಂಗರಕ್ಷಕರಾದ ಐದು ಮಂದಿಯ ಮೇಲೂ ಬಾಣ ಪ್ರಯೋಗಮಾಡಿದರು. ಅದರಿಂದ ವೃಷಕೇತುವನ್ನುಳಿದು ಮಿಕ್ಕವರೆಲ್ಲರೂ ಕಣ್ಗೆಟ್ಟು ಕರ್ತವ್ಯವನ್ನು ಮರೆತರು. ರಾಣಿಯು ವೀರನಾದ ಅರ್ಜುನನನ್ನು ಕುರಿತು, "ಎಲೈ ಪಾರ್ಥನೇ! ನೀನು ನನ್ನನ್ನರಿಯೆ. ನಾನು ನಿನ್ನನ್ನು ಜಯಿಸಿ ನನ್ನ ದಾಸನನ್ನಾಗಿ ಮಾಡಿಕೊಳ್ಳುವೆನೆಂದು ತಿಳಿ. ಯಜ್ಞದ ಗೋಜು ನಿನಗೇಕೆ? ನನ್ನೊಡನೆ ಸೇರಿ ಮಧುಪಾನವನ್ನು ಮಾಡು. ನಾನು ನಿನಗೆ ಅದೃಷ್ಟಪೂರ್ವವಾದ ಸುಖವನ್ನು ತೋರಿಸುವೆನು" ಎಂದಳು.

ಅದಕ್ಕೆ ಅರ್ಜುನನು, "ಈ ಸ್ಥಳದಲ್ಲಿ ನಿನ್ನ ಸಂಗದಿಂದ ಮರಣವುಂಟಾಗುವುದೆಂದು ಕೇಳಿಬಲ್ಲೆನು. ನನ್ನನ್ನು ಬಿಟ್ಟು ಯಜ್ಞಾಶ್ವವನ್ನು ರಕ್ಷಿಸುವರು ಯಾರು?" ಎಂದನು. ಪ್ರಮೀಳೆಯು, "ನನ್ನ ಕಣ್ಣಿನಿಂದಲೋ, ಬಾಣಗಳಿಂದಲೋ ಪೆಟ್ಟು ತಿಂದು ನೀನು ಮೃತನಾಗುವೆ. ಈ ಎರಡು ಬಗೆಯಿಂದಲೂ ಮೃತ್ಯುವು ಸಿದ್ಧವೆಂಬುದರಲ್ಲಿ ಸಂದೇಹವಿಲ್ಲ. ನಿನಗೆ ಸುಖವೂ ಮೃತ್ಯುವೂ ನನ್ನ ಸಂಗದಿಂದಲೇ. ನನ್ನ ಬಾಣಗಳಿಂದ ಪೀಡಿತನಾಗಿ ವೃಥಾ ಮೃತನಾಗುವೆ. ನಿನಗೆ ನಾನು ಮೋಹಿತಳಾಗದಿದ್ದರೆ ಈ ವ್ಯರ್ಥಾಲಾಪಗಳನ್ನಾಡುತ್ತಿರಲಿಲ್ಲ. ಬಾಣಗಳಿಂದ ನಿನ್ನನ್ನು

---

* ಕ. ಸಾ. ಪರಿಷತ್ಪತ್ರಿಕೆಯ ೧೭ನೆಯ ಸಂಪುಟದ ೧ನೆಯ ಸಂಚಿಕೆಯ ೬೩ನೆಯ ಪುಟದಿಂದ ಮುಂದುವರಿದುದು.

ಹೊಡೆದು ಕೆಡಹುವೆನು, ಅಥವಾ ರತಿಯಲ್ಲಿ ಜಯಿಸುವೆನು ; ಎಂತೂ ನಿನ್ನನ್ನು ಬದುಕಿಸುವುದಿಲ್ಲ. ನಿನ್ನನ್ನು ವಶಪಡಿಸಿಕೊಳ್ಳದಿದ್ದರೆ ನಾನು ಪ್ರಾಣವನ್ನು ಬಿಡು ತ್ತೇನೆ. ಇವೆಲ್ಲವನ್ನೂ ಚೆನ್ನಾಗಿ ವಿಚಾರ ಮಾಡಿ ನೋಡು. ಪರಸ್ಪರ ಸಂದರ್ಶನ ದಿಂದಲೇ ನಮ್ಮಿಬ್ಬರಿಗೂ ಮರಣ ಪ್ರಾಪ್ತವಾಗಿದೆ. ಆದಕಾರಣ, ಮನೋಹರವಾದ ನನ್ನ ಯೌವನವನ್ನನುಭವಿಸು '' ಎಂದಳು. ಹೀಗೆ ಕಾಮ ಪೀಡಿತಳಾಗಿ ಹೇಳುತ್ತಿರುವ ಪ್ರಮೀಳೆಯ ಮಾತನ್ನು ಕೇಳಿ ಅರ್ಜುನನು ತನ್ನ ಮನಸ್ಸಿನಲ್ಲಿ ಲಕ್ಷ್ಮಣನನ್ನೂ ಶೂರ್ಪಣಖಿಯನ್ನೂ ಸ್ಮರಿಸುತ್ತ, ಅವಳನ್ನು ಆರು ಬಾಣಗಳಿಂದ ಹೊಡೆಯಲು, ಅವಳು ಅವನ್ನು ಐದು ತುಂಡಾಗಿ ಕತ್ತರಿಸಿ ಕ್ರೂರವಾದ ಏಳು ಬಾಣಗಳಿಂದ ಅರ್ಜುನನನ್ನು ಹೊಡೆದು ಮತ್ತೆ ಸಹಸ್ರ ಬಾಣಗಳಿಂದ ಅವನನ್ನು ಮುಚ್ಚಿ ಯುದ್ಧ ಭೂಮಿಯಲ್ಲಿ ಕಾಣದಂತೆ ಮಾಡಿದಳು. ಅರ್ಜುನನು ಮೋಹನಾಸ್ತ್ರವನ್ನು ಸಂಧಾನ ಮಾಡಿ ಬಿಡಲು, ಅದನ್ನು ಅವಳು ಮೂರು ಬಾಣಗಳಿಂದ ಕತ್ತರಿಸಿ, "ಎಲೈ ಮೂಢನೇ! ಮೋಹನಾಸ್ತ್ರವು ನಿನಗೆ ಒಪ್ಪದು, ಮೆರೆಯದು '' ಎಂದಳು. ಅರ್ಜುನನು ಕೋಪಿಸಿ ಪುನಃ ಮತ್ತೊಂದು ಬಾಣವನ್ನು ಸಂಧಾನ ಮಾಡಿ ಹೊಡೆ ಯುವಷ್ಟರಲ್ಲಿ, "ಎಲೈ ಅರ್ಜುನನೇ! ಯುದ್ಧದಲ್ಲಿ ಸ್ತ್ರೀ ವಧೆಗಾಗಿ ಸಾಹಸವನ್ನು ಮಾಡಬೇಡ. ಹತ್ತು ಸಾವಿರ ವರ್ಷಗಳು ನೀನು ಪ್ರಯತ್ನಿಸಿದರೂ ಇವಳನ್ನು ಜಯಿಸಲಾರೆ; ಇವಳನ್ನು ವರಿಸು, ನಿನಗೆ ಶುಭವಾಗುವುದು. ನಿನಗೆ ಜೀವದಮೇಲೆ ಆಸೆಯಿದ್ದರೆ, 'ಎಲೈ ಮಾನಿನಿಯೇ! ನಿನ್ನನ್ನು ನಮ್ಮ ಪಟ್ಟಣಕ್ಕೆ ಕರೆದುಕೊಂಡು ಹೋಗುವೆನು' ಎಂದು ಅವಳಿಗೆ ಹೇಳು '' ಎಂದು ಆಕಾಶ ವಾಣಿಯಾಯಿತು.

ಅದನ್ನು ಕೇಳಿ ಅರ್ಜುನನು ಅದರಂತೆ ಎಲ್ಲವನ್ನೂ ಮಾಡಿ ಯುದ್ಧ ಭೂಮಿಯಲ್ಲಿ ಪ್ರಮೀಳೆಯನ್ನು ವರಿಸಿ, ಅವಳನ್ನು ಕುರಿತು, "ಎಲೆ ಭದ್ರೆ! ನಾನು ಈಗ ಹಯ ರಕ್ಷಣ ವ್ರತ ದೀಕ್ಷಿತನಾಗಿರುವುದರಿಂದ ಹಸ್ತಿನಪುರದಲ್ಲಿ ನಿನ್ನ ಸಂಗಮ ಮಾಡುವೆನು ; ಶ್ರೀ ಕೃಷ್ಣನ ದರ್ಶನದಿಂದ ನಿನ್ನ ಪಾಪವೆಲ್ಲವೂ ನಾಶವಾಗುವುದು ; ನಮ್ಮ ಪುರದಲ್ಲಿ ನಿನ್ನ ಈ ಸ್ತ್ರೀಯರೆಲ್ಲರಿಗೂ ಪತಿಗಳು ಸಿಕ್ಕುವರು ; ಇದಕ್ಕೆ ಸಂದೇಹವಿಲ್ಲ. ಕುದುರೆಯನ್ನು ಬಿಡು, ನಾನು ಹೊರಡುವೆನು. ನೀನೂ ನನ್ನ ಜೊತೆಯಲ್ಲಿ ಬಾ, ಅಥವಾ ಹಸ್ತಿನಪುರಕ್ಕೆ ಹೋಗು '' ಎಂದನು. ಆಗ ಪ್ರಮೀಳೆಯು ಕುದುರೆ ಯನ್ನು ಬಿಡಿಸಿ ತಾನು ಹಸ್ತಿನಪುರಕ್ಕೆ ಧರ್ಮನಂದನನ ಬಳಿಗೆ ಹೋದಳು.

ಕುದುರೆಯು ಅಲ್ಲಿಂದ ಮುಂದಕ್ಕೆ ಹೊರಟು ಮನುಷ್ಯರು, ಆನೆಗಳು, ಗೋವುಗಳು, ಹಸುಗಳು, ಕುರಿ ಮೇಕೆಗಳು, ಕತ್ತೆಗಳು ಮೊದಲಾದ ಪ್ರಾಣಿ ಗಳನ್ನು ಫಲಿಸುವ ವೃಕ್ಷಗಳುಳ್ಳ ವೃಕ್ಷ ದೇಶವನ್ನು ಹೊಕ್ಕಿತು. ಇಲ್ಲಿ ಬಗೆ ಬಗೆ ಯಾದ ಜನರು ಪ್ರಾತಃಕಾಲದಲ್ಲಿ ವೃಕ್ಷಗಳಿಂದ ಜನಿಸಿ ಮಧ್ಯಾಹ್ನದಲ್ಲಿ ಯೌವನ ವನ್ನು ಪಡೆದು ಸಂಜೆಗೆ ಸಾಯುವರು. ಅರ್ಜುನನು ಆ ದೇಶವನ್ನು ವಿಸ್ಮಿತನಾಗಿ ನೋಡುತ್ತ ಕುದುರೆಯೊಡನೆ ಹೊರಟನು ; ಕಿವಿಗೆ ಹೊದ್ದಿಕೆಯುಳ್ಳವರು, ಒಂದು ಬಾಯಿ, ಒಂದು ಕಣ್ಣು, ಒಂದು ಕಾಲು, ಕುದುರೆಯ ಮುಖ, ಮೂರು ಕಣ್ಣು, ಉದ್ದವಾದ ಮೂಗು, ಮೂರು ಕಾಲುಗಳು, ಕೊಂಬುಗಳು, ಒಂಟಿ ಕೊಂಬು,

ಕತ್ತೆಯ ಮುಖ ಮೊದಲಾಗುಳ್ಳವರನ್ನೂ ನೋಡುತ್ತ ಬಂದನು. ಕುದುರೆಯು ಭೀಷಣನೆಂಬ ರಾಕ್ಷಸನ ಪುರಕ್ಕೆ ಬಂದಿತು. ಅಲ್ಲಿ ಮನುಷ್ಯ ಭಕ್ಷಕರಾದ ಬಹು ಜನ ರಾಕ್ಷಸರಿರುವರು. ಪಾಪಾಚಾರವುಳ್ಳವರಾಗಿಯೂ ಕೋಪಿಷ್ಠರಾಗಿಯೂ, ಬಹು ಕಾಲದಿಂದ ಜೀವಿಸುತ್ತಿರುವ ರಾಕ್ಷಸರು ಮೂರು ಕೋಟಿಯ ವರೆಗೂ ಮುಂದೆ ಕಾಣಿಸುತ್ತಿದ್ದರು. ಭೀಷಣನ ಸಭೆಯಲ್ಲಿದ್ದ ಅವನ ಪುರೋಹಿತನಾದ ಮೇದೋಹನೆಂಬ ಬ್ರಹ್ಮರಾಕ್ಷಸನು ಕಾಡಿನಲ್ಲಿ ಇಲ್ಲಲ್ಲಿ ಸುಳಿದಾಡುತ್ತಿದ್ದ ಕುದುರೆಯನ್ನು ನೋಡಿ ಅದು ಅರ್ಜುನನದೆಂದು ತಿಳಿದು ಭೀಷಣನ ಬಳಿಗೆ ಬಂದು, ಮನುಷ್ಯರ ಕರುಳಿನಿಂದ ಮಾಡಿದ ಯಜ್ಞೋಪವೀತವನ್ನೂ, ನರಕಪಾಲದ ಭಯಂಕರವಾದ ಜಪ ಮಾಲಿಕೆಯನ್ನೂ, ಒಣಗಿದ ಆನೆಯ ತಲೆಬುರುಡೆಯ ಸಜಲ ಕಮಂಡುಲುವನ್ನೂ, ಕಣ್ಣುಗುಡ್ಡೆಗಳನ್ನು ಪೋಣಿಸಿ ಮಾಡಿದ ಭಯಂಕರವಾದ ಕಂಠಮಾಲೆಯನ್ನೂ, ಕಿವಿಗಳಿಗೆ ಆನೆ ಒಂಟೆಗಳ ಆಭರಣವನ್ನೂ, ಕೈಯಲ್ಲಿ ಮಾಂಸ ಸಹಿತವಾದ ಆನೆಯ ಬೆನ್ನುಮೂಳೆಯ ದಂಡ ವನ್ನೂ ಧರಿಸಿ ಮೆರೆಯುತ್ತಿರುವ ಭೀಷಣನನ್ನು ನೋಡಿ, "ಎಲೈ ರಾಕ್ಷಸಾಧಿಪನೇ! ಅಶ್ವರಕ್ಷಕನಾದ ಪಾರ್ಥನು ನಿನ್ನ ಶತ್ರುವಾಗಿ ಇಲ್ಲಿಗೆ ಬಂದಿರುವನೆಂದು ತಿಳಿ. ನಿಮ್ಮ ತಂದೆಯಾದ ಬಕನನ್ನು ಕೊಂದವನು ಇವನ ಸಹೋದರನಾದ ಭೀಮನಲ್ಲವೆ! ಆದಕಾರಣ ಈ ಭೀಮಾನುಜನನ್ನು ಹಿಡಿದು ಬೇಗನೆ ನನ್ನ ಆಜ್ಞಾನುಸಾರ ಸರ್ವ ಲಕ್ಷಣ ಸಂಪನ್ನವಾದ ನರಮೇಧವನ್ನು ಮಾಡು. ನಾನು ಆಚಾರ್ಯನಾಗುತ್ತೇನೆ. ಸತ್ಕುಲ ಪ್ರಸೂತರಾಗಿ ಚಾತುರ್ಮಾಸ್ಯ ವ್ರತಾಚರಣೆ ಮಾಡುತ್ತಿರುವ ಇನ್ನೂ ಬಹು ಮಂದಿ ಬ್ರಹ್ಮರಾಕ್ಷಸರೂ ಇರುವರು. ಇವರು ರಕ್ತ ಪಾನದಿಂದ ಸಂತುಷ್ಟರಾಗಿ ಸುರಾಪಾನ ಮಾಡುವರು. ಇವರಿಗೆ ಶ್ರಾವಣ ಮಾಸದಲ್ಲಿ ಮಾಸೋಪವಾಸಿನಿಯರ ಮಾಂಸ ವ್ರತವು ನಡೆಯಬೇಕು. ಭಾದ್ರಪದ ಮಾಸದಲ್ಲಿ ಜಿತೇಂದ್ರಿಯರಾದ ಯತಿಗಳ ಮಾಂಸದಿಂದಲೂ, ಆಶ್ವಯುಜದಲ್ಲಿ ಯೋಗಿಗಳ ಮಾಂಸದಿಂದಲೂ, ಕಾರ್ತಿಕ ದಲ್ಲಿ ಮಕ್ಕಳ ಮಾಂಸದಿಂದಲೂ ಇವರು ವ್ರತಾಚರಣೆ ಮಾಡುವರು. ಆದಕಾರಣ ಕುದುರೆಯನ್ನು ಸೇನಾ ಸಮೇತನಾದ ಪಾರ್ಥನೊಡನೆ ಸೆರೆ ಹಿಡಿ. ಇಲ್ಲಿಯ ಬ್ರಹ್ಮ ರಾಕ್ಷಸರು ಬಹು ಕಾಲದಿಂದ ವ್ರತಸ್ಥರಾಗಿರುವರು. ಆ ತಾಪಸರು ಅರ್ಜುನನ ಆನೆಗಳನ್ನೂ ಕುದುರೆಗಳನ್ನೂ ಭಕ್ಷಿಸಿ ಮನುಷ್ಯರ ಬಿಸಿ ರಕ್ತದಿಂದ ಗಂಟಲನ್ನು ಸರಿಮಾಡಿಕೊಂಡು ಅವರ ಮಾಂಸದಿಂದ ತೃಪ್ತರಾಗಲಿ. ಹಿಂದೆ, ಮಹಾತ್ಮನಾದ ರಾವಣನು ಮಾಡಿದ ನರಮೇಧದಿಂದ ಈ ಬ್ರಹ್ಮರಾಕ್ಷಸರೆಲ್ಲರೂ ತೃಪ್ತರಾದರು. ಈಗ ನೀನು ಮಾಡುವ ಈ ಯಜ್ಞದಿಂದ ನಾವೆಲ್ಲರೂ ತೃಪ್ತರಾಗುವೆವು" ಎಂದನು.

ಅದಕ್ಕೆ ಭೀಷಣನು, "ತಾತ! ಮೇದೋಹ! ನೀನು ಹೇಳಿದಂತೆ ಎಲ್ಲವನ್ನೂ ನಡೆಯಿಸುವೆನು. ಸುವಿದ್ಯೆಯುಳ್ಳ ನಿನ್ನಂತಹ ಬ್ರಹ್ಮರಾಕ್ಷಸರಿಂದ ಕೂಡಿದ ನಾನು ಈಗ ನಮ್ಮ ಊರಿಗೇ ಬಂದಿರುವ ನಮ್ಮ ತಂದೆಯ ಶತ್ರುವನ್ನು ಹಿಡಿಯದೆ ಬಿಡುವೆನೇ? ನಾನು ನಿನ್ನನ್ನು ಒಂದು ವಿಷಯವನ್ನು ಕೇಳುವೆನು: ಯಜ್ಞದಲ್ಲಿ ನಾನು ಪಾರ್ಥನ ಸೈನ್ಯದಿಂದ ನಿನಗೆ ಕೊಡಬೇಕಾದ ಯೋಗ್ಯ ಭೋಜನವೇನು? ನಿನ್ನ ಇಷ್ಟವನ್ನು ಹೇಳು, ಯಜ್ಞಕ್ಕಾರಂಭಿಸುವೆನು" ಎಂದನು. ಅದಕ್ಕೆ ಮೇದೋಹನು,

"ನಿನ್ನ ಅನುಗ್ರಹವಾದರೆ ಕೊಬ್ಬಿದ ಮನುಷ್ಯರ ಮತ್ತು ಆನೆ ಕುದುರೆಗಳ ಮೇದೋ ವಿಶಿಷ್ಟವಾದ ಕಣ್ಣುಗಳಿಂದ ನಾನು ತೃಪ್ತಿ ಹೊಂದುವೆನು. ನಾನು ಹೆಚ್ಚು ತಿಂಡಿಯನ್ನು ತಿನ್ನುವವನು, ಇತರರಂತಲ್ಲ. ನೀನು ಮಾಡುವ ಯಜ್ಞದಲ್ಲಿ ಸಹಸ್ರ ಪದಾತಿಗಳ ಭೋಜನ ಮಾಡುವೆನು" ಎಂದನು. ಅದನ್ನು ಕೇಳಿ ರಾಕ್ಷಸನು ಸಂತೋಷವನ್ನು ಹೊಂದಿ ಪುರೋಹಿತ ಋತ್ವಿಜರೊಡನೆ ಸೇರಿ ಮನೋಹರವಾದ ಯಜ್ಞಮಂಟಪವನ್ನು ನಿರ್ಮಾಣ ಮಾಡಿಸಿ ಮೂರು ಕೋಟಿ ಮಂದಿ ಕ್ರೂರ ರಾಕ್ಷಸರಿಂದ ಕೂಡಿ ಯಜ್ಞಾರ್ಥವಾಗಿ ಬೇಗನೆ ಅರ್ಜುನನ ಸೈನ್ಯದ ಮೇಲೆ ಯುದ್ಧಕ್ಕೆ ಹೋದನು. ರಾಕ್ಷಸಿಯರೆಲ್ಲರೂ ಬೆಟ್ಟದ ಮೇಲೆ ನಿಂತು ಪಾರ್ಥನು ಬರುವುದನ್ನು ನೋಡುತ್ತಿದ್ದರು. ಒಬ್ಬಳು ಹನುಮಂತನನ್ನು ಕಂಡು, "ಪೂರ್ವದಲ್ಲಿ ಲಂಕಾ ಪಟ್ಟಣದಲ್ಲಿ ಸೀತಾದೇವಿಯು ಅಶೋಕ ವನದಲ್ಲಿದ್ದಾಗ ಈ ಆಂಜನೇಯನು ರಾಕ್ಷಸರನ್ನೆಲ್ಲ ಕೊಂದುಹಾಕಿದುದನ್ನು ನೋಡಿ, ಅಂದಿನಿಂದಲೂ ಇವನನ್ನು ಕಂಡರೆ ನನಗೆ ಭಯವಾಗುತ್ತದೆ. ನೀವೆಲ್ಲರೂ ಇಲ್ಲಿ ನಿಲ್ಲದೆ ಓಡಿರಿ, ಓಡಿರಿ; ಇಲ್ಲದಿದ್ದರೆ ನೀವು ಬದುಕುವುದಿಲ್ಲ" ಎಂದಳು.

ಅದನ್ನು ಕೇಳಿ, ಉದ್ದವಾದ ಹೊಟ್ಟೆಯೂ ಕೊರಲೂ, ಬಡಕಲಾಗಿರುವ ಕೈಕಾಲುಗಳೂ, ಎರಡು ಹರದಾರಿ ಎತ್ತರವೂ ಉಳ್ಳ ರಾಕ್ಷಸಿಯೊಬ್ಬಳು, "ಮನುಷ್ಯರಿಂದ ಹತನಾದ ರಾವಣನ ಸುದ್ದಿಯನ್ನು ನನ್ನೆದುರಿಗೆ ಹೇಳಬೇಡ. ಭೀತಳಾದ ನಿನ್ನೆದುರಿಗೆ ಈ ಕಪಿಯನ್ನು ತಿಂದುಬಿಡುವೆನು" ಎಂದಳು. ಅವಳ ಮಾತನ್ನು ಕೇಳಿ ಮತ್ತೊಬ್ಬಳು, "ಎಲೆ ಬಡ ಮೈಯವಳೇ! ಏನು ಹೇಳಿದೆ? ನನ್ನ ಬೆನ್ನ ಹಿಂದೆ ಯೋಜನ ದೂರ ವ್ಯಾಪಿಸಿ, ಭೂಮಿಯನ್ನು ಕೆರೆಯುತ್ತ, ಗಿಡಗಳೆಲ್ಲವನ್ನೂ ಉರುಳಿಸುತ್ತ, ಉದ್ದವಾಗಿಯೂ ದಪ್ಪವಾಗಿಯೂ ಜೋಲಾಡುತ್ತಿರುವ ನನ್ನ ಸ್ತನಗಳನ್ನು ನೋಡು. ನನ್ನ ಕುಚಗಳಿಂದಲೇ ಈ ಪಾರ್ಥನನ್ನೂ ಅವನ ಸೈನ್ಯವನ್ನೂ ಹನುಮಂತನನ್ನೂ ಕೊಲ್ಲುವೆನು. ರಾಕ್ಷಸಿಯರು ಹೆದರಬೇಕಾಗಿಲ್ಲ. ಮೂಢನಾದ ಭೀಷಣನು ಮನುಷ್ಯರನ್ನು ಗೆದ್ದರೆ ಗೆಲ್ಲಲಿ, ಅವನು ನನ್ನ ಸಾಮರ್ಥ್ಯವನ್ನರಿಯನು" ಎಂದಳು. ಅಷ್ಟರಲ್ಲಿ, ಮೂರನೆಯವಳಾದ ಮತ್ತೊಬ್ಬ ರಾಕ್ಷಸಿಯು ಕುಪಿತಳಾಗಿ, ಆ ಯೋಜನ ಸ್ತನಿಯನ್ನು ಕುರಿತು, "ಯೋಜನ ಮಾತ್ರ ವಿಸ್ತಾರವುಳ್ಳ ನಿನ್ನ ಕುಚಗಳಿಗೆ ಯಾರು ಹೆದರುವರು? ನನ್ನ ಕುಚ ಚೂಚುಕಗಳೇ ಯೋಜನ ವಿಸ್ತಾರವಾಗಿರುವುವು ನೋಡು; ಈ ನಿನ್ನ ಕುಚಗಳು ನನ್ನೆದುರಿಗೆ ಬಿಲ್ವ ಫಲ ಮಾತ್ರವೇ ಸರಿ. ಈ ಚೂಚುಕಗಳಿಂದ ಈ ಕಪೀಶ್ವರನನ್ನು ಕೊಂದು ರಾಕ್ಷಸಿಯರ ಭಯವನ್ನು ಹೋಗಲಾಡಿಸುವೆನು" ಎಂದು ಹೇಳುವಷ್ಟರಲ್ಲಿಯೇ ಅವಳು ಪಾರ್ಥನ ಸೇನೆಯನ್ನು ನೋಡಿ, ಹಾಹಾ ಎಂದು ಗರ್ಜಿಸುತ್ತ ಬೇಗನೆ ಆಕಾಶಕ್ಕೆ ಹಾರಿ, ದೊಡ್ಡದಾದ ತನ್ನ ಕುಚಗಳನ್ನು ವೇಗವಾಗಿ ತಿರುಗಿಸುತ್ತ ಯುದ್ಧದಲ್ಲಿ ಬಹು ಸೈನ್ಯವನ್ನು ಕೆಡಹುತ್ತಲೂ, ಆನೆಗಳನ್ನು ಅರೆದು ಪುಡಿ ಪುಡಿ ಮಾಡುತ್ತಲೂ ಓಡಾಡುತ್ತಿದ್ದಳು. ಅವಳ ಕುಚಗಳು ತಗುಲಿದೆಡೆಗಳಲ್ಲಿದ್ದ ಬಲವೆಲ್ಲವೂ ಬಿದ್ದುಹೋಯಿತು. ಆ ಸೈನ್ಯವನ್ನು ಅವಳು ಒಬ್ಬಳೇ ಪರಮಾಣುವಿನಂತೆ

ಅಲ್ಪವಾಗಿ ಭಾವಿಸಿ ಆನೆಗಳನ್ನೂ ಕುದುರೆಗಳನ್ನೂ ಪದಾತಿಗಳನ್ನೂ ಹಾರಿಸು ತ್ತಿದ್ದಳು. ಉಳಿದ ಬಹು ಮಂದಿ ರಾಕ್ಷಸಿಯರೂ ಅವಳಂತೆಯೇ ಸೈನ್ಯವನ್ನು ನಾಶ ಮಾಡುತ್ತ ಬಂದರು. ರಾಕ್ಷಸರೂ ಶೂರರನ್ನು ಯುದ್ಧದಲ್ಲಿ ಹೊಡೆದು ಕೆಡಹು ತ್ತಿದ್ದರು.

ಆಗ ಭೀಷಣನು ಪಾರ್ಥನ ಬಳಿಗೆ ಬಂದು, ''ಎಲೈ ಅರ್ಜುನನೇ! ನಿಲ್ಲು, ಎಲ್ಲಿ ಹೋಗುವೆ? ನೀನು ನನ್ನ ಅದೃಷ್ಟದಿಂದ ನನ್ನಮೇಲೆ ಯುದ್ಧಕ್ಕೆ ಬಂದೆ. ಭೀಮನು ನಮ್ಮ ತಂದೆಯನ್ನು ಕೊಂದಾಗ ನಾನು ಹತ್ತಿರವಿರಲಿಲ್ಲ; ಈಗ ನಿನ್ನನ್ನು ಜಯಿಸಿ ನರಮೇಧವನ್ನು ಮಾಡುತ್ತೇನೆ; ಬಳಿಕ ಭೀಮನನ್ನು ಕೊಂದು ರಕ್ತ ಪಾನ ಮಾಡು ವೆನು'' ಎಂದು ಹೇಳುತ್ತ ಬಾಣಗಳನ್ನೂ ಮುದ್ಗರಗಳನ್ನೂ ಪರ್ವತಗಳನ್ನೂ ವೃಕ್ಷ ಗಳನ್ನೂ ತೆಗೆದು ಹೊಡೆಯುತ್ತ ರಾಕ್ಷಸರೊಡನೆ ಸೇರಿ ಪಾರ್ಥನನ್ನು ಮುತ್ತಿಗೆ ಹಾಕಿದನು. ಅದನ್ನು ನೋಡಿ ಅರ್ಜುನನು ರಾಕ್ಷಸಗಣದೊಡನೆ ಕೂಡಿದ ಆ ಭೀಷಣನನ್ನು ತೀಕ್ಷ್ಣಗಳಾದ ಶತ ಸಹಸ್ರ ಬಾಣಗಳಿಂದ ಹೊಡೆದನು. ಹನುಮಂತನು ರಾಕ್ಷಸಿಯರ ಮೇಲೆ ಬಲವಾಗಿ ಯುದ್ಧ ಮಾಡಿದನು. ಅವನು ಅವರನ್ನು ತನ್ನ ಬಾಲದಲ್ಲಿ ಬಿಗಿದು ಸುತ್ತಿ ನೆಲಕ್ಕೆ ಬಡಿದನು. ಅವರಲ್ಲಿ ಕೆಲವರು ಸತ್ತರು, ಕೆಲವರು ಮೈಮುರಿದು ಪುಡಿಯಾಗಿ ತಲೆಗೆದರಿ ಬಿದ್ದರು, ಕೆಲವರು ಹೆದರಿ ಓಡಿಹೋದರು, ಕೆಲವರು ಬೆಟ್ಟದ ತಪ್ಪಲುಗಳನ್ನು ಸೇರಿಕೊಂಡರು. ಅರ್ಜುನನು ಹರಿತವಾದ ಬಾಣ ಗಳನ್ನು ರಕ್ಷೋಘ್ನ ಮಂತ್ರಗಳಿಂದಭಿಮಂತ್ರಿಸಿ ರಾಕ್ಷಸರ ಮೇಲೆ ಬಿಟ್ಟನು ; ಅವರು ಹೆದರಿ ಕಾಡಿಗೆ ಓಡಿದರು. ಭೀಷಣನು ಕೋಪಾವಿಷ್ಟನಾಗಿ ರಾಕ್ಷಸ ಮಾಯೆಯನ್ನು ಸೃಜಿಸಿದನು. ಅದರಿಂದ ಅನೇಕವಾಗಿ ಬೆಟ್ಟಗಳೂ ಆನೆಗಳೂ ಸಿಂಹಗಳೂ ಹುಲಿಗಳೂ ಕಿರುಬಗಳೂ ಮಿಂಚುಗಳೂ ಹುಟ್ಟಿ ಅರ್ಜುನನ ಮೇಲೆ ಬಿದ್ದುವು.

ಆಗ ಗಂಗಾ ತೀರದಲ್ಲಿ, ಶಾಂತವಾಗಿ ಅಡಗಿರುವ ಮೃಗ ಪಕ್ಷಿಗಳುಳ್ಳ ಋಷ್ಯಾಶ್ರಮದಲ್ಲಿ, ನಿಸ್ಪೃಹನಾಗಿ ತನ್ನ ಶಿಷ್ಯರಿಗೆ ಜ್ಞಾನೋಪದೇಶ ಮಾಡುವಂತೆ ಇದ್ದು, ಭೀಷಣನ ಮಾಯೆಯಿಂದ ಕಾಣಿಸಿಕೊಂಡ ಮುನಿಯೊಬ್ಬನು ಬೇಗನೆ ಅರ್ಜುನನ ಬಳಿಗೆ ಬಂದು, ''ಎಲೈ ಪಾರ್ಥನೇ! ನಮಗೆ ರಾಕ್ಷಸರ ಭಯವು ಬಹಳವಾಗಿದೆ. ನಾವು ಸುಖವಾಗಿ ತಪಸ್ಸು ಮಾಡಲವಕಾಶವಿಲ್ಲ. ನಿನಗೆ ಸುಖಾಗಮನವೇ? ನೀನು ನಮ್ಮ ಆಶ್ರಮದಲ್ಲಿದ್ದು ನಾನು ಉಪದೇಶಿಸುವ ಸದ್ವಿದ್ಯೆಯನ್ನು ಗ್ರಹಿಸು. ಕ್ಷತ್ರಿಯರು ಋಷ್ಯಾಶ್ರಮದಲ್ಲಿ ಭುಜಿಸುತ್ತಿದ್ದು ಬಲವನ್ನು ಪಡೆಯುವರು. ನೀನು ನನ್ನ ವಿದ್ಯಾ ಬಲದಿಂದ ಈ ರಾಕ್ಷಸರನ್ನು ಕೊಲ್ಲುವೆ; ಇದಕ್ಕೆ ಸಂದೇಹವಿಲ್ಲ'' ಎಂದನು. ಅರ್ಜುನನು ರಾಕ್ಷಸ ಮಾಯೆಯನ್ನರಿತು ಭೀಷಣನನ್ನು ಕೊಂದು ಅವನ ಧನ ಕನಕ ರತ್ನಾದಿಗಳನ್ನೂ ಆನೆ ಕುದುರೆಗಳನ್ನೂ ಛತ್ರ ಕುಂಡಲಗಳನ್ನೂ ತೆಗೆದು ಕೊಂಡು ಅಲ್ಲಿಂದ ಮುಂದಕ್ಕೆ ಹೊರಟು ತನ್ನ ಮಗನಾದ ಬಭ್ರುವಾಹನನು ಆಳುತ್ತಿರುವ ರಮ್ಯವಾದ ಮಣಿಪುರಕ್ಕೆ ಬಂದನು.

ಆ ಪಟ್ಟಣದಲ್ಲಿ ಜನರೆಲ್ಲರೂ ಸತ್ಯ ವ್ರತ ಪರಾಯಣರು ; ಸ್ತ್ರೀಯರೆಲ್ಲರೂ ಪತಿವ್ರತೆಯರು. ಅಲ್ಲಿಯ ಮಹಾ ಜನರು ವೇದ ಶಾಸ್ತ್ರಾರ್ಥಗಳನ್ನು ತಿಳಿದು ಸದಾ

ಹರಿ ಸ್ಮರಣೆ ಮಾಡುತ್ತ ಮತ್ತೊಂದು ಚಿಂತೆಯೂ ಇಲ್ಲದಿರುವರು; ಸ್ತ್ರೀಯು ರೆಲ್ಲರೂ ದಯಾ ಯುಕ್ತರಾದುದರಿಂದ ತಲೆಯಲ್ಲಿ ಮುಡಿವ ಪುಷ್ಪ ಮಾಲೆಯಿಂದ ದನಗಳನ್ನು ಕಟ್ಟುವರು. ಸ್ವಪ್ನದಲ್ಲಿಯೂ ಅಲ್ಲಿಯವರು ಸುಳ್ಳು ಹೇಳರು. ಅಲ್ಲಿಯ ಸ್ತ್ರೀಯರ ಎದೆಯ ಮೇಲೂ ತಲೆಯ ಮೇಲೂ ಮೂಗಿನಲ್ಲಿಯೂ ನೀರೋಟದಿಂದ ಕೂಡಿ ಗುಂಡಾಗಿ ಜೋಲಾಡುತ್ತಿರುವ ಮುತ್ತುಗಳು ಹೊಳೆಯುತ್ತಿರುವುವು. ಬಭ್ರುವಾಹನನ ಆದರಣೆಗೆ ಪಾತ್ರರಾದ ಅಲ್ಲಿಯ ಶೂರರು ಈಶ್ವರನನ್ನಾದರೂ ತಮ್ಮ ಬಲದಿಂದ ಸಂತೋಷಪಡಿಸುವ ಸಾಹಸಿಗಳು. ಆ ವೀರರು ಯುದ್ಧದಲ್ಲಿಯೂ ಯಾಚಕರಲ್ಲಿಯೂ ಎಂದಿಗೂ ವಿಮುಖರಾಗರು; ಕೇಳಿಕೊಂಡವರಿಗೆ ತಮ್ಮ ದೇಹ ವನ್ನಾದರೂ ಕೊಡುವ ಔದಾರ್ಯವುಳ್ಳವರು. ಸಾಮಾನ್ಯ ಜನರ ಬಾಯಲ್ಲಿಯೂ ಸುಸಂಸ್ಕೃತ ವಾಣಿಯಲ್ಲದೆ ಅಪಶಬ್ದವು ಹೊರಡುತ್ತಿರಲಿಲ್ಲ. ಇಂತಹ ಪಟ್ಟಣಕ್ಕೆ ಯಜ್ಞಾಶ್ವವು ಬಂದಿತು. ಆ ಪಟ್ಟಣವು ಸದಾ ಸಂತೋಷ ಚಿತ್ತರಾಗಿಯೂ, ಪುಷ್ಟ ರಾಗಿಯೂ ಇರುವ ಜನರಿಂದಲೂ, ಸುವರ್ಣ ಪ್ರಾಕಾರದಿಂದಲೂ ಶೋಭಿಸುತ್ತಿದ್ದಿತು. ಆ ಪುರವನ್ನು ಬಲ ವೀರ್ಯ ಸಂಪನ್ನರಾದ ಮಹಾ ವೀರರು ರಕ್ಷಿಸುತ್ತಿದ್ದರು. ಸಾವಿರ ಗಾಡಿ ತುಂಬುವಷ್ಟು ದ್ರವ್ಯವನ್ನೂ, ಚಿನ್ನ ಬೆಳ್ಳಿ ರತ್ನಗಳನ್ನೂ ಯಥೇಷ್ಟವಾಗಿ ಬಭ್ರುವಾಹನನಿಗೆ ಹಂಸಧ್ವಜನೇ ಮೊದಲಾದ ಸಾಮಂತ ರಾಜರು ಪ್ರತಿ ವರ್ಷವೂ ಕಾಣಿಕೆಯಾಗಿ ಅರ್ಪಿಸುತ್ತಿದ್ದರು. ಬಭ್ರುವಾಹನನಿಂದ ಮಾಡಿಸಿದ್ದ ಚಿತ್ರ ವಿಚಿತ್ರ ವಾದ ಮನೆಗಳ ಸಾಲಿನಿಂದಲೂ ಅರಮನೆಗಳಿಂದಲೂ ದೇವಾಲಯಗಳಿಂದಲೂ ಮಠ ಗೋಪುರಗಳಿಂದಲೂ ಆ ಪುರವು ಭೂಲೋಕದಲ್ಲಿ ವಿಷ್ಣುವು ಸ್ಥಾಪಿಸಿರುವ ಎರಡನೆಯ ವೈಕುಂಠವೋ ಎನ್ನುವಂತಿದ್ದಿತು. ಹೀಗೆ ಶೋಭಿಸುತ್ತಿರುವ ಆ ಪುರವನ್ನು ನೋಡಿ ಪಾರ್ಥನು ಮರಾಲಧ್ವಜನೊಡನೆ, "ಅಯ್ಯಾ! ಇಂತಹ ಪಟ್ಟಣಕ್ಕೆ ನಾವು ಏಕೆ ಬಂದೆವು? ಹೇಳು" ಎಂದು ಕೇಳಿದನು.

ಇಂತು ಮಣಿಪುರಾಗಮನವೆಂಬ ಇಪ್ಪತ್ತೆರಡನೆಯ ಅಧ್ಯಾಯವು.

---

## ಇಪ್ಪತ್ತಮೂರನೆಯ ಅಧ್ಯಾಯ

ಹಂಸಧ್ವಜನು ಅರ್ಜುನನ ಮಾತನ್ನು ಕೇಳಿ, "ಎಲೈ ಅರ್ಜುನನೇ! ಇಲ್ಲಿ ಬಭ್ರುವಾಹನನೆಂಬ ದೊರೆಯು ಆಳುತ್ತಿರುವನು. ಅವನಿಗೆ ನಾನು ಮೊದಲಾಗಿ ಬಹು ಮಂದಿ ರಾಜರು ಪ್ರತಿ ವರ್ಷವೂ ಬಂಡಿಗಟ್ಟಲೆ ಕಪ್ಪವನ್ನು ಸಲಿಸುತ್ತಿರುವೆವು. ನಾವು ಈಗ ರಮ್ಯವಾದ ಅವನ ಮಣಿಪುರಕ್ಕೆ ಕುದುರೆಯೊಡನೆ ಬಂದಿರುವೆವು. ಆ ಬಭ್ರುವಾಹನನು ತೇಜಸ್ವಿ, ಬಲ ಸಂಪನ್ನನು, ಪ್ರಾಜ್ಞನು, ವೇದೋಕ್ತವಾಗಿ ನಡೆಯತಕ್ಕವನು, ವೃದ್ಧರ ಆಜ್ಞೆಯನ್ನು ಪರಿಪಾಲಿಸುವವನು, ಸರ್ವದಾ ಪರಸ್ತ್ರೀ ವಿಮುಖನು, ಶ್ರೀಹರಿಯಂತೆ ದಾನಿಗಳಲ್ಲಿ ಮೊದಲನೆಯವನು. ಅವನ ಸೇನಾಪತಿ ಯಾದ ಸುಮತಿಯು ಮಹಾ ಬಲ ಪರಾಕ್ರಮಶಾಲಿಯೆಂದು ಪ್ರಸಿದ್ಧಿಯನ್ನು ಪಡೆದಿರುವನು; ಅವನು ಕೋಪಿಷ್ಠನಾದ ಶಿವನನ್ನೂ ತಡೆಯಬಲ್ಲ ಧೀರನು; ಶತ್ರುಪ್ರ

ಯುದ್ಧದಲ್ಲಿ ತೋರಿಸಿದ ಅಲ್ಪ ಪರಾಕ್ರಮವನ್ನು ದೊರೆಗೆ ಶ್ಲಾಘಾಪೂರ್ವಕವಾಗಿ ತಿಳಿಸುವನು; ಅವನ ದೋಷವನ್ನು ಸ್ಮರಿಸುವವನಲ್ಲ. ಅವನ ಸೈನಿಕರು ನಮ್ಮ ಕುದುರೆಯನ್ನು ಹಿಡಿದುಕೊಂಡರೆ ನಾವು ಬಹು ಕಷ್ಟಪಟ್ಟು ಕುದುರೆಯನ್ನು ಬಿಡಿಸಿಕೊಳ್ಳಬೇಕಾಗುವುದು'' ಎಂದು ಹಂಸಧ್ವಜನು ಹೇಳುತ್ತಿರುವಷ್ಟರಲ್ಲಿ ಕ್ರೂರವಾದ ಒಂದು ಹದ್ದು ಬಂದು ಅರ್ಜುನನ ಕಿರೀಟಾಗ್ರದಲ್ಲಿ ಕುಳಿತು ಅವನಿಗೆ ಮೃತ್ಯುವನ್ನು ಸೂಚಿಸುತ್ತಿದ್ದಿತು. ಇದನ್ನು ನೋಡಿ ಎಲ್ಲರೂ ಆಶ್ಚರ್ಯಪಡುತ್ತ ಹೆದರಿ ನಡುಗುತ್ತಿದ್ದರು. ಮಹಾ ಶೂರರೂ ಸೇನಾ ಸಮೇತನಾದ ಅರ್ಜುನನೂ ಅಂಗರಕ್ಷಕರಾಗಿರಲು ಕುದುರೆಯು ತನ್ನ ಪಟ್ಟಣಕ್ಕೆ ಓಡಿಬಂದಿರುವುದನ್ನು ಕೇಳಿ ಬಭ್ರುವಾಹನನು ವಿನೋದದಿಂದ ಆ ಕುದುರೆಯನ್ನು ಹಿಡಿಸಿದನು. ಗಂಧ ಪುಷ್ಪಾದಿಗಳಿಂದ ಪೂಜಿಸಿ ಮುಕ್ತಾಹಾರಗಳಿಂದಲಂಕರಿಸಿರುವ ಆ ಕುದುರೆಯನ್ನು ಯುದ್ಧ ವೀರರಾದ ಸಾವಿರಾರು ಮಂದಿ ಯೋಧರು ರಾತ್ರಿಯಲ್ಲಿ ಹಿಡಿದು ಸಭೆಗೆ ತಂದರು. ಬಭ್ರುವಾಹನನು ರತ್ನ ಖಚಿತವಾದ ಸಿಂಹಾಸನದಲ್ಲಿ ಕುಳಿತು ಆ ಉತ್ತಮಾಶ್ವವನ್ನು ತರಿಸಿ ನೋಡಿದನು. ಹತ್ತು ಸಾವಿರ ಕಂಭಗಳುಳ್ಳ ಅವನ ಸಭಾ ಮಂಡಪವು ಸುವರ್ಣ ರತ್ನ ಖಚಿತವಾಗಿ ಚಿತ್ರ ವಿಚಿತ್ರ ನಿರ್ಮಾಣದಿಂದ ನಾನಾ ಭಾವಗಳನ್ನು ಸೂಚಿಸುತ್ತಿದ್ದಿತು. ಆ ಸಭೆಯಲ್ಲಿ ಸುವರ್ಣ ರತ್ನ ನಿರ್ಮಿತಗಳಾದ ಹಂಸ, ನವಿಲು, ಗಿಳಿ, ಪಾರಿವಾಳ, ಶಾರಿಕೆ, ಕೋಗಿಲೆ ಮೊದಲಾದ ಪಕ್ಷಿಗಳು ಸಜೀವಗಳಾಗಿರುವಂತೆ ಶೋಭಿಸುತ್ತಿದ್ದುವು. ರತ್ನಮಯಗಳಾದ ದಿವ್ಯ ವೃಕ್ಷಗಳೂ, ಮದಿಸಿದ ಆನೆಗಳೂ, ಕೃತ್ರಿಮಗಳಾದ ಈಹಾ ಮೃಗಗಳೂ, ಮೀನುಗಳೂ, ಮೊಸಳೆಗಳೂ ಅಲ್ಲಿ ಹೊಳೆಯುತ್ತಿದ್ದುವು. ಗಂಧದೆಣ್ಣೆಯಿಂದಲೂ ಕರ್ಪೂರದ ಬತ್ತಿಯಿಂದಲೂ ಬೆಳಗುತ್ತಿದ್ದ ಸುವರ್ಣ ರತ್ನ ದೀಪಗಳಿಂದ ಸಭೆಯು ಬಗೆ ಬಗೆಯ ಬೆಳಕುಗಳಿಂದ ಪ್ರಕಾಶಿಸುತ್ತಿದ್ದಿತು. ದೊರೆಗಳು ಧರಿಸಿರುವ ರತ್ನಾಭರಣಗಳೂ, ಆಯುಧಗಳೂ—ಇವುಗಳ ಕಾಂತಿಯಿಂದಲೂ, ನೆಲದಲ್ಲಿ ಬಿದ್ದಿರುವ ಕರ್ಪೂರ ಕಣಗಳಿಂದಲೂ, ಸಭೆಯ ನೆಲವು ಬಿಳುಪು ಕೆಂಪು ಬಣ್ಣಗಳುಳ್ಳುದಾಗಿ ರತ್ನ ಕಂಬಳಿಯನ್ನು ಹಾಸಿದಂತಿದ್ದಿತು. ದೊರೆಯ ಬಳಿಯಲ್ಲಿ ಕುಳಿತಿದ್ದ ಸಭಾ ಜನರನ್ನು ಪುಷ್ಪ ಧೂಪ ಗಂಧಗಳ, ಕಸ್ತೂರೀ ಜಲ ಸೇಚನೆಯ, ಕೇಸರಗಳುಳ್ಳ ಸುಗಂಧರಾಜ ಪುಷ್ಪ ಮೊದಲಾದುವುಗಳ, ಸುವಾಸನೆಯು ಮೂರ್ಛೆಗೊಳಿಸುವಂತಿದ್ದಿತು. ಬಭ್ರುವಾಹನನು ಕುದುರೆಯನ್ನು ನೋಡಿ ಪತ್ರವನ್ನು ಓದಿಸಿ ಪಾರ್ಥನ ಮೈಗಾವಲಿನಿಂದ ಬಂದಿರುವ ಆ ಕುದುರೆಯು ಯುಧಿಷ್ಠಿರನದೆಂದು ತಿಳಿದು ಮಂತ್ರಿ ಶ್ರೇಷ್ಠನಾದ ಸುಬುದ್ಧಿಯನ್ನು ಕುರಿತು, ''ಎಲೈ ಸುಬುದ್ಧಿಯೇ! ನಮ್ಮ ತಾಯಿಯಾದ ಚಿತ್ರಾಂಗದೆಯು ಪಾರ್ಥನ ಹೆಂಡತಿ. ಪೂರ್ವದಲ್ಲಿ ಈಕೆಯು ತನ್ನ ತಂದೆಯ ಮನೆಯಲ್ಲಿದ್ದಾಗ, ನರ್ತನೆ ಮಾಡುವುದರಲ್ಲಿ ತಾಳಗತಿಯನ್ನು ತಪ್ಪಿದುದರಿಂದ ಅವಳ ತಂದೆಯು ಕೋಪಿಸಿಕೊಂಡು, 'ನೀನು ತಾಳಗತಿ ತಪ್ಪಿ ನರ್ತನ ಮಾಡಿದುದರಿಂದ ಹೆಣ್ಣು ಮೊಸಳೆಯಾಗಿ ಬಹು ಕಾಲ ನೀರಿನಲ್ಲಿರು; ದೈವ ಯೋಗದಿಂದ ನಿನಗೆ ಅರ್ಜುನನ ಪಾದ ಸ್ಪರ್ಶವಾದರೆ ಆತನಿಂದ ಶಾಪ ವಿಮೋಚನೆಯಾಗುವುದು; ಅವನು ನಿನಗೆ ಪತಿಯೂ ಆಗುವನು' ಎಂದು ಹೇಳಿದ್ದನು.

ಎಲ್ಲವೂ ಅದರಂತೆ ನಡೆಯಿತು. ನಾನು ಅರ್ಜುನನಿಂದ ಈ ಪಟ್ಟಣದಲ್ಲಿ ಹುಟ್ಟಿದೆನು. ನಮ್ಮ ತಾಯಿಯು ನನ್ನನ್ನು ಬಿಟ್ಟು ಆ ಯುಧಿಷ್ಠಿರನ ಬಳಿಗೆ ಹೋದಳು. ನನಗೆ ದೊಡ್ಡ ರಾಜ್ಯಪದವಿಯು ಲಭಿಸಿರುವುದು. ಆ ಅರ್ಜುನನ ಮಗನೇ ಅಲ್ಲವೆ ನಾನು! ಈಗ ನಾನೇ ನನ್ನ ಕಾರ್ಯವನ್ನು ವಿಘಾತ ಮಾಡಿಕೊಂಡಂತಾಯಿತು; ನಮ್ಮ ತಂದೆಯ ಕುದುರೆಯೆಂಬುದನ್ನರಿಯದೆ ವಿಚಾರಶೂನ್ಯನಾಗಿ ಅದನ್ನು ಹಿಡಿದೆನು; ಏನು ಮಾಡಲಿ!'' ಎಂದನು.

ಅದನ್ನು ಕೇಳಿ ಸುಬುದ್ಧಿಯು, "ಇದು ಹೀಗೆಯೇ ಸರಿ: ಅಯ್ಯಾ! ವಿಚಾರವಿಲ್ಲದೆ ಮೊದಲು ಕಾರ್ಯವು ನಡೆದುಹೋಯಿತು. ಅದಕ್ಕೇನು ಮಾಡುವುದು? ಆಗಲಿ, ಈ ಕುದುರೆಯನ್ನು ಒಂದು ವರ್ಷ ಕಾಲ ನೀನೇ ಪಾಲಿಸುತ್ತಿರು. ತಂದೆಯ ಆಜ್ಞೆಯನ್ನು ನಡೆಯಿಸಲೇ ಬೇಕು; ಈ ಅಶ್ವವನ್ನಪಹರಿಸುವವರನ್ನೆಲ್ಲ ಸಂಹರಿಸಲೇ ಬೇಕು. ಪಿತೃಪೂಜೆಯೇ ಮಕ್ಕಳಿಗೆ ಪರಮ ಧರ್ಮವು. ಈಗ ನಿನ್ನ ರಾಜ್ಯ ಕೋಶಾದಿಗಳನ್ನೊಪ್ಪಿಸಿಕೊಟ್ಟು ನಿಮ್ಮ ತಂದೆಯನ್ನು ಸಮಾಧಾನಗೊಳಿಸು. ಆಬಾಲವೃದ್ಧರಾದ ಸ್ತ್ರೀಪುರುಷರೆಲ್ಲ ಬ್ರಾಹ್ಮಣರೊಡನೆ ಸೇರಿ ಗಜಾರೂಢರಾಗಿ ಅವನ ಸಮೀಪಕ್ಕೆ ನಡೆಯಲಿ; ನರ್ತಕಿಯರು ನರ್ತನ ಮಾಡಲಿ, ಗಾಯಕರು ಗಾನ ಮಾಡಲಿ; ನಾವೂ ನಿನ್ನ ಸೈನಿಕರೂ ಪೌರಮಹಾಜನಗಳೂ ವಿಷ್ಣುಭಕ್ತನಾದ ನಿಮ್ಮ ತಂದೆಯನ್ನು ಸಂಭಾವಿಸಿ ಬೇಗನೆ ಕುದುರೆಯನ್ನು ಆತನಿಗೆ ಕೊಡೋಣ. ಇದೇ ಸುಖಕರವಾದ ಆಲೋಚನೆ'' ಎಂದು ಹೇಳಿದನು.

ಬಭ್ರುವಾಹನನು ಸುಬುದ್ಧಿಯ ಮಾತನ್ನು ಕೇಳಿ, ಬ್ರಾಹ್ಮಣರು, ಯೋಧರು, ನಗರ ಮಹಾಜನರು ಇವರೊಡನೆ ಚಂದನ ಕಸ್ತೂರಿ ಕರ್ಪೂರ ಮೊದಲಾದ ಸುವಾಸನಾ ದ್ರವ್ಯಗಳನ್ನೂ ರತ್ನಗಳನ್ನು ತುಂಬಿದ ಬಂಡಿಗಳನ್ನೂ, ಚಂದ್ರನಂತೆ ಬೆಳ್ಳಗೆ ಹೊಳೆಯುತ್ತಿರುವ ಮದಿಸಿದ ಆನೆಗಳನ್ನೂ, ಸುವರ್ಣ ಖಚಿತವಾದ ರಥಗಳನ್ನೂ, ಕಪ್ಪು ಕಿವಿಗಳುಳ್ಳ ಕುದುರೆಗಳನ್ನೂ ತೆಗೆಯಿಸಿಕೊಂಡು ವಾದ್ಯ ಘೋಷಗಳಿಂದಲೂ, ಮಂಗಳ ಕರವಾದ ಜಯ ಧ್ವನಿಗಳಿಂದಲೂ, ಮುಂದೆ ಧೂಪ ಧೂಮದಿಂದ ಕೂಡಿ ಗಜಾರೂಢ ರಾಗಿ ಅರಲು, ಗರಿಕೆ, ಮುತ್ತುಗಳಿಂದ ಕೂಡಿದ ಅಕ್ಷತೆಗಳನ್ನೆರಚುತ್ತಿರುವ ಕನ್ಯೆಯರಿಂದಲೂ ಕೂಡಿ, ಕುದುರೆಯೊಡನೆ ಸೇನಾ ಸಮೇತನಾಗಿ ಬಹು ಸಂತೋಷದಿಂದ ಅರ್ಜುನನ ಬಳಿಗೆ ಬಂದನು. ಪ್ರದ್ಯುಮ್ನ, ಯೌವನಾಶ್ವ ಮತ್ತು ಅವನ ಮಗ, ಮಹಾವೀರನಾದ ಅನುಸಾಲ್ವ, ಧಾರ್ಮಿಕನಾದ ನೀಲಕೇತು, ಮಹಾ ರಾಜನಾದ ಹಂಸಧ್ವಜ, ಮಹಾಬಲಶಾಲಿಯಾದ ಸಾತ್ಯಕಿ, ಯಾದವ ಪ್ರಮುಖನಾದ ಕೃತವರ್ಮ, ಇತರ ಯಾದವರು—ಇವರೊಡನೆ ಅರ್ಜುನನು ಸೈನ್ಯವನ್ನು ಬಿಟ್ಟುಕೊಂಡಿದ್ದ ಸ್ಥಳಕ್ಕೆ ಬಂದು ಬಲಿಷ್ಠನಾದ ಬಭ್ರುವಾಹನನು ಆನೆಯಿಂದಿಳಿದು ಸಮಸ್ತ ರಾಜರೆದುರಿಗೂ ಕಾಲುನಡಿಗೆಯಲ್ಲಿಯೇ ಬರುತ್ತ, ಪ್ರೀತಿಯಿಂದ ಹೆಜ್ಜೆ ಹೆಜ್ಜೆಗೂ ನಮಸ್ಕರಿಸುತ್ತ, ತಾನು ತಂದಿದ್ದ ಅಮೂಲ್ಯ ವಸ್ತುಗಳನ್ನೆಲ್ಲ ಪಾರ್ಥನ ಮುಂದಿರಿಸಿ ತನ್ನ ತಲೆಗೂದಲುಗಳಿಂದ ಆತನ ಪಾದಧೂಳಿಗಳನ್ನೊರಸಿ ಕೊಡಹಿ ಆತನಿಗೆ ಸಂತೋಷವನ್ನುಂಟುಮಾಡಿದನು. ಕನ್ಯೆಯರೆಲ್ಲರೂ ಹೂ ಮತ್ತು ಮುತ್ತಿನ ಮತ್ತು

ಮಣಿಗಳ ಮಳೆಯನ್ನು ಸುರಿಸುತ್ತಿರಲು, ಆ ಬಭ್ರುವಾಹನನು ಸೇನಾ ಸಮೇತನಾಗಿ ನೆಲದ ಮೇಲೆ ದಂಡಪ್ರಣಾಮ ಮಾಡಿ ಅರ್ಜುನನ ಸಮೀಪದಲ್ಲಿ ಕಣ್ಣೀರನ್ನು ಸುರಿಸುತ್ತ ಗದ್ಗದ ಕಂಠವುಳ್ಳವನಾಗಿ ಅವನ ಕಾಲುಗಳನ್ನು ಹಿಡಿದುಕೊಂಡು, ಬಳಿಕ ಮೇಲಕ್ಕೆದ್ದು, "ತಾತ! ನಾನು ಪೂಜ್ಯನಾದ ನಿನ್ನಿಂದ ಚಿತ್ರಾಂಗದೆಯಲ್ಲಿ ಹುಟ್ಟಿದ ಮಗನು. ಉಲೂಪಿಯು ನನ್ನನ್ನು ಸಾಕಿದಳು. ನಾನು ಬಭ್ರುವಾಹನನೆಂಬ ಹೆಸರುಳ್ಳವನು. ಈ ಕುದುರೆಯು ನಿನ್ನದೆಂಬುದನ್ನು ನಾನರಿಯೆನು. ನನ್ನ ರಾಜ್ಯವನ್ನೆಲ್ಲ ನಿನಗೊಪ್ಪಿಸಿರುವೆನು; ಸ್ವೀಕರಿಸಿ ನನ್ನನ್ನು ರಕ್ಷಿಸು" ಎಂದು ಹೇಳುತ್ತ ಪುನಃ ಸೇನಾ ಸಮೇತನಾಗಿ ನಮಸ್ಕರಿಸಿ, 'ಕ್ಷಮಿಸು' ಎಂದು ಬೇಡಿಕೊಂಡನು.

ಹೀಗೆ ಹೇಳುತ್ತಿರುವ ಬಭ್ರುವಾಹನನನ್ನು ನೋಡಿ ಪಾರ್ಥನ ಸೈನಿಕರೂ ಪ್ರದ್ಯುಮ್ನ ಮೊದಲಾದವರೂ ಅರ್ಜುನನನ್ನು ಕುರಿತು, "ದೊರೆಯೇ! ಹಿತೋಕ್ತಿಯನ್ನಾಡಿ ಕೇಳಿಕೊಳ್ಳುತ್ತಿರುವ ಮಗನನ್ನು ಹೇಗೆ ಉಪೇಕ್ಷಿಸುತ್ತೀಯೆ? ಅತಿ ತೇಜಸ್ವಿಯಾದ ಅವನ ಐಶ್ವರ್ಯವನ್ನು ನೋಡು, ನೆಲದಲ್ಲಿ ಬಿದ್ದು ಬೇಡುತ್ತಿರುವ ಮಾನಿಯಾದ ಅವನ ಕೈಯನ್ನು ಹಿಡಿದೆಬ್ಬಿಸು" ಎಂದರೂ, ಅರ್ಜುನನು ಅವರ ಮಾತನ್ನು ಕೇಳಿ ಕೋಪಾವಿಷ್ಟನಾಗಿ, ಕ್ರೂರನಾದ ಯಮನಂತೆ, ತನ್ನ ಮಗನಾದ ಆ ಬಭ್ರುವಾಹನನನ್ನು ಗದರಿಸುತ್ತ ಅವನ ತಲೆಯನ್ನು ಕಾಲಿನಿಂದ ಒದೆದು, ಮುಂದೆ ಒದಗುವ ಮೃತ್ಯುವು ತನ್ನನ್ನು ನುಂಗುತ್ತಿರಲು, ಮಗನನ್ನು ಕುರಿತು, "ಭಯದಿಂದ ನಡುಗುತ್ತಿರುವ ನೀನು ನನ್ನ ಔರಸ ಪುತ್ರನೆಂದಿಗೂ ಅಲ್ಲ. ಚಿತ್ರಾಂಗದೆಯು ನಿನ್ನನ್ನು ವೇಶ್ಯಪುತ್ರನಿಂದ ಪಡೆದಿರಬಹುದು, ನನ್ನಿಂದಲ್ಲ ಎಂದರಿಯುವೆನು" ಎಂದು ನಿಷ್ಠುರವೂ ಅಸಹ್ಯವೂ ಆದ ಮಾತನ್ನು ಹೇಳಿ, "ಮೊದಲು ಪೌರುಷದಿಂದ ನನ್ನ ಕುದುರೆಯನ್ನು ಏಕೆ ಹಿಡಿದೆ? ಈಗ ವೇಶ್ಯಾ ಪುತ್ರನಂತೆ ಹೆದರಿ ಕುದುರೆಯನ್ನು ಹಿಂದಿರುಗಿ ಕೊಡಲು ಏಕೆ ಅಪೇಕ್ಷಿಸುತ್ತೀಯೆ? ನಿನ್ನಂತಹ ವ್ಯರ್ಥ ಪೌರುಷದವನು ನನಗೊಬ್ಬನೂ ಹುಟ್ಟಲಿಲ್ಲ. ಬುದ್ಧಿ ಪರಾಕ್ರಮ ಸಂಪನ್ನನಾಗಿಯೂ ಕೃಷ್ಣ ಪ್ರಿಯನಾಗಿಯೂ ಧರ್ಮಪರನಾಗಿಯೂ ಕ್ಷತ್ರಿಯಾಂತಕನಾಗಿಯೂ ಇದ್ದ ಸುಭದ್ರಾ ನಂದನನಾದ ಅಭಿಮನ್ಯುವೊಬ್ಬನೇ ನನ್ನ ಮಗನೆನಿಸಿಕೊಳ್ಳುವನು. ಯುದ್ಧದಲ್ಲಿ ದ್ರೋಣಾದಿ ವೀರರನ್ನು ವಿಮುಖರನ್ನಾಗಿ ಮಾಡಿ ಚಕ್ರ ವ್ಯೂಹವನ್ನು ಭೇದಿಸಿ ಯುಧಿಷ್ಠಿರನನ್ನು ರಕ್ಷಿಸಿ ಯಶಸ್ಸನ್ನು ಪಡೆದು ಅವನು ಸ್ವರ್ಗಸ್ಥನಾದನು. ನರಿಯೆಲ್ಲಿ? ಸಿಂಹವೆಲ್ಲಿ? ಕುಂಟನೆಲ್ಲಿ? ಶೀಘ್ರಗಾಮಿಯಾದ ಪುರುಷನೆಲ್ಲಿ? ನರಿಯಾದ ನೀನೆಲ್ಲಿ? ಸಿಂಹದಂತಿದ್ದ ಸುಭದ್ರಾ ನಂದನನಾದ ನಮ್ಮ ಅಭಿಮನ್ಯುವೆಲ್ಲಿ? ಎಲೈ ಮೂಢನೇ! ನನ್ನ ಬಾಣಗಳಿಂದ ನಿನ್ನ ಸೈನ್ಯದ ತಲೆಗಳು ಕತ್ತರಿಸಿ ಇನ್ನೂ ನೆಲಕ್ಕೆ ಬೀಳಲಿಲ್ಲ, ನಿನ್ನೆದೆಯಲ್ಲಿ ನನ್ನ ಬಾಣಗಳು ನಡಲಿಲ್ಲ, ನಿನಗೆ ಹೆದರಿಕೆಯೇಕೆ? ಎಲೈ ದುರ್ಮತಿಯೇ! ನಿನ್ನ ತಾಯಿಯು ಗಂಧರ್ವ ರಾಜನ ಮಗಳಾದ ನರ್ತಕಿ. ನೀನು ಈಗ ರಾಜ್ಯವನ್ನು ಬಿಟ್ಟು, ಧನುಸ್ಸನ್ನೂ ವಿಸ್ತಾರವಾದ ರಥವನ್ನೂ ಮನೆಯಲ್ಲಿಟ್ಟು, ನಟನಾಗಿ ಹೊರಟು ಹೋಗು. ಎಲೈ ಕುಲ ಕಳಂಕನೇ! ಕ್ಷಾತ್ರ ಧರ್ಮದಿಂದ ಜೀವಿಸುವುದು ನಿನಗೆ ಹೀನವಾದುದು, ಸುಖಕರವಾದುದಲ್ಲ. ತಾಯಿಯ ಕುಲವನ್ನನುಸರಿಸಿ ಕೊರಲಿಗೆ ಮದ್ದಲೆ

ಯನ್ನೂ ಬೆನ್ನಿಗೆ ವಾಲೇಯವನ್ನೂ ಕಟ್ಟಿಕೊಂಡು ರಂಗಸ್ಥಳದಲ್ಲಿ ನಾಟ್ಯಮಾಡು" ಎಂದನು.

ಬಭ್ರುವಾಹನನು ಆಗ ತಮ್ಮ ತಂದೆಯಾಡಿದ ಮಾತುಗಳೆಲ್ಲವನ್ನೂ ಕೇಳಿ ನಕ್ಕು, ಅರ್ಜುನನನ್ನು ಕುರಿತು ಕೋಪದಿಂದ, "ಎಲೈ ಅರ್ಜುನನೇ! ನೀನಾಡಿದ ಮಾತುಗಳೆಲ್ಲವನ್ನೂ ಸಹಿಸಿದೆನು; ಆದರೆ ನನ್ನನ್ನು ವೇಶ್ಯಾಜಾತನೆಂದು ಹೇಳಿ ಅಲ್ಪಬುದ್ಧಿಯಾದ ನೀನು ನಮ್ಮ ತಾಯನ್ನು ಎಲ್ಲರೂ ಕೇಳುವಂತೆ ನನ್ನೆದುರಿಗೆ ದೂಷಿಸಿದೆಯಷ್ಟೆ! ಅದೊಂದನ್ನು ಮಾತ್ರ ಕ್ಷಮಿಸಲು ಸಾಧ್ಯವಲ್ಲ. ಧನಂಜಯಾ! ಈಗ ನಿನ್ನೆದುರಿಗೆ ನನ್ನ ಕ್ಷತ್ರಿಯತ್ವವನ್ನು ತೋರಿಸುವೆನು. ಎಲ್ಲ ಸ್ತ್ರೀಯರೂ ಮಹಾಜನವೂ ಊರಿಗೆ ಹೊರಡಲಿ; ನಮ್ಮ ಸೈನಿಕರು ಇಲ್ಲಿರಲಿ; ಕುದುರೆಯನ್ನು ಹಿಡಿದು ಕಟ್ಟಿಹಾಕಲಿ; ಪಾರ್ಥನು ಹೇಗೆ ಕುದುರೆಯನ್ನು ಬಿಡಿಸಿಕೊಳ್ಳುವನು? ಸೇನಾವ್ಯೂಹವನ್ನು ನಾನು ಪೌರುಷದಿಂದ ಕಟ್ಟಿ ನಿಲ್ಲಿಸಿದ್ದೇನೆ. ಸುಬುದ್ಧಿ ಮೊದಲಾದ ವೀರರೆಲ್ಲರೂ ನನ್ನ ಯುದ್ಧದಲ್ಲಿ ಪ್ರಯತ್ನಪರರಾಗಲಿ" ಎಂದನು. ಎಲ್ಲರೂ ಅವನ ಮಾತಿನ ಪ್ರಕಾರ ನಡೆಯಿಸಿ ಕುದುರೆಯನ್ನು ಹಿಡಿದುಕೊಂಡು ಹೋದರು. ಘೋರವಾದ ಸೈನ್ಯವು ಚಾಮರಗಳಿಂದಲೂ ರುದ್ರಾಕ್ಷಮಾಲಿಕೆಗಳಿಂದಲೂ ರತ್ನಖಚಿತವಾದ ಕುಂಡಲಗಳಿಂದಲೂ ಪ್ರಕಾಶಿಸುತ್ತ ಯಮನಂತೆ ಆರ್ಭಟಿಸುತ್ತ ನಿಂತಿತು. ನಾನಾವಾದ್ಯಗಳೂ ಶಂಖಗಳೂ—ಇವುಗಳ ಶಬ್ದವು ಮೊಳಗುತ್ತಿದ್ದಿತು. ಘಂಟೆಗಳಿಂದಲೂ ಚಿತ್ರಕಂಬಳಿಗಳಿಂದಲೂ ಕೂಡಿದ ಅರ್ಬುದ ಆನೆಗಳೂ, ಏಳು ಕೋಟಿ ರಥಗಳೂ, ಎರಡು ಅರ್ಬುದ ಕುದುರೆಗಳೂ, ಮೂರು ಅರ್ಬುದ ಕೊಬ್ಬಿದ ಕಾಲಾಳುಗಳೂ ಯುದ್ಧಕ್ಕೆ ಸಿದ್ಧವಾದುವು. ಬಭ್ರುವಾಹನನು ಕೂಡಲೆ ಕೂಡಿಸಿದ ಮಹಾವೀರರು ಕೊಬ್ಬಿದವರಾಗಿಯೂ ಯುದ್ಧಕುಶಲರಾಗಿಯೂ ಪರಸ್ಪರ ಹಿತಚಿಂತಕರಾಗಿಯೂ ಸತ್ಯವ್ರತಪರಾಯಣರಾಗಿಯೂ ಇದ್ದರು. ಅವರೆಲ್ಲರೂ ನಾನಾವಿಧಗಳಾದ ಆಯುಧಗಳನ್ನು ತೆಗೆದುಕೊಂಡು ಭಯಂಕರವಾದ ಕಿಲಕಿಲ ಶಬ್ದದಿಂದಲೂ ಸಿಂಹನಾದಗಳಿಂದಲೂ ತರ್ಜನೆಗಳಿಂದಲೂ, ನಿಲ್ಲು ನಿಲ್ಲೆಂದು ಕೂಗುತ್ತ, ಮೋಹವೂ ಲೋಭವೂ ಜಗತ್ತನ್ನು ಆವರಿಸುವಂತೆ, ಅರ್ಜುನನ ಸೈನ್ಯವನ್ನು ಸುತ್ತಿಕೊಂಡು ಹೊಡೆದು ಕೆಡಹುತ್ತಿದ್ದರು.

ಬಳಿಕ ಬಭ್ರುವಾಹನನು ಸುವರ್ಣಖಚಿತವಾಗಿಯೂ, ಮೂರು ಹಂತಗಳುಳ್ಳುದಾಗಿಯೂ, ಆಯುಧಗಳಿಂದ ಪೂರ್ಣವಾಗಿಯೂ, ಮುಕ್ತಾಹಾರಗಳಿಂದಲಂಕೃತವಾಗಿಯೂ, ಜೋಲಾಡುತ್ತಿರುವ ಚಾಮರಗಳಿಂದಲೂ, ಧ್ವಜದಿಂದಲೂ, ನವಿಲ್ಗರಿಗಳಿಂದಲೂ, ಕಿರುಗಂಟೆಗಳಿಂದಲೂ ಮೆರೆಯುತ್ತ ಇಂದ್ರನ ರಥವನ್ನು ಹಾಸ್ಯಮಾಡುತ್ತಿರುವ ತನ್ನ ದಿವ್ಯರಥವನ್ನೇರಿ ತನ್ನ ತಂದೆಯಾದ ಅರ್ಜುನನನ್ನು ನಿಲ್ಲು ನಿಲ್ಲೆಂದು ಕಠಿನೋಕ್ತಿಯಿಂದ ಗದರಿಸುತ್ತ, ಅವನನ್ನು ಕುರಿತು, "ಎಲೈ ಪಾರ್ಥನೇ! ಧನುವನ್ನು ತೆಗೆದುಕೊ, ನನ್ನ ಶೌರ್ಯವನ್ನು ನೋಡು. ನಾನು ತಂದೆಯ ಭಾವನೆಯಿಂದ ಈ ಕುದುರೆಯನ್ನು ನಿನಗೆ ತಂದುಕೊಟ್ಟೆನು; ಅಲ್ಲದೆ, ನನ್ನ ರಾಜ್ಯವನ್ನೆಲ್ಲ ನಿನಗೊಪ್ಪಿಸಿ ನಿನಗೆ ಶರಣಾಗತನಾದೆನು. ಅದು ನಿನಗೆ ಸಮ್ಮತವಾಗಲಿಲ್ಲ; ನಿನಗೆ ಯುದ್ಧವಲ್ಲದೆ ಸಂಧಿಯು ಇಷ್ಟವಿಲ್ಲವೆಂದು ಕಾಣುತ್ತದೆ. ಭಯಂಕರನಾದ ನಾನು ಈಗ ಯುದ್ಧ

ಸನ್ನದ್ಧನಾಗಿದ್ದೇನೆ. ಈಗ ನಿನಗೆ ರಕ್ಷಕರಾರು ಇರುವರು?'' ಎಂದನು. ಹೀಗೆ ದುಡುಕಿ ಮಾತನಾಡುತ್ತ ಪಾರ್ಥನನ್ನು ಯುದ್ಧಕ್ಕೆ ಕರೆಯುತ್ತಿರುವ ಬಭ್ರುವಾಹನನನ್ನು ನೋಡಿ ದೈತ್ಯ ನಾಯಕನಾದ ಅನುಸಾಲ್ವನು ರೋಷಾವಿಷ್ಟನಾಗಿ ರಥವನ್ನೇರಿ ಪ್ರತಿಭಟಿಸಿ ನಿಂತು, ನಸುನಗುತ್ತ ಒಂಬತ್ತು ಬಾಣಗಳಿಂದ ಬಭ್ರುವಾಹನನನ್ನು ಹೊಡೆದನು. ಬಭ್ರುವಾಹನನೂ ಅನುಸಾಲ್ವನನ್ನು ನೂರು ಬಾಣಗಳಿಂದ ಹೊಡೆದನು. ಆ ಅನುಸಾಲ್ವನು ಆ ಬಾಣಗಳನ್ನು ಬೇಗನೆ ಮಧ್ಯಮಾರ್ಗದಲ್ಲಿಯೇ ಕತ್ತರಿಸಲು, ಬಭ್ರುವಾಹನನು ಅದನ್ನು ನೋಡಿ ಮತ್ತಷ್ಟು ರೋಷದಿಂದ ಕಲ್ಲಿನಂತೆ ಕ್ರೂರವಾದ, ಶುಕಪತ್ರಗಳಿಂದ ಕೂಡಿದ ಕೋಟಿ ಬಾಣಗಳನ್ನು ಆ ರಾಕ್ಷಸನಮೇಲೆ ಪ್ರಯೋಗಿಸಿದನು. ಅವರಿಬ್ಬರೂ ಪರಸ್ಪರ ಬಾಣಗಳಿಂದ ಗಾಯಗಳನ್ನು ಹೊಂದಿ ರಕ್ತದಿಂದ ನೆನೆದ ದೇಹವುಳ್ಳವರಾಗಿ, ಹೂ ಬಿಟ್ಟಿರುವ ಮುಳ್ಳುಮುತ್ತುಗದ ಗಿಡದಂತೆ ಪ್ರಕಾಶಿಸುತ್ತಿದ್ದರು. ಅವರಿಬ್ಬರೂ ಒಬ್ಬರನ್ನೊಬ್ಬರು ಕೊಲ್ಲಬೇಕೆಂದು, ಮೇಘದ್ವಯವು ವರ್ಷಧಾರೆಯನ್ನು ಸುರಿಸುವಂತೆ, ಅಂತರಿಕ್ಷವನ್ನು ಬಾಣಗಳಿಂದ ತುಂಬಿಸಿದರು. ಆಗ ದೇವತೆಗಳು ಭ್ರಾಂತರಾಗಿ ಆಕಾಶವನ್ನು ಬಿಟ್ಟು ದೂರ ಹೋದರು. ಬಭ್ರುವಾಹನನು ಅನುಸಾಲ್ವನ ಕುದುರೆಗಳನ್ನು ನಾಲ್ಕು ಬಾಣಗಳಿಂದ ಕೊಂದು, ಐದನೆಯ ಬಾಣದಿಂದ ಸಾರಥಿಯನ್ನು ಸಂಹರಿಸಿ ನಸುನಗುತ್ತ, ಆರನೆಯ ಬಾಣದಿಂದ ಅವನ ರಥವನ್ನು ಎಳ್ಳುಕಾಳುಗಳಷ್ಟು ಸಣ್ಣ ಸಣ್ಣ ಚೂರುಗಳಾಗುವಂತೆ ಹೊಡೆದು, ಏಳನೆಯದರಿಂದ ಧ್ವಜವನ್ನೂ, ಎಂಟನೆಯದರಿಂದ ಬಿಲ್ಲನ್ನೂ ಕತ್ತರಿಸಿ, ಹತ್ತನೆಯ ಬಾಣವು ಅನುಸಾಲ್ವನನ್ನು ಮುತ್ತುವಂತೆ ಸುವರ್ಣಪುಂಖವುಳ್ಳ ಹತ್ತು ಬಾಣಗಳನ್ನು ಬಿಟ್ಟನು.

ಅನುಸಾಲ್ವನೂ ಬೇರೆ ರಥವನ್ನು ಹತ್ತಿ ಮತ್ತೊಂದು ದೊಡ್ಡ ಬಿಲ್ಲನ್ನು ತೆಗೆದುಕೊಂಡು ಬಭ್ರುವಾಹನನನ್ನು ವಿರಥನನ್ನಾಗಿ ಮಾಡಿ, ಅವನ ದೇಹವನ್ನು ಬಾಣಸಹಸ್ರಗಳಿಂದ ಸೀಳುವಂತೆ ಹೊಡೆದನು. ಬಭ್ರುವಾಹನನು ಕೂಡಲೆ ಅನುಸಾಲ್ವನನ್ನು ವಿರಥನನ್ನಾಗಿ ಮಾಡಲು, ಅನುಸಾಲ್ವನು ಘೋರವಾದ ಗದೆಯನ್ನು ಬಭ್ರುವಾಹನನ ಮೇಲೆ ಪ್ರಯೋಗಿಸಿದನು. ಗದಾಪ್ರಹಾರವನ್ನು ಹೊಂದಿದ ಬಭ್ರುವಾಹನನು ಅನುಸಾಲ್ವನನ್ನು ಕ್ರೂರವಾದ ಒಂಬತ್ತು ಬಾಣಗಳಿಂದ ಹೊಡೆಯಲು, ಅನುಸಾಲ್ವನು ಅದನ್ನು ತಡೆಯಲಾರದೆ ಮೂರ್ಛಿತನಾಗಿ ಬಿದ್ದನು. ಅವನು ನಿಶ್ಚೇಷ್ಟನಾಗಿ ಬಿದ್ದುದನ್ನು ನೋಡಿ ಪ್ರದ್ಯುಮ್ನನು ಯುದ್ಧಕ್ಕೆ ಬಂದನು.

ಬಳಿಕ ಪ್ರದ್ಯುಮ್ನನು ನಿಲ್ಲುನಿಲ್ಲೆಂದು ಬಭ್ರುವಾಹನನನ್ನು ಕೂಗಿ ಹೊಡೆಯುತ್ತ, ಕಠಿನೋಕ್ತಿಗಳಿಂದ ನಿಂದಿಸುತ್ತ, ಸುವರ್ಣಪುಂಖಗಳಾದ ಹತ್ತು ಬಾಣಗಳಿಂದ ಪುನಃ ಹೊಡೆದನು. ಬಭ್ರುವಾಹನನು ಕ್ರುದ್ಧನಾಗಿ ಹತ್ತು ಸಾವಿರ ಬಾಣಗಳಿಂದ ಹೊಡೆದು ಪ್ರದ್ಯುಮ್ನನನ್ನು ಅವನ ಹೆಸರಿಗೆ ತಕ್ಕಂತೆ ಅನಂಗನನ್ನಾಗಿ ಮಾಡಿದನು. ಪೂರ್ವಜನ್ಮದಲ್ಲಿ ಅವನು ಹೇಗೆ ಅನಂಗನಾಗಿದ್ದನೋ ಹಾಗೆ ಈ ಜನ್ಮದಲ್ಲಿಯೂ ಅನಂಗನಾದನು. ಯಾವನ ಬಾಣದ ಹೊಡೆತದಿಂದ ಮನೋಭ್ರಾಂತಿಗೊಳಗಾಗಿ ಯಾವನಾದರೂ ಕಾರ್ಯಾಕಾರ್ಯ ವಿವೇಚನೆಯಿಲ್ಲದೆ ಸ್ವಗೋತ್ರದವಳನ್ನಾದರೂ

ಮುಗಳನ್ನಾದರೂ ಮೋಹಿಸದೆ ಬಿಡುವುದಿಲ್ಲವೋ ಅಂತಹ ಪ್ರದ್ಯುಮ್ನನ ಬಾಣಗಳಿಂದ ಬಭ್ರುವಾಹನನು ಪೀಡಿತನಾಗಿ ಕರ್ತವ್ಯಶೂನ್ಯನಾದನು. ಅವನೂ ಅರ್ಜುನನ ಚತುರಂಗ ಸೈನ್ಯವನ್ನು ದೇಹಭೇದಕಗಳಾದ ಅನೇಕ ಬಾಣಗಳಿಂದ ವ್ಯಥೆಪಡಿಸಿದನು. ಅದನ್ನು ನೋಡಿ ಪ್ರದ್ಯುಮ್ನನು ಬಭ್ರುವಾಹನನನ್ನೂ ಅವನ ಸೈನ್ಯವನ್ನೂ ಬಾಣಗಳಿಂದ ಹೊಡೆಯಲು, ಅದರಿಂದ ಅವರೆಲ್ಲರೂ ಕಾಮ ಬಾಣ ಪೀಡಿತರಾದ ಕಾರಣ, ಮದಿಸಿದ ಆನೆಗಳೆಲ್ಲವೂ ಯುದ್ಧಭೂಮಿಯಲ್ಲಿ ಭ್ರಮಿಸುತ್ತ, ತಮ್ಮ ಮೇಲಿದ್ದ ಚಿತ್ರಕಂಬಳಿಗಳು ಜಾರಿ ಬಿದ್ದುಹೋಗಲು, ಕುಂಭಸ್ಥಳಗಳೊಡೆದು ಮೈಮರೆದು ಬಿದ್ದುವು. ಇದರಲ್ಲಿ ಆಶ್ಚರ್ಯವೇನಿದೆ! ಯಕ್ಷಾಂಗನೆಯರು ಆನೆಗಳ ಕುಂಭಸ್ಥಳಗಳಲ್ಲಿಯ ಸಾಂದ್ರವಾದ ಮುಕ್ತಾಫಲಗಳಿಂದ ಹಾರಗಳನ್ನು ಮಾಡಿ ಅಲಂಕರಿಸಿಕೊಂಡು ಯುದ್ಧದಲ್ಲಿ ತಮ್ಮ ಯೌವನವು ಶೋಭಿಸುವಂತೆ ಮಾಡಿದರು. ಅರುವತ್ತುನಾಲ್ಕು ಮಂದಿ ಯೋಗಿನಿಯರು ಮನುಷ್ಯರ ತಲೆಬುರುಡೆಗಳಲ್ಲಿದ್ದ ಮಾಂಸವನ್ನು ಹೊರಕ್ಕೆ ಚೆಲ್ಲಿ ಅವಕ್ಕೆ ರಕ್ತವನ್ನು ತುಂಬಿ ಒಬ್ಬರನ್ನೊಬ್ಬರು ಹೊಡೆದಾಡಿ ನಗುತ್ತಿದ್ದರು. ರಕ್ತವು ತುಂಬಿದ ಆನೆಗಳ ತಲೆಗಳನ್ನು ಒಬ್ಬರಿಗೊಬ್ಬರು ಎಸೆದಾಡಿದರು; ಆನೆಗಳ ದಂತವನ್ನು ಕೈಯಲ್ಲಿ ಹಿಡಿದು ವಿಲಾಸದಿಂದ ಹಾಡುತ್ತ ಆಶ್ಚರ್ಯಕರವಾಗಿ ಕುಣಿದಾಡಿದರು. ಬಡ ಮೈಯುಳ್ಳ ಬೇತಾಳಗಳು ಮೇದೋಮಾಂಸಗಳಿಂದ ತಮ್ಮ ದೇಹಗಳನ್ನು ಪುಷ್ಟಿಗೊಳಿಸಿಕೊಂಡುವಲ್ಲದೆ ದೇಹದ ಮೇಲೆಯೂ ಅವನ್ನು ಬಳಿದುಕೊಂಡುವು. ಭೈರವಗಳು ಆನೆ ಕುದುರೆ ಮನುಷ್ಯರು ಕತ್ತೆ ಒಂಟೆ—ಇವುಗಳ ದೊಡ್ಡ ತಲೆಗಳನ್ನು ಚೆಂಡುಗಳಂತೆ ಮೇಲಕ್ಕೆಸೆಯುತ್ತ ಕುಣಿದಾಡಿದುವು. ಕಂಕಾಲ ಭೈರವಗಳೂ ಯಕ್ಷರೂ ಪಿಶಾಚಗಳೂ ರಕ್ತಪಾನಮಾಡಿ ಆನೆಗಳ ಕರುಳುಗಳನ್ನು ಹಗ್ಗಗಳಂತೆ ಹಿಡಿದುಕೊಂಡು ಆರ್ಭಟಿಸುತ್ತ ಯುದ್ಧಭೂಮಿಯಲ್ಲಲ್ಲದೆ ಮಾರ್ಗದಲ್ಲಿಯೂ ಕುಣಿದಾಡಿದುವು. ವೇತಾಳಗಳೂ ಪಿಶಾಚಗಳೂ ಮನುಷ್ಯರ ತಲೆಬುರುಡೆಗಳನ್ನು ಮೃದಂಗಗಳಾಗಿ ಮಾಡಿಕೊಂಡು ಬಾರಿಸುತ್ತ, ಕಾಲಿಗೆ ಗಂಟೆಗಳನ್ನು ಕಟ್ಟಿಕೊಂಡು ಸಂತೋಷದಿಂದ ಹಾಡುತ್ತಲೂ ಕುಣಿಯುತ್ತಲೂ ಇದ್ದುವು. ಕೋಟಿ ಪಿಶಾಚಗಳು ರಕ್ತಪಾನಮಾಡಿ, ಮುರಿದುಹೋದ ಆನೆಯ ಸೊಂಡಿಲಗಳನ್ನು ಹಿಡಿದು ಕಾಹಳೆಯಂತೆ ಬಾಯಿಂದ ಊದಿ ವಾದ್ಯಮಾಡುತ್ತಿದ್ದುವು. ಒಂದು ಪಿಶಾಚವು ಆನೆಯ ಕಿವಿಗಳೆರಡನ್ನು ತೆಗೆದುಕೊಂಡು ತಾಳವನ್ನು ಬಾರಿಸುತ್ತಿದ್ದಿತು. ಮತ್ತೊಂದು ಪಿಶಾಚವು, ನರಿಗಳು ಮಾಂಸವನ್ನು ತಿಂದು ಎಸೆದಿರುವ ಒಂಟೆಗಳ ಉದ್ದವಾದ ಕೊರಲುಗಳನ್ನು ತೆಗೆದುಕೊಂಡು ಮನುಷ್ಯರ ನರಗಳನ್ನು ತಂತಿಯಾಗಿ ಕಟ್ಟಿ ವೀಣೆಯಂತೆ ಬಾರಿಸುತ್ತಿದ್ದಿತು. ಕೆಲವು ಬ್ರಹ್ಮರಾಕ್ಷಸ ಗಣಗಳು, ಕಾಲುಗಳೂ ಕೊರಲುಗಳೂ ಮುರಿದುಬಿದ್ದು ಹೋಗಿರುವ ಆನೆ ಕುದುರೆಗಳ ಮೇದೋಯುಕ್ತವಾದ ದೇಹವನ್ನು ತೆಗೆದುಕೊಂಡು, ಆ ಯುದ್ಧಭೂಮಿಯಲ್ಲಿ ಮೃದಂಗಗಳಂತೆ ಬಾರಿಸುತ್ತಿದ್ದುವು. ಭೈರವಗಳ ಗುಂಪು, ಪ್ರದ್ಯುಮ್ನನು ಯುದ್ಧಮಾಡುತ್ತಿರುವಲ್ಲಿ, ಅಲ್ಲಿ ಕತ್ತರಿಸಿ ಬಿದ್ದಿರುವ ಮನುಷ್ಯರ ತಲೆಗಳನ್ನು ತೆಗೆದುಕೊಂಡು ವಿನೋದದಿಂದ ಚೆಂಡಾಟವನ್ನಾಡುತ್ತಿದ್ದುವು. ಪ್ರದ್ಯುಮ್ನನು ಶತ್ರುಸೈನ್ಯವನ್ನು ಕೊಂದೆಡೆಗಳಲ್ಲಿ

ತಲೆಗೂದಲುಗಳೆಂಬ ಪಾಚಿ ಮತ್ತು ಗರಿಕೆಗಳಿಂದ ಕೂಡಿದ ರಕ್ತಪ್ರವಾಹವೆಂಬ ನದಿಯು, ಆನೆಗಳು ಅದರಲ್ಲಿ ಮುಳುಗಿದರೂ ಕಾಣಿಸದಂತಾಗಿರಲು, ಮನುಷ್ಯರ ವಿಷಯವನ್ನು ಹೇಳುವುದೇನು? ಎಂಬಂತೆ ಎರಡನೆಯ ವೈತರಣಿಯಾಗಿ ಹರಿಯುತ್ತಿದ್ದಿತು.

ಇಂತು ಪ್ರದ್ಯುಮ್ನ ಯುದ್ಧ ವರ್ಣನವೆಂಬ ಇಪ್ಪತ್ತಮೂರನೆಯ ಅಧ್ಯಾಯವು.

---

## ಇಪ್ಪತ್ತನಾಲ್ಕನೆಯ ಅಧ್ಯಾಯ

ಹೀಗೆ ಹರಿಯುತ್ತಿರುವ ಆ ನದಿಯ ದಡದಲ್ಲಿ ಮೃಗಗಳು ಹೆಣಗಳನ್ನೆಳೆದಾಡಿ, ಈಚೆಗೆ ಬಂದ ಕರುಳುಗಳನ್ನು ತಿನ್ನುತ್ತ ಕೂಗಿಕೊಳ್ಳುತ್ತಿದ್ದುವು. ಭೈರವಗಳು ಮನುಷ್ಯರ ತಲೆಬುರುಡೆಗಳೆಂಬ ಕಲ್ಲುಗಳಿಂದಲೂ ಮಾಂಸದ ಕೆಸರಿನಿಂದಲೂ ದುರ್ಗಗಳನ್ನು ಮಾಡಿಕೊಂಡು ವಿನೋದದಿಂದ ಜಗಳವಾಡುತ್ತಲೂ, ಆ ದುರ್ಗಗಳ ಪ್ರಾಕಾರದಲ್ಲಿ ಆನೆ ಕುದುರೆಗಳ ತಲೆಗಳ ಮೇಲೆ ಕುಣಿದಾಡುತ್ತಲೂ, ಆನೆಗಳ ಮೇದಸ್ಸಿನಿಂದಲೂ ನರಗಳಿಂದಲೂ ಬಿಲ್ಲಿನ ಹಗ್ಗವನ್ನು ಮಾಡಿಕೊಂಡು ಕಾಲಖಂಡದ ಬಾಲವುಳ್ಳ ತಲೆಬುರುಡೆಗಳನ್ನು ಆಕಾಶಕ್ಕೆ ಎಸೆದಾಡುತ್ತಲೂ, ಹೀಗೆ ಆ ಪ್ರದ್ಯುಮ್ನನ ರಣಭೂಮಿಯಲ್ಲಿ ಇನ್ನೂ ಬಗೆ ಬಗೆಯಾದ ಆಟಗಳನ್ನಾಡುತ್ತಲೂ ಇದ್ದುವು. ಪುನಃ ಪ್ರದ್ಯುಮ್ನನು ಶತ್ರುಸೈನ್ಯವನ್ನು ಬಲವಾಗಿ ಪೀಡಿಸುತ್ತ ಪದಾತಿಗಳೊಡನೆ, ಭೂತಗಳ ಪ್ರಳಯಕಾಲದಲ್ಲಿ ಈಶ್ವರನು ಮಾಡುವಂತೆ, ಘೋರವಾದ ಯುದ್ಧವನ್ನು ಮಾಡುತ್ತಿದ್ದನು; ಸಾವಿರಾರು ಮದಿಸಿದ ಆನೆಗಳನ್ನು ಕೊಂದನು; ರಥಿಗಳ ಸಹಿತವಾಗಿ ಅನೇಕ ರಥಗಳನ್ನು ಪುಡಿ ಪುಡಿ ಮಾಡಿದನು; ರಾವುತರೊಡನೆ ಅನೇಕ ಕುದುರೆಗಳನ್ನೂ ಪದಾತಿಗಳನ್ನೂ ಕೊಂದು ನೆಲಕ್ಕೆ ಕೆಡಹಿ ತನ್ನ ಪರಾಕ್ರಮವನ್ನು ತೋರಿಸಿದನು. ಹೀಗೆ ಕೋಪಿಸಿಕೊಂಡ ಪ್ರದ್ಯುಮ್ನನನ್ನು ನೋಡಿ ಬಭ್ರುವಾಹನನು ಕೋಪದಿಂದ ಪ್ರದ್ಯುಮ್ನನ ಕುದುರೆಗಳನ್ನೂ ಸಾರಥಿಯನ್ನೂ ವಿಮಾನ ಧ್ವಜವನ್ನೂ ಬಾಣಗಳಿಂದ ಮುಚ್ಚಿ ನೆಲಕ್ಕೆ ಕೆಡಹಿದನು. ಪ್ರದ್ಯುಮ್ನನು, ಒಂದು ಮುರಿದು ಬೀಳುತ್ತಲೇ ಮತ್ತೊಂದನ್ನು ತೆಗೆದುಕೊಳ್ಳುತ್ತ ಬರಲು, ಬಭ್ರುವಾಹನನು ಅವನ ಇಪ್ಪತ್ತು ರಥಗಳನ್ನೂ ಕತ್ತರಿಸಿದನು. ಹಾಗೆಯೇ ಪ್ರದ್ಯುಮ್ನನೂ ಬಭ್ರುವಾಹನನ ಅನೇಕ ರಥಗಳನ್ನು ಕತ್ತರಿಸಿ ಹಾಕಿ ಅವನನ್ನೂ ಅವನ ಸಾರಥಿಯನ್ನೂ ಮೂರ್ಛೆಗೊಳಿಸಿ ಕೆಡಹಿದನು. ಆಗ ಬಭ್ರುವಾಹನನು ನೆಲದ ಮೇಲೆ ಎದ್ದು ಕುಳಿತು ಕೋಪಾವಿಷ್ಟನಾಗಿ ಪ್ರದ್ಯುಮ್ನನನ್ನು ಹೊಡೆಯಲು, ಅವನು ಆ ಹೊಡೆತದಿಂದ ಮಲಿನನಾಗಿ ಮತ್ತೆ ಎದ್ದು ಕ್ರೂರವಾದ ಗದೆಯೊಂದನ್ನು ತೆಗೆದುಕೊಂಡು ಹಿಂದಿರುಗಿ ಹೊಡೆಯಲು, ಅದನ್ನು ಬಭ್ರುವಾಹನನು ಮೂರು ಬಾಣಗಳಿಂದ ಕತ್ತರಿಸಿ, ಐದು ಬಾಣಗಳನ್ನು ಅವನ ಮೇಲೆಸೆದನು. ಪ್ರದ್ಯುಮ್ನನೂ ಬಭ್ರುವಾಹನನನ್ನು ಅನೇಕ ಬಾಣಗಳಿಂದ ಹೊಡೆದನು. ಹೀಗೆ ಶಸ್ತ್ರಾಸ್ತ್ರ ಕುಶಲರಾಗಿಯೂ ಶೂರರಾಗಿ ಧನುರ್ಧರರಾಗಿಯೂ ಇರುವ ಇವರಿಬ್ಬರೂ ಆಕಾಶದಲ್ಲಿಯೂ ನೆಲದಲ್ಲಿಯೂ ನಿಂತು ರೋಮಾಂಚವಾಗುವಂತೆ

ಯುದ್ಧ ಮಾಡುತ್ತ ಬಾಣದಿಂದ ಭೂಮಿಯನ್ನೂ ಗಗನ ಮಂಡಲವನ್ನೂ ಮುಚ್ಚಿದರು. ಒಬ್ಬರಮೇಲೊಬ್ಬರು ಬಿಟ್ಟ ಬಾಣಗಳು ಒಂದಕ್ಕೊಂದು ಉಜ್ಜಿ ತೇಜೋಮಯವಾಗಿ, ವಿಷ್ಣುವಿನ ಮಾಯೆಯು ಹಾಗೆ ತೋರಿದುವು. ಉಭಯ ಸೇನೆಗಳಲ್ಲಿಯೂ ರಾಜರು ಬಾಣದ ಮಳೆಯಿಂದ ಭಿನ್ನವಾದ ದೇಹವುಳ್ಳವರಾಗಿ ರಕ್ತಧಾರೆಗಳಿಂದ ಕೂಡಿ ಧಾತು ರಸ ಪ್ರವಾಹವುಳ್ಳ ಪರ್ವತಗಳಂತೆ ಪ್ರಕಾಶಿಸುತ್ತಿದ್ದರು. ಆಯುಧಗಳನ್ನು ಹಿಡಿದು ಹೊಡೆದಾಡುತ್ತಿದ್ದವರೆಲ್ಲರೂ ತಲೆಗಳು ಕತ್ತರಿಸಿದವರಾಗಿಯೂ ಮಾನ ಹೀನ ರಾಗಿಯೂ ಕಳೆಗೆಟ್ಟವರಾಗಿಯೂ ಪ್ರಾಣವನ್ನು ಬಿಟ್ಟರು. ಅವರ ತಲೆಗಳು ಬಿದ್ದು ಹೋಗಿ, ಆಯುದ್ಧದಲ್ಲಿ ಮಹತ್ತಾದ ಆಯುಧವನ್ನು ಹಿಡಿದಿರುವ ಸಾವಿರಾರು ತಲೆಯಿಲ್ಲದ ಮುಂಡಗಳು ಓಡಾಡುತ್ತಿದ್ದುವು. ವೀರರು ರತಿಕ್ರೀಡೆಯಲ್ಲಿ ಸ್ತ್ರೀಯರ ನಖಕ್ಷತಗಳಿಂದ ಹೇಗೆ ವ್ಯಥೆಯಿಲ್ಲದಿರುವರೋ ಹಾಗೆ ಯುದ್ಧದಲ್ಲಿಯೂ ಬಾಣ ವ್ಯಥೆಯನ್ನು ಲಕ್ಷ್ಯಮಾಡದಂತಿದ್ದರು. ಕೆಲವರು ಕೈಯಲ್ಲಿ ಕತ್ತಿಯನ್ನು ಹಿಡಿದು ಹಾಗೆಯೇ ನೆಲಕ್ಕೆ ಬಿದ್ದರು. ಕೆಲವರು ಗರಗಸವನ್ನೂ, ಕೆಲವರು ಗದೆಯನ್ನೂ, ಕೆಲವರು ತ್ರಿಶೂಲವನ್ನೂ, ಕೆಲವರು ಶಕ್ತ್ಯಾಯುಧವನ್ನೂ, ಕೆಲವರು ಭುಶುಂಡಿ ಪಾಶ ಪರಿಘಗಳನ್ನೂ, ಕೆಲವರು ಗುದ್ದಲಿಯನ್ನೂ, ಕೆಲವರು ಭಿಂಡಿವಾಲವನ್ನೂ, ಕೆಲವರು ಒನಕೆಗಳನ್ನೂ ಪಟ್ಟಸಗಳನ್ನೂ ಯಷ್ಟಿಗಳನ್ನೂ ಅಂಕುಶಗಳನ್ನೂ ಕುಂತ ಗಳನ್ನೂ ಕೊಡಲಿಯನ್ನೂ ಗಂಡುಗೊಡಲಿಯನ್ನೂ ಹಿಡಿದು ಯುದ್ಧಮಾಡುತ್ತಿರಲು, ಎಲ್ಲರನ್ನೂ ಬಭ್ರುವಾಹನನು ಕೊಂದನು. ಅಂಕುಶವನ್ನು ಹಿಡಿದು ಆನೆಗಳ ಮೇಲೆ ಕುಳಿತಿರುವರನ್ನೂ, ಗಂಟೆಗಳೊಡನೆ ಆ ಆನೆಗಳನ್ನೂ ಸೀಳಿ, ಅವನು ಸಿಂಹನಾದ ಮಾಡಿದನು. ಕಾಡಿನಲ್ಲಿ ಬೆಂಕಿಯು ಹೊತ್ತಿಕೊಂಡು ಸುಡುತ್ತ ಹೆಚ್ಚು ಹುಲ್ಲು ಬೆಳೆದಿರುವ ಪ್ರದೇಶಕ್ಕೆ ಹೇಗೆ ಹೋಗುವುದೋ ಹಾಗೆ, ಅವನ ಬಾಣಗಳು ರಥಗಳನ್ನು ಕತ್ತರಿಸಿ, ಆನೆ ಕುದುರೆಗಳನ್ನು ಸೀಳಿ, ಕವಚ ಸಹಿತರಾದ ಪದಾತಿಗಳನ್ನು ಕೊಂದು, ಅಲ್ಲಿ ನಿಲ್ಲದೆ ದೂರಕ್ಕೆ ಹೋಗುತ್ತಿದ್ದುವು. ಹೀಗೆ ಬಭ್ರುವಾಹನನೊಬ್ಬನೇ ಪಾರ್ಥನ ಸೈನ್ಯವನ್ನೆಲ್ಲ ವ್ಯಾಪಿಸಿಕೊಂಡನು.

ಬಳಿಕ ಅನುಸಾಲ್ವನು ಸಿಂಹನಾದಮಾಡುತ್ತ ಬಭ್ರುವಾಹನನೊಡನೆ ಪುನಃ ಯುದ್ಧಕ್ಕೆ ಸಿದ್ಧನಾಗಲು, ಅವನ ಜೊತೆಗೆ ಪ್ರದ್ಯುಮ್ನ, ನೀಲಕೇತು, ಯೌವನಾಶ್ವ, ಅವನ ಮಗ ಹಂಸಧ್ವಜ, ಅವನ ಮಗ, ಅಧಿಕ ಬಲನಾದ ಮೇಘವರ್ಣ—ಇವರೆಲ್ಲರೂ ಸೇರಿದರೂ ಬಭ್ರುವಾಹನನೊಬ್ಬನ ಮೇಲೆ ಯುದ್ಧಮಾಡಿ ತಡೆಯಲಾರದೆಹೋದರು. ಬಭ್ರುವಾಹನನು ಅವರೆಲ್ಲರನ್ನೂ ಐದೈದು ಬಾಣಗಳಿಂದ ಹೊಡೆದು ಮೂರ್ಛಿತ ರನ್ನಾಗಿಯೂ ವಿರಥರನ್ನಾಗಿಯೂ ಗಜಾಶ್ವ ಛತ್ರ ಹೀನರನ್ನಾಗಿಯೂ ತಲೆಗೆದರಿ ದವರನ್ನಾಗಿಯೂ ಆಭರಣ ಹೀನರನ್ನಾಗಿಯೂ, ಚಾಮರಗಳಿಲ್ಲದೆ ಬಾಡಿದ ಮುಖ ವುಳ್ಳವರನ್ನಾಗಿಯೂ ಮಾಡಿದನು. ಅವರು ಯಜ್ಞದಲ್ಲಿ ಸೋಮ ಪಾನ ಮಾಡುವಂತೆ, ತಮ್ಮ ರಕ್ತವನ್ನು ತಾವೇ ಪಾನ ಮಾಡುತ್ತ, ಯುದ್ಧ ಭೂಮಿಯಲ್ಲಿ ಸುತ್ತಾಡು ತ್ತಲೂ ನಿಟ್ಟುಸಿರು ಬಿಡುತ್ತ ಓಡಾಡುತ್ತಲೂ ಸುವರ್ಣ ಪುಂಖಗಳುಳ್ಳ ಬಾಣಗಳ ಹೊಡೆತದಿಂದ ಸೀಳಿಹೋದ ದೇಹವುಳ್ಳವರಾಗಿ ಪಲಾಯನ ಮಾಡಿದರು. ಒಬ್ಬನು

ಮಾಂಸ ರಹಿತವಾದ ಆನೆಯ ದೇಹವನ್ನು ಹೊಕ್ಕು ಸುಖವಾಗಿರುತ್ತಿರಲು, ಅಷ್ಟರಲ್ಲಿ ಎರಡು ದೊಡ್ಡ ತೋಳಗಳು ಬಂದು ಅವನನ್ನು ಆನೆಯ ದೇಹದಿಂದ ಹೊರಕ್ಕೆಳೆದು ಅವನ ಕಣ್ಣನ್ನು ಕಿತ್ತುಹಾಕಿ, ಅವನ ಎದೆಯನ್ನು ಸೀಳಿ ಮಾಂಸವನ್ನು ತಿಂದುಹಾಕಿದುವು. ಶತ್ರುವಿನಿಂದ ಹತನಾದ ಮತ್ತೊಬ್ಬನನ್ನು ನರಿಗಳೆಳೆದುಕೊಂಡು ಹೋದುವು. ಅವನು ನೆಲದಲ್ಲಿ ಬಿದ್ದಿರಲು, ಪಚ್ಚಕರ್ಪೂರ ಕುಂಕುಮ ಕೇಸರಿ ಗಂಧ ಲೇಪದಿಂದ ಕೆಂಪಗೆ ಕಾಣುವ ಅವನೆದೆಯನ್ನು ನರಿಗಳು ಉಗುರಿನಿಂದ ಬಗಿಯುತ್ತಿರುವುದನ್ನು ಅಪ್ಸರ ಸ್ತ್ರೀಯೊಬ್ಬಳು ಕಂಡು ಅವನನ್ನು ವಿಮಾನದಲ್ಲಿ ಹತ್ತಿಸಿಕೊಂಡು ಹೋಗಿ ತನ್ನ ಪತಿಯನ್ನಾಗಿ ಮಾಡಿಕೊಂಡಳು. ಅವಳು ಹಾಗೆಯೇ ನಗುತ್ತ, "ಎಲೈ ನಾಥನೆ! ನಿನ್ನ ದೇಹವನ್ನು ನರಿಗಳು ನೆಲದಲ್ಲಿ ಸೀಳಿಹಾಕುತ್ತಿವೆ ನೋಡು! ಈಗ ನಾನು ಕರುಣಾಹೀನಳಾಗಿ ನಿನ್ನನ್ನು ಸ್ತನಗಳಿಂದ ಪೀಡಿಸುತ್ತಿರುವೆನು; ನನಗೆ ನಿನ್ನಲ್ಲಿ ದಯವೇ ಇಲ್ಲ" ಎಂದಳು.

ಮತ್ತೊಬ್ಬನನ್ನು, ಇನ್ನೊಬ್ಬಳು ಸುರಾಂಗನೆಯು ರಾತ್ರಿಯಲ್ಲಿ ತಾನೇ ಅವನ ಅಧರದಲ್ಲಿ ದಂತಕ್ಷತವನ್ನು ಮಾಡಿ, ಹಗಲು ಕೋಪದಿಂದ ಕಾಲಲ್ಲಿ ಮೂರಾವೃತ್ತಿ ಒದೆಯಲು, ಅದರಿಂದ ಅವನು ದೇವಲೋಕದಲ್ಲಿ ಸಂತುಷ್ಟನಾಗಿದ್ದನು. ಹೀಗೆ ಇದೊಂದು ದೊಡ್ಡ ಆಶ್ಚರ್ಯವು ನಡೆಯಿತು. ಬಾಣದಿಂದ ಕತ್ತರಿಸಿಹೋಗಿ ಆನೆಯ ಮೇಲೆ ಜೋಲಾಡುತ್ತಿರುವ ಒಬ್ಬನ ದೇಹವನ್ನು ಸುರಸ್ತ್ರೀಯರು ಸ್ವರ್ಗದಲ್ಲಿ ತೊಟ್ಟಿಲಿನಲ್ಲಿ ತೂಗುತ್ತಿರುವುದನ್ನು ಮತ್ತೊಬ್ಬನು ನೋಡುತ್ತಿದ್ದನು. ಮತ್ತೊಬ್ಬನನ್ನು ದೇವತಾಸ್ತ್ರೀಯೊಬ್ಬಳು ತನ್ನ ಬಾಹುಪಾಶದಿಂದ ಬಿಗಿಯಲು, ಅವನು ಯುದ್ಧದಲ್ಲಿ ಕ್ರೂರವಾದ ಪಾಶಾಯುಧದಿಂದ ಬಿಗಿದುದನ್ನು ಸ್ಮರಿಸಿಕೊಳ್ಳುತ್ತಿದ್ದನು. ಇನ್ನೊಬ್ಬನು ತನ್ನ ದೇಹವು ರಣಭೂಮಿಯಲ್ಲಿ ಬಿದ್ದಿರಲು, ಆನೆಯ ಸೊಂಡಿಲಿನಿಂದ ಮದ ವರ್ಷವು ತನ್ನ ದೇಹದ ಮೇಲೆ ಸುರಿಯುತ್ತಿರುವುದನ್ನೂ ವಿಮಾನದಲ್ಲಿ ತಾನಿರುವಾಗ ಸ್ವರ್ಗಕಾಮಿನಿಯ ಬಾಯಿಂದ ಗಂಡೂಷ ಸೇಚನೆಯು ತನಗಾಗುತ್ತಿರುವುದನ್ನೂ ಕಂಡನು. ಹೀಗೆ ಬಭ್ರುವಾಹನನು ಯುದ್ಧಮಾಡುತ್ತ, ಅರ್ಜುನನ ಸೈನ್ಯದಲ್ಲಿ ಏಟು ತಗುಲಿದವರು, ಯುದ್ಧಮಾಡಲು ಇಷ್ಟವಿಲ್ಲದವರು, ಗಾಯಪಟ್ಟವರು, ಸುರಕ್ಷಿತರಾಗಿರುವವರು—ಈ ನಾಲ್ಕು ಬಗೆಯವರನ್ನೂ ತನ್ನ ಸೈನಿಕರಂತೆ ಭಾವಿಸಿದನು. ತನ್ನ ಬಾಣಗಳಿಂದ ಮೋಹಿತರಾದ ಶೂರರನ್ನು ಸಂತೋಷದಿಂದ ತನ್ನ ಪಟ್ಟಣಕ್ಕೆ ಕರೆದುಕೊಂಡು ಹೋಗಿ, ಅವರ ಆನೆಗಳನ್ನೂ ಕುದುರೆಗಳನ್ನೂ ತನ್ನ ಲಾಯಕ್ಕೆ ಸಾಗಿಸಿ ಸಂತವಿಸಿದನು; ರಥಗಳನ್ನೂ ಇತರ ವಸ್ತುಗಳನ್ನೂ ತನ್ನ ಪಟ್ಟಣಕ್ಕೆ ಸಾಗಿಸಿದನು. ಪ್ರದ್ಯುಮ್ನ ಮೊದಲಾದ ವೀರರೆಲ್ಲರೂ ಅವನ ಬಾಣ ವೃಷ್ಟಿಯಿಂದ ಮೋಹಿತರಾದರು.

ಇಂತು ಬಭ್ರುವಾಹನ ಯುದ್ಧ ವರ್ಣನವೆಂಬ ಇಪ್ಪತ್ತನಾಲ್ಕನೆಯ ಅಧ್ಯಾಯವು.

---

## ಇಪ್ಪತ್ತೈದನೆಯ ಅಧ್ಯಾಯ

ಜೈಮಿನಿಯು ಜನಮೇಜಯನನ್ನು ಕುರಿತು—"ಅಯ್ಯಾ! ಹಿಂದೆ ಅಶ್ವಮೇಧದ ಕುದುರೆಯನ್ನು ಕಟ್ಟಿದುದರಿಂದ ಶ್ರೀರಾಮನಿಗೂ ಕುಶನಿಗೂ ಯುದ್ಧವು ನಡೆದಂತೆ ಅರ್ಜುನನಿಗೂ ಬಭ್ರುವಾಹನನಿಗೂ ಯುದ್ಧವು ನಡೆಯಿತು" ಎಂದು ಹೇಳಲು, ಅದಕ್ಕೆ ಜನಮೇಜಯನು, "ಅಯ್ಯಾ ಮುನಿವರ್ಯನೇ! ಶ್ರೀರಾಮ ಕಥೆಯು ಸರ್ವ ಪಾಪ ವಿನಾಶಕವಾದುದಲ್ಲವೆ! ಆದಕಾರಣ ಶ್ರೀರಾಮನನ್ನು ಅವನ ಮಗನು ಯುದ್ಧದಲ್ಲಿ ಜಯಿಸಿದುದು ಹೇಗೆ? ಶ್ರೀರಾಮನು ಮಗನಾದ ಆ ಕುಶನನ್ನು ಬಾಣ ವೃಷ್ಟಿಯಿಂದ ಅಡಗಿಸಿದುದು ಹೇಗೆ?—ರಾಮನು ಕುಶನನ್ನು ತನ್ನ ಮಗನೆಂದರಿಯದೆ ಹೋಗಲು ಕಾರಣವೇನು? ಇವೆಲ್ಲವನ್ನೂ ನನಗೆ ವಿಸ್ತಾರವಾಗಿ ತಿಳಿಸು" ಎಂದು ಕೇಳಿದನು. ಅದನ್ನು ಕೇಳಿ, ಜೈಮಿನಿಯು, "ಅಯ್ಯಾ ದೊರೆಯೇ! ಹಿಂದೆ ನಡೆದ ರಾಮ ಚರಿತ್ರೆಯನ್ನು ವಿಸ್ತಾರವಾಗಿ ಹೇಳುವೆನು ಕೇಳು" ಎಂದು ಜನಮೇಜಯನನ್ನು ಕುರಿತು ಹೀಗೆ ಹೇಳಿದನು:—

ಹಿಂದೆ ಶ್ರೀರಾಮನು ರಾವಣನನ್ನೂ ಮಹಾ ಬಲಶಾಲಿಯಾದ ಕುಂಭಕರ್ಣನನ್ನೂ ಭಯಂಕರರಾದ ಮೇಘನಾದ (ಇಂದ್ರಜಿತ್) ಮೊದಲಾದ ರಾಕ್ಷಸರನ್ನೂ ಯುದ್ಧದಲ್ಲಿ ಕೊಂದು, ಅಗ್ನಿಮುಖದಲ್ಲಿ ಶುದ್ಧಳಾದ ಸೀತಾದೇವಿಯನ್ನು ಕರೆದುಕೊಂಡು, ಹನುಮಂತನೇ ಮೊದಲಾದ ಕಪಿ ವೀರರಿಂದ ಕೂಡಿ, ಶೂರನಾದ ವಿಭೀಷಣ ಮತ್ತು ಮಹಾತ್ಮನಾದ ಲಕ್ಷ್ಮಣ—ಇವರೊಡನೆ ಪ್ರಯಾಣ ಮಾಡಿ, ಅಯೋಧ್ಯಾ ಪಟ್ಟಣಕ್ಕೆ ಬಂದು ಸೇರಿದನಷ್ಟೆ! ಆಗ ವಸಿಷ್ಠನೇ ಮೊದಲಾದ ಬ್ರಾಹ್ಮಣ ಶ್ರೇಷ್ಠರು ಮಂಗಳ ಸೂಕ್ತಗಳನ್ನು ಪಠಿಸುತ್ತ ಶ್ರೀರಾಮನನ್ನೆದುರುಗೊಂಡರು. ಶ್ರೀರಾಮನು ಆ ಮುನಿವರ್ಯರನ್ನು ನೋಡಿ ಕೂಡಲೆ ತಾನು ರಥದಿಂದಿಳಿದು ಎಲ್ಲರಿಗೂ ನಮಸ್ಕಾರ ಮಾಡಿದನು. ಬಳಿಕ ಸೀತೆಯೂ ಲಕ್ಷ್ಮಣನೂ ಆ ಮುನಿಗಳಿಗೆ ನಮಸ್ಕಾರ ಮಾಡಿದರು. ಶ್ರೀರಾಮನು ಕೈಕೇಯಿ ಸುಮಿತ್ರಾದೇವಿಯರಿಗೆ ವಂದಿಸಿ ಭರತ ಲಕ್ಷ್ಮಣ ಶತ್ರುಘ್ನರೊಡನೆ ಹೊರಟು, ಕೊಳೆ ತುಂಬಿ ಮಲಿನವಾದ ದೇಹವುಳ್ಳವಳಾಗಿಯೂ ಪತಿ ದುಃಖದಿಂದ ವ್ಯಥೆಪಡುತ್ತಿರುವಳಾಗಿಯೂ ರಾಮನನ್ನು ನೋಡಬೇಕೆಂಬ ಕುತೂಹಲವುಳ್ಳವಳಾಗಿಯೂ ಇರುವ ತನ್ನ ತಾಯಿಯಾದ ಕೌಸಲ್ಯೆಗೆ ನಮಸ್ಕಾರ ಮಾಡಬೇಕೆಂದು ಬಂದನು. ಕೌಸಲ್ಯೆಯು ರಾಜೀವ ನೇತ್ರನಾದ ಶ್ರೀರಾಮನನ್ನು ನೋಡಿ ಸಂತೋಷದಿಂದ, ಬಡವನು ನಿಧಿಯನ್ನು ಪಡೆದಂತೆ, ಬಹಳ ಹೊತ್ತು ಅವನನ್ನು ತಬ್ಬಿಕೊಂಡು, ಹೆಚ್ಚಾದ ಪ್ರೀತಿಯಿಂದ ತನ್ನ ಮಗನ ಮೇಲೆ ಕಣ್ಣೀರನ್ನು ಸುರಿಸುತ್ತ, ಜಡೆ ಬೆಳೆದು ಪೊದೆಯಾದ ಅವನ ತಲೆಗೆ ಸ್ನಾನ ಮಾಡಿಸಿದಳು; ಬಳಿಕ, ಶ್ರೀರಾಮನ ಮೈಯನ್ನು ತನ್ನ ಕೈಯಿಂದ ತಡವುತ್ತ ರಾಕ್ಷಸರ ಆಯುಧಗಳಿಂದಾದ ಗಾಯಗಳನ್ನು ತಿಳಿದು ಪಶ್ಚಾತ್ತಾಪದಿಂದ ಹಿತ ವಚನವನ್ನಾಡುತ್ತ, "ಎಲೈ ರಾಮನೇ! ವಸಿಷ್ಠ ಮೊದಲಾದ ಮುನಿಗಳು ನಿನ್ನನ್ನು ಆಯುಧಗಳಿಂದ ಭೇದಿಸುವುದಕ್ಕಾಗದವನೆಂತಲೂ, ನೀರಿನಲ್ಲಿ ನೆನೆಯದವನೆಂತಲೂ ಹೇಳಿದನಷ್ಟೆ! ನಿನಗೆ ಬಾಣದ ಗಾಯಗಳಾಗಿರುವುದರಿಂದ ಈಗ ಅವರ ಮಾತೆಲ್ಲವೂ ವ್ಯರ್ಥವೆಂದು ತಿಳಿಯುತ್ತೇನೆ; ಅಥವಾ, ಕೆಲವರು

ಮುನಿವರರು ನಿನ್ನನ್ನು ಈಶ್ವರ ಭಕ್ತನೆಂದು ಹೇಳುತ್ತಾರೆ; ಆದಕಾರಣ ನೀನು ಬಾಣ ಗಳಿಗೆ ನಿನ್ನಲ್ಲಿ ಅವಕಾಶವನ್ನು ಕೊಟ್ಟೆ ಎಂದು ಭಾವಿಸುವೆನು'' ಎಂದು ಹೇಳುತ್ತ, ಕೌಸಲ್ಯೆಯು ಕರುಣಾಯುಕ್ತಳಾಗಿ ರಾಮನ ದೇಹವನ್ನು ತನ್ನ ಕೈಗಳಿಂದ ಸ್ಪರ್ಶ ಮಾಡಿ, ದಿವ್ಯ ಜ್ಞಾನವನ್ನು ಪಡೆದ ಬ್ರಾಹ್ಮಣನಂತೆ, ಪರಮಾನಂದ ಭರಿತಳಾದಳು. ಆಕೆಯ ಹಸ್ತ ಸ್ಪರ್ಶದಿಂದ ಶ್ರೀರಾಮನ ವ್ಯಥೆಯೆಲ್ಲವೂ ನಿವಾರಣೆಯಾಯಿತು. ಬಳಿಕ ರಾಮನು ಆಕೆಗೆ ತಲೆವಾಗಿ ಬಂಧುಗಳನ್ನು ಕುಶಲ ಪ್ರಶ್ನೆ ಮಾಡಿ ಸಂತೋಷದಿಂದ ತಮ್ಮಂದಿರೊಡನೆ ಶೈಲ ವನ ಕಾನನಗಳಿಂದ ಕೂಡಿದ ಭೂಮಿಯೆಲ್ಲವನ್ನೂ ಪಾಲಿಸುತ್ತ ಅಯೋಧ್ಯೆಯಲ್ಲಿದ್ದನು. ಅವನ ರಾಜ್ಯದಲ್ಲಿ ಪ್ರಜೆಗಳೆಲ್ಲರೂ ಸುಖವಾಗಿದ್ದರು; ಬ್ರಾಹ್ಮಣರು ವೇದಪರಾಯಣರಾಗಿದ್ದರು; ಕರುಗಳು ತಮಗೆ ತೃಪ್ತಿಯಾಗುವ ವರೆಗೂ ಹಾಲನ್ನು ಕುಡಿದು ಕ್ರೀಡಿಸುತ್ತಿದ್ದುವು; ಗೋಪಾಲಕರು ದೊಡ್ಡ ಕೆಚ್ಚಲುಳ್ಳ ಹಸುಗಳಿಂದ ಯಥೇಚ್ಛವಾಗಿ ಹಾಲನ್ನು ಕರೆಯುತ್ತಿದ್ದರು; ಗಿಡಗಳೆಲ್ಲವೂ ಸರ್ವದಾ ಫಲ ಪುಷ್ಪಗಳಿಂದ ತುಂಬಿದ್ದುವು; ದುಷ್ಕಾಲ ದೋಷಗಳನ್ನು ನಾಶ ಮಾಡುತ್ತ ಓಷಧಿಗಳೆಲ್ಲವೂ ಫಲಿಸುತ್ತಿದ್ದುವು; ಯಾಜಕರು ಸರಯೂ ನದೀ ತೀರದಲ್ಲಿ ಯಜ್ಞ ಗಳನ್ನು ನಡೆಯಿಸುತ್ತಿದ್ದರು; ಯೂಪಸ್ತಂಭಗಳು ಮೋಟಾಗಿದ್ದರೂ ಯಜ್ಞಗಳಲ್ಲಿ ಎಲ್ಲೆಡೆಗಳಲ್ಲಿಯೂ ಪಶುಗಳಿಂದ ಕೂಡಿ ಏಳ್ಗೆಯನ್ನು ಹೊಂದಿದ್ದುವು. ಹೀಗೆ ಶ್ರೀರಾಮನು ಅಗ್ನಿಗೆ ಸಮಾನರಾದ ತನ್ನ ಮೂರು ಮಂದಿ ತಮ್ಮಂದಿರೊಡನೆ ಸತ್ತ್ವ ರಜಸ್ತಮೋಗುಣಗಳೆಂಬ ಗುಣತ್ರಯದಿಂದ ಕೂಡಿದವನಂತೆ ಸುಖದಿಂದ ಮೆರೆಯುತ್ತಿದ್ದನು.

ಇಂತು ಅಯೋಧ್ಯಾ ಪ್ರವೇಶವೆಂಬ ಇಪ್ಪತ್ತೈದನೆಯ ಅಧ್ಯಾಯವು.




---

# ಪತ್ರ ವ್ಯವಹಾರ

## ೧. 'ಇದೆ', 'ಇವೆ' ಮೊದಲಾದ ಕ್ರಿಯಾ ರೂಪಗಳ ಮೂಲ

'ಇದೆ', 'ಇವೆ' ಮೊದಲಾದ ಕೆಲವು ಕ್ರಿಯಾ ರೂಪಗಳ ಮೂಲವನ್ನು ಕಂಡು ಹಿಡಿಯಲಿಕ್ಕೆ ಈ ವರೆಗೆ ಕ. ಸಾ. ಪ. ಪತ್ರಿಕೆಯಲ್ಲಿ ಮೂರು ಲೇಖನಗಳು ಪ್ರವರ್ತಿಸಿದುವು :—

೧ನೆಯದು—ವಿದ್ವಾಂಸರಾದ ತೀ. ನಂ. ಶ್ರೀಕಂಠಯ್ಯನವರು ಬರೆದುದು : ಆ ಕ್ರಿಯಾಪದಗಳು ತತ್ತದಾಕಾರದ ಸರ್ವನಾಮ ಮೂಲಕಗಳು, ಯಾವ ಧಾತುವಿನಿಂದಲೂ ಹುಟ್ಟಿರತಕ್ಕವುಗಳಲ್ಲ ಎಂಬ ಅಭಿಪ್ರಾಯವುಳ್ಳುದು.

೨ನೆಯದು—ನನ್ನದು : ಆ ಕ್ರಿಯಾಪದಗಳು ಸರ್ವನಾಮ ಜನ್ಯಗಳಲ್ಲ, 'ಇರ್' ಧಾತು ಘಟಿತಗಳು ಎಂದು ತೋರಿಸುವುದಕ್ಕೆ ಪ್ರಸಕ್ತವಾದುದು.

೩ನೆಯದು—ಮೇಲಿನ ಲೇಖನವನ್ನು ಆಕ್ಷೇಪಿಸಿ, ಆ ಕ್ರಿಯಾಪದಗಳು ಸರ್ವನಾಮ ಜನ್ಯಗಳಾಗಿರುವ ಸಂಭವವೇ ಹೆಚ್ಚು, ಧಾತು ಜನ್ಯವಾಗಿರುವ ಸಂಭವ ಕಡಿಮೆ ಎಂದು ಹೇಳಲಿಕ್ಕೆ ಉಕ್ತ ವಿದ್ವಾಂಸರು ಬರೆದುದು.

ವಿದ್ವಾನ್ ಶ್ರೀಕಂಠಯ್ಯನವರ ೨ನೆಯ ಲೇಖನವು (ಕ್ರಮದಲ್ಲಿ ಮೂರನೆಯದು) ಈ ವಿಷಯದಲ್ಲಿ ಬಹು ಪರಿಶ್ರಮದಿಂದಲೂ, ನಿದಾನವಾಗಿಯೂ, ತಕ್ಕಷ್ಟು ವಿವೇಚನದೊಡನೆಯೂ ಬಂದಿರುವದು. ಅದರಲ್ಲಿ ನನ್ನ ಲೇಖನ (ಕ್ರಮದಲ್ಲಿ ಎರಡನೆಯದು) ದೊಳಗಿನ ಮುಖ್ಯವಾದ ಅಂಶಗಳನ್ನು ಕುರಿತು ಒಂದೆರಡು ಆಕ್ಷೇಪಣೆಗಳುಂಟು. ಆದುದರಿಂದ ಈಗ ಆ ಆಕ್ಷೇಪಗಳಿಗೆ ಸಮಾಧಾನವನ್ನು ಹೇಳುವದು ನನ್ನ ಮೊದಲನೆಯ ಕೆಲಸ; ಅವರ ಊಹೆ–ವಿವರಣಗಳ ಬಲಾಬಲವನ್ನು ಒರೆನೋಡುವದು ನನ್ನ ಎರಡನೆಯ ಕೆಲಸ; ಅದರಿಂದ ಹೊರಡುವ ಫಲಿತವನ್ನು ವಾಚಕರಿಗೆ ನಿವೇದಿಸುವದು ಅದರ ಮುಂದಿನ ಕೆಲಸ. ಈ ಕೆಲಸಗಳನ್ನು ನಿರ್ವಹಿಸುವದಕ್ಕಾಗಿಯೂ, ಕೊನೆಯ (ಕ್ರಮದಲ್ಲಿ ಮೂರನೆಯ) ಲೇಖನದಲ್ಲಿ ಬಂದ ವಿವರಣೆಯು ಅವರ ಪಕ್ಷವನ್ನು ಸ್ಥಾಪಿಸುವಷ್ಟು ಸಬಲವಿಲ್ಲೆಂದು ತೋರಿಸುವದಕ್ಕಾಗಿಯೂ ನನ್ನ ಈ ಲೇಖನಕ್ಕೆ ಪ್ರವೃತ್ತಿಯುಂಟಾಗಿದೆ.

### ಆಕ್ಷೇಪಗಳಿಗೆ ಸಮಾಧಾನ

**ಆಕ್ಷೇಪ ೧.**—'ಇರ್ದಪ್ಪನ್' ಎಂಬದರೊಳಗಿಂದ 'ಇವನ್', 'ಇರ್ದ್ಧದೆ' ಯೊಳಗಿಂದ 'ಇದೆ' ಉಳಿಯುತ್ತಿದ್ದರೆ ನಡುವಿನ 'ದಪ, ದ್ಧ'ಗಳು ಯಾವ ಭಾಷಾ ನಿಯಮಗಳ ಸಿಡಿಲೆರಗಿ ದಗ್ಧವಾದವು?

**ಸಮಾಧಾನ.**—ಶಬ್ದಗಳ ರೂಪವು ಉಚ್ಚಾರದಲ್ಲಿ ಸವೆಯುತ್ತ ಹೋಗುವದು ಅನಿವಾರ್ಯವಾದ ಸಂಕಟವು. ಇದನ್ನು ವ್ಯವಸ್ಥೆಗೊಳಿಸುವ ಸಂದರ್ಭದಲ್ಲಿ ಪೂರ್ವಿಕರು ವರ್ಣಾಗಮ, ವರ್ಣವಿಪರ್ಯಯ, ವರ್ಣಲೋಪ, ವರ್ಣವಿಕಾರ ಮೊದಲಾದ ಕೆಲವು ಕಾರ್ಯಗಳು ಇಂಥ ಘಟನೆಯಲ್ಲಿ ನಡೆಯುತ್ತವೆ ಎಂದು ಹೇಳಿರುವರು. ಇವುಗಳಲ್ಲಿ ಕಡೆಯ ಮೂರು ಕಾರ್ಯಗಳನ್ನು ಯಥಾಸಂಭವವಾಗಿ ವಿನಿಯೋಗಿಸಿಕೊಂಡರೆ ನಿಷ್ಪತ್ತಿಯು ಕೈಗೂಡುವದು. ಇದಕ್ಕೂ ಸಂಕ್ಷೇಪವಾಗಿ ಹೇಳುವುದಾದರೆ—'ಪೊರಮಟ್ಟನು' ಎಂಬದು 'ಹೊಂಟನು' ಎಂದಾಗಲಿಕ್ಕೆ, ಅಥವಾ 'ಏಂಗೆಯ್‌ವೆಂ' ಎಂಬದು 'ಏವೆಂ' ಎಂದಾಗಲಿಕ್ಕೆ ಯಾವ ಭಾಷಾ ನಿಯಮದ ಸಿಡಿಲೆರಗಿತೋ ಅಂಥಾದ್ದೇ ಒಂದು ಉತ್ಪಾತವೆದ್ದು ಪ್ರಕೃತ 'ದಪಾ' ದಿಗಳು ಮಾಯವಾಗಿರಬೇಕು ಎಂದು ಹೇಳಬಹುದು.

**ಆಕ್ಷೇಪ ೨.**—'ಇರ್ದಪ್ಪನ್' ಎಂಬದರಿಂದ 'ಐಥಾನೆ', 'ಅದಾನೆ' ಗಳು ಆಗುವಾಗ ಇಕಾರಕ್ಕೆ ಬೆಂಬಲವಾಗಿ ಅಕಾರ ಬರಲು ಕಾರಣವೇನು?

**ಸಮಾಧಾನ.**—ಅನುಸ್ವಾರ ವಿಸರ್ಗಗಳನ್ನು ಉಚ್ಚರಿಸುವಾಗ ಹಿಂದೆ ಅಕಾರವನ್ನು ಸೇರಿಸುವದು ಸರ್ವಪ್ರಸಿದ್ಧವಾದ ವಿಷಯ. ತಮಿಳಿನಲ್ಲಿ ವ್ಯಂಜನಗಳನ್ನು ಉಚ್ಚರಿಸುವಾಗ ಹಿಂದೆ ಇಕಾರವನ್ನು ಸೇರಿಸುವ ರೂಢಿ ಇದೆ. ಉದಾ: ಇಕ್, ಇಙ್, ಇಚ್, ಇತ್—ಹೀಗೆ. ಮಲೆಯಾಳಿನಲ್ಲಿ ಙ, ಞ, ಮೊದಲಾದ ಅನುನಾಸಿಕಗಳನ್ನು ಇಙಾ, ಇಞಾ ಮೊದಲಾಗಿ ಇಕಾರದೊಡನೆ ಉಚ್ಚರಿಸುವದುಂಟು. ಅವುಗಳ ಬೆನ್ನು ಬಿದ್ದ ಕನ್ನಡದಲ್ಲಿಯೂ ಹಿಂದೆ ಹಿಂದೆ ಇದೇ ರೀತಿಯಿತ್ತು. ತಮಿಳಿನಲ್ಲಿ 'ರಾಜನ್' ಶಬ್ದವು ಮೊದಲು 'ಇರಾಜನ್, ಇರಾಶನ್, ಇರಶನ್' ಆಗಿ ಕೊನೆಗೆ 'ಅರಶನ್' ಎಂದು ನಿಂತಿದೆ; ಕನ್ನಡದಲ್ಲಿ ಅದು 'ಅರಸನ್' ಎಂದಾಗಿದೆ. ಹಿಂದುಸ್ತಾನಿಯಲ್ಲಿ 'ಸ್ಥಾನ, ಸ್ಥಲ, ಸ್ನಾನ'ಗಳನ್ನು 'ಅಸ್ಥಾನ, ಅಸ್ಥಲ, ಅಸ್ನಾನ' ಎಂದು ಹೇಳುವದುಂಟು. ಕನ್ನಡದಲ್ಲಿ 'ಎನ್ನು, ಆಳ್ದು, ನೆಡು, ನೆಕ್ಕು, ನೆರೆ'ಗಳನ್ನು 'ಅನ್ನು, ಅದ್ದು, ನಡು, ನಕ್ಕು, ನರೆ' ಎಂದು ಉಚ್ಚರಿಸುವದುಂಟು. 'ಹೋ–ಅಹೋ', 'ಲೋ–ಅಲೋ', 'ಕಟಾ–ಅಕಟಾ' ಎಂದು ಪರ್ಯಾಯವುಂಟು. ಅ, ಇ ಕಾರಗಳು ಕೂಡಿ ಐಕಾರವಾಗುವದುಂಟು. ಉದಾ: ಪಯಿನು–ಹೈನು, ಪಯಿರು–ಪೈರು—ಹೀಗೆ. ಒಟ್ಟಿಗೆ, ಉಚ್ಚಾರ ಸೌಲಭ್ಯಕ್ಕೋಸ್ಕರ ಇಕಾರ, ಅಕಾರಗಳು ಬೆನ್ನಾಸರೆಗೆ ಬರುವದು ಕಾಣುತ್ತದೆ. ಇವೆರಡರಲ್ಲಿ ಮತ್ತೆ ಅಕಾರಕ್ಕೆ ಪ್ರಾಬಲ್ಯ ಬಹಳ. ಇಕಾರದ ಜೊತೆಗೆ, ಇಲ್ಲವೆ ಇಕಾರಕ್ಕೆ ಪ್ರತಿಯಾಗಿ ಅಕಾರ ಬರುವದು ಕೇವಲ ಕಲ್ಪನಾ ಸೃಷ್ಟಿಯಲ್ಲ. ಇದರ ಮೇಲೆ, 'ಐಥಾನೆ', 'ಅದಾನೆ'ಗಳಿಗೆ ನಾನು ಹೇಳಿದ ವ್ಯುತ್ಪತ್ತಿಯು ಅಸಿದ್ಧವೋ ಸಿದ್ಧವೋ ಪ್ರಾಜ್ಞರಾದ ವಾಚಕರು ನೋಡಿಕೊಳ್ಳುವದು.

## ಊಹೆ–ವಿವರಣಗಳ ಬಲಾಬಲ ವಿಚಾರ

ವಿದ್ವಾನ್ ಶ್ರೀಕಂಠಯ್ಯನವರು ಮೊದಲು ಎತ್ತಿದ 'ಇದೆ, ಇವೆ' ಮೊದಲಾದ ಕೆಲವು ಕ್ರಿಯಾಪದಗಳ ಚರ್ಚೆಯಿಂದ ಎರಡು ಹೆಜ್ಜೆ ಮುಂದಕ್ಕೆ ಸಾಗಿ ಈ ಸಂಗತದ

ಕೂಡ ಇನ್ನೆರಡು ಪಂಗಡಗಳನ್ನು ತೋರಿಸಿದ್ದಾರೆ. (ವಾಸ್ತವಿಕವಾಗಿ ಆ ಮೂರು ಪಂಗಡಗಳ ಕ್ರಿಯಾಪದಗಳಲ್ಲಿ ಸಮಾನ ಪುರುಷ ಕ್ರಿಯಾಪದಗಳ ಅರ್ಥವೇನೋ ಒಂದೇ; ರೂಪದಲ್ಲಿ ವೈಲಕ್ಷಣ್ಯ ಬಂದುದರಿಂದ ಕುಲವೂ ಬೇರೆ ಎಂಬ ಭಾವನೆಯು ಮೈದೋರಿದೆ.) 'ಇದ್ದಾನೆ'ಯ ಪಂಗಡದ ಕ್ರಿಯಾಪದಗಳು 'ಇರ್' ಧಾತು ಜನ್ಯಗಳೆಂಬದನ್ನು ಅವರು ಒಪ್ಪಿಕೊಳ್ಳುತ್ತಾರೆ. 'ಇದೆ, ಇವೆ' ಮೊದಲಾದ ೧ನೆಯ ವರ್ಗದವು ಮಾತ್ರ ನಾನು ಹೇಳುವಂತೆ 'ಇರ್' ಧಾತು ಜನ್ಯಗಳಲ್ಲ, ಸರ್ವನಾಮಗಳಿಂದಲೇ ಹುಟ್ಟಿದುವು ಎಂಬದು ಅವರ ಗ್ರಹಿಕೆ. ೩ನೆಯ 'ಅಯ್ದಾನೆ' ಮೊದಲಾದ ಪಂಗಡದ (ಇದರಲ್ಲಿ ಪ್ರಥಮ ಪುರುಷದ ಕ್ರಿಯಾಪದಗಳು ಮಾತ್ರ ಉಂಟು) ಕ್ರಿಯಾಪದಗಳ ಬಳಗವೇ ಬೇರೆಯೆಂದು ಊಹಿಸಿ, ಅವನ್ನು ಒಂದು ನೆಲೆಗೆ ಸೇರಿಸಬಹುದೆಂದು 'ಆಯ್' (ಆಗು ಎಂಬರ್ಥವುಳ್ಳ ಧಾತುವೆಂದು ಕಲ್ಪಿಸಿದ್ದು) ಧಾತುವಿನ ಆಶ್ರಯವನ್ನು ತೆಗೆದುಕೊಂಡರೂ ವ್ಯುತ್ಪತ್ತಿಗೆ ತೊಂದರೆ ಬಂದು ಅಡ್ಡನಿಂತು ಕೈಬಿಡಲಾಗಿದೆ. ತಥಾಪಿ, ಇವುಗಳ ಮೂಲದಲ್ಲಿ ಒಂದಾನೊಂದು ಧಾತುವಿದೆ ಎಂಬದನ್ನು ಅವರು ಮಸುಮಸಕಾಗಿ ಸ್ವೀಕರಿಸುವರೆಂದು ಗಮ್ಯವಾಗುತ್ತದೆ. ವಸ್ತುತಃ, ಇವು ಬೇರೆ ಬಳಗದವಲ್ಲ. 'ಅವನೆ' (ಅನ್ನೆ), 'ಇದ್ದಾನೆ, ಐದಾನೆ (ಅದಾನೆ, ಅದಾನು)'—ಈ ಮೂರು ಕ್ರಿಯಾಪದಗಳ ಅರ್ಥದಲ್ಲಿ ಭೇದವಿಲ್ಲ. ಮೂಲದಲ್ಲಿ ಇವು ಒಂದೇ ಇದ್ದು, ಒಂದೊಂದು ಕಡೆಯಲ್ಲಿ ಒಂದೊಂದು ಬಹಳ ಬಳಕೆಯಲ್ಲಿರುತ್ತವೆ. 'ಅನ್ನೆ'ಯು ಭಟಕಳದ ಪಂಚಕ್ರೋಶಿಯಲ್ಲಿ ಬಹಳ ರೂಢಿಯಲ್ಲುಂಟು; ಮೈಸೂರ ಪ್ರಾಂತದಲ್ಲಿಯೂ ಇರುವದು. 'ಇದೆ'ಯ ಪ್ರಚಾರವು ಮೈಸೂರ ಸೀಮೆಯಲ್ಲಿಯೇ ಹೆಚ್ಚು. 'ಐದಾನೆ (ಐದನೆ)'ಯ ಪ್ರಚಾರವೆಲ್ಲಿಯೂ ಕೇಳಬರುವದಿಲ್ಲ. ಅದರಲ್ಲಿ ಸ್ವಲ್ಪ ಬದಲಾವಣೆಯಾಗಿ ಬಂದ 'ಅದಾನೆ (ಅದಾನು)'ಯು ಧಾರವಾಡ ಜಿಲ್ಲೆಯ ಎಷ್ಟೋ ಭಾಗಗಳಲ್ಲಿ ಹೆಚ್ಚು ಬಳಕೆಯಲ್ಲಿದೆ. 'ಐದಾನೆ' ಮೊದಲಾದ ಕಡೆಯ ನಾಲ್ಕು ರೂಪಗಳ ಅರಿವು ಉತ್ತರ ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಯಾರಿಗೂ ಇದ್ದಂತೆ ಇಲ್ಲ. ವಾಣಿಯು ಒಂದೇ ಆದರೂ ಅಧಿಕಾರ ಭೇದದಿಂದಲೋ, ಇಂದ್ರಿಯ ಪಾಟವದ ಬಡತನದಿಂದಲೋ ಉಚ್ಚಾರವು ಸಡಿಲಾಗುತ್ತ, ರೂಪವು ಕುಗ್ಗುತ್ತಬಂದು, ಮುಂದೆ ಇವನ್ನೆಲ್ಲ ಜೊತೆಗೆ ನಿಲ್ಲಿಸಿದರೆ ಇವು ಒಂದೇ ಕುಲದವಾಗಿದ್ದರೂ ಈಗ ಕೆಲವಕ್ಕೆ ಬಂದ ದುರ್ದೆಸೆಯನ್ನು ನೋಡಿ ಒಂದನ್ನೊಂದು ತಾವೆಲ್ಲ ಒಂದೇ ಜಾತಿಯವೆಂದು ಹೇಳಲಿಕ್ಕೂ, ಒಂದೇ ಪಙ್ಕ್ತಿಯಲ್ಲಿ ಕೂಡಲಿಕ್ಕೂ ಒಪ್ಪಲಾರವು. ಇದು ತಪ್ಪಿಸಲಾರದ ಕರ್ಮಗತಿಯು. ಶುಚಿಗೆ ಮೆಚ್ಚಿದವರು ಇವಕ್ಕೆ ಪ್ರಾಶಸ್ತ್ಯವನ್ನು ಕೊಡಬಿಟ್ಟರೂ, ಗ್ರಂಥಗಳಲ್ಲಿ ಬಂದು ನಿಂತಮೇಲೆ ಇವನ್ನು ಹೊರದೂಡುವದು ಶಕ್ಯವಲ್ಲ. ಇರಲಿ! ಈ ಪಂಗಡದ ನಿಷ್ಪತ್ತಿಯನ್ನು ಕುರಿತು ಬಂದ ಆಕ್ಷೇಪಕ್ಕೆ ಹಿಂದೆ ಸಮಾಧಾನ ಹೇಳಿದೆ. ಇನ್ನುಳಿದ ಪಂಗಡವು ೧ನೆಯದು. ಇದೇ ಚರ್ಚೆಯ ಮುಖ್ಯ ತಿರುಳು. ಇವಕ್ಕೆ ಸರ್ವನಾಮಗಳ ನಿರ್ದೇಶತ್ವದ ಬಲವನ್ನು ವಿಾಸಲು ಮಾಡಿದೆ. ಈಗ ಅದರ ವಿಚಾರ.—

೧. **ಸರ್ವನಾಮಗಳ ಕ್ರಿಯಾರ್ಥ ಶಕ್ಯತೆ.**—ಸರ್ವನಾಮಗಳಿಗೆ ಸ್ವತಂತ್ರವಾದ ಅರ್ಥವಿಲ್ಲ, ಅವು ಬುದ್ಧಿವಿಷಯತಾವಚ್ಛೇದಕಗಳು ಎಂದು ಪೂರ್ವಿಕರು

ಸಿದ್ಧಾಂತವನ್ನು ಮಾಡಿರುತ್ತಾರೆ. ಅವಕ್ಕೆ 'ಸರ್ವನಾಮ' ಎಂಬ ಸಾರ್ಥಕವಾದ ಸಂಜ್ಞೆಯು ಕೂಡ ಕೊಡಲಾಗಿದೆ. ನಾಮಗಳು ವಸ್ತುವಾಚಕಗಳು, ಕ್ರಿಯಾ ವಾಚಕಗಳಲ್ಲ. ಕ್ರಿಯಾಪದಗಳಲ್ಲಿ ಎಲ್ಲಿಯಾದರೂ ಅವುಗಳ ರೂಪ ಸಾದೃಶ್ಯವು ತೋರಿದ ಕೂಡಲೆ ಆ ಕ್ರಿಯಾಪದಗಳು ಸರ್ವನಾಮ ಜನ್ಯಗಳೆಂದು ಹೇಳಲಾಗದು.

೨. ಕನ್ನಡದಲ್ಲಿ—ದ್ರವಿಡ ವರ್ಗದ ಭಾಷೆಗಳಲ್ಲಿ–ಸರ್ವನಾಮಗಳು ಆಖ್ಯಾತ ಪ್ರತ್ಯಯಗಳಾಗಿವೆ; 'ಅದೆ, ಅವೆ'ಗಳು ಹೊಸಗನ್ನಡದಲ್ಲಿ ಪ್ರತ್ಯಯಗಳಾಗಿ ಕ್ರಿಯಾಪದಗಳನ್ನುಂಟುಮಾಡುವದಿಲ್ಲವೆ? ಎಂದರೆ—ಇಲ್ಲಿಯಾದರೂ 'ಅದೆ, ಅವೆ' ಮುಂತಾದವುಗಳು ಸರ್ವನಾಮಗಳಂತೆ ಕಾಣುತ್ತವೆ ಎನ್ನಬಹುದೇ ಹೊರತು ಮತ್ತೆ ಬೇರೆ ಇಲ್ಲ. ಇವು ಸರ್ವನಾಮಗಳೇ ಎಂದು ನಿರ್ಧರಿಸುವುದಾದರೂ ಹೇಗೆ? ಇವು (ಇರ್ ಧಾತುವಿನ) ಕ್ರಿಯಾಪದಗಳೆಂದರೆ ಅದನ್ನು ನಿರಾಕರಿಸಲಾಗುವದೆ?

ಲೋಕದಲ್ಲಿ ಯಾವ ಭಾಷೆಯಲ್ಲಿಯೂ ಸತ್ತಾರ್ಥಕ ಧಾತುಗಳು ಬಹು ವಿಷಮ ಗತಿಯುಳ್ಳುವಾಗಿ ಕಾಣುತ್ತವೆ. ಉತ್ಕ್ರಾಂತಿ ವಾದವನ್ನು ಅಂಗೀಕರಿಸಿದರೆ—ಮನುಷ್ಯಪ್ರಾಣಿಯು ನುಡಿಯನ್ನು ವ್ಯಕ್ತಗೊಳಿಸಿದಾಗ ಎಲ್ಲಕ್ಕೂ ಮೊದಲು ಬಳಸಿದ ಧಾತುಗಳು ಸತ್ತಾರ್ಥಕಗಳು ಎಂದು ತಿಳಿಯುತ್ತದೆ. ಇವು ಅತಿ ಪ್ರಾಚೀನತಮ ಧಾತುಗಳು. ಇವನ್ನು ಹೇಗೋ ಹೊಂದಿಕೆ ಮಾಡಿಕೊಂಡು ನುಡಿಯು ಮುಂದೆ ಸಾಗಿತು. ಬರಬರುತ್ತ ಹೊಸ ಧಾತುಗಳು ಉದಯವಾಗಲು, ಅವುಗಳಲ್ಲಿ ಒಂದು ವಿಧದ ನಿಯಮ ಬದ್ಧವಾದ ಗತಿಯು ನಿಲ್ಲುತ್ತ ಬಂತು. ವೈಯಾಕರಣರು ಅವುಗಳನ್ನು ಸೂಕ್ಷ್ಮವಾಗಿ ಅವಲೋಕಿಸಿ ಅವುಗಳ ನಡಿಗೆಯಲ್ಲ ಕಾಣಬರುವ ಹೆಜ್ಜೆಯ ರೀವಿ ಯನ್ನು ಕುರಿತು ನಿಯಮಗಳನ್ನು ಕಲ್ಪಿಸಿದರು. ಅದು ಮುಂದೆ ಎಲ್ಲ ಧಾತುಗಳಿಗೆ ಧರ್ಮ ನಿಯಮದಂತೆ ಅನುಸರಣೀಯವಾಯಿತು. ತೀರ ಪ್ರಾಚೀನ ಧಾತು ರೂಪ ಗಳಲ್ಲಿ ಸಾಮಾನ್ಯ ನಿಯಮಗಳು ಅಧಿಕಾರ ನಡಿಸಲು ಅಸಮರ್ಥವಾಗುತ್ತವೆ. ಆದುದರಿಂದ ಆ ರೂಪಗಳಲ್ಲಿ ಹೊಸ ಮಾರ್ಪಾಟು ಆಗಲಾರದು. ಇಲ್ಲಿ, 'ಅಸ್' (ಸಂಸ್ಕೃತ), 'ಅಸ' (ಮರಾಠಿ), To be (English), 'ಇರ್, ಉಳ್' (ಕನ್ನಡ) ಧಾತುಗಳ ರೂಪಗಳನ್ನು ಸ್ಮರಿಸಬಹುದು. ಇವುಗಳ ಜೊತೆಗೆ ಇನ್ನು ಕೆಲವು ಧಾತು ಗಳುಂಟು: 'ಅಸ್ಮತ್, ಯುಷ್ಮತ್' ಅರ್ಥದ ಸರ್ವನಾಮಗಳು ಕೂಡ ಅತಿ ಪ್ರಾಚೀನಗಳು. ಇವುಗಳ ಅವಸ್ಥೆಯಾದರೂ ಸತ್ತಾರ್ಥಕ ಧಾತುಗಳಂತೆ ವಿಷಮ ವಾಗಿದೆ. ಒಟ್ಟಿಗೆ ಹೇಳುವದೇನೆಂದರೆ—ಸತ್ತಾರ್ಥಕ ಧಾತು ಮಾನವ ಭಾರತಿಯ ಎಲ್ಲಕ್ಕೂ ಮೊದಲಿನ ಬಳಕೆಯ ಮಾತು. ಇದರಲ್ಲಿ ವಿಕಾರವಿರುವಷ್ಟು ಬೇರೆ ಧಾತು ಗಳಲ್ಲಿಲ್ಲ. ಇಂಥವುಗಳನ್ನು ಮುಂದಿನ ಪರಿಷ್ಕೃತ ಧಾತು ರೂಪಗಳೊಡನೆ ಹೋಲಿಸಿ ಸರಿಬೀಳವೆಂದು ತ್ಯಾಜ್ಯಮಾಡುವದು, ಇಲ್ಲವೆ ಇವುಗಳ ಸಾದೃಶ್ಯವುಳ್ಳ ಯಾವದಾದ ರೊಂದು ಮಾತು ಇವುಗಳ ಮೂಲವೆಂದು ಹೇಳುವದು ಸರಿಯಲ್ಲ.

೩. ದ್ರವಿಡವರ್ಗದ ಭಾಷೆಗಳಲ್ಲಿ ನಿಜವಾದ ಕ್ರಿಯಾಪದಗಳಿಲ್ಲ, ಕೃದಂತ ಗಳೇ ಕ್ರಿಯಾಪದಗಳಾಗುವದಿಲ್ಲವೊ ಎಂದರೆ—'ಬಂದನ್, ಬಂದುದು, ಬರ್ಪುದು'

ಎಂಬಿವು ಕೃದಂತಗಳೇ ಇದ್ದು ವಾಕ್ಯವನ್ನು ಮುಗಿಸುತ್ತಿದ್ದಾಗ ಇವು ವಿಧೇಯ ಪದ ಗಳಾಗುತ್ತವೆ. ಮುಂದೆ ವಾಕ್ಯ ಪೂರ್ತಿಗೆ ಕ್ರಿಯಾಪದವೊಂದು ಬೇಕು. (ಇದರ ಸ್ಪಷ್ಟತೆ ಇನ್ನು ಬರುವದು.) ಪ್ರಾಕೃತಾದಿ ಅನೇಕ ಭಾಷೆಗಳಲ್ಲಿ ಸಂಸ್ಕೃತದಂತೆ ಎಲ್ಲ ಲಕಾರ (ಕಾಲಾರ್ಥ) ಗಳಿಗೆ ಸ್ವತಂತ್ರವಾದ ರೂಪಗಳಿಲ್ಲ; ಭೂತ ಭವಿಷ್ಯತ್ ಕಾಲ ಗಳಲ್ಲಿ ಕೃದಂತಗಳೇ ಆ ಕೆಲಸವನ್ನು ಮಾಡುತ್ತವೆ. ಅದು ಆಯಾ ಭಾಷೆಗಳ ಶಕ್ತಿಯ ಅಲ್ಪತೆ ಎನ್ನಬಹುದೇ ಹೊರತು ಧಾತುವಿಲ್ಲದೆ ಕ್ರಿಯಾಪದಗಳಾಗುತ್ತವೆ ಎಂದು ಸಾಧಿಸಲಿಕ್ಕೆ ಆ ನಿದರ್ಶನವು ಸಾಲದು. ಸಂಸ್ಕೃತದಲ್ಲಿಯೂ ಕೂಡ 'ಲುಟ್' (ಭವಿತಾ, ಭವಿತಾರೌ, ಭವಿತಾರಃ ಇ.—ಅನದ್ಯತನ ಭವಿಷ್ಯತ್—1st or Periphrastic Future) ರೂಪಗಳನ್ನು ನೋಡಲು ಕೃದಂತಗಳೇ ಕ್ರಿಯಾಪದಗಳ ಕೆಲಸ ವನ್ನು ನೆರವೇರಿಸುವಂತೆ ತೋರುತ್ತದೆ. (ಆದರೆ ಇಲ್ಲಿ ಧಾತುವೇ ಮೂಲವಲ್ಲಿದೆ ಎಂಬ ದನ್ನು ಮರೆಯುವಂತಿಲ್ಲ.) ಇದೊಂದು ಆಧಾರದ ಮೇಲೆ ಕ್ರಿಯಾಪದಗಳಲ್ಲಿ ಎಲ್ಲೆಲ್ಲಿ ರೂಪ ನಿಷ್ಪತ್ತಿಯು ತೊಡಕುಳ್ಳದಾಗಿ ತೋರುವದೊ ಅಲ್ಲಿ ಹೋಲಿಕೆಯಿಂದ ಅವು ಸರ್ವನಾಮಗಳೆಂದು ಹೇಳುವದು ಅಯುಕ್ತವು.

**೪. ನಿರ್ದೇಶದ ಅಸ್ತಿತ್ವಸ್ಥಾಪನೆಯ ವಿಚಾರ.**—ನಿರ್ದೇಶವು ಅಸ್ತಿತ್ವ ಸ್ಥಾಪಕವೆಂಬ ಸಿದ್ಧಾಂತವು ವಿಲಕ್ಷಣವಾದುದು. ಶಬ್ದ ಜಾತವೇ ಅಸ್ತಿತ್ವವನ್ನು ಸ್ಥಾಪಿಸುತ್ತದೆ. ನಿರ್ದೇಶದ ಉದ್ದೇಶವು ಸಾಕ್ಷಾತ್ಕರಣವೇ ಹೊರತು ಅಸ್ತಿತ್ವ ಸ್ಥಾಪನೆಯಲ್ಲ. ಅಸ್ತಿತ್ವವೇ ಎಲ್ಲದರ ಮೂಲದಲ್ಲಿದೆ. ಅದಿಲ್ಲದೆ ಯಾವ ವ್ಯವಹಾರ ತಾನೆ ನಡೆಯುವದು? ನಿರ್ದೇಶತ್ವವು ಪ್ರಥಮ ಪುರುಷದ ಸರ್ವನಾಮಗಳಿಗೆ ಮಾತ್ರವದೆ ಎನ್ನುವದು ಕೂಡ ಔಪಚಾರಿಕವು. ನಿರ್ದೇಶತ್ವವು ಪ್ರತಿಯೊಂದು ಶಬ್ದದಲ್ಲಿದೆ. ವಾಚಕಗಳೆಲ್ಲ ನಿರ್ದೇಶಕಗಳು, ವಾಚ್ಯಗಳೆಲ್ಲ ನಿರ್ದೇಶ್ಯಗಳು; ಎಂದ ಮೇಲೆ ಉತ್ತಮ ಮಧ್ಯಮ ಪುರುಷವಾಚಕ ಸರ್ವನಾಮಗಳು ನಿರ್ದೇಶಕಗಳಾಗಲಿಕ್ಕೆ ತೊಂದರೆ ಏನು? ನಾನು, ನೀನು ಎಂದು ಅಂಗುಲಿ ನಿರ್ದೇಶ ಪೂರ್ವಕವಾಗಿಯೇ ತೋರಿಸಬೇಕಾಗುವದಿಲ್ಲವೇ? ಆದಕಾರಣ, 'ಪ್ರಥಮ ಪುರುಷ ಸರ್ವನಾಮಗಳೇ ನಿರ್ದೇಶಕಗಳು, ತನ್ಮೂಲಕ ಅಸ್ತಿತ್ವ ಸ್ಥಾಪಕಗಳು' ಎಂಬ ಊಹೆಯು ಬಾಧಿತ ವಾಗುತ್ತದೆ.

'ಮನೆ ಇದೆ (ಇದೇ)' ಎಂಬಲ್ಲಿ 'ಇದೆ (ಇದೇ)'ಗೆ ನಿರ್ದೇಶನಾರ್ಥ ಮಾತ್ರ ಉಳಿದಿದೆ ಎಂದರೆ ಅದು ಕ್ರಿಯಾಪದವಾಗದು, ವಿಧೇಯ ಪದವಾಗುವದು. ವಿಧೇಯ ಪದವು ಕ್ರಿಯಾಪದವೇ ಇರಬೇಕೆಂಬ ನಿಯಮವಿಲ್ಲ. ನಿರ್ದೇಶನಾರ್ಥದಿಂದ ಅಸ್ತಿತ್ವದ ಸ್ಥಾಪನೆಯಾಗುವದು ಅಶಕ್ಯವೆಂದು ಮೇಲೆ ತಿಳಿದದೆ. ವಿಧೇಯ ಪದ ಯಾವದು, ಕ್ರಿಯಾಪದ ಯಾವದು ಎಂಬದರ ನಿಷ್ಕರ್ಷವನ್ನು ಮಾಡಿಕೊಳ್ಳದಿದ್ದದರಿಂದಲೇ 'ಇದೆ'ಯು ವಿದ್ವಾನ್ ಶ್ರೀಕಂಠಯ್ಯನವರ ಸಂದೇಹಕ್ಕೆ ಅಸ್ತಿತ್ವವನ್ನು ಕೊಟ್ಟಿರ ಬಹುದಲ್ಲವೆ? ಹೀಗೆ ನಿರ್ದೇಶನಾರ್ಥಕ್ಕೆ ಅಸ್ತಿತ್ವದ ಬಲವು ತಪ್ಪಿದ್ದರಿಂದ ಸರ್ವನಾಮ ಗಳ ಕ್ರಿಯಾರ್ಥ ಶಕ್ಯತೆಯೂ ಬಾಧಿತವಾಗುತ್ತದೆ.

**೫. 'ಇನ್ಬೀ' ಎಂಬ ಕ್ರಿಯಾಪದದ ಪ್ರಯೋಗ ವಿಚಾರ.**—'ಇವ್ಬೀ' ಎಂಬದು ಉತ್ತಮ ಪುರುಷ ಬಹುವಚನದಲ್ಲಿ ಒಂದೆಡೆ ಇದ್ದರೂ ಇರಬಹುದು. ಈ ಕಡೆಯಲ್ಲಿ ತತ್ಸದೃಶವಾದ 'ಇಬಿ' ಎಂಬ ರೂಪವು ಬಹಳ ಬಳಕೆಯಲ್ಲಿದೆ. ಅದರ ಪ್ರಯೋಗ—'ಅದು (ಅವು) ಅಲ್ಲಿ ಇಬಿ'. 'ಇಬಿ'ಗೆ ಉತ್ತಮ ಪುರುಷದಲ್ಲಿ ಇಲ್ಲಿ ಪ್ರಯೋಗ ಸಿಕ್ಕುವದಿಲ್ಲ. ಈ 'ಇಬಿ'ಯು 'ಇರ್ಪುದೈ (ವೈ)' ಎಂಬದರ ಕುಗ್ಗಿದ ರೂಪವಿರುವಂತೆ ಕಾಣುತ್ತದೆ. ಇದು ಭವಿಷ್ಯತ್ ಸೂಚಕವಾದ ರೂಪವಿದ್ದರೂ ಮಾತಿನಲ್ಲಿ ವರ್ತಮಾನಕ್ಕೆ ಭವಿಷ್ಯತ್ ಕ್ರಿಯಾಪದಗಳನ್ನು ಉಪಯೋಗಿಸುವ ರೂಢಿಯು ವಿಪುಲವಿದ್ದದರಿಂದ 'ಇರುವದು (ವು)' ಎಂಬರ್ಥದಲ್ಲಿ ಬಂದಿರುವದು. ಇದು ಕೂಡ ಸರ್ವನಾಮವಲ್ಲ.

**೬. 'ಇರ್ದಪನ್' ಎಂಬದೇ 'ಇದ್ದಾನು' ಎಂದು ಹೊಸಗನ್ನಡ ದಲ್ಲಿ ಸಂಭಾವನಾರ್ಥಕ್ಕೆ ತಿರುಗಿದೆ ಎಂಬದರ ವಿಚಾರ.**—ಹಳಗನ್ನಡದಲ್ಲಿ ಸಂಭಾವನಾರ್ಥಕ್ಕೆ ಸ್ವತಂತ್ರ ಕ್ರಿಯಾಪದಗಳಿಲ್ಲ ಎಂಬದು ನಿಜ. ಆದರೆ ಆ ಅರ್ಥ ವನ್ನು ಕೊಡತಕ್ಕ ಕ್ರಿಯಾಪದಗಳು ಹಳಗನ್ನಡದಲ್ಲಿ ಇಲ್ಲ ಎಂದು ಹೇಳಲಾಗದು. 'ಇರ್ದನಕ್ಕುಂ, ಇರ್ದಯುಕ್ಕುಂ, ಇರ್ದನಕ್ಕುಂ, ಇರ್ದಪೆನಕ್ಕುಂ, ಇರ್ಪೆನಕ್ಕುಂ'— ಇವು ಹಳಗನ್ನಡದಲ್ಲಿ ಸಂಭಾವನಾರ್ಥದ ರೂಪಗಳು.

'ಇರ್ದಪನ್.' ಎಂಬದು 'ಇದ್ದಹನ್' ಎಂದಾದರೂ, ಅದು 'ಇದ್ಧಅನ್' ಆಗುವದು ಅಸಂಭವ; 'ಇದ್ಧನ್' ಎಂದಾಗುವದುಂಟು. 'ಇದ್ಧಅನ್' ಆಗುತ್ತ ದೆಂದರೂ ಕನ್ನಡದಲ್ಲಿ ಎರಡು ಅಕಾರಗಳು ಸೇರಿ ದೀರ್ಘವಾಗುವದು ಆಮೇಲೆ ಅಸಂಭವ. ಅಕಾರದ ಮುಂದೆ ಅಕಾರ ಬಂದರೆ ಒಂದು ಲೋಪವಾಗುವದೇ ಹೊರತು ಸಂಸ್ಕೃತದಂತೆ ದೀರ್ಘವಾಗದು. ಹೊಸಗನ್ನಡದಲ್ಲಿ 'ಆನು' ಎಂಬದೇ ಪ್ರತ್ಯಯ. ವ್ಯಾಕರಣಕಾರರ ಮತವೂ ಹೀಗೆಯೇ ಅದೆ. ಇದಲ್ಲದೆ 'ಆನು, ಆವು'ಗಳು ಸಂಭಾವ ನಾರ್ಥದಲ್ಲಿ ಮಾತ್ರ ಬರುವವೂ ಅಲ್ಲ; ಬೇರೆ ಕಡೆಯಲ್ಲಿಯೂ ಉಂಟು. 'ಬರ್‌ತಾನು, ಬರ್‌ತಾವು' ಎಂದು ಪ್ರಯೋಗವುಂಟು. 'ಗಯಾಸುರನ ಲಾವಣಿ' ಎಂದು ಪ್ರಸಿದ್ಧ ವಾದ ಕವನದಲ್ಲಿ—

> ವಿಧಿಕಾಡೋ ಕಾಲಕೆ ಬರ್‌ತಾವು ವಿಘ್ನದ ಮಾತಾ।
> ಕೊಟ್ಟವಚನ ತಪ್ಪದವ ಖರೇವಿಂದ್ರುಜಾ ಪಾರ್ಥಾ, ಕೇಳ್ರಿ ಪಾರ್ಥಾ ॥ ಪಲ್ಲವಿ ॥
> ನೀ ಕೇಳು ಪರೀಕ್ಷಿತರಾಯ ಒಂದ ಮನಸಿನಲಿ।
> ಸುಕಮುನೀ ಹೇಳುತಾನು ಬಂದು ಭಾಳ ಪ್ರೀತೀಲಿ। ಪ್ರೀತೀಲಿ।

ಇತ್ಯಾದಿ.

ಆದುದರಿಂದ 'ಇರ್ದಪನ್–ಇದ್ದಾನು–ಇದ್ದಾನೆ' ಎಂಬ ಸ್ವಾರಸ್ಯದ ನಿಷ್ಪತ್ತಿ ಅಸಿದ್ಧ.

**೭. ಅವ್ಯಯುಗಳ ಅಖಂಡತ್ವ ವಿಚಾರ.**—ಅವ್ಯಯುಗಳಿಗೆ ರೂಢಾರ್ಥದಲ್ಲಿ ಪ್ರಾಧಾನ್ಯವೇ ಹೊರತು ಯೌಗಿಕಾರ್ಥದಲ್ಲಿ ತಾತ್ಪರ್ಯವಿಲ್ಲವೆಂಬದರಿಂದ ಅವುಗಳ

ಮೂಲ ಶೋಧನವು ಪ್ರಯೋಜನಕಾರಿಯಲ್ಲವೆಂದು ಹೇಳಬಹುದು. 'ಎಯ್ದೆ, ವಿಗೆ'ಗಳು ಕೃದಂತಗಳಾದುದರಿಂದ ಇವಕ್ಕೆ ಧಾತು ಪ್ರತ್ಯಯಗಳಿರುವದು ಸ್ವಾಭಾವಿಕ. ಆದರೆ ಪ್ರಯೋಗದಲ್ಲಿ ಇವಕ್ಕೆ ಯೌಗಿಕಾರ್ಥದಲ್ಲಿ ಚರಿತಾರ್ಥವಿಲ್ಲ; ಆದುದರಿಂದ ಅಖಂಡತ್ವ ವ್ಯಪದೇಶವು.

'ಇದು' ಎಂಬ ಸರ್ವನಾಮವೇ ಬಹುವಚನದಲ್ಲಿ 'ಇವು' ಎಂದಾಗುತ್ತಿದ್ದರೂ, 'ಇದೆ, ಇವೆ' ಮೊದಲಾದ ಒಂದೊಂದಕ್ಕೆ ಒಂದೊಂದು ಸರ್ವನಾಮ ರೂಪವು ಮೂಲವೆನ್ನುವ ಗಹನವಾದ ಊಹೆಯನ್ನು ಕಟ್ಟಿಕೊಂಡದರಿಂದ ವಿದ್ವಾನ್ ಶ್ರೀಕಂಠಯ್ಯನವರು ಬಹಳ ತಾತ್ಪರ್ಯದಿಂದ ಕೊನೆಗೆ ಇವಕ್ಕೆ ಅವ್ಯಯದ ಕವಚವನ್ನು ತೊಡಿಸಬೇಕಾಯಿತು. ಸರ್ವನಾಮದಲ್ಲಿ ಹುಟ್ಟಿ ಕ್ರಿಯಾಪದದ ನೆಲೆಗೆ ನಿಂತು ಅವ್ಯಯದ ಅನಂತದಲ್ಲಿ ಲೀನವಾಗುವ 'ಇದೆ, ಇವೆ'ಗಳ ಮಾಹಾತ್ಮ್ಯವು ಅದ್ಭುತವಲ್ಲವೆ!

**೮. ಕೇಳುವವನು ಪುರುಷ ವ್ಯಕ್ತಿ ಇದ್ದಾಗಲೇ ಐಕಾರವು ಬರುವದೆ ಎಂಬ ವಿಚಾರ.**—ಪುರುಷ ವಾಚಕ ಸ್ತ್ರೀ ವಾಚಕವೆರಡಕ್ಕೂ ಐಕಾರದ ಪ್ರತಿನಿಧಿಯಾದ ಎಕಾರ ಬರುವದುಂಟು.

ಉದಾ.—ಅಯ್ಯಾ! ಅಮ್ಮಾ! ಅಕ್ಕೆ, ಮಾಡ್ತ್ನೆ, ಬತ್ನೆ, ಹೋತ್ನೆ, ಸಿಕ್ತೆ (ಸಿಕ್ಕಿತು), ಹೌದೆ, ಕೇಳ್ತ್ನೆ; (ಇಲ್ಲಿ ಎಕಾರಕ್ಕೆ ಪ್ರಶ್ನಾರ್ಥದ ಸೋಂಕು ಇಲ್ಲ). ಈ ಪ್ರಯೋಗಗಳನ್ನು ಇಲ್ಲದಂತೆ ಮಾಡುವದು ನಮ್ಮಿಂದಾಗದ ಮಾತು. ಇದರಿಂದ ಎ (ಐ) ಕಾರಕ್ಕೆ ತಂದ ದೂಷಣೆಯು ಬಿದ್ದುಹೋಗಿ ನಿರ್ಧಾರಣೆಯ ಎಕಾರವು ಬಾಧಿತವಾಯಿತು.

**೯. 'ಇದ್ದಾನೆ, ಇರುತ್ತಾನೆ' ಗಳ ಇಂಗ್ಲಿಷ ತರ್ಜುಮೆಯ ವಿಚಾರ.**— 'ಅವನು ಅಲ್ಲಿ ಇದ್ದಾನೆ' ಎಂಬ ವಾಕ್ಯವನ್ನು ಇಂಗ್ಲಿಷಿನಲ್ಲಿ ತರ್ಜುಮೆ ಮಾಡಿದರೆ He has been there ಎಂದಾಗುವದಲ್ಲದೆ He is there ಆಗದು. 'ಅವನು ಅಲ್ಲಿ ಇರುತ್ತಾನೆ' ಎಂಬದು He is (dwells) there ಎಂದಾಗುವದು ಹೊರತು He will be there ಆಗದು ಎಂದು ಇಂಗ್ಲಿಷ ಬಲ್ಲವರ ಹೇಳಿಕೆ; 'ಇರುವನು' ಎಂಬದು will be ಎಂತಲೂ, 'ಅವನು ಅಲ್ಲಿ ಇರುವನು' ಎಂಬದಾದರೂ He is (dwells) there ಎಂದಾಗುವದೆಂತಲೂ ಅವರ ಹೇಳಿಕೆ. 'ಬರುತ್ತಾನೆ' ಎಂಬದು ಭವಿಷ್ಯದರ್ಥವನ್ನು ಹೇಳುವದಿಲ್ಲ. ಭವಿಷ್ಯದಲ್ಲಿ ನಿಶ್ಚಯವು ತೋರುತ್ತಿದ್ದರೆ ಮಾತ್ರ ವರ್ತಮಾನ ರೂಪಗಳ ಪ್ರಯೋಗವುಂಟು. ಉದಾ:—ಯಾವಾಗ ಹೋಗುವಿರಿ? ಈಗಲೇ ಹೋಗ್ತೇನೆ (ಹೋಗುವೆನು ಎಂಬರ್ಥ). ಭೂತಾರ್ಥದಲ್ಲಿಯೂ ವರ್ತಮಾನ ಕ್ರಿಯಾಪದಗಳ ಪ್ರಯೋಗ ಉಂಟು. ಸಂಸ್ಕೃತದಲ್ಲಿಯೂ ಇದೇ ರೀತಿ.—

ಉದಾ.—ಕದಾ ಆಗತೋಽಸಿ? ಅಯಮಾಗಚ್ಛಾಮಿ. ಕದಾಗಮಿಷ್ಯಸಿ? ಏಷೋಽಹಂ ಗಚ್ಛಾಮಿ; ಕವಿ ಪ್ರಯೋಗ—ಆಲೋಕೇ ತೇ ನಿಪತತಿ ಪುರಾ.... (ಮುಂದೆ ನಿನ್ನ ಕಣ್ಣಿಗೆ ಬೀಳುವದು.)

ಒಟ್ಟಿಗೆ, ಇಲ್ಲೆಲ್ಲ ನಿಶ್ಚಿತಾರ್ಥವು ಗರ್ಭಿತವೆಂಬದು ಸ್ಪಷ್ಟ. ಇದರಿಂದ 'ಇರುತ್ತಾನೆ'ಯು ಭವಿಷ್ಯದರ್ಥಕ್ಕೇ ನಿಯತವೆಂಬ ವಿಧಾನವು ದುರ್ಬಲವಾಯಿತು.

**೧೦. 'ಬರ್‍ತಿನ್ವಿ, ಬರ್‍ತೀನಿ'ಗಳಿಗೆ ರೂಢಿಯಲ್ಲಿ ಒಂದೇ ಅರ್ಥವಿದೆ ಎಂಬದು ಹೇಗೆ?**—'ಇನ್ವಿ' ಎಂಬದಕ್ಕೆ 'ಇದ್ದೇನೆ' ಎಂಬರ್ಥವನ್ನು ಒಪ್ಪಿಕೊಂಡ ಮೇಲೆ 'ಬರ್‍ತಿನ್ವಿ'ಗೆ 'ಬರ್‍ತಾ ಇದ್ದೇನೆ' ಎಂಬರ್ಥವು ಬಂದೇ ಬಂತು. ಅದು Present Imperfect ಆಗಿಯೇ ಆಯ್ತು. 'ಬರ್‍ತೀನಿ'ಯು 'ಬರುತ್ತೇನೆ'ಯ ಕುಗ್ಗಿದ ರೂಪವು. ಅದಕ್ಕೆ I come ಎಂದರ್ಥವಾಗುವದು ಸಹಜ. ಹೀಗಿದ್ದೂ, 'ಬರ್‍ತಿನ್ವಿ, ಬರ್‍ತೀನಿ'ಗಳು ಒಂದೇ ಅರ್ಥದಲ್ಲಿ ಪ್ರಯೋಗವಾಗುತ್ತವೆ ಎಂದು ಹೇಳಲಾಗುವದೆ?

ಈ ರೀತಿಯಲ್ಲಿ ವಿದ್ವಾನ್ ಶ್ರೀಕಂಠಯ್ಯನವರ ಆಕ್ಷೇಪಗಳಿಗೆ ಸಮಾಧಾನವನ್ನು ಮೊದಲು ಹೇಳಿ ಅವರ ಊಹೆ ವಿವರಣಗಳು ಹೇಗೆ ಬಾಧಿತವಾಗುತ್ತವೆ ಎಂಬ ವಿಚಾರವನ್ನು ಯಥಾಮತಿ ತಿಳಿಸಿದ್ದಾಯಿತು. ಇದನ್ನು ಅವಲೋಕಿಸಿದ ಮೇಲೆ ಚರ್ಚೆಯ ಮುಖ್ಯ ತಿರುಳಾದ 'ಇದೆ, ಇವೆ' ಮೊದಲಾದವು ಸರ್ವನಾಮ ಜನ್ಯಗಳೆಂದು ಸ್ಥಾಪನೆಯಾಗಬಹುದೊ, 'ಇರ್' ಧಾತು ಜನ್ಯಗಳೆಂದು ಸಿದ್ಧವಾಗಬಹುದೊ, ಸಹೃದಯರಾದ ವಾಚಕರು ನಿರ್ಣಯ ಮಾಡಿಕೊಳ್ಳಲಿ ಎಂದು ಬಿನ್ನವಿಸಿ ಇಲ್ಲಿಗೆ ವಿಶ್ರಮಿಸುತ್ತೇನೆ.

ಶಾಸ್ತ್ರ ಕುಟೀರ
ಸುಂಕೇರಿ

**ವೆಂಕಟೇಶ ಪ್ರಭು**

---

## ೨. * ತಿರುಳ್ಗನ್ನಡ, ಹಾಗೂ ಎರಡಱುನೂಱಱ ನಾಡುಗಳು ಯಾವುವು?

### ತಿರುಳ್ಗನ್ನಡ ನಾಡು ಯಾವುದು?

(೧) ಶ್ರೀಮನ್ನೃಪತುಂಗದೇವನು "ನಡುವಣ ನಾಡೆ ನಾಡ ಕನ್ನಡದ ತಿರುಳ್" ಎಂದು ಹೇಳಿರುವಲ್ಲಿ, ಭಾಷೆಯ ತಿರುಳ್ ಎಂದು ಅರ್ಥಮಾಡಬೇಕೊ? ಕನ್ನಡ ನಾಡ ತಿರುಳ್ ಎಂದೋ? ಎಂದರೆ, ಆ ರಾಜರ್ಷಿಯು ಹೇಳಿದುದು ಭೂಗೋಲಿಕವಾಗಿಯೋ? ಭಾಷಿಕವಾಗಿಯೋ?

(೨) "............ಕಿಸುವೊಳ**ಲಾ**

ವಿದಿತ ಮಹಾ ಕೊಪಣನಗರ**ದಾ** ಪುಲಿಗೆರೆ**ಯಾ**" ಎಂಬ ಪದ್ಯಾರ್ಥದಲ್ಲಿಯ 'ಕಿಸುವೊಳ**ಲಾ**', 'ಕೊಪಣ ನಗರ**ದಾ**', 'ಪುಲಿಗೆರೆ**ಯಾ**' ಮೊದಲಾದ ಷಷ್ಠೀ ವಿಭಕ್ತಿಗಳಲ್ಲಿಯ 'ಆ' ಕಾರವು ದರ್ಶಕವೆಂದೇ ಭಾವಿಸಬಹುದೆ?

(೮) ಹಾಗಾದರೆ 'ಪುಲಿಗೆರೆಯ' ಹಿಂದಣ ದರ್ಶಕಾರ್ಥದ ಮಹತ್ತ್ವವೇನು?

(೯) "ದೀರ್ಘಾದೇಶಃ ಷಷ್ಠ್ಯಾಯಥೇಷ್ಟಂ" (ಭಾಷಾಭೂಷಣ, ಸೂತ್ರ ೬೭) ಎಂಬ ಸೂತ್ರದಿಂದ ಆ ಷಷ್ಠ್ಯಂತ ಶಬ್ದಗಳಿಗೆಲ್ಲ ದೀರ್ಘಾದೇಶಗಳಾಗಿರಲಿಕ್ಕಿಲ್ಲವೆ?

(೩) ಕಿಸುವೊಳಲು, ಪುಲಿಗೆರೆಗಳು ಬಹು ಕಾಲ ರಾಜಕೀಯ ಕ್ಷೇತ್ರಗಳಾಗಿದ್ದಂತೆ, ಕೆಲ ಕಾಲವಾದರೂ ಕೊಪಣ, ಒಕ್ಕುಂದಗಳು ರಾಜಕೀಯ ಕ್ಷೇತ್ರಗಳಾಗಿದ್ದವೆಂಬಂತೆ, ಇದೂ ವರೆಗಿನ ಸಂಶೋಧನೆಯಲ್ಲಿ ಎಲ್ಲಿಯಾದರೂ ಆಧಾರವು ದೊರೆತಿದೆಯೆ?

(೪) ನೃಪತುಂಗನು ಕನ್ನಡ ನಾಡ ಮಧ್ಯ ಭಾಗವನ್ನು ಹೇಳಿದುದು ವಾಸ್ತವವೇಕಾಗಿರಬಾರದು? ಇದರಲ್ಲಿ ಅವನು ತನ್ನ ಮಾನ್ಯಖೇಟವನ್ನೂ ಸೇರಿಸಿಯೇ ಹೇಳಿರುವನೆಂಬುದು ಅಂಥ ಪರಂಪರಾಗತ ಭ್ರಾಂತಿ ಮೂಲವೆಂದೆನ್ನಬಹುದೆ?

(೫) ರನ್ನ ಕವಿಯು ಅಜಿತನಾಥ ಪುರಾಣದಲ್ಲಿ: (XII, ೪೨, ೪೩, ೪೪) ತಾನು "ಬೆಳುಗಲಿಯುಯ್ಯೂರರೊಳಗಣ ಜಂಬುಕಂಡಿಯಪ್ಪತ್ತರ ಮುದುವೊಳಲಿನವನೆ"ಂದು ಹೇಳಿಕೊಂಡಿದ್ದರೂ, "ಮುಧೋಳವು ಒಂಕುಂದಕ್ಕೂ ಸಮೀಪವಾಗಿದೆ, ಕಿಸುವೊಳಲಿಗೂ ಸಮೀಪವಾಗಿದೆ; ಅರ್ಥಾತ್, ಆ ಗ್ರಾಮವು ಒಂಕುಂದದ ನಾಡಿನಲ್ಲಾಗಲೀ ಕಿಸುವೊಳಲ ನಾಡಿನಲ್ಲಾಗಲೀ ಸಮಾವೇಶವಾಗುತ್ತದೆ" ಎಂದು ಸಿದ್ಧಾಂತಿಸುವುದೇತರ ದ್ಯೋತಕ?

* ಈ ಸಂಬಂಧವಾಗಿ ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ—ಸಂಪುಟ ೧೪, ಸಂಚಿಕೆ ೨, ಪುಟ ೧೨೯, ಹಾಗೂ ಸಂಪುಟ ೧೫, ಸಂಚಿಕೆ ೪, ಪುಟ ೨೬೧ರಲ್ಲಿ ಲೇಖನಗಳು ಶ್ರೀಮಾನ್ ನಾರಾಯಣ ಶ್ರೀನಿವಾಸ ರಾಜಪುರೋಹಿತರವರಿಂದ ಪ್ರಕಟವಾಗಿವೆ. ಆ ಲೇಖನಗಳಲ್ಲಿಯ ಕೆಲ ಸಿದ್ಧಾಂತಗಳಿಗೆ ಸಂಶಯ ಬಂದುದರಿಂದ ಇಂತು ಪ್ರಶ್ನಿಸಬೇಕಾಗಿದೆ. ದಯವಿಟ್ಟು ಅವರಾಗಲೀ ಅನ್ಯ ಮಹನೀಯರಾಗಲೀ ಉತ್ತರವಿತ್ತು ಸಂಶಯವನ್ನು ಕಳೆದಲ್ಲಿ ಅವರಿಗೆ ಋಣಿಯಾಗುವೆನು.—ಲೇಖಕ.

## ಎರಡಱುನೂಱು?

(೧) ಜಂಬುಕಂಡಿ ೭೦ರ ಮುದಿವೊಳಲು, ಬೆಳುಗಲಿ ೫೦೦ರ ಭಾಗವಾಗಿದ್ದಂತೆ, ಕಿಸುವೊಳಲ ಎಪ್ಪತ್ತೂ ಯಾವುದೊಂದು ನಾಡಿನ ಭಾಗವೇಕಾಗಿರಬಾರದು?

(೨) ಬೆಳ್ವಲ ನಾಡ ಮುಖ್ಯ ಪಟ್ಟಣವಿಂತಹುದೆಂದು ಎಲ್ಲಿಯಾದರೂ ಸಂಶೋಧನವಾಗಿದೆಯೆ?

(೩) ಬೆಳ್ವಲ ನಾಡಿನಲ್ಲಿ ಕುಕ್ಕನೂರ್ಮೂವತ್ತು ಇದ್ದಂತೆ, ಇನ್ನೊಂದರ ೪೦, ಮತ್ತೊಂದರ ೯೦, ಮಗುದೊಂದರ ೧೪೦—ಹೀಗೆ ಹಲವು ಅವಾಂತರ ನಾಡುಗಳು ಇದ್ದಿರಬೇಕೆಂದೆನ್ನಬಹುದಲ್ಲವೆ?

(೪) ಹೀಗೆಯೇ ಕೆಲವು ಅವಾಂತರ ನಾಡುಗಳು ಒಟ್ಟಾರೆ ಸೇರಿ ಎರಡಱುನೂಱೂ ಆಗಿರಬಾರದೇಕೆ?

(೫) ಎರಡಱುನೂಱ ನಾಡ ಇಂಥದೊಂದು ಹಳ್ಳಿ, ಅಥವಾ ಅದರ ಮುಖ್ಯ ಪಟ್ಟಣವಿಂತಹದೆಂದು ಎಲ್ಲಿಯಾದರೂ ಶೋಧವಾಗಿದೆಯೆ? ಹಾಗಾಗುವ ವರೆಗೂ ಇತಿಹಾಸ ಲೋಕದಲ್ಲಿ ರೇಫ ರಾಜ್ಯದ ಶಾಸನಾಧಾರದಿಂದ ಸಿದ್ಧಾಂತಿಸುವುದೊಳ್ಳಿತೆ?

(೬) ಕೊಪಣ (ಕೊಪ್ಪಳ)ದ ದಕ್ಷಿಣ (ಕೊಂಚ ನೈಋತ್ಯ)ಕ್ಕೆ ಬೆಟಿಗೇರಿಯಲ್ಲಿಯ ಅಕಾಲವರ್ಷ ಕನ್ನರನ (ಶಕ ಕಾಲ ೮೮೭ನೆಯ ವರ್ಷದ) ಶಾಸನದಲ್ಲಿ, "ಕುಪಣದ" ಎಂದಿಷ್ಟೇ ಹೇಳಿದೆ. ಆಗ್ಗೆ ಎರಡಱುನೂಱು ಎಂಬ ಹೆಸರು ಇದಕ್ಕೆ ಇದ್ದರೆ ಹಾಗೇಕೆ ಅಲ್ಲಿ ಹೇಳಲಿಲ್ಲ? ಈ ಶಾಸನಕ್ಕಿಂತಲೂ ೩೫ ವರ್ಷ ಹಿಂದಿನದಾದ (ಕ್ರಿ. ವ. ೯೩೦) ಕಳಸದ ಶಾಸನದಲ್ಲಿ ಎರಡಱುನೂಱಱ ಉಲ್ಲೇಖವಿದೆ. ಆಗಿನ ಕಾಲಕ್ಕೆ ಕೊಪಣವು ಎರಡಱುನೂಱರದಾಗಿದ್ದರೆ, ಶ್ರೀಮಾನ್ ರಾಜಪುರೋಹಿತರ ಮತದಂತೆ, ಕೊಪಣದ ನಾಡೇ ಎರಡಱುನೂಱಱ ನಾಡಾಗಿದ್ದ ಪಕ್ಷದಲ್ಲಿ, ಅಥವಾ ಕೊಪಣವು ಎರಡಱುನೂಱರ ಮುಖ್ಯ ಸ್ಥಳವಾಗಿದ್ದಲ್ಲಿ, ಅಂತಹ ಮುಖ್ಯ ಸ್ಥಳದಲ್ಲಿಯ ಜಯಧೀರ ಜಿನಾಲಯಕ್ಕೆ ದತ್ತಿಬಿಡುವ ಕಾಲಕ್ಕೆ ಸ್ಥಾನ ಗೌರವಾರ್ಥವಾಗಿ 'ಎರಡಱುನೂಱಱ ಕೊಪಣದ' ಎಂದೋ, ಅಥವಾ 'ಎರಡಱುನೂಱ ಮುಖ್ಯ ಪಟ್ಟಣಂ' ಎಂದಾದರೂ ಹೇಳದೆ ಅನಿರ್ದೇಶವಾಗಿ, "ಕುಪಣದ ಜಯಧೀರ ಜಿನಾಲಯದ ತಳವೃತ್ತಿಗೆ...... ಕುಕ್ಕನೂರ್ ಮೂವತ್ತರೊಳಗಣ ...ತನ್ನ ಪರಿಚಿರಿಯಪ್ಪ........ಕೊಟ್ಟಂ" ಎಂದು ಹೇಳಿದೆ. ಕುಕ್ಕನೂರನ್ನು ಮಾತ್ರ ಕುಕ್ಕನೂರ್ ಮೂವತ್ತು ಎಂದು ನಿರ್ದೇಶಿಸಿ ಕೊಪಣವನ್ನು ಅನಾಮಧೇಯವನ್ನಾಗಿ ಏಕೆ ನಿರ್ದೇಶಿಸಿದೆ?

(೭) ಕೊಪಣದ ಪಶ್ಚಿಮ ಉತ್ತರ ದಿಕ್ಕುಗಳಲ್ಲಿ ಕ್ರಮವಾಗಿ, ಎಕ್ಕಲವಾಡ–ಅಳವಂಡಿಯ ತ್ರೈಲೋಕ್ಯಮಲ್ಲನ (ಕ್ರಿ. ವರ್ಷ ಸು. ೧೧೫೯) ಕಾಲದ ಶಾಸನದಿಂದ, ಮಾಸವಾಡಿ–ಕೊಲೂರ ಶಾಸನದಿಂದಲೂ, ಹಾಗೂ ಮಾದಿನೂರಲ್ಲಿರುವ ಆಹವಮಲ್ಲ ಸೋಮೇಶ್ವರನ (ಕ್ರಿ. ವ. ೧೦೪೨) ಕಾಲದ ಶಾಸನದಲ್ಲಿ, "ಎಡೆದೆಱೆಯ ಇಚ್ಛಾರ್ಥ ಸಿರದ ಬಳಿಯ ಕೇದವಾಡಿ ಮುನ್ನೂರಕ್ಕಂ" ಎಂದಿರುವುದರಿಂದ, ಕೊಪಣದ ಎರಡಱುನೂಱು ಎತ್ತ ಹಬ್ಬಿರಬೇಕು?

(೪) ಬನವಾಸಿರದಲ್ಲಿ ಕೇದವಾಡಿ ೩೦೦ರಂಥ ದೊಡ್ಡ ನಾಡು ಇದ್ದಹಾಗೆಯೇ ಎರಡಱುನೂಱರಲ್ಲಿಯೂ ೩೦೦, ೭೦, ೫೦೦ ನೋಡಲಾಗಿ ನಾನಾಧೇಯುಗಳುಳ್ಳ ಒಳನಾಡುಗಳು ಇದ್ದಿರಬಹುದೆಂದು ಕಲ್ಪಿಸಲು ಪ್ರಮಾಣವಾದೀತೆ?

ಇಂತು ಕಲ್ಪಿಸಬಹುದಾದಲ್ಲಿ, ಗಾವರವಾಡದ, ಹಾಗೂ ಪುಲಿಗೆರೆಯ ಶಾಸನಗಳನ್ನು—"ಬೆಳ್ವೊಲ ಮೂನೂರುಮಂ ಪುಲಿಗೆರೆ ಮೂನೂರುಮಂ ಅಂತು" ಒಟ್ಟು "ಎರಡಱುನೂಱುಮಂ" ಎಂದು ಅರ್ಥ ಮಾಡಿದರೆ ಮಹದಪರಾಧವಾಗಬಹುದೆ? ಎಂದರೆ, ಲಕ್ಷ್ಮರಸನು ಎರಡಱುನೂಱನ್ನೇ ಆಳುತ್ತಿದ್ದು, ಆ ಭಾಗದ ಮುಖ್ಯ ದೊಡ್ಡ ಭಾಗಗಳನ್ನಷ್ಟೇ ಹೇಳಿ ಉಳಿದ ಸಣ್ಣ ಭಾಗಗಳನ್ನು ಹೇಳದೆ, ಅಂತು ಒಟ್ಟು ಎರಡಱುನೂಱುಮಂ ಆಳುತ್ತಿದ್ದನೆಂದು ತಿಳಿಯಬಹುದೆ? (ಈ ಅಂತು ಶಬ್ದಾರ್ಥವು ರೂಢಿಯಲ್ಲಿ ಬೇಕಾಗಿದ್ದರೆ ಖಾತೆ ಕಿರ್ದಿಯಲ್ಲಿಯೂ, ಕಿಟೆಲ್ ನಿಘಂಟಿನಲ್ಲಿಯೂ ನೋಡಬಹುದು.)

(೫) ಕಳಸ ಗ್ರಾಮದ ಶಾಸನದ—

ಭರತ ಮಹೀಮಂಡಳಕಾ। ಭರಣಂ ಕುನ್ತಳ ಧರಾತಳಂ ತದ್ವಿಷಯ ॥
ಕೆರಡಱುನೂಱು ಲಲಾಮಂ। ಪುರಿಕರ ಪರಿಜನಮದಕ್ಕೆ ನವಿ ಪವಿ ಮುಕುರಂ ॥

ಎಂಬ ಪದ್ಯಾರ್ಥವನ್ನು, "ಕುಂತಳ ಧರಾತಳದಲ್ಲಿ ಶ್ರೇಷ್ಠವಾದ ಎರಡಱುನೂಱರ ನಾಡಿಗೆ ಪುಲಿಗೆರೆಯು ನಾಡು ನವರತ್ನಗನ್ನಡಿಯಾಗಿರುತ್ತದೆ" ಎಂದು ಹೇಳದೆ, ಎಂದರೆ, 'ತದ್ವಿಷಯಕ್ಕೆ', 'ಕುಂತಳ ಧರಾತಳಕ್ಕೆ' ಎಂಬಲ್ಲಿ, ಅಧಿಕರಣಾರ್ಥವನ್ನೂ, 'ಅದಕ್ಕೆ' ಎಂಬಲ್ಲಿ ಚತುರ್ಥ್ಯರ್ಥವನ್ನೂ ಹೇಳದೆ, ಎಲ್ಲ ಕಡೆಗೂ, ಎಂದರೆ, 'ಭರತ ಮಹೀಮಂಡಳಕೆ'=ಭರತ ಮಹೀಮಂಡಳದಲ್ಲಿ, ಕುಂತಳವು ಆಭರಣಪ್ರಾಯವಾದುದು. 'ತದ್ವಿಷಯಕ್ಕೆ'=ತದ್ವಿಷಯದಲ್ಲಿ=ಕುಂತಳ ಧರಾತಳದಲ್ಲಿ, ಎರಡಱುನೂಱು ಲಲಾಮಭೂತವಾದುದು. 'ಅದಕೆ'=ಆ ಎರಡಱುನೂಱಱೊಳು, "ಪುರಿಕರ ಪರಿಜನಂ, ನವ ನವ ಮುಕುರಂ"=ರತ್ನಗನ್ನಡಿಯಂತೆ ಶೋಭಿಸುಳ್ಳುದು. ಸಾರಾಂಶ:— ಭರತ ಮಹೀಮಂಡಳದಿ ಕುಂತಳ ದೇಶ; ಆ ಕುಂತಳ ದೇಶದಿ ಎರಡಱುನೂಱು; ಎರಡಱುನೂಱಿನಲ್ಲಿ ಪುರಿಕರ ಪರಿಜನ ಎಂದು ಒಂದೇ ತೆರನಾಗಿ ಅರ್ಥ ಮಾಡಿದರೆ ಅಪಾರ್ಥವಾಗಬಹುದೆ? ಒಂದೇ ಕವಿತೆಯಲ್ಲಿದ್ದ ಎಲ್ಲ ಸಂಪ್ರದಾನಾರ್ಥಗಳಿಗೂ ಅಧಿಕರಣಾರ್ಥವನ್ನು ಹೇಳದೆ, ಒಂದೆಡೆ ಹೇಳಿ ಇನ್ನೊಂದೆಡೆ ಬಿಟ್ಟರೆ ಪ್ರಕ್ರಮ ಭಂಗವಾಗಲಿಕ್ಕಿಲ್ಲವೆ?

(೬) ಕೊಪ್ಪಳ ಜಿಲ್ಹೆಯ ಎಲಬುರ್ಗಿ ತಾಲೂಕಿನ ಕಲ್ಲೂರಿನ—

"ಶ್ರೀಮತು ಎರಡಱುನೂಱರ ಸುಂಕವೆಗ್ಗಡೆ ಮಹೇಶ್ವರಯ್ಯಂಗಳು ಶ್ರೀಮತು ಬೆಳ್ವೊಲ ನಾಡ ಬಳಿಯ ಕುಕ್ಕನೂರ ಮೂವತ್ತರೊಳಗಣ ಕಲ್ಲೂರ........"

ಎಂಬಷ್ಟೇ ಶಾಸನದಿಂದ, **ಕೊಪಣದ ಎರಡಱುನೂಱು** ಕಲ್ಲೂರ ಪೂರ್ವಕ್ಕೇ ಇರಬೇಕೆಂಬುದು ಹೇಗೆ ಸಂಪೂರ್ಣ ಪ್ರಕಾಶವನ್ನು ಪಡೆವುದು? (ನನ್ನೇ ಅಂಧಮತಿಯಿಂದೆ ಅಮೃತವಾದೀ ಹೊರಗಣ್ಣಿಗಂತೂ ಕಗ್ಗನ ಕಾಳು) ಅಥವಾ, ಬೆಳ್ವೊಲ ನಾಡ

ಪೂರ್ವಕ್ಕೆ ಎರಡಱುನೂಱು ಇದ್ದಿತೆಂಬುದಾದರೂ ಇಂತಿಷ್ಟೇ ಶಾಸನದಿಂದೆ ಹೇಗೆ ವ್ಯಕ್ತವಾಯಿತು?

(ಅ) ಕುಕ್ಕನೂರಿರುವುದು ಕೊಪಣ(ಕೊಪ್ಪಳ)ದ ತೀರ ವಾಯುವ್ಯಕ್ಕೆ; ಕಲ್ಲೂರು, ಕುಕ್ಕನೂರಿಗೆ ಸ್ವಲ್ಪ ಈಶಾನ್ಯದಲ್ಲಿದೆ. ಆದುದರಿಂದ, ಕಲ್ಲೂರು, ಕೊಪಣಕ್ಕೆ ಉತ್ತರದಲ್ಲಿ ಕೊಂಚ ವಾಯುವ್ಯದಲ್ಲಿದೆ. ಕೊಪಣಕ್ಕೆ 'ಮಾದಿನೂರು' ನೇರವಾಗಿ ಉತ್ತರಕ್ಕಿದೆ: ಎಂದರೆ, ಮಾದಿನೂರು, ಕಲ್ಲೂರ ಪೂರ್ವಕ್ಕಿರುವುದು. ಆದುದರಿಂದ, ಕಲ್ಲೂರ ಪೂರ್ವಕ್ಕೆ ಎರಡಱುನೂಱು ಇರದೆ, ಎಡದೊಱೆ ಇಚ್ಛಾರ್ಪಿಸಿರದ ಬಳಿಯ ಕೇದವಾಡಿ ಮುನ್ನೂರು ಇದೆ. ಇನ್ನು, ಶ್ರೀಮಾನ್ ರಾಜಪುರೋಹಿತರವರ 'ಎರಡಱುನೂಱು' ಎತ್ತ ಇರಬೇಕು?

(ಇ) ಕಲ್ಲೂರಿಗೆ ಬಂದ ಎರಡಱುನೂಱಿರ ಸುಂಕ ವೆಗ್ಗಡೆ ಪೂರ್ವದಿಂದೇ ಬಂದ ನೆಂದು ಈ ಶಾಸನದಿಂದ ನಿಶ್ಚಯಾತ್ಮಕವಾಗಿ ತಿಳಿಯುವುದೆಂದು ಹೇಗೆ ಹೇಳಬಹುದೆ? ಉತ್ತರ ದಕ್ಷಿಣ ಪಶ್ಚಿಮಗಳಲ್ಲೊಂದರಿಂದ ಎಲ್ಲಿಂದಲಾದರೂ ಬಂದನೆಂದೂಹಿಸ ಕೂಡದೇಕೆ?

(ಉ) **ಬಳಿಯ** ಎಂಬುದಕ್ಕೆ **ಕೊನೆಯ** ಎಂಬ ಅರ್ಥವು ಎಲ್ಲಿ ಇದೆ? ('ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ', ಪುಟ ೩೭ರಲ್ಲಿ) 'ಶ್ರವಣಬೆಳ್ಗುಳ ೫೫ನೆಯ ಶಾಸನ'ದಲ್ಲಿ, "ಮೂಲ ಸಂಘ ದೇಶೀಯ ಗಣದ ಪರಳಿಯ ವಡ್ಡದೇವರ **ಬಳಿಯ** ದೇವೇಂದ್ರ ಶಿದ್ಧಾಂತದೇವರು" ಎಂದೂ, 'ಹನಸೋಗೆಯ **ಬಳಿಯ**', ಇಂಗಳೇಶ್ವರದ **'ಬಳಿಯ'** ಮೊದಲಾದವುಗಳಲ್ಲಿಯ, ಎಂದರೆ ಇಂಗಳೇಶ್ವರದ **ಭಾಗ**, ಹನಸೋಗೆಯ **ಭಾಗ; 'ಬಳಿ'** ಅಥವಾ **'ವಳಿ'** ಎಂಬ ಪದವು ಒಂದು ಗಚ್ಛದ ಅವಾಂತರ ಭೇದ ವನ್ನು, ಎಂದರೆ ಗಚ್ಛಕ್ಕಿಂತ ಒಂದು ಸಣ್ಣದಾದ ಸಮುದಾಯವನ್ನು ಸೂಚಿಸುವುದು. ಈ ಅವತರಣಿಕೆಯ ವಿವೇಚನೆಯ ಮೇರೆಗೆ **ಬೆಳ್ವಲ ನಾಡ ಬಳಿಯ ಕುಕ್ಕನೂರು** ಎಂದರೆ, **ಬೆಳ್ವಲ ನಾಡಿನ ಒಂದು ಭಾಗವಾದ ಕುಕ್ಕನೂರು** ಎಂದು ಅರ್ಥ ಮಾಡಬಹುದಲ್ಲವೆ? ಹೀಗೆ ಅರ್ಥಮಾಡಲು **ಬೆಳ್ವಲದ ಕೊನೆಯ** ಎಂದು ಹೇಳಿದುದಕ್ಕೆ ಅರೆದಾಳ ಬಡೆದುದಾಗಿ ಬೆಳ್ವಲದ ಪೂರ್ವಕ್ಕೇ ಎರಡಱುನೂಱು ಎಂಬ ಊಹೆಗೆ ಶಂಕೆ ಉಂಟಾಗಬಹುದೆ?

(ಎ) ಕೊಪ್ಪಳವು ಕೊಪಣವಾಗದೆ ಕಲ್ಲೂರ ಪೂರ್ವಕ್ಕೆಲ್ಲಿಯಾದರೂ ಕೊಪಣವುಂಟೆ?

(ಏ) ಏತಗಿರಿ ಮಾನ್ಯಖೇಟದ ವರೆಗೆ ಕೊಪಣದ ಎರಡಱುನೂಱು ಕಾಲ ಚಾಚಿರ ಬಹುದೆ? ಹೀಗಿದ್ದರೆ, ಮಾನ್ಯಖೇಟಕ್ಕೆ ಅತ್ಯಂತ ಸನಿಹದಲ್ಲಿರುವ 'ನಾಗಾಯಿ'ಯ ಶಾಸನದಲ್ಲಿ (ಕ್ರಿ. ವ. ೧೦೫೮) ಅಜಲು ಮನೂಱಿರ ಕಂದೂರ ನಾಡು ಎಂದು ಹೇಳಿದೆ. (ಹೈದರಾಬಾದಿನ ಆರ್ಕೆ. ಸೀ. ಸಂ. ೮, ಪುಟ ೧೫-೩೩). ಆಗ್ಗೆ ಅದು ಎರಡಱುನೂಱಿರ ನಾಡಾಗಿದ್ದರೆ ಅಲ್ಲಿ ಹಾಗೆ ಏಕೆ ಹೇಳಲಿಲ್ಲ?

(೮) ಕವಿ ರನ್ನನು 'ಬೆಳಗಲಿ' ನಾಡಿನವನಿದ್ದೂ ಎರಡಱುನೂಱರ ತಿರುಳ್ಗನ್ನಡಿಗನೆಂದು ಹೇಳಿಕೊಂಡುದರಿಂದ 'ಬೆಳಗಲಿ' ನಾಡೂ ಎರಡಱುನೂಱಿನ ಭಾಗವಾಗಿದ್ದಿರಬೇಕೆಂದು ಅನುಮಾನಿಸಬಹುದೆ?

(೯) ಮನುಷ್ಯನು ಹೊಟ್ಟೆಗಾಗಿ ಎಲ್ಲಿ ಹೋದರೂ, ಅವನ ಭಾಷೆ ಹುಟ್ಟಿ ಬೆಳೆದ ನಾಡಿನದೇ ಅಲ್ಲವೆ? ಈ ತೆರನಾಗಿ ರನ್ನನು **ಗದಾಯುದ್ಧ**ವನ್ನು ಎಲ್ಲಿ ಕುಳಿತು ಬರೆದರೂ ಅವನು ತನ್ನ ಜನ್ಮಸ್ಥಳದ (ನಾಡಿನ) ಹೆಸರ ಹೇಳಲು ಅಡ್ಡಿ ಏನು?

**ಸಾರಾಂಶ.**—ಕೊಪಣ, ಪುಲಿಗೆರೆ, ಒಕ್ಕುಂದ, ಕಿಸುವೊಳಲು—ಇವುಗಳ ನಾಡನ್ನೇ ಕಾವೇರಿಯಿಂದ ಗೋದಾವರಿಯ ವರೆಗೆ ಬೆಳೆಯಿಸಿ, ಸಮಗ್ರ ಕರ್ನಾಟಕವೇ ನಡುವಣ ನಾಡು—ತಿರುಳ್ಗನ್ನಡ ನಾಡು—ಎಂದೆನ್ನದೆ, ಉತ್ತರದ ಪ್ರಾಕೃತ, ಪೂರ್ವದ ಆಂಧ್ರ, ದಕ್ಷಿಣದ ತಮಿಳು ಪ್ರಾಂತಗಳಿಗೆ ದೂರವಾಗಿದ್ದ—ಅದರ ಸಂಪರ್ಕವಿಲ್ಲದ—ಕೊಪಣ, ಕಿಸುವೊಳಲು, ಒಂಕುಂದ, ಪುಲಿಗೆರೆ—ಈಯೂರುಗಳಿರುವ ಮಧ್ಯಪ್ರದೇಶ ಎಂದೆನ್ನಬಹುದು.

ಎರಡಱುನೂಱೆಂದರೆ ಬೆಳುಗಲಿ, ಬೆಳ್ವಲ, ಪುಲಿಗೆರೆ ಮೊದಲಾದ ಹಲವು ಅವಾಂತರ ನಾಡುಗಳಿದ್ದ (ಅದರಲ್ಲಿ ಕೊಪಣ ನಗರವೂ ಇರಬಹುದು) ನಾಡು ಎಂದೆನ್ನಬಹುದೆ?

(ಕೊಪಣಕ್ಕೆ ಸ್ವತಂತ್ರ ನಾಡಿದ್ದ ಉಲ್ಲೇಖವೆಲ್ಲಿಯೂ ದೊರೆತಿಲ್ಲ. ಅದು ದೊರೆವ ವರೆಗೆ ಅದು ಧಾರ್ಮಿಕ ಕ್ಷೇತ್ರವು. ಆದುದರಿಂದ ಅದಕ್ಕೆ ಸ್ವತಂತ್ರ ನಾಡು ಇದ್ದಿರಲಾರದೆಂದು ನನ್ನ ಮತ.)

ಇತಿಹಾಸ ಲೋಕದಲ್ಲಿಯ ವಿಶೇಷ ಶೋಧವಾಗದಿದ್ದಾಗ (೧೯೧೮ರಲ್ಲಿ) ಆಡಿದ ಒಬ್ಬ ಪ್ರತಿಷ್ಠಿತರ ಮಾತಿನಿಂದೇ ಅವರನ್ನು ಟೀಕಿಸುವುದು ಯುಕ್ತವೆ? ಅವರೇ ಶ್ರವಣಬೆಳ್ಗೊಳದ ಶಾಸನಗಳ ಪುನರ್ಮುದ್ರಣ(೧೯೨೩)ದಲ್ಲಿ (ಪುಟ ೫೫), "Kopana is Kopbal in the South-west of the Nizam's Dominions, considered as a holy place by the Jainas" ಎಂದು ಹೇಳಿರುವುದನ್ನು, ಇದನ್ನು ಬರೆದ ಮೇಲೆ (೧೯೩೧ರಲ್ಲಿ) ಇವರನ್ನು ಟೀಕಿಸುವವರು ನೋಡಬಾರದೆ? ಹೀಗೆ ನೋಡದೆ ಟೀಕಿಸುವುದೇತರ ದ್ಯೋತಕ?

**'ನಾ. ಭಾ.'**

---

## ೩. ಅಸಗ

ಪಂಪ ಭಾರತದ ಸಂಪಾದಕರವರ ಸ|| ಕ್ಕೆ

ಕೃತಾನೇಕ ನಮಸ್ಕಾರ ವಿನಂತಿ ವಿಜ್ಞಾಪನೆಗಳು.

ಪಂಪ ಭಾರತದ ಉಪೋದ್ಘಾತದಲ್ಲಿ, "ಪೊನ್ನನು ಅಸಗನ ಹೆಸರನ್ನು ಮಾತ್ರ ಕಾಳಿದಾಸನ ಹೆಸರಿನೊಡನೆ ಹೇಳಬೇಕಾದರೆ ಅಸಗನು, ಕವಿಚರಿತೆಕಾರರು ಹೇಳುವಂತೆ, ಈ ಕವಿಗಳ ಸಮಕಾಲೀನನಾಗಿರಲಾರನು, ಬಹಳ ಹಿಂದಣವನಾಗಿದ್ದಿರಬೇಕು" ಎಂದು ಬರೆದಿರುವಿರಿ. ಆದರೆ, ಅಸಗನ ಸಂಸ್ಕೃತ **ವರ್ಧಮಾನ ಪುರಾಣವು** ಶ್ರೀ|| ರಾವಜೀ ಸಖಾರಾಮ ದೋಶೀ, ಮಂಗಳವಾರ ಪೇಠ, ಸೋಲ್ಲಾಪುರ—ಇವರಿಂದ ಮರಾಠೀ ಅನುವಾದದೊಡನೆ ಮುದ್ರಿತವಾಗಿದ್ದು ಬೆಲೆ ೩ ರೂಪಾಯಿ ಅದೆ. ಆ ಗ್ರಂಥದ ಪ್ರಶಸ್ತಿಯಿಂದ, "ಅಸಗನು ವರ್ಧಮಾನ ಪುರಾಣವನ್ನು ೯೧೦ನೆಯ ಸಂವತ್ಸರದಲ್ಲಿ, ಮೌದ್ಗಲ್ಯ ಪರ್ವತದ ಸಮೀಪದ ವಸದಲ್ಲಿದ್ದ ಸಂಪತ್ ಎಂಬ ಶ್ರಾವಿಕೆಯ ಪ್ರೇರಣೆಯಿಂದ, ಭಾವಕೀರ್ತಿ ಮುನಿಯ ಪಾದ ಮೂಲದಲ್ಲಿ ರಚಿಸಿದನು; ಅದಕ್ಕೂ ಮುಂಚೆ ಶ್ರೀನಾಥ ರಾಜ್ಯದಲ್ಲಿ ವಿದ್ಯಾಧ್ಯಯನವನ್ನು ಮಾಡಿ ಚೋಡ ವಿಷಯದ ವಿರಲಾ ನಗರದಲ್ಲಿ ಎಂಟು ಗ್ರಂಥಗಳನ್ನು ರಚಿಸಿದ್ದನು" ಎಂದು ಗೊತ್ತಾಗುವದು. ಕನ್ನಡ ಕವಿಗಳಿಂದ ಸ್ತುತಿಸಲ್ಪಟ್ಟ ಪೊನ್ನನಿಂದ ನಿರ್ದಿಷ್ಟನಾದ ಅಸಗನು ಈತನೇ ಎಂದು ನಮ್ಮ ಮಾನ್ಯತೆ. ಆದರೆ, ವರ್ಧಮಾನ ಪುರಾಣವು ಅಸಗನಿಂದ ೯೧೦ನೆಯ ಸಂವತ್ಸರದಲ್ಲಿ, ಎಂದರೆ ಕ್ರಿಸ್ತ ಶಕ ೯೮೮ರಲ್ಲಿ ಬರೆಯಲ್ಪಟ್ಟಿದೆ; ಇದಕ್ಕೂ ಮುಂಚೆ ೮ ಗ್ರಂಥಗಳನ್ನು ಬರೆದಿರುವುದರಿಂದ, ಈ ಸಮಯಕ್ಕೆ ಇಳಿವಯಸ್ಸಿನವನಾಗಿರಬಹುದು. ಪೊನ್ನ ಕವಿಯು ಕೃಷ್ಣ ನರೇಂದ್ರನ ಕಾಲದಲ್ಲಿ (೯೪೫–೯೫೭), ಆತನಿಂದ ಕವಿ ಚಕ್ರವರ್ತಿ ಪದವಿಯನ್ನು ಧರಿಸಿದ್ದಾನೆ. **ಶಾಂತಿ ಪುರಾಣ**ವನ್ನು ೯೫೦ರಲ್ಲಿ ರಚಿಸಿರಬಹುದೆಂದು ಕವಿಚರಿತೆಕಾರರೂ, ೯೩೫ರಲ್ಲಿ ರಚಿಸಿರಬಹುದೆಂದು ಶ್ರೀ|| ತಾತಾಚಾರ್ಯರೂ ಹೇಳುವರು. ಅಸಗನು ಸಣ್ಣವಯಸ್ಸಿನಲ್ಲಿಯೇ ಪೊನ್ನನಿಂದ ಸ್ತುತಿಪಡೆಯುವಷ್ಟು ಸುಪ್ರಸಿದ್ಧನಾಗಿದ್ದನೆಂದೆನ್ನಬೇಕಾಗುವದು. ಇಲ್ಲದಿದ್ದರೆ, ಶಾಂತಿ ಪುರಾಣವನ್ನು ಬರೆದ ಕಾಲವನ್ನು ೯೫೦ ರ ಈಚೆಗೆ ಎಳೆಯಬೇಕಾಗುವದು. ಅಸಗನು ಬರೆದ ಸಂವತ್ಸರವು ವಿಕ್ರಮ ಸಂವತ್ಸರವೆಂದು ತಿಳಿದರೆ ಮಾತ್ರ, ೯೧೦ರಲ್ಲಿ ೫೭ ಕಳೆದರೆ, ಕ್ರಿಸ್ತ ಶಕ ೮೫೩ರಲ್ಲಿ ವರ್ಧಮಾನ ಪುರಾಣವನ್ನು ಮುಗಿಸಿದನೆಂದಾಗುವದು. ಪೊನ್ನನ ಕಾಲಕ್ಕೆ ಅಸಗನು ಪ್ರಸಿದ್ಧನಾಗಿ ಹೋಗಿರಬಹುದು. ಅಸಗನು ಬರೆದುದು ಶಕ ಸಂವತ್ಸರವೋ ವಿಕ್ರಮ ಸಂವತ್ಸರವೋ ಎಂಬುದನ್ನು ಕನ್ನಡ ಪಂಡಿತರು ನಿಶ್ಚಯಿಸಬೇಕು. ವರ್ಧಮಾನ ಪುರಾಣದ ಪ್ರಶಸ್ತಿಯು ಕೆಳಗೆ ಬರೆದ ಪ್ರಕಾರವಿದೆ:—

**ಕೃತಂ ಮಹಾವೀರ ಚರಿತ್ರಮೇತನ್ಮಯಾ ಪರ ಸ್ವ ಪ್ರತಿಬೋಧನಾರ್ಥಂ ।**
**ಸಪ್ತಾಧಿಕ ತ್ರಿಂಶ ಭವ ಪ್ರಬಂಧಂ ಪುರೂರವಾದ್ಯಂತಿಮ ವೀರನಾಥಂ** || ೧ ||

ವರ್ಧಮಾನ ಚರಿತ್ರಂ ಯಃ ಪ್ರವ್ಯಾಖ್ಯಾತಿ ಶೃಣೋತಿ ಚ ।
ತಸ್ಯೇಹ ಪರಲೋಕಸ್ಯ ಸೌಖ್ಯಂ ಸಂಜಾಯತೇತರಾಂ ॥ ೨ ॥
ಸಂವತ್ಸರೇ ದಶನವಾಧಿಕ ವರ್ಷಯುಕ್ತೇ ಭಾವಾದಿಕೀರ್ತಿ ಮುನಿ ನಾಯಕ ಪಾದ ಮೂಲೇ ।
ಮೌದ್ಗಲ್ಯ ಪರ್ವತ ನಿವಾಸ ವನಸ್ಥ ಸಂಪತ್ ಸಚ್ಛ್ರಾವಿಕಾ ಪ್ರಜನಿತೇ ಸತಿ ವಾಮಮತ್ವೇ ॥ ೩ ॥
ವಿದ್ಯಾ ಮಯಾ ಪ್ರಪಠಿತೇತ್ಯಸಗಾಹ್ವಯೇನ ಶ್ರೀನಾಥ ರಾಜ್ಯಮಖಿಲಂ ಜನತೋಪಕಾರಿ ।
ಪ್ರಾಪ್ಯೈವ ಚೋಡ ವಿಷಯೇ ವಿರಲಾ ನಗರ್ಯಾಂ ಗ್ರಂಥಾಷ್ಟಕಂ ಚ ಸಮಕಾರಿ ಜಿನೋಪದಿಷ್ಟಂ ॥೪॥

ವರ್ಧಮಾನ ಪುರಾಣವನ್ನು ಬರೆದನಂತರ ಅಸಗನು ಶಾಂತಿ ಪುರಾಣವನ್ನು ಬರೆದಿರುವನು. ಶಾಂತಿ ಪುರಾಣದ ಪ್ರಶಸ್ತಿಯಿಂದ ಕೆಳಗೆ ಬರೆದ ಸಂಗತಿಗಳು ಗೊತ್ತಾಗುವವು: ಕವಿಯ ತಂದೆಯ ಹೆಸರು ಪಟುಮತಿ. ಆತನು ಶಾಂತ ವೃತ್ತಿಯವನೂ ಧಾರ್ಮಿಕನೂ ಸಮ್ಯಕ್ತ್ವಯುಕ್ತನೂ ಆದ ಸುಪ್ರಸಿದ್ಧ ಶ್ರಾವಕನು; ಅನ್ನ ದಾನಾದಿ ಧಾರ್ಮಿಕ ಕೃತ್ಯಗಳಿಂದ ಪುಣ್ಯವನ್ನೂ ಯಶಸ್ಸನ್ನೂ ಪಡೆದಿದ್ದನು; ಪರ್ವ ತಿಥಿಗಳಲ್ಲಿ ಉಪವಾಸ ಮಾಡಿ ಶರೀರವು ಕೃಶವಾಗಿದ್ದಿತು. ಆತನ ಭಾರ್ಯೆ ವೈರೇತಿ ಎಂಬವಳು ಭಕ್ತಿ ಪರಾಯಣಳೂ ಧಾರ್ಮಿಕಳೂ ಆಗಿದ್ದಳು. ಅವರ ಪುತ್ರನಾದ ಅಸಗನು ಶಬ್ದ ಸಮಯಾರ್ಣವ ಪಾರಗರಾದ ನಾಗನಂದ್ಯಾಚಾರ್ಯರ ಶಿಷ್ಯನು. ಅಸಗನಿಗೆ ಜಿನಾಪನೆಂಬ ಶೂರನಾದ ಮಿತ್ರನಿದ್ದನು. ಆತನು ಬ್ರಾಹ್ಮಣನಾಗಿದ್ದರೂ ಜಿನ ಧರ್ಮಾಸಕ್ತನಾಗಿದ್ದನು. ಅವನ ಆಗ್ರಹದಿಂದಲೇ ಕವಿಯು ಶಾಂತಿ ಪುರಾಣವನ್ನು ಬರೆದನು. ಈ ಗ್ರಂಥವನ್ನು ಮೇಲೆ ಬರೆದ ಪ್ರಕಾಶಕರೇ ಸ್ವಲ್ಪ ದಿವಸಗಳಲ್ಲಿ ಮುದ್ರಿಸುವವರಿದ್ದಾರೆ. ಅದರ ಪ್ರಶಸ್ತಿಯನ್ನು ವರ್ಧಮಾನ ಪುರಾಣದ ಪ್ರಸ್ತಾವನೆಯಲ್ಲಿ ಕೊಟ್ಟಿರುವರು. ಅದು ಕೆಳಗೆ ಬರೆದ ಪ್ರಕಾರವಿದೆ:—

ಮುನಿ ಚರಣ ರಜೋಭಿಃ ಸರ್ವದಾ ಭೂತ ಧಾತ್ರ್ಯಾಃ ।
ಪ್ರಣತಿ ಸಮಯ ಲಗ್ನೈಃ ಪಾವನೀಭೂತ ಮೂರ್ಧಾ ॥
ಉಪಶಮ ಇವ ಮೂರ್ತಃ ಶುದ್ಧ ಸಮ್ಯಕ್ತ್ವಯುಕ್ತಃ ।
ಪಟುಮತಿರಿತಿ ನಾಮ್ನಾ ವಿಶ್ರುತಃ ಶ್ರಾವಕೋಽಭೂತ್ ॥ ೧ ॥
ತನುಮತಿ ತನುತಾಂ ಯಃ ಸರ್ವ ಪರ್ವೋಪವಾಸೈ ।
ಸ್ತನುಮನುಪಮ ಧೀಃ ಸ್ಮ ಪ್ರಾಪಯನ್ಸಂಚಿನೋತಿ ॥
ಸತತಮಪಿ ವಿಭೂತಿಂ ಭೂಯಸೀಮನ್ನದಾನ ।
ಪ್ರಭೃತಿಭಿರುರು ಪುಣ್ಯಂ ಕುಂದ ಶುಭ್ರಂ ಯಶಶ್ಚ ॥ ೨ ॥
ಭಕ್ತಿಂ ಪರಾಮವಿರತಂ ಸಮ ಪಕ್ಷಪಾತಾ ।
ಮಾತನ್ವತೀ ಮುನಿ ನಿಕಾಯ ಚತುಷ್ಟಯೇಽಪಿ ॥
ವೈರೇತಿರಿತ್ಯನುಪಮಾ ಭುವಿ ತಸ್ಯ ಭಾರ್ಯಾ ।
ಸಮ್ಯಕ್ತ್ವ ಶುದ್ಧಿರಿವ ಮೂರ್ತಿಮತೀ ಪರಾಭೂತ್ ॥ ೩ ॥
ಪುತ್ರಸ್ತಯೋರಸಗ ಇತ್ಯವದಾತ ಕೀರ್ತ್ಯೋಃ ।
ರಾಸೀನ್ಮನೀಷಿ ನಿವಹ ಪ್ರಮುಖಸ್ಯ ಶಿಷ್ಯಃ ॥

ಚಂದ್ರಾಂಶು ಶುಭ್ರ ಯಶಸೋ ಭುವಿ ನಾಗನಂದ್ಯಾ ।
ಚಾರ್ಯಸ್ಯ ಶಬ್ದ ಸಮಯಾರ್ಣವ ಪಾರಗಸ್ಯ || ೪ ||

ತಸ್ಯಾಭವಧ್ಭವ್ಯ ಜನಸ್ಯ ಸೇವ್ಯಃ ಸಖಾ ಜಿನಾಪೋ ಜಿನಧರ್ಮ ಸಕ್ತಃ ।
ಖ್ಯಾತೋಽಪಿ ಶೌರ್ಯಾತ್ಪರಲೋಕ ಭೀರುರ್ದ್ವಿಜಾಧಿನಾಥೋಽಪಿ ವಿಪಕ್ಷಪಾತಃ || ೫ ||

ವ್ಯಾಖ್ಯಾನಶೀಲತ್ವಮವೇಕ್ಷ್ಯ ತಸ್ಯ ಶ್ರದ್ಧಾಂ ಪುರಾಣೇಷು ಚ ಪುಣ್ಯ ಬುದ್ಧೇಃ ।
ಕವಿತ್ವ ಹೀನೋಽಪಿ ಗುರೌ ನಿಬಂಧೇ ತಸ್ಮಿನ್ನಹಾಸೀದಸಗಃ ಪ್ರಬಂಧಂ || ೬ ||

ಚರಿತಂ ವಿರಚಯ್ಯ ಸನ್ಮತೀಯಂ ಸದಲಂಕಾರ ವಿಚಿತ್ರ ಚಿತ್ರಬಂಧಂ ।
ಸ ಪುರಾಣಮಿದಂ ವ್ಯಧತ್ತ ಶಾಂತೇರಸಗಃ ಸಾಧುಜನ ಪ್ರಮೋಹ ಶಾನ್ತ್ಯೈ || ೭ ||

ಅಸಗನ ಎರಡೂ ಪ್ರಶಸ್ತಿಗಳನ್ನು ಪರಿಷತ್ಪತ್ರಿಕೆಯಲ್ಲಿ ಪ್ರಕಟಿಸಬೇಕು. ದಕ್ಷಿಣ ಪ್ರಾಂತದಲ್ಲಿ ವಿಕ್ರಮ ಸಂವತ್ಸರವನ್ನು ಬರೆಯುವ ಪರಿಪಾಠವಿಲ್ಲದ್ದರಿಂದ, ಅಸಗನು ಬರೆದುದು ಶಕ ಸಂವತ್ಸರವೆಂದೇ ಎನಿಸುವದು. ಆದರೆ ಆತನನ್ನು ಪೊನ್ನನು ನಿರ್ದೇಶಿಸುವ ಮೂಲಕ ಸ್ವಲ್ಪ ವಿರೋಧ ಬರುವದು.

ಅತ್ತಿಮಬ್ಬೆಯು ರನ್ನನಿಂದ ೯೯೩ರಲ್ಲಿ ಅಜಿತಪುರಾಣವನ್ನು ಬರೆಯಿಸಿರುವಳು. ಆಕೆಯ ತಂದೆ ಮಲ್ಲಪಾರ್ಯನು ಬರೆಯಿಸಿದ ಶಾಂತಿ ಪುರಾಣದ ಕಾಲವನ್ನು ೯೬೫ರ ವರೆಗೆ ನಿರ್ಣಯಿಸಲು ಅಡ್ಡಿಯಿಲ್ಲ. ಕೃಷ್ಣ ನರೇಂದ್ರನ ಕಾಲವನ್ನು ರೈಸ್ ಸಾಹೇಬರು ೯೩೯ರಿಂದ ೯೬೮ರ ವರೆಗೆಂದೆನ್ನುವರು. ಪೊನ್ನನ ಕಾಲವನ್ನು ಅಸಗನಿಗಿಂತ ಬಹಳ ಹಿಂದೆ ಒಯ್ಯುವದು ಸಮಂಜಸವಾಗಲಾರದು. ಪೊನ್ನನೂ ಅಸಗನೂ ಸಮಕಾಲೀನರೆಂದೆನ್ನಲಿಕ್ಕೆ ಅಡ್ಡಿಯಿಲ್ಲ. ವರ್ಧಮಾನ ಪುರಾಣಕ್ಕಿಂತ ಮುಂಚೆ ಬರೆದ ೮ ಗ್ರಂಥಗಳಲ್ಲಿ ಕೆಲವು ಕನ್ನಡ ಭಾಷೆಯಲ್ಲಿರಬಹುದು. ಅಸಗನ ವರ್ಧಮಾನ ಪುರಾಣವನ್ನು ಅವಶ್ಯ ತರಿಸಿಕೊಂಡು ಓದಬೇಕು. ಕಾವ್ಯವು ಬಹಳ ಉತ್ಕೃಷ್ಟವಾಗಿದೆ.

**ಚಂದ್ರಕಾಂತ ನಿಂಗರಾಜ ಪಾಟೀಲ.**

---

# ವಿವಿಧ ವಿಷಯಗಳು

---

**ದಿವಂಗತರಾದ ಇಬ್ಬರು ಪ್ರಸಿದ್ಧ ಕರ್ಣಾಟಕ ಭಾಷಾಭಿಮಾನಿಗಳು.—**

೧. ಈಗ ಹದಿಮೂರು ವರ್ಷಗಳಿಂದಲೂ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದ ರಾಜಸಭಾಭೂಷಣ, ವಿದ್ಯಾಭೂಷಣ **ಶ್ರೀಮಾನ್ ಕರ್ಪೂರ ಶ್ರೀನಿವಾಸರಾಯರವರು** ಇದೇ ೧೯೩೨ನೆಯ ಇಸವಿ ಜೂನ್ ೨ನೆಯ ತಾರೀಖು ರಾತ್ರಿ, ತಮ್ಮ ೬೯ನೆಯ ವಯಸ್ಸಿನಲ್ಲಿ, ಸ್ವರ್ಗಸ್ಥರಾದುದು ಕನ್ನಡ ನಾಡಿಗೆಲ್ಲ ಬಹಳ ನಷ್ಟವನ್ನುಂಟುಮಾಡಿರುವುದು. ಈ ಮಹನೀಯರು ಬಹಳ ದೃಢ ಕಾಯ ರಾಗಿದ್ದರೂ, ಈಗ ನಾಲ್ಕೈದು ವರ್ಷಗಳಿಂದ ಪಾರ್ಶ್ವವಾಯು ಸಂಬಂಧವಾದ ತೀಕ್ಷ್ಣವ್ಯಾಧಿಗೆ ವಶರಾಗಿ ಬಹಳ ಬಾಧೆಯನ್ನನುಭವಿಸಿದರು. ಹೀಗಿದ್ದರೂ, ಪರಿಷತ್ತಿನ ಕಾರ್ಯಗಳನ್ನೂ ಪರಿಷತ್ತಿನ ಕಟ್ಟಡದ ಕೆಲಸವನ್ನೂ ಮೇಲ್ವಿಚಾರಣೆ ತೆಗೆದುಕೊಳ್ಳುವುದರಲ್ಲಿ ಅವರ ಆಸಕ್ತಿಯು ಸ್ವಲ್ಪವೂ ಕುಂದಲಿಲ್ಲ. ಪರಿಷತ್ತಿಗೆ ಶಾಶ್ವತವಾದ ನೆಲೆಯೊಂದುಂಟಾಗುವಂತೆ ಮಾಡಿದ ಕೀರ್ತಿಯು ಸಂಪೂರ್ಣವಾಗಿ ರಾಯರಿಗೇ ಸೇರಿದುದು.

ರಾಯರವರು ಮುಂಬಯಿ ಪ್ರಾಂತದಲ್ಲಿ ಬಹಳಕಾಲ ಎಂಜನಿಯರಿಂಗ್ ಇಲಾಖೆಯಲ್ಲಿ ದೊಡ್ಡ ಪದವಿಯಲ್ಲಿದ್ದುದಲ್ಲದೆ, ಕೊನೆಗೆ ಮೈಸೂರು ದೇಶದಲ್ಲಿ ಛೀಫ್ ಎಂಜಿನಿಯರಾಗಿದ್ದರು. ಅವರು ತಮ್ಮ ೩೫ನೆಯ ವಯಸ್ಸಿನಲ್ಲಿ ಸಂಸ್ಕೃತ ಭಾಷಾ ವ್ಯಾಸಂಗಕ್ಕೆ ಪ್ರಾರಂಭಿಸಿ, ಆ ಭಾಷೆಯಲ್ಲಿ ನಿರರ್ಗಳವಾಗಿ ಮಾತನಾಡು ವಷ್ಟು ಪಾಂಡಿತ್ಯವನ್ನು ಗಳಿಸಿದ್ದರು; ಕನ್ನಡದಲ್ಲಿಯೂ ಪ್ರೌಢಲೇಖನಗಳನ್ನು ಪರಿಷತ್ಪತ್ರಿಕೆಗಾಗಿ ಆಗಾಗ ಬರೆಯುತ್ತಿದ್ದರು. ಅವರ ಸೌಜನ್ಯವು ಅಸಮಾನ ವಾದುದು.

೧೯೧೫ನೆಯ ಇಸವಿಯಲ್ಲಿ ಈ ಪರಿಷತ್ತನ್ನು ಸ್ಥಾಪನೆಮಾಡಿದ ಮುಖಂಡರಲ್ಲಿ ರಾಯರೊಬ್ಬರು. ಅಂದಿನಿಂದಲೂ ಈ ಸಂಸ್ಥೆಯಲ್ಲಿ ಅವರಿಗಿದ್ದ ಒಂದೇ ಸಮವಾದ ಮಮತೆಯಿಂದ ಈ ಪರಿಷತ್ತು ಇಷ್ಟು ಅಭಿವೃದ್ಧಿಸ್ಥಿತಿಗೆ ಬಂದಿರುವುದು. ಈ ಮಹನೀಯರು ಈ ಸಂಸ್ಥೆಗೆ ಹಾಕಿರುವ ಭದ್ರವಾದ ತಳಹದಿಯ ಮೇಲೆ ಮುಂದೆ ಬರುವ ಪರಿಷದಧಿಕಾರಿಗಳು ಕಟ್ಟುವ ಕಟ್ಟಡವು ಶಾಶ್ವತವಾಗಿ ನಿಂತು, ಅಭಿವೃದ್ಧಿ ಹೊಂದುತ್ತ, ನಮ್ಮ ಕನ್ನಡ ಭಾಷೆಯು ಇಂಗ್ಲಿಷು ಮೊದಲಾದ ಸಾರ್ವಜನಿಕ ಭಾಷೆಗಳೊಡನೆ ಸರಿದೂಗುವಂತಾಗಬೇಕೆಂಬುದೇ ನಮ್ಮ ಹಾರಯ್ಕೆ.

೨. ಈಗ ಸುಮಾರು ಎರಡು ವರ್ಷಗಳಿಂದಲೂ ಮುಂಬಯಿ ನಗರದಿಂದ ಹೊರಡುತ್ತಿದ್ದ 'ಪ್ರಬೋಧಕ'ವೆಂಬ ಕನ್ನಡ ಮಾಸ ಪತ್ರಿಕೆಯ ಸಂಪಾದಕರಾಗಿದ್ದ **ಶ್ರೀಮಾನ್ ಬಿ. ಚಂದ್ರಶೇಖರ ಶರ್ಮ**ರು ೧೯೩೨ನೆಯ ಮೇ ತಿಂಗಳು ೧೬ನೆಯ

ತಾರೀಖಿನಲ್ಲಿ, ತಮ್ಮ ೩೨ನೆಯ ವಯಸ್ಸಿನಲ್ಲಿ, ದೈವಾಧೀನರಾದುದು ಕನ್ನಡ ನಾಡಿಗೆಲ್ಲ ಒಂದು ದೊಡ್ಡ ನಷ್ಟವನ್ನುಂಟುಮಾಡಿದೆ. ಇವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಎಂ.ಎ. ಪದವಿಯನ್ನು ಪಡೆದು ಮುಂಬಯಿಗೆ ಹೋಗಿ ಅಲ್ಲಿ ಒಂದು ಪಾಠಶಾಲೆಯಲ್ಲಿ ಉಪಾಧ್ಯಾಯರಾಗಿದ್ದರು. ಮುಂಬಯಿ ಪಟ್ಟಣದಲ್ಲಿ ಅಲ್ಲಲ್ಲಿ ಕಣ್ಣಿಗೆ ಬೀಳುತ್ತಿರುವ ಕನ್ನಡದ ಮೊಳಕೆಗೆ ಗೊಬ್ಬರಹಾಕಿ ನೀರೆರೆದು ಅದನ್ನು ಅಭಿವೃದ್ಧಿಪಡಿಸಬೇಕೆಂದು ಯತ್ನಿಸಿದವರಲ್ಲಿ ಶ್ರೀಮಾನ್ ಬಿ. ಚಂದ್ರಶೇಖರ ಶರ್ಮರು ಅಗ್ರಗಣ್ಯರು. ಇವರು ಅಲ್ಲಿದ್ದ ಕನ್ನಡಿಗರನ್ನು ಒಟ್ಟುಗೂಡಿಸಿ ಒಂದು ಸಂಘವನ್ನು ಸ್ಥಾಪಿಸಿ, 'ಪ್ರಬೋಧಕ'ವೆಂಬ ಮಾಸಪತ್ರಿಕೆಯನ್ನು ಆರಂಭಿಸಿ, ಅದನ್ನು ಬಹಳ ದಕ್ಷತೆಯಿಂದ ನಡೆಯಿಸುತ್ತಿದ್ದರು; ಅಮೆರಿಕದ ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷನಾಗಿದ್ದ ಏಬ್ರಹಾಂ ಲಿಂಕನ್ನಿನ ಜೀವನ ಚರಿತೆಯನ್ನು ಕನ್ನಡದಲ್ಲಿ ವಿಸ್ತಾರವಾಗಿ ಬರೆದು ಪ್ರಕಟಿಸಿರುವರು; ಕರ್ಣಾಟಕದ ಇತಿಹಾಸ ವಿಷಯಕವಾದ ದೊಡ್ಡದೊಂದು ಗ್ರಂಥವನ್ನು ಬರೆದಿಟ್ಟಿರುವರಂತೆ; ಇದು ಬೇಗನೆ ಪ್ರಕಟವಾಗಬೇಕೆಂಬುದು ನಮ್ಮ ಹಾರಯ್ಕೆ. ಕನ್ನಡ ನಾಡಿನ ಮತ್ತು ಭಾಷೆಯ ಅಭಿವೃದ್ಧಿಗಾಗಿ ಇಷ್ಟು ಶ್ರಮಪಟ್ಟು ಉತ್ಸಾಹದಿಂದ ದುಡಿಯುತ್ತಿದ್ದ ಶರ್ಮರು ಇನ್ನೂ ಪೂರ್ವ ವಯಸ್ಸಿನಲ್ಲಿಯೇ ಮೃತ್ಯುವಿನ ವಶರಾದುದು ಕನ್ನಡ ನಾಡಿನ ದುರ್ದೈವವೆಂದೇ ಹೇಳಬೇಕು.

**ಶಕಗಳು.**—ಭಾರತವರ್ಷದ ಇತಿಹಾಸದಲ್ಲಿ ಕಾಲವನ್ನು ಗೊತ್ತುಮಾಡುವುದು ಸಾಮಾನ್ಯವಾದ ಕೆಲಸವಲ್ಲ; ಒಂದೊಂದು ಕಡೆ ಒಂದೊಂದು ಶಕವು ಹೇಳಿದೆ. ಇವೆಲ್ಲವನ್ನೂ ಪ್ರಸಿದ್ಧರಾದ ಚರಿತ್ರಕಾರರು ಕ್ರೋಡೀಕರಿಸಿ ಅಭಿಪ್ರಾಯ ಕೊಟ್ಟಿರುತ್ತಾರೆ. ಆದರೂ, ಚರಿತ್ರಾಂಶಗಳ ಕಾಲವನ್ನು ಸಾಮಂಜಸ ಮಾಡುವುದು ಈಗಲೂ ಕಷ್ಟವಾಗಿಯೇ ನಿಂತಿದೆ. ಈ ವಿಷಯವಾಗಿ ೧೯೩೨ನೆಯ ಜೂನ್ ಜೂಲೈ ತಿಂಗಳುಗಳ "ಮಾಡರನ್ ರಿವ್ಯೂ" ಮಾಸಪತ್ರಿಕೆಯಲ್ಲಿ, 'ಕೃತ, ಗುಪ್ತ, ಶಕ ಮೊದಲಾದ ಕಾಲಮಾನಗಳು' ಎಂಬ ಹೆಸರಿನಿಂದ ಧೀರೇಂದ್ರನಾಥ ಮುಖೋಪಾಧ್ಯಾಯರೆಂಬ ವಿದ್ವಾಂಸರು ವಿಸ್ತಾರವಾದ ಲೇಖನವನ್ನು ಬರೆದು, ಅನೇಕ ಉದಾಹರಣೆಗಳನ್ನು ಕೊಟ್ಟು, ಇತರ ವಿದ್ವಾಂಸರು ಈ ವಿಷಯವಾಗಿ ಹೇಳಿರುವ ಆಧಾರಗಳೊಡನೆ ಚರ್ಚೆ ಮಾಡಿರುವರು. ಅದರಲ್ಲಿ ಹೇಳಿರುವ ಒಂದೆರಡು ವಿಷಯಗಳನ್ನು ಮಾತ್ರ ಬಹಳ ಸೂಕ್ಷ್ಮವಾಗಿ ಇಲ್ಲಿ ತಿಳಿಸುವೆವು:—

ಡಾಕ್ಟರು ಫ್ಲೀಟ್ ಅವರು, ೧೮೮೭ನೆಯ ಇಸವಿಯಲ್ಲಿ, 'ಗುಪ್ತ' ಶಕವನ್ನು ೩೧೯-೩೨೦ನೆಯ ಇಸವಿಯೆಂದು ನಿರ್ಧರಿಸಿರುವರು. ಇದು ಚರಿತ್ರಕಾರರಿಗೆ ಬಹಳ ಸಹಾಯಕವಾದರೂ ಭಾರತೀಯರ ಪರಂಪರಾಗತವಾದ ಅಭಿಪ್ರಾಯಗಳಿಗೂ ಚೀಣರ ಹೇಳಿಕೆಗೂ ಶಾಸನಗಳ ನಿದರ್ಶನಗಳಿಗೂ ಅನೇಕ ಕಡೆ ವ್ಯತಿರಿಕ್ತವಾಗಿದೆ.

ಧೀರೇಂದ್ರನಾಥರು ಈ ವಿಷಯದಲ್ಲಿ ಹೊಸದಾಗಿ ಪರೀಕ್ಷೆಗಳನ್ನು ನಡೆಯಿಸಿ ಮುಂದೆ ಹೇಳುವಂತೆ ಅಭಿಪ್ರಾಯಪಡುವರು:—

ವರಾಹಮಿಹಿರನು ತನ್ನ ಬೃಹತ್ಸಂಹಿತೆಯಲ್ಲಿ, ಯುಧಿಷ್ಠಿರನು ಶಕ ಕಾಲಕ್ಕೆ **೨೫೨೬** ವರುಷಗಳ ಹಿಂದೆ ಭೂಮಂಡಲವನ್ನು ಆಳುತ್ತಿದ್ದನೆಂದು ಹೇಳುತ್ತಾನೆ. ಈ ಶಕ ಕಾಲವು ಶಾಕ್ಯ, ಅಥವಾ ಬುದ್ಧ ಕಾಲವಾದ ಕ್ರಿ. ಪೂ. ೫೭೬ನೆಯ ಇಸವಿಗೆ ಅನುವರ್ತಿಸುವುದು. ಆದುದರಿಂದ ಯುಧಿಷ್ಠಿರನ ಕಾಲವು ೨೫೨೬+೫೭೬=ಕ್ರಿ. ಪೂ. ೩೧೦೨ನೆಯ ಇಸವಿಯೆಂದಾಗುವುದು. ಇದು ಕಲಿಯುಗಾರಂಭವೆಂಬ ಭಾರತೀಯರ ಅಭಿಪ್ರಾಯಕ್ಕೆ ಸರಿಹೋಗುವುದು. ಅಲ್ಲದೆ, ಎರಡನೆಯ ಪುಲಿಕೇಶಿಯ ಐಹೊಳೆಯ ಶಾಸನದ ಕಾಲವು ಶಕ ೫೫೬ ಎಂದೂ, ಕಲಿಯುಗದ ೩೭೩೫ನೆಯ ವರ್ಷವೆಂದೂ ಹೇಳಿದೆ. ಇದರಿಂದ, ಭಾರತ ಯುದ್ಧದ ಕಾಲವು ಕಲಿಯುಗದ ಕಾಲಕ್ಕೆ ಸರಿಹೊಂದುತ್ತದೆ.

ಫ್ಲೀಟ್ ಅವರು ಗುಪ್ತ ಶಕವೂ ವಲ್ಲಭೀ ಶಕವೂ ಒಂದೇ ಎಂದೂ, ಆದುದರಿಂದ ಕೃತ, ಅಥವಾ ಮಾಲವ ಶಕವು ವಿಕ್ರಮ ಶಕವೇ ಎಂದೂ ಹೇಳುತ್ತಾರೆ. ಆದುದರಿಂದ ಗುಪ್ತ ಶಕಕ್ಕೂ ಕೃತ ಶಕಕ್ಕೂ ಅಂತರವು ೩೧೮+೫೮, ಅಥವಾ ೩೭೬ ವರುಷಗಳಾದಂತಾಯಿತು.

ಈಗ, ಅನೇಕ ಭಾರತೀಯ ಶಾಸನಗಳಲ್ಲಿ ದೊರೆಯುವ **ಕೃತ** ಶಕವೆಂಬುದರ ವಿಷಯವಾಗಿ ವಿಚಾರಮಾಡೋಣ. ಈ ಶಕವು **ಮಾಲವ** ಶಕವೆಂದೂ ಕರೆಯಲ್ಪಡುತ್ತಿದ್ದಿತೆಂದು ಕೆಲವು ಶಾಸನಗಳಿಂದ ತಿಳಿಯಬರುತ್ತದೆ. ಶಾಸನಗಳ ಅಂತರ್ವಿಚಾರಗಳಿಂದ, ಈ ಕೃತ ಶಕವು ಗುಪ್ತ ಶಕಕ್ಕೆ ಸುಮಾರು ೪೦೦ ವರ್ಷಗಳು ಹಿಂದಿದ್ದಿರಬೇಕೆಂದು ಸ್ಪಷ್ಟವಾಗುತ್ತದೆ. ಫ್ಲೀಟ್ ಅವರು ಗುಪ್ತ ಶಕವೂ ವಲ್ಲಭೀ ಶಕವೂ ಒಂದೇ ಎಂದೂ, ಅದು ೩೧೯ನೆಯ ಇಸವಿಯೆಂದೂ, ತಪ್ಪು ತಿಳಿವಳಿಕೆ ಹೊಂದಿ, ವಿಕ್ರಮ ಶಕವು ಈ ಕಾಲಕ್ಕೆ ೩೭೬ ವರುಷಗಳ ಹಿಂದೆಯೇ, ಎಂದರೆ ಕ್ರಿ. ಪೂ. ೫೮ರಲ್ಲಿ, ಆರಂಭವಾಯಿತೆಂದು ತಿಳಿಯಬರುವುದರಿಂದ, ಕೃತ ಶಕವೂ ವಿಕ್ರಮ ಶಕವೂ ಒಂದೇ ಎಂದು ಅಭಿಪ್ರಾಯಪಟ್ಟಿರುವರು. ಆದರೆ ಮಾಲವ ಶಕವು ಕ್ರಿ. ಪೂ. ೫೮ಕ್ಕೆ ಬಹಳ ಕಾಲ ಮೊದಲೇ ಇದ್ದಿತೆಂದು ಜನರಲ್ ಕನ್ನಿಂಗ್‌ಹಾಂ ಅವರು ತೋರಿಸಿರುತ್ತಾರೆ.

ಗುಪ್ತ ಶಕ ೫೮೫ನೆಯ ವರ್ಷದ ಫಾಲ್ಗುಣ ಮಾಸದಲ್ಲಿ, ಸೂರ್ಯಗ್ರಹಣ ಸಮಯದಲ್ಲಿ, ಕಾಥೇವಾಡಿಯ ಜೈನಕನು ದಾನಕೊಟ್ಟ ವಿಷಯವಾದ ಮೋರ್ವೀ ಶಾಸನವನ್ನು ಜ್ಯೋತಿಷ ರೀತಿಯಾಗಿ ಪರೀಕ್ಷಿಸಿದಲ್ಲಿ, ಗುಪ್ತ ಶಕವು ವಿಕ್ರಮ ಶಕದೊಡನೆ ಸರಿಹೊಂದುವುದೆಂದೂ, ಅದು ಕ್ರಿ. ಪೂ. ೫೮ನೆಯ ವರ್ಷದಲ್ಲಿ ಆರಂಭವಾಯಿತೆಂದೂ ಸ್ಪಷ್ಟವಾಗುತ್ತದೆ.

ಈ ವಿಚಾರ ಸರಣಿಯಿಂದ ಗೊತ್ತಾಗುವ ವಿಷಯಗಳೇನೆಂದರೆ:—ಬುದ್ಧನು ನಿರ್ವಾಣಹೊಂದಿದುದು ಕ್ರಿ. ಪೂ. ೫೭೬ನೆಯ ವರ್ಷದಲ್ಲಿ; ಅವನ ಪರಿನಿರ್ವಾಣ, ಅಥವಾ ಮರಣವು ಕ್ರಿ. ಪೂ. ೫೦೧ರಲ್ಲಿ; ಬುದ್ಧ ಶಕ ಕಾಲವು, ಅಥವಾ ನಿರ್ವಾಣ ಶಕವು ಕ್ರಿ. ಪೂ. ೫೭೬ನೆಯ ವರ್ಷದಿಂದ ಆರಂಭವಾಯಿತು; ಶ್ರೀಹರ್ಷ, ಕೃತ,

ಅಥವಾ ಮಾಲವ ಶಕ ಕಾಲವು ಕ್ರಿ. ಪೂ. ೪೫೮; ಇದೇ, ಪಾಟಲಿಪುತ್ರ ಸ್ಥಾಪನೆಯಾದ ಕಾಲ; ಗುಪ್ತ ಶಕವೂ ವಿಕ್ರಮ ಶಕವೂ ಒಂದೇ; ಈ ಕಾಲವು ಕ್ರಿ. ಪೂ. ೫೮.

**ಕೃತ ಸಂವತ್ಸರಗಳು, ಅಥವಾ ವಿಕ್ರಮ ಶಕದ ಮೂಲ.**—ಈ ವಿಚಾರವಾಗಿ ಡಾಕ್ಟರ್ ಡಿ. ಆರ್. ಭಂಡಾರಕರ್, ಎಂ.ಎ., ಪಿಎಚ್.ಡಿ. ಅವರು ೧೯೩೨ನೆಯ ಜೂನ್ ತಿಂಗಳ 'ಇಂಡಿಯನ್ ಆಂಟಿಕ್ವೆರಿ' ಮಾಸ ಪತ್ರಿಕೆಯಲ್ಲಿ ಒಂದು ಸಣ್ಣ ಲೇಖನವನ್ನು ಬರೆದಿರುವರು. ಅದರ ಅಭಿಪ್ರಾಯವನ್ನು ಇಲ್ಲಿ ಸೂಕ್ಷ್ಮವಾಗಿ ತಿಳಿಸುವೆವು:—

ಪರಂಪರಾನುಗತವಾಗಿ ಬಂದ ವಿಕ್ರಮಾದಿತ್ಯ ಸಂಬಂಧ ಸಂವತ್ಸರಗಳು ಪೂರ್ವದಲ್ಲಿ **ಕೃತ** ಸಂವತ್ಸರಗಳೆಂದು ಕರೆಯಲ್ಪಡುತ್ತಿದ್ದ ವಿಷಯವು ಶಾಸನಾನ್ವೇಷಣಕಾರರಿಗೆ ತಿಳಿಯದುದಲ್ಲ. ಇದಕ್ಕೆ ಶಾಸನ ನಿದರ್ಶನಗಳಿದ್ದರೂ ಕೆಲವರು ಪಂಡಿತರು ವಿಕ್ರಮಾದಿತ್ಯನೆಂಬ ಒಬ್ಬ ದೊರೆಯು ಸುಮಾರು ಕ್ರಿ. ಪೂ. ೫೭ರಲ್ಲಿ ರಾಜ್ಯಭಾರ ಮಾಡುತ್ತಿದ್ದನೆಂದೂ, ಈ ಶಕವು ಆತನಿಂದಲೇ ಸ್ಥಾಪಿತವಾಯಿತೆಂದೂ ಸಾಧಿಸುತ್ತಾರೆ. ನಿಜವಾಗಿಯೂ ಕ್ರಿ. ಶ. ೫ನೆಯ ಶತಮಾನಕ್ಕೆ ಹಿಂದಣ ಸರಿಸುಮಾರು ಎಲ್ಲಾ 'ಸಂವತ್' ವರ್ಷಗಳೂ ಕೃತ ಸಂವತ್ಸರಗಳೆಂದೇ ಕರೆಯಲ್ಪಡುತ್ತವೆ; ಯಾವ ಪೂರ್ವ ಶಾಸನಗಳಲ್ಲಿಯೂ ಈ ಸಂವತ್ಸರಗಳಿಗೆ ವಿಕ್ರಮಾದಿತ್ಯನೆಂಬ ದೊರೆಯ ಎಂತಹ ಸಂಬಂಧವಾದರೂ ಇದ್ದಿತೆಂದು ಸ್ವಲ್ಪವಾದರೂ ಊಹೆ ತೋರುವುದಿಲ್ಲ.

ಕೆ. ಪಿ. ಜಯಸ್ವಾಲರು 'ಬ್ರಾಹ್ಮಣ ಚಕ್ರಾಧಿಪತ್ಯ' ಎಂಬ ತಮ್ಮ ಒಂದು ಲೇಖನದಲ್ಲಿ, ಮಹಾಭಾರತದ ಹರಿವಂಶದಿಂದ ಒಂದು ವಚನವನ್ನು ಉದ್ಧರಿಸುವಾಗ, ಪುಷ್ಯಮಿತ್ರನ ವಿಷಯವಾಗಿಯೂ ಬ್ರಾಹ್ಮಣ ಪುನರುದ್ಧರಣ ವಿಷಯವಾಗಿಯೂ ಸ್ಪಷ್ಟವಾಗಿ ಸೂಚನೆ ಮಾಡಿರುತ್ತಾರೆ. ಮಹಾಭಾರತದ ವನ ಪರ್ವದಲ್ಲಿ ಕಲಿಯುಗ ಮತ್ತು ಅದರ ಅನ್ಯಾಯ ಪ್ರವರ್ತನೆಯ ವಿಷಯವಾಗಿ ವರ್ಣನೆ ಮಾಡಿದೆ: ಶೂದ್ರರು ಉಪದೇಶಕರಾಗಿಯೂ ಬ್ರಾಹ್ಮಣರು ಅವರ ಶಿಷ್ಯರಾಗಿಯೂ ಇರುವರೆಂದೂ, ಭೂಲೋಕವು ದೇವಸ್ಥಾನಗಳಿಗೆ ಬದಲಾಗಿ ಬೌದ್ಧ ಸ್ತೂಪಗಳಿಂದ ಅಲಂಕೃತವಾಗಿರುವುದೆಂದೂ, ಭರತಖಂಡವೆಲ್ಲವನ್ನೂ ಮ್ಲೇಚ್ಛ ತಂಡಗಳು ಮುತ್ತಿಗೆ ಹಾಕುವುವೆಂದೂ ವರ್ಣಿಸಿದೆ. ಆದರೆ ಈ ಕಲಿಯುಗವು ಕ್ರಮೇಣ ಸಂಧಿ ಕಾಲಕ್ಕೆ ಪ್ರವೇಶಿಸಿ ತರುವಾಯ ಕೃತಯುಗವು ಬರುವುದೆಂದು ತಿಳಿಸಿದೆ; ಸೂರ್ಯ, ಚಂದ್ರ, ಬೃಹಸ್ಪತಿ—ಈ ಗ್ರಹಗಳೂ ಪುಷ್ಯ ನಕ್ಷತ್ರವೂ ಒಟ್ಟಿಗೆ ಒಂದೇ ರಾಶಿಯಲ್ಲಿ ಸೇರಿದಾಗ ಕೃತಯುಗವು ಪುನಃ ಪ್ರಾರಂಭವಾಗುವುದೆಂದೂ ಹೇಳಿದೆ; ಅಲ್ಲದೆ, ಸಂಭಲವೆಂಬ ಪಟ್ಟಣದಲ್ಲಿ, ಒಂದು ಬ್ರಾಹ್ಮಣ ಕುಟುಂಬದಲ್ಲಿ, ವಿಷ್ಣುಯಶಸ್ ಎಂಬ ಬ್ರಾಹ್ಮಣನು ಕಲ್ಕಿಯಾಗಿ ಅವತರಿಸುವನೆಂದೂ, ಆತನು ಚಕ್ರವರ್ತಿಯಾಗಿರುವುದು ಮಾತ್ರವಲ್ಲದೆ ಧರ್ಮ ವಿಜಯಿಯಾಗಿಯೂ ಇರುವನೆಂದೂ ತಿಳಿಸಿದೆ. ಆತನು ದಸ್ಯುಗಳನ್ನು ನಿರ್ಮೂಲ ಮಾಡಿ ದೊಡ್ಡ ಅಶ್ವಮೇಧ ಯಾಗವನ್ನು ನೆರವೇರಿಸಿ, ಬ್ರಾಹ್ಮಣರಿಗೆ ಭೂಮಿಯನ್ನೆಲ್ಲ ಹಿಂದಕ್ಕೆ ಕೊಟ್ಟು, ತ್ರಿಶೂಲಗಳು, ಶಕ್ತಿಗಳು, ಕೃಷ್ಣಾಜಿನ

ಗಳು—ಇವುಗಳ ಪೂಜೆಯನ್ನು ಸ್ಥಾಪನೆ ಮಾಡಿ, ಕೃತಯುಗ ಪ್ರವೇಶವನ್ನು ಮಾಡಿಸುವನೆಂದು ಹೇಳಿದೆ. ಈ ವಿವರಣೆಯೆಲ್ಲವೂ **ಪುಷ್ಯಮಿತ್ರ**ನೆಂಬ ದೊರೆಗೆ ಬಹಳ ಚೆನ್ನಾಗಿ ಹೋಲಿಕೆಯಾಗುವುದೆಂದು ಭಂಡಾರಕರರ ಅಭಿಪ್ರಾಯ. ಏಕೆಂದರೆ, ಪುಷ್ಯಮಿತ್ರನು ಬ್ರಾಹ್ಮಣ, ಸಮ್ರಾಜ, ಧರ್ಮವಿಜಯಿ, ಅಶ್ವಮೇಧಯಾಗ ಮಾಡಿ ಬ್ರಾಹ್ಮಣ ಮತವನ್ನು ಪುನರುದ್ಧಾರ ಮಾಡಿದವನು. ಆದರೆ ಕಲ್ಕ್ಯವತಾರವು ಮುಂದೆ ಬರತಕ್ಕದ್ದು ಎಂದು ಹೇಳಿರುವುದರಿಂದ ಇದನ್ನು ಸಮಂಜಸ ಮಾಡುವುದು ಕಷ್ಟವಾಗಬಹುದು; ಆದರೆ ಮತ್ಸ್ಯ ಪುರಾಣದಲ್ಲಿ—ಬುದ್ಧನು ಒಂಬತ್ತನೆಯ ಅವತಾರವಾಗಿ ಹುಟ್ಟಿದನೆಂದೂ, ಪರಾಶರರುಗಳ ನಾಯಕನಾದ ವಿಷ್ಣುಯಶಸ್ಸು ಕಲ್ಕಿಯಾಗಿ ಕಲಿಯುಗಾಂತದಲ್ಲಿ, ಹತ್ತನೆಯ ಅವತಾರವಾಗುವನೆಂದೂ ಹೇಳಿದೆ; ತರುವಾಯ, ಈತನ ದಿಗ್ವಿಜಯ ವರ್ಣನೆ ಮಾಡಿ, ಈ ದೇವನ ಅವತಾರ ಸಮಾಪ್ತಿಯಾಯಿತೆಂದೂ ತಿಳಿಸಿದೆ. ಆದುದರಿಂದ, ಕೆಲವರ ಮತ ರೀತಿಯಾಗಿ ಕಲ್ಕ್ಯವತಾರವು ಆಗಿಹೋಯಿತೆಂದು ತಿಳಿಯಬರುತ್ತದೆ. ಇದನ್ನು ನೋಡಿದರೆ, ಕಲಿಯುಗವು ಅಂತ್ಯವಾಗಿ, ಈಗ ನಡೆಯುತ್ತಿರುವುದು ಕೃತಯುಗವೆಂದು ಹೇಳಬೇಕು. ಪುಷ್ಯಮಿತ್ರನೇ ಈ ಕೃತಯುಗದ ಮೂಲಕಾರಣನು; ಈ ಯುಗವು ಕ್ರಿ. ಪೂ. ೫೭ರಲ್ಲಿ ಆರಂಭವಾಗಿರಬೇಕು.

———

# ಗ್ರಂಥ ವಿಮರ್ಶೆ

## ೧. ವೈದ್ಯರಾಜ

ಗ್ರಂಥಕರ್ತರು.—ರಂಗಾಚಾರ್ಯ ಜಾಗೀರದಾರ, ಧಾರವಾಡ.
ಪ್ರಕಾಶಕರು.—ನಾಟ್ಯ ಸಂಘ, ಕರ್ನಾಟಕ ಕಾಲೇಜ, ಧಾರವಾಡ.
ಮುದ್ರಣಕಾರರು.—ಜಯಕರ್ನಾಟಕ ಮುದ್ರಣಾಲಯ, ಧಾರವಾಡ.

ಕ್ರೌ ಅಷ್ಟಪತ್ರ ಪುಟಗಳು ೧೦+೧೧೯; ಬೆಲೆ ಒಂದು ರೂಪಾಯಿ; ೧೯೩೨.

ಇದೊಂದು ಸಾಮಾಜಿಕ ಗದ್ಯನಾಟಕ. ಹರಿಹರರಾಯನು "ಜನರಿಗೆಲ್ಲ ಬೇಕಾದ ಒಬ್ಬ ಮುಂದಾಳು ವಕೀಲ"; ಮನೋರಮೆ ಎಂಬಾಕೆ ಆತನ ಎರಡನೆಯ ಹೆಂಡತಿ; ತಿಮ್ಮಾಜಿ ಎಂಬಾತನು ಆತನ ಮುದುಕ ಕಾರಕೂನ; ಇವನ ಮಗ ಕಾಮಿಯೆಂಬ ತರುಣನು. ಮೋಹಿನಿಯೆಂಬ ೧೪ ವರ್ಷದ ಹುಡುಗಿಯು ಹರಿಹರ ರಾಯನ ಮಗಳು. ಈ ಹುಡುಗಿಯೂ ಕಾಮಿಯೂ ಒಬ್ಬರಲ್ಲೊಬ್ಬರು ಪ್ರೇಮ ದಿಂದಿರುತ್ತ, ಬಹಳ ಸಲಿಗೆಯೊಡನೆ ವರ್ತಿಸುವರು. ವಿದ್ಯಾಧರನೆಂಬಾತನು ಒಬ್ಬ "ತರುಣ ಡಾಕ್ತರ"ನು; ಹರಿಹರರಾಯನು ಹೆಂಡತಿಯಲ್ಲಿ ಕೇವಲ ಪ್ರೇಮವನ್ನಿಟ್ಟು ಕೊಂಡಿದ್ದರೂ, ತನ್ನ ವಕೀಲಿತನದಲ್ಲಿಯೂ ಇತರ ಸಾಮಾಜಿಕ ಕಾರ್ಯಗಳಲ್ಲಿಯೂ ನಿರತನಾಗಿರುವನೇ ವಿನಾ ಸಂಸಾರದಲ್ಲಿ ಅಷ್ಟು ಆಸಕ್ತಿ ವಹಿಸಿರುವಂತೆ ಕಾಣುವುದಿಲ್ಲ. ವಿದ್ಯಾಧರನು ಹರಿಹರರಾಯನ ಮನೆಯಲ್ಲಿ ಬಹಳ ಬಳಕೆಯಿಂದಿರುವನು; ಮನೋ ರಮೆಯೊಡನೆ ಮಿತಿಮೀರಿದ ಸಲಿಗೆಯಿಂದಿರುವನು. ರಾತ್ರಿಯ ಸಮಯದಲ್ಲಿಯೂ, ವಿದ್ಯಾಧರನೂ ಮನೋರಮೆಯೂ ಒಟ್ಟಿಗೆ ಏಕಾಂತವಾಗಿದ್ದುದನ್ನು ಕಂಡರೂ ಹರಿಹರರಾಯನು ಅದನ್ನು ಲಕ್ಷ್ಯಕ್ಕೇ ತಂದುಕೊಳ್ಳುವಂತೆ ತೋರುವುದಿಲ್ಲ. ಇವರ ಏಕಾಂತದ ಮಾತುಗಳನ್ನು ನೋಡಿದರೆ ಇವರಿಗೆ ಅನ್ಯೋನ್ಯ ಪ್ರೇಮವಿರುವಂತೆಯೂ ಕಾಣುವುದಿಲ್ಲ. 'ಡಾಕ್ತರ'ನು ಹರಿಹರರಾಯನಿಗೆ ಏನೋ ಒಂದು ಹೇಳಬಾರದ ವ್ಯಾಧಿಯಿರುವುದೆಂದು ಮನೋರಮೆಯೊಡನೆ ಹೇಳಿ ಆಕೆಯನ್ನು ಭಯಪಡುವಂತೆ ಮಾಡಿ ತಾನು ಹೇಳಿದ ಕೆಲಸಗಳನ್ನು ಆಕೆಯು ಮಾಡುವಂತೆ ಪ್ರೇರಿಸುತ್ತಾನೆ. ಹರಿಹರರಾಯನ ಮರಣಪತ್ರವನ್ನು ಸಂಪಾದಿಸಬೇಕೆಂಬ ಉತ್ಕಟೇಚ್ಛೆಯು ವಿದ್ಯಾ ಧರನನ್ನು ಬಾಧಿಸುವುದು. ಅದನ್ನು ಕಡೆಗೆ ಮನೋರಮೆಯ ಮೂಲಕ ಪಡೆಯುವನು. ಅದರಲ್ಲಿ, ವಿದ್ಯಾಧರನು ಹರಿಹರರಾಯನ ಮದುವೆಯಾಗದ ಹೆಂಡತಿಯಲ್ಲಿ ಹುಟ್ಟಿದ ಮಗನೆಂದು ಬರೆದಿರುವುದು. ಇದನ್ನು ನೋಡಿ ವಿದ್ಯಾಧರನು ಸಂಕಟದಲ್ಲಿ ಮುಳುಗುವನು. ಆ ಹೊತ್ತಿಗೆ ಹರಿಹರರಾಯನು ಬಂದು ವಿದ್ಯಾಧರನಿಗೆ ತನ್ನ ಮಗಳಾದ ಮೋಹಿನಿಯನ್ನು ಕೊಟ್ಟು ಮದುವೆ ಮಾಡುವ ಅಭಿಲಾಷೆಯು ಮೊದಲಿಂದಲೂ ತನ್ನಲ್ಲಿರುವ ವಿಷಯವನ್ನು ತಿಳಿಸುವನು. ಎಲ್ಲರೂ "ದಂಗು

ಬಡಿದ "ವರಂತೆ ನಿಂತಿರುವುದನ್ನು ನೋಡಿ ಹರಿಹರರಾಯನು ಆಶ್ಚರ್ಯಪಡುತ್ತಿರುವಲ್ಲಿ, ತನ್ನ ಮರಣಪತ್ರದ ವಿಚಾರವು ಬಹಿರಂಗವಾದುದನ್ನು ತಿಳಿದು ಮೂರ್ಛೆ ಹೋಗುವನು.

ಇಷ್ಟೇ ಕಥೆ. ಲೇಖಕರು ಸಮಾಜದ ಕುಂದುಕೊರತೆಗಳನ್ನು ತೋರಿಸಿ, ಅದನ್ನು ಸರಿಪಡಿಸುವ ಮಾರ್ಗವು ಜನರ ಮನಸ್ಸಿನಲ್ಲಿ ಮೂಡುವಂತೆ ಮಾಡಬೇಕೆಂಬ ಅಭಿಲಾಷೆಯಿಂದಲೇ ಈ ದೃಶ್ಯ ಕಾವ್ಯವನ್ನು ರಚಿಸಿರಬೇಕು. ಆದರೆ ಈ ಗ್ರಂಥವನ್ನು ಒಂದು ಬಾರಿ ಮಾತ್ರ ಓದುವುದರಿಂದ ಅದರಲ್ಲಿ ಚಿತ್ರಿಸಿರುವ ಅಭಿಪ್ರಾಯಗಳು ಅರ್ಥ ವಾಗುವಂತಿಲ್ಲ. 'ಮುನ್ನುಡಿ'ಯಿಂದಲಾದರೂ ಅದನ್ನು ಗ್ರಹಿಸೋಣವೆಂದರೆ ಅದೂ ಒಗಟಿಯಂತಿರುವುದು. ಈ ಮುನ್ನುಡಿಯ ಲೇಖಕರು ತಮ್ಮ ಗುರುತನ್ನು ಲೇಖ ಕರಿಗೆ ಮಾಡಿಕೊಡದೆ "ಎದೆವಯ್ಯ" ಎಂಬ ವಿಚಿತ್ರ ನಾಮಾಂತರವನ್ನು ತಳೆದಿರು ವುದಕ್ಕೂ ಕಾರಣ ತಿಳಿಯುವುದಿಲ್ಲ. ಒಟ್ಟಿನಲ್ಲಿ, ಈ ನಾಟಕವು ಕೇವಲ ಒಗಟಿ ನಂತೆಯೇ ಪರಿಣಮಿಸುವುದು; ಕಥೆಯೂ ಅರ್ಥವಾಗುವಂತಿಲ್ಲ. ಲೇಖಕರು ಈ ಗ್ರಂಥವನ್ನು ಬಹಳ ಪ್ರೌಢ ರೀತಿಯಲ್ಲಿ ಬರೆಯಬೇಕೆಂದು ಪ್ರಯತ್ನಿಸಿರುವುದೇನೊ ಕಾಣಬರುವುದು. ಆದರೆ, ಅಭಿಪ್ರಾಯಗಳು ಇದನ್ನು ಓದುವ ಸಾಮಾನ್ಯ ಜನರಿಗೂ ಸುಲಭವಾಗಿ ಅರ್ಥವಾಗುವಂತಿರಬೇಡವೆ?

ಪ್ರಸ್ತಾವನಾ ಪ್ರಕರಣದ ಶಿರೋನಾಮವು "ನನ್ನದೀ ಇಲ್ಲವೆ ನಾಂದೀ" ಎಂದು ಹೇಳಿರುವುದರ ಭಾವವೇನು? ಇದೇನು ಬರಿಯ ವಾಕ್ಚಮತ್ಕಾರವೇ? ಇದರಲ್ಲಿ ನಾಟಕಕಾರನಿಗೂ 'ಪರಮಾತ್ಮ'ನಿಗೂ ನಡೆಯುವ ಸಂಭಾಷಣೆಯ ಆಶಯವೇನು? ಈ ನಾಟಕದ ಹೆಚ್ಚು ಭಾಗವು ಮನೋರಮಾ ವಿದ್ಯಾಧರರ ಸಂಭಾಷಣೆಯಿಂದ ತುಂಬಿರುವುದು. ಮಿಕ್ಕ ವಿಷಯಗಳು ಅಷ್ಟು ಮುಖ್ಯವಾದುವು ಗಳಾಗಿ ಕಾಣುವುದಿಲ್ಲ. ಇವರಿಬ್ಬರಿಗೂ ಪ್ರೇಮ ಸಂಬಂಧವೆ? ಇಲ್ಲದೆ, ಪಾಶ್ಚಾತ್ಯ ರಲ್ಲಿರುವಂತೆ ಕೇವಲ ಸಾಮಾಜಿಕ ಸಂಬಂಧವೆ? ಭಾರತೀಯರಲ್ಲಂತು, ಅನ್ಯರಾದ ತರುಣ ತರುಣಿಯರಿಗೆ ಇಂತಹ ಏಕಾಂತವಾಸವು ಬಹಳ ನಿಂದಾಸ್ಪದವಾದುದು. ರಾತ್ರಿ ಸರಿಹೊತ್ತಿನಲ್ಲಿ ವಿದ್ಯಾಧರನು ಮನೋರಮೆಯೊಡನೆ ಏಕಾಂತವಾಗಿ ತಡೆಯಿಲ್ಲದೆ ಮಾತನಾಡುತ್ತಿರುವನಲ್ಲ! ಇಂತಹ ಘಟನೆಗಳನ್ನು ಹರಿಹರರಾಯನು ಪ್ರತ್ಯಕ್ಷ ವಾಗಿ ನೋಡಿದರೂ ಅಸಮಾಧಾನಪಡುವುದಿಲ್ಲ. ಕಾರಕೂನನಾದವನು ಮನೆಯ ಯಜಮಾನಿಯನ್ನು ಅಷ್ಟು ಸಲಿಗೆಯಿಂದ, ಏಕವಚನ ಪ್ರಯೋಗಮಾಡುತ್ತ, ಹಾಸ್ಯ ಮಾಡುವುದೆಂದರೇನು? ಕಾರಕೂನನ ಮಗ ಕಾಮಿಯೂ ಹರಿಹರರಾಯನ ಮಗಳು ಮೋಹಿನಿಯೂ ಚಿಕ್ಕವರಲ್ಲದಿದ್ದರೂ ರಾತ್ರಿಯ ಹೊತ್ತಿನಲ್ಲಿ ವಿಹಾರಕ್ಕೆ ಹೋಗುವುದೆಂದರೇನು? ಒಟ್ಟಿನಲ್ಲಿ, ಈ ಗ್ರಂಥಕರ್ತರು ಈ ಸಾಮಾಜಿಕ ನಾಟಕದಲ್ಲಿ ಸಮಾಜದ ಯಾವ ಕುಂದುಕೊರತೆಗಳನ್ನು ಸರಿಪಡಿಸಲು ಯತ್ನಿಸಿರುವರೋ ಅದು ನಮಗಂತು ತಿಳಿಯದು.

ಆಲೋಚನೆ ಮಾಡಿ ನೋಡಿದರೆ, ಈ ಗ್ರಂಥಕರ್ತರು ಒಬ್ಬ ಪ್ರಸಿದ್ಧ ಆಂಗ್ಲೇಯ ಸಾಮಾಜಿಕ ನಾಟಕ ಗ್ರಂಥಕರ್ತೃವಿನ ಯಾವುದೋ ಒಂದು ನಾಟಕವನ್ನು ಓದಿ

ಅಲ್ಲಿಯ ವಿಚಾರಗಳನ್ನು ನಮ್ಮ ಸಮಾಜಕ್ಕೆ ಹೊಂದಿಸಲು ಪ್ರಯತ್ನಪಟ್ಟಿರುವಂತೆ ತೋರುವುದು. ಮೂಲ ಗ್ರಂಥದಲ್ಲಿರುವಂತೆಯೇ ಅಲ್ಲಿಯ ಸಮಾಜದ ಚಿತ್ರವನ್ನು ಕೊಟ್ಟಿದ್ದರೂ, ಇಲ್ಲವಾದರೆ, ಸಂಪೂರ್ಣವಾಗಿ ಬದಲಾಯಿಸಿ ನಮ್ಮ ಸಮಾಜಕ್ಕೆ ಹೊಂದುವಂತೆ ಚಿತ್ರಿಸಿದ್ದರೂ, ಸಾಮಾನ್ಯ ಜನರಿಗೆ ಬಹಳ ಉಪಕಾರವಾಗುತ್ತಿದ್ದಿತು.

ಇತರ ಕನ್ನಡ ನಾಟಕ ಗ್ರಂಥಗಳಲ್ಲಿ ಕಾಣದಂತಹ ಇನ್ನೊಂದು ವಿಚಾರ: ಪ್ರತಿ ದೃಶ್ಯದ ಆರಂಭದಲ್ಲಿಯೂ, ಕೆಲವು ಕಡೆ ಮಧ್ಯದಲ್ಲಿಯೂ, ಸ್ಥಳ, ಕಾಲ ವಿಷಯಗಳನ್ನು ಸೂಕ್ಷ್ಮವಾಗಿ ನಿರ್ದೇಶಿಸುವುದಕ್ಕೆ ಬದಲಾಗಿ ಒಂದೊಂದು 'ಪ್ರಬಂಧ'ವೇ ಇರುವುದು. ಇಂತಹ 'ಪ್ರಬಂಧ'ಗಳು ಪ್ರಸಿದ್ಧ ಆಧುನಿಕ ಆಂಗ್ಲೇಯ ನಾಟಕ ಗ್ರಂಥಕರ್ತರು ಕೆಲವರ ಕೃತಿಗಳಲ್ಲಿ ಕಾಣಬರುವುವು.

ಭಾಷೆಯ ವಿಚಾರ.—ಇದು ಸಾಮಾನ್ಯವಾಗಿ ಮಾತನಾಡುವ ಭಾಷೆಯಾಗಿ, ಲಲಿತವಾಗಿದ್ದರೂ ಅಲ್ಲಲ್ಲಿ ಪದ ಚಿತ್ರಗಳಿಂದ ಕೂಡಿ ಒಗಟುಗಳಂತೆ ಪರಿಣಮಿಸುವುದು. ಉದಾಹರಣೆಗಾಗಿ—

ಪುಟ ೧೨—ಅವರ ಕೂಡ ನಾನು ಹೋಗುವದೆಂದರೆ ಅವರಿಗೆ ತೊಡಕು, ನನ್ನ ಕೆಡಕು, ಅವಸರದಲ್ಲಿ ಉಟ್ಟ ಒಲ್ಲಿ ನಾನು (ಕಳಕಳಿಯಿಂದ) ನನಗೆಯೆ ನಾಚಿಕೆ ಬರುವದು. ದೀಪದ ಕೆಳಗಿನ ಕತ್ತಲೆಯಂತೆ ಕವಿದಿರುವೆ.

ಪುಟ ೧೨—ಓದಿದ್ದನ್ನು ಬರೆಯುವದು ಕಳ್ಳ ವಿದ್ಯೆ; ಬರೆದದ್ದನ್ನು ಓದುವದು ಸುಳ್ಳು ವಿದ್ಯೆ.

ಪುಟ ೨೨—ಮನೋರಮಾ.—ನಿನಗೇನು ಅಂತಹ ಜೀವ ಹೋಗುವ ರೋಗಿಯು ಗಂಟುಬಿದ್ದಿದೆ.

ವಿದ್ಯಾಧರ.—ಗಂಟುಬಿದ್ದ ರೋಗಿಯಿಂದ ನನ್ನದೇ ಜೀವ ಹೋಗುವದಿದೆ. ಮನೋರಮಾ, ರಾಯರು ಹೇಳಿದ್ದು ಸುಳ್ಳಲ್ಲ. ನಿನಗೆ ಮನಸಿನ ಬೇನೆಯಾಗಿದೆ.

ಮನೋರಮಾ.—ನನ್ನ ಬೇನೆಗೆ ನಿನ್ನ ಮನಸಾಗಿದೆ.

ವಿದ್ಯಾಧರ.—ನಿನ್ನ ಮನಸಿಗೆ ನಾನೇ ಬೇನೆಯಾಗಿದ್ದರೆ ಇದೊ, ಹೊರಟೆ.

ಪುಟ ೫೧, ೫೨—ಪ್ರೇಮಕ್ಕೆ ಗೊತ್ತಿಲ್ಲ, ಗೊತ್ತಿಗೆ ಪ್ರೇಮವಿಲ್ಲ. ಪ್ರೇಮವೆ ಗೊತ್ತು. ಪ್ರೇಮವೆ ಸೊತ್ತು. ಪ್ರೇಮವೆ. . . . . . . . . . . . . . . . . . ಶರ್ಯತ್ತು!

ಪುಟ ೮೧—ಇದ್ದ ಮನೆ ಇಲ್ಲದಂತೆ ಮಾಡಿದಿ; ಇಲ್ಲದ ಸುಖವನ್ನು ಇರದಂತೆ ಮಾಡಿದಿ.

ಪುಟ ೯೦—ಎಂತಹ ವಿಚಾರದ ವೇಳೆಯಲ್ಲಿ ಎಂತಹ ವೇಳೆಯೆಂದು ವಿಚಾರಮಾಡುವಿರಲ್ಲವೆ?

ಮುಂದೆ ಕೊಡುವ ಪದ ಪ್ರಯೋಗಗಳು ಸುಷ್ಮುವಲ್ಲ:—

ಬೊಟ್ಟುಮಾಡಿ (ಪುಟ ೨); ನೋಡಿದಿಯಿಲ್ಲೊ? (೭); ನೀ ಪರಮಾತ್ಮ (೮); ಅಂಕು (೯); ಕೂಡ್ರು (೯); ಅಣಕಿನಿಂದ (೧೨); ನನ್ನಕಿಂತ (೧೩); ನಿಶ್ಯಂಕ (೧೪); ದೊಡ್ಡಿಸ್ತನ (೧೪); ಕೈಬೆತ್ತನ್ನು (೧೫); ಸಲುಹು (೧೭); ಇಬ್ಬನ್ನಿ (೧೯); ಕೋಮಲ ಕೈ (೧೯); ಬಹಳೇ (೨೨); ಜಾಗೆಯಲ್ಲಿ (೨೪); ಕ್ರೂರ ನಗೆ (೨೫); ಸ್ವತಃಕ್ಕೆ (೨೭); ದೂರಾಯಿತು (೨೭); ಹುಡುಗೆ (೨೭); ಕಂಕುಳದಲ್ಲಿ (೨೯); ಕಮನೀಯ ಕಣ್ಣು (೨೯); ತಲೆಶೂಲಿ (೪೦);

ಮದಿವೆ (೪೧); ಹಣಿಕಿಕ್ಕಿ (೪೮); ತಾವುಗಳಲ್ಲಿ (೫೧); ಒಂದು ಹೆಂಗಸು (೫೬); ಬಾಗಿಲದ ವರೆಗೆ (೬೩); ಸರಳ ಮಾತು (೭೩); ಹೆಚ್ಚೆಚ್ಚು (೭೬); ಕೋಮಲ ಬಳ್ಳಿ (೯೧); ಎಡು ಬಲ (೯೬); ಕಾಗದಿನಲ್ಲಿ (೧೦೫).

ಮೈಸೂರು ಪ್ರಾಂತದವರಿಗೆ ಅರ್ಥವಾಗದ ಪದಗಳು:—

ತಕ್ಕೆ (೯); ಕೀಸರ (೧೦); ಹರವಾಗಿ (೨೧); ಹೌಸ (೨೭); ಫಳಿ (೪೩); ತ್ವೇಷ (೭೯); ಕುನಸು (೮೨); ಹುದ್ದರಿ (೮೭); ತ್ರಾಸಿನಿಂದ (೮೮); ಚಪ್ಪಳಿಕ್ಕಿ (೯೧); ಕುಂಬಿ (೧೦೧); ಹೊಯ್ಮಾಲಿತನ (೧೧೧).

---

## ೨. ಸಾವಿನ ಸಮಸ್ಯೆ

(ಸಚಿತ್ರ)

ಲೇಖಕರು.—ವೆಂಬಾರ್ ವೆಂಕಟಾಚಾರ್ಯ, ಎಂ.ಎ., ಮೈಸೂರು.

ಪ್ರಕಾಶಕರು.—ಕರ್ಣಾಟಕ ಸಂಘ, ಮಹಾರಾಜರವರ ಕಾಲೇಜು, ಮೈಸೂರು.

ಕ್ರೌನ್ ಅಷ್ಟಪತ್ರ ಪುಟ ೬೪; ಬೆಲೆ ಹನ್ನೆರಡು ಆಣೆ; ೧೯೩೧.

ಇದೊಂದು ಸಾಮಾಜಿಕ ಗದ್ಯ ನಾಟಕ. ಇದು 'Twice is too Much' ಎಂಬ ಇಂಗ್ಲಿಷು ನಾಟಕವನ್ನನುಸರಿಸಿ ನಮ್ಮ ಸನ್ನಿವೇಶಗಳಿಗೆ ಸರಿಹೊಂದುವಂತೆ ಬರೆದಿರುವುದಾಗಿ ಮುನ್ನುಡಿಯಿಂದ ತಿಳಿಯುಬರುತ್ತದೆ. ನಮ್ಮಲ್ಲಿ ಹಾಸ್ಯರಸ ಪ್ರಧಾನವಾದ ನಾಟಕಗಳು ಬಹಳ ಕಡಿಮೆ; ಇಲ್ಲವೆಂದೇ ಹೇಳಬಹುದು. ಇಂತಹ ನಾಟಕಗಳನ್ನು ಪಾಶ್ಚಾತ್ಯರ ಭಾಂಡಾಗಾರದಿಂದ ಆರಿಸಿ ತೆಗೆದು, ಅವಕ್ಕೆ ನಮ್ಮ ಉಡುಪನ್ನು ತೊಡಿಸಿ, ನಮ್ಮ ಸನ್ನಿವೇಶಗಳಿಗೆ ಒಪ್ಪುವಂತೆ ರಚಿಸಿದಲ್ಲಿ ನಮ್ಮ ಸಾಹಿತ್ಯ ಭಾಂಡಾಗಾರದ ಅಭಿವೃದ್ಧಿಗೆ ಬಹಳ ಸಹಾಯಮಾಡಿದಂತಾಗುವುದು. ಇಂಗ್ಲಿಷು ಭಾಷೆಯಲ್ಲಿ ಪಾಂಡಿತ್ಯವನ್ನು ಗಳಿಸಿದ ನಮ್ಮ ಯುವಕರು ಇಂತಹ ಕೆಲಸಕ್ಕೆ ಕೈ ಹಾಕುತ್ತಿರುವುದು ಶುಭ ಸೂಚಕವೇ ಸರಿ.

ಈ ಗ್ರಂಥದ ಭಾಷೆಯು ಸ್ವಾಭಾವಿಕವಾಗಿ ಮಾತನಾಡುವ ಭಾಷೆಯಾಗಿದೆ; ಕೇವಲ ಗ್ರಾಂಥಿಕವಲ್ಲ; ಆದುದರಿಂದ ಓದಲು ತೊಡಕಿಲ್ಲದೆ ಅಂದವಾಗಿದೆ. ಸನ್ನಿವೇಶಗಳೂ ತಕ್ಕಂತೆ ಚಿತ್ರಿತವಾಗಿವೆ. ಆದರೆ ಅಷ್ಟು ಪ್ರಸಿದ್ಧ ವಿಕಟ ಕವಿಯಾದ ತೆನ್ನಾಲಿ ರಾಮಕೃಷ್ಣನು ಇಲ್ಲಿ ಮಾಡಿರುವಂತೆ ತೋರಿಸಿರುವ ವಿನೋದವೂ, ಅಷ್ಟು ಪ್ರತಿಭಾಶಾಲಿಗಳಾದ ಕೃಷ್ಣದೇವರಾಯರೂ ಅಪ್ಪಾಜಿಯೂ ರಾಮಕೃಷ್ಣನು ಮಾಡಿದ ಇಂತಹ 'ಪೆಚ್ಚಾದ' ವಿನೋದಕ್ಕೆ ಮೋಸಹೋದುದೂ ಅಷ್ಟೇನೂ ಗಂಭೀರವಾಗಿರುವಂತೆ ತೋರುವುದಿಲ್ಲ. ಗೋಲ್ಕೊಂಡದ ವರ್ತಕರನ್ನು ವಿಚಾರಣೆ ಮಾಡದೆ ಅಷ್ಟು ಕಾಠಿಣ್ಯದಿಂದ ಶಿಕ್ಷಿಸುವುದು ಕೃಷ್ಣದೇವರಾಯರ ಉದಾರ ಸ್ವಭಾವಕ್ಕೆ ಒಪ್ಪುವಂತಿಲ್ಲ.

---

## ೩. ಪ್ರಭುದೇವರ ವಚನಗಳು

ಸಂಪಾದಕರು.—ರಾವ್ ಸಾಹೆಬ್ ಫ. ಗು. ಹಳಕಟ್ಟಿ, ಬಿ.ಎ., ಎಲ್‌ಎಲ್.ಬಿ.
ವಿಜಾಪುರ.

ಮುದ್ರಣಕಾರರು.—ಹಿತಚಿಂತಕ ಪ್ರಿಂಟಿಂಗ್ ಪ್ರೆಸ್, ವಿಜಾಪುರ.

ರಾಯಲ್ ಅಷ್ಟಪತ್ರ ಪುಟಗಳು ೩೩೩; ಬೆಲೆ ೨|೦ ರೂಪಾಯಿ; ೧೯೩೧.

ಇದು 'ಶಿವಾನುಭವ ಗ್ರಂಥಮಾಲೆ'ಯ ೮ನೆಯ ಪುಸ್ತಕ. ಇದು ವೀರಶೈವರ ವೇದಾಂತ ಗ್ರಂಥ. ಈ ವಚನಗಳನ್ನು 'ಕನ್ನಡ ಉಪನಿಷತ್ತು'ಗಳೆಂದು ಕೆಲವರು ಪಂಡಿತರು ಕರೆದಿರುತ್ತಾರೆ. ಈ ಗ್ರಂಥದಲ್ಲಿ ೧೧ 'ಸ್ಥಲ'ಗಳೂ ಒಟ್ಟು ೬೯೩ ವಚನಗಳೂ ಇವೆ. ಇವಲ್ಲದೆ, "ಪ್ರಭುದೇವರ ಇನ್ನೂ ಅಸಂಖ್ಯ ವಚನಗಳಿ"ರುವುವೆಂದೂ, ಅವನ್ನೂ ಪ್ರಕಟಿಸುವ ಯೋಚನೆಯಿರುವುದೆಂದೂ ಸಂಪಾದಕರು ತಮ್ಮ ಪ್ರಸ್ತಾವನೆಯಲ್ಲಿ ಹೇಳಿರುತ್ತಾರೆ. ಈ ಗ್ರಂಥದಲ್ಲಿಯ ವಚನಗಳು ಸೂತ್ರಪ್ರಾಯವಾಗಿ ಒಗಟುಗಳಂತಿರುವುವು; ಇವಕ್ಕೆ ಟೀಕೆಯನ್ನೂ ಕೊಟ್ಟಿದೆ.

ಮೊದಲನೆಯ ಆರು ಸ್ಥಲಗಳಲ್ಲಿಯ ವಚನಗಳಿಗೆಲ್ಲ ಒಟ್ಟಾಗಿ ಸಂಖ್ಯೆಯನ್ನು ಕೊಟ್ಟು, ಮುಂದಣ ಸ್ಥಲಗಳು ಪ್ರತಿಯೊಂದಕ್ಕೂ ಬೇರೆ ಬೇರೆ ಸಂಖ್ಯೆಯನ್ನು ಕೊಟ್ಟಿರುವುದಕ್ಕೆ ಕಾರಣ ತಿಳಿಯಲಿಲ್ಲ. ಯಾವ ಸ್ಥಲದ ಕೊನೆಯಲ್ಲಿಯೂ ಕೊಡದೆ ಕಡೆಯ ಎರಡು ಸ್ಥಲಗಳ ಕೊನೆಯಲ್ಲಿ ಮಾತ್ರ ಗದ್ಯಗಳನ್ನು ಕೊಟ್ಟಿದೆ.

ಕೆಲವು ಭಾಷೆಯ ತಪ್ಪುಗಳೂ ಮುದ್ರಣದ ತಪ್ಪುಗಳೂ ಅಲ್ಲಲ್ಲಿ ಕಾಣಬರುವುವು; ಆದರೆ ಹೆಚ್ಚಾಗಿಲ್ಲ. ಉದಾಹರಣೆಗಾಗಿ—

ಪುಟ ೧—ವಾಙ್ಮನಾತೀತ; ಪುಟ ೩—ವಿಶ್ರಾಪಸವನ್ನೈದಿ; ಪುಟ ೮—ಸೃಷ್ಟ್ಯಾರ್ಥ ಕಾರಣವಾಗಿ; ಪುಟ ೯—ಅನಲಂಗೆ ಅಂಗವಿಲ್ಲ. ದಂಗನೆ ಸತಿಯಾಗಿಪ್ಪಳು; ಪುಟ ೯—ಚಿತ್ಮಕ್ತಿ; ಪುಟ ೧೦—ಮಾಯಾಬಲೆ; ಪುಟ ೩೬—ಹ್ಯೇಯ; . . . . . ಪುಟ ೧೪೬—ಶಿಸು.

ಒಂದು ಪಙ್ಕ್ತಿಯಿಂದ ಮತ್ತೊಂದು ಪಙ್ಕ್ತಿಗೆ ಒಂದು ಪದದ ಭಾಗವನ್ನು ಸಾಗಿಸುವಾಗ ಇಂಗ್ಲಿಷಿನಲ್ಲಿ ಆ ಪದವನ್ನು ತಕ್ಕೆಡೆಯಲ್ಲಿ ಒಡೆದು ಮುಂದಕ್ಕೆ ಸಾಗಿಸುತ್ತಾರೆ. ಕನ್ನಡದಲ್ಲಿಯೂ ಅದೇ ರೀತಿಯಾಗಿ ಮಾಡುವುದು ಆವಶ್ಯಕವೆಂದು ತೋರುವುದು.—

ಈ ಗ್ರಂಥದಲ್ಲಿ—ಪುಟ ೧೧.—ಜನನಕ್ಕೆಮೂ ಲವಾವುದೆಂದೊಡೆ; ಪುಟ ೧೪—ಇಂತೀತ ತ್ವತ್ರಯಂಗಳಿಗೆ; ಪರಿಯಾ ಶ್ರಮದಲ್ಲಿ.

ಮಾದರಿಗಾಗಿ ಎರಡು ವಚನಗಳನ್ನು ಉದಾಹರಿಸುವೆವು :—

ಪು. ೧೪, ವ. ೧೬—ನೆಲದ ಬೊಂಬೆಗೆ ಜಲದ ಬಣ್ಣವನುಡಿಸಿ ಹಲವು ಪರಿಯಾಶ್ರಮದಲ್ಲಿ ಉಲಿವ ಗೆಜ್ಜೆಯ ಕಟ್ಟಿ ವಾಯುವನಲನ ಸಂಚಕ್ಕೆ ಅರಳೆಲೆಯ ಶೃಂಗಾರವ ಮಾಡಿ ಆಡಿಸುವ ಯಂತ್ರವಾಹಕನಾರೋ ? ಬಯಲ ಕಂಭಕ್ಕೆ ತಂದು ಸಯವೆಂದು ಪರವ ಕಟ್ಟಿದಡೆ ಸಯುವದ್ವಯವಾಯಿತ್ತು. ಏನೆಂಬೆ ಗುಹೇಶ್ವರಾ ?

ಪು. ೧೫೨, ವ. ೧೨೬—ಚಿಕ್ಕ ನುಂಗಿದ ಕೋಳಿ ಸತ್ತು ಕೂಗಿತ್ತ ಕಂಡೆ, ಕೋಗಿಲೆ ಒಂದು ರವಿಯ ನುಂಗಿತ್ತ ಕಂಡೆ, ಸೆಜ್ಜೆ ಬಂದು ಶಿವದಾರ ಉಳಿಯಿತ್ತು. ಪ್ರಾಣಲಿಂಗವೆಂಬ ಶಬ್ದ ವೃತಗೇಡಿ ಯಾಯಿತ್ತು. ನೀರಮೇಲಣ ಹೆಜ್ಜೆಯಸಾರು ಬಲ್ಲವರಿಲ್ಲ ಗುಹೇಶ್ವರನೆಂಬ ಶಬ್ದವಲ್ಲಿಯೂ ಇಲ್ಲ ಇಲ್ಲಿಯೂ ಇಲ್ಲ.

---

## ೪. ಶೂದ್ರಕ

ಲೇಖಕರು.—ಬ್ರಹ್ಮಶ್ರೀ ವಿದ್ವಾನ್ ಪಾಸ್ಯಂ ಸುಂದರಶಾಸ್ತ್ರಿಯವರು, ಮದ್ರಾಸು.
ಮುದ್ರಣಕಾರರು.—ಕೊಡಿಯಾಲಬೈಲು ಪ್ರೆಸ್ಸು, ಮಂಗಳೂರು.
ಕ್ರೌನ್ ಅಷ್ಟಪತ್ರ ಪುಟಗಳು ೧೮೮ ; ಬೆಲೆ ಒಂದು ರೂಪಾಯಿ ; ೧೯೩೨.

ಇದೊಂದು ಕಾದಂಬರಿ. "ಈ ಗ್ರಂಥವು ಉಜ್ಜಯಿನೀ ನಗರಾಧೀಶ್ವರ ನಾಗಿದ್ದ ಶೂದ್ರಕನ ಚರಿತ್ರೆಯನ್ನೊಳಗೊಂಡಿರುವ ಕಥಾನಕವು. ಹಿಂದಣ ಕಾಲದಲ್ಲಿ ನಮ್ಮ ಭರತಖಂಡದಲ್ಲಿ ಪ್ರಚುರಗೊಂಡಿದ್ದ ಕಲೆಗಳು ಈಗ ಎಷ್ಟರ ಮಟ್ಟಿಗೆ ಮಾಲಿನ್ಯ ವನ್ನು ಪಡೆದಿವೆ? ಆ ಕಾಲದಲ್ಲಿ ಕಲೆಗಳಿಗೂ ಕಲಾ ವಿಶಾರದರಿಗೂ ಎಷ್ಟರ ಮಟ್ಟಿನ ಪ್ರೋತ್ಸಾಹವೂ ಮನ್ನಣೆಯೂ ದೊರೆಯುತ್ತಿದ್ದಿತು?—ಎಂಬೀ ಮುಂತಾದ ವಿಷಯ ಗಳನ್ನು ನಮ್ಮ ತರುಣರು ಅವಗಾಹನೆಗೆ ತಂದುಕೊಂಡು ಮರಳಿ ಅವುಗಳನ್ನು ಉಜ್ಜೀವನಗೊಳಿಸಲು ಪ್ರಯತ್ನಿಸಿದಲ್ಲಿ ಜೀರ್ಣಾವಶಿಷ್ಟಗಳಾದ ನಮ್ಮ ಕಲೆಗಳು ಸ್ವಲ್ಪಮಟ್ಟಿಗಾದರೂ ತಲೆ ಎತ್ತಲು ಅವಕಾಶವಾಗುವುದೆಂಬ ಭಾವನೆಯಿಂದಲೇ ಈ ಕಥಾನಕವನ್ನು ಕನ್ನಡಿಗರ ಮುಂದೆ ಇರಿಸಿರುವೆನು. ಅಶ್ವ ಶಾಸ್ತ್ರ, ಗಜ ಶಾಸ್ತ್ರ, ಯುದ್ಧ ವಿದ್ಯೆ, ಆಯುಧ ನಿರ್ಮಾಣ, ಪುರ ನಿರ್ಮಾಣ, ದುರ್ಗ ವಿನ್ಯಾಸ, ಚಿತ್ರ ಲೇಖನ, ವಿಷ ವೈದ್ಯ ಮುಂತಾದ ವಿಷಯಗಳಲ್ಲಿ ಎಷ್ಟು ಗ್ರಂಥಗಳು ರಚಿತವಾಗಿದ್ದುವೆಂಬ ವಿಷಯವು ಈ ಕಥಾನಕದಲ್ಲಿ ಅಲ್ಲಲ್ಲಿ ಸಮಯೋಚಿತವಾಗಿ ಸೂಕ್ಷ್ಮ ರೀತಿಯಿಂದ ವರ್ಣಿತವಾಗಿರುವುದು" ಎಂದು ಲೇಖಕರು ತಮ್ಮ "ವಿಜ್ಞಾಪನೆ"ಯಲ್ಲಿ ಹೇಳಿ ರುತ್ತಾರೆ.

ಹಿಂದಣ ಆಖ್ಯಾಯಿಕೆಗಳಲ್ಲಿ ರಾಜನಾಗಿಯೂ ಕವಿಯಾಗಿಯೂ ಉಲ್ಲೇಖಿ ಸಲ್ಪಟ್ಟಿರುವ ಶೂದ್ರಕನೂ ಈ ಕಾದಂಬರಿಯ ಶೂದ್ರಕನೂ ಒಬ್ಬನೇ ಅಲ್ಲವೆಂದು ತೋರುವುದು. ಇಲ್ಲಿ ಶೂದ್ರಕನು ಬ್ರಾಹ್ಮಣ, ವೇದಾಧ್ಯಯನ ಸಂಪನ್ನ, ಶೂರ.

ಕಾದಂಬರಿಗಳಲ್ಲಿ ಸಾಮಾನ್ಯವಾಗಿ ನಾಯಕ ನಾಯಿಕೆಯರ ಪ್ರೇಮ ವಿಚಾರವೂ, ಅವರಿಗೊದಗುವ ಕಷ್ಟಪರಂಪರೆಗಳೂ—ಇವೇ ಕಥೆಯ ಮುಖ್ಯಾಂಶಗ ಳಾಗಿರುವುದು ರೂಢಿಯಲ್ಲಿರುವಂತೆ ಈ ಕಾದಂಬರಿಯಲ್ಲಿಯೂ ಇರುವುದು. ವರ್ಣನೆ ಗಳು, ಸನ್ನಿವೇಶ ಕಲ್ಪನೆ, ಆಯಾ ಪಾತ್ರಕ್ಕೆ ಹೊಂದುವಂತಹ ನಡೆ ನುಡಿಗಳು— ಇವೆಲ್ಲವೂ ಪ್ರೌಢವಾಗಿ ಚಿತ್ರಿತವಾಗಿವೆ. ಕೆಲವು ಅಮಾನುಷ ಕೃತ್ಯಗಳು ವರ್ಣಿತ ವಾಗಿದ್ದರೂ ಅವು ಸಂದರ್ಭಕ್ಕೆ ಹೊಂದಿಕೆಯಾಗುವಂತಿವೆ. ಭಾಷೆಯು ಗಂಭೀರ

ವಾಗಿಯೂ, ಪ್ರೌಢವಾಗಿಯೂ, ವ್ಯಾಕರಣ ಬದ್ಧವಾಗಿಯೂ, ಕ್ಲಿಷ್ಟವಿಲ್ಲದೆಯೂ ಇದೆ.

ಅಲ್ಲಲ್ಲಿ ಕೆಲವು ಸ್ಖಾಲಿತ್ಯಗಳೂ ಮುದ್ರಣದ ದೋಷಗಳೂ ಕಂಡುಬರುವುವು. ಕಥೆಯನ್ನು ಪ್ರಕರಣಗಳಾಗಿ ವಿಭಾಗಿಸಿಲ್ಲ. ಇದೊಂದು ಕೊರತೆಯೆಂದೇ ಹೇಳಬೇಕು.

ಮುಂದೆ ಕೊಡುವ ಪದಪ್ರಯೋಗಗಳು ಸುಷ್ಠುವೆಂದು ಹೇಳಲಾಗುವುದಿಲ್ಲ:—

ಪುನಶ್ಚರಣ (ಪುಟ ೩); ಕಾಳಗ (೫); ತಡಿಸಲಾರದೆ (೩೨); ಮುಂದರಿಸು (೩೯); ಅಧಪತನ (೪೭); ಕಳಂಕು (೬೨); ಕಂಬನಿಮಳೆಕರೆಯುತ್ತ (೬೮); ಅನ್ಯಣ್ಯ (೭೧); ಕಳ್ಳಕಾರರು (೭೪); ಬರಹ (೭೬); ಗೊರಸೆ (೭೭); ಕಿವಿಕೊಡಬಾರದು (೮೦); ವಿಧಿತ (೮೬); ಆಭಿಜಾತ್ಯ (೯೧); ನೆನ್ನೆ (೯೯); ಸರುಹೊತ್ತು (೧೦೧); ಅವಶ್ಯಕತೆ (೧೦೬); ಜ್ಯೋಪಾನ (೧೧೩); ಚಿತ್ರಪಠ (೧೧೩); ಬಿಜಗೈದ (೧೧೫); ಮರೆಮಾಚಿಸು (೧೧೯); ತೆಗೆಸಿ (೧೨೧); ಉಡುಗೆರೆ (೧೨೯); ವಜ್ರಸರಿ (೧೩೦); ಮಾಯವಾಗಿಬಿಟ್ಟಿಯಲ್ಲಾ (೧೬೭); ಲೇಖನಿ (೧೮೮).

ಸಲುವಾಗಿ (೧೧೧); ಪಾರಾಗು (೫೬); ಮುಂದರಿಸು (೧೨೫)—

ಈ ಪದಗಳು ಈ ಪುಸ್ತಕದಲ್ಲಿ ಅನೇಕ ಕಡೆ ಪ್ರಯೋಗವಾಗಿವೆ. ಧಾರವಾಡ ಪ್ರಾಂತದಲ್ಲಿ ಇವು ಬಹಳ ರೂಢಿಯಲ್ಲಿರುವುವು. ಇವು ಸುಷ್ಠುವಾದ ರೂಪಗಳೇ?

ಪುಟ ೨೪—"ಎಲೋ ಹಾರುವಾ! ಪರಶುರಾಮನಲ್ಲವೇ ಹರಿಶ್ಚಂದ್ರನಿಂದ ಸೋತು, ದುರ್ಯೋಧನನ ಅಡಿಯಾಳಾಗಿ, ರಾವಣನ ಸಭೆಯಲ್ಲಿ ಹೊಗಳುಭಟ್ಟನಂತೆ ಜೀವಿಸುತ್ತಿದ್ದು, ದ್ರೌಪದಿಯ ಪುರೋಹಿತನಾಗಿ, ಅಲ್ಲಿಯೂ ಹೊಟ್ಟೆತುಂಬದೆ, ವ್ಯಾಸನುಹರ್ಷಿಗೆ ಪುರಾಣಗಳನ್ನು ಹೊಸೆದು ಕೊಟ್ಟು, ಭಿಕ್ಷಾನ್ನದಿಂದ ಜೀವಿಸಿ, ಕೊನೆಗೆ ಅಭಿಮನ್ಯುವಿನಿಂದ ಪರಾಜಿತನಾದುದು!"

ಈ ವಿಚಾರಗಳು ಎಲ್ಲಿ ಹೇಳಿವೆಯೋ ನಮಗೆ ತಿಳಿಯದು.

ಪುಟ ೬೭—"ಕಷ್ಟಕ್ಕೆ ಸಿಕ್ಕಿದವನೇ ದೇವರು"

ಇದಕ್ಕೆ ವಿಪರೀತಾರ್ಥವನ್ನು ಮಾಡಬಹುದು.

ಪುಟ ೭೫—"ಪರಿವಾರದವರು ಒಬ್ಬೊಬ್ಬರಾಗಿ ತಂತಮ್ಮ ಸಂಕೇತ ಸ್ಥಾನವನ್ನು ಬೇರೆಬೇರೆ ಮಾರ್ಗವಾಗಿ ಬಂದು, ಕಾರಾಗೃಹದ ಹೆಬ್ಬಾಗಿಲಿನ ಬಳಿ ಸುಮಾರು ೫೦೦ ಮಂದಿ ವೀರ ಪುರುಷರು ಬಂದು ಸೇರಿದರು.

ಈ ವಾಕ್ಯವು ವ್ಯಾಕರಣ ಬದ್ಧವಾಗಿಲ್ಲ.

ಪುಟ ೧೦೩—(a) "ಇವರ ಮೂಲಕವಾಗಿ ಅವರನ್ನು ನಾವಿಬ್ಬರು ಸಂದರ್ಶಿಸಿದೆವು."

ಪುಟ ೧೨೮—(b) "ಎಲ್ಲರನ್ನು ಕಳುಹಿ"; ಪುಟ ೧೩೧—ಎಲ್ಲವನ್ನು ಮರೆತು.

ಪುಟ ೧೪೬—"ಇನ್ನು ಇಂತಹ ದೃಷ್ಟಾಂತಗಳು ಅನೇಕವಾಗಿರುವುವು."

'ನಾವಿಬ್ಬರ**ೂ**, ಎಲ್ಲರ**ನ್ನೂ**, ಎಲ್ಲವ**ನ್ನೂ**, ಇ**ನ್ನೂ**' ಎಂದಿರಬೇಕಲ್ಲವೆ?

ಇಂತಹ ಪ್ರಯೋಗಗಳು ಈ ಪುಸ್ತಕದಲ್ಲಿ ಅನೇಕ ಕಡೆ ಬಂದಿವೆ. ಸಮುಚ್ಚಯವಿರಬೇಕಾದ ಸಂದರ್ಭದಲ್ಲಿ ಅವನ್ನು ಬಿಡುವುದರಿಂದ ಅರ್ಥವು ಸ್ಪಷ್ಟವಾಗುವುದಿಲ್ಲ.

---



## ೫. ಪಾರ್ವತಿ

ಲೇಖಕರು.—ನಾರಾಯಣ ವೆಂಕಟೇಶ ಕುರಡಿ, ಧಾರವಾಡ.

ಮುದ್ರಣಕಾರರು.—ಜಯಕರ್ನಾಟಕ ಮುದ್ರಣಾಲಯ, ಧಾರವಾಡ.

ಕ್ರೌನ್ ಅಷ್ಟಪತ್ರ ಪುಟಗಳು ೭೨ ; ಬೆಲೆ ೮ ಆಣೆ ; ೧೯೩೧.

ಇದು 'ಕರ್ಣಾಟಕ ಹಿತೈಷಿಣೀ ಗ್ರಂಥಮಾಲೆ'ಯ ಪಂಚಮ ಪುಷ್ಪದ ದ್ವಿತೀಯ ಮುದ್ರಣ. "ಈ ಸಂಪಾದಕರು ಪ್ರಸಿದ್ಧವಾದ ಪೌರಾಣಿಕ ಮತ್ತು ಐತಿಹಾಸಿಕ ಕಥೆಗಳಿಗೆ ಆಧುನಿಕ ಸ್ವರೂಪವನ್ನು ಕೊಟ್ಟು ನಮ್ಮ ಕರ್ನಾಟಕದ ಬಾಲಬಾಲಿಕೆಯರ ಮುಂದಿರಿಸುವ ಸ್ತುತ್ಯವಾದ ಕಾರ್ಯವನ್ನು ಕೈಕೊಂಡಿರುವರು" ಎಂದೂ, "ಕನ್ನಡದ ಏಕೀಕರಣವೇ ನಮ್ಮ ಗುರಿ" ಎಂದೂ ಪೀಠಿಕೆಯಲ್ಲಿ ಹೇಳಿದೆ. ಮುಖಪತ್ರದಲ್ಲಿ ಮಹಾದೇವನ ಸುಂದರವಾದ ಬಣ್ಣದ ಚಿತ್ರವಿದೆ; ಪುಸ್ತಕದಲ್ಲಿ ಮತ್ತೆರಡು ಅಂದವಾದ ಚಿತ್ರಗಳಿವೆ.

ಈ ಗ್ರಂಥದ ಭಾಷೆಯೂ ಶೈಲಿಯೂ ಅಂದವಾಗಿಯೂ ಪ್ರೌಢವಾಗಿಯೂ ಇವೆ; ವರ್ಣನೆಗಳೂ ಕಥಾ ಸಂವಿಧಾನವೂ ಗಂಭೀರವಾಗಿವೆ. ಅನುಭವ ವಿಶಿಷ್ಟವಾದ ಲೋಕ ವ್ಯವಹಾರದ ಧರ್ಮಸ್ವರೂಪವನ್ನು ಸಂಭಾಷಣಗಳ ಮೂಲಕ ಸುಲಭವಾಗಿ ಬೋಧಿಸಬೇಕೆಂಬ ಲೇಖಕರ ಪ್ರಯತ್ನವು ತಕ್ಕಮಟ್ಟಿಗೆ ಸಫಲವಾಗಿರುವುದು.

ಕೆಲವು ಮುದ್ರಣದ ದೋಷಗಳು ಅಲ್ಲಲ್ಲಿ ಕಾಣಬರುವುವು. ಒಂದು ಪಙ್ಕ್ತಿಯ ಕೊನೆಯಲ್ಲಿ ಬರುವ ಪದದ ಭಾಗವನ್ನು ಮುಂದಣ ಪಙ್ಕ್ತಿಗೆ ಸಾಗಿಸುವಾಗ, ಇಂಗ್ಲಿಷಿನಲ್ಲಿರುವಂತೆ, ಪದವನ್ನು ತಕ್ಕ ಎಡೆಯಲ್ಲಿ ಒಡೆಯಬೇಕು. ಇದಕ್ಕೆ ಲೇಖಕರು ಗಮನಕೊಟ್ಟಿಲ್ಲ. ಉದಾಹರಣೆಗಾಗಿ—

ಪುಟ ೧೨—ಪ್ರಪಂಚದಲ್ಲಿದ್ದವರು ಪರ　ಮಾರ್ಥವನ್ನು

ಪುಟ ೧೬—ಪ್ರಾತಃಕಾ　ಲದ

ಪುಟ ೧೮—ಕರ್ತವ್ಯವಿಮು　ಖಳನ್ನಾಗಿ

ಮುಂದೆ ಹೇಳುವ ಪದ ಪ್ರಯೋಗಗಳು ಸುಷ್ಠುವೆಂದು ತೋರುವುದಿಲ್ಲ:—

ಬೆಂಕೆ (ಪುಟ ೨); ಸಿರಿಗಂಹರ (೩); ಒಂದೊಂದು ಜ್ಯೋತಿರ್ಲಿಂಗಗಳು (೪); ತಪಶ್ಚರ್ಯೆ (೯); ಆಸ್ಥಿಕ (೧೨); ಹುಟ್ಟಾಕತ್ತಲೆಯಲ್ಲಿದ್ದವನು (೧೨); ಸಿಕ್ಕು (೧೨); ಪ್ರೇಮಲ (೧೫); ವಿದ್ಯುತ್‌ಶಕ್ತಿ (೨೧); ಮುಂದರಿಸು (೨೫); ತರ (೨೫); ದೂರಾಯಿತು (೨೭); ದೊರೆದ

(೨೭) ಅಂಥಲ್ಲಿ, ಇಂಥಲ್ಲಿ (೩೦); ಸದಾ ಸರ್ವದಾ (೩೧); ದೊರಕಿಸು (೩೧); ಅಡಿಗಿ (೩೨); ಮೊರೆಹೊಗು (೩೨); ಸಟೆದು (೩೭); ಪ್ರಿಯಕರಗಳ (೩೮); ಸೌಷ್ಟವ (೪೧); ಸಮಯವು ಸಾಧಿಸಿತು (೪೩); ಸುತ್ತುಕಡೆಗೆ (೪೩); ಹತ್ತಿಕ್ಕೆ (೪೫); ಸತಿಹೋಗುವೆನು (೪೭); ಬೆಳಿಸಿದ (೫೨); ಕಠಿಣ (೫೨).

ಮುಂದೆ ಹೇಳುವ ರೂಪಗಳು ಮೈಸೂರಿನವರಿಗೆ ಸರಿದೋರುವುದಿಲ್ಲ:—

ಎಚ್ಚರೊಡೆಯಿತು (೪); ತ್ರಿಶೂಲವನ್ನು ಚಲ್ಲಿ (೨೨); ಸೆರೆಗುಡುಕ (೨೯); ಹಾತೊರೆಯು (೩೩); ಒಮ್ಮೆಲಿ (೩೬).

ಈ ವಾಕ್ಯಗಳು ಸಮರ್ಪಕವಾಗಿಲ್ಲ:—

ಪುಟ ೨—ಮನಸ್ಸು ಶಾಂತವಾಗಿರುವಾಗ ಮಾತ್ರ ಅದಕ್ಕೆ ಯೋಗ್ಯಾಯೋಗ್ಯ ವಿಚಾರಗಳೂ ಕರ್ತವ್ಯಾಕರ್ತವ್ಯಗಳೂ ಸೂಚಿಸುವುವು.

ಪುಟ ೫೩—ಮಗಳನ್ನು ಹಲವು ಪರಿಯಿಂದ ಉಪದೇಶ ಮಾಡಿದಳು.

---

## ೬. ಅರವತ್ತುಮೂವರು ಪುರಾತನರು

ಲೇಖಕರು.—ಮಹಾರುದ್ರಪ್ಪ, ಮಹಾಲಿಂಗಪ್ಪ, ಮಿರ್ಜಿ, ಹುಬ್ಬಳ್ಳಿ.

ಪ್ರಕಾಶಕರು.—ಗುರುಸಿದ್ದಪ್ಪ, ಮಹಾಲಿಂಗಪ್ಪ, ಮಿರ್ಜಿ, ಬಿ.ಎ., ಎಲ್‌ಎಲ್.ಬಿ., ಹುಬ್ಬಳ್ಳಿ.

ಮುದ್ರಣಕಾರರು.—ಬೆಂಗಳೂರು ಯೂನಿವರ್ಸಲ್ ಪವರ್ ಪ್ರೆಸ್.

**ಡೆಮ್ಮೈ ಅಷ್ಟಪತ್ರ ಪುಟಗಳು ೨೯೨; ಬೆಲೆ ರೂ. ೨-೦-೦; ೧೯೩೧.**

ಇದು 'ತ್ರಿಷಷ್ಠಿ ಪುರಾತನ ವಿಲಾಸ'ವೆಂಬ ಗದ್ಯಾತ್ಮಕ ಗ್ರಂಥ; ಸುರಂಗ ಕವಿ ವಿರಚಿತವಾದ ಈ ಗ್ರಂಥವನ್ನು ಆಧಾರವಾಗಿಟ್ಟುಕೊಂಡು ಬರೆದುದು. ಈ ಪುರಾತನರು ಬಹಳವಾಗಿ ದ್ರಾವಿಡದೇಶದವರು; ಕೇವಲ ಶಿವಭಕ್ತರು; ಜನರ ಉದ್ಧರಣಾರ್ಥವಾಗಿಯೇ ತಮ್ಮ ಆಯುಷ್ಯವನ್ನು ಅರ್ಪಿಸಿದವರು. ಇವರ ಚರಿತ್ರೆಗಳನ್ನು ಓದುವುದರಿಂದ ಆಸ್ತಿಕರಲ್ಲಿ ದೈವಭಕ್ತಿಯು ಅಭಿವೃದ್ಧಿಹೊಂದುವುದು.

ಗ್ರಂಥದ ಭಾಷೆಯೂ ಶೈಲಿಯೂ ಅಂದವಾಗಿಯೂ ಸುಲಭವಾಗಿಯೂ ಇರುವುವು. ಅಲ್ಲಲ್ಲಿ ಕಾಣಬರುವ ಕೆಲವು ದೋಷಗಳನ್ನು ಪ್ರಕಾಶಕರು ಮುಂದಣ ಮುದ್ರಣದಲ್ಲಿ ನೇರ್ಪಡಿಸುವರೆಂದು ನಂಬುತ್ತೇವೆ.

---

## ೭. ಮಾನಸ ಸರೋವರ ಮತ್ತು ಕೈಲಾಸ ಕ್ಷೇತ್ರ

ಯಾತ್ರಾ ಪ್ರಕರಣವು (ಸಚಿತ್ರವು)

ಲೇಖಕರು.—ಪೌ॥ ಸಾ॥ ಶ್ರೀಕಂಠಶಾಸ್ತ್ರಿಗಳು, ಮೈಸೂರು.

ಮುದ್ರಣಕಾರರು.—ಶ್ರೀ ಸತ್ಯನಾರಾಯಣ ಪವರ್ ಪ್ರೆಸ್, ಮೈಸೂರು.

ಡೆಮ್ಮೈ ಅಷ್ಟಪತ್ರ ಪುಟಗಳು ೭೮; ಬೆಲೆ ೮ ಆಣೆ; ೧೯೩೨.

ಇದು ಮೈಸೂರು ಶ್ರೀಮನ್ಮಹಾರಾಜರವರು ಶ್ರೀಕೃಷ್ಣರಾಜ ಒಡೆಯರ್ ಬಹದ್ದೂರರವರು ಪ್ರಜೋತ್ಪತ್ತಿ ಸಂವತ್ಸರದಲ್ಲಿ ಬೆಳೆಯಿಸಿದ ಯಾತ್ರೆಯ ವರ್ಣನೆ. ಡಾ॥ ಎನ್. ರಂಗಾಚಾರ್ಯರವರು ಈ ವಿಷಯವಾಗಿ ಇಂಗ್ಲಿಷಿನಲ್ಲಿ ಬರೆದ ಗ್ರಂಥವನ್ನು ಆಧಾರವಾಗಿಟ್ಟುಕೊಂಡು ಲೇಖಕರು ಕನ್ನಡದಲ್ಲಿ ಈ ಗ್ರಂಥವನ್ನು ಬರೆದಿರುವಂತೆ ಹೇಳುತ್ತಾರೆ. ಈ ಪುಸ್ತಕದಲ್ಲಿ ಶ್ರೀಮನ್ಮಹಾರಾಜರವರ ಭಾವಚಿತ್ರವೂ, ೩೧ ಆಯಾ ಪ್ರಾಂತದಲ್ಲಿಯ ದೃಶ್ಯಗಳ ಚಿತ್ರಗಳೂ, ಪ್ರಯಾಣದ ದಾರಿಯನ್ನು ತೋರಿಸುವ ಒಂದು ನಕ್ಷೆಯೂ ಅಡಕವಾಗಿವೆ.

ವಿಷಯ ವರ್ಣನೆಯಲ್ಲಿ ಉತ್ಪ್ರೇಕ್ಷೆಯು ಬಹಳವಾಗಿರುವುದರಿಂದ ಭಾಷೆಯು ಪದ್ಯಕಾವ್ಯದ ಭಾಷೆಯಂತಿರುವುದು; ವಿಷಯಗಳೆಲ್ಲವನ್ನೂ ವಿಶದವಾಗಿ ವರ್ಣಿಸಿರುವುದರಿಂದ ಓದುಗರಿಗೆ ಈ ಪ್ರಯಾಣದ ವಿಚಾರಗಳು ಸ್ಪಷ್ಟವಾಗಿ ಮನದಟ್ಟಾಗುವುವು.

ಕೆಲವು ಉದಾಹರಣೆಗಳು.—

ಪುಟ ೨.—ಅತ್ತ ಹೊಗೆಯ ಬಂಡಿಯ ಪ್ರಯಾಣವು ಸಪರಿವಾರನಾದ ಶ್ರೀ ಕೃಷ್ಣನಂ ವಹಿಸಿದ ವೈನತೇಯನ ಪ್ರಯಾಣದಂತೆ ಶೀಘ್ರವಾಗಿ ಜರಿಗಿತು.

ಪುಟ ೩.—ಸಂಪತ್ತಿಗೆ ಆಧಾರಭೂತವಾದುದು ಭಂಗಾರವು. ಭಂಗಾರವು ಅಗ್ನಿಯಲ್ಲಿ ಉತ್ಪನ್ನವಾದುದು. ಆದುದರಿಂದ ಸಂಪತ್ತಿರುವ ಪ್ರದೇಶವು ಅಗ್ನಿ ಸಂಬಂಧವಾದುದು ಎಂಬುವುದನ್ನು ಸಿದ್ಧಾಂತಗೊಳಿಸುವಂತೆ ಪಟ್ಟಣವು ಅತ್ಯಂತ ಶಖೆಯನ್ನುಂಟುಮಾಡುತ್ತಲಿದ್ದಿತು.

ಅಲ್ಲಲ್ಲಿ ಮುದ್ರಣದ ದೋಷಗಳೂ ವ್ಯಾಕರಣಾನುಮತವಲ್ಲದ ಕೆಲವು ಪದ ಪ್ರಯೋಗಗಳೂ ದೊರೆಯುವುವು. ಉದಾಹರಣೆಗಾಗಿ.—

ಜರಿಗಿತು (ಪುಟ ೨); ಲೇಖಣೆ (೩); ಕಲ್ಪಿಸಿಕ್ಕೊಳ್ಳುವುದಾಗಿ (೩); ಸಂಪತ್ತಿನನಿಂದೊಡಗೂಡಿ (೩); ಶಖೆ (೩); ನಡವಳಿಕೆ (೩); ದುಃಖಾಃಗ್ನಿ (೪); ಮಧ್ಯಾನ್ಹ (೪); ಅಂದರೆ (೫); ಪಾಳಯ (೭)..........

---





## ೮. ಬಡತನದ ಬಾಳು

(ಮೂರು ಕತೆಗಳು)

ಲೇಖಕರು.—ಆನಂದ ಕಂದ, ಧಾರವಾಡ.

ಪ್ರಕಾಶಕರು.—ಜಯಕರ್ನಾಟಕ ಕಾರ್ಯಾಲಯ, ಧಾರವಾಡ.

ಕ್ರೌ ಅಷ್ಟಪತ್ರ ಪುಟಗಳು ೮೮ ; ಬೆಲೆ ಎಂಟು ಆಣೆ ; ೧೯೩೨.

ಇದು ಜಯಕರ್ನಾಟಕ ಗ್ರಂಥಮಾಲೆಯ ಎಂಟನೆಯ ಪುಷ್ಪ. ಇದರಲ್ಲಿ ಬಡತನದ ಸಂಸಾರಗಳ ಮೂರು ಚಿತ್ರಗಳನ್ನು ಸಹಜವಾಗಿ ವರ್ಣಿಸಿದೆ. ಪ್ರಕಾಶಕರ ''ನುಡಿ''ಯಲ್ಲಿ ಹೇಳಿರುವಂತೆ, ಈ ಕಥೆಗಳಲ್ಲಿ ''ಬಡತನದ ಹಲವು ತೊಡಕುಗಳಲ್ಲಿಯ ಕೆಲವನ್ನು ಮಾತ್ರ ಚಿತ್ರಿಸಿ ತೋರಿಸಲಾಗಿದೆ. ಕತೆಯ ಭಾಷೆಯು ಸಾಮಾನ್ಯವಾಗಿ ಕನ್ನಡ ನಾಡಿನ ಎಲ್ಲ ಕಡೆಯವರಿಗೂ ತಿಳಿಯುವಂತಹದು; ಆದರೆ ಮೂರನೆಯ ಕತೆಯಲ್ಲಿಯ 'ಚಂದಮ್ಮ'ನ ಮಾತು, ಉತ್ತರ ಕರ್ಣಾಟಕದ ಒಕ್ಕಲಿಗರ ಮನೆಮಾತನ್ನು ಅನುಸರಿಸಿದುದಾಗಿದೆ. ಅದರಲ್ಲಿಯ ಕೆಲ ಕೆಲವು ಪದ ಪ್ರಯೋಗಗಳು ಇನ್ನಿತರ ಕನ್ನಡಿಗರಿಗೆ ಅಪರಿಚಿತವಾದುವುಗಳಾದರೂ, ಅರ್ಥವಾಗಲಾರದಂತಹವೇನೂ ಅಲ್ಲವೆಂದು ನಮ್ಮ ಭಾವನೆ.''

ಭಾಷೆಯು ಅಂದವಾಗಿದೆ. ತಪ್ಪುಗಳು ಹೆಚ್ಚಾಗಿಲ್ಲದಿದ್ದರೂ ಅಲ್ಲಲ್ಲಿ ಒಂದೊಂದು ಕಾಣಬರುವುವು; ಕೆಲವು ಪದ ಪ್ರಯೋಗಗಳು ಮೈಸೂರು ಪ್ರಾಂತದಲ್ಲಿ ರೂಢಿಯಾದುವಲ್ಲ. ಉದಾಹರಣೆಗಾಗಿ—

ಮುಚ್ಚಿದ ಮುಟ್ಟಿಗೆ (ಪುಟ ೨); ಬರುವನ್ನು (೨); ಲಕ್ಕಣ್ಣನಿಗಿಂತ ಎರಡು ವರುಷಕ್ಕೆ ಕಿರಿಯವನು ಚಿಕ್ಕ (೩); ಪಂಜ (೪); ಯಾವುದೆಲ್ಲ ತಳಮಳ (೫); ಬೆಳತನಕ (೫); ಮುಗ್ಗಿಲಲ್ಲಿ (೫); ಕಲ್ಲುಕಂಟಕ (೬); ಗುಳದಾಳಿ (೭); ಮೊದಲಗಿತ್ತಿ (೮); ಎಣಿಸಿದರೆ (೯); ಬಿಡುಡಿದ (೧೦); ಏದೆ (೧೦); ಮಗನನ್ನಾನರೂ (೧೨); ಮಧ್ಯಾನ್ಹ (೧೩); ಬೆಳಗಿನಲ್ಲಿ (೧೩); ಒಂದೊಂದು ಮಾತುಗಳೂ (೧೪); ಗೋಮಾಂತಕ (೧೬); ಮುಗ್ಗಿಲ್ಲಾಸಿಗೆ (೧೮); ಮೆದುವಾಗಿದ್ದ (೧೮); ಸರಸಮಾತು (೧೯); ಮಲಗಿಬಿಟ್ಟಿದ್ದಾರೆ ಕಾಣುತ್ತದೆ (೨೦); ಹೊರಡಲೊಲ್ಲುವು (೨೩)..........

---

## ೯. ಅದನ್ನೇ ಉಂಡೇನು! ಕದ ತೆಗಿ!

ಲೇಖಕರು.—ವಿವೇಚನಾವಧಾನಿ, ಹೊಳೇನರಸೀಪುರ.

ಕ್ರೌ ಅಷ್ಟಪತ್ರ ಪುಟಗಳು ೫೬ ; ಬೆಲೆ ೪ ಆಣೆ.

ಇದು 'ವಿವೇಚನ ಗ್ರಂಥಮಾಲೆ' ಯ ನಾಲ್ಕನೆಯ ಗ್ರಂಥ. ''ಅದನ್ನೇ ಉಂಡೇನು, ಕದ ತೆಗಿ'' ಎಂಬ ಲೋಕೋಕ್ತಿಯನ್ನು ಉದಾಹರಿಸುವುದಕ್ಕಾಗಿ ಲೇಖಕರು ಈ ಪುಸ್ತಕದಲ್ಲಿ ಆರು ಕಥೆಗಳನ್ನು ಬರೆದಿರುತ್ತಾರೆ. ಇವುಗಳಲ್ಲಿರುವ

ವಿಷಯುಗಳೆಲ್ಲವೂ ನಮ್ಮ ಸಮಾಜದಲ್ಲಿ ಕಂಡುಬರುವ ಸಾಮಾನ್ಯ ವಿಷಯುಗಳೇ ಆದರೂ ಲೇಖಕರು ಅವನ್ನು ಎಲ್ಲರ ಮನಸ್ಸಿಗೂ ಹೊಳೆಯುವಂತೆ ಅಂದವಾಗಿ ಚಿತ್ರಿಸಿದ್ದಾರೆ. ನಮ್ಮ ಸಮಾಜದಲ್ಲಿ ರೂಢಮೂಲವಾಗಿರುವ ಕುಂದುಕೊರತೆಗಳನ್ನು ಹೀಗೆ ಚಿತ್ರಿಸಿ ಜನರ ಮುಂದೆ ಇಡುವುದರಿಂದ ಫಲವುಂಟೆಂಬುದರಲ್ಲಿ ಸಂಶಯವಿಲ್ಲ.

ಭಾಷೆಯು ಸಮರ್ಪಕವಾಗಿದ್ದರೂ, ತಪ್ಪುಗಳಿಲ್ಲದಂತೆ ಲೇಖಕರೂ ಪ್ರಕಾಶಕರೂ ಪ್ರಯತ್ನಪಟ್ಟು ನೇರ್ಪಡಿಸಿದಲ್ಲಿ ನಮ್ಮ ಭಾಷೆಯ ಗ್ರಂಥಗಳಿಗೂ ಇಂಗ್ಲಿಷು ಮೊದಲಾದ ಭಾಷೆಗಳ ಗ್ರಂಥಗಳಂತೆಯೇ ಮನ್ನಣೆ ದೊರೆಯದಿರದು.

---

## ೧೦. ಖಾದೀ ಮಹಿಮೆ

ಲೇಖಕರು.—ಎ. ಎನ್. ಸೂರ್ಯನಾರಾಯಣರಾಯರು, ಬೆಂಗಳೂರು.
ಪ್ರಕಾಶಕರು.—ಕಲಾ ಮಂದಿರ, ಬೆಂಗಳೂರು ನಗರ.

ಕ್ರೌನ್ ಅಷ್ಟಪತ್ರ ಪುಟಗಳು ೩೬; ಬೆಲೆ ೧ ಆಣೆ; ೧೯೩೨.

ಈ ಪುಸ್ತಕದಲ್ಲಿ, ಲೇಖಕರು ನಮ್ಮ ದೇಶದ ಪ್ರಾಚೀನ ವೈಭವವನ್ನೂ ಈಗಿನ ದುಃಸ್ಥಿತಿಯನ್ನೂ ಮನದಟ್ಟಾಗುವಂತೆ ವಿಶದವಾಗಿ ವಿವರಿಸಿ, ಖಾದಿಯ ಪ್ರಭಾವದಿಂದಲೇ ನಮ್ಮ ದೇಶದ ಏಳಿಗೆಯು ಪುನರುಜ್ಜೀವನವಾಗಬೇಕೆಂದು ಸಾರುತ್ತಾರೆ; ನೂಲು ತೆಗೆಯುವ ರೀತಿಯನ್ನೂ ಅದಕ್ಕೆ ಬೇಕಾದ ಸಲಕರಣೆಗಳನ್ನೂ ಚಿತ್ರಗಳ ಮೂಲಕ ವಿವರಿಸಿ ಈ ಕೆಲಸವನ್ನು ಎಲ್ಲರೂ ಕೈಕೊಂಡು ದೇಶಸೇವೆ ಮಾಡಬೇಕೆಂದು ಪ್ರೋತ್ಸಾಹವಚನಗಳಿಂದ ಸಲಹೆಕೊಡುತ್ತಾರೆ. ಇದರಲ್ಲಿ, ನಮ್ಮ ದೇಶದ ಬಟ್ಟೆಗೆ ಸಂಬಂಧಪಟ್ಟ ಅನೇಕ ವಿಷಯಗಳು ಸಹಜವಾಗಿ ವಿವರಿಸಲ್ಪಟ್ಟಿವೆ. ಎಲ್ಲರೂ ಓದಬೇಕೆಂದೇ ಪುಸ್ತಕಕ್ಕೆ ಒಂದೇ ಆಣೆಯ ಬೆಲೆಯನ್ನು ಹಾಕಿದ್ದಾರೆ.

---

## ೧೧. ಬಡವರ ಬಂಧು

(ಮಾಸ ಪತ್ರಿಕೆ)

ಸಂಪಾದಕರು.—ಮಂಗಳೂರು ಜಾರಪ್ಪನವರು ಮತ್ತು ಬಿ. ನರಸಪ್ಪನವರು,
ಹಂಪನಕಟ್ಟೆ, ಮಂಗಳೂರು.

ಸಂಪುಟ ೧, ಸಂಚಿಕೆ ೧; ೧ನೆಯ ಮೇ ೧೯೩೨; ಡೆಮ್ಮಿ ಚತುಷ್ಪತ್ರ ಪುಟಗಳು ೧೪;
ವಾರ್ಷಿಕ ಚಂದಾ ಒಂದು ರೂಪಾಯಿ (ಅಂಚೆಯ ವೆಚ್ಚ ನಾಲ್ಕಾಣೆ).

ಈ ಪತ್ರಿಕೆಯಲ್ಲಿ, "ಉಚ್ಚ ತರಗತಿಯ ಸಣ್ಣ ಕಥೆಗಳೂ, ಪದ್ಯಗಳೂ, ಧಾರ್ಮಿಕ ನೈತಿಕ ವಿಚಾರಗಳನ್ನೊಳಗೊಂಡ ಲೇಖನಗಳೂ ಬರುವುವು" ಎಂದೂ, "ಪತ್ರ ವ್ಯವಹಾರ, ಹಾಸ್ಯ, ವಿಮರ್ಶೆ, 'ಟಿಟ್ ಬಿಟ್ಸ್', ಒಳದೇಶ ವಿದೇಶ ವಾರ್ತೆಗಳೂ ಕೊಡಲ್ಪಡುವುವು" ಎಂದೂ ರಕ್ಷಾಪತ್ರದಲ್ಲಿ ತಿಳಿಸಿದೆ. ಪ್ರಕೃತ ಸಂಚಿಕೆಯಲ್ಲಿ, ಆಧುನಿಕ ಪದ್ಯಗಳು, ಸಣ್ಣ ಕಥೆಗಳು, 'ಕಾಮಶಾಸ್ತ್ರ, ಅಥವಾ

ಶಕ್ತಿಯ ಸಾಧನೆ'ಯ ವಿಚಾರ, ವಿನೋದ ತರಂಗ, ವರ್ತಮಾನ ತರಂಗ, ವಿಚಿತ್ರ ವಿಷಯ, ಹಾಸ್ಯಾನಂದ, ಆರೋಗ್ಯ ವಿಷಯಗಳು—ಇವೇ ಮೊದಲಾದುವನ್ನು ಸುಲಭವಾದ ಶೈಲಿಯಲ್ಲಿ ಬರೆದಿದೆ.

ಸಂಪಾದಕರು ತಮ್ಮ ಮುನ್ನುಡಿಯಲ್ಲಿ, "ನಾವು ಆಶಾವಾದಿಗಳು; ನಮ್ಮ ಆ ಅಭೀಷ್ಟಕ್ಕೆ ಬೆಂಬಲವಾಗಿ ಉದಾರಿಗಳಾದ ಪೋಷಕರೂ ಇರುವರು; ಸಾಕಷ್ಟು ವಾಚಕರೂ ಈಗಲೇ ಇರುವರು. ಇವರ ಸಹಾಯವು ನಮಗಿರುವಾಗ, 'ಬಡವರ ಬಂಧು'ವಿನ "ಬೆಳವಣಿಗೆಗೆ ರವಷ್ಟಾದರೂ ಎಡರು ಬರಲಾರದೆಂದೇ ನಮ್ಮ ಅಭಿಪ್ರಾಯ" ಎಂದು ಹೇಳಿರುತ್ತಾರೆ. ಇದು ಬಹಳ ಸಂತೋಷಕರವಾದ ವಿಷಯ. "ಬಡವರ ಬಂಧು"ವು ಚಿರಕಾಲ ಬಾಳಿ ಬಡವರನ್ನು ಬಲ್ಲಿದರನ್ನಾಗಿ ಮಾಡಲಿ ಎಂಬುದೇ ನಮ್ಮ ಹಾರಯ್ಕೆ.

---

## ೧೨. Annual Report of the Mysore Archæological Department for the year 1929

BY

PROF. M. H. KRISHNA, M.A., D.LITT. (LOND.),
*Director of Archæological Researches in Mysore.*

Demy 4to pp. 7+317; 1931. Printed at the Government Press, Bangalore.

ಮೈಸೂರು ಪ್ರಾಚ್ಯ ವಸ್ತ್ವನ್ವೇಷಣ ಇಲಾಖೆಯ ೧೯೨೯ನೆಯ ಇಸವಿಯ ವರದಿಯಿದು. ಇದರಲ್ಲಿ ಆ ಇಲಾಖೆಯ ಡೈರೆಕ್ಟರರಾದ ಡಾ|| ಎಂ. ಎಚ್. ಕೃಷ್ಣಯ್ಯಂಗಾರ್ಯರು ತಾವು ಆ ವರ್ಷದಲ್ಲಿ ಅನ್ವೇಷಣ ಮಾಡಿದ ಅನೇಕ ವಿಷಯಗಳನ್ನು ವಿಶದವಾಗಿಯೂ, ಮನೋಹರವಾಗಿಯೂ ಇಂಗ್ಲಿಷು ಭಾಷೆಯಲ್ಲಿ ವರ್ಣಿಸಿರುತ್ತಾರೆ. ಈ ವರದಿಯಲ್ಲಿ ಬಹಳ ಮುಖ್ಯವಾದ ವಿಷಯವು ಚಂದ್ರವಳ್ಳಿಯಲ್ಲಿ ಈ ಪಂಡಿತರು ನಡೆಯಿಸಿದ ಭೂಸಂಶೋಧನ ಕಾರ್ಯದ ವಿಚಾರ. ಇದರ ವಿಷಯವನ್ನು ಪರಿಷತ್ಪತ್ರಿಕೆಯ ಆಂಗೀರಸ ಸಂವತ್ಸರದ ಚೈತ್ರ ಮಾಸದ ಸಂಚಿಕೆಯಲ್ಲಿ (XVII, ೧, ಪುಟ ೬೪) ಸೂಕ್ಷ್ಮವಾಗಿ ತಿಳಿಸಿದೆ.

ಮೈಸೂರು ದೇಶದ ನಾನಾ ಭಾಗಗಳಲ್ಲಿ ಡೈರೆಕ್ಟರರೂ ಅವರ ಕೈಕೆಳಗಿನ ಅಧಿಕಾರಿಗಳೂ ಆ ವರುಷ ಸಂಚಾರ ಮಾಡಿ ಸಂಗ್ರಹಿಸಿದ ಅನೇಕ ಉಪಯುಕ್ತವಾದ ವಿಷಯಗಳನ್ನು ಇಲ್ಲಿ ವಿಶದವಾಗಿ ವಿವರಿಸಿರುವುದಲ್ಲದೆ ಅನೇಕ ದೇವಾಲಯಗಳ ಮತ್ತು ಅವುಗಳಲ್ಲಿಯ ಸುಂದರ ಮೂರ್ತಿಗಳ ಅಂದವಾದ ಇಪ್ಪತ್ತು ಚಿತ್ರಗಳನ್ನೂ, ಹೊಯ್ಸಳರ ಕಾಲದ ನಾಣ್ಯಗಳ ಚಿತ್ರವನ್ನೂ, ಅನೇಕ ಶಾಸನಗಳ ಪ್ರತಿಕೃತಿಗಳನ್ನೂ ಕೊಟ್ಟಿರುತ್ತಾರೆ. ಈ ವರದಿಯನ್ನು ಸಾವಧಾನವಾಗಿ ಓದುವುದರಿಂದ ಚರಿತ್ರೆಗೆ ಸಂಬಂಧಪಟ್ಟ ಅನೇಕ ಹೊಸ ವಿಷಯಗಳು ತಿಳಿಯಬರುವುವು.

---




ಶ್ರೀಃ

ಕರ್ಣಾಟಕ ಸಾಹಿತ್ಯ

ಪರಿಷತ್ಪತ್ರಿಕೆ



ಸಂಪುಟ ೧೭]  ಆಂಗೀರಸ ಸಂ॥ ಆಶ್ವಯುಜಮಾಸ  [ಸಂಚಿಕೆ ೩

# *ಕರ್ಣಾಟಕ ಶಿಕ್ಷಾ

## III. ಅವರ್ಗೀಯ ವ್ಯಂಜನಗಳು

ಅಕ್ಷರಗಳಲ್ಲಿ ಸ್ವರವೆಂದೂ ವ್ಯಂಜನವೆಂದೂ ಎರಡು ಬಗೆ. ಅವುಗಳನ್ನು ಉಚ್ಚರಿಸುವುದಕ್ಕೆ ಬೇಕಾದ ಪ್ರಯತ್ನದಲ್ಲಿ ವ್ಯತ್ಯಾಸವುಂಟು. ಸ್ವರೋಚ್ಚಾರಣೆಯಲ್ಲಿ ಬಾಯಿ ನಾಲಗೆಗಳ ಪ್ರಯತ್ನವು ಅಷ್ಟಿಲ್ಲ; ವ್ಯಂಜನಗಳು ಹುಟ್ಟುವಾಗ ಇವುಗಳ—ಅದರಲ್ಲಿಯೂ ನಾಲಗೆಯ—ಕಾರ್ಯವು ಹೆಚ್ಚು.

ವ್ಯಂಜನಗಳಲ್ಲಿ ವರ್ಗೀಯ ಅವರ್ಗೀಯ ಎಂದು ಎರಡು ಜಾತಿ. ಸ್ಥಾನ ಸಾಮಾನ್ಯದಿಂದ ವರ್ಗೀಯ ವ್ಯಂಜನಗಳಾಗಿವೆ. ಅವರ್ಗೀಯಗಳನ್ನು ಹೀಗೆ ವಿಂಗಡಿಸುವುದು ಸಾಧ್ಯವಿಲ್ಲವಾಗಿ ಅವುಗಳನ್ನು ಬೇರೆ ಗುಂಪು ಮಾಡಿದೆ. ಅಲ್ಲದೆ, ಅವರ್ಗೀಯಗಳನ್ನು ಉಚ್ಚರಿಸಲು ವರ್ಗೀಯ ವ್ಯಂಜನಗಳನ್ನು ಉಚ್ಚರಿಸುವುದಕ್ಕೆ ಬೇಕಾಗುವಷ್ಟು ಪ್ರಯತ್ನವು ಬೇಕಿಲ್ಲ. ಪ್ರಯತ್ನದ ದೃಷ್ಟಿಯಿಂದ ಅವರ್ಗೀಯ ವ್ಯಂಜನವು ಸ್ವರಕ್ಕೂ ವರ್ಗೀಯ ವ್ಯಂಜನಕ್ಕೂ ನಡುವೆ ಇದೆಯೆಂದು ಹೇಳಬಹುದು. ('ಅಚ್ಚ, ಅಯ್ಯ' ಎಂಬ ಶಬ್ದಗಳನ್ನು ಹಲವು ಸಲ ಉಚ್ಚರಿಸಿ ನೋಡಿರಿ.)[1]

ಈ ಅವರ್ಗೀಯ ವ್ಯಂಜನದಲ್ಲಿ ವರ್ಗೀಯ ಮೃದುವ್ಯಂಜನದ ಅಲೆತವಿಲ್ಲ. ಆದರೂ ಇದು ಪರುಷಾಕ್ಷರವಲ್ಲ. ('ಅಚ್ಚ, ಅಯ್ಯ, ಅಜ್ಜ' ಎಂಬ ಪದಗಳನ್ನು ಉಚ್ಚರಿಸಿ ನೋಡಿರಿ.) ಸ್ಪರ್ಶವು ಘನವಾಗಿಲ್ಲವಾಗಿ ಇವು ಮಹಾಪ್ರಾಣಾಕ್ಷರಗಳಾಗಲಾರವು.

---

* ಕ. ಸಾ. ಪರಿಷತ್ಪತ್ರಿಕೆಯ ೧೭ನೆಯ ಸಂಪುಟದ ೧ನೆಯ ಸಂಚಿಕೆಯ ೮ನೆಯ ಪುಟದಿಂದ ಮುಂದುವರಿದುದು.

1 ತಮಿಳು ವ್ಯಾಕರಣಗಳು ಅವರ್ಗೀಯಗಳನ್ನು, 'ವಲ್ಲಿನಮ್, ಮೆಲ್ಲಿನಮ್'ಗಳ ನಡುವಿರುವವು ಎಂಬರ್ಥ ಬರುವ 'ಇಡೈಯಿನಮ್' ಎಂಬ ಹೆಸರಿನಿಂದ ಕರೆಯುತ್ತವೆ.

(Caldwell's *Dravidian Grammar*, page 21.)

ಇವು ಸಂಸ್ಕೃತದಲ್ಲಿ ಎಂಟು—'ಯ, ರ, ಲ, ವ, ಶ, ಷ, ಸ, ಹ'; ಈಗ ಪ್ರಚಾರದಲ್ಲಿರುವ ಲಿಪಿಯಲ್ಲಿ 'ಳ' ಸೇರಿಸಿ ಒಂಭತ್ತೆಂದು ಪಾಠಮಾಡುತ್ತಾರೆ. ಹಿಂದಿನ ಆಚಾರ್ಯರು ಱ, ೞ, ಳ ಗಳುಂಟು ಎಂದರೂ ಅವುಗಳನ್ನು ಪಾಠಮಾಡಿಲ್ಲ[2]; ಶ, ಷ ಗಳು ಇಲ್ಲವೆಂದು ಹೇಳಿದ್ದರೂ ಅವುಗಳನ್ನು ಪಾಠಮಾಡಿದ್ದಾರೆ.[3] ನಾವು ಇಲ್ಲದಿರುವುದನ್ನು ಬಿಟ್ಟು ಇರುವುದನ್ನು ಪಾಠಮಾಡಿದರೆ, ಯ, ರ (ಱ), ಲ, ವ, ಸ, ಹ, ಳ (ೞ) ಎಂಬ ಏಳಕ್ಷರಗಳಾಗುವುವು. (ಱ ಎಂಬುದು 'ರ'ದಲ್ಲಿಯೂ, ೞ ಎಂಬುದು 'ಳ'ದಲ್ಲಿಯೂ ಸೇರಿಹೋಗಿವೆ.)

'ಶೀರೆ, ಶಾಲೆ' ಮೊದಲಾದ ಕನ್ನಡ ಶಬ್ದಗಳಲ್ಲಿಯೂ, ತಮಿಳಿನಲ್ಲಿ ಬಹುವಾಗಿಯೂ 'ಶ'ದ ಉಚ್ಚಾರಣೆಯು ಕೇಳಿಬರುವುದುಂಟು. ಅದರ ಕಾರಣವು ಕಾಲ್ಡ್‌ವೆಲ್ಲರು ಹೇಳಿರುವಂತೆ ಪ್ರಯತ್ನ ಶೈಥಿಲ್ಯವಿರಬಹುದು;[4] ಅಥವಾ, ಸಂಸ್ಕೃತದ ಪ್ರಭಾವವಿರಬಹುದು. ತೆಲುಗರು ಮಾತನಾಡುವಾಗ ಸಾಮಾನ್ಯವಾಗಿ 'ಶ'ಗಳೆಲ್ಲ 'ಸ'ಗಳೇ ಆಗುವುವು.

'ಷ' ಇಲ್ಲವೇ ಇಲ್ಲ. ಆದರೂ 'ಅಷ್ಟು, ಇಷ್ಟು, ಎಷ್ಟು' ಎಂಬವುಗಳಲ್ಲಿ ಕಂಡುಬರುತ್ತದೆ. ಇವು ಬಹುಶಃ ಹೀಗಿರಬಹುದು:—

**ಅನಿತುಟು > ಅಂತುಟು > ಅಷ್ಟು.**

**ಇನಿತುಟು > ಇಂತುಟು > ಇಷ್ಟು.**

**ಎನಿತುಟು > ಎಂತುಟು > ಎಷ್ಟು.**

ಇವುಗಳಲ್ಲಿರುವ ಷತ್ವವು ಕನ್ನಡದಲ್ಲಿಯಲ್ಲದೆ ಇತರ ದ್ರಾವಿಡ ಭಾಷೆಗಳಲ್ಲಿ ಇಲ್ಲ. ಗ್ರಾಮ್ಯ ತೆಲುಗಿನಲ್ಲಿ 'ಟ' ವು 'ಷ' ಆಗುತ್ತದೆ.—

**ಉದಾ :—ಅಟ > ಅಷ.**

ಲ, ರ, ಡ ಗಳಿಂದ ಳ, ಱ, ೞ ಗಳಾಗಿವೆಯೆಂದು ಪ್ರಾಚೀನ ಮತ[5] ಆದರೆ ಳಕಾರವು (ಕುಳ) ನಿಸರ್ಗಸಿದ್ಧವಾಗಿ ಧಾತು ಪ್ರಕೃತಿ ಪ್ರತ್ಯಯಗಳಲ್ಲಿ ಇರುವುದರಿಂದಲೂ, ೞಕಾರವು (ಱ ೞ) ಡ, ಟ, ಠ, ತ, ರ, ಳ ಸ್ಥಾನಗಳಲ್ಲಿ ಬರುವುದರಿಂದಲೂ, 'ಳ'ವು 'ೞ'ಕ್ಕಿಂತ ಬೇರೆಯಾಗಿರಬೇಕು ಎಂದು ನಮ್ಮ ಮತ. ಉದಾ:—

---

2 (ಅ) ಭಾಷಾಭೂಷಣದ ಹತ್ತನೆಯ ಸೂತ್ರದ ಟೀಕೆಯನ್ನು ನೋಡಿರಿ.
(ಆ) ಶಬ್ದಾನುಶಾಸನದ ೧೫, ೧೮, ೭೪ನೆಯ ಪುಟಗಳನ್ನು ನೋಡಿರಿ.

3 (ಅ) ಭಾಷಾಭೂಷಣ, ಸೂತ್ರ ೧೨.
(ಆ) ಶಬ್ದಾನುಶಾಸನ, ಪುಟ ೧೮. " . . . . ಶಕಾರ ಷಕಾರ . . . . ಅಭಾವೇನ." ಅದೇ ಪುಟದಲ್ಲಿ ಮೇಲ್ಗಡೆ "ವ್ಯಂಜನೇಷು ತು ಅವರ್ಗ್ಯಾಸ್ತು ದಶ; ಱಕಾರ ೞಕಾರಯೋಃ ಅಪಿ ಅಂಗೀಕಾರಾತ್."

4 "When single, it (c) is pronounced as a soft, weak sibilant, with a sound midway between *Ś*, *sh*, and *ch*. This pronunciation is unchanged in the middle of words, and in all cases in which the letter is single......By theory, it should be pronounced as *ch* at the beginning of a word; and it is worthy of notice that it always receives this pronunciation at the beginning of a word in vulgar colloquial Tamil."

(*Dravidian Grammar*, page 22.)

5 ಭಾಷಾಭೂಷಣ, ಸೂತ್ರ ೧೦; ಶಬ್ದಾನುಶಾಸನ.

**ನಾಡೀ ▷ ನಾೞಿ ; ಘಟಿಕಾ ▷ ಗೞಿಗೆ ; ಪೀಠಿಕಾ ▷ ಪೀೞಿಗೆ ; ಅತಿಪಾತಂ ▷ ಅೞಿವಾದಂ ; ಮರಿಚಂ ▷ ಮೆೞಸು ; ಪುಳಿನಂ ▷ ಪುೞಿಲ್.**

ಶಬ್ದಾನುಶಾಸನ, ಪುಟ ೧೭೪.

ೞಕಾರವಂತೂ, "ಡಕಾರಾಶ್ರಿತವಾದ ರೇಫವಾಗಿ" ಬರಿಗಿವಿಗೂ ಪ್ರತ್ಯೇಕ ವಾಗಿ ಕೇಳಿಸುವುದರಿಂದ ಅದೂ ಬೇರೆಯಾಗಿಯೇ ಇರಬೇಕು. ಇವು ಮೂರೂ ಬೇರೆಬೇರೆಯೆಂಬ ವಿಷಯದಲ್ಲಿ ಹಿಂದಿನ ವೈಯಾಕರಣಿಗಳಿಗೆ ಮತಭೇದವಿಲ್ಲವಾದರೂ, ೞ, ಱ ಗಳನ್ನು ಪಾಠ ಮಾಡಿರುವ ಶಬ್ದಾನುಶಾಸನಕಾರನು ಳ ವನ್ನು ವರ್ಣಮಾಲೆ ಯಲ್ಲಿ ಸೇರಿಸಿಲ್ಲ.

ಕನ್ನಡದಲ್ಲಿಯೂ ಯ, ರ, ಲ, ವ ಗಳಲ್ಲಿ ಅನುನಾಸಿಕ, ಅನನುನಾಸಿಕ ಎಂಬ ಭೇದವುಂಟು[6]. ಈ ಅನುನಾಸಿಕತ್ವದಿಂದಲೇ 'ತರು, ಬರು, ಕೊಲ್, ನಿಲ್, ಸಲ್' ಎಂಬ ಧಾತುಗಳು 'ತಂದ, ಬಂದ, ಕೊಂದ, ನಿಂದ, ಸಂದ' ಎಂಬ ರೂಪಗಳನ್ನು ಪಡೆಯುವುವು. ಭಾಷಾಭೂಷಣವು ಹೇಳುವಂತೆ ಅನುನಾಸಿಕತ್ವವು ಅಕ್ಷರದ ಪೂರ್ವದಲ್ಲಿ ಬರುವುದಿಲ್ಲ; ಅದಕ್ಕೆ ಬದಲಾಗಿ ಮಕಾರ ಸ್ಥಾನದಲ್ಲಿ ಬರುವ ವಕಾರ ದಿಂದಲೂ, ವಕಾರವಾಗಿ ಬರೆಯುತ್ತಿದ್ದರೂ ಮಕಾರದಂತೆ ಉಚ್ಚರಿಸಲಾಗುವ ವಕಾರ ದಿಂದಲೂ ದ್ಯೋತಿತವಾಗುವಂತೆ, ಏಕಾಶ್ರಯವಾಗಿರುತ್ತದೆ. 'ಅಯ್ಯೋ' ಎಂದು ಮಕ್ಕಳು ಅಳುವಾಗ ಈ ಅನುನಾಸಿಕತ್ವವು ಸ್ಫುಟವಾಗಿ ತಿಳಿಯುತ್ತದೆ. ಮುಂದೆ ಆಯಾ ಅಕ್ಷರಗಳನ್ನು ಕುರಿತು ವಿಚಾರ ಮಾಡುವಾಗ ಇದನ್ನು ಪ್ರಸ್ತಾವಿಸುವೆವು. ಅಂತೂ, ಕನ್ನಡದಲ್ಲಿ ಈ ಭೇದವುಂಟೆಂಬುದು ನಿರ್ವಿವಾದವಾದ ಮಾತು.

ಕನ್ನಡದಲ್ಲಿ ಸ, ಹ ಎಂಬ ಎರಡು ಅಕ್ಷರಗಳನ್ನು ಬಿಟ್ಟು ಇನ್ನು ಯಾವ ಅವರ್ಗೀಯಾಕ್ಷರವೂ ಪದಾದಿಯಲ್ಲಿ ಬರುವುದಿಲ್ಲವೆಂದು ತೋರುತ್ತದೆ (ಈ ನಿಯಮವು ಸಾಮಾನ್ಯವಾಗಿ ಪರಭಾಷೆಯ ಪದಗಳಿಗೆ ಅನ್ವಯಿಸುವುದಿಲ್ಲ); ಯ, ವ ಗಳು ಬಂದಂತೆ ತೋರಿದರೂ, ಎ, ಇ, ಒ, ಉ ಗಳಿಗೆ ಪ್ರತಿಯಾಗಿ ಬಂದವು.[7]

ಒಟ್ಟಿನಲ್ಲಿ, ಯ (೨), ರ (೩), ಲ (೨), ವ (೨) ಸ, ಹ, ಳ (೨)—ಹೀಗೆ ೧೩ ಧ್ವನಿಗಳು ಏಳು ಗುರುತುಗಳಲ್ಲಿ ಸೂಚಿತವಾಗಿವೆ.

**ಯ.**—ಇದು ತಾಲವ್ಯ ಸ್ಥಾನದಲ್ಲಿ ಹುಟ್ಟುವುದು. ಇದನ್ನು ಉಚ್ಚರಿಸುವಾಗ ನಾಲ ಗೆಯ ಕೊನೆಯು ಮುಂದಕ್ಕೆ ಇಳಿಯಬಿದ್ದಿದ್ದು, ಪಕ್ಕಗಳಲ್ಲಿ ಒತ್ತಾತವಿದ್ದು, ನಡುವೆ ಸಾಧಾರಣವಾದ ಹಳ್ಳವಿರುವುದು. ಇದು ಇ, ಎ ಗಳ ವ್ಯಂಜನ

---

6 ಭಾಷಾಭೂಷಣ, ಸೂತ್ರ ೯.

ಶಬ್ದಾನುಶಾಸನ, ಪುಟ ೧೭ : ಯವಲಾಸ್ತು ಸಾನುನಾಸಿಕ ನಿರನುನಾಸಿಕ ಭೇದಾತ್ ದ್ವೇಧಾ.

7 cf: "In Classical Tamil neither *r* nor *l* can commence a word; each of them requires to be preceded by an euphonic auxiliary vowel; *r* by *i*, or *a*, and *l* by *u*..... The same rule applies to the second set of semi-vowels ṛ, ḷ, r (thick), which are the exclusive property of the Dravidian languages."—*Dravidian Grammar*, page 27.

Telugu also has no word commencing with y, v, r, or l.

ರೂಪವೆಸಿಸಿಕೊಳ್ಳಬಹುದಾದರೂ ಇದರ ತೂಕವು ಪಶ್ಚಿಮ ತಾಲುವಿನ ಕಡೆಗೇ ಇದ್ದಂತೆ ತೋರುತ್ತದೆ.

ಇದು ಪದಾದಿಯಲ್ಲಿ ಬರುವುದಿಲ್ಲ. ಇದು ಬರುವೆಡೆಗಳಲ್ಲೆಲ್ಲ ಇದು ಆಗಮವಾಗಿಯೇ ಬರುವಂತೆ ತೋರುತ್ತದೆ. 'ಯಾರು, ಯಾವನು, ಯೇಕೆ, ಯಿವನು' ಮೊದಲಾದವುಗಳಲ್ಲಿ ಆದ್ಯಕ್ಷರಗಳನ್ನು ಬೆಟ್ಟಿತ್ತಾಗಿ ಉಚ್ಚರಿಸುವುದರಿಂದ, ಅಥವಾ ಆ ಅಕ್ಷರಗಳಲ್ಲಿ ಅನುನಾಸಿಕತ್ವ ವ್ಯಾಪ್ತಿಯಿದ್ದು ಅವು ಕಿವಿಗೆ ಶ್ರವಣವಾದುದರ ಫಲವಾಗಿ ಇವು ಹುಟ್ಟಿಕೊಂಡಿವೆ.

'ಪೋಗು, ಆಗು'ಗಳ, 'ಪೋಯ್ತು, ಆಯ್ತು'ಗಳ ಯಕಾರದ ವಿಷಯವಾಗಿ ಶಬ್ದಾನುಶಾಸನಕಾರನು "ಇತುವಿನಲ್ಲಿರುವ ಇಕಾರಕ್ಕೆ ಆದೇಶವಾಗಿ 'ಯ' ಬಂದಿದೆ" (ಸೂತ್ರ ೫೦೧) ಎನ್ನುತ್ತಾನೆ.

ಸಂಸ್ಕೃತದ ಆದಿ 'ಯ'ವನ್ನು ಕನ್ನಡವು 'ಜ' ಮಾಡುತ್ತದೆ.—

ಯಮ > ಜವ.

ಆದರೆ ಸಂಸ್ಕೃತದ 'ಜ'ವು ಕನ್ನಡದಲ್ಲಿ 'ಯ' ಆಗುತ್ತದೆ.—

ರಾಜ > ರಾಯ.

ಆದರೆ, 'ಆಜಿ, ರಾಜಿ,' ಮೊದಲಾದವುಗಳಲ್ಲಿ ಇಲ್ಲ.

ತಕಾರ ಸ್ಥಾನೀಯವಾಗಿ 'ಯ' ಬರುವುದುಂಟು: (ಶಬ್ದಾನುಶಾಸನ ಸೂತ್ರಗಳು ೩೬೨–೩)—

ಒಂಭಯ್ನೂರು, ಪಯಿನ್ನೂರು.

ಱಕ್ಕೆ ಆದೇಶವಾಗಿಯೂ ಬರುವುದುಂಟು: (ಶಬ್ದಾನುಶಾಸನ, ಸೂತ್ರ ೩೬೦)–

ಮುಯ್ಮೆ, ಮುಯ್ವೆರ್.

ಹೀಗೆ ಜ, ತ, ಱ ಗಳಿಗೆ ಆದೇಶವಾಗಿ ಬರಬಲ್ಲ ಈ ಅಕ್ಷರದ ಸ್ವರೂಪವು ಎಂತಹುದು?[8]

ಯುಗ > ನೊಗ—ಎಂಬಲ್ಲಿ ನಕಾರಕ್ಕೆ ಯಕಾರದಲ್ಲಿ ಅನುನಾಸಿಕತ್ವವು ಶ್ರವಣವಾಗಿರುವುದೇ ಕಾರಣ.

---

8 (ಅ) ಕಾಲ್ಡ್ವೆಲ್ಲರು (*Dravidian Grammar*, page 158) "Initial *y* changes into *d*" ಎಂದು ಹೇಳುತ್ತಾರೆ. ಇದು ಸರಿಯಲ್ಲ. ಅವರು ಹೇಳುವ 'ದಾವ' ಎಂಬುದು 'ಯಾವ > ದಾವ' ಅಲ್ಲ: 'ಆದಾವ > ದಾವ.'

(ಆ) "*y* changes into *n* and *ñ* .... on examining, however, words borrowed from sanskrit, there can be no doubt that in some instances at least *y* was the original and *n* the corruption. Thus *yuga* Sanskrit (a yoke) is in Tamil *nugam*, and *Yama* (the God of death) is sometimes *Yaman*, sometimes *Naman*." *Ibid.*, 54.

ಸಂಸ್ಕೃತದ 'ಯಮ'ದ ಯಕಾರವು ಅನುನಾಸಿಕವಾಗಿ ದ್ರಾವಿಡರಿಗೆ ಕೇಳಿಸಿರುವುದೇ ಇದಕ್ಕೆ ಕಾರಣ.—ದೇ.

**ರ.**—ಇದನ್ನು ಈಗಿರುವ ವ್ಯಾಕರಣಗಳು (ಸಂಸ್ಕೃತ ವ್ಯಾಕರಣವನ್ನು ಅನುಸರಿಸಿ) ಮೂರ್ಧನ್ಯವೆನ್ನುತ್ತವೆ. ಆದರೆ ನಾಲಗೆಯು ಇದನ್ನು ಉಚ್ಚರಿಸುವಾಗ ಅಂಗುಳಿನ ವರೆಗೂ ಹೋಗುವುದಿಲ್ಲ. (ಟ, ಡ, ರ ಗಳನ್ನು ಉಚ್ಚರಿಸಿ ನೋಡಿರಿ.) ಇದು ನಮ್ಮ ಮತದಂತೆ, ಉಪದಂತ್ಯ, ಎಂದರೆ 'ಚ'ಕ್ಕಿಂತ ಮುಂದೆ 'ತ'ಕ್ಕಿಂತ ಹಿಂದೆ ಹುಟ್ಟುವುದು. ಇದರಲ್ಲಿ 'ಮಿಡಿತ'(Fricativeness)ವುಂಟು.[9] ಇದು 'ನ' ಆಗುವುದು, 'ದ' ಸ್ಥಾನದಲ್ಲಿ ಆದೇಶವಾಗಿ ಬರುವುದು, ಇದರ ಮುಂದಿನ 'ತ, ದ, ನ, ಲ, ಸ' ಗಳು ಮೂರ್ಧನ್ಯಗಳು ಆಗದಿರುವುದು—ಇವುಗಳನ್ನು ವಿಚಾರಿಸಿದರೆ ನಮ್ಮ ಮತಕ್ಕೆ ಬಣ್ಣವೇರುತ್ತದೆ. ಉದಾ.—

(೧) ರ > ನ.—

**ತರ್+ದ > ತಂದ; ಬರ್+ದ > ಬಂದ. (ಶಬ್ದಾನುಶಾಸನ, ಸೂತ್ರ ೪೯೨.)**

'ರ' ಅನುನಾಸಿಕವಾಗಿರುವುದರ, ಮತ್ತು ಉಪದಂತ್ಯವಾಗಿರುವುದರ ಫಲವಾಗಿ ಇಲ್ಲಿ 'ನ್' ಆಗಿದೆ. ಅಲ್ಲದೆ, ಇದು ಮೂರ್ಧನ್ಯವಾಗಿದ್ದರೆ 'ಣ್' ಆಗಬೇಕಾಗಿದ್ದಿತು. ಈ 'ದ'ಪ್ರತ್ಯಯವು ತನ್ನ ವ್ಯಕ್ತಿತ್ವವನ್ನು ಕಾಯ್ದುಕೊಳ್ಳುವುದಕ್ಕಿಂತ ಧಾತುವಿನ ಕಡೆಯ ಅಕ್ಷರವನ್ನು ಹೋಲುವುದೇ ಹೆಚ್ಚು.—

**ಕಾಣ್+ದ > ಕಂಡ; ಕೊಳ್+ದ > ಕೊಂಡ; ಇಡು+ದ > ಇಟ್ಟ; ಇಸು+ದ> ಎಚ್ಚ.**

ಅದರಿಂದ 'ತರ್, ಬರ್' ಧಾತುಗಳಲ್ಲಿಯೂ 'ಹೆರು, ತೆರು,' ಧಾತುಗಳಲ್ಲಿಯೂ ಕಂಡುಬರುವಂತೆ 'ರ' ವು ಉಪದಂತ್ಯವಾಗಿರಬೇಕು.

(೨) ದ > ರ.—

**ಕದಂಬ > ಕರಂಬ;[10] ಏಕಾದಶಿ > ಏಯಾರಸೆ; ದ್ವಾದಶಿ > (ವಾದಶಿ) > ಬಾರಸೆ; ತ್ರಯೋದಶಿ > (ತೇ—) > ತೇರಸೆ.**

**ಆದರೆ, ಚತುರ್ದಶಿ > ಚೌದಸೆ.**

---

[9] (*a*) *r*.—Its sound resembles that of the English *r* (not the Irish or Scotch) after a long vowel, as in the word 'farm'; but it is pronounced further back in the mouth, and in a still more liquid manner.—Caldwell, *Dravidian Grammar*, page 28.

But I think this is not a rolled dental. There are no "rapid succession taps made by the tongue." *Cf.*, Daniel Jones' "The Pronunciation of English", Sections 68 and 69 and 95 and 96. The Kannada *r* seems to be nearer the latter than the former. (*Devudu*)

(*b*) *Cf.*, Whitney's *Samskṛta Grammar*, Section 52.

[10] It is interesting to note that the author of ಶಬ್ದಾನುಶಾಸನ says ನಿಪಾತ್ಯಂತೇ in the sutra 160 ಕರಂಬಾದಯಃ. His difficulty is that he could not reasonably explain the appearance of ರ which he takes as a cerebral in the place of ದ which is a dental; and so opines that it is not ಲಕ್ಷಣಸಿದ್ಧ but ನಿಪಾತಿತ. But, on page 78, he has noticed that this ರ is also considered to be a ದಂತಮೂಲ ಪ್ರಭವ. If we consider ರ as ದಂತಮೂಲ ಪ್ರಭವ, and not ಮೂರ್ಧನ್ಯ, then the so-called ನಿಪಾತಿತ or sporadic appearance (?) will be explained without any difficulty. (*Devudu*)

ಇಲ್ಲಿ 'ರ್ದ' ಇರುವುದರಿಂದ ಒಂದು ಅಕ್ಷರವು ಲೋಪವಾಗಿ 'ಚೌದಸೆ' ಆಗಿದೆ.[11]

**ಪ್ರತಿಷ್ಠಾ ⊳ ಹರಿಟೆ ⊳ ಹರಟೆ; ಅದು+ದ ⊳ ಅದರ; ಇದು+ದ ⊳ ಇದರ; (ಆದರೆ ಮರ+ದ ⊳ ಮರದ)**

(೩) 'ಅರಲ್, ಮರಲ್, ಕೊರಲ್, ಅರಸು, ರಸ್ನ, ಕೊರೆದು, ಬರೆದು, ಕರೆದು, ಮರೆತು, ಅರಿತು, ನುರಿತು' ಮೊದಲಾದವುಗಳಲ್ಲಿ ಷತ್ವವಿಧಾನವಾಗಿಲ್ಲ. 'ಅರಳು, ಮರಳು' ಮೊದಲಾದವುಗಳಲ್ಲಿ 'ಲ' ವು 'ಳ' ಆಗಿರುವುದಕ್ಕೆ ಬೆಟ್ಟಿತಾತ್ತಾಗಿ ಉಚ್ಚರಿಸಿರುವುದು ಕಾರಣವಾಗಿರಬೇಕಲ್ಲದೆ ಹಿಂದಿನ 'ರ' ಅಲ್ಲ.

**ಲ.**—ಇದು ದಂತ್ಯಾಕ್ಷರವೇ ಆದರೂ ಇದನ್ನು ಉಚ್ಚರಿಸುವಾಗ ನಾಲಗೆಯ ಕೊನೆಯು ಹಲ್ಲಿನ ಬಳಿ ನಿಂತು, ಮಡಿಸಿಕೊಂಡಿರುವ ನಾಲಗೆಯ ಮಡಲಿನ ಮೇಲೆ ಭಾರವು ಚೆನ್ನಾಗಿ ತಿಳಿಯುವುದು; ಆದರೂ 'ದ' ಗಿಂತ ಮೃದುವಾದುದು. 'ಸ' ದಲ್ಲಿರುವ ಅನುಸ್ವಾರವನ್ನು ಬಿಟ್ಟು ಲಘು ಪ್ರಯತ್ನವಾಗಿ ಉಚ್ಚರಿಸಿದರೆ ಈ ಅಕ್ಷರವು ಹುಟ್ಟುವುದು.

ಇದು ಕೆಲವು ವೇಳೆ 'ಸ' ಆಗುವುದು; ಕೆಲವೆಡೆ 'ಣ' ಕೂಡ ಆಗುವುದು.

ಉದಾಹರಣೆ—

**ಕೊಲ್+ದ ⊳ ಕೊ಼ದ; ಸಲ್+ದ ⊳ ಸ಼ದ; ನಿಲ್+ದ ⊳ ನಿ಼ದ.**

ಇತ್ತೀಚೆಗೆ—**ಲಿಂಗ ⊳ ನಿಂಗ:** (ಶಬ್ದಾನುಶಾಸನ, ಸೂತ್ರ ೪೯೧ ಮತ್ತು ೪೯೩)

ಲ > ಣ ಆಗುವುದಕ್ಕೆ—

**ಮೂಡಲ್ ⊳ ಮೂಡಣ; ಪಡುವಲ್ ⊳ ಪಡುವಣ; ಬಡಗಲ್ ⊳ ಬಡಗಣ.**

ಇಲ್ಲಿ ಪೂರ್ವದಲ್ಲಿರುವ 'ಡ' ದ ಮೂರ್ಧನ್ಯತ್ವವು ಕಾರಣವಾಗಿರಬೇಕು.

ಇದು ಸಂಸ್ಕೃತಾಕ್ಷರ ಸಮವಾದುದು. ಆದರೆ ಸಂಸ್ಕೃತಾಕ್ಷರವೇ ಕನ್ನಡಕ್ಕೆ ಬಂದಿದೆಯೆನ್ನುವುದಕ್ಕಿಂತಲೂ ಸಂಸ್ಕೃತದ ಶಬ್ದಗಳಲ್ಲಿ ಬಂದಿರುವ ಲಕಾರದ ಜೊತೆಗೆ ಕನ್ನಡದ ಶಬ್ದ ಪ್ರತ್ಯಯಾದಿಗಳಲ್ಲಿ ಇರುವ ಲಕಾರವೂ ಬಂದಿದೆಯೆನ್ನುವುದೇ ಸರಿ.

**ವ.**—ಇದು 'ಉ, ಬ' ಗಳಿಗೆ ಮಧ್ಯಸ್ಥವಾದುದು. ಸಂಸ್ಕೃತದ 'ವ' ದಂತೆಯೇ ದಂತ್ಯೋಷ್ಠ್ಯವಾದರೂ ಅದಕ್ಕಿಂತ ಕೊಂಚ ಮುಂದೆ ಹುಟ್ಟುವುದೆಂದು ತೋರುತ್ತದೆ.[12]

ಸಂಸ್ಕೃತದ 'ಪ, ಬ, ಮ'ಗಳು ಕನ್ನಡದಲ್ಲಿ 'ವ' ಆಗುತ್ತವೆ.—

**ಕಬಲ ⊳ ಕವಳ; ಯಾಮ ⊳ ಜಾವ; ದೀಪಿಕೆ ⊳ ದೀವಿಗೆ.**

(ಶಬ್ದಾನುಶಾಸನ, ಸೂತ್ರ ೧೪೪–೫.)

---

11 ಶಬ್ದಾನುಶಾಸನ, ಪುಟ ೧೭೯.

12 ವಕಾರೋ ದಂತ್ಯೋಷ್ಠ್ಯಃ ಸೃಕ್ವಸ್ಥಾನ ಇತ್ಯೇಕೇ: (ಶಬ್ದಾನುಶಾಸನ, ಪುಟ ೩೮.)

ಪರವಾಗಿ ಬರುವ 'ಪ' ವರ್ಗವು 'ವ' ಆಗುತ್ತದೆ.[13] ಹಾಗೆಯೇ 'ವ' ವು 'ಪ' ಆಗುವುದೂ ಉಂಟು.[14] ಅಲ್ಲದೆ, ವ, ಮ, ಪ, ಹ ಗಳು ಒಂದರ ಸ್ಥಾನದಲ್ಲಿ ಒಂದು ಬರುವುದೂ ಉಂಟು.[15]

ಈಯೆಲ್ಲ ಕಾರಣಗಳಿಂದ ಕನ್ನಡದ 'ವ'ವು ಸೃಕ್ವಸ್ಥಾನೀಯವೆಂದು ತೋರುತ್ತದೆ.

**ವಿಚಾರ.**—'ವ, ಮ, ಪ, ಹ'ಗಳು ಒಂದರೆಡೆಯಲ್ಲಿ ಇನ್ನೊಂದು ಬರಲು ಕಾರಣವು ಹೀಗಿರಬಹುದೆ:—

(೧) 'ವ'ದಲ್ಲಿ ಅನುನಾಸಿಕ, ಅನನುನಾಸಿಕಗಳೆರಡೂ ಉಂಟು. ಅನುನಾಸಿಕ 'ವ' ದಲ್ಲಿ ತುಟಿಯೊಡೆದು ಉಂಟಾಗುವ ಧ್ವನಿಯೊಂದು ವಿನಾ, 'ಮ'ಕ್ಕೆ ಬೇಕಾದ ಮಿಕ್ಕೆಲ್ಲ ಪ್ರಯತ್ನವೂ ಇದೆ. ಅನುನಾಸಿಕ 'ವ' ಉಚ್ಚರಿಸುವುದಕ್ಕೆ ಸಿದ್ಧವಾಗಿರುವ ತುಟಿಗಳು ಅಕಸ್ಮಾತ್ತಾಗಿ ಸೇರಿ ಒಡೆದರೆ 'ಮ' ಆಗುವುದು.

(೨) ಹೀಗೆಯೇ, ಅನನುನಾಸಿಕ 'ವ' ದಿಂದ 'ಪ' ಉಂಟಾಗುವುದು. ಇಲ್ಲಿ ಸಾಮಾನ್ಯವಾಗಿ 'ವ'ದ ಹಿಂದಿನ ಒಂದಕ್ಷರವು ಲೋಪವಾಗಿ, ಅದರಿಂದ ಪ್ರಯತ್ನವು ಪ್ರಬಲಿಸಿ ತುಟಿಗಳು ಸೇರಿ ಒಡೆದು 'ಪ' ಆಗುವುದು.

(೩) ಅನನುನಾಸಿಕ 'ವ'ದಲ್ಲಿರುವ ಔಷ್ಠ್ಯತ್ವವು ಲೋಪವಾಗಿ ಪ್ರಯತ್ನವು ಕಂಠದಲ್ಲಿಯೇ ಆರಂಭವಾದರೆ 'ಹ' ಆಗುವುದು.

**ಸ.**—ಇದು ದಂತ್ಯ; ಸಂಸ್ಕೃತದ 'ಸ' ಅಂತೆಯೇ ಆದರೂ ಅದರಷ್ಟು ದೃಢವಾದುದಲ್ಲವೆಂದು ತೋರುತ್ತದೆ.

ಇದು ಹಿಂದಿನ ಅಕ್ಷರಗಳ ಬಲದಿಂದ ಬಹು ಬೇಗ ತನ್ನ ದಂತ್ಯತ್ವವನ್ನು ಕಳೆದುಕೊಂಡು 'ಚ' ಆಗುತ್ತದೆ. ಉದಾ.—

**ಇಸು > ಎಚ್ಚಂ; ಬಿಸು > ಬೆಚ್ಚಂ.**[16]

ಈ ನಿಯಮವು ಸಂಸ್ಕೃತದಿಂದ ಕನ್ನಡಕ್ಕೆ ಬರುವ 'ಸ'ಗಳಿಗೂ ಅನ್ವಯಿಸುತ್ತದೆ. ಉದಾ.—

**ತುಲಸಿ > ತೊಳಚಿ; ಕಾಂಸ್ಯ > ಕಂಚು.**

ಸಂಸ್ಕೃತದ 'ಶ, ಛ'ಗಳಿಗೆ ಬದಲಾಗಿ ಕನ್ನಡದಲ್ಲಿ 'ಸ' ಬರುತ್ತದೆ. ಉದಾ.—

**ಶೃಂಖಲಾ > ಸಂಕಲೆ; ಶಲಾಕಾ > ಸಲಾಕೆ; ಛತ್ರಿಕಾ > ಸತ್ತಿಗೆ.**

ತದ್ಭವಗಳಲ್ಲಿ ಸಕಾರೋತ್ತರವರ್ತಿಯಾದ ವ್ಯಂಜನಕ್ಕೆ ಲೋಪವಾಗುವಂತೆ, ಆದ್ಯ ಸಕಾರಕ್ಕೂ ಲೋಪವಾಗುವುದುಂಟು. ಉದಾ.—

**ಸ್ಥಾನ > ತಾಣ; ಸಂಸ್ಥೆ > ಸಂತೆ; ಸ್ಫಟಿಕ > ಪಟಿಕ.**

---

13 ಕಾವ್ಯಾವಲೋಕನ, ಸೂತ್ರ ೧೨.

14 ಶಬ್ದಾನುಶಾಸನ, ಸೂತ್ರಗಳು ೪೮೦, ೫೦೨–೩, ೫೧೧–೮.

15 ಶಬ್ದಮಣಿದರ್ಪಣದ ಕೊನೆಯ ಪದ್ಯ.

16 ಕಾವ್ಯಾವಲೋಕನ, ಸೂತ್ರ ೧೩.

ತಮಿಳಿನ 'ಯ' ಇರುವೆಡೆ ಕನ್ನಡದಲ್ಲಿ 'ಸ' ಬರುತ್ತದೆ. ಉದಾ.—

**ಉಯಿರ್ ⊳ ಉಸಿರು ; ಪೆಯಿರ್ ⊳ ಪೆಸರು ; ವಯಿರ್ ⊳ ಬಸಿರು ; ಪಯಿ ⊳ ಹಸಿ(ವು) (?)**

ತಮಿಳಿನ 'ಕ್ಕು' ಸ್ಥಾನದಲ್ಲಿ ಕನ್ನಡದಲ್ಲಿ 'ಸ' ಬರುವಂತೆ ತೋರುತ್ತದೆ. ಉದಾ.—

**ಕಾಯ್‌ಕ್ಕು ⊳ ಕಾಯಿಸು ; ಪಾಯ್‌ಕ್ಕು ⊳ ಪಾಯಿಸು.** [17]

**ಹ.**—ಇದು ಮೂಲ ದ್ರಾವಿಡ ಭಾಷೆಗಳಲ್ಲಿ ಇದ್ದಂತೆ ತೋರುವುದಿಲ್ಲ. ಆದರೂ ಕಾಲ್ಡ್ವೆಲ್ಲರು ಹೇಳುವಂತೆ, [18] ಇದು ಈಚಿನದೇನೂ ಅಲ್ಲ. ಸಂಸ್ಕೃತ ಪ್ರಾಕೃತಗಳೆರಡರಲ್ಲೂ 'ಹ'ಕಾರವಿದೆಯಾಗಿ, ದ್ರಾವಿಡ ಭಾಷೆಗಳಿಗೂ ಆ ಭಾಷೆಗಳಿಗೂ ಸಂಬಂಧವಾದಂದಿನಿಂದ ಈ ಅಕ್ಷರವು ಪ್ರಚಾರಕ್ಕೆ ಬಂದಿದೆಯೆಂದು ಹೇಳಬಹುದು. ಆದರೂ ಇದು ಕೇವಲ ಆದಿಷ್ಟ ಮಾತ್ರವೇ ಆಗಿದೆಯೆಂದು ಹೇಳಬೇಕು.

ಇದು ಕಂಠ್ಯ. ಇದನ್ನು ಉಚ್ಚರಿಸುವಾಗ ಪ್ರಯತ್ನವು 'ಅ' ಇದ್ದಂತೆ ಇದ್ದು, ವ್ಯಂಜನದಂತೆ ಸ್ಪರ್ಶವು ಕಂಠದಲ್ಲಿರುವುದು.

ಸಾಮಾನ್ಯವಾಗಿ ಇದು ಸ್ವತಂತ್ರವಾಗಿ ಬರುವುದಿಲ್ಲವೆಂದರೆ ತಪ್ಪಿಲ್ಲ. ಬಹುವಾಗಿ 'ಪ' ಸ್ಥಾನೀಯವಿದು.

ಹಳ್ಳಿಗರ ಬಾಯಲ್ಲಿ 'ಅ' ಸ್ಥಾನದಲ್ಲಿ ಬಂದು, ತಾನು 'ಅ' ಆಗುವುದು. ಉದಾ.—

**ಹಕ್ಕಿ ⊳ ಅಕ್ಕಿ; ಅಕ್ಕಿ ⊳ ಹಕ್ಕಿ.**

ಸಂಸ್ಕೃತದ 'ಹ' ಕನ್ನಡದಲ್ಲಿ 'ಗ' ಆಗುವುದುಂಟು. ಉದಾ.—

ಸಿಂಹ ⊳ ಸಿಂಗ.

**ಳ.**—ಇದರಲ್ಲಿ ಮೂರು ಅಕ್ಷರಗಳಿವೆ: ಹಿಂದಿನ ೞ ಒಂದು ; ಅದರ ಜೊತೆಗೆ ಸಂಸ್ಕೃತದ 'ಲ' ಸ್ಥಾನೀಯವಾಗಿ ಬರುವ ಕ್ಷಳ 'ಳ' ಒಂದು ; ಕನ್ನಡದ ಧಾತು, ಪ್ರಕೃತಿ, ಪ್ರತ್ಯಯಾದಿಗಳಲ್ಲಿ ಬರುವ ಕುಳ 'ಳ' ಒಂದು.

ಇದು ಆದ್ಯಕ್ಷರವಾಗಿ ಎಲ್ಲಿಯೂ ಬಂದಂತಿಲ್ಲ.

---

[17] "*kk* change systematically into *ch*, *chch*....The following instances of this change are contained even in grammatical Tamil: *Kaychchu* (to boil) for the more regular *Kaykku* and *paychchu* (to irrigate) for *paykku*."

*Dravidian Grammar*, page 51.

[18] "I believe indeed that this sound (*h*) was originally foreign to the Dravidian languages and that it crept into Telugu and Canarese, through the influence of Sanskrit."—*Dravidian Grammar*, page 31.

Again, "*p* changes in Canarese into *h*........This change of *p* into *h* seems to have taken place in comparatively recent times; for in Old Canarese, and in the dialect of Badagas of the Nilgherries (note the spelling), *p* almost invariably maintains its ground.

"A similar change of *p* into *h* appears in Armenian: *e.g.*, *foot* is in Armenian *het* (for *pet*) and father *hayr* (for *payr*).

"It is curious to notice the same change in the Far East. What is *p* in Chinese became in Japanase first *f*, then *h*."—*Dravidian Grammar*, page 53.

ಹಿಂದಿನವರು ಅಕ್ಷರಮಾಲೆಯಲ್ಲಿ ಇದನ್ನು ಪ್ರತ್ಯೇಕವಾಗಿ ಪಾಠಮಾಡಿಲ್ಲ;[19] ಆದರೂ ಪ್ರಯೋಗದಲ್ಲಿ ತೋರಿಸಿದ್ದಾರೆ. ಇದು ಸ್ವತಂತ್ರಾಕ್ಷರವೆಂಬುದರಲ್ಲಿ ಸಂದೇಹವಿಲ್ಲ.

ಇದು 'ಟ' ಅಂತೆ ಅಡಿನಾಲಗೆಯ ಕೊನೆಯ ಭಾಗದ ಸಹಾಯದಿಂದ ಹುಟ್ಟಿದರೂ, ಇದು 'ೞ' ಅಂತೆ ಮೂರ್ಧನ್ಯವಲ್ಲ; ತಾಲವ್ಯಕ್ಕಿಂತ ಹಿಂದೆ ಮೂರ್ಧನ್ಯಕ್ಕಿಂತಲೂ ಮುಂದೆ ಹುಟ್ಟುವುದು: 'ಚ, ಟ, ಳ' ಗಳನ್ನು ಒಟ್ಟಿಗೆ ಹೇಳಿ ನೋಡಿರಿ.

'ಸ' ಕಾರ ಸ್ಥಾನೀಯವಾಗಿ ಈ 'ಳ' ಬರುವುದುಂಟು.—

**ಮುನಿಸು > ಮುಳಿಸು.**

ಕೆಲವು ಧಾತುಗಳ ಕೊನೆಯ 'ಳ' ವು 'ಣ' ಆಗುವುದುಂಟು.—

**ಕೊಳ್ > ಕೊಂಡ, ಕೊಂಡು; ಉಳ್ > ಉಂಟು.**[20]

---



---

## ಹಿನ್ನುಡಿ

ಈ ಜಾತಿಯ ವಿಚಾರ ಸರಣಿಯು ಕನ್ನಡಕ್ಕೆ ಹೊಸದು. ಅದರಿಂದ, ಇದರಲ್ಲಿ ಇರಬಹುದಾದ ಅನೇಕಾನೇಕ ದೋಷಗಳನ್ನು ವಿಚಾರ ಮಾಡಿ ಮಾಡಿ ತೊಳೆದು, ನಿರ್ದುಷ್ಟವಾದ ಶಿಕ್ಷಾ ಶಾಸ್ತ್ರವನ್ನು ಬರೆಯುವುದು ವಿದ್ವಾಂಸರ ಕೆಲಸ.

ನಾನು ಇದರಲ್ಲಿ ಬರೆದಿರುವ ಒಂದೊಂದು ಅಂಶವನ್ನೂ ನನ್ನ ಕೈಯಲ್ಲಾದ ಮಟ್ಟಿಗೂ ಅಳೆದೂ ಸುರಿದೂ ನೋಡಿದ್ದೇನೆ. ಆದರೂ ಇದು ಶಾಸ್ತ್ರವೆಂದು ಕರೆಯಿಸಿಕೊಳ್ಳುವಷ್ಟು ನಿರ್ದುಷ್ಟವಾಗಿಲ್ಲವೆಂದು ಸ್ಫುಟವಾಗಿ ನಾನೇ ಹೇಳುತ್ತೇನೆ. ಯಾರೇ ಆಗಲಿ, ಅಭಿಮಾನಾದಿಗಳಿಂದ, 'ಇದೇ ಕೊನೆ, ಇನ್ನುಮುಂದೆ ಇಲ್ಲ' ಎನ್ನಬಾರದಾಗಿ ನನ್ನ ಪ್ರಾರ್ಥನೆ.

ಈ ಮೂರು ಲೇಖನಗಳಲ್ಲಿಯೂ ಅಕ್ಷರ ಸ್ವರೂಪವನ್ನು ಗೊತ್ತುಮಾಡುವುದರ ಜೊತೆಗೆ ಅಕ್ಷರ ಪರಿಣಾಮಗಳನ್ನು ಕುರಿತೂ ವಿಚಾರ ಮಾಡಿ ಕೆಲವು ಶಿಕ್ಷಾ ನಿಯಮ (Phonetic Laws) ಗಳನ್ನು ಕಂಡುಹಿಡಿಯುವ ಪ್ರಯತ್ನವನ್ನೂ ಮಾಡಲಾಗಿದೆ. ನನಗಿಂತ ತಿಳಿದವರೂ ಹೆಚ್ಚು ಅವಕಾಶವುಳ್ಳವರೂ ಈ ಕೆಲಸಕ್ಕೆ ಕೈಹಾಕಿ ಕೃತಕಾರ್ಯರಾದರೆ ಅಂದಿಗೆ ನನ್ನ ಈ ಪ್ರಯತ್ನವು ಸಾರ್ಥಕವಾಯಿತೆಂದುಕೊಳ್ಳುವೆನು.

ಇದು ಈ ಜಾತಿಯ ಪ್ರಯತ್ನಗಳಲ್ಲ ಮೊದಲು; ನಾನು ಮೊದಲೇ ಅರಿಕೆ ಮಾಡಿಕೊಂಡಿರುವಂತೆ ಇದು ಪೂರ್ಣವಾಗಿಲ್ಲ, ನಿರ್ದುಷ್ಟವಾಗಿಲ್ಲ ಎಂದು ಇನ್ನೊಮ್ಮೆ ಜಿಜ್ಞಾಸುಗಳಲ್ಲಿ ಅರಿಕೆಮಾಡಿಕೊಳ್ಳುವೆನು.

**ದೇವುಡು.**

---

19 (ಅ) ಶಬ್ದಾನುಶಾಸನ, ಪುಟ ೧೫ರಲ್ಲಿ "ಯ, ರ, ಲ, ವ, ಶ, ಷ, ಸ, ಹ, ಱ, ೞ" ಎಂದು ಮಾತ್ರ ಹೇಳಿದೆ.
(ಆ) ಕಾವ್ಯಾವಲೋಕನ, ಸೂತ್ರ ೬ನ್ನು ನೋಡಿರಿ.
(ಇ) ಶಬ್ದಾನುಶಾಸನದ ೧೮ನೆಯ ಪುಟ, ಸೂತ್ರ ೧೪೦ರ ವ್ಯಾಖ್ಯೆ—ಇವುಗಳನ್ನು ನೋಡಿರಿ.

20 ಶಬ್ದಾನುಶಾಸನ, ಸೂತ್ರಗಳು ೪೯೪–೫.

# ಮುದ್ರಾರಾಕ್ಷಸ-ಮುದ್ರಾಮಂಜೂಷ

**ಮುದ್ರಾರಾಕ್ಷಸವು** ಸಂಸ್ಕೃತ ನಾಟಕಗಳಲ್ಲಿ ಉತ್ತಮ ವರ್ಗಕ್ಕೆ ಸೇರಿದುದು. ಇದನ್ನು ವಿಶಾಖದತ್ತನೆಂಬ ಕವಿಯು ಸುಮಾರು ಆನೆಯ ಶತಮಾನದಲ್ಲಿ ರಚಿಸಿದಂತೆ ತಿಳಿಯಬರುತ್ತದೆ.

**ಮುದ್ರಾಮಂಜೂಷವು** ಉತ್ತಮ ವರ್ಗಕ್ಕೆ ಸೇರಿದ ಆಧುನಿಕ ಕನ್ನಡ ಗದ್ಯ ಕಾವ್ಯ. ಇದನ್ನು ಮುಮ್ಮಡಿ ಶ್ರೀ ಕೃಷ್ಣರಾಜೇಂದ್ರವೊಡೆಯರವರ ಆಸ್ಥಾನದಲ್ಲಿದ್ದ ಕೆಂಪುನಾರಾಯಣನೆಂಬ ಬ್ರಾಹ್ಮಣಕವಿಯು ಕ್ರಿ. ಶ. ೧೮೨೩ರಲ್ಲಿ ರಚಿಸಿದನು.

* '**ಕರ್ಣಾಟಕ ಕವಿಚರಿತೆ**'ಯಲ್ಲಿ—"ಇದು (ಮುದ್ರಾಮಂಜೂಷವು) ಮುದ್ರಾರಾಕ್ಷಸವೆಂಬ ಸಂಸ್ಕೃತ ನಾಟಕಕ್ಕೆ ಗದ್ಯರೂಪವಾದ ಭಾಷಾಂತರವು" ಎಂದು ಹೇಳಿದೆ. ಈ ಹೇಳಿಕೆಯು ಎಷ್ಟರಮಟ್ಟಿಗೆ ಆಧಾರಭೂತವಾದುದೆಂಬುದನ್ನು ತಿಳಿಯಲು ಯತ್ನಿಸುವುದೇ ಈ ಲೇಖನದ ಮುಖ್ಯೋದ್ದೇಶವು.

ಈ ಕಥೆಯ ವಿಷಯವಾಗಿ ವಿಷ್ಣುಪುರಾಣದಲ್ಲಿಯೂ, ಬೃಹತ್ಕಥೆಯಲ್ಲಿಯೂ ಕಾಮಂದಕದಲ್ಲಿಯೂ ಬಹಳ ಸಂಕ್ಷೇಪವಾಗಿ ತಿಳಿಸಿದೆ:

† **ವಿಷ್ಣುಪುರಾಣ**.—ಮಗಧ ರಾಜ್ಯಾಧಿಪತಿಯಾದ ಶಿಶುನಾಗನ ವಂಶದ ಕೊನೆಯ ದೊರೆ ಮಹಾನಂದಿ. ಈತನಿಗೆ ಶೂದ್ರ ಸ್ತ್ರೀಯಿಂದ ಮಹಾಪದ್ಮ ನಂದ ಎಂಬ ಮಗನು ಹುಟ್ಟುವನು. ಇವನು ಬಹಳ ಆಶಾಪಾತಕನು; ಪರಶುರಾಮನಂತೆ ಕ್ಷತ್ರಿಯರೆಲ್ಲರನ್ನೂ ನಾಶಮಾಡುವನು. ಈ ಕಾಲದಿಂದ ಶೂದ್ರ ದೊರೆಗಳು ರಾಜ್ಯ ವಾಳುವರು. ಈ ಮಹಾಪದ್ಮನಂದನು ಚಕ್ರವರ್ತಿಯಾಗಿ ರಾಜ್ಯಭಾರ ಮಾಡುವನು. ಅವನ ಆಜ್ಞೆಗೆ ಎಲ್ಲಿಯೂ ತಡೆಯಿಲ್ಲದಿರುವುದು. ಇವನಿಗೆ ಸುಮಾತ್ಯ ಮೊದಲಾದ ಎಂಟು ಮಂದಿ ಮಕ್ಕಳಾಗುವರು. ಮಹಾಪದ್ಮನಂದನೂ ಅವನ ಮಕ್ಕಳೂ ಒಂದು ನೂರು ವರುಷ ರಾಜ್ಯಭಾರ ಮಾಡುವರು. ತರುವಾಯ ಕೌಟಿಲ್ಯನೆಂಬ ಒಬ್ಬ ಬ್ರಾಹ್ಮಣನು ನಂದನನ್ನೂ ಅವನ ಮಕ್ಕಳನ್ನೂ ನಿರ್ಮೂಲ ಮಾಡುವನು. ನಂದನ ವಂಶದವರಾದ ಮೇಲೆ ಮೌರ್ಯರು ಈ ಭೂಮಿಯನ್ನಾಳುವರು. ಈ ಕೌಟಿಲ್ಯನು ಮೌರ್ಯ ವಂಶದವನಾದ ಚಂದ್ರಗುಪ್ತನನ್ನು ಸಿಂಹಾಸನದ ಮೇಲೆ ಕೂಡಿಸುವನು. ಈ ಚಂದ್ರಗುಪ್ತನಿಗೆ ಬಿಂದುಸಾರನೆಂಬ ಮಗನಾಗುವನು. ಈ ಬಿಂದುಸಾರನ ಮಗ ಅಶೋಕವರ್ಧನ.......ಈ ಮೌರ್ಯವಂಶದ ದೊರೆಗಳು ೧೭೩ ವರುಷ ರಾಜ್ಯಭಾರ ಮಾಡುವರು.

* ಸಂಪುಟ III, 183_184.

† ೧೮೯೪ನೆಯ ಇಸವಿಯಲ್ಲಿ ಮನ್ಮಥನಾಥದತ್ತ, ಎಂ.ಎ. ಅವರು ಕಲ್ಕತ್ತೆಯಲ್ಲಿ ಪ್ರಕಟಿಸಿದ 'ವಿಷ್ಣುಪುರಾಣ'ದ ಇಂಗ್ಲಿಷು ಪರಿವರ್ತನ: XXIV, ಪುಟ ೩೦೮.

**ಬೃಹತ್ಕಥೆ.**—ಆ ಚಾಣಕ್ಯನೆಂಬವನು ಕ್ಷಪಣಕ ವೇಷಧಾರಿಯಾದ ಶಕಟಾರನ ಮನೆಯಲ್ಲಿ ಗುಟ್ಟಾಗಿ ಏಳು ದಿವಸಗಳವರೆಗೂ ಆಭಿಚಾರಿಕವನ್ನು ಮಾಡಲು, ದೊರೆಯು ಪುತ್ರಸಮೇತನಾಗಿ ಕೊಲ್ಲಲ್ಪಟ್ಟನು. ಯೋಗಾನಂದನು ಮರಣವನ್ನು ಹೊಂದಲು, ಪೂರ್ವನಂದನ ಮಗನಾದ ಚಂದ್ರಗುಪ್ತನು ಚಾಣಕ್ಯನಿಂದ ರಾಜ್ಯದಲ್ಲಿ ನಿಲ್ಲಿಸಲ್ಪಟ್ಟನು.

**ಕಾಮಂದಕ.**—ವಿಷ್ಣುಗುಪ್ತನು ವಿಶಾಲವಾದ ವಂಶವುಳ್ಳ, ಪ್ರತಿಗ್ರಹವನ್ನೇ ತೆಗೆದುಕೊಳ್ಳದಿರುವ, ಅನೇಕರಾದ ಋಷಿಗಳ ವಂಶದಲ್ಲಿ ಪ್ರಸಿದ್ಧನಾಗಿದ್ದನು; ವೇದವನ್ನು ಕಲಿತವರಲ್ಲಿ ಶ್ರೇಷ್ಠನೂ, ಬೆಂಕಿಯಂತೆ ತೇಜೋಮಯನೂ ಆಗಿದ್ದನು. ಆ ಜಾಣನು ನಾಲ್ಕು ವೇದಗಳನ್ನೂ ಒಂದೇ ವೇದದಂತೆ ಅಭ್ಯಾಸಮಾಡಿದ್ದನು. ವಜ್ರದಂತೆ ಕಾಂತಿಯುತನಾದ ಆ ವಿಷ್ಣುಗುಪ್ತನ ಆಭಿಚಾರಿಕವೆಂಬ ವಜ್ರದಿಂದ (ಸಿಡಿಲಿನಿಂದ) ನಂದರೆಂಬ ಪರ್ವತವು ಬುಡಸಹಿತವಾಗಿ ಬಿದ್ದುಹೋಯಿತು. ಅವನು ಒಬ್ಬನೇ ಆದರೂ ಮಂತ್ರಶಕ್ತಿಯಿಂದ ಕುಮಾರಸ್ವಾಮಿಗೆ ಸಮನಾದವನು. ಅವನು ರಾಜರುಗಳಿಗೆ ಚಂದ್ರನಂತಿರುವ ಚಂದ್ರಗುಪ್ತನಿಗೆ ಭೂಮಿಯನ್ನು (ರಾಜ್ಯವನ್ನು) ಕೊಟ್ಟನು. ಆ ಜಾಣನೇ ಅರ್ಥಶಾಸ್ತ್ರವೆಂಬ ದೊಡ್ಡ ಸಮುದ್ರದಿಂದ ನೀತಿಶಾಸ್ತ್ರವೆಂಬ ಅಮೃತವನ್ನು ತೆಗೆದನು.

* **ಮುದ್ರಾರಾಕ್ಷಸ ನಾಟಕ.**—ಸಂಸ್ಕೃತ ಸಾಹಿತ್ಯದಲ್ಲಿ ಮುದ್ರಾರಾಕ್ಷಸ ನಾಟಕವು ಅನೇಕ ವಿಷಯಗಳಲ್ಲಿ ವಿಲಕ್ಷಣ ಕಾವ್ಯವಾಗಿದೆ. ಇದರ ವಸ್ತುವು ಕೇವಲ ಕವಿಕಲ್ಪನವೇ ಅಲ್ಲ; ಸಾಮಾನ್ಯವಾಗಿ ಇಂತಹ ಇತರ ಸಂಸ್ಕೃತ ಗ್ರಂಥಗಳ ವಸ್ತುವಿನಂತೆ ಪುರಾಣಾದಿಗಳಿಂದ ತೆಗೆದುದೂ ಅಲ್ಲ. ಈ ನಾಟಕದ ಪ್ರಮುಖ ಪಾತ್ರಗಳಲ್ಲಿ ಸ್ತ್ರೀಪಾತ್ರವಿಲ್ಲ. ಆದುದರಿಂದ ಇದರ ಕಥಾಸಂದರ್ಭದಲ್ಲಿ, ಇತರ ನಾಟಕಗಳಂತೆ ಸ್ತ್ರೀವ್ಯಾಮೋಹ ವಿಚಾರವೇ ಇಲ್ಲದೆ, ರಾಜನೀತಿ, ರಾಜ್ಯಕಾರ್ಯನಿರ್ವಹಣ ಚಾತುರ್ಯಗಳೇ ತುಂಬಿವೆ. ಆದರೂ, ಒಂದು ಸ್ತ್ರೀಪಾತ್ರವೂ ಒಂದು ಸಣ್ಣ ಮಗುವಿನ ಪಾತ್ರವೂ ಕೊನೆಯ ಅಂಕದ ಆರಂಭದಲ್ಲಿ ಕಾಣಬರುತ್ತವೆ: ಇವರು ಚಂದನದಾಸನ ಭಾರ್ಯೆ ಮತ್ತು ಮಗ. ಇವರಲ್ಲಿಯೂ ಕೇವಲ ಸಾಂಸಾರಿಕವಾದ ಪ್ರೀತಿವಿಚಾರವಾಗಲಿ, ಅಥವಾ ಇತರ ಸದ್ಧರ್ಮವಿಚಾರವಾಗಲಿ ಗೋಚರವಾಗುವಂತಹ ಸನ್ನಿವೇಶಗಳಿಲ್ಲದೆ ಕಠಿನವಾದ ಕರ್ತವ್ಯಸಾಧನೆ, ಆತ್ಮಾರ್ಪಣೆ—ಇವೇ ತೋರಿಬರುವುವು. ಕಾವ್ಯದ ಭಾಷೆಯು ವಸ್ತುವಿನ ರೀತಿಗೆ ತಕ್ಕಂತೆ ಅಂದವಾಗಿದೆ; ಅಷ್ಟು ಮಧುರವಾಗಿದೆಯೆಂದಾಗಲಿ ಲಾವಣ್ಯವಾಗಿದೆಯೆಂದಾಗಲಿ ಹೇಳಲಾಗುವುದಿಲ್ಲ; ಆದರೆ ಕಾರ್ಯನಿರ್ವಹಣಕ್ಕೆ ತಕ್ಕಂತಹ ಮತ್ತು ಅನೇಕ ಸಂದರ್ಭಗಳಲ್ಲಿ ಬಹಳ ಬಿಕ್ಕಟ್ಟಾದ ಭಾಷೆಯಾಗಿದೆ.

---

* ಇಲ್ಲಿ ಹೇಳಿರುವ ವಿಷಯಗಳನ್ನು ಕೆ. ಟಿ. ಟೆಲಾಂಗ್, ಎಂ.ಎ., ಎಲ್‌ಎಲ್.ಬಿ., ಸಿ.ಐ.ಇ. ಅವರ ಸಂಪಾದಕತ್ವದಲ್ಲಿ ರಚಿತವಾದ ಮುದ್ರಾರಾಕ್ಷಸ ನಾಟಕದ ಉಪೋದ್ಘಾತದಿಂದ ಸಂಗ್ರಹಿಸಲಾಗಿದೆ. ಈ ಗ್ರಂಥದ ಪ್ರಚಾರಕರು.—ಪಾಂಡುರಂಗ ಜಾವಜೀ, 'ನಿರ್ಣಯಸಾಗರ ಪ್ರೆಸ್', ಮುಂಬಯಿ, 1918.

ಪಾತ್ರಗಳ ಗುಣ ಕಥನದಲ್ಲಿಯೂ—ಉತ್ತಮ ಗುಣಗಳನ್ನಾಗಲಿ ನೀಚ ಗುಣ ಗಳನ್ನಾಗಲಿ ಚಿತ್ರಿಸುವ ಸಂದರ್ಭದಲ್ಲಿ, ಈ ಪಾತ್ರಗಳು ಕಠಿಣ ಜಾತೀಯವಾಗಿವೆಯೇ ಹೊರತು, ಇವುಗಳಲ್ಲಿ ಸಾಂಸಾರಿಕ ಪ್ರೀತಿ ಮೊದಲಾದ ಕೋಮಲ ಗುಣಗಳ ಚಿತ್ರವು ಕಾಣಬರುವುದಿಲ್ಲ. ಉದಾಹರಣೆಗಾಗಿ, ಈ ನಾಟಕದ ಮುಖ್ಯ ಪಾತ್ರವಾದ ಚಾಣಕ್ಯನನ್ನು ತೆಗೆದುಕೊಳ್ಳೋಣ: ಈತನನ್ನು ಕೇವಲ ವಿಮಲ ಮತಿಯನ್ನಾಗಿಯೂ, ಆತ್ಮ ಸ್ಥೈರ್ಯವುಳ್ಳವನನ್ನಾಗಿಯೂ, ಕಪಟ ನಾಟಕ ದಕ್ಷನನ್ನಾಗಿಯೂ, ಕಠಿಣವಾದ ರಾಜನೀತಿಜ್ಞನನ್ನಾಗಿಯೂ, ತನ್ನ ಅಂತಿಮ ಆಶಾ ಪೂರಣದಲ್ಲಿ ಸಂಪೂರ್ಣ ಸ್ಥೈರ್ಯ ವುಳ್ಳವನನ್ನಾಗಿಯೂ, ತನ್ನ ಕುಶಲತೆಯನ್ನೆಲ್ಲ ಆ ಕಾರ್ಯಸಾಧನೆಗಾಗಿಯೇ ಉಪಯೋಗಿಸುತ್ತಿರುವವನನ್ನಾಗಿಯೂ ಚಿತ್ರಿಸಿದೆ. ಅಮಾತ್ಯ ರಾಕ್ಷಸನನ್ನಾ ದರೋ, ನಿರ್ಭಯನಾದ ಯೋಧನನ್ನಾಗಿಯೂ, ಆದರೆ ರಾಜನೀತಿಯಲ್ಲಿ ದಯಾರ್ದ್ರ ಅಂತಃಕರಣವುಳ್ಳವನನ್ನಾಗಿಯೂ, ಮತಿ ಹೀನತೆಯಿಂದ ಕಾರ್ಯ ಸಾಧನೆಯಲ್ಲಿ ತಪ್ಪಿಹೋಗುವಂತಹವನನ್ನಾಗಿಯೂ ಚಿತ್ರಿಸಿದೆ; ತನ್ನ ಹಿಂದಣ ಪ್ರಭುಗಳಲ್ಲಿರುವ ಭಕ್ತಿ ವಿಶ್ವಾಸಗಳು ಆ ಪ್ರಭುಗಳನ್ನು ನಾಶ ಮಾಡಿದ ಚಂದ್ರ ಗುಪ್ತ ಚಾಣಕ್ಯರ ಮೇಲೆ ತನ್ನ ಹಗೆಯನ್ನು ತೀರಿಸಿಕೊಳ್ಳುವಂತೆ ಪ್ರೇರಿಸುತ್ತವೆ. ಆದರೆ, ಇದಕ್ಕೆ ಅವಕಾಶ ಕೊಡದಂತೆ ಚಾಣಕ್ಯನು ಹೂಡಿದ ಕುಟಿಲೋಪಾಯ ಗಳಿಂದ ಅಮಾತ್ಯ ರಾಕ್ಷಸನು ನಿಸ್ಸಹಾಯನಾಗಿ ತನ್ನ ಉದ್ಯಮವನ್ನು ಬಿಟ್ಟು ಬಿಡಬೇಕಾಗುವುದು. ಅಲ್ಲದೆ, ಹೀಗೆ ಹಠ ಸಾಧನೆ ಮಾಡುವ ಪ್ರಯತ್ನದಲ್ಲಿದ್ದಾಗ ಅಮಾತ್ಯ ರಾಕ್ಷಸನು ಚಾಣಕ್ಯನಿಂದ ಪಡೆದ ಮನ್ನಣೆಗಾಗಿ ಕೃತಜ್ಞತೆಯನ್ನು ತೋರಿಸಬೇಕೆಂಬ ಅಭಿಲಾಷೆಯಿಂದಲೂ ತನ್ನ ಹಠ ಸಾಧನೆಯ ಕಾರ್ಯವನ್ನು ಬಿಟ್ಟು ಬಿಡಬೇಕಾಯಿತು.

ಮತ್ತೆ, ಇಬ್ಬರು ಪ್ರತಿಸ್ಪರ್ಧಿಗಳ ಪಾತ್ರಗಳನ್ನು ತೆಗೆದುಕೊಳ್ಳೋಣ: ಚಂದ್ರ ಗುಪ್ತನನ್ನು ಗಾಂಭೀರ್ಯವೂ ದೃಢ ಸಂಕಲ್ಪವೂ ಉಳ್ಳ ಪ್ರಭುವನ್ನಾಗಿಯೂ, ಸಾಹಸ ದಲ್ಲಿಯೂ ರಾಜಕಾರ್ಯ ನೈಪುಣ್ಯದಲ್ಲಿಯೂ ಅಸಾಮಾನ್ಯನೆಂದು ತೋರ್ಪಡಿಸಿ ಕೊಂಡಿರುವ ತನ್ನ ಮಂತ್ರಿಯಲ್ಲಿ ತಕ್ಕಂತಹ ಗೌರವವುಳ್ಳವನನ್ನಾಗಿಯೂ ಚಿತ್ರಿಸಿದೆ. ಮಲಯಕೇತುವನ್ನಾದರೋ, ಮುಂದಾಲೋಚನೆಯಿಲ್ಲದವನನ್ನಾಗಿಯೂ, ಸಂಶಯಾತ್ಮನನ್ನಾಗಿಯೂ, ಗಾಂಭೀರ್ಯ ರಹಿತನನ್ನಾಗಿಯೂ, ಕೇವಲ ಬಾಲಿಶ ನನ್ನಾಗಿಯೂ, ತನ್ನ ನಂಬಿಕೆಯನ್ನಾಗಲಿ ಸಂಶಯವನ್ನಾಗಲಿ ಇರಿಸುವುದರಲ್ಲಿ ಯಾವಾಗಲೂ ತಪ್ಪಿಹೋಗುವನನ್ನಾಗಿಯೂ ಚಿತ್ರಿಸಿದೆ. ಇತರ ಸಾಮಾನ್ಯ ಪಾತ್ರ ಗಳಲ್ಲೆಲ್ಲ ಸ್ವಾಮಿ ಭಕ್ತಿಯು ಎಂತಹ ಸಂದರ್ಭದಲ್ಲೂ ಕಾಣಬರುವುದು. ಎಲ್ಲವೂ ಕುಟಿಲೋಪಾಯದ ಹಾದಿಯಲ್ಲಿಯೇ ಸಾಗುವುದು. ಇವೆಲ್ಲವನ್ನೂ ಬಹಳ ಚತುರತೆ ಯಿಂದ ಹೆಣೆದು ಕಥಾ ವಸ್ತುವನ್ನು ಕಟ್ಟಿದೆ. ಈ ವಿಚಾರದಲ್ಲಿ, ಸಂಸ್ಕೃತ ನಾಟಕ ಗಳಲ್ಲೆಲ್ಲ, ಮೃಚ್ಛಕಟಿಕೆಯ ವಸ್ತುವನ್ನೊಂದನ್ನು ಬಿಟ್ಟು, ಮುದ್ರಾರಾಕ್ಷಸ ನಾಟಕದ ವಸ್ತುವು ಅಸಮಾನವಾಗಿದೆ.

ಈ ನಾಟಕದ ಕರ್ತೃವಿನ ಹೆಸರು ವಿಶಾಖದತ್ತ, ಅಥವಾ ವಿಶಾಖದೇವ. ಈತನ ವಿಷಯವಾಗಿ ನಮಗೆ ನಿಸ್ಸಂಶಯವೆಂದು ತಿಳಿದಿರುವ ವಿಷಯಗಳೆಲ್ಲ ಈ ನಾಟಕದ ಪ್ರಸ್ತಾವನೆಯಲ್ಲಿ ಹೇಳಿರುವುವು ಮಾತ್ರವೇ. ಈತನು ಈ ಗ್ರಂಥವನ್ನಲ್ಲದೆ ಮತ್ತೆ ಯಾವ ಗ್ರಂಥವನ್ನಾದರೂ ರಚಿಸಿರುವನೆ ಎಂಬ ವಿಷಯವು ತಿಳಿಯದು. ಆ ಪ್ರಸ್ತಾವನೆಯಿಂದ, ವಿಶಾಖದತ್ತನು ಪೃಥುವಿನ ಮಗನೆಂದೂ, ಸಾಮಂತ ರಾಜನಾದ ವಾತೇಶ್ವರದತ್ತನ ಮೊಮ್ಮಗನೆಂದೂ ಮಾತ್ರ ತಿಳಿಯಬರುತ್ತದೆ. ಈ ಪೃಥುವಾಗಲಿ, ವಾತೇಶ್ವರನಾಗಲಿ ಯಾರೆಂಬುದೂ ಯಾವ ಕಾಲದಲ್ಲಿದ್ದರೆಂಬುದೂ ತಿಳಿದಿಲ್ಲ; ನಾಟಕವು ಬರೆದ ಕಾಲವು ಯಾವುದೆಂಬುದೂ ಸರಿಯಾಗಿ ತಿಳಿಯುವಂತಿಲ್ಲ; ಹನ್ನೊಂದು ಹನ್ನೆರಡನೆಯ ಶತಮಾನಗಳಲ್ಲಿ ಬರೆದಿರಬಹುದೆಂದು ಪ್ರೊ॥ ವಿಲ್ಸನ್ನರವರ ಊಹೆ; ಮತ್ತೆ ಕೆಲವರ ಅಭಿಪ್ರಾಯವು ಹನ್ನೊಂದನೆಯ ಶತಮಾನಕ್ಕೆ ಒಂದು ಶತಮಾನ ಹಿಂದೆಯೇ ರಚಿತವಾಗಿರಬೇಕೆಂಬುದು; ಮತ್ತೆ ಕೆಲವರ ಅಭಿಪ್ರಾಯವು ಏಳು, ಅಥವಾ ಎಂಟನೆಯ ಶತಮಾನ. ಇವೆಲ್ಲವನ್ನೂ ಕೂಲಂಕಷವಾಗಿ ವಿಮರ್ಶಿಸಿ, ವಿಶಾಖದತ್ತನ ಕಾಲವು ಎಂಟನೆಯ ಶತಮಾನದ ಆರಂಭವಾಗಿರಬಹುದೆಂದು ತೆಲಾಂಗರವರು ಅಭಿಪ್ರಾಯಪಡುತ್ತಾರೆ.

---

## ಮುದ್ರಾರಾಕ್ಷಸ ನಾಟಕದ ಉಪೋದ್ಘಾತ ಪ್ರಕರಣದಲ್ಲಿ ಹೇಳಿರುವ ವಿಷಯಗಳು

ಪುರಾಣಗಳಲ್ಲಿ, "ನಂದಾಂತಂ ಕ್ಷತ್ರಿಯ ಕುಲಂ"—ಎಂದರೆ, 'ಕ್ಷತ್ರಿಯ ಕುಲವು ನಂದರ ಕೊನೆಯ ವರೆಗೆ ಮಾತ್ರವೇ' ಎಂದು ಹೇಳಿದೆ.

ಕಲಿಯುಗದ ಆದಿ ಭಾಗದಲ್ಲಿ ನಂದರೆಂಬ ಹೆಸರಿನ ಕೆಲವು ರಾಜರಿದ್ದರು; ಅವರಲ್ಲಿ ಸರ್ವಾರ್ಥಸಿದ್ಧಿಯೆಂಬ ಪರಾಕ್ರಮಶಾಲಿಯೊಬ್ಬನು. ಅವನು ಒಂಬೈನೂರು ಕೋಟಿ ದ್ರವ್ಯಗಳಿಗೆ ಅಧಿಪತಿಯಾಗಿ ಬಹು ಕಾಲ ರಾಜ್ಯವಾಳಿದನು. ವಂಶ ಪರಂಪರೆಯಾಗಿ ಬಂದ ವಕ್ರನಾಸನೇ ಮೊದಲಾದ ಬ್ರಾಹ್ಮಣರು ಸರ್ವಾರ್ಥಸಿದ್ಧಿಗೆ ಮಂತ್ರಿಗಳಾಗಿದ್ದರು. ಅವರಲ್ಲಿ ರಾಕ್ಷಸನೆಂಬ ಬ್ರಾಹ್ಮಣನು ಪ್ರಸಿದ್ಧನು. ಇವನು ದಂಡನೀತಿ ಶಾಸ್ತ್ರದಲ್ಲಿ ನಿಪುಣನಾಗಿಯೂ, ಸಂಧಿ ವಿಗ್ರಹ ಮೊದಲಾದ ತಂತ್ರಗಳಲ್ಲಿ ಚತುರನಾಗಿಯೂ, ಪರಿಶುದ್ಧನಾಗಿಯೂ, ಶೂರನಾಗಿಯೂ ಇದ್ದು, ನಂದರುಗಳಲ್ಲೆಲ್ಲ ಗೌರವವುಳ್ಳವನಾಗಿ ಕಾರ್ಯಭಾರ ಮಾಡುತ್ತಿದ್ದನು.

ಸರ್ವಾರ್ಥಸಿದ್ಧಿಗೆ ಸುನಂದಾ ಎಂಬ ಜ್ಯೇಷ್ಠ ಪತ್ನಿಯೂ ಮುರಾ ಎಂಬ ಶೂದ್ರ ಪತ್ನಿಯೂ ಇದ್ದರು. ರಾಜನಿಗೆ ಮುರಾ ದೇವಿಯಲ್ಲಿ ಅತ್ಯಂತ ಪ್ರೀತಿಯಿದ್ದಿತು. ಇವನು ಒಂದಾನೊಂದು ಕಾಲದಲ್ಲ ತನ್ನಲ್ಲಿಗೆ ಅತಿಥಿಯಾಗಿ ಬಂದ ಒಬ್ಬ ತಪಸ್ವಿಯನ್ನು ಅರ್ಘ್ಯ ಪಾದ್ಯಾದಿಗಳಿಂದ, ತನ್ನ ಹೆಂಡತಿಯೊಡಗೂಡಿ, ಭಕ್ತಿಯಿಂದ ಪೂಜಿಸಿ ಆತನ ಪಾದೋದಕವನ್ನು ತನ್ನ ಇಬ್ಬರು ಹೆಂಡತಿಯರ ತಲೆಯ ಮೇಲೆಯೂ ಪ್ರೋಕ್ಷಿಸಿದನು. ದೊಡ್ಡವಳ ತಲೆಯ ಮೇಲೆ ಒಂಬತ್ತು ಹನಿಗಳು ಬಿದ್ದುವು;

ಮುರಾದೇವಿಯ ತಲೆಯ ಮೇಲೆ ಒಂದು ಹನಿ ಮಾತ್ರ ಬಿದ್ದಿತು; ಇದನ್ನು ಆಕೆಯು ಭಕ್ತಿಯಿಂದ ತಲೆಯಲ್ಲಿ ತಳೆದಳು. ಇವಳ ಭಕ್ತಿಯನ್ನು ನೋಡಿ ಬ್ರಾಹ್ಮಣನು ಬಹಳ ಪ್ರಸನ್ನನಾದನು.

ಕೆಲವು ಕಾಲ ಕಳೆದ ಮೇಲೆ ಮುರಾದೇವಿಯು ಮೌರ್ಯನೆಂಬ ಅತ್ಯಂತ ಗುಣವಂತನಾದ ಮಗನನ್ನು ಹಡೆದಳು; ಸುನಂದೆಯು ಅನೇಕ ಗರ್ಭಗಳನ್ನೊಳಕೊಂಡ ಮಾಂಸದ ಮುದ್ದೆಯೊಂದನ್ನು ಹೆತ್ತಳು; ಅದು ಒಂಬತ್ತು ತುಂಡುಗಳಾಗಿ ಒಡೆಯಿತು. ರಾಕ್ಷಸನು ಆ ತುಂಡುಗಳನ್ನು ಎಣ್ಣೆಯ ಕೊಪ್ಪರಿಗೆಯಲ್ಲಿಟ್ಟು ಬಹಳ ಪ್ರಯಾಸದಿಂದ ಪೋಷಿಸಿದನು. ಅವು ಬೆಳೆದು ಒಂಬತ್ತು ಜನ ವೀರರಾಗಿ ಏರ್ಪಟ್ಟುವು. ಅವರಿಗೆ ತಂದೆಯು ನಂದರೆಂಬ ಹೆಸರನ್ನು ಕೊಟ್ಟು ಕಾಲಕ್ರಮದಲ್ಲಿ ತನ್ನ ದೊರೆತನವನ್ನು ಅವರಿಗೊಪ್ಪಿಸಿ, ಮೌರ್ಯನನ್ನು ಅವರ ಸೇನಾಪತಿಯನ್ನಾಗಿ ಮಾಡಿ, ತಾನು ವಿಶ್ರಾಂತಿ ಸುಖವನ್ನನುಭವಿಸುತ್ತಿದ್ದನು. ಮೌರ್ಯನಿಗೆ ಚಂದ್ರಗುಪ್ತನೇ ಮೊದಲಾದ ನೂರು ಜನ ಮಕ್ಕಳು ಹುಟ್ಟಿದರು. ಮಹಾ ಬಲಶಾಲಿಗಳಾದ ಮಕ್ಕಳಿಂದ ಕೂಡಿದ ಮೌರ್ಯನು ನಂದರನ್ನು ಮೀರಿಸುವಂತೆ ತೋರಿತು. ದುರಾತ್ಮರಾದ ನಂದರು, ಇವರೊಡನೆ ಕಲೆತು ಮಾತನಾಡಬೇಕೆಂಬ ನೆವದಿಂದ, ಮೌರ್ಯನನ್ನೂ ಆತನ ಮಕ್ಕಳನ್ನೂ ಒಂದು ನೆಲಮಾಳಿಗೆಯಲ್ಲಿ ಬಂಧಿಸಿದರು; ಚಂದ್ರಗುಪ್ತನೊಬ್ಬನು ವಿನಾ ಮಿಕ್ಕವರೆಲ್ಲರೂ ಅಲ್ಲಿ ಸತ್ತುಹೋದರು.

ಈ ಸಂದರ್ಭದಲ್ಲಿ, ಸಿಂಹಳರಾಜನು ಒಂದು ಕೃತ್ರಿಮ ಸಿಂಹವನ್ನು, ಜೀವದಿಂದಿರುವ ಸಿಂಹದಂತೆಯೇ ಕಾಣಿಸುವಂತೆ, ಜೇನು ಮೇಣದಿಂದ ಮಾಡಿಸಿ ಪಂಜರದಂತಿರುವ ಒಂದು ಬೋನಿನಲ್ಲಿಟ್ಟು ನಂದರ ಬಳಿಗೆ ಇದನ್ನು ಕಳುಹಿಸಿ, "ಈ ಬೋನನ್ನು ತೆರೆಯದೆ ಈ ಕ್ರೂರವಾದ ಸಿಂಹವನ್ನು ಯಾವನು ಆಚೆಗೆ ಓಡಿಸುವನೋ ಅವನು ಜಾಣನೆಂದು ನೀವರಿಯಿರಿ" ಎಂದು ತಿಳಿಸಿದನು. ಮುಂದೆ ತಮಗೆ ಸಿಂದೆ ಬರುವುದೆಂಬ ಆಲೋಚನೆ ಹೊಳೆಯದ ನಂದರ ಮೋಸಕ್ಕೆ ಸಿಕ್ಕುಬಿದ್ದಿದ್ದ ಚಂದ್ರಗುಪ್ತನು ಈ ಬೋನಿನ ಸಿಂಹವನ್ನು ಚೆನ್ನಾಗಿ ಪರೀಕ್ಷಿಸಿ, ಕಬ್ಬಿಣದ ಸಲಾಕಿಯೊಂದನ್ನು ಚೆನ್ನಾಗಿ ಕಾಯಿಸಿ ಹಿಡಿದು, ಆ ಸಿಂಹದ ಮೆಯ್ಯನ್ನು ಕರಗಿಸಿಬಿಟ್ಟನು. ಇದನ್ನು ಕಂಡು ಎಲ್ಲರೂ ಆಶ್ಚರ್ಯಪಟ್ಟರು. ಈ ಕಾರಣದಿಂದ ಚಂದ್ರಗುಪ್ತನಿಗೆ ಬಂಧವಿಮೋಚನೆಯಾದರೂ ಮುಂದೆ ಅವನು ಉಳಿದುಕೊಂಡುದು ದೈವಾನುಗ್ರಹದಿಂದಲೇ.

ಚಂದ್ರಗುಪ್ತನು ಆಜಾನುಬಾಹುವಾಗಿ ಶರೀರ ಸೌಂದರ್ಯದಿಂದಲೂ ಶೌರ್ಯೌದಾರ್ಯಾದಿ ಗುಣಗಳಿಂದಲೂ ರಾಜಲಕ್ಷಣವನ್ನು ಪಡೆದಿದ್ದನು. ನಂದರು ಇವನಲ್ಲಿ ಅಸೂಯೆಯನ್ನು ಬಿಡದೆ, ಕಪಟದಿಂದ ಪುನಃ ಇವನನ್ನು ಕೊಲ್ಲಲು ಯತ್ನಿಸಿ, ಅನ್ನಸತ್ರಾಧಿಕಾರದಲ್ಲಿ ನಿಯಮಿಸಿದರು. ಇವನು ನಂದರಿಗೆ ಪ್ರತೀಕಾರ ಮಾಡುವ ಸಮಯವನ್ನು ಹುಡುಕುತ್ತ ಅಲ್ಲಿಯೇ ಇದ್ದನು. ಒಂದಾನೊಂದು ದಿನ, ಬಹಳ ಕೋಪಿಷ್ಠನಾದ ಬ್ರಾಹ್ಮಣನೊಬ್ಬನು ಆ ದಾರಿಯಲ್ಲಿ ಬರುತ್ತ, ತನ್ನ ಕಾಲಿಗೆ ದರ್ಭೆಯ ಹುಲ್ಲು ತೊಡರಿಕೊಳ್ಳಲು, ಕೋಪಾವಿಷ್ಟನಾಗಿ ಅದನ್ನು ಬುಡಮುಟ್ಟ

ಕಿತ್ತು ಸುಡುವುದರಲ್ಲಿ ಉದ್ಯುಕ್ತನಾಗಿದ್ದುದನ್ನು ಚಂದ್ರಗುಪ್ತನು ಕಂಡನು. ಇಂತಹ ಕೋಪಿಷ್ಠನಾದವನೇ ನಂದರನ್ನು ನಾಶಗೊಳಿಸುವುದರಲ್ಲಿ ಸಮರ್ಥನೆಂದಾಲೋಚಿಸಿ ಚಂದ್ರಗುಪ್ತನು ತನ್ನ ಇಷ್ಟಸಿದ್ಧಿಗಾಗಿ ಅವನ ಶರಣುಹೊಕ್ಕನು. ವಿಷ್ಣುಗುಪ್ತನೆಂಬ ಆ ಬ್ರಾಹ್ಮಣನು ತರುಣನು, ಶುಕ್ರಾಚಾರ್ಯರ ದಂಡನೀತಿಯಲ್ಲಿಯೂ ಜ್ಯೋತಿಶ್ಶಾಸ್ತ್ರದಲ್ಲಿಯೂ ಪ್ರವೀಣನು, ನೀತಿಶಾಸ್ತ್ರವನ್ನು ರಚಿಸಿದ ಚಣಕನೆಂಬವನ ಮಗನು, ಶ್ರೋತ್ರಿಯನು, ಎಲ್ಲ ಧರ್ಮಗಳನ್ನೂ ಅರಿತವನು, ಚಾಣಕ್ಯನೆಂದು ಪ್ರಸಿದ್ಧನಾದವನು. ಈತನಿಗೆ ಗುಣಶಾಲಿಯಾದ ಚಂದ್ರಗುಪ್ತನಲ್ಲಿ ಹೆಚ್ಚಾದ ಪಕ್ಷಪಾತವುಂಟಾಯಿತು. ಚಂದ್ರಗುಪ್ತನು ನಂದರಿಂದ ತನಗುಂಟಾಗಿದ್ದ ವ್ಯಥೆಯೆಲ್ಲವನ್ನೂ ಚಾಣಕ್ಯನಿಗೆ ತಿಳಿಸಲು, ಆತನು ಚಂದ್ರಗುಪ್ತನಿಗೆ ಅರ್ಧರಾಜ್ಯವನ್ನು ಕೊಡಿಸುವುದಾಗಿ ಪ್ರತಿಜ್ಞೆ ಮಾಡಿದನು.

ಚಾಣಕ್ಯನು ಹಸಿವಿನಿಂದ ಬಳಲಿದವನಾಗಿ ನಂದರ ಅನ್ನಸತ್ರಕ್ಕೆ ಹೋಗಿ ನಂದರು ಕುಳಿತುಕೊಳ್ಳುವ ಅಗ್ರಾಸನದಲ್ಲಿ ಕುಳಿತುಕೊಂಡನು. ಕೇಡಡಸಿದ ನಂದರು ಆ ಮಹಾತ್ಮನ ಮೇಲೆ ಕೋಪಗೊಂಡು, ತಮ್ಮ ಮಂತ್ರಿಗಳೆಲ್ಲರೂ ಬೇಡ ಬೇಡವೆಂದು ಹೇಳುತ್ತಿದ್ದರೂ, ಅವನನ್ನು ಅಲ್ಲಿಂದ ಎಳೆಯಿಸಿಹಾಕಿ ಅಪಮಾನಪಡಿಸಿದರು. ಚಾಣಕ್ಯನು ಕೋಪಾಂಧನಾಗಿ ಆ ಸಭೆಯ ಮಧ್ಯದಲ್ಲಿ ಕೈಯಿಂದ ತನ್ನ ಶಿಖೆಯನ್ನು ಬಿಚ್ಚಿಕೊಂಡು ಈ ರೀತಿಯಾಗಿ ತನ್ನನ್ನು ಅಪಮಾನಪಡಿಸಿದ ಅಧಮರಾದ ನಂದರ ವಂಶವನ್ನು ಸುಟ್ಟು ನಿರ್ಮೂಲ ಮಾಡಿದ ಹೊರತು ತನ್ನ ಶಿಖೆಯನ್ನು ಕಟ್ಟೆನೆಂದು ತೀವ್ರ ಪ್ರತಿಜ್ಞೆ ಮಾಡಿದನು. ಹೀಗೆ ಹೇಳಿ ಅತ್ಯಂತ ಕೋಪದಿಂದ ಆತನು ಕೂಡಲೆ ಆ ಪಟ್ಟಣವನ್ನು ಬಿಟ್ಟು ಹೊರಟುಹೋದನು. ತಮ್ಮ ಸಂಪತ್ತು ನಾಶಹೊಂದುವುದಕ್ಕಾಗಿಯೇ, ಮದಾಂಧರಾದ ನಂದರಿಗೆ ಆ ಬ್ರಾಹ್ಮಣನನ್ನು ಸಮಾಧಾನಗೊಳಿಸಬೇಕೆಂಬ ಬುದ್ಧಿಯು ಹೊಳೆಯಲಿಲ್ಲ. ನಂದರು ತನ್ನನ್ನು ಎಲ್ಲಿ ನಿಗ್ರಹಿಸುವರೋ ಎಂಬ ಭಯದಿಂದ ಚಂದ್ರಗುಪ್ತನು ಗುಟ್ಟಾಗಿ ಆ ಪಟ್ಟಣವನ್ನು ಬಿಟ್ಟು ಹೊರಟು ಚಾಣಕ್ಯನನ್ನು ಸೇರಿ ಅವನ ಆಶ್ರಯದಲ್ಲಿ ನಿಂತನು.

ಚಾಣಕ್ಯನು ಚಂದ್ರಗುಪ್ತನನ್ನು ಒಳಗುಮಾಡಿಕೊಂಡು, ಕುಟಿಲ ನೀತಿಯನ್ನು ಪ್ರಯೋಗಿಸಿ, ಅವನಿಂದ ನಂದಕುಲ ಮೂಲೋತ್ಪಾಟನವನ್ನು ಮಾಡಬೇಕೆಂದು ಯತ್ನಿಸಿದನು. ಇದಕ್ಕಾಗಿ ತನ್ನ ಮಿತ್ರನಾದ ಇಂದುಶರ್ಮನನ್ನು ಕ್ಷಪಣಕವೇಷಧಾರಿಯನ್ನಾಗಿ ಮಾಡಿ, ಆಭಿಚಾರಿಕ ವಿದ್ಯೆಯನ್ನರಿತ ಅವನಿಂದ ರಾಕ್ಷಸನೇ ಮೊದಲಾದವರನ್ನು ಮೋಸಗೊಳಿಸಿದನು; ಮಹಾ ಬಲಶಾಲಿಯಾದ ಪರ್ವತರಾಜನಿಗೆ ನಂದರಾಜ್ಯದಲ್ಲಿ ಅರ್ಧ ಭಾಗವನ್ನು ಕೊಡುವುದಾಗಿ ಮಾತು ಕೊಟ್ಟು, ಅವನು ತನ್ನ ಕಡೆಯ ಮ್ಲೇಚ್ಛ ಸೈನ್ಯಸಮೇತನಾಗಿ ಕುಸುಮ (ಪಾಟಲೀ) ಪುರವನ್ನು ಮುತ್ತಿಗೆ ಹಾಕುವಂತೆ ಏರ್ಪಡಿಸಿದನು.

ನಂದರೆಲ್ಲರೂ ರಾಕ್ಷಸನ ಒತ್ತಾಸೆಯಿಂದ ಕೊಬ್ಬಿ ಬಹಳ ಸಂಭ್ರಮದಿಂದ ಶತ್ರುಗಳ ಮೇಲೆ ಯುದ್ಧವನ್ನು ಹೂಡಿದರು. ಪರ್ವತರಾಜನ ಸೈನ್ಯವನ್ನು ನೋಡಿ

ರಾಕ್ಷಸನು, ತಮಗೆ ಅಪಜಯವಾಗಬಹುದೆಂಬ ಶಂಕೆಯಿಂದ, ಅವನೊಡನೆ ಸಂಧಿ ಮಾಡಿಕೊಂಡು, ವಂಚನೆಯಿಂದ ಮೌರ್ಯನನ್ನು ಕೊಲ್ಲುವ ಪ್ರಯತ್ನ ಮಾಡಿದನು. ಆದರೂ ಇವನ ಪ್ರಯತ್ನಗಳು ಸಾಗದೆ ಪರ್ವತರಾಜನ ಸೈನ್ಯದ ಸಹಾಯದಿಂದಲೇ ಚಾಣಕ್ಯನು ನಂದರನ್ನು ನಿರ್ಮೂಲಗೊಳಿಸಿದನು.

ಅನಂತರ, ರಾಕ್ಷಸನು ಬಲವೂ ಸಾಹಸವೂ ಕುಂದಿದವನಾದರೂ, ಸರ್ವ ವಿಧದಲ್ಲಿಯೂ ಅಳಿದುಹೋಗಿ, ನಿರ್ಭಯದಿಂದ ವಾಸಮಾಡಲಸಾಧ್ಯವಾದ ನಗರವನ್ನು ನೋಡಿ ವ್ಯಥೆಪಟ್ಟು, ವೃದ್ಧನಾದ ಸರ್ವಾರ್ಥಸಿದ್ಧಿರಾಯನ ಪ್ರಾಣವನ್ನುಳಿಸ ಬೇಕೆಂಬ ಇಚ್ಛೆಯಿಂದ, ಅವನನ್ನು ಸುರಂಗ ಮಾರ್ಗದಿಂದ ಗುಟ್ಟಾಗಿ ಊರ ಹೊರಗೆ ಕಳುಹಿಸಿದನು; ನಂದರಲ್ಲಿ ವಿಶ್ವಾಸಿಗಳಾದ ಪಟ್ಟಣಿಗರು ಪಟ್ಟಣವನ್ನು ಚಂದ್ರಗುಪ್ತ ನಿಗೆ ಒಪ್ಪಿಸುವಂತೆ ಮಾಡಿ, ತಾನು ಚಂದ್ರಗುಪ್ತನ ಸ್ನೇಹಿತನಂತೆಯೇ ನಟಿಸುತ್ತ, ಮಾಯೆ ಅಭಿಚಾರಗಳಿಂದ ಸೃಷ್ಟಿಮಾಡಿದ ವಿಷಕನ್ಯಕೆಯನ್ನು ಚಂದ್ರಗುಪ್ತನಿಗೆ ಒಪ್ಪಿಸಿದನು. ಈ ಮೋಸವನ್ನರಿತ ಚಾಣಕ್ಯನು ಆ ವಿಷಕನ್ಯಕೆಯ ಮೂಲಕ ಪರ್ವತರಾಜನನ್ನು ಕೊಲ್ಲಿಸಿ, ತನ್ನ ಆಪ್ತರ ಮೂಲಕ ಮೋಸವನ್ನುಪಯೋಗಿಸಿ (ಪರ್ವತರಾಜನ ಮಗನಾದ) ಮಲಯಕೇತುವನ್ನು ಗುಟ್ಟಾಗಿ ಬೆದರಿಸಿ ಓಡಿಸಿದನು.

ರಾಕ್ಷಸನು ಪುರಪ್ರವೇಶ ಕಾಲದಲ್ಲಿ ಚಂದ್ರಗುಪ್ತನನ್ನು ಕೊಲ್ಲಬೇಕೆಂದು ತನ್ನ ಸ್ನೇಹಿತರಾದ ದಾರುವರ್ಮಾದಿಗಳಿಂದ ಕೂಟಯಂತ್ರ ಮೊದಲಾದುವನ್ನು ಅಣಿಮಾಡಿಸಿದನು. ಇದನ್ನರಿತ ಕೌಟಿಲ್ಯನು ಅರಾಜಕವಾದ ಕುಸುಮಪುರವನ್ನು ಸ್ವಾಧೀನ ಮಾಡಿಕೊಂಡರೂ, ಆ ಪುರದಲ್ಲಿ ನಂದರ ಅನುರಾಗಿಗಳೇ ಬಹಳ ಮಂದಿ ಯಿರುವುದರಿಂದ, ಚಂದ್ರಗುಪ್ತನನ್ನು ಕೂಡಲೆ ಪುರಪ್ರವೇಶ ಮಾಡಿಸಲಿಲ್ಲ; ತನ್ನ ಕಡೆಯವನಾದ ಪರ್ವತರಾಜನನ್ನು ಕೊಲ್ಲಿಸಬೇಕೆಂಬ ಆಲೋಚನೆಯಿಂದ ಕ್ರೂರನಾದ ರಾಕ್ಷಸನೇ ವಿಷಕನ್ಯೆಯನ್ನು ಪರ್ವತೇಶ್ವರನ ಬಳಿಗೆ ಕಳುಹಿಸಿ ಅವನನ್ನು ಕೊಲ್ಲಿಸಿದ ನೆಂಬ ಸಮಾಚಾರವನ್ನು ಹುಟ್ಟಿಸಿ ಜನರನ್ನು ಸಮಾಧಾನಗೊಳಿಸಿದನು. ತಾನು ಪರ್ವತರಾಜನಿಗೆ ಕೊಡುವೆನೆಂದು ಮೊದಲು ಹೇಳಿದ್ದ ನಂದರ ಅರ್ಧ ರಾಜ್ಯವನ್ನು ಪರ್ವತರಾಜನ ತಮ್ಮನಾದ ವೈರೋಚಕನಿಗೆ ಕೊಡುವೆನೆಂದು ಆಶೆ ಹುಟ್ಟಿಸಿ, ತಮ್ಮ ಅಣ್ಣನ ಕೊಲೆಯಿಂದ ಹೆದರಿ ಓಡಿಹೋಗುತ್ತಿದ್ದ ವೈರೋಚಕನನ್ನು ಚಾಣಕ್ಯನು ಅಲ್ಲಿಯೇ ನಿಲ್ಲಿಸಿಕೊಂಡನು; ವನದಲ್ಲಿ ತಪಸ್ಸುಮಾಡುವುದಕ್ಕಾಗಿ ನಿಂತ ಸರ್ವಾರ್ಥ ಸಿದ್ಧಿಯು ಇರುವ ಸ್ಥಳವನ್ನು ಗೊತ್ತುಹಚ್ಚಿ ಅವನನ್ನು ಅಲ್ಲಿಯೇ ಕೊಲ್ಲಿಸಿದನು.

ಸರ್ವಾರ್ಥಸಿದ್ಧಿಯು ಸತ್ತ ಸಮಾಚಾರವನ್ನು ರಾಕ್ಷಸನು ಕೇಳಿ ಬಹಳ ದುಃಖಿತನಾಗಿ ಮಲಯಕೇತುವಿನ ಬಳಿಗೆ ಹೋಗಿ ಅವನೊಡನೆ ಈ ರೀತಿಯಾದ ಪ್ರೋತ್ಸಾಹ ವಚನಗಳನ್ನಾಡಿದನು:—" ಇನ್ನೂ ರಾಜ್ಯದಲ್ಲಿ ಭದ್ರವಾಗಿ ನೆಲೆಗೊಳ್ಳದ ಚಂದ್ರಗುಪ್ತನನ್ನು ಬಲಾತ್ಕಾರದಿಂದ ಬೇಗನೆ ರಾಜ್ಯಭ್ರಷ್ಟನನ್ನಾಗಿ ಮಾಡಿ ಸ್ವರ್ಗಸ್ಥ ರಾದ ನನ್ನ ಪ್ರಭುಗಳ ಋಣವನ್ನು ನಾನು ತೀರಿಸಬೇಕೆಂದಿರುವೆನು. ಪುಷ್ಪಪುರದ ಪ್ರಜೆಗಳು ಕೂಡ ಅಂತರಂಗದಲ್ಲಿ ನಮ್ಮಲ್ಲಿಯೇ ವಿಶ್ವಾಸವುಳ್ಳವರಾಗಿರುವರು. ನನ್ನ

ಆಪ್ತರು ಚಂದ್ರಗುಪ್ತನನ್ನು ಗುಟ್ಟಾಗಿ ಕೊಲ್ಲಲು ನನ್ನಿಂದ ನಿಯಮಿತರಾಗಿ ಕುತೂಹಲಿಗಳಾಗಿರುವರು. ನನ್ನ ಕೈಯಲ್ಲಾಗುವ ಉಪಾಯಗಳನ್ನೂ ಪರಾಕ್ರಮವನ್ನೂ ಉಪಯೋಗಿಸಿ ಅವೆಲ್ಲವೂ ನಿನಗೆ ಪ್ರಯೋಜನವಾಗುವಂತೆ ನಾನು ಮಾಡುವೆನು. ಚಾಣಕ್ಯನನ್ನೂ ಚಂದ್ರಗುಪ್ತನನ್ನೂ ನೀನು ಕೊಲ್ಲು; ಆ ನಂದ ರಾಜ್ಯವು ನಿನಗೇ ದೊರೆಯುವುದು. ಪಾಪಿಯಾದ ಚಾಣಕ್ಯನು ಮೌರ್ಯರ ರಾಜ್ಯದಲ್ಲಿ ಅರ್ಧ ಭಾಗವನ್ನು ನಿಮ್ಮ ತಂದೆಗೆ ಕೊಡಬೇಕಾಗುವುದೆಂದು ಆತನನ್ನು ವಿಷಕನ್ಯೆಯ ಮೂಲಕ ಕೊಲ್ಲಿಸಿದನು. ಈ ಚಾಣಕ್ಯನನ್ನು ಉಪಾಯದಿಂದಾಗಲಿ ಸಾಹಸದಿಂದಾಗಲಿ ಹೇಗಾದರೂ ಕೊಂದು ದೊರೆತನವೆಲ್ಲವನ್ನೂ ನಿನಗೊಪ್ಪಿಸಿ ನಮ್ಮ ಒಡೆಯರ ಹಂಗನ್ನು ನೀಗುವೆನು.'' ಈ ರೀತಿಯಾಗಿ ಚತುರನೂ ಸಾಹಸಿಯೂ ಆದ ರಾಕ್ಷಸನು ಮಲಯಕೇತುವನ್ನು ಅನೇಕ ಪ್ರಕಾರವಾಗಿ ಪ್ರೋತ್ಸಾಹಿಸಿ, ಮ್ಲೇಚ್ಛರ ಸೈನ್ಯದ ಸಹಾಯದಿಂದ ಚಂದ್ರಗುಪ್ತನನ್ನು ಜಯಿಸಲುದ್ಯುಕ್ತನಾದನು.

ಇಲ್ಲಿಂದ ಮುಂದಣ ಕಥೆಯನ್ನು ನಾಟಕದಲ್ಲಿ ಕವಿಯು ಹೇಳಿಕೊಂಡುಹೋಗುತ್ತಾನೆ.



---

## ಮುದ್ರಾರಾಕ್ಷಸ ನಾಟಕ ಕಥಾ ಸಂಗ್ರಹ*

---

### ಮೊದಲನೆಯ ಅಂಕ

ನಂದರ ವಂಶವು ನಿರ್ಮೂಲವಾಗಿದ್ದರೂ ಅಮಾತ್ಯ ರಾಕ್ಷಸನು ಮಲಯಕೇತುವನ್ನಾಶ್ರಯಿಸಿ ಚಂದ್ರಗುಪ್ತನನ್ನು ನಾಶಗೊಳಿಸುವ ಪ್ರಯತ್ನದಲ್ಲಿ ತೊಡಗಿರುವುದನ್ನು ಕಂಡು ಚಾಣಕ್ಯನು ಅಮಾತ್ಯನ ಸ್ವಾಮಿ ಭಕ್ತಿಗೆ ತಲೆದೂಗುತ್ತ, ಹೇಗಾದರೂ ಮಾಡಿ ಆತನನ್ನು ಒಲಿಸಿಕೊಳ್ಳಬೇಕೆಂದು ಯತ್ನಿಸುವನು; ಅಮಾತ್ಯ ರಾಕ್ಷಸನ ಸಹಾಯವಿದ್ದರೂ ಮಲಯಕೇತುವು ಭಯಪಟ್ಟು ಓಡಿಹೋಗುವಂತೆ ಭಾಗುರಾಯಣನ ಮೂಲಕ ಏರ್ಪಡಿಸುವನು; ಚಂದ್ರಗುಪ್ತನು ಚಿಕ್ಕಂದಿನಿಂದಲೂ ದಾನಮಾನಾದಿಗಳಿಂದ ವೃದ್ಧಿಗೊಳಿಸಿದ್ದ ಭದ್ರಭಟ ಮೊದಲಾದ ಪ್ರಧಾನ ಪುರುಷರಿಂದ ಚಂದ್ರಗುಪ್ತನ ಪಕ್ಷವಾಗಿ ಕುಸುಮಪುರದಲ್ಲಿ ನಡೆಯಬೇಕಾದ ಕಾರ್ಯಭಾಗವನ್ನು ನಡೆಯಿಸುವನು; ತನ್ನ ಸ್ನೇಹಿತನಾದ ಇಂದುಶರ್ಮನನ್ನು ಕ್ಷಪಣಕ ವೇಷದಿಂದ ನಂದರ ಅಮಾತ್ಯರಲ್ಲಿ ಬಹಳ ಸ್ನೇಹದಿಂದಿದ್ದು ತನಗೆ ಸಹಾಯಕನಾಗಿರುವಂತೆ ನಿಯಮಿಸಿರುವನು; ರಾಕ್ಷಸನಿಗೆ ಆತನಲ್ಲಿ ಹೆಚ್ಚಾದ ನಂಬಿಕೆಯಿರುವುದು. ಹೀಗೆ ಚಾಣಕ್ಯನು ಶತ್ರುಗಳ ವಿಚಾರವನ್ನೆಲ್ಲ ತಿಳಿಯುವುದಕ್ಕೆ ತಕ್ಕ ಉಪಾಯಗಳನ್ನು ಕಲ್ಪಿಸಿ ತನ್ನ ಪ್ರಯತ್ನಗಳಲ್ಲಿ ಯಾವ ನ್ಯೂನತೆಯೂ ಇಲ್ಲದಂತೆ ಏರ್ಪಾಡು ಮಾಡಿರುವನು.

---

* ಪರಿಷತ್ಪಂಡಿತರಾಗಿದ್ದ ಗತಿಸಿದ ಕಡಬದ ನಂಜುಂಡಶಾಸ್ತ್ರಿಗಳು ಸಂಸ್ಕೃತದಿಂದ ಕನ್ನಡಕ್ಕೆ ಪರಿವರ್ತಿಸಿದ ಪ್ರತಿಯಿಂದ ಸಂಗ್ರಹಿಸಲಾಗಿದೆ.—ಸಂಪಾದಕ

ಚಾಣಕ್ಯನ ಗೂಢಚಾರಿಯೊಬ್ಬನು ಆತನ ಬಳಿಗೆ ಬಂದು, ಅಮಾತ್ಯ ರಾಕ್ಷಸನು ತನ್ನ ಹೆಂಡತಿಯನ್ನೂ ಮಗುವನ್ನೂ ಚಂದನದಾಸನೆಂಬ ಸೆಟ್ಟಿಯ ಮನೆಯಲ್ಲಿ ಗೂಢವಾಗಿಟ್ಟಿರುವ ವಿಚಾರವನ್ನು ಹೇಳಿ, ಆ ಮನೆಗೆ ತಾನು ವೇಷಧಾರಿಯಾಗಿ ಹೋಗಿದ್ದಾಗ ಅಮಾತ್ಯ ರಾಕ್ಷಸನ ಹೆಂಡತಿಯ ಕೈಯಲ್ಲಿದ್ದ ರಾಕ್ಷಸನ ಮುದ್ರೆಯುಂಗುರವು ಅಕಸ್ಮಾತ್ತಾಗಿ ತನಗೆ ಸಿಕ್ಕಿದುದನ್ನು ತಿಳಿಸಿ, ಆ ಉಂಗುರವನ್ನು ಚಾಣಕ್ಯನಿಗೆ ಕೊಡುವನು. ಚಾಣಕ್ಯನಿಗೆ ಬಹಳ ಸಂತೋಷವಾಗುವುದು. ತರುವಾಯ ಆತನು ಅಮಾತ್ಯ ರಾಕ್ಷಸನನ್ನು ನಿರ್ಬಂಧಪಡಿಸಿ ಚಂದ್ರಗುಪ್ತನಿಗೆ ಅನುಕೂಲನಾಗುವಂತೆ ಮಾಡುವುದಕ್ಕಾಗಿ ಅನೇಕ ಉಪಾಯಗಳನ್ನು ಹೂಡುವನು: ಚಂದನದಾಸನನ್ನು ಕರೆಕಳುಹಿಸಿ ರಾಕ್ಷಸನ ಹೆಂಡತಿಯನ್ನೂ ಮಗುವನ್ನೂ ತಮಗೆ ಒಪ್ಪಿಸಿಬಿಡುವಂತೆ ಎಷ್ಟು ವಿಧವಾಗಿ ಹೇಳಿದರೂ, ಅವರು ತನ್ನ ಮನೆಯಲ್ಲಿಲ್ಲವೆಂದು ಚಂದನದಾಸನು ಸಾಧಿಸುವನು; ತನ್ನನ್ನು ಚಾಣಕ್ಯನು ಕರೆಕಳುಹಿಸಿದೊಡನೆಯೇ ತನ್ನ ಆಯುಸ್ಸು ಮುಗಿಯಿತೆಂದು ತಿಳಿದು, ರಾಕ್ಷಸನ ಹೆಂಡತಿಯನ್ನೂ ಮಗುವನ್ನೂ ತಕ್ಕಂತೆ ಜೋಕೆ ಪಡಿಸಲು ಏರ್ಪಾಡುಮಾಡಿ ಬರುವನು. ಚಾಣಕ್ಯನು ಚಂದನದಾಸನನ್ನು ಶೂಲಕ್ಕೆ ಹಾಕಿಸುವಂತೆ ಹೇಳಿ ಬಂಧನದಲ್ಲಿಡಿಸುವನು.

ಪರ್ವತರಾಜನಿಗೆ ಉದಕ ಕ್ರಿಯೆಯನ್ನು ಮಾಡಲಪೇಕ್ಷಿಸಿ, ಆತನ ಆಭರಣಗಳನ್ನು ಬ್ರಾಹ್ಮಣರಿಗೆ ದಾನ ಮಾಡುವುದಕ್ಕಾಗಿ ಚಂದ್ರಗುಪ್ತನು ಚಾಣಕ್ಯನ ಅಪ್ಪಣೆಯನ್ನು ಬೇಡಲು, ಚಾಣಕ್ಯನು ಆ ಆಭರಣಗಳನ್ನು ಉತ್ತಮ ಪಾತ್ರಗಳಿಗೆ ದಾನಮಾಡಬೇಕೆಂದು ಹೇಳಿ, ದಾನ ಪಡೆಯುವುದಕ್ಕಾಗಿ ವಿಶ್ವಾವಸು ಮೊದಲಾದ ಮೂವರು ಬ್ರಾಹ್ಮಣ ಸಹೋದರರನ್ನು ಕಳುಹಿಸಿಕೊಡುವನು; ಈ ಮೂವರೂ ಆ ಆಭರಣಗಳನ್ನು ತನಗೆ ತೋರಿಸಬೇಕೆಂದು ಹೇಳಿ ಕಳುಹಿಸುವನು. ಮ್ಲೇಚ್ಛ ರಾಜರಲ್ಲಿ, ಕುಲೂತಾಧಿಪತಿಯಾದ ಚಿತ್ರವರ್ಮ, ಮಲಯ ನರಪತಿ ಸೃಸಿಂಹ, ಕಾಶ್ಮೀರದ ಪುಷ್ಕರಾಕ್ಷ, ಸಿಂಧುದೇಶದ ಸಿಂಧುಷೇಣ, ಪಾರಸೀಕನಾದ ಮೇಘ—ಈ ಐದು ಮಂದಿಯೂ ರಾಕ್ಷಸನಿಗೆ ಪರಮ ಮಿತ್ರರೆಂಬುದನ್ನು ಗೂಢಚಾರರಿಂದ ತಿಳಿದು ಚಾಣಕ್ಯನು ಈ ಆಭರಣಗಳನ್ನೂ ರಾಕ್ಷಸನ ಮುದ್ರೆಯುಂಗುರವನ್ನೂ ಇವರಲ್ಲಿ ತಕ್ಕಂತೆ ಉಪಯೋಗಿಸಿ ಕಾರ್ಯಸಾಧನೆ ಮಾಡುವ ಉಪಾಯವನ್ನು ಗೊತ್ತುಮಾಡುವನು.

ರಾಕ್ಷಸನಿಗೆ ಪ್ರಿಯ ಸ್ನೇಹಿತನಾದ ಶಕಟದಾಸನೆಂಬ ಕಾಯಸ್ಥನೊಬ್ಬನ ಬಳಿಯಲ್ಲಿ ಚಾಣಕ್ಯನು ತನ್ನ ಕಡೆಯವನಾದ ಸಿದ್ಧಾರ್ಥಕನನ್ನು ಸ್ನೇಹಿತನಂತೆ ನಟಿಸುವಂತೆ ನಿಯಮಿಸಿರುವನು; ಈ ಸಿದ್ಧಾರ್ಥಕನ ಮೂಲಕ ಶಕಟದಾಸನಿಂದ ಒಂದು ಪತ್ರವನ್ನು ಬರೆಯಿಸಿ ತರಿಸಿಕೊಳ್ಳುವನು; ಅದಕ್ಕೆ ರಾಕ್ಷಸನ ಮುದ್ರೆಯನ್ನೊತ್ತುವನು; ಶಕಟದಾಸನು ರಾಕ್ಷಸನಿಂದ ಪ್ರೇರಿತನಾಗಿ ಚಂದ್ರಗುಪ್ತನಿಗೆ ದ್ರೋಹ ಮಾಡಲು ಯತ್ನಿಸುತ್ತಿರುವುದರಿಂದ, ಈ ದೋಷವನ್ನು ಪ್ರಕಟಿಸಿ ಅವನನ್ನು ಶೂಲಕ್ಕೆ ಹಾಕಿ ಅವನ ಮನೆಯವರನ್ನು ಸೆರೆಯಲ್ಲಿಡಬೇಕೆಂದು ಆಜ್ಞೆ ಮಾಡುವನು; ಇವ

ನನ್ನು ವಧ್ಯಸ್ಥಾನಕ್ಕೆ ಕರೆದುಕೊಂಡು ಹೋಗಿ ವಧೆಗೆ ಸಿದ್ಧಪಡಿಸಿದಾಗ, ತನ್ನ ಕಣ್ಣು ಸಂಜ್ಞೆಯನ್ನರಿತು ಕಟುಕರು, ಭಯಪಟ್ಟಂತೆ ಅತ್ತಿತ್ತ ಓಡಿಹೋಗುವ ಹಾಗೆ ಮೊದಲೇ ಸಂಕೇತ ಮಾಡಿ, ಶಕಟದಾಸನನ್ನು ಆಗ ರಾಕ್ಷಸನ ಬಳಿಗೆ ಕರೆದುಕೊಂಡು ಹೋಗಿ, ಸಂತುಷ್ಟನಾದ ಆತನಿಂದ ಪಾರಿತೋಷಕವನ್ನು ಪಡೆದು, ಕೆಲವು ಕಾಲ ರಾಕ್ಷಸನ ಸೇವೆಯನ್ನೇ ಮಾಡುತ್ತಿರುವಂತೆ ತನ್ನ ಚಾರನೊಬ್ಬನನ್ನು ಚಾಣಕ್ಯನು ನಿಯಮಿಸುವನು.

ಕ್ಷಪಣಕನಾದ ಜೀವಸಿದ್ಧಿಯು ರಾಕ್ಷಸನ ಪ್ರೇರಣೆಯಿಂದ ವಿಷಕನ್ಯೆಯ ಮೂಲಕ ಪರ್ವತರಾಜನನ್ನು ಕೊಂದ ಕಾರಣ, ಈ ತಪ್ಪನ್ನು ಪ್ರಕಟಪಡಿಸಬೇಕೆಂದೂ, ಅವನನ್ನು ಪಟ್ಟಣದಿಂದ ಹೊರಡಿಸಬೇಕೆಂದು ಚಂದ್ರಗುಪ್ತನ ಆಜ್ಞೆಯಾಗಿದೆಯೆಂದೂ ಕಾಲಪಾಶಿಕ ದಂಡಪಾಶಿಕರಿಗೆ ತಿಳಿಸುವಂತೆ ಚಾಣಕ್ಯನು ಕಟ್ಟುಮಾಡುವನು; ಇವನನ್ನು ದಂಡಿಸುವ ವಿಷಯವು ಚಂದನದಾಸನಿಗೆ ತಿಳಿಯುವಂತೆ ಏರ್ಪಡಿಸುವನು.

ನಂದಪಕ್ಷದವರಾಗಿದ್ದ ಭಾಗುರಾಯಣ, ಭದ್ರಭಟ, ಪುರುಷದತ್ತ, ಡಿಂಗಿರಾತ, ಬಲಗುಪ್ತ, ರಾಜಸೇನ, ರೋಹಿತಾಕ್ಷ, ವಿಜಯವರ್ಮ—ಇವರೆಲ್ಲರನ್ನೂ ಚಾಣಕ್ಯನು ತನ್ನ ಕಡೆಗೆ ಒಲಿಸಿಕೊಂಡು, ಹೊರಕ್ಕೆ ಅವರು ನಂದಪಕ್ಷದವರಂತೆಯೇ ನಟಿಸುತ್ತಿರುವಂತೆ ಗೊತ್ತುಮಾಡುವನು.

---

## ಎರಡನೆಯ ಅಂಕ

ಮಲಯಕೇತುವು ತನ್ನ ಮೈಯಿಂದ ಕಳಚಿದ ಆಭರಣಗಳನ್ನು ಅಮಾತ್ಯ ರಾಕ್ಷಸನಿಗೆ ಬಹುಮಾನವಾಗಿ ಕಳುಹಿಸಿರುವನೆಂದು ಒಬ್ಬ ಕಂಚುಕಿಯು ಬಂದು ರಾಕ್ಷಸನಿಗೆ ತಿಳಿಸುವನು; ರಾಕ್ಷಸನು ಮಲಯಕೇತುವನ್ನು ಸ್ವರ್ಣ ಸಿಂಹಾಸನದಲ್ಲಿ ನೆಲೆಗೊಳಿಸುವವರೆಗೂ ತನ್ನ ಅಂಗಗಳನ್ನು ಆಭರಣಗಳಿಂದ ಅಲಂಕರಿಸಿಕೊಳ್ಳಲಾರೆನೆಂದು ಹೇಳುವನು; ಕಂಚುಕಿಯ ಬಲವಂತದಿಂದ ಕೊನೆಗೆ ಅವನ್ನು ಅಂಗೀಕರಿಸುವನು. ಆಗ ರಾಕ್ಷಸನ ಗೂಢಚಾರನಾದ ವಿರಾಧಗುಪ್ತನು ಹಾವಾಡಿಗನ ವೇಷದಿಂದ ಅಲ್ಲಿಗೆ ಬಂದು ಕುಸುಮಪುರದಲ್ಲಿ ನಡೆದ ಸಮಾಚಾರಗಳೆಲ್ಲವನ್ನೂ ರಾಕ್ಷಸನಿಗೆ ತಿಳಿಸುವನು: ಪಟ್ಟಣಪ್ರವೇಶ ಕಾಲದಲ್ಲಿ ಚಂದ್ರಗುಪ್ತನನ್ನು ಶಸ್ತ್ರವಿಷಾದಿಗಳಿಂದ ಕೊಲ್ಲಲು ರಾಕ್ಷಸನು ಗುಪ್ತವಾಗಿ ಏರ್ಪಡಿಸಿದ್ದ ಉಪಾಯಗಳು ಚಾಣಕ್ಯನ ಚಾತುರ್ಯದಿಂದ ರಾಕ್ಷಸನ ಕಡೆಯವರಿಗೇ ಹಾನಿಯನ್ನುಂಟು ಮಾಡಿದುವೆಂದು ತಿಳಿಸುವನು. ರಾಕ್ಷಸನ ಕಡೆಯ ಶಿಲ್ಪಿಯಾದ ದಾರುವರ್ಮನೂ, ಮಾವಟಿಗನಾದ ಬರ್ಬರಕನೂ, ಪರ್ವತರಾಜನ ತಮ್ಮನಾದ ವೈರೋಚಕನೂ, ವೈದ್ಯನಾದ ಅಭಯದತ್ತನೂ ಮೃತ್ಯುವಶರಾದ ಬಗೆಯನ್ನು ವಿವರಿಸುವನು.

ಆ ಹೊತ್ತಿಗೆ, ಶೂಲದಿಂದ ಶಕಟದಾಸನನ್ನು ಬಿಡುಗಡೆ ಮಾಡಿದ ಸಿದ್ಧಾರ್ಥಕನು ಶಕಟದಾಸನೊಡನೆ ರಾಕ್ಷಸನ ಬಳಿಗೆ ಬರುವನು. ರಾಕ್ಷಸನಿಗೆ ಬಹಳ ಸಂತೋಷ

ವಾಗಿ, ಸಿದ್ಧಾರ್ಥಕನಿಗೆ ತನ್ನ ಮೈಮೇಲಣ ಆಭರಣಗಳನ್ನು ಕಳಚಿ ಕೊಡುವನು. ಅವನ್ನು ಸಿದ್ಧಾರ್ಥಕನು ಅಮಾತ್ಯನ ಬಂಡಾರದಲ್ಲಿಯೇ ಮುದ್ರಿಕೆಯಿಂದ ಮುದ್ರಿಸಿ ಇಟ್ಟಿರಬೇಕೆಂದು ಹೇಳಿ ಮುದ್ರಿಕೆಯನ್ನು ರಾಕ್ಷಸನಿಗೆ ಕೊಡುವನು. ಆ ಮುದ್ರಿಕೆಯನ್ನು ನೋಡಿ ತನ್ನದೆಂದು ತಿಳಿದು ರಾಕ್ಷಸನು ಆಶ್ಚರ್ಯಪಟ್ಟು ಇದು ಹೇಗೆ ದೊರೆತಿತೆಂದು ಸಿದ್ಧಾರ್ಥಕನನ್ನು ಕೇಳಲು, ಚಂದನದಾಸನ ಮನೆಯ ಬಾಗಿಲಲ್ಲಿ ತನಗೆ ಸಿಕ್ಕಿತೆಂದು ಅವನು ತಿಳಿಸುವನು. ಸಿದ್ಧಾರ್ಥಕನು ಅಮಾತ್ಯನ ಸೇವೆಯಲ್ಲಿಯೇ ಇರುವೆನೆಂದು ಹೇಳಿ ಅದಕ್ಕೆ ಅನುಮತಿಯನ್ನು ಪಡೆಯುವನು. ತರುವಾಯ ವಿರಾಧಗುಪ್ತನು, ಚಾಣಕ್ಯನಿಗೆ ಚಂದ್ರಗುಪ್ತನ ಮೇಲೆ ಅಸಹನೆ ಹುಟ್ಟಿದೆಯೆಂದೂ, ಅವನು ದೊರೆಯ ಆಜ್ಞಾಭಂಗ ಮಾಡುತ್ತಿರುವನೆಂದೂ ಹೇಳುವನು. ರಾಕ್ಷಸನು ಕುಸುಮಪುರದಲ್ಲಿ ತನ್ನ ಪ್ರಿಯ ಮಿತ್ರನಾದ ಸ್ತನಕಲಶನೆಂಬ ವೈತಾಳಿಕನಿರುವನೆಂದೂ ಅವನೊಡನೆ ಈ ವಿಚಾರವನ್ನು ಹೇಳಿ, ಅವನು ಚಂದ್ರಗುಪ್ತನ ಎದುರಿಗೆ ಚಾಣಕ್ಯನ ಆಜ್ಞಾಭಂಗ ಸೂಚಕಗಳಾದ ಶ್ಲೋಕಗಳಿಂದ ಚಂದ್ರಗುಪ್ತನನ್ನು ಸ್ತುತಿಸುತ್ತಿರಬೇಕೆಂದು ಹೇಳುವಂತೆಯೂ ಕಾರ್ಯಭಾಗಗಳನ್ನು ಕರಭಕನ ಮೂಲಕ ತನಗೆ ಆಗಾಗ ತಿಳಿಸುತ್ತಿರುವಂತೆಯೂ ಏರ್ಪಡಿಸಲು ವಿರಾಧಗುಪ್ತನನ್ನು ಕಳುಹಿಸುವನು. ಅಷ್ಟರಲ್ಲಿ ಮೂರು ಅಮೂಲ್ಯವಾದ ಆಭರಣಗಳು ಬೆಲೆಗೆ ಬಂದಿರುವುದನ್ನು ಕೇಳಿ ರಾಕ್ಷಸನು ಅವನ್ನು ಕೊಂಡುಕೊಳ್ಳುವಂತೆ ಶಕಟದಾಸನಿಗೆ ತಿಳಿಸುವನು. ಚಂದ್ರಗುಪ್ತನಿಗೂ ಚಾಣಕ್ಯನಿಗೂ ಮಿತ್ರಭೇದವಾಗಬಹುದೆಂಬ ಊಹೆಯು ರಾಕ್ಷಸನಿಗೆ ತೋರುವುದು.

---

## ಮೂರನೆಯ ಅಂಕ

ಚಂದ್ರಗುಪ್ತನು ಕುಸುಮಪುರದಲ್ಲಿ ಕೌಮುದೀ ಮಹೋತ್ಸವವು ನಡೆಯಬೇಕೆಂದು ಆಜ್ಞೆಮಾಡಿ ಸಾರಿಸಿದ್ದರೂ, ಆ ಉತ್ಸವವು ನಡೆಯದೆಹೋದುದನ್ನು ತಿಳಿದು ಆತನು ಕೋಪಗೊಳ್ಳುವನು ; ಅದು ಚಾಣಕ್ಯನಿಂದ ತಡೆಯಲ್ಪಟ್ಟಿತೆಂದು ತಿಳಿದು ಅಸಮಾಧಾನವನ್ನು ತೋರ್ಪಡಿಸಿ ಚಾಣಕ್ಯನನ್ನು ಕರೆಯಕಳುಹಿಸುವನು. ತನ್ನ ಬಳಿಗೆ ಬಂದ ಚಾಣಕ್ಯನನ್ನು ಗೌರವದಿಂದ ತನ್ನ ಬಳಿಯಲ್ಲಿ ಕುಳ್ಳಿರಿಸಿಕೊಂಡು ಕೌಮುದೀ ಮಹೋತ್ಸವ ನಿಷೇಧದ ಪ್ರಯೋಜನವೇನೆಂದು ಕೇಳುವನು. ಪ್ರಯೋಜನವಿಲ್ಲದ ಕಾರ್ಯವನ್ನು ಚಾಣಕ್ಯನು ಎಂದಿಗೂ ಮಾಡನು ಎಂದು ಚಂದ್ರಗುಪ್ತನು ತಿಳಿದಿದ್ದರೂ, ಈ ವಿಷಯವನ್ನು ವಿಚಾರ ಮಾಡುವ ಉಪಯೋಗವೇನೆಂದು ಚಾಣಕ್ಯನು ಆತನನ್ನು ಕೇಳಲು, ದೊರೆಯು ಕೋಪದಿಂದ ಮುಖವನ್ನು ತಿರುಗಿಸಿಕೊಳ್ಳುವನು. ಆಗ ಬಂದು ದೊರೆಯನ್ನು ಸ್ತೋತ್ರಮಾಡಿದ ವೈತಾಳಿಕರಿಗೆ ಸುವರ್ಣ ಶತ ಸಹಸ್ರವನ್ನು ಕೊಡುವಂತೆ ಚಂದ್ರಗುಪ್ತನು ಕಂಚುಕಿಗೆ ಆಜ್ಞೆಮಾಡಲು, ಚಾಣಕ್ಯನು ಕೋಪಗೊಂಡು, ಅಯುಕ್ತವಾಗಿ ಇಷ್ಟು ಹಣದ ವ್ಯಯವೇಕೆ ಎಂದು ದೊರೆಯನ್ನು ಕೇಳಿ ಕಂಚುಕಿಯನ್ನು ತಡೆಯುವನು. ದೊರೆಯು ಇದನ್ನು ಕಂಡು ತನ್ನನ್ನು ಪದೇ ಪದೇ ಹೀಗೆ ತಡೆಯುತ್ತಿದ್ದರೆ, ತನಗೆ ರಾಜ್ಯವು ಬಂಧನವಲ್ಲದೆ

ರಾಜ್ಯವಲ್ಲವೆಂದು ಹೇಳಿ ಕೋಪಿಸಿಕೊಳ್ಳುವನು. ರಾಜ್ಯದ ಹಸ್ತ್ಯಶ್ವಾಧಿಕಾರಿಗಳು ಮೊದಲಾದವರನ್ನು ಚಾಣಕ್ಯನು ಅಧಿಕಾರದಿಂದ ತಪ್ಪಿಸಿ ಸಾಮಾನ್ಯ ಸ್ಥಿತಿಯಲ್ಲಿಟ್ಟುದರಿಂದ ಅವರು ಶತ್ರುವಾದ ಮಲಯಕೇತುವನ್ನು ಸೇರಿದರೆಂದೂ, ಮಲಯಕೇತುವು ದೊಡ್ಡ ಮ್ಲೇಚ್ಛ ಸೈನ್ಯದೊಡನೆ ಕೂಡಿ ಚಂದ್ರಗುಪ್ತನ ಮೇಲೆ ಯುದ್ಧ ಪ್ರಯತ್ನ ಮಾಡುತ್ತಿರುವನೆಂದೂ, ಇಂತಹ ಸಂದರ್ಭದಲ್ಲಿ ಕೌಮುದೀ ಮಹೋತ್ಸವವನ್ನು ಮಾಡುವುದು ಅನುಚಿತವೆಂದು ತಿಳಿದು ತಾನು ಅದನ್ನು ತಡೆದೆನೆಂದೂ ಚಾಣಕ್ಯನು ತಿಳಿಸುವನು. ದೊರೆಗೂ ಚಾಣಕ್ಯನಿಗೂ ರಾಜಕಾರ್ಯ ವಿಷಯವಾಗಿ ಮಾತುಕತೆಗಳು ನಡೆದು, ಚಾಣಕ್ಯನು, "ನಂದ ನಾಶದಿಂದ ಶಾಂತವಾದ ನನ್ನ ಕ್ರೋಧಾಗ್ನಿಯನ್ನು ಕಾಲಾಧೀನನಾದ ನೀನು ಈಗ ಉರಿಯಿಸುತ್ತೀಯೆ" ಎನ್ನುವನು. ಇದನ್ನು ಕೇಳಿ ಚಂದ್ರಗುಪ್ತನು ಕಳವಳಗೊಂಡು ಚಾಣಕ್ಯನನ್ನು ಸಮಾಧಾನ ಮಾಡಲು, ಚಾಣಕ್ಯನು ತನ್ನ ಕಪಟ ಕೋಪವನ್ನು ನಿವಾರಿಸಿ, "ರಾಕ್ಷಸನನ್ನು ನನಗಿಂತಲೂ ದೊಡ್ಡವನೆಂದು ನೀನು ತಿಳಿಯುವುದಾದರೆ ಈ ಶಸ್ತ್ರವನ್ನು ಅವನಿಗೆ ಕೊಡು" ಎಂದು ಹೇಳಿ ಶಸ್ತ್ರವನ್ನು ಬಿಸುಟು, "ಎಲೈ ರಾಕ್ಷಸನೇ! ಚಾಣಕ್ಯನಲ್ಲಿ ಭಕ್ತಿಯನ್ನು ತಪ್ಪಿಸಿದರೆ ಈ ಮೌರ್ಯನನ್ನು ಸುಖವಾಗಿ ಜಯಿಸಬಹುದೆಂದು ನೀನು ಪ್ರಯೋಗಿಸಿದ ಭೇದೋಪಾಯವಿದು" ಎಂದು ಹೇಳುತ್ತ ಹೊರಟುಹೋಗುವನು. ರಾಜನು, "ಇಂದು ಮೊದಲು ಚಂದ್ರಗುಪ್ತನು ಚಾಣಕ್ಯನನ್ನು ನಿರಾಕರಿಸಿ ತಾನೇ ರಾಜ್ಯವನ್ನು ನಡೆಯಿಸುವನು" ಎಂದು ಎಲ್ಲರಿಗೂ ತಿಳಿಯಪಡಿಸುವಂತೆ ಆಜ್ಞೆಮಾಡುವನು. ದೊರೆಯು ತನ್ನಲ್ಲಿ, "ಹೀಗೆ ನಾವಿಬ್ಬರೂ ಕೃತಕ ಕೋಪಾವಿಷ್ಟರಾದುದರಿಂದ ಚಾಣಕ್ಯನು ಕಾರ್ಯಸಿದ್ಧಿಯನ್ನು ಪಡೆಯಲಿ" ಎಂದು ತನ್ನಲ್ಲಿಯೇ ಹೇಳಿಕೊಳ್ಳುತ್ತ ಶಯನ ಗೃಹಕ್ಕೆ ಹೋಗುವನು.

---

## ನಾಲ್ಕನೆಯ ಅಂಕ

ತನ್ನ ಉಪಾಯಗಳು ಯಾವುವೂ ಚಾಣಕ್ಯನ ಮುಂದೆ ನಡೆಯದೆಹೋದುದಕ್ಕಾಗಿ ಚಿಂತಾಕ್ರಾಂತನಾಗಿರುವ ರಾಕ್ಷಸನ ಬಳಿಗೆ ದುಃಖಾಕ್ರಾಂತನಾದ ಮಲಯಕೇತುವು, ತನ್ನ ತಂದೆ ಸತ್ತು ಹತ್ತು ತಿಂಗಳಾದರೂ ಶಪಥದಿಂದ ಜಲಾಂಜಲಿಯನ್ನೂ ಕೂಡ ಕೊಡಲಿಲ್ಲವಲ್ಲಾ ಎಂಬ ವ್ಯಥೆಯಿಂದ ಬರುವನು. ಪರಿವಾರವೆಲ್ಲವನ್ನೂ ಹಿಂದೆ ಬಿಟ್ಟು ಭಾಗುರಾಯಣನೊಬ್ಬನೊಡನೆ ಮಲಯಕೇತುವು ರಾಕ್ಷಸನ ಬಳಿಗೆ ತೆರಳುವನು. ಆ ಸಮಯದಲ್ಲಿ, 'ಅಮಾತ್ಯ ರಾಕ್ಷಸನಿಗೆ ಚಾಣಕ್ಯನ ಮೇಲೆ ದ್ವೇಷವೇ ಹೊರತು ಚಂದ್ರಗುಪ್ತನ ವಿಷಯವಾಗಿಲ್ಲವೆಂದೂ, ಇವನೂ ನಂದ ವಂಶದವನಾದುದರಿಂದ ಕುಲ ಕ್ರಮವಾಗಿ ಬಂದವನೆಂದು ಇವನೊಡನೆ ರಾಕ್ಷಸನು ಸಂಧಿಯನ್ನೊಪ್ಪಬಹುದೆಂದೂ, ಹಾಗಾದರೆ ಮಲಯಕೇತುವು ತಮ್ಮಲ್ಲಿ ವಿಶ್ವಾಸವಿಲ್ಲದವನಾಗಬಹುದೆಂದೂ ಭದ್ರಭಟಾದಿಗಳು ಮಾತನಾಡಿಕೊಳ್ಳುತ್ತಿದ್ದ ವಿಚಾರವನ್ನು ಮಲಯಕೇತುವು ತಿಳಿಯುವನು. ಇವನು ರಾಕ್ಷಸನ ಮನೆಯನ್ನು

ಹೊಗುತ್ತಿರುವಲ್ಲಿ, ರಾಕ್ಷಸನು ಕುಸುಮಪುರವೃತ್ತಾಂತವನ್ನು ಕರಭಕನೊಡನೆ ಪ್ರಸ್ತಾವಿಸುತ್ತಿರುವುದನ್ನು ಕೇಳಿ ರಾಕ್ಷಸನನ್ನು ಆಗ ಕಾಣಿಸಿಕೊಳ್ಳಬಾರದೆಂದು ಅಲ್ಲಿಯೇ ಮರೆಯಾಗಿ ನಿಂತು, ರಾಕ್ಷಸನಿಗೂ ಕರಭಕನಿಗೂ ನಡೆಯುತ್ತಿರುವ ಸಂಭಾಷಣೆಯನ್ನು ಕೇಳುವನು. ಇದರಿಂದ ಚಂದ್ರಗುಪ್ತ ಚಾಣಕ್ಯರಿಗುಂಟಾದ ಅಸಹನೆಯೂ, ಚಂದ್ರಗುಪ್ತನಿಗೆ ರಾಕ್ಷಸನಲ್ಲಿರುವ ಪಕ್ಷಪಾತವೂ, ಅವನು ಚಾಣಕ್ಯನನ್ನು ಪದಚ್ಯುತನನ್ನಾಗಿ ಮಾಡಿದ ವಿಷಯವೂ ತಿಳಿಯಬರುವುದು. ತರುವಾಯ ಮಲಯಕೇತುವು ರಾಕ್ಷಸನನ್ನು ಕಾಣಿಸಿಕೊಳ್ಳುವನು. ಇಬ್ಬರಿಗೂ ಮಾತುಕತೆಗಳು ನಡೆದು, ಚಾಣಕ್ಯನ ಸಹಾಯವನ್ನು ಕಳೆದುಕೊಂಡ ಚಂದ್ರಗುಪ್ತನ ಮೇಲೆ ಯುದ್ಧಕ್ಕೆ ನಡೆಯಬೇಕೆಂದು ಗೊತ್ತಾಗಿ, ಮಲಯಕೇತುವು ಹೊರಟು ಹೋಗುವನು.

---

## ಐದನೆಯ ಅಂಕ

ರಾಕ್ಷಸನು ಚಂದ್ರಗುಪ್ತನೊಡನೆ ಸಂಧಿಮಾಡಿಕೊಳ್ಳುವನೋ ಏನೋ? ತನಗೆ ಸಹಾಯಮಾಡುವನೇ? ಎಂಬ ಸಂಶಯವು ಮಲಯಕೇತುವನ್ನು ಬಾಧಿಸುತ್ತಿರುವುದು. ಭಾಗುರಾಯಣನ ಬಳಿಗೆ ಕ್ಷಪಣಕನು ಬಂದು, ಪರ್ವತರಾಜನನ್ನು ವಿಷಕನ್ಯೆಯ ಮೂಲಕ ಕೊಲ್ಲಿಸಿದವನು ರಾಕ್ಷಸನೆಂದು ತಿಳಿಸಲು, ಒಳಗಿದ್ದ ಮಲಯಕೇತುವು ಇದನ್ನು ಕೇಳಿ ಆಶ್ಚರ್ಯಪಡುವನು. ಚಾಣಕ್ಯನು ತನ್ನನ್ನು ರಾಕ್ಷಸನ ಮಿತ್ರನೆಂದು ಕುಸುಮಪುರದಿಂದ ಹೊರಡಿಸಿದನೆಂದೂ, ರಾಕ್ಷಸನೂ ತನ್ನನ್ನು ಹಾಗೆ ಮಾಡಿದರೆ ಪ್ರಾಣಿಸಮೂಹದಿಂದಲೇ ಬಹಿಷ್ಕಾರವನ್ನು ಪಡೆವೆನೆಂತಲೂ ಹೇಳಿ, ಕ್ಷಪಣಕನು ತಾನು ಹೇಳಿದ ವಿಷಕನ್ಯಾ ವಿಚಾರವು ಮಲಯಕೇತುವಿಗೆ ತಿಳಿದುದೆಂದು ಸಂತೋಷಪಟ್ಟು ಹೊರಟುಹೋಗುವನು. ಮಲಯಕೇತುವಿಗೆ ರಾಕ್ಷಸನಲ್ಲಿ ದುರಭಿಪ್ರಾಯ ಹುಟ್ಟುವುದು. ಈಗ ದುಡುಕಬಾರದೆಂದು ಭಾಗುರಾಯಣನು ಮಲಯಕೇತುವಿಗೆ ಬುದ್ಧಿವಾದ ಹೇಳುತ್ತಿರುವಲ್ಲಿ, ಶಿಬಿರಾಧಿಕಾರಿಯಾದ ದೀರ್ಘರಕ್ಷಕನು ಸಿದ್ಧಾರ್ಥಕನನ್ನು ಕಟ್ಟಿ ಅಲ್ಲಿಗೆ ತೆಗೆದುಕೊಂಡು ಬಂದು, "ಇವನು ನಮ್ಮಿಂದ ಕಟಕವನ್ನು ಬಿಟ್ಟು ಹೊರಡಿಸಲ್ಪಟ್ಟು, ಮುದ್ರೆಯಿಲ್ಲದ ಕಾಗದವನ್ನು ತಂದಿದ್ದನಾದ ಕಾರಣ ಇವನನ್ನು ಹಿಡಿದುತಂದೆವು" ಎಂದು ಹೇಳುವನು. ಸಿದ್ಧಾರ್ಥಕನ ಬಳಿಯಲ್ಲಿದ್ದ ಕಾಗದವನ್ನು ತೆಗೆದುಕೊಂಡು ನೋಡುವಲ್ಲಿ, ಅದರ ಮೇಲೆ ರಾಕ್ಷಸನ ಮುದ್ರೆಯಿರುವುದು. ಸರಿಯಾದ ಉತ್ತರವನ್ನು ಕೊಡದೆಹೋದುದರಿಂದ, ಭಾಗುರಾಯಣನು ಸಿದ್ಧಾರ್ಥಕನನ್ನು ಹೊಡೆಯುವಂತೆ ಆಜ್ಞೆಮಾಡುವನು; ಆಗ ಅವನ ಕಂಕುಳಲ್ಲಿಯ ಮುದ್ರಿತವಾದ ಪೆಟ್ಟಿಗೆಯು ಕೆಳಕ್ಕೆ ಬೀಳುವುದು. ಅದನ್ನು ತೆಗೆಯಿಸಿ ನೋಡುವಲ್ಲಿ, ಮಲಯಕೇತುವು ತನ್ನ ಮೈಯಿಂದ ಕಳಚಿ ತೆಗೆದು ರಾಕ್ಷಸನಿಗೆ ಕಳುಹಿಸಿದ್ದ ಆಭರಣಗಳು ಅದರಲ್ಲಿರುವುವು. ಸಿದ್ಧಾರ್ಥಕನನ್ನು ನಿಜಾಂಶ ಹೇಳುವಂತೆ ಮತ್ತೆ ಹೊಡೆಯಿಸಲು, ರಾಕ್ಷಸನು ಈ ಪೆಟ್ಟಿಗೆಯನ್ನೂ ಕಾಗದವನ್ನೂ ಚಂದ್ರಗುಪ್ತನಿಗೆ

ಕೊಡುವಂತೆ ತನಗೊಪ್ಪಿಸಿದನೆಂದೂ, ರಾಕ್ಷಸನು ತನ್ನ ಮಿತ್ರರಾದ ಚಿತ್ರವರ್ಮ, ಸಿಂಹನಾದ, ಪುಷ್ಕರಾಕ್ಷ, ಸಿಂಧುಸೇನ, ಮೇಘನಾದ—ಈ ಐದು ಮಂದಿಯಲ್ಲಿ ಚಂದ್ರಗುಪ್ತನು ಸ್ನೇಹವನ್ನು ಬೆಳೆಯಿಸುವಂತೆಯೂ, ಇವರಲ್ಲಿ ಮೊದಲ ಮೂರು ಮಂದಿ ಮಲಯಕೇತುವಿನ ದೇಶವನ್ನೂ, ಉಳಿದ ಇಬ್ಬರು ಆನೆಯ ಬಲವನ್ನೂ ಕೋಶವನ್ನೂ ಅಪೇಕ್ಷಿಸುವರೆಂದೂ, ಆದಕಾರಣ ಚಂದ್ರಗುಪ್ತನು ಹೇಗೆ ಚಾಣಕ್ಯನನ್ನು ನಿರಾಕರಿಸಿ ತನ್ನಲ್ಲಿ ಪ್ರೀತಿಯುಳ್ಳವನಾದನೋ ಹಾಗೆಯೇ ಚಿತ್ರವರ್ಮ ಮೊದಲಾದವರ ಇಷ್ಟಾರ್ಥವನ್ನು ಸಲಿಸಬೇಕೆಂದೂ ಹೇಳುವಂತೆ ತನ್ನೊಡನೆ ರಾಕ್ಷಸನು ಹೇಳಿಕಳುಹಿಸಿದನೆಂದು ಸಿದ್ಧಾರ್ಥಕನು ತಿಳಿಸುವನು.

ಮಲಯಕೇತುವು ಇದನ್ನೆಲ್ಲ ಕೇಳಿ ಆಶ್ಚರ್ಯಪಟ್ಟು ರಾಕ್ಷಸನನ್ನು ಕರೆಕಳುಹಿಸುವನು. ಅಮಾತ್ಯನು ಮಲಯಕೇತುವಿನಿಂದ ಬಂದ ಮೂರು ಆಭರಣಗಳಲ್ಲೊಂದನ್ನು ತಾನು ಧರಿಸುವುದಕ್ಕಾಗಿ ಕಳುಹಿಸುವಂತೆ ಶಕಟದಾಸನಿಗೆ ಹೇಳಿ, ಅವನು ತಂದ ಆಭರಣವನ್ನು ಧರಿಸಿ ಮಲಯಕೇತುವಿನ ಬಳಿಗೆ ಹೋಗುವನು. ರಾಕ್ಷಸನನ್ನು ನೋಡಿ ಬಹಳ ದಿನಗಳಾದುವೆಂದು ಮಲಯಕೇತುವು ಹೇಳಲು, ಯುದ್ಧಪ್ರಯಾಣದ ಏರ್ಪಾಡನ್ನು ಮಾಡುತ್ತಿದ್ದುದರಿಂದ ಈ ಮಾತನ್ನು ಕೇಳಬೇಕಾಯಿತೆಂದು ಅಮಾತ್ಯನು ಹೇಳುವನು. ಆಗ ಸಿದ್ಧಾರ್ಥಕನನ್ನು ತೋರಿಸಿ, ಮಲಯಕೇತುವು, "ಆರ್ಯನು ಪತ್ರಸಹಿತನಾದ ಈ ಮನುಷ್ಯನನ್ನು ಕಳುಹಿಸಿದುದೇಕೆ?" ಎಂದು ಕೇಳುವನು. ಸಿದ್ಧಾರ್ಥಕನು ಕಣ್ಣೀರಿಡುತ್ತ, "ಅಮಾತ್ಯನು ಪ್ರಸನ್ನನಾಗಬೇಕು; ಏಟನ್ನು ತಡೆಯಲಾರದೆ ನಾನು ರಹಸ್ಯವನ್ನು ರಕ್ಷಿಸಿಕೊಳ್ಳಲು ಸಾಧ್ಯವಾಗಲಿಲ್ಲ" ಎನ್ನುವನು. ರಾಕ್ಷಸನಿಗೆ ಇದು ಅರ್ಥವಾಗದೆಹೋಗಲು, ಮಲಯಕೇತುವು ರಾಕ್ಷಸನಿಗೆ ಆ ವಿಷಯವೆಲ್ಲವನ್ನೂ ತಿಳಿಸುವಂತೆ ಭಾಗುರಾಯಣನೊಡನೆ ಹೇಳುವನು. ರಾಕ್ಷಸನು, "ಇದು ನಿಶ್ಚಯವೋ?" ಎಂದು ಸಿದ್ಧಾರ್ಥಕನನ್ನು ಕೇಳಲು, "ಬಹಳವಾಗಿ ಪೆಟ್ಟುತಿಂದ ನಾನು ಹೀಗೆ ಹೇಳಿದೆನು" ಎನ್ನುವನು. ರಾಕ್ಷಸನು, "ಇದು ಸುಳ್ಳು, ಏಟನ್ನು ತಾಳಲಾರದೆ ಮನುಷ್ಯನು ಏನನ್ನು ತಾನೇ ಹೇಳನು?" ಎನ್ನಲು, ಮಲಯಕೇತುವು ಕಾಗದವನ್ನು ತೋರಿಸುವನು. ಇದು ಶತ್ರುವಿನ ತಂತ್ರವೆಂದು ರಾಕ್ಷಸನು ಹೇಳಿದುದಕ್ಕೆ, ಆಭರಣಗಳನ್ನು ತೋರಿಸಿ, ಇದು ಶತ್ರುವಿನ ತಂತ್ರವು ಹೇಗಾದೀತೆಂದು ಕೇಳುವನು. ರಾಕ್ಷಸನು, ಸಿದ್ಧಾರ್ಥಕನಿಗೆ ಅದನ್ನು ಒಂದು ಸಂದರ್ಭದಲ್ಲಿ ಪಾರಿತೋಷಕವಾಗಿ ಕೊಟ್ಟೆನು ಎನ್ನುವನು. ಆದರೆ, ಈ ಮುದ್ರೆ ಯಾರದು ಎಂದು ಕೇಳಲು ರಾಕ್ಷಸನು, "ವಂಚಕರು ಕಪಟ ಮುದ್ರೆಯನ್ನು ಸೃಜಿಸುವ ಸಾಮರ್ಥ್ಯವುಳ್ಳವರು" ಎಂದು ಹೇಳುವನು. ಕಾಗದವನ್ನು ಬರೆದವರು ಯಾರು? ಎಂದು ಸಿದ್ಧಾರ್ಥಕನನ್ನು ಕೇಳಲು ಅವನು ಶಕಟದಾಸನೆನ್ನುವನು. ಶಕಟದಾಸನ ಸ್ವಹಸ್ತಾಕ್ಷರದ ಮತ್ತೊಂದು ಪತ್ರವನ್ನೂ ಇದನ್ನೂ ಹೋಲಿಸಿ ನೋಡಿ, ಇದು ಶಕಟದಾಸನ ಸ್ವಹಸ್ತಾಕ್ಷರವೇ ಎಂದು ಮಲಯಕೇತುವು ಗೊತ್ತುಮಾಡುವನು. ರಾಕ್ಷಸನಿಗೆ ಶಕಟದಾಸನಲ್ಲಿಯೂ ಸಂಶಯವು ತೋರುವುದು. ರಾಕ್ಷಸನು ಧರಿ

ಸಿರುವ ಆಭರಣವನ್ನು ತಮ್ಮ ತಂದೆಯು ಧರಿಸುತ್ತಿದ್ದ ಆಭರಣವೆಂದು ಗುರುತಿಸಿ, ಮಲಯಕೇತುವು ಇದು ಹೇಗೆ ದೊರೆತಿತೆಂದು ರಾಕ್ಷಸನನ್ನು ಕೇಳುವನು; ವಣಿಜರಿಂದ ಕ್ರಯಕ್ಕೆ ತೆಗೆದುಕೊಂಡುದೆಂದು ರಾಕ್ಷಸನು ಹೇಳಲು, "ನಮ್ಮ ತಂದೆಯು ಪೂರ್ವದಲ್ಲಿ ಧರಿಸುತ್ತಿದ್ದು ತರುವಾಯ ಚಂದ್ರಗುಪ್ತನ ವಶಕ್ಕೆ ಸೇರಿದ ಆಭರಣಗಳನ್ನು ವಣಿಜರು ಮಾರುವುದು ಯುಕ್ತವಾಗಿ ತೋರದು; ಅಥವಾ, ಇದು ಯುಕ್ತವಾಗಿಯೂ ಇರಬಹುದು. ಏಕೆಂದರೆ, ಹೆಚ್ಚಾದ ಲಾಭವನ್ನು ಪಡೆಯಲಪೇಕ್ಷಿಸಿ ಈ ಆಭರಣಗಳನ್ನು ಮಾರಿದ ಚಂದ್ರಗುಪ್ತನಿಗೆ, ಕ್ರೂರನಾದ ನೀನು ನಮ್ಮನ್ನೇ ಬೆಲೆಯಾಗಿ ಮಾರಿದೆ" ಎಂದು ಮಲಯಕೇತುವು ಹೇಳುವನು. ರಾಕ್ಷಸನು ಇವೆಲ್ಲವನ್ನೂ ಕಂಡು ಬೆರಗಾಗಿ, ಶತ್ರುಗಳ ತಂತ್ರವು ಚೆನ್ನಾಗಿ ಫಲಿಸಿತೆಂದು ತಿಳಿದು, ಈ ಸಂದರ್ಭದಲ್ಲಿ ಬಂದುದನ್ನನುಭವಿಸಬೇಕಲ್ಲದೆ ಅಯುಕ್ತವಾದ ಉತ್ತರವು ಸರಿಯಲ್ಲವೆಂದು ತಿಳಿದು ತಾನು ಅನಾರ್ಯನಾದೆನೆನ್ನುವನು. ಪತ್ರವನ್ನೂ ಆಭರಣದ ಪೆಟ್ಟಿಗೆಯನ್ನೂ ತೋರಿಸಿ, ಇದೇನೆಂದು ಮಲಯಕೇತುವು ಕೇಳಲು, ಎಲ್ಲವೂ ದೈವ ವಿಲಾಸವೆಂದು ರಾಕ್ಷಸನು ಹೇಳುವನು. ಇದನ್ನು ಕೇಳಿ ಮಲಯಕೇತುವು ಅತ್ಯಂತ ಕೋಪದಿಂದ, "ಎಲೈ ನೀಚನೆ! ಕೃತಘ್ನನೇ! ಪೂರ್ವದಲ್ಲಿ ನಿನಗೆ ಅತ್ಯಂತ ವಿಶ್ವಾಸಪಾತ್ರನಾದ ನಮ್ಮ ತಂದೆಯನ್ನು ವಿಷಕನ್ಯಾ ಪ್ರಯೋಗದಿಂದ ಕೊಲ್ಲಿಸಿ, ಈಗ ನಮ್ಮನ್ನು ಶತ್ರುವಿಗೆ ಮಾರಲೆಳಸಿದ್ದೀಯೆ!" ಎನ್ನುವನು. ರಾಕ್ಷಸನು ಕಿವಿಯನ್ನು ಮುಚ್ಚಿಕೊಂಡು ಪರ್ವತರಾಜನನ್ನು ಕೊಲ್ಲಿಸಿದವನು ತಾನಲ್ಲವೆಂದು ಹೇಳಲು, ಮಲಯಕೇತುವು ಕ್ಷಪಣಕನಾದ ಜೀವಸಿದ್ಧಿಯನ್ನು ಕೇಳುವಂತೆ ಹೇಳುವನು. ಆಗ ರಾಕ್ಷಸನು, ಜೀವಸಿದ್ಧಿಯೂ ರಾಕ್ಷಸನ ಗೂಢಚಾರನೇ ಎಂದು ತಿಳಿದು ಶತ್ರುಗಳು ತನ್ನ ಮನಸ್ಸನ್ನೂ ಸ್ವಾಧೀನಪಡಿಸಿಕೊಂಡರೆಂದು ಕೊರಗುವನು. ಮಲಯಕೇತುವು ಚಿತ್ರವರ್ಮ ವೊದಲಾದ ಐದು ಮಂದಿಯನ್ನೂ ಕೊಲ್ಲಿಸುವುದಕ್ಕೆ ಆಜ್ಞೆಮಾಡುವನು; ರಾಕ್ಷಸನನ್ನು ಚೆನ್ನಾಗಿ ದೂಷಿಸಿ ತನ್ನ ಸಭೆಯಿಂದ ಅಟ್ಟಿಬಿಡುವನು; ಕುಸುಮಪುರಕ್ಕೆ ಕೂಡಲೇ ಮುತ್ತಿಗೆ ಹಾಕುವಂತೆ ತನ್ನ ಸೈನ್ಯಕ್ಕೆ ಆಜ್ಞೆಮಾಡುವನು. ಚಿತ್ರವರ್ಮಾದಿಗಳಿಗೂ ಸಂಭವಿಸಿದ ವಿನಾಶವನ್ನು ಕೇಳಿ ರಾಕ್ಷಸನು ಏನು ಮಾಡುವುದಕ್ಕೂ ತೋರದೆ ವ್ಯಥೆಪಡುವನು.

---

## ಆರನೆಯ ಅಂಕ

ಚಾಣಕ್ಯ ನೀತಿಯಿಂದ ಮೋಹಿತನಾದ ಮಲಯಕೇತುವು ಅಮಾತ್ಯ ರಾಕ್ಷಸನನ್ನು ಓಡಿಸಿ, ಚಿತ್ರವರ್ಮಾದಿ ಪಂಚ ಪ್ರಧಾನರನ್ನೂ ಕೊಲ್ಲಿಸಲು, ಸಕಲ ಸಾಮಂತ ರಾಜರೂ ಹೆದರಿ ತಂತಮ್ಮ ರಾಜ್ಯಗಳಿಗೆ ಹೊರಟುಹೋಗುವರು. ಭದ್ರಭಟ ಭಾಗುರಾಯಣ ಮೊದಲಾದವರು ಒಟ್ಟುಗೂಡಿ ಮಲಯಕೇತುವನ್ನು ಸೆರೆಹಿಡಿಯುವರು. ಮ್ಲೇಚ್ಛ ಬಲವೆಲ್ಲವೂ ಚಾಣಕ್ಯನ ಬಳಿಯಲ್ಲಿ ಸೇರುವುದು. ರಾಕ್ಷಸನು ಮಲಯಕೇತುವಿನ ಸೇನೆಯನ್ನು ಬಿಟ್ಟು ಹೊರಟು ಉದುಂಬರನೆಂಬ ಚರನೊಡನೆ ಪಾಟಲೀಪುತ್ರಕ್ಕೆ ಬಂದು ತನಗೊದಗಿದ ವಿಪತ್ತಿಗಾಗಿ ವ್ಯಥೆಪಡುತ್ತ ಒಂದು

ಜೀರ್ಣೋದ್ಯಾನವನ್ನು ಹೊಕ್ಕು ಅಲ್ಲಿ ಒಂದು ಬಂಡೆಯ ಮೇಲೆ ಕುಳಿತುಕೊಳ್ಳುವನು. ಅಮಾತ್ಯ ರಾಕ್ಷಸನು ಅಲ್ಲಿರುವನೆಂದು ಉದುಂಬರನಿಂದ ತಿಳಿದ ಚಾಣಕ್ಯನ ಆಜ್ಞೆಯಂತೆ, ಅವನನ್ನು ನೋಡಲು ಬಂದ ಒಬ್ಬ ಪುರುಷನು ರಾಕ್ಷಸನನ್ನು ನೋಡಿ, ತಾನು ಅವನನ್ನು ನೋಡದವನಂತೆ ಒಂದು ಹಗ್ಗವನ್ನು ತನ್ನ ಕೊರಳಿಗೆ ಜೇರಿಕೊಳ್ಳುವನು. ರಾಕ್ಷಸನು ಇದನ್ನು ನೋಡಿ, ತನ್ನಂತೆಯೇ ದುಃಖಿತನಾದ ಇವನಾವನೋ ನೇಣು ಹಾಕಿಕೊಳ್ಳುತ್ತಿರುವನು ಎಂದು ತಿಳಿದು, ಇದೇನೆಂದು ಅವನನ್ನು ಕೇಳುವನು. ಆ ಕಥೆಯನ್ನು ಹೇಳಲು ಇಷ್ಟವಿಲ್ಲದವನಂತೆ ನಟಿಸುತ್ತ, ಕೊನೆಗೆ ಆ ಪುರುಷನು ವಿಷ್ಣುದಾಸನೆಂಬ ತನ್ನ ಪರಮ ಮಿತ್ರನೊಬ್ಬನು ತನ್ನ ಸಂಪತ್ತೆಲ್ಲವನ್ನೂ ಕೊಟ್ಟುಬಿಟ್ಟು ಬೆಂಕಿಯಲ್ಲಿ ಬೀಳಬೇಕೆಂದು ನಿಶ್ಚಯಿಸಿರುವುದರಿಂದ ತಾನು ಆ ಸಮಾಚಾರವನ್ನು ಕೇಳುವುದಕ್ಕೆ ಮೊದಲೇ ಪ್ರಾಣತ್ಯಾಗ ಮಾಡಬೇಕೆಂದಿರುವೆನೆನ್ನುವನು. ಈ ವಿಷ್ಣುದಾಸನು ಚಂದನದಾಸನ ಪ್ರಿಯ ಸ್ನೇಹಿತನೆಂದು ತಿಳಿದಿದ್ದ ರಾಕ್ಷಸನು ಚಂದನದಾಸನ ಸಮಾಚಾರವನ್ನು ಈ ಪುರುಷನಿಂದ ತಿಳಿಯಲು ಅತ್ಯಂತ ಕುತೂಹಲವುಳ್ಳವನಾಗಿ, ಆ ಪುರುಷನನ್ನು ಅನೇಕ ವಿಧದಲ್ಲಿ ಪ್ರಶ್ನೆಮಾಡುವನು. ಕೊನೆಗೆ ಆ ಪುರುಷನು ಚಂದನದಾಸನೆಂಬ ಪ್ರಸಿದ್ಧ ವ್ಯಾಪಾರಿಯು ವಿಷ್ಣುದಾಸನ ಪರಮ ಮಿತ್ರನೆಂದೂ, ಆ ಚಂದನದಾಸನನ್ನು ವಧೆ ಮಾಡುವುದಕ್ಕಾಗಿ ಸಿದ್ಧಪಡಿಸಿರುವರೆಂದೂ, ವಿಷ್ಣುದಾಸನು ತನ್ನ ಆಸ್ತಿಯನ್ನೆಲ್ಲವನ್ನೂ ಚಂದನದಾಸನ ಬಿಡುಗಡೆಗಾಗಿ ಕೊಡುವೆನೆಂದು ಹೇಳಿದರೂ ಅವನನ್ನು ಬಿಡುಗಡೆ ಮಾಡದೆ, ಚಂದನದಾಸನು ತನ್ನ ಮನೆಯಲ್ಲಿ ಅಮಾತ್ಯ ರಾಕ್ಷಸನ ಹೆಂಡತಿ ಮಕ್ಕಳನ್ನು ಮುಚ್ಚಿಟ್ಟುಕೊಂಡಿರುವನೆಂದು ತಿಳಿದುಬಂದುದರಿಂದ, ಅವರನ್ನು ಒಪ್ಪಿಸಿದ ಹೊರತು ಚಂದನದಾಸನಿಗೆ ಬಿಡುಗಡೆಯಾಗದೆಂದು ತಿಳಿದು ವಿಷ್ಣುದಾಸನು ಊರು ಬಿಟ್ಟು ಹೋದನೆಂದೂ, ಬಳಿಕ ಚಂದನದಾಸನನ್ನು ವಧ್ಯಸ್ಥಾನಕ್ಕೆ ಕರೆದುಕೊಂಡು ಹೋದರೆಂದೂ, ಆದುದರಿಂದ ಅವರ ಮುಂದಣ ಸಮಾಚಾರವು ತಿಳಿಯುವುದಕ್ಕೆ ಮೊದಲೇ ತಾನು ಪ್ರಾಣತ್ಯಾಗ ಮಾಡಿಕೊಳ್ಳಲು ಅಲ್ಲಿಗೆ ಬಂದೆನೆಂದೂ ತಿಳಿಸುವನು. ಚಂದನದಾಸನನ್ನು ಇನ್ನೂ ಕೊಂದಿಲ್ಲವೆಂದೂ, ಅವನನ್ನು ಚಂದ್ರಗುಪ್ತನ ಕಡೆಯವರು ಅಮಾತ್ಯ ರಾಕ್ಷಸನ ಮನೆಯವರನ್ನು ಒಪ್ಪಿಸಿ ಬಿಡುವಂತೆ ಇನ್ನೂ ಬಲವಂತ ಮಾಡುತ್ತಿರುವರೆಂದೂ ತಿಳಿದು, ರಾಕ್ಷಸನು ವಿಷ್ಣುದಾಸನು ಬೆಂಕಿಯಲ್ಲಿ ಬೀಳುವುದನ್ನು ಕೂಡಲೆ ತಡೆಯುವಂತೆ ಆ ಪುರುಷನೊಡನೆ ಹೇಳಿ, ಚಂದನದಾಸನ ಮರಣವನ್ನು ತಾನು ತಪ್ಪಿಸುವೆನೆಂದು ತಿಳಿಸುವನು. ಅದನ್ನು ಹೇಗೆ ತಪ್ಪಿಸುವೆಯೆಂದು ಆ ಪುರುಷನು ಕೇಳಲು, "ತನ್ನ ಕತ್ತಿಯಿಂದ" ಎಂದು ರಾಕ್ಷಸನು ಹೇಳುವನು. ಪುರುಷನು ತಾವು ಪೂಜ್ಯರಾದ ಅಮಾತ್ಯ ರಾಕ್ಷಸರಿರಬಹುದಲ್ಲವೆ ಎಂದು ಕೇಳಿ ಅಹುದೆಂದು ಉತ್ತರ ಪಡೆಯುವನು. ತರುವಾಯ ಆ ಪುರುಷನು ಅಮಾತ್ಯನ ಕಾಲುಗಳ ಮೇಲೆ ಬಿದ್ದು ತನಗೆ ಪ್ರಸನ್ನರಾಗಬೇಕೆಂದು ಬೇಡಿಕೊಂಡು, ನೀಚನಾದ ಚಂದ್ರಗುಪ್ತನು ಶಕಟದಾಸನನ್ನು ವಧ್ಯ ಸ್ಥಾನಕ್ಕೆ ಕಳುಹಿಸಿದನೆಂದೂ, ಆ ಶಕಟದಾಸನನ್ನು ಯಾವನೋ ಒಬ್ಬನು ದೇಶಾಂತರಕ್ಕೆ ಹಾರಿಸಿಕೊಂಡುಹೋದನೆಂದೂ,

ಆ ಕೊಲೆಗಾರರಿಗೆ ಮರಣಾಂತ ಶಿಕ್ಷೆಯು ಆಯಿತೆಂದೂ, ಅಂದಿನಿಂದ ಕೊಲೆಗಾರರು, ಆಯುಧ ಪಾಣಿಯಾಗಿ ಅಲ್ಲಿಗೆ ಬಂದ ಯಾರನ್ನು ಕಂಡರೂ, ತಮ್ಮ ಪ್ರಾಣ ಗಳನ್ನುಳಿಸಿಕೊಳ್ಳುವುದಕ್ಕಾಗಿ, ಚಂದನದಾಸನನ್ನು ವಧ್ಯಸ್ಥಾನದಲ್ಲಿ ಕೊಂದು ಬಿಡುವವರಾಗಿರುವರೆಂದೂ, ರಾಕ್ಷಸನು ಕತ್ತಿಯನ್ನು ಹಿಡಿದುಕೊಂಡು ಹೋದಲ್ಲಿ ಚಂದನದಾಸನ ವಧೆಯು ಕೂಡಲೆ ಆಗಿಹೋಗುವುದೆಂದೂ ತಿಳಿಸಿ ಹೊರಟು ಹೋಗುವನು. ರಾಕ್ಷಸನು ಚಾಣಕ್ಯನ ನೀತಿಯನ್ನು ತಿಳಿಯಲಶಕ್ಯವೆಂದು ಆಲೋಚಿಸುತ್ತ, ತನ್ನ ಶರೀರವನ್ನು ಚಂದನದಾಸನಿಗೆ ಪ್ರತಿಯಾಗಿ ಒಪ್ಪಿಸುವೆನೆಂದು ನಿಶ್ಚಯಿಸಿ ಹೊರಟುಹೋಗುವನು.

---

## ಏಳನೆಯ ಅಂಕ

ಚಂದನದಾಸನನ್ನು ವಧ್ಯಸ್ಥಾನಕ್ಕೆ ಕರೆದುಕೊಂಡುಬರುವರು. ಅವನ ಹೆಂಡತಿಯೂ ಮಗನೂ ಗೋಳಿಡುತ್ತ ಹಿಂದೆಯೇ ಬರುವರು. ತಾನು ಮಿತ್ರಕಾರ್ಯ ಕ್ಕಾಗಿ ಕೊಲೆಯಾಗುವೆನೇ ವಿನಾ ಅಕಾರ್ಯಕ್ಕಾಗಿ ಅಲ್ಲನೆಂದೂ, ಅದರಿಂದ ಸಂತೋಷ ಪಡಬೇಕೇ ವಿನಾ ಅಳಬಾರದೆಂದೂ ಚಂದನದಾಸನು ಅವರಿಗೆ ಸಮಾಧಾನ ಹೇಳುವನು. ಕಟುಕರು ತಮ್ಮ ಕೆಲಸದಲ್ಲಿ ಉದ್ಯುಕ್ತರಾಗುತ್ತಿರಲು, ಕುಟುಂಬಿನಿಯು ರೋದನ ಮಾಡುವಳು. ಆ ಸಮಯಕ್ಕೆ ರಾಕ್ಷಸನು ಅಲ್ಲಿಗೆ ಓಡಿಬಂದು ಚಂದನದಾಸನನ್ನು ಕೊಲ್ಲಬೇಡಿರೆಂದು ಕಟುಕರನ್ನು ತಡೆದು, ಕುಟುಂಬಿನಿಯನ್ನು ಸಮಾಧಾನಗೊಳಿಸು ವನು; ತಾನು ಅಮಾತ್ಯ ರಾಕ್ಷಸನೆಂದು ತಿಳಿಯಪಡಿಸಿಕೊಂಡು ಚಂದನದಾಸನಿಗೆ ಪ್ರತಿಯಾಗಿ ತನ್ನನ್ನು ಕೊಲ್ಲುವಂತೆ ಹೇಳುವನು. ಇದನ್ನು ಕೊಲೆಗಾರನೊಬ್ಬನು ಕೂಡಲೆ ಹೋಗಿ ಚಾಣಕ್ಯನಿಗೆ ತಿಳಿಸಲು, ಆತನು ಬಂದು ಅಮಾತ್ಯನನ್ನು ಕಂಡು ವಂದಿಸಿ, ಕೊಲೆಗಾರರ ವೇಷದಿಂದಿರುವವರು ಸಿದ್ಧಾರ್ಥಕ ಸಮಿದ್ಧಾರ್ಥಕರೆಂದೂ, ಶಕಟದಾಸನು ಯೋಗ್ಯನೆಂದೂ, ಅವನನ್ನು ಮೋಸಗೊಳಿಸಿ ಆ ಕಾಗದವನ್ನು ತಾನು ಬರೆಯಿಸಿದೆನೆಂದೂ, ಮಿಕ್ಕ ಕಾರ್ಯಗಳೆಲ್ಲವೂ ತಾನೇ ಮಾಡಿದುವೆಂದೂ, ಇವೆಲ್ಲವನ್ನೂ ಚಂದ್ರಗುಪ್ತನೊಡನೆ ರಾಕ್ಷಸನನ್ನು ಸೇರಿಸುವುದಕ್ಕಾಗಿ ತಾನು ಮಾಡಿದ ಉಪಾಯ ಗಳೆಂದೂ, ಕೂಡಲೇ ಚಂದ್ರಗುಪ್ತನು ಅಮಾತ್ಯನ ದರ್ಶನಕ್ಕಾಗಿ ಅಲ್ಲಿಗೇ ಬರುವ ನೆಂದೂ ತಿಳಿಸುವನು. ಅಷ್ಟರಲ್ಲಿ ಚಂದ್ರಗುಪ್ತನು ಪರಿವಾರ ಸಮೇತನಾಗಿ ಬಂದು ಚಾಣಕ್ಯನಿಗೆ ನಮಸ್ಕರಿಸಲು, ಪೂಜ್ಯನಾದ ಅಮಾತ್ಯ ರಾಕ್ಷಸನಿಗೆ ನಮಸ್ಕರಿಸುವಂತೆ ಆತನಿಗೆ ಹೇಳುವನು. ಯತ್ನವಿಲ್ಲದೆ ರಾಕ್ಷಸನು ಅದನ್ನು ಸ್ವೀಕರಿಸಿ, "ರಾಜನೇ, ವಿಜಯಿಯಾಗು" ಎನ್ನುವನು. ಚಾಣಕ್ಯನು ಅಮಾತ್ಯನೊಡನೆ, "ಚಂದನದಾಸನ ಪ್ರಾಣದ ಮೇಲೆ ಆಸೆಯಿದ್ದರೆ ಈ ಕತ್ತಿಯನ್ನು ಹಿಡಿ" ಎಂದು ತನ್ನ ಕತ್ತಿಯನ್ನು ಕೊಡಹೋಗುವನು. ಅದಕ್ಕೆ ತಾನು ಯೋಗ್ಯನಲ್ಲವೆಂದು ಅಮಾತ್ಯನು ಹಿಂಜರಿಯು ತ್ತಿರುವರಲ್ಲಿ, ಚಾಣಕ್ಯನು ಬಲವಂತದಿಂದ ಅವನನ್ನು ಒಪ್ಪಿಸುವನು; ಚಾಣಕ್ಯನು ಚಂದ್ರಗುಪ್ತನನ್ನು ಆಶೀರ್ವದಿಸುವನು.

ಅಷ್ಟರಲ್ಲಿ ಭದ್ರಭಟ ಭಾಗುರಾಯಣ ಮೊದಲಾದವರು ಮಲಯಕೇತುವನ್ನು ಬಂಧಿಸಿ ಅಲ್ಲಿಗೆ ತರುವರು. ಚಾಣಕ್ಯನು ಅಮಾತ್ಯ ರಾಕ್ಷಸನಿಗೆ ಇದನ್ನು ತಿಳಿಸಿ, ಏನು ಮಾಡಬೇಕೆಂಬುದಕ್ಕೆ ಆತನ ಅಪ್ಪಣೆಯನ್ನು ಪಡೆಯಿರೆಂದು ಹೇಳುವನು. ರಾಕ್ಷಸನು ಚಾಣಕ್ಯನ ಸಾಹಸಕ್ಕೆ ತನ್ನಲ್ಲಿಯೇ ಅಚ್ಚರಿಪಡುತ್ತ, ತಾನು ಕೆಲವು ಕಾಲ ಮಲಯಕೇತುವಿನ ಬಳಿಯಲ್ಲಿದ್ದುದರಿಂದ, ಆತನ ಪ್ರಾಣವನ್ನುಳಿಸಬೇಕೆನ್ನುವನು. ಚಾಣಕ್ಯನು ಇದನ್ನು ಕೇಳಿ, ಅಮಾತ್ಯ ರಾಕ್ಷಸನು ಚಂದ್ರಗುಪ್ತನಲ್ಲಿ ವಿಜ್ಞಾಪನೆ ಮಾಡಿಕೊಂಡ ಕಾರಣ ಚಂದ್ರಗುಪ್ತನು ಮಲಯಕೇತುವಿಗೆ ಅವನ ತಂದೆಯ ರಾಜ್ಯವನ್ನು ಕೊಟ್ಟಿರುವನೆಂದೂ, ಭಾಗುರಾಯಣ ಮೊದಲಾದವರು ಅವನೊಡನೆ ಹೋಗಿ ಅವನನ್ನು ರಾಜ್ಯದಲ್ಲಿ ನೆಲೆಗೊಳಿಸಿ ಹಿಂದಿರುಗಿ ಬರಬೇಕೆಂದೂ ತಿಳಿಸುವನು. ತರುವಾಯ, "ಅಮಾತ್ಯ ರಾಕ್ಷಸನು ದೊರೆತುದರಿಂದ ಚಂದ್ರಗುಪ್ತನು ಸಂತೋಷಗೊಂಡು ಚಂದನದಾಸಶೆಟ್ಟಿಗೆ 'ಸರ್ವನಗರ ಶ್ರೇಷ್ಠಿ' ಎಂಬ ಅಧಿಕಾರದ ಬಿರುದನ್ನು ದಯಪಾಲಿಸಿರುವನು; ಅವನ ಕಡೆಯವರೆಲ್ಲರನ್ನೂ ಬಿಟ್ಟುಬಿಡತಕ್ಕುದು ಎಂದು ಆಜ್ಞೆಮಾಡಿರುವನು" ಎಂದು ದುರ್ಗಪಾಲನಿಗೆ ತಿಳಿಸುವಂತೆ ಚಾಣಕ್ಯನು ಹೇಳಿ, ತನ್ನ ಪ್ರತಿಜ್ಞೆಯನ್ನು ಪೂರೈಸಿರುವ ತಾನು ತನ್ನ ತಲೆಯ ಗಂಟು ಹಾಕಿಕೊಂಡರೆ ಸಾಕು ಎನ್ನುವನು; ಚಂದ್ರಗುಪ್ತನನ್ನೂ ಅಮಾತ್ಯ ರಾಕ್ಷಸನನ್ನೂ ಸಂಬೋಧಿಸಿ, "ಇನ್ನೇನು ಹಿತವನ್ನು ಮಾಡಲಿ?" ಎಂದು ಕೇಳುವನು. ಅದಕ್ಕೆ ಚಂದ್ರಗುಪ್ತನು, "ಇದಕ್ಕಿಂತಲೂ ಇನ್ನು ಮಾಡಬೇಕಾದ ಪ್ರಿಯವೇನಿದೆ? ರಾಕ್ಷಸನೊಡನೆ ಸ್ನೇಹವನ್ನು ಮಾಡಿಸಿದುದಾಯಿತು; ನಮ್ಮನ್ನು ರಾಜ್ಯದಲ್ಲಿ ನಿಲ್ಲಿಸಿದುದಾಯಿತು; ನಂದರ ನಾಶವೂ ಆಯಿತು; ಇದಕ್ಕಿಂತಲೂ ನನಗೆ ಆಗಬೇಕಾದ ಪ್ರಿಯವೇನುಳಿದಿದೆ?" ಎನ್ನುವನು. ರಾಕ್ಷಸನು ಭರತವಾಕ್ಯವನ್ನು ಹೇಳುವನು: "ಭೂಮಿಯು ಮ್ಲೇಚ್ಛರ ಹಾವಳಿಗೆ ಒಳಗಾಗಿದ್ದು ಈಗ ಆ ಪರಮಾತ್ಮನಾದ ವಿಷ್ಣುವಿನ ರಾಜ ಶರೀರವಾದ ಚಂದ್ರಗುಪ್ತನಿಗೆ ವಶವಾಗಿರುವುದು. ಬಂಧುಗಳನ್ನೂ ಭೃತ್ಯರನ್ನೂ ಶ್ರೀಮಂತರನ್ನಾಗಿ ಮಾಡುತ್ತಿರುವ ಆ ಚಂದ್ರಗುಪ್ತ ಮಹಾರಾಜನು ಭೂಮಿಯನ್ನು ಚಿರ ಕಾಲ ಪಾಲಿಸಲಿ."

---

## ವಿಚಾರ

**ಮುದ್ರಾರಾಕ್ಷಸ** ನಾಟಕವು ನಂದ ನಾಶವಾದ ಮೇಲೆ ನಡೆಯುವ ವಿಚಾರಗಳನ್ನು ಮಾತ್ರ ವರ್ಣಿಸುವುದು. ಇದರ ಪೂರ್ವ ಕಥೆಯನ್ನು ನಾಟಕದ ಉಪೋದ್ಘಾತ ಪ್ರಕರಣದಲ್ಲಿ ಮಾತ್ರ ತಿಳಿಸಿದೆ. **ಮುದ್ರಾಮಂಜೂಷ**ದಲ್ಲಿ, ನಂದೋತ್ಪತ್ತಿ ಮೊದಲ್ಗೊಂಡು ನಾಟಕದ ಆರಂಭದಲ್ಲಿ ಬರುವ ರಾಕ್ಷಸ ಮುದ್ರಿಕಾ ಗ್ರಹಣದ ವರೆಗೂ ಹನ್ನೆರಡು ಪ್ರಕರಣಗಳಿವೆ; ನಾಟಕದ ಕಥೆಯ ಪ್ರಕರಣಗಳು ಇನ್ನುಳಿದ ಆರೇ. ಹೀಗಿರುವಲ್ಲಿ, ಮುದ್ರಾಮಂಜೂಷವು ಮುದ್ರಾರಾಕ್ಷಸ ನಾಟಕಕ್ಕೆ "ಗದ್ಯ ರೂಪವಾದ ಭಾಷಾಂತರವು" ಎಂದು ಹೇಳುವುದು ಸ್ವಲ್ಪವೂ ಸಮಂಜಸವಾಗಲಾರದು.

ಮುದ್ರಾಮಂಜೂಷದ ಪ್ರಥಮ ಮುದ್ರಣದ ಪೀಠಿಕೆಯಲ್ಲಿ, ಈ ಗ್ರಂಥವನ್ನು ಮುದ್ರಿಸಿದ ರೆವ್. ಜೆ. ಸ್ಟೀವನ್‌ಸನ್ ಎಂಬುವರು—

"This work is a translation by Kempunarayana, of the Sanskrit drama, variously entitled 'Mudra Rakshasa,' 'Mudra Manjusha,' and 'The History of Chandragupta and Chanakya."

ಎಂದು ಹೇಳಿರುತ್ತಾರೆ. ಇದು ತಪ್ಪು ತಿಳಿವಳಿಕೆಯಿಂದಾದುದೆಂದು ತೋರುವುದು. ಸಂಸ್ಕೃತ ನಾಟಕಕ್ಕೆ 'ಮುದ್ರಾಮಂಜೂಷ' ವೆಂಬ ಹೆಸರು ಯಾರೂ ಕೊಟ್ಟಿಲ್ಲ. ಇದು ಕೆಂಪುನಾರಾಯಣನು ತನ್ನ ಗದ್ಯಗ್ರಂಥಕ್ಕೆ ಕೊಟ್ಟ ಹೆಸರು. ಮುದ್ರಾಮಂಜೂಷದ 'ಅವತರಣಿಕೆ' ಯಲ್ಲಿ, "ಸಂಕ್ಷೇಪವಾಗಿ ಪುರಾಣದಲ್ಲಿ ಹೇಳಿದ ಕಥೆಯನ್ನು ಈಗ ಕೆಂಪುನಾರಾಯಣನೆಂಬ ಕವಿಯು ಕರ್ನಾಟ ಭಾಷೆಯಿಂದ ವಿಸ್ತರಿಸಿ, ಇದಕ್ಕೆ ಮುದ್ರಾಮಂಜೂಷವೆಂಬ ಪೆಸರಿಟ್ಟು ಪೇಳ್ವನದೆಂತೆನೆ" ಎಂದು ಹೇಳಿದೆ; 'ಮುದ್ರಾರಾಕ್ಷಸ'ದ ಪ್ರಸ್ತಾಪವನ್ನೇ ಮಾಡಿಲ್ಲ.

'ಭಾಷಾಂತರ'ವೆಂಬುದಕ್ಕೆ 'ಮಾತಿಗೆ ಮಾತು' ಎಂಬ ಅರ್ಥವನ್ನು ಮಾಡಿದರೆ, ಇದು ಸರ್ವಥಾ ಸಿದ್ಧಿಸಲಾರದು. ನಾಟಕವನ್ನೂ ಗದ್ಯವನ್ನೂ ಓದಿ ನೋಡಿದರೆ, ಎರಡರಲ್ಲಿರುವ ಕಥಾಭಾಗವೂ ಒಂದೇ ಸರಣಿಯಲ್ಲಿಲ್ಲ. ಕಥೆಯಲ್ಲಿ ಮಾತ್ರ ಎರಡಕ್ಕೂ ಅಷ್ಟೇನೂ ವ್ಯತ್ಯಾಸಗಳು ಕಂಡುಬರದಿದ್ದರೂ ಮುದ್ರಾಮಂಜೂಷದಲ್ಲಿ ಅನೇಕ ಕಡೆ ಕೆಂಪುನಾರಾಯಣನ ಸ್ವಂತ ಕವಿತೆಯು ಕಾಣಬರುವುದು; ಕೆಲವು ಕಡೆ ವ್ಯತ್ಯಾಸಗಳೂ ಗೋಚರವಾಗುವುವು. ಇದಕ್ಕೆ ಕೆಲವು ಮಾತ್ರ ಉದಾಹರಣೆಗಳನ್ನು ಕೊಡಲಾಗುವುದು:—

(೧) ನಾಟಕದ ಉಪೋದ್ಘಾತದಲ್ಲಿ, ಸುನಂದಾದೇವಿಯು ಅನೇಕ ಗರ್ಭಗಳನ್ನೊಳಕೊಂಡ ಮಾಂಸದ ಮುದ್ದೆಯನ್ನು ಹೆತ್ತಳೆಂದೂ, ಅವು ಒಂಭತ್ತು ತುಂಡುಗಳಾಗಿ ಒಡೆದುವೆಂದೂ, ಆ ತುಂಡುಗಳನ್ನು ಅಮಾತ್ಯ ರಾಕ್ಷಸನು ಎಣ್ಣೆಯ ಕೊಪ್ಪರಿಗೆಯಲ್ಲಿಟ್ಟು ಪೋಷಿಸಿದನೆಂದೂ ಹೇಳಿದೆ. ಇದನ್ನು ವಿಶಾಖದತ್ತನು, ಮಹಾಭಾರತದಲ್ಲಿ ಹೇಳಿರುವ ಕೌರವೋತ್ಪತ್ತಿಯ ಕಥೆಯಿಂದ ತೆಗೆದುಕೊಂಡಿರಬೇಕು. ಈ ಕಥೆಯನ್ನು ಕೆಂಪುನಾರಾಯಣನು ತೆಗೆದುಕೊಂಡಿಲ್ಲ.

(೨) ಕೃತ್ರಿಮ ಸಿಂಹವನ್ನು ಕಳುಹಿಸಿದುದು ಸಿಂಹಳರಾಜನೆಂದು ನಾಟಕದ ಉಪೋದ್ಘಾತದಲ್ಲಿಯೂ, ಪರ್ವತರಾಜನೆಂದು ಗದ್ಯಕಾವ್ಯದಲ್ಲಿಯೂ ಹೇಳಿದೆ. ಪರ್ವತರಾಜನು ಕುಸುಮಪುರದಲ್ಲಿ ನಂದರು ನಡೆಯಿಸಿದ ಅನ್ಯಾಯವನ್ನು ತಿಳಿದು ನಂದರ ಬಲಾಬಲಗಳನ್ನು ತಿಳಿದುಕೊಳ್ಳುವುದಕ್ಕಾಗಿ ಈ ರೀತಿ ಮಾಡಿದಂತೆ ಕೆಂಪುನಾರಾಯಣನು ವರ್ಣಿಸಿದ್ದಾನೆ. ನಾಟಕದಲ್ಲಿ ಹೇಳಿರುವುದಕ್ಕಿಂತಲೂ ಇದೇ ಹೆಚ್ಚು ಸಮರ್ಪಕವಾದುದೆಂದು ತೋರುವುದು.

(೩) ಚಾಣಕ್ಯನ ಜುಟ್ಟು, ನಂದರ ದೂತರು ಆತನನ್ನು ಎಳೆದ ರಭಸಕ್ಕೆ ಬಿಚ್ಚಿಹೋಯಿತೆಂದೂ, ದುಷ್ಟ ಕ್ಷತ್ರಿಯರಾದ ನಂದರನ್ನು ಸಂಹರಿಸಿ ತರುವಾಯ ತನ್ನ

ಜುಟ್ಟನ್ನು ಕಟ್ಟಿಕೊಳ್ಳುವೆನೆಂದು ಚಾಣಕ್ಯನು ಪ್ರತಿಜ್ಞೆ ಮಾಡಿದಂತೆಯೂ, ಆತನು ನಂದ ನಿರ್ಮೂಲನವಾದೊಡನೆಯೇ ಗಂಗಾ ಸ್ನಾನ ಮಾಡಿ, ಬಿಚ್ಚಿದ್ದ ತನ್ನ ಶಿಖೆಯನ್ನು ಬಂಧಿಸಿದಂತೆಯೂ ಮುದ್ರಾಮಂಜೂಷದಲ್ಲಿ ಹೇಳಿದೆ. ನಾಟಕದಲ್ಲಾದರೋ ಚಾಣಕ್ಯನು ತನ್ನ ಕೈಯಿಂದ ಶಿಖೆಯನ್ನು ಬಿಚ್ಚಿಕೊಂಡನೆಂದೂ, ನಂದರನ್ನು ನಾಶಗೊಳಿಸದೆ ತನ್ನ ಶಿಖೆಯನ್ನು ಕಟ್ಟೆನೆಂದೂ ಪ್ರತಿಜ್ಞೆಗೈದು, ಚಂದ್ರಗುಪ್ತನಿಗೆ ರಾಜ್ಯಾಭಿಷೇಕ ಮಾಡಿ ಅಮಾತ್ಯ ರಾಕ್ಷಸನನ್ನು ದೊರೆಗೆ ಮಂತ್ರಿಯಾಗಿರುವಂತೆ ಒಪ್ಪಿಸಿ, ತನ್ನ ಕಾರ್ಯಗಳೆಲ್ಲವೂ ಮುಗಿದು ತಾನು ತಪಸ್ಸಿಗೆ ಹೊರಟುಹೋಗುವ ಸಂದರ್ಭದಲ್ಲಿ, "ಪ್ರತಿಜ್ಞೆಯನ್ನು ಪೂರೈಸಿರುವ ನಾನು ನನ್ನ ತಲೆಯನ್ನು ಗಂಟು ಹಾಕಿಕೊಂಡರೆ ಮಾತ್ರವೇ ಸಾಕಲ್ಲವೆ?" ಎನ್ನುವನು. ಗದ್ಯದಲ್ಲಿ ಈ ಸಂದರ್ಭವನ್ನು ಮಾರ್ಪಡಿಸಿರುವುದು ಯುಕ್ತವಾಗಿದೆ.

(೪) ಚಂದನದಾಸನು ಮಣಿಕಾರ ಶ್ರೇಷ್ಠಿಯೆಂದು ನಾಟಕದಲ್ಲಿಯೂ, ಬಳೆಗಾರ ಸೆಟ್ಟಿಯೆಂದು ಗದ್ಯದಲ್ಲಿಯೂ ಹೇಳಿದೆ.

(೫) ಸರ್ವಾರ್ಥಸಿದ್ಧಿರಾಯನನ್ನು ರಾಕ್ಷಸನು ಸುರಂಗ ಮಾರ್ಗದಿಂದ ಗುಟ್ಟಾಗಿ ಊರಹೊರಕ್ಕೆ ಕಳುಹಿಸಿದನೆಂದು ನಾಟಕದ ಉಪೋದ್ಘಾತದಲ್ಲಿಯೂ, ವ್ಯಥೆಯನ್ನು ಸಹಿಸಲಾರದೆ ಆ ರಾಯನು ತಾನಾಗಿಯೇ ಅರಮನೆಯನ್ನು ಬಿಟ್ಟು ಸುರಂಗ ಮಾರ್ಗದಿಂದ ತಪೋವನಕ್ಕೆ ಪ್ರಯಾಣ ಮಾಡಿದನೆಂದು ಗದ್ಯದಲ್ಲಿಯೂ ಹೇಳಿದೆ.

(೬) ಮಾಯೆಯಿಂದ (ಅಭಿಚಾರದಿಂದ) ಸೃಷ್ಟಿಮಾಡಲ್ಪಟ್ಟ ವಿಷಕನ್ನಿಕೆಯನ್ನು ರಾಕ್ಷಸನು ಚಂದ್ರಗುಪ್ತನಿಗೆ ಒಪ್ಪಿಸಿದನೆಂದು ನಾಟಕದ ಉಪೋದ್ಘಾತದಲ್ಲಿಯೂ, "ಅರಾತಿಯ ನಿಗ್ರಹಾರ್ಥವಾಗಿ ಮೊದಲೇ ಸಮುದ್ರದಲ್ಲಿ ಉದ್ಭವಿಸಿದ ವಿಷ ಮತ್ಸ್ಯಾಹಾರದಿಂದಲೇ ಜೀವಿಸುತ್ತಿರುವ ತಾಯಿತಂದೆಗಳ ಗರ್ಭದಲ್ಲಿ ಜನಿಸಿದ ಒಂದು ಹೆಣ್ಣು ಶಿಶುವಿಗೆ ಸಂಸ್ಕಾರದಿಂದ ಪಾದರಸಮುಂ ಸ್ಪರ್ಶವೇದಿಯುಂ ಮಾಡಿ ಸಮಯದಲ್ಲಿ ಕಾರ್ಯಕ್ಕೆ ಉಪಯೋಗಿಸಿಕೊಳ್ಳುವಂತೆ ಬಾಲ್ಯದಾರಭ್ಯ ಆ ಕೂಸಿಗೆ ವಯೋಸುಗುಣವಾಗಿ ವಿಷ ಸೇವನೆಯುಂ ಮಾಡಿಸಿ ಹನ್ನೆರಡು ವರುಷಗಳ ವಯಸ್ಸಾದಮೇಲೆ ಆ ಬಾಲೆಯ ಅಂಗ ಸ್ಪರ್ಶವಾದರೆ ವಿಷ ದೋಷದಿಂದ ಪ್ರಾಣಿಗಳು ಆಗಲೇ ಹತವಾಗುವುದಂ ತಿಳಿದು", ಆ ಸ್ತ್ರೀಯಂ ಪ್ರೌಢೆಯಂ ಮಾಡಿ ರಾಕ್ಷಸನು ರಕ್ಷಿಸಿಕೊಂಡಿದ್ದನೆಂದು ಗದ್ಯದಲ್ಲಿ ಹೇಳಿದೆ. ಇದೇ ಸಹಜವಾದುದೆಂದು ತೋರುವುದು.

(೭) ಅಮಾತ್ಯ ರಾಕ್ಷಸನ ಮುದ್ರೆಯುಂಗುರವು ಆತನ ಹೆಂಡತಿಯ ಕೈಯಲ್ಲಿದ್ದುದು, ಚಾಣಕ್ಯನ ಗೂಢಚಾರನೊಬ್ಬನು ಚಿತ್ರಪಟಗಳನ್ನು ಆ ಮನೆಯಲ್ಲಿ ತೋರಿಸುತ್ತಿದ್ದಾಗ, ಅಕಸ್ಮಾತ್ತಾಗಿ ಜಾರಿ ಆಕೆಗೆ ತಿಳಿಯದಂತೆ ಹೊಸಲಿನ ಮೇಲೆ ಬಿದ್ದುಹೋಯಿತೆಂದೂ ಅದನ್ನು ಚಾರನು ಗ್ರಹಿಸಿ ಚಾಣಕ್ಯನಿಗೆ ತಂದುಕೊಟ್ಟನೆಂದೂ ನಾಟಕದಲ್ಲಿ ಹೇಳಿದೆ. ಗದ್ಯದಲ್ಲಾದರೋ, ಈ ಮುದ್ರೆಯುಂಗುರವನ್ನು ಸಂಪಾದಿಸುವುದಕ್ಕಾಗಿ ಚಾಣಕ್ಯನು ರಾಕ್ಷಸನ ಮುದ್ರೆಯೊತ್ತಿರುವ ಕಾಗದ ಪತ್ರಗಳನ್ನು ನೋಡಿ ಅದರಂತೆಯೇ ಒಂದು ಉಂಗುರವನ್ನು ಮಾಡಿಸಿ, ಚಂದನದಾಸನ ಹೆಂಡತಿಗೆ

ಸೂಲಗಿತ್ತಿತನವನ್ನು ಮಾಡುವವಳ ಮೂಲಕ ಅದನ್ನು ಕಳುಹಿಸಿ, ಅವೆರಡನ್ನೂ ಸೂಲಗಿತ್ತಿಯು ಬದಲಾಯಿಸುವಂತೆ ಉಪಾಯ ಮಾಡಿ ರಾಕ್ಷಸನ ಉಂಗುರವನ್ನು ಪಡೆದನೆಂದು ಹೇಳಿದೆ. ಇದೇ ಹೆಚ್ಚು ಸಮಂಜಸವಾದುದೆಂದು ತೋರಿಬರುವುದು.

(೮) ಚಾಣಕ್ಯನು ಚಂದ್ರಗುಪ್ತನೊಡನೆ ಕಪಟದ್ವೇಷದೊಡನಿರುವ ಸಂದರ್ಭದಲ್ಲಿ ಆತನನ್ನು 'ವೃಷಲ'ನೆಂದು ಸಂಬೋಧಿಸುವಂತೆ ನಾಟಕದಲ್ಲಿ ಹೇಳಿದೆ; ಗದ್ಯದಲ್ಲಿ ಹಾಗಿಲ್ಲ.

(೯) ಕೆಲವು ಕಡೆ ಹೆಸರುಗಳು ಬೇರೆಬೇರೆಯಾಗಿರುವುವು: ಉದಾಹರಣೆಗಾಗಿ, ರಾಕ್ಷಸನು ಚಂದ್ರಗುಪ್ತನ ಬಳಿಯಲ್ಲಿರುವ ತನ್ನ ಕಡೆಯವ**ರಾದ ಕಲಶಕ, ವಿಜಯರೆಂಬ** ಸ್ತುತಿಪಾಠಕರಿಗೆ ಹೇಳಿಕಳುಹಿಸಿದನೆಂದು ಗದ್ಯದಲ್ಲಿದೆ; ನಾಟಕದಲ್ಲಿ ವೈತಾಳಿಕ**ನಾದ ಸ್ತನಕಲಶ**ನಿಗೆಂದಿದೆ.

(೧೦) ಚಂದನದಾಸನನ್ನು ಶೂಲಕ್ಕೆ ಹಾಕುವ ಸಮಯಕ್ಕೆ ರಾಕ್ಷಸನು ಅಲ್ಲಿಗೆ ಬಂದು ಚಂದನದಾಸನನ್ನು ಬಿಡಿಸಿ ತಾನೇ ಚಾಣಕ್ಯನ ಪರ್ಣಶಾಲೆಗೆ ಹೋದನೆಂದೂ, ತರುವಾಯ ಚಾಣಕ್ಯನು ರಾಕ್ಷಸನನ್ನೊಡಗೊಂಡು ಚಂದ್ರಗುಪ್ತನ ಬಳಿಗೆ ಹೋದನೆಂದೂ ಗದ್ಯದಲ್ಲಿ ಹೇಳಿದೆ. ನಾಟಕದಲ್ಲಾದರೋ, ಹಾಗೆ ಹೇಳದೆ, ಅಮಾತ್ಯನನ್ನು ದೂತನು ಚಾಣಕ್ಯನ ಬಳಿಗೆ ಕರೆದುಕೊಂಡು ಹೋಗುತ್ತಿರುವಾಗ ಚಾಣಕ್ಯನು ಸಂಧಿಸಿದಂತೆಯೂ, ಅಷ್ಟರಲ್ಲಿ ಚಂದ್ರಗುಪ್ತನು ಪರಿವಾರದೊಡನೆ ಕೂಡಿ ಅಲ್ಲಿಗೆ ಬಂದಂತೆಯೂ ಹೇಳಿದೆ.

**ಸಾರಾಂಶ.**—ನಾಟಕದ ಉಪೋದ್ಘಾತದಲ್ಲಿ ಸೂಕ್ಷ್ಮವಾಗಿ ಕೊಟ್ಟಿರುವ ಕಥಾಭಾಗವನ್ನು ಗದ್ಯದಲ್ಲಿ ಬೆಳೆಯಿಸಿ, ನಾಟಕದಲ್ಲಿಲ್ಲದ ಅನೇಕ ನೀತಿಗಳನ್ನೂ ಉಪಾಯಗಳನ್ನೂ ಕೊಟ್ಟು, ಈ ಭಾಗವೇ ಗ್ರಂಥದ ಸುಮಾರು ಮುಕ್ಕಾಲು ಪಾಲಾಗುವಂತೆ ರಚಿಸಿರುವುದರಿಂದಲೂ, ನಾಟಕದ ಸರಣಿಯನ್ನನುಸರಿಸದೆ ಗದ್ಯಕ್ಕೆ ತಕ್ಕಂತೆ ಕಥಾಭಾಗವನ್ನು ಪ್ರೌಢವಾಗಿ ಅಳವಡಿಸಿರುವುದರಿಂದಲೂ, ಅನೇಕ ಸಂದರ್ಭಗಳಲ್ಲಿ ಕೆಲವು ಮಾರ್ಪಾಡುಗಳು ಗದ್ಯದಲ್ಲಿ ಕಂಡುಬರುವುದರಿಂದಲೂ, ಮುದ್ರಾಮಂಜೂಷವು ಮುದ್ರಾರಾಕ್ಷಸದ **ಭಾಷಾಂತರ**ವೆಂದು ಸರ್ವಥಾ ಹೇಳಲಾಗದು.

ಆದರೆ, ನಮಗೆ ತಿಳಿದಿರುವ ಮಟ್ಟಿಗೆ, ಇತರ ಯಾವ ಪೂರ್ವ ಗ್ರಂಥದಲ್ಲಿಯೂ ಈ ಕಥೆಯನ್ನು ಇಷ್ಟು ವಿಸ್ತಾರವಾಗಿ ಹೇಳಿಲ್ಲದುದರಿಂದ, ಕೆಂಪುನಾರಾಯಣನು ಮುದ್ರಾರಾಕ್ಷಸ ನಾಟಕವನ್ನು ಓದಿ, ಅದರ ಉಪೋದ್ಘಾತದಲ್ಲಿ ಕೊಟ್ಟಿರುವ ಕಥೆಯನ್ನು ಬೆಳೆಯಿಸಿ, ಮೂಲದಲ್ಲಿ ತಕ್ಕಂತೆ ಸ್ವಲ್ಪ ಮಾರ್ಪಾಡುಗಳನ್ನು ಅಲ್ಲಲ್ಲಿ ಮಾಡಿ, ಪ್ರೌಢ ರೀತಿಯಲ್ಲಿ ತನ್ನ ಗ್ರಂಥವನ್ನು ರಚಿಸಿರುವನೆಂದು ಧಾರಾಳವಾಗಿ ಹೇಳಬಹುದು. ನಾಟಕದಲ್ಲಿ ಬರುವ ಮುಖ್ಯ ವಿಷಯಗಳೂ, ಮುಖ್ಯ ಪಾತ್ರಗಳ ಹೆಸರುಗಳೂ ಗದ್ಯದಲ್ಲಿಯೂ ಅದೇ ರೀತಿಯಾಗಿ ಬರುವುವು. ಮುದ್ರಾರಾಕ್ಷಸ ನಾಟಕವನ್ನು ಈತನು ಅನುಸರಿಸಿರುವನೆಂಬುದಕ್ಕೆ ಎರಡು ಮೂರು ಉದಾಹರಣೆಗಳು ಮಾತ್ರ ಸಾಕು:—

(೧) ಮಲಯಕೇತುವಿನ ರಾಜ್ಯದಲ್ಲಿದ್ದ ಅಮಾತ್ಯರಾಕ್ಷಸನನ್ನು ಹಾವಾಡಿಗನ ವೇಷದಿಂದ ಬಂದ ಗೂಢಚಾರನು ನೋಡುವುದಕ್ಕೆ ಹೋಗುವ ಸಂದರ್ಭದಲ್ಲಿ—

"ಆದಕಾರಣ ಬುದ್ಧಿಶಾಲಿಗಳಾದ ಈ ಸಚಿವರಿಬ್ಬರ ಪರಸ್ಪರ ವಿರೋಧದಿಂದ ನಂದಕುಲ ಲಕ್ಷ್ಮಿಯು ಸಂಶಯಾಸ್ಪದಳೇ ಆಗಿರುವಳು. ಬಹಳ ವಿರೋಧಿಗಳಾದ ಈ ಮುಖ್ಯ ಮಂತ್ರಿಗಳಿಬ್ಬರ ಮಧ್ಯದಲ್ಲಿ ಸಿಕ್ಕಿರುವ ಲಕ್ಷ್ಮಿಯು, ಮಹಾ ವನದಲ್ಲಿ ಎರಡು ಸಲಗಗಳ ಮಧ್ಯೇ ಸಿಕ್ಕಿ........ ದುಃಖಕ್ಕೀಡಾದ ಹೆಣ್ಣಾನೆಯಂತೆ ಖೇದಗೊಳ್ಳುತ್ತಿರುವಳೆಂಬುದಕ್ಕೆ ಸಂದೇಹವಿಲ್ಲ." [II. ೩]—

ನಾಟಕದಲ್ಲಿ ಹೀಗೆಂದು ಹೇಳಿದೆ. ಗದ್ಯದಲ್ಲಿ—

"ರಾಕ್ಷಸನ ಉಪಾಯಂಗಳಂ ನೋಡಿದರೆ ಚಂದ್ರಗುಪ್ತನಂ ಜಯಿಸುವುದು ಸ್ವಲ್ಪ ಮಾತ್ರವೆಂದು ತೋರುತ್ತಿದೆ. ಚಾಣಕ್ಯನ ಕೌಶಲ್ಯವನ್ನೀಕ್ಷಿಸಿದರೆ ರಾಕ್ಷಸನ ಪ್ರಯತ್ನವೆಲ್ಲವೂ ನಿಷ್ಫಲವಾಗುವುದೆಂದು ಕಾಣಿಸುತ್ತಿದೆ. ಹೆಣ್ಣಾನೆಯ ನಿಮಿತ್ತವಾಗಿ ಕಾದಾಡುವ ಪುನ್ನಾಗಗಳ ಮಧ್ಯದಲ್ಲಿ ತಗಲಿರುವ ಕರೇಣುವಿನಂತೆ, ಒಬ್ಬರನ್ನೊಬ್ಬರು ಜಯಿಸಲಿಚ್ಛಯಿಸಿದ ಚಾಣಕ್ಯ ರಾಕ್ಷಸರ ನಡುವೆ ಸಿಕ್ಕಿರುವ ರಾಜ್ಯಲಕ್ಷ್ಮಿಯು ಇವರಿಬ್ಬರಲ್ಲಿಯೂ ಸಮ ದೃಷ್ಟಿಯುಳ್ಳವಳಾಗಿದ್ದಾಳೆ." [ಪುಟ 256]

(೨) ರಾಕ್ಷಸನ ಗೂಢಚಾರನಾದ ವಿರಾಧಗುಪ್ತನಿಗೂ ರಾಕ್ಷಸನಿಗೂ ನಡೆಯುವ ಸಂಭಾಷಣೆಯಲ್ಲಿ, ರಾಕ್ಷಸನು—

"ಮಿತ್ರನೇ, ಚಂದ್ರಗುಪ್ತ ಹತಕನಿಗಿರುವ ದೈವ ಸಹಾಯವನ್ನು ನೋಡು. ಅವನ ಕೊಲೆಗಾಗಿ ನಾನು ಕಳುಹಿಸಿಕೊಟ್ಟ ವಿಷಕನ್ಯೆಯಿಂದ ಅವನು ಸಾಯದೆ, ವಿಧಿ ವಶದಿಂದ ಅವನ ಅರ್ಧ ರಾಜ್ಯಕ್ಕರ್ಹನಾಗಿದ್ದ ಪರ್ವತಕನು ಸತ್ತನು......"

ಇದಕ್ಕೆ ವಿರಾಧಗುಪ್ತನು—

"ನೀಚರು ವಿಘ್ನ ಭಯದಿಂದ ಕಾರ್ಯಾರಂಭವನ್ನೇ ಮಾಡರು........[II. ೧೭] ಮತ್ತು ಆದಿಶೇಷನಿಗೆ ಭೂಭಾರವನ್ನು ಹೊರುವ ವ್ಯಥೆಯು ಹೆಚ್ಚಾಗಿದ್ದರೂ ಅವನು ಹೊತ್ತಿರುವನಲ್ಲದೆ ಕೆಳಕ್ಕೆಸೆಯನು................." [II. ೧೮]—

ಹೀಗೆಂದು ನಾಟಕದಲ್ಲಿರುವುದು. ಗದ್ಯದಲ್ಲಿ—

"ಎಲೈ ದೂತನೇ, ನಾನು ಚಂದ್ರಗುಪ್ತನ ಸಂಹಾರಕ್ಕಾಗಿ ಮಾಡಿಸಿದ್ದ ಯತ್ನಗಳೆಲ್ಲ ಅವನಂ ಬಿಟ್ಟು ನಮ್ಮ ಜನರನ್ನೇ ಘಾತಿಸಿದುವು. ಅವನಿಗುಂಟಾಗಿರುವ ದೈವಬಲವಂ ನೋಡಿದೆಯಾ?......"

ಇದಕ್ಕೆ ವಿರಾಧಗುಪ್ತನು—

"ಸ್ವಾಮಿ, ಲೋಕದಲ್ಲಿ ಅಧಮರಾದ ಪುರುಷರು ವಿಘ್ನ ಭಯದಿಂದ ಕಾರ್ಯಾರಂಭವನ್ನೇ ಮಾಡರು..............ಆದಿಶೇಷನು ಮಹಾ ಭಾರವಾದರೂ ಈ ಭೂಮಿಯಂ ಪೊತ್ತು ನಿರ್ವಹಿಸುವಂತೆ ಕಾರ್ಯ ದಕ್ಷರಾದ ನಿಮ್ಮಂಥವರು ಯತ್ನ ಮಾಡಿದ ಬಳಿಕ ಅದಂ ಉದ್ಧರಿಸಬೇಕಲ್ಲದೆ ಸಾಧಾರಣರಂತೆ ಉಪೇಕ್ಷಿಸಬಾರದು." [ಪುಟ 258]

(೩) ಅಮಾತ್ಯರಾಕ್ಷಸನು ಸಿಕ್ಕಿರುವನೆಂದು ದೂತನು ಚಾಣಕ್ಯನಿಗೆ ತಿಳಿಸಿದಾಗ ಚಾಣಕ್ಯನು—

"ಕೆಂಪಗೆ ಉರಿಹಾಯುತ್ತಿರುವ ಬೆಂಕಿಯನ್ನು ಬಟ್ಟೆಯಲ್ಲಿ ಕಟ್ಟಿ ತಂದವನಾರು? ಗಾಳಿಯ ನಡೆಯನ್ನು ತಡೆದು ಹಗ್ಗದಿಂದ ಬಿಗಿದು ತಂದವನಾರು? ಆನೆಗಳ ಮದೋದಕದಿಂದ ಗಮಗಮಿಸುತ್ತಿರುವ ಕೇಸರಗಳುಳ್ಳ ಸಿಂಹವನ್ನು ಬೋನಿನಲ್ಲಿ ಕೂಡಿದವನಾರು? ಅನೇಕ ನೆಗಳುಗಳಿಂದಲೂ ಮೊಸಳೆಗಳಿಂದಲೂ ಭಯಂಕರವಾದ ಕಡಲನ್ನು ತೋಳುಗಳ ಬಲದಿಂದ ಈಜಿ ದಾಟಿದವನಾರು?........" [VII. ೬]

ಚಾಣಕ್ಯ—"ನಂದಕುಲದ್ವೇಷಿಯಾದ ದೈವವೆಂದು ಹೇಳು."—

ಹೀಗೆಂದು ನಾಟಕದಲ್ಲಿ ಹೇಳಿದೆ. ಗದ್ಯದಲ್ಲಿ—

"ಎಲೈ, ಪ್ರಜ್ವಲಿಸುವ ಅಗ್ನಿಯಂ ಉಡಿಯಲ್ಲಿ ಕಟ್ಟಿದಂತೆಯೂ, ಚಂಡಮಾರುತನಂ ಹಗ್ಗದಲ್ಲಿ ಬಿಗಿದಂತೆಯೂ, ಮಹಾ ಸಿಂಹಮಂ ಮೈದಡವಿ ತಂದಂತೆಯೂ ಈ ಮಹಾತ್ಮನಾದ ಅಮಾತ್ಯ ರಾಕ್ಷಸನಂ ಇಲ್ಲಿಗೆ ಹೇಗೆ ಕರೆತಂದಿರಿ?........"

"ಚಾಣಕ್ಯನು......ನಂದಕುಲ ವಿದ್ವೇಷಿಯಾದ ದೈವವೇ ರಾಕ್ಷಸನಂ ಇಲ್ಲಿಗೆ ಕರೆತಂದಿತು ಎನಬೇಕು ಎಂಬುದಾಗಿ ಹೇಳುತ್ತಿರಲು" [ಪುಟ 315]

ತನ್ನ ಗ್ರಂಥವನ್ನು ಮುದ್ರಾರಾಕ್ಷಸದ ಆಧಾರದ ಮೇಲೆ ರಚಿಸಿದೆನೆಂದು ಕೆಂಪುನಾರಾಯಣನು ಅವತರಣಿಕೆಯಲ್ಲಿ ಹೇಳಬೇಕಾಗಿದ್ದಿತು; ಆದರೆ, ಹಿಂದೆ ಹೇಳಿದಂತೆ, "ಸಂಕ್ಷೇಪವಾಗಿ ಪುರಾಣದಲ್ಲಿ ಹೇಳಿದ ಕಥೆಯನ್ನು ಈಗ ಕೆಂಪುನಾರಾಯಣನೆಂಬ ಕವಿಯು ಕರ್ಣಾಟ ಭಾಷೆಯಿಂದ ವಿಸ್ತರಿಸಿ ಇದಕ್ಕೆ ಮುದ್ರಾಮಂಜೂಷವೆಂಬ ಪೆಸರಿಟ್ಟು ಪೇಳ್ವನದೆಂತೆನೆ" ಎಂದು ಮಾತ್ರ ಅವತರಣಿಕೆಯಲ್ಲಿ ಹೇಳುತ್ತಾನೆ.*

**ಬೆಳ್ಳಾವೆ ವೆಂಕಟನಾರಾಯಣಪ್ಪ.**

---

* ಈ ಲೇಖನದ ಮುದ್ರಣ ಕಾರ್ಯವು ನಡೆಯುತ್ತಿದ್ದಾಗ, ಆಕಸ್ಮಿಕವಾಗಿ, 'ವಾಗ್ಭೂಷಣ'ದ ೩೧ನೆಯ ಸಂಪುಟದ ೫ನೆಯ ಸಂಚಿಕೆಯಲ್ಲಿ (ಮೇ ೧೯೨೭, ಪುಟ ೩೬-೧೨) ಮ|| ಶೇಷ ಭೀ. ಪಾರಿಶವಾಡರಿಂದ ಬರೆಯಲ್ಪಟ್ಟ "ಮುದ್ರಾರಾಕ್ಷಸ–ಮುದ್ರಾಮಂಜೂಷಗಳ ಅಲ್ಪ ಪರಿಚಯ" ಎಂಬ ಲೇಖನವು ಗೋಚರವಾಯಿತು.—ಲೇಖಕ.

# * ಕೇಶಿರಾಜನು ಜೈನನಲ್ಲ, ಬ್ರಾಹ್ಮಣನು



ಶ್ಲೋ ॥ ವೇದವೇದ್ಯೋ ಜಗತ್ಕರ್ತಾ ಜ್ಞಾನಾನಂದಮಯಃ ಪುಮಾನ್ ।
ಯಜ್ಞಕರ್ಮ ಸಮಾರಾಧ್ಯೋ ಹರಿರ್ದಿಶತುವಶ್ಶಿವಂ ॥

೧. ಕಂ ॥ ಶ್ರೀ ವಾಗ್ದೇವಿಗೆ ಶಬ್ದದಿ ।
ನಾವಾವಿಂದ್ರಿಯದ ವಿಷಯಮಂ ಶ್ರೋತ್ರದೊಳು ॥
ದ್ಭಾವಿಪ ನಿರ್ಮಲ ಮೂರ್ತಿಗಿ ।
ಳಾ ವಂದ್ಯೆಗೆ ಶಾಸ್ತ್ರ ಮುಖದೊಳವನತನಪ್ಪೆಂ ॥ [ಶಬ್ದಮಣಿದರ್ಪಣ]

ಎಂದು ಕೇಶವದೇವನು ಶಾಸ್ತ್ರ ಪ್ರಾರಂಭದಲ್ಲಿ "ನಿರ್ಮಲಮೂರ್ತಿ" ವಿಶೇಷಣ ವಿಶಿಷ್ಟಳಾದ ಸಾಕಾರ ಸರಸ್ವತೀ ದೇವಿಯ ವಂದನೆಯನ್ನು ಮಾಡಿರುವನು. ಸಂಪ್ರದಾಯಸ್ಥರಾದ ಜೈನರು ಜಿನೇಂದ್ರನ ವಾಣಿಯಷ್ಟು ಗೌರವವನ್ನು ಸಾಕಾರ ಸರಸ್ವತೀ ದೇವಿಗೆ ಕೊಡತಕ್ಕವರಲ್ಲ. ಈ ಮತ ರಹಸ್ಯವನ್ನು ಆದಿ ಪುರಾಣದಲ್ಲಿ ಆದಿ ಪಂಪನು ವಿವರಿಸಿರುತ್ತಾನೆ.—

ವೃ ॥ ಪರಮ ಜಿನೇಂದ್ರ ವಾಣಿಯ ಸರಸ್ವತಿ ಬೇಱದು ಪೆಣ್ಣ ರೂಪಮಂ ।
ಧರಿಯಿಸಿ ನಿಂದುದಲ್ತದುವೆ ಭಾವಿಸಿಯೋದುವ ಕೇಳುವ ಪೂಜಿಪಾ ॥
ಧರಿಸುವ ಭವ್ಯ ಕೋಟಿಗೆ ನಿರಂತರ ಸೌಖ್ಯಮನೀವುದಾನದ ।
ರ್ಕೆರೆದಪೆನಾ ಸರಸ್ವತಿಯೆ ಮಾಟ್ಕೆಮಗಿಲ್ಲಿಯೆ ವಾಗ್ವಿಳಾಸಮಂ ॥

[I. ೯]

ಈ ಕಾರಣದಿಂದಲೇ ಶಬ್ದಾನುಶಾಸನದ ಭಟ್ಟಾಕಳಂಕನು—

ಶ್ಲೋ ॥ ನಮಶ್ಶ್ರೀ ವರ್ಧಮಾನಾಯ ವಿಶ್ವವಿದ್ಯಾವಭಾಸಿನೇ ।
ಸರ್ವ ಭಾಷಾಮಯೀ ಭಾಷಾ ಪ್ರವೃತ್ತಾ್ಯನ್ಮುಖಾಂಬುಜಾತ್ ॥

ಎಂದು ಜಿನಸಂಪ್ರದಾಯ ರಹಸ್ಯವನ್ನು ಹಿಡಿದು ಮಂಗಳ ಮಾಡಿರುವನು.

ಕಬ್ಬಿಗರ ಕಾವದ ಆಂಡಯ್ಯನು ತ್ರಿಮೂರ್ತಿ ವಂದನಾವಸರದಲ್ಲಿ, ಬ್ರಹ್ಮನನ್ನು ಸರಸತಿಯೆಱೆಯನೆಂದು ನಿರ್ದೇಶಿಸಿ, ರೂಪಿನ ಸರಸತಿಯನ್ನೊಪ್ಪಿದರೂ ಆಕೆಗೆ ಪ್ರತ್ಯೇಕ ನಮಸ್ಕಾರ ಮಾಡದೆ ಮತ್ತೊಬ್ಬಳಾದ ಜೈನ ರಹಸ್ಯ ಸಂಪ್ರದಾಯದ ರೂಪಿಲ್ಲದ ಸರಸ್ವತಿಯನ್ನೇ ನಿರ್ದೇಶಿಸಿ ತೋರಿ ಆಕೆಯಿಂದಲೇ ತನ್ನ ಇಷ್ಟಾರ್ಥವನ್ನು ಬೇಡುತ್ತಾನೆ.—

* ಇದು ಮೈಸೂರಿನ ಟ್ರೈನಿಂಗು ಕಾಲೇಜಿನ ಪಂಡಿತರು ಮ॥ ರಾ॥ ಶ್ರೀನಿವಾಸ ರಂಗಾಚಾರ್ಯರವರು ೧೯೩೧ನೆಯ ಇಸವಿಯ ಜನವರಿ ೧೯ನೆಯ ತಾರೀಖಿನಲ್ಲಿ, ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ, ಇಂಗ್ಲೀಷು ಪ್ರೊಫೆಸರರಾದ ಮ॥ ರಾ॥ ಬಿ. ಎಂ. ಶ್ರೀಕಂಠಯ್ಯ, ಎಂ.ಎ. ಅವರ ಅಧ್ಯಕ್ಷತೆಯಲ್ಲಿ, ಮೈಸೂರು ವಿಶ್ವವಿದ್ಯಾನಿಲಯದ ಪರವಾಗಿ ಮಾಡಿದ ಉಪನ್ಯಾಸ.

ವೃ || ಗರುವಿಕೆಗಿಂಬು ಗಾಡಿಗೆ ತವರ್ಮನೆ ಪ್ಪೆಮೆಗೆ ಮೇಜ ನನ್ನಿಗಾ |
ಗರಮುಜಿತಕ್ಕೆ ಗೊತ್ತು ಪೆಸರ್ವೆತ್ತ ನೆಗೞ್ತೆಗೆ ತಾಣಮಾಗಿ ಬ||
ಲ್ಲರ ಬಗೆಯಲ್ಲಿ ಕೂಡಿ ನೆಲಸಿರ್ದು ಪೊಗೞ್ತೆಯ ನಾಂತಳಾವಳಾ |
ಸರಸತಿ ಕೂರ್ಮೆಯಿಂದೊಸೆದು ಮಾಡುಗೆ ಕಬ್ಬದ ಬರ್ದಿನೇೞ್ಗೆಯಂ ||

[ಕಬ್ಬಿಗರ ಕಾವ, ಪದ್ಯ ೭]

ಹೀಗೆ ಜೈನ ಸಂಪ್ರದಾಯವಿರುವುದರಿಂದಲೂ, ಕೇಶಿರಾಜನು ನಿರ್ಮಲ ಮೂರ್ತಿಗೆ, ಶ್ರೀ ವಾಗ್ದೇವಿಗೆ ಅವನತನಾದುದರಿಂದಲೂ, ಜೈನನಲ್ಲ, ವೈದಿಕ ಮತದವ ನಾಗಿರಬೇಕು. ಏಕೆಂದರೆ, ಈತನ ಈ ಶಬ್ದಮಣಿದರ್ಪಣದ ಮೂಲ ಗ್ರಂಥದಲ್ಲಿ ಪದ್ಧತಿಯ ಜಿನದೇವಾದಿ ಪಂಚಾಚಾರ್ಯ ಸ್ಮರಣೆಯಿಲ್ಲ; ಅರ್ಹತ್ಸಿದ್ಧಾದಿಗಳ ಸ್ಮರಣವೂ, ಜೈನ ಸಂಬಂಧವನ್ನು ಸ್ಪಷ್ಟಪಡಿಸುವ ರಚನೆಯೂ ಇರುವುದಿಲ್ಲ. ಹಾಗಾದರೆ, ಶಬ್ದಕ್ಕೆ ದ್ರವ್ಯತ್ವವನ್ನು ಹೇಳುವ ಜೈನ ಪದ್ಧತಿಯು ತೋರಿಬರುವುದಷ್ಟೆ! ಅದರಿಂದ ಜೈನನೆಂದೇಕೆ ಹೇಳಬಾರದು? ಎಂದರೆ, ಹಾಗೂ ಹೇಳಲಿಕ್ಕೆ ಸಾಧ್ಯವಿಲ್ಲ.—

೨. ಕಂ || ಅನುಕೂಲ ಪವನನಿಂ ಜೀ |
ವನಿಷ್ಟದಿಂ ನಾಭಿ ಮೂಲದೊಳ್ಕಹಳೆಯ ಪಾಂ ||
ಗಿನವೊಲ್ ಶಬ್ದ ದ್ರವ್ಯಂ |
ಜನಿಯಿಸುಗುಂ ಶ್ವೇತಮದರ ಕಾರ್ಯಂ ಶಬ್ದಂ ||

ಈ ಸೂತ್ರವು ಕೇಶಿಯು ಜೈನನೆಂಬುದಕ್ಕೆ ನಿದರ್ಶನವೆಂದು ಕೆಲವರ ಅಭಿಪ್ರಾಯ. ವ್ಯಾಖ್ಯಾನಕಾರರಾದ ನಿಟ್ಟೂರು ಸಂಜಯ್ಯನವರೇ ಈ ಅಭಿಪ್ರಾಯಕ್ಕೆ ಬೀಜಾವಾಪ ವನ್ನು ಮಾಡಿರುವರು. ಶಬ್ದಕ್ಕೆ ದ್ರವ್ಯತ್ವವನ್ನು ಹೇಳತಕ್ಕವರು ಜೈನರೆಂದು ಅವರ ವ್ಯಾಖ್ಯಾನದಲ್ಲಿರುವುದುಂಟು; ಆದ ಮಾತ್ರಕ್ಕೆ ಅದೇ ಸತ್ಯಾಂಶವಲ್ಲ.

ನಾಗೇಶಭಟ್ಟ ರಚಿತವಾದ ಶಬ್ದೇಂದುಶೇಖರವೆಂಬ ವ್ಯಾಕರಣ ವ್ಯಾಖ್ಯಾನದ ೧೭ನೆಯ ಪುಟದಲ್ಲಿರುವ ಪಾಣಿನೀಯಶಿಕ್ಷಾ—

ಶ್ಲೋ || ಆತ್ಮಾ ಬುಧ್ಯಾ ಸಮೇತ್ಯಾರ್ಥಾ ಮನೋಯುಙ್ಕ್ತೇ ವಿವಕ್ಷಯಾ |
ಮನಃ ಕಾಯಾಗ್ನಿಮಾಹಂತಿ ಸಪ್ರೇರಯತಿ ಮಾರುತಂ ||

ಎಂಬ ಶ್ಲೋಕದ ವ್ಯಾಖ್ಯಾನದ—

"ಶಬ್ದಪ್ರಯೋಗೇಚ್ಛಯೋತ್ಪನ್ನ ಯತ್ನಾಭಿಹತಾಗ್ನಿನಾ ನಾಭಿಪ್ರದೇಶಾತ್ಪ್ರೇರಿತೋ ವಾಯುಃ ವೇಗಾನ್ಮೂರ್ಧಪರ್ಯನ್ತಂ ಗತ್ವಾ ಪ್ರತಿನಿವೃತ್ತೌ ವಕ್ತ್ರಂ ಪ್ರಾಪ್ಯ ಉಕ್ತ ಯತ್ನ ಸಹಾಯೇನ ತತ್ತತ್ ಸ್ಥಾನೇಷು ಜಿಹ್ವಾಗ್ರಾದಿ ಸ್ಪರ್ಶ ಪೂರ್ವಕಂ ತತ್ತತ್ ಸ್ಥಾನಾನ್ಯಾಹತ್ಯ ವರ್ಣಾನಭಿವ್ಯನಕ್ತಿ."

ಎಂಬ ವಿವರಣೆಯ ಸಾರಾಭಿಪ್ರಾಯವುಳ್ಳ ಶಬ್ದೋತ್ಪತ್ತಿ ಕ್ರಮವನ್ನೂ, ಶ್ರೀಮನ್ನಿಗ ಮಾಂತ ಮಹಾದೇಶಿಕಾಚಾರ್ಯ ಪ್ರಣೀತವಾದ ನ್ಯಾಯಸಿದ್ಧಾಂಜನದ—

ವಾ॥ ಸ್ವಯೂಥ್ಯ ಮತಭೇದೇನ ದ್ರವ್ಯತ್ವಮದ್ರವ್ಯತ್ವಂ ಚ ಶಬ್ದಸ್ಯ॥

ಎಂಬ ಪ್ರಮಾಣ ವಾಕ್ಯದ ಸಾರಾಭಿಪ್ರಾಯದ ವೈಯಾಕರಣಿಗಳ ಶಬ್ದ ದ್ರವ್ಯತ್ವ ವನ್ನೂ ಈ ಮೇಲಿನ ಸೂತ್ರದಲ್ಲಿ ನಿರೂಪಿಸಿರುವ ಕೇಶವನು ಹೇಗೆ ಜೈನನಾದಾನು?

ಶಬ್ದಕ್ಕೆ ದ್ರವ್ಯತ್ವವನ್ನು "ಯಸ್ಯ ವೇದಾಶ್ಶರೀರಂ" ಎಂಬ ಶ್ರುತಿಯೇ ಹೇಳು ತ್ತಿರುವುದು. ನನ್ನ ವಂಶದ ಮೂಲ ಪುರುಷರಾದ ಶ್ರೀಮತ್ ರಂಗರಾಮಾನುಜ ಸಂಯಮೀಂದ್ರ ಪ್ರಣೀತವಾದ 'ಪ್ರತಿತಂತ್ರಪ್ರಕ್ರಿಯಾ' ಎಂಬ ಗ್ರಂಥದಲ್ಲಿ, "ಕ್ವಚಿತ್ ದೃಢತರ ಶಬ್ದ ಸಂಘಟ್ಟನೇನ ಭಿತ್ತಿ ಪಾತಾದಿ ದರ್ಶನಾತ್ ಧ್ವನ್ಯಾತ್ಮಕ ಶಬ್ದಸ್ಯ ವಾ ದ್ರವ್ಯತ್ವಮಾಕರಣೀಯಂ" ಎಂದು ಪ್ರತಿಪಾದಿಸಲ್ಪಟ್ಟಿರುವುದು.

ಭಟ್ಟೋಜೀ ದೀಕ್ಷಿತರು ಶಬ್ದಕೌಸ್ತುಭವೆಂಬ ಶಬ್ದಶಾಸ್ತ್ರದಲ್ಲಿ ಸ್ಫೋಟ ಸ್ವರೂಪ ವ್ಯುತ್ಪಾದನ ಪ್ರಕರಣದ ೬ನೆಯ ಪುಟದಿಂದ ೧೨ನೆಯ ಪುಟದ ವರೆಗೆ ಶಬ್ದಸ್ಫೋಟಕ್ಕೆ ಅವಿದ್ಯಾ ಬ್ರಹ್ಮಸ್ವರೂಪ ನಿರೂಪಣ ಮುಖೇನ ಶಬ್ದಕ್ಕೆ ದ್ರವ್ಯತ್ವ ವನ್ನು ಸಾಧಿಸಿರುತ್ತಾರೆ.

ಭರ್ತೃಹರಿಯ ವಾಕ್ಯಪದೀಯದಲ್ಲೂ ಹೀಗೆಯೇ ಉಕ್ತವಾಗಿದೆ. ಒಟ್ಟಿನಲ್ಲಿ, ವೈಯ್ಯಾಕರಣರು ಶಬ್ದಕ್ಕೆ ದ್ರವ್ಯತ್ವವನ್ನೊಪ್ಪಿರುತ್ತಾರೆ; ನೈಯಾಯಿಕರೂ ವಿಶಿಷ್ಟಾ ದ್ವೈತಿಗಳೂ ಒಪ್ಪುವುದಿಲ್ಲ; ಶಬ್ದವನ್ನು ಗುಣವೆನ್ನುತ್ತಾರೆ.

ಪೂರ್ವ ಮೀಮಾಂಸಕರೂ, ಕುಮಾರಿಲಾದಿಗಳೂ ಶಬ್ದಕ್ಕೆ ದ್ರವ್ಯತ್ವವನ್ನೊಪ್ಪು ವರು. ಇವರೆಲ್ಲ ಜೈನರಲ್ಲವಷ್ಟೆ! ಇಷ್ಟರಿಂದ, ಕೇಶವನನ್ನು ನಾವೇಕೆ ಜೈನನನ್ನು ಮಾಡಿ ಕುಳ್ಳಿರಿಸಬೇಕು? ಶಬ್ದವು ವಾಯವೀಯ, ಅವಾಯವೀಯ ಎಂಬಿವೇ ಮೊದಲಾದ ಭೇದವುಳ್ಳುದು ಎಂಬ ಪಕ್ಷವೂ ನಮ್ಮಗಳಲ್ಲುಂಟು. ಅಲ್ಲದೆ, ವೇದವೇ ಶಬ್ದಾತ್ಮಕಗಳಾದ ವರ್ಣಗಳಿಗೆ ಶುಕ್ಲಾದಿ ವರ್ಣಗಳನ್ನೂ ಹೇಳುತ್ತದೆ.

ಶ್ರೀಮದ್ವೇದಾಂತಾಚಾರ್ಯಕೃತವಾದ 'ನ್ಯಾಯಸಿದ್ಧಾಂಜನ'ದ (೧೪೩ನೆಯ ಪುಟದಲ್ಲಿ)—

ತಥಾ ತತ್ತದಕ್ಷರಾಣಾಂ ಸಿತ ರಕ್ತ ಪೀತ ಕೃಷ್ಣಾದಯೋ ರೂಪ ವಿಶೇಷಾಶ್ಛಾಭಿಧೀಯಂತೇ ಛಂದೋಭಿಃ—ಏಕಸ್ಯೈವಾಕ್ಷರಸ್ಯ ವಿನಿಯೋಗ ಭೇದೇನ ಮಂತ್ರ ಭೇದೇನ ರೂಪಭೇದಃ ಪ್ರಕೀರ್ತ್ಯತೇ॥

ಎಂದು ನಿರೂಪಿಸಲ್ಪಟ್ಟಿರುವುದು. 'ಪ್ರಣವಾದಿ ಭೂತವಾದ ವಿಷ್ಣು ವಾಚಕವಾದ ಅಕಾರದಿಂದಲೇ ಸರ್ವ ವರ್ಣಗಳೂ ಹುಟ್ಟಿದುವು' ಎಂಬ ಸಿದ್ಧಾಂತವಿರುವುದರಿಂದಲೂ, ವಿಷ್ಣುವು ಸತ್ವ ಗುಣಮಯನಾದುದರಿಂದಲೂ, ವಿಷ್ಣು ವಾಚಕವಾದ ಅಕಾರವೂ ಶುದ್ಧ ಸತ್ವವೇ ಆಗಿರುವುದು. 'ಕಾರಣ ಗುಣವನ್ನಾಶ್ರಯಿಸಿ ಸರ್ವ ವರ್ಣಗಳೂ ಶುದ್ಧ ಶ್ವೇತವೆಂದು ಹೇಳಲ್ಪಡುವ ಶ್ವೇತ ವರ್ಣವುಳ್ಳವುಗಳಾಗಿಯೇ ಇರುವುವು' ಎಂಬುದು ನಮ್ಮ ಸಿದ್ಧಾಂತಿಗಳ ಪಕ್ಷವು; ಮತ್ತು ವಿನಿಯೋಗ ಕ್ರಮದಿಂದ ವರ್ಣಾಂತರಗಳನ್ನೂ ಹೊಂದುವುದರಲ್ಲಿ ಅಭ್ಯಂತರವಿಲ್ಲ.

ಶ್ರೀಮದಷ್ಟಾಕ್ಷರ ಮಹಾ ಮಂತ್ರ ಜಪವನ್ನು ಮಾಡತಕ್ಕವರು, "ಶುಕ್ಲೋ ವರ್ಣಃ" ಎಂಬುದರಲ್ಲಿ ಯೋಜನೆ ಮಾಡಿ ಈ ಅರ್ಥವನ್ನು ರೂಢಿಯಿಂದಲೂ ತಿಳಿಯ ಬಹುದಾಗಿದೆ. ಒಟ್ಟಿನಲ್ಲಿ, ಸೂತ್ರಾರ್ಥವು ಜೈನರಿಗಾಗಿ ವಿಾಸಲಾದುದಲ್ಲವೆಂದು ಎಲ್ಲರೂ ಧಾರಾಳವಾಗಿ ಒಪ್ಪಬಹುದು. ನಮ್ಮಲ್ಲೇ ಶಬ್ದಕ್ಕೆ ದ್ರವ್ಯತ್ವಾದ್ರವ್ಯತ್ವ ಪಕ್ಷವಿದ್ದಂತೆ ಜೈನರದೂ ದ್ರವ್ಯತ್ವ ಪಕ್ಷದಲ್ಲಿ ಸೇರಿರುವುದು ಮಾತ್ರ ವಾಸ್ತವಿಕ ವಾದುದು. ಆದುದರಿಂದ, "ಅನುಕೂಲ ಪವನಸಿಂ" ಮೊದಲಾದ ಸೂತ್ರವು ವೈದಿಕ ಮತ ತಚ್ಛಾಸ್ತ್ರಗಳ ವಿವರಣಾನುಗುಣವಾಗಿರುತ್ತದೆಂದರೆ ತಪ್ಪಲ್ಲ. ಇದರ ಒತ್ತಾಸೆಗೆ—

೩. ಕಂ॥ ವ್ಯಾಕರಣದಿಂದೆ ಪದಮಾ।
ವ್ಯಾಕರಣದ ಪದದಿನರ್ಥಮರ್ಥದೆ ತತ್ತ್ವಾ॥
ಲೋಕಂ ತತ್ತ್ವಾಲೋಕದಿ।
ನಾಕಾಂಕ್ಷಿಪ ಮುಕ್ತಿಯಕ್ಕುಮದೆ ಬುಧರ್ಗೆ ಫಲಂ॥

ಈ ಸೂತ್ರದ ಮೂಲವಾದರೂ ಯಾವುದು? ಅದ್ವೈತಿ ಶಿರೋರತ್ನವೆನಿಸಿದ ವೈಯಾಕರಣಾಚಾರ್ಯ ಶ್ರೀಭರ್ತೃಹರಿಯ 'ವಾಕ್ಯಪದೀಯ'ವೆಂಬ ಗ್ರಂಥದ ಪ್ರಥಮ ಕಾಂಡದ ೭ನೆಯ ಪುಟದ ೧೩–೧೪ನೆಯ ಕಾರಿಕೆಗಳಾದ—

ಶ್ಲೋ॥ ಅರ್ಥಪ್ರವೃತ್ತಿ ತತ್ತ್ವಾನಾಂ ಶಬ್ದಾ ಏವ ನಿಬಂಧನಂ।
ತತ್ತ್ವಾವಬೋಧ ಶಬ್ದಾನಾಂ ನಾಸ್ತಿ ವ್ಯಾಕರಣಾದೃತೇ॥ ೧೩॥
ತದ್ವಾರಮಪವರ್ಗಸ್ಯ ವಾಙ್ಮಲಾನಾಂ ಚಿಕಿತ್ಸಿತಂ।
ಪವಿತ್ರಂ ಸರ್ವ ವಿದ್ಯಾನಾಂ ಅಧಿವಿದ್ಯಂ ಪ್ರಕಾಶತೇ॥ ೧೪॥

ಎಂಬುದೇ ಆಗಿರುವುದು.

೪. ಕೇಶವನು ಜೈನನಾಗಿದ್ದರೂ, ವ್ಯಾಕರಣ ಶಾಸ್ತ್ರವು ಮತ ವಿಷಯವಲ್ಲ ವಾದುದರಿಂದ ವೈದಿಕ ಮತೀಯರ ಶಾಸ್ತ್ರಾಧಾರಗಳನ್ನೇಕೆ ತಾನು ತೆಗೆದುಕೊಂಡು ಹೇಳಿರಬಾರದು?

ಇದು ಒಳ್ಳೆಯ ಪ್ರಶ್ನೆ. ಈಗಿನ ಕೆಲವು ಲೌಕಿಕೋದ್ಯೋಗಿಗಳ ಪಕ್ಷಪಾತ ವ್ಯವಹಾರದ ನಿಯಮಾನುಸರಣದಂತೆ, 'ಕೇಶವನು ಜೈನನೆಂಬುದಕ್ಕೆ ಈ ಸೂತ್ರಾ ಧಾರ ಬೇಕು, ವೈದಿಕನೆಂಬುದಕ್ಕೆ ಈ ಸೂತ್ರಾಧಾರ ಬೇಡ' ಎನ್ನುವುದು ನ್ಯಾಯ ವಿರೋಧವು. ಒಂದು ವೇಳೆ ಈತನು ವಿಷಯ ಗೌರವದಿಂದ ವೈದಿಕ ಶಾಸ್ತ್ರ ವಿಷಯ ಸ್ವೀಕಾರ ಮಾಡಿರುತ್ತಾನೆಂದೇ ಒಪ್ಪೋಣ. ತೊಂದರೆಯೇನು? ಈತನು ತನ್ನ ಗ್ರಂಥದ ಮೂಲದಲ್ಲಿಯೇ ತನಗೆ ವೇದದಲ್ಲಿ ಬಹಳ ಗೌರವಾಸಕ್ತಿಗಳನ್ನು ತೋರಿಸಿ ಕೊಳ್ಳುವನಲ್ಲ! ಏಕೆ?—

ಕಂ॥ ವೇದ ಸಮನಾಗಿ ಭೀಮನಿ।
ನಾದುದು ಸಂಸ್ಕೃತದ ಧಾತುವಾ ತೆಜದಿಂದಂ॥
ಯಾದವ ಕಟಕಾಚಾರ್ಯನಿ।
ನಾದುದು ಕರ್ಣಾಟ ಧಾತು ಕವಿಕೇಶವನಿಂ॥

ಶಬ್ದಮಣಿದರ್ಪಣದ ೬ನೆಯ ಸಂಧಿ ಧಾತು ಪ್ರಕರಣದ ಈ ೧ನೆಯ ಪದ್ಯದಲ್ಲಿ, ಕೇಶವನ ವೇದಗೌರವವೂ ಆಸಕ್ತಿಯೂ ನಿರತಿಶಯವಾದುವೆಂದು ತೋರಿ ಬರಲಾರದೆ ?

ಉಪಮಾ ಭೂತವಾದ ಭೀಮ ಕೃತ ಸಂಸ್ಕೃತ ಧಾತುವಿಗೂ, ಯಾದವ ಕಟಕಾಚಾರ್ಯ ಕೇಶವ ಕೃತ ಕರ್ಣಾಟ ಧಾತುವಿಗೂ, ವೇದ ಸಮತ್ವವು ಸಾಮಾನ್ಯ ಧರ್ಮವಾಗಿರುವುದನ್ನು ವಿದ್ವನ್ಮಹಾಶಯರು ನೋಡಬಹುದಾಗಿದೆ. ಉಪಮಾನಕ್ಕಾಗಿ ಹೇಳಿಕೊಂಡ ವಿಷಯವು ಗೌಣವಾದುದರಿಂದಲೂ, ಇಲ್ಲಿ ಕೇಶವನು ಸಾಕ್ಷಾತ್ತಾಗಿ ತನಗೆ ವೇದವು ಅನ್ವಯಿಸಿರುವಂತೆ ಹೇಳಿಕೊಳ್ಳಲಿಲ್ಲವಾದುದರಿಂದಲೂ, ಇಷ್ಟು ಮಾತ್ರದಿಂದ ಈತನನ್ನು ವೇದ ಪ್ರಾಮಾಣ್ಯವನ್ನೊಪ್ಪಿದವನೆಂದು ಹೇಳುವುದಕ್ಕಾಗುವುದಿಲ್ಲ. ತನಗೇ ವೇದ ವಿಷಯವು ಸಾಕ್ಷಾತ್ತಾಗಿ ಅನ್ವಯಿಸುವ ಮೂಲ ಪ್ರಮಾಣಗಳಿದ್ದರೆ ಕೇಶವನು ವೈದಿಕ ಮತದವನೆಂದು ಹೇಳಬಹುದಾಗಿದ್ದಿತು ; ಅಲ್ಲವೆ? ಹಾಗೂ ಇರುವುದು. ಇದರ ಹಿಂದಿನ ಪದ್ಯ, ಎಂದರೆ ಆಖ್ಯಾತ ಪ್ರಕರಣದ ಪರಿಸಮಾಪ್ತಿ ಪದ್ಯ ೨೧೭ನೆಯದರಲ್ಲಿ—

೫. ವೃ ॥ ಕವಿತಾ ಪ್ರೌಢಿಯೊಳಬ್ಜಸಂಭವನೆ ಕರ್ತಾರಂ ಕ್ರಿಯಾ ಕೌಶಲಂ ।
ಸ್ತವನೀಯಂ ತದಧೀನವಾದಖಿಳ ಶಾಸ್ತ್ರಾಮ್ನಾಯಮುಂ ಕೂಡೆ ಬ ॥
ಲ್ಲವರಿಲ್ಲೆನ್ನದಿರೊರ್ವನಿಂದಭಿನವ ಬ್ರಹ್ಮಂ ಗಡೆಂಬಂತೆ ತೋ ।
ಱುವನಾತ್ಮೀಯ ವಚೋ ವಿಚಿತ್ರತರ ವಿದ್ಯಾವೇಶವಂ ಕೇಶವಂ ॥

ಎಂದು ಹೇಳಿಕೊಂಡು ತಾನೇ ಅಖಿಳ ಶಾಸ್ತ್ರಾಮ್ನಾಯಮುಂ ಬಲ್ಲ ಅಭಿನವಬ್ರಹ್ಮನೂ ಆಗಿರುತ್ತಾನಂತೆ! ಈಗ ಈತನನ್ನು ವೈದಿಕ ಮತದವನೆಂದು ಹೇಳುವುದಕ್ಕೆ ಅಡ್ಡಿಯುಂಟೋ? ಅಡ್ಡಿಯುಂಟು. ಜೈನರು ತಮ್ಮ ಆಗಮುವನ್ನೇಕೆ ವೇದ ಆಮ್ನಾಯವೆಂದು ಹೇಳಿಕೊಂಡಿರಬಾರದು ?

೬. ಹಾಗೆ ಜೈನ ಮತ ಸಿದ್ಧಾಂತಿಗಳೂ, ಸ್ವಾಭಾವಿಕ ಜೈನ ಮತ ಸಂಪ್ರದಾಯಸ್ಥರೂ ಒಪ್ಪುವುದಿಲ್ಲ. ಎಲ್ಲಾದರೂ ವೈದಿಕ ಮತದಿಂದ ಜೈನ ಮತಕ್ಕೆ ಕಾರಣಾಂತರಗಳಿಂದ ನುಣಚಿಕೊಂಡು ಪೂರ್ವ ವಾಸನೆಯನ್ನು ಮರೆಯದಿದ್ದವರು ಮಾತ್ರ ಆಗಮುವನ್ನೇ ಶ್ರುತಿ, ವೇದದ ಆಮ್ನಾಯಗಳೆಂದು ಹೇಳಿಕೊಳ್ಳಬಹುದು ; ಅಥವಾ, ವಾದಕ್ಕಾಗಿ ಹೊಸದಾಗಿ ಎನ್ನಬಹುದು. ಪ್ರಾಚೀನರೂ, ಸ್ಯಾದ್ವಾದ ವಿದ್ಯಾ ಧುರೀಣರೂ, ಜೈನ ಮತ ಸಿದ್ಧಾಂತಿಗಳೂ ಆದ ಶ್ರೀ ಪ್ರಭಾ ಚಂದ್ರಾಚಾರ್ಯರಿಂದ ವಿರಚಿತವಾದ 'ಪ್ರಮೇಯ ಕಮಲ ಮಾರ್ತಾಂಡ'ದಲ್ಲಿ, ಅರಮನೆಯ ಸರಸ್ವತೀ ಭಂಡಾರದ ಈ ಪುಸ್ತಕದ ೧೧೨ನೆಯ ಪುಟದ—

ಅಥೇದಾನೀಮವಸರ ಪ್ರಾಪ್ತಸ್ಯಾಗಮ ಪ್ರಾಮಾಣ್ಯಸ್ಯ ಕಾರಣ ಸ್ವರೂಪೇ ಪ್ರರೂಪಯನ್ನಾಪ್ತೇತ್ಯಾದ್ಯಾಹ॥

ಎಂದು ಮೊದಲಾದ ಶಾಸ್ತ್ರ ಪಙ್ಕ್ತಿಗಳನ್ನು ಅರ್ಥ ಮಾಡಿಕೊಂಡರೆ, ಜೈನರು ತಮ್ಮ ಆಗಮಕ್ಕೆ ವೇದವೆಂದು ಹೇಗೂ ಹೇಳಿಕೊಳ್ಳುವುದಿಲ್ಲವೆಂಬುದು ಸ್ಪಷ್ಟವಾಗುವುದು.

ಇಲ್ಲಿ ಆಗಮವು ಆಪ್ತ ವಾಕ್ಯವಾದುದರಿಂದ ಇದಕ್ಕೆ ಪ್ರಾಮಾಣ್ಯವುಂಟು. ವೇದವು ಮೊತ್ತಮೊದಲು ಅಪೌರುಷೇಯವೆಂಬುವ ಸಂದರ್ಭದಿಂದಲೇ ಪ್ರಮಾಣವಾಗುವುದಿಲ್ಲ, ಅಪೌರುಷೇಯತ್ವವೂ ಸಿದ್ಧಿಸುವುದಿಲ್ಲ—ಎಂಬಿವೇ ಮೊದಲಾದುವು ಚರ್ಚಿತಗಳಾಗಿ, ಆಗಮಕ್ಕೂ ವೇದಕ್ಕೂ ಚೆನ್ನಾಗಿ ಭೇದ ಹೇಳಲ್ಪಟ್ಟಿದೆ.

ಈ ಕಾರಣದಿಂದ, ಮೇಲೆ ಕಂಡ ವೇದವೂ ಆಮ್ನಾಯವೂ ವೈದಿಕ ಮತದ ಶ್ರುತಿಯೇ ಆಗಿರುತ್ತದೆ. ಈ ಶ್ರುತಿಯಲ್ಲೇ ಕೇಶವನಿಗೆ ಗೌರವವೂ ತತ್ಸಂಬಂಧವಾದ ಪಾಂಡಿತ್ಯವೂ ಇದ್ದಿತೆಂಬುದು ವ್ಯಕ್ತವಾಗಿ, ಈಗಲಾದರೂ ಸಹೃದಯರಿಗೆ ವೇದ್ಯವಾಗ ಬಹುದೆಂದು ನಂಬುತ್ತೇನೆ. 'ಇದು ಒಳ್ಳೆಯ ನಂಬಿಸುವಾಟ. ಕೇಶವನು ಉದಾಹರಣೆಯಲ್ಲಿ ಎಷ್ಟೊಂದು ಜೈನ ಸಂಪ್ರದಾಯದ ಉದಾಹರಣೆಗಳನ್ನು ಕೊಟ್ಟಿಲ್ಲ? ವೈದಿಕ ಮತದವನಾದರೆ ಹಾಗೆ ಮಾಡುತ್ತಿದ್ದನೋ? ವೈದಿಕ ಮತದ ಉದಾಹರಣೆಗಳನ್ನು ಅಷ್ಟಾಗಿ ಕೊಟ್ಟಿರುತ್ತಾನೆಯೋ?' ಎಂಬ ಪ್ರಶ್ನೆಯು ಹುಟ್ಟಿದರೆ ಏನು ಮಾಡಲಾದೀತು? ಆ ವಿಚಾರವನ್ನೂ ಪರಿಶೀಲಿಸಿ ನೋಡೋಣ.

೭. "ಪ್ರಯೋಗ ಶರಣಾ ವೈಯಾಕರಣಾಃ" ಎನ್ನುವಂತೆ, ಮೊದಲು ಪೂರ್ವ ಕವಿಗಳೂ ಲೋಕದ ವಿದ್ವಜ್ಜನರೂ ಶಾಸ್ತ್ರಾದಿಗಳೂ ರೂಢಿಗೆ ತಂದಿರುವ ಭಾಷೆಗೆ ಒಂದು ನಿಯಮ ರೂಪವಾದ ರೀತಿಯಲ್ಲಿ ವ್ಯಾಕರಣ ಶಾಸ್ತ್ರವು ಹುಟ್ಟಿರುವುದೇ ಹೊರತು, ಮೊತ್ತಮೊದಲು ವ್ಯಾಕರಣಶಾಸ್ತ್ರ ಹುಟ್ಟಿ ಆಮೇಲೆ ಅದರಂತೆ ಮಾತ ನಾಡುವುದೂ, ಕವಿತ್ವ ಶಾಸ್ತ್ರ ರಚನೆಗಳೂ ಆಗಿರುವುದಿಲ್ಲ. ಆದರೆ, ವ್ಯಾಕರಣ ಶಾಸ್ತ್ರ ವನ್ನು ಮೊದಲು ಮುಂದಿಟ್ಟುಕೊಂಡು ಮಾತನಾಡುವುದನ್ನೂ, ಗ್ರಂಥ ಬರೆಯುವು ದನ್ನೂ ಕಲಿಯತಕ್ಕವರು ವಿದ್ವತ್ಪೀಠಾ ರುರುಕ್ಷುಗಳಾದ ಆಧುನಿಕರೇ ಎಂಬುದನ್ನು ನಾವು ವಿವರಿಸಬೇಕಾಗಿಲ್ಲ. ಯಾವ ಮತದವರೇ ಆಗಲಿ, ಕರ್ಣಾಟ ಭಾಷೆಯನ್ನಾಡ ತಕ್ಕ, ಕನ್ನಡದ ಕಾವ್ಯವನ್ನೂ ಶಾಸ್ತ್ರವನ್ನೂ ಬರೆದಿರತಕ್ಕ ಮಹನೀಯರ ಉದಾ ಹರಣೆಗಳು ಈ ವ್ಯಾಕರಣ ಶಾಸ್ತ್ರಕ್ಕೆ ಅತ್ಯಾವಶ್ಯಕ.

ಆದುದರಿಂದ, ಎಲ್ಲ ಮತದವರ, ಎಲ್ಲಾ ಬಗೆಯ ಉದಾಹರಣೆಗಳನ್ನೂ ಕವಿ ಕೇಶವನು ಸ್ವಕೃತವಾದ ಈ ಶಬ್ದಮಣಿದರ್ಪಣದಲ್ಲಿ ಉದಾಹರಿಸಿರುವುದು ನ್ಯಾಯ ವಾದುದಾಗಿರುವುದು. ಇಷ್ಟು ಮಾತ್ರದಿಂದ, ಈ ಉದಾಹರಣೆಗಳು ಕೇಶವನ ಮತ ನಿರ್ಣಯಕ್ಕೆ ಅಸಾಧಾರಣ ಗಮಕಗಳಾಗಿ ಪರಿಣಮಿಸಲಾರವು. ಒಂದು ವೇಳೆ ಉದಾಹರಣೆಗಳೂ ಕೇಶವನ ಮತ ನಿರ್ಣಯ ಸಾಧನವಾಗುತ್ತವೆಂಬ ಭ್ರಾಂತ ಪಕ್ಷ ದಲ್ಲಿ, ನಾವೂ ಒಬ್ಬರೆಂದು ತಿಳಿಯೋಣ. ಆಗಲೂ, ವೈದಿಕೋದಾಹರಣೆಯೇ ಹೆಚ್ಚು. ನಾನು ನಿರೂಪಿಸಿರುವ 'ಗದಾಯುದ್ಧ'ದ ಯಾಜ್ಞಿಕ ಮತದ, ರನ್ನನ ಉದಾಹರಣೆ ಗಳನ್ನು ಹೇರಳವಾಗಿ ತುಂಬಿರುವನು; ತೀರದ ಕಡೆ ಗಜಗ, ಗುಣನಂದಿ ಮೊದಲಾದ ವರ ಜೈನ ಪ್ರಯೋಗಗಳನ್ನು, ಮೇಲಿನ ಅಭಿಪ್ರಾಯದಂತೆ ಕೊಟ್ಟೇ ಇರುತ್ತಾನೆ. ಜೈನರು, "ನಮೋಸ್ತುಗಳೆರ್ಪಂದದಿನಿರ್ದಂ, ನಮೋಸ್ತುಗಳೆಂದು ಸವಣರ್ಗೆ ಪೆಸರಾಯ್ತು, ಮಾಡಲ್ಪಡುಗೆಮಗೆ ಸಂಪದಂ ಜಿನಪತಿಯಿಂ, ಶ್ರೀಮತ್ಸಮಂತಭದ್ರ

ಸ್ವಾಮಿಗಳ......ಪದಂಗಳೀಗೆ ಶಾಶ್ವತ ಪದವಂ"—ಇತ್ಯಾದಿಗಳನ್ನು ತೋರಿಸಿ ಕೇಶವನು ತಮ್ಮವನೆಂದರೆ, ವೈದಿಕರು, "ಅಹಿಂಸಾ ಪರಮೋ ಧರ್ಮ ಎಂಬುದಂ ಈ ತತ್ಸವಿತುರ್ವರೇಣ್ಯರಬಿದರ್, ತತ್ಸವಿತುರ್ವರೇಣ್ಯರೆಂದು ಶ್ರೌತರ್, ವೇದವಿದಂ ಕಾಲತ್ರಯ ವೇದಿ, ಬಹು ಶ್ರುತನಥರ್ವ ಕುಶಲಂ, ಚಕ್ರಾಪಿ ಶಾರ್ಙ ಸಮೇತಂ, ವೇದಂಗಳ್ ಪ್ರಮಾಣಂ"—ಇತ್ಯಾದಿಗಳಿಂದ ಕೇಶವನು ವೈದಿಕ ಮತದವನೆಂದು ಹೇಳುತ್ತಾರೆ. ಒಳಹೊಕ್ಕು ನೋಡಿದರೆ, ವೇದ ಮತದ ಪ್ರಯೋಗಗಳ ಉದಾಹರಣೆ ಗಳೇ ಹೇರಳವಾಗಿವೆ. ಆದುದರಿಂದ, ಈ ಉದಾಹರಣೆಗಳು ಈ ವೈದಿಕ ಜೈನ ಮತಗಳ ಅನ್ಯೋನ್ಯತೆಯನ್ನೂ, ಶಾಸ್ತ್ರ ನ್ಯಾಯ ಭಾಷಾ ನ್ಯಾಯವನ್ನೂ ತೋರ್ಪಡಿ ಸುತ್ತವೆಯೇ ಹೊರತು ಕೇಶವನ ಮತ ನಿರ್ಣಯಕ್ಕೆ ಸಹಾಯ ಮಾಡುವ ಪ್ರಮಾಣಕ್ಕೆ ಒದಗಲಾರವೆಂಬುದೇ ನನ್ನ ಅಭಿಪ್ರಾಯವಾಗಿರುವುದು. ಆದರೂ, ಕೆಲವರು ಆ ಮಾರ್ಗವನ್ನೂ ಒಪ್ಪಬಹುದಾದುದರಿಂದ, ಆ ರೀತಿಯಲ್ಲೂ ಕೇಶವನು ಜೈನನೋ ವೈದಿಕ ಮತದವನೋ ಎಂಬ ರೀತಿ ಉಯ್ಯಾಲೆಯ ತೂಗಾಟವನ್ನಾಡುತ್ತ, ವೈದಿಕ ಮತದ ಕಡೆಗೆ ತೂಗಿ ನಿಲ್ಲುತ್ತಾನೆ. ಕೇಶವನು ತನ್ನ ವೇದ ವೇತೃತ್ವವನ್ನೂ, ಮಂತ್ರಜ್ಞತೆಯನ್ನೂ ಪ್ರಕಟಿಸುವ ಉದಾಹರಣೆಯನ್ನು 'ಸಂಧಿ ವಿಕಲ್ಪ' ಪ್ರಕರಣ ದಲ್ಲಿ,—"ನವೋ ನವೋ ಭವತಿ ಜಾಯಮಾನೋಹ್ನಾಂ" ಎಂಬ ಸಂಸ್ಕೃತ ವಾಕ್ಯಾಂತಮಂ "ಜಾಯಮಾನೋಹ್ನ"ಮೆಂದುಪಸಂಹರಿಸಲಾಗದು ಎಂದೂ ಏತತ್ಸಜಾತೀಯವಾದ ಉದಾಹರಣಗಳನ್ನು ಅಲ್ಲಲ್ಲೇ ಕೊಟ್ಟರೆ, ಭಟ್ಟಾಕಳಂಕನು ವಾಕ್ಯವೇಷ್ಟನ ಪರ್ಯಾಯವಾದ ಅನುಕರಣ ಪ್ರಕರಣಾದಿಗಳಲ್ಲಿ, "ನವಣೋ ಅಮೋಹವಯರ್ಣೆ" ಎಂಬೀ ರೀತಿಯಾದ ಉದಾಹರಣಗಳನ್ನು ಹೇರಳವಾಗಿ ಕೊಡು ತ್ತಾನೆ. ಇದನ್ನು ಮತ ಶೀಲವೆಂದು ನಂಬಿದರೆ ಆಗದೆ? ಇವರಿವರು ಈ ಮತದವರೇ ಎಂಬ ನಿರ್ಣಯಕ್ಕೆ ಉದಾಹರಣಾದಿಗಳೂ ಸಹಕಾರಿಗಳೇ ಆಗುತ್ತವೆಂದು ಹೇಳುವವ ರನ್ನು ನಾವೇಕೆ ನಿರೋಧಿಸಬೇಕು? ಆ ರೀತಿಯೇ ಶೀಲದಿಂದಲೂ ಕೇಶವನು ವೈದಿಕನು. ಪ್ರಸ್ತಾವ ಕ್ರಮದಿಂದ ಶಬ್ದಾನುಶಾಸನದ ಭಟ್ಟಾಕಳಂಕನನ್ನೂ ಅವನ ವ್ಯಾಖ್ಯಾನ ಗ್ರಂಥ ರಚನಾ ಕ್ರಮವನ್ನೂ ನೋಡಿದರೆ, ಆತನನ್ನು ಹೇಗೆ ಜೈನನೆಂದು ಗುರುತಿಸಬಹುದೋ ಹಾಗೆ ಕೇಶವನನ್ನು ಗುರುತಿಸಲು ಸಾಧ್ಯವಿಲ್ಲ.

**೮.** ಭಟ್ಟಾಕಳಂಕನು, "ಅವಧಾವಪಾಯೇ" ಇತ್ಯಾದಿ ಸೂತ್ರ ವ್ಯಾಖ್ಯಾನ ದಲ್ಲಿ ತನ್ನ ಸರ್ವಜ್ಞತೆಯಿಂದಲೋ, ಮತ ಶೀಲದಿಂದಲೋ ಪಾಣಿನ್ಯಾಚಾರ್ಯರ ಮೇಲೂ ಕೈಮಾಡುವನು. ಕೇಶವನು ಗ್ರಂಥಾರಂಭದಿಂದ ಕೊನೆಯ ವರೆಗೂ ಪಾಣಿನಿ, ತದನುಯಾಯಿಗಳ ಮತಕ್ಕೆ ಎಳ್ಳಷ್ಟೂ ಅಗೌರವವನ್ನು ತರದೆ ಅದನ್ನೇ ಪರಿಪಾಲಿಸು ತ್ತಿರುವನು. ಇದು ಆಯಾ ಮತಸ್ಥರ ಒಂದು ತೆರದ ಶೀಲವೆಂದರೆ ಒಪ್ಪುವಂತಿದೆ. ಅಂತು, ಭಟ್ಟಾಕಳಂಕನು ಜೈನ ಶೀಲವನ್ನೂ, ಕೇಶವನು ವೈದಿಕ ಶೀಲವನ್ನೂ ಹೊರ ಗೆಡಹುತ್ತಿರುವುದಕ್ಕೆ ಅನೇಕ ಸಾಕ್ಷಿಗಳುಂಟು. ಪ್ರಕೃತ ವಿಚಾರವದಲ್ಲವಾದುದರಿಂದ ಇಲ್ಲಿಗೆ ಅದು ಸಾಕೆಂದೇ ಬಿಡುತ್ತೇನೆ.

೯. ಮೇಲೆ ವಿವರಿಸಿದ ಮತ್ತು ಚರ್ಚಿಸಿದ ರೀತಿಯಲ್ಲಿ ಕೇಶವನು ಜೈನನಲ್ಲದೆ ಹೋಗಲಿ; ಜೈನ ಕವಿಗಳ ಸಂಪ್ರದಾಯದಂತೆ, ಆಶ್ವಾಸಾಂತ, ಅಥವಾ ಸಂಧ್ಯಂತಗಳಲ್ಲಾದರೂ ತಾನು ಜೈನನೆಂಬ ಸೂಚನೆಯನ್ನೇ ಕೊಟ್ಟಿಲ್ಲ.—

> ಇದು ಸಮಸ್ತ ಶಾಬ್ದಿಕ ಜನ ಮನೋಜನಿತ ಶಬ್ದ ಸಂದೇಹ ಶಲ್ಯ ಚಾರು ಚುಂಬ ಕಾಯಮಾನಾನೂನ ಕರ್ಣಾಟಕ ಲಕ್ಷಣ ಶಿಕ್ಷಣಾಚಾರ್ಯ ಸುಕವಿ ಕೇಶಿರಾಜ ವಿರಚಿತ ಮಪ್ಪ ಶಬ್ದಮಣಿದರ್ಪಣದೊಳ್

ಎಂದು ಮಾತ್ರ ಇರುತ್ತದೆ. ಇದರಿಂದಲೂ ಆತನು ಜೈನನೆಂದು ತಿಳಿಯಲು ಸಾಧ್ಯವಾಗಲಿಲ್ಲ. ಈತನು ಬರೆದಿರುವ ಇತರ ಗ್ರಂಥಗಳಿಂದಲಾದರೂ ತಿಳಿದು ಬರಲಾದೀತೇ? ವಿಚಾರಿಸಬೇಕು.—

೧೦. ಕಂ|| ದೊರೆವಡೆದ ಚೋಳಪಾಲಕ ಚ।
ರಿತಂ ಶ್ರೀ ಚಿತ್ರಮಾಲೆಯಂತೆ ಸುಭದ್ರಾ ||
ಹರಣಂ ಪ್ರಬೋಧ ಚಂದ್ರಂ ।
ಕಿರಾತಮಿವು ಕೇಶಿರಾಜ ಕವಿ ರಚಿತಂಗಳ್ ||

ಈ ಗ್ರಂಥಗಳು ಒಂದಾದರೂ ಸಿಕ್ಕಿಲ್ಲ. ಡಾಕ್ಟರ್ ವೆಂಕಟಸುಬ್ಬಯ್ಯ, ಎಂ.ಎ., ಪಿಹೆಚ್.ಡಿ., ಎಲ್ಎಲ್.ಬಿ. ಅವರು ಇವೆಲ್ಲ ವೈದಿಕಮತ ಗ್ರಂಥಗಳೆಂದೇ ಅಭಿಪ್ರಾಯಪಟ್ಟು, ಅವರ "ಕೆಲವು ಕವಿಗಳ ಜೀವನ ಕಾಲ ವಿಚಾರ" ಎಂಬ ಪುಸ್ತಕದಲ್ಲಿ ಬರೆದಿರುತ್ತಾರೆ. ಹಾಗೆ ಒಪ್ಪಿದರೂ, 'ಚೋಳಪಾಲಕ ಚರಿತ'ವೆಂಬುದು ಮಾತ್ರ ಚೋಳರಾಜ ಪ್ರತಿಷ್ಠಾಪಕರಾದ ಹೊಯ್ಸಳ ರಾಜರ, ಎಂದರೆ ಈ ದೊರೆಯಾದ ೨ನೆಯ ಹೊಯ್ಸಳ ನರಸಿಂಹದೇವನ ಚರಿತ್ರವಾಗಿರಬೇಕೆಂದು ಯೋಚಿಸುತ್ತೇನೆ. ಇದು ಗೋಡೆಯಿಲ್ಲದ ಚಿತ್ರ ಲೇಖನ ಪ್ರಸ್ತಾಪವಾದುದರಿಂದ, ಪ್ರಕೃತಕ್ಕೆ ಪ್ರಯೋಜನ ಕಾರಿಯಲ್ಲ. ಆದರೂ, ಕೇಶವನು ವೈದಿಕ ಮತದವನೆಂಬ ಊಹೆಯು ಡಾಕ್ಟರವರಿಗೆ ಬಂದಿರುತ್ತದೆಂದು ಮಾತ್ರ ಇಲ್ಲಿ ನಾವು ತಿಳಿಯಬಹುದು. ಆದುದರಿಂದ, ನಾನೊಬ್ಬನೇ ಈತನು ಜೈನನಲ್ಲವೆಂದು ಹೇಳುತ್ತೇನೆಂಬುದಾಗಿ ಮಹಾ ಜನಗಳು ಭಾವಿಸಬಾರದಾಗಿ ಬೇಡಿಕೊಳ್ಳುತ್ತೇನೆ. ಡಾಕ್ಟರವರು ತಮ್ಮ ಈ ಪುಸ್ತಕದ ೧೪೭ನೆಯ ಪುಟದಲ್ಲಿ, "ಮಲ್ಲಿಕಾರ್ಜುನನು ಸ್ಮಾರ್ತ ಬ್ರಾಹ್ಮಣನಾದುದರಿಂದ, ಆತನ ಮಗನಾದ ಕೇಶಿ ರಾಜನೂ, ಇವನ ಮಾತಾಮಹನಾದ ಸುಮನೋಬಾಣನೂ ಸ್ಮಾರ್ತ ಬ್ರಾಹ್ಮಣ ರಾಗಿದ್ದರೂ ಇದ್ದಿರಬಹುದು" ಎಂದು ಬರೆಯುತ್ತಾರೆ. ಹಿಂದೆ ವಿವರಿಸಿದ ಕಾರಣ ಗಳಿಂದ, ಕೇಶವನು ಜೈನನಲ್ಲವೆಂಬುದಕ್ಕೆ ಇವರೊಬ್ಬರೇ ಸಾಕ್ಷಿಯಲ್ಲ; ನಮ್ಮ ಕರ್ಣಾಟಕ ಭಾಷಾ ಭೀಷ್ಮಾಚಾರ್ಯರಾದ ರಾವ್ ಬಹಾದ್ದೂರ್, ಪ್ರಾಕ್ತನ ವಿಮರ್ಶ ವಿಚಕ್ಷಣ ಆರ್. ನರಸಿಂಹಾಚಾರ್ಯರ 'ಕವಿ ಚರಿತೆ'ಯ ಲೇಖನ ಸರಣಿಯೂ ಇದಕ್ಕೆ ಸಾಕ್ಷಿಯನ್ನು ಹೇಳುತ್ತಿದೆ; ಪ್ರಕೃತ ಬಂದಾಗ ವಿಚಾರ ಮಾಡೋಣ.

೧೧. ಈತನು ಈ ಮತದವನೆಂದು ಹೇಳುವುದಕ್ಕೆ ಲೋಕದಲ್ಲಿ ಅವನ ಗ್ರಂಥವೇ ಆಧಾರವೇ? ಆತನ ತಂದೆ ಮೊದಲಾದ ಹಿರಿಯರು ಯಾವ ಮತದವರೆಂದರೆ ಅದೇ

ಮತವೇ ಮಗನ ಮತವೂ ಆಗಬಹುದಲ್ಲವೆ! ಆ ಕಾಲವು ಹಾಗೆ ಹೇಳುವ ಕಾಲವಲ್ಲ. ಆ ಕಾಲ, ಈ ಕಾಲವೇನು? ಈ ಕಾಲವೂ ಅಷ್ಟೇ. ಶಬ್ದಮಣಿದರ್ಪಣದಲ್ಲಿ ಕೇಶಿರಾಜನು, ಸ್ವವಿಷಯ ಪ್ರಶಂಸೆಯಲ್ಲಿ, ತಾನಿಂಥವನೆಂಬುದಕ್ಕೆ ಇಷ್ಟು ಹೇಳಿರುವನು:—

ಕಂ ॥ ಕವಿ ಸುಮನೋಬಾಣನ ಯಾ ।
ದವ ಕಟಕಾಚಾರ್ಯನೆಸೆವ ದೌಹಿತ್ರನೆ ನಾಂ ॥
ಕವಿ ಕೇಶವನೆಂ ಯೋಗಿ ।
ಪ್ರವರ ಚಿದಾನಂದ ಮಲ್ಲಿಕಾರ್ಜುನ ಸುತನೆಂ ॥

ಕೇಶಿರಾಜನ ಮಾತಾಮಹನೆಂದು ಈ ಪದ್ಯದಲ್ಲಿ ಕರೆಯಲ್ಪಟ್ಟ ಕವಿ ಸುಮನೋಬಾಣನು ಜನ್ನನ ತಂದೆಯೆಂದೂ ಜೈನನೆಂದೂ ಕವಿಚರಿತೆಕಾರರಾದ ಶ್ರೀಮದಾಚಾರ್ಯರ ಅಭಿಪ್ರಾಯವು. ಇದು ಸರಿಯಾದ ಅಭಿಪ್ರಾಯವಲ್ಲವೆಂದೂ, ಜನ್ನನ ತಂದೆ ಶಂಕರನೆಂಬವನೆಂದೂ, ಸುಮನೋಬಾಣನು ಜನ್ನನ ವಿದ್ಯಾಗುರುವೆಂದೂ ಡಾಕ್ಟರವರು ಅವರ ವಿಮರ್ಶ ಗ್ರಂಥದಲ್ಲಿ (೧೨೪ರಿಂದ ೧೪೯ ಪುಟಗಳವರೆಗೆ) ಚೆನ್ನಾಗಿ ಚರ್ಚಿಸಿ ಸಿದ್ಧಾಂತಪಡಿಸಿರುವರು; ಅದನ್ನು ಖಂಡಿಸಿ ಬರೆದ ಕವಿಚರಿತೆಕಾರರ ಲೇಖನವನ್ನು ಪುನಃ ಖಂಡಿಸಿ, "ಆಕ್ಷೇಪಗಳಿಗೆ ಪ್ರತ್ಯುಕ್ತಿ" ಎಂಬ ಲೇಖನದಿಂದಲೂ ಋಜೂಕರಿಸಿರುವರು. ಡಾಕ್ಟರವರ ಈ ನಿರ್ಣಯವು ಒಪ್ಪತಕ್ಕುದಾಗಿದೆ: ಹೇಗೆಂದರೆ, ಜನ್ನನು 'ಅನಂತನಾಥ ಪುರಾಣ'ದಲ್ಲಿ—

ಶಂಕರ ಪುತ್ರಂ ಕವಿ ಕಮ್ಮೆ ವಂಶನಧಿಕಜ್ಞಂ ಕಾಶ್ಯಪ,

ಶಂಕರ ಶುದ್ಧಾಂತಾಂಗನಾ ಗಂಗೆಗೆ
ನುದಯಂಗೆಯ್ದನೊ ಕಾಶ್ಯಪೋದ್ಭವಕರಂ ಸಾಹಿತ್ಯ ರತ್ನಾಕರಂ ॥

ಎಂದು ಹೇಳಿರುವುದರಿಂದ ತಂದೆ ಶಂಕರನೆಂದೂ, ತಾಯಿ ಗಂಗೆಯೆಂದೂ ಸ್ಪಷ್ಟವಾಯ್ತು; ಆದರೆ 'ಯಶೋಧರ ಚರಿತ್ರೆ'ಯಲ್ಲಿ—

ಭಾಳಲೋಚನಂ ಕವಿ ಸುಮನೋಬಾಣನ ಮಗನೆಂದಖಿಳ ಕ್ಷೋಣಿಗೆ ಪೆಸರಾಯ್ತು ।

ಎಂದು ಹೇಳಿಕೊಂಡಿರುವನು. ಇದರ ಅರ್ಥವು, "ಮಗನೆಂದಖಿಳ ಕ್ಷೋಣಿಗೆ ಪೆಸರಾಯ್ತು" ಎನ್ನುವುದರಿಂದಲೇ ಸುಮನೋಬಾಣನು ತಂದೆಗೆ ಸಮಾನನಾದವನು ಎಂದಾಗುವುದರಿಂದ, ಅವನ ಮಗನೆಂದು ನನ್ನನ್ನು ಕರೆಯುವಷ್ಟು ಹೆಸರುವಾಸಿಯಾದ ಗೌರವವಿದೆ ಎಂಬ ಭಾವವು ತೋರಿ ಬರುವುದು. ಈ ಅರ್ಥಕ್ಕನುಗುಣವಾಗಿ 'ಅನಂತನಾಥ ಪುರಾಣ'ದಲ್ಲಿ—

ವೃ ॥ ..................ಜನ್ನಗುಪಾಧ್ಯಾಯನಿಂ ।
ದು ನೃಸಿಂಹ ಕ್ಷಿತಿಪಾಲನಲ್ಲಿ ಕಟಕೋಪಾಧ್ಯಾಯನಾರೆಂಬ ಸೂ ।
ಕ್ತಿ ನವೀನೋಜ್ವಳ ಬಾಣನಪ್ಪ ಸುಮನೋಬಾಣಂ ಕವಿ ಶ್ರೇಷ್ಠರೊಳ್ ॥

ಎಂಬ ಪದ್ಯದಲ್ಲಿ, ತನ್ನ ಪಿತೃತುಲ್ಯನಾದ ಕವಿ ಸುಮನೋಬಾಣನನ್ನು ತನ್ನ ಉಪಾಧ್ಯಾಯನೆಂದು ಒಪ್ಪಿರುತ್ತಾನೆ; ಎಂದರೆ, ಜನ್ನನಾದ ನನಗೆ ಸುಮನೋಬಾಣನು

ಉಪಾಧ್ಯಾಯನೆಂದೂ, ಶಂಕರನೇ ತಂದೆಯೆಂದೂ ಒಟ್ಟಿನಲ್ಲಿ ಹೇಳಿದಂತಾಯ್ತು. ಈ ಅರ್ಥವೇ ಪೂರ್ವೋತ್ತರ ಸಂದರ್ಭಗಳಿಗೆ ವಿರೋಧವಿಲ್ಲದ ಸಿದ್ಧಾಂತವಾಗಿ ನಿಲ್ಲುತ್ತದೆ. ಈ ಕಾರಣದಿಂದ, ಜೈನ ಬ್ರಾಹ್ಮಣನಾದ ಜನ್ನನಿಗೆ ವೈದಿಕ ಬ್ರಾಹ್ಮಣನಾದ ಸುಮನೋ ಬಾಣನು ಗುರುವಾದ ಮಾತ್ರಕ್ಕೆ ಆತನೂ ಜೈನನಾಗಬೇಕಾದ ಪ್ರಕೃತವೇನೂ ಇಲ್ಲ. ಇಷ್ಟೇನು! ಜನ್ನನ ತಂದೆಯೇ ಜೈನನಲ್ಲ. ಜನ್ನನು ಜೈನನಾಗಿರುತ್ತಾನೆಂದು ಡಾಕ್ಟರವರು ಹೇಳುವಂತೆ, ನಾನೂ ತಿಳಿದಿರುತ್ತೇನೆ. ಕೇಶವನು ಬ್ರಾಹ್ಮಣನೆಂದು ಡಾಕ್ಟರವರು ನಿರ್ಧರ ಮಾಡಿರುತ್ತಾರಾದುದರಿಂದ, ಅದನ್ನು ಬಿಟ್ಟು, ಈತನ ತಂದೆಯಾದ ಮಲ್ಲಿಕಾರ್ಜುನನ ವಿಷಯವಾಗಿ ಸ್ವಲ್ಪ ಚರ್ಚಿಸಿ, ಆತನ ಮತವಾವು ದೆಂಬುದನ್ನು ತಿಳಿಯಬೇಕಾಗಿರುತ್ತದೆ. ಈ ವಿಷಯವನ್ನು ಮುಂದೆ ಸ್ವಲ್ಪದರಲ್ಲೇ ಕೇಶವನ ವಂಶವೃಕ್ಷ ವಿವರಣದಲ್ಲಿ ನಾನು, ಶಿಲಾ ಶಾಸನದ ಪ್ರಾಮಾಣ್ಯದಂತೆ, ನಿರೂ ಪಿಸುವುದರಿಂದ, ಡಾಕ್ಟರವರ ಹೇಳಿಕೆಯನ್ನೇ ಸದ್ಯದಲ್ಲಿ ನಂಬಬೇಕೆಂದೂ, ಮುಂದಿನ ವಿವಿಕ್ತಾಂಶಕ್ಕೆ ಮುಂದುವರಿಯಲು ಅನುಮತಿಯನ್ನು ಕೊಡಬೇಕೆಂದೂ ಮಹಾ ಶಯರನ್ನು ಬೇಡುವೆನು.

**೧೨.** ಕೇಶಿರಾಜನಿಗೆ ಕೇಶಿ ಎಂದೂ, ಈತನ ತಂದೆಗೆ ಮಲ್ಲಿ, ಅಥವಾ ಮಲ್ಲಿ ಕಾರ್ಜುನನೆಂದೂ ಹೆಸರಿರುವುದರಿಂದ, ಜಗದೇಕಮಲ್ಲ (ಜಯಸಿಂಹ)ನ ಕಾಲದ ೧೦೨೮ರ ಕುಡತನಿಯ ಶಾಸನದ ಕೇಶಿ ದಂಡನಾಯಕನಿಗೂ ಈತನಿಗೂ ಏನಾದರೂ ವಂಶ ಪಾರಂ ಪರ್ಯದ ಸಂಬಂಧವುಂಟೋ ಏನೊ ಎಂಬ ಊಹೆಯು ತಲೆದೋರುತ್ತಿದೆ. ಅದಕ್ಕಾಗಿ ಈ ವಿಷಯವನ್ನು ಸಂಗ್ರಹವಾಗಿ ತಮ್ಮಗಳ ಮುಂದೆ ವಿವರಿಸಬೇಕಾಗಿದೆ. ಮಲ್ಲಿಕಾ ರ್ಜುನನ ಮಗನಾದ ಈ ಕೇಶಿ ದಂಡನಾಯಕನಿಗೆ ತಾತನಾದವನು ದೇಕರಸನು. ಜಗದೇಕಮಲ್ಲನು ತನ್ನ ಹೆಸರನ್ನು ವಿಭಾಗ ಮಾಡಿ ತಂದೆಗೆ ದೇಕನೆಂದೂ, ಮಗನಿಗೆ ಮಲ್ಲನೆಂದೂ ಬಿರುದು ಕೊಟ್ಟ ಕಾರಣ, ತಂದೆ ಮಕ್ಕಳಿಗೆ ದೇಕ, ಮಲ್ಲ ಎಂಬ ನಾಮಗಳು ಪ್ರಸಿದ್ಧಿಗೆ ಬಂದಂತಿವೆ. ಇವರೆಲ್ಲ ವಂಶ ಪಾರಂಪರ್ಯವಾಗಿ ವಿಷ್ಣು ಭಕ್ತ ರೆಂದು ಶಾಸನ ಪದ್ಯವು ಹೇಳುತ್ತದೆ: ಶಾಂಡಿಲ್ಯ ಗೋತ್ರದವರು, ವಿಪ್ರ ವಂಶ ಚೂಡಾ ರತ್ನರು. ಕಮಳೋದರ ಪಾದ ಪಯೋಜ ಭೃಂಗನಾದ ಈ ದಂಡನಾಯಕ ಕೇಶಿಗೆ ಪಂಡಿತ ಪಾರಿಜಾತನೆಂಬ ಬಿರುದುಂಟು. ಇಷ್ಟರಿಂದ, ಈತನು ಬ್ರಾಹ್ಮಣನೆಂಬುದಕ್ಕೆ ವೈದಿಕ ಮತದವರ ಪದ್ಧತಿಯ, "ನಮಸ್ತುಂಗ ಶಿರಶ್ಚುಂಬಿ" ಎಂಬಿವೇ ಮೊದಲಾದ ಶಿವ ನಮಸ್ಕಾರವೂ, ಅನಂತರ, ವರಾಹದೇವ ನಮಸ್ಕಾರ ಶ್ಲೋಕ, ಬಳಿಕ ಕುಮಾರ ಸ್ವಾಮಿ ಮಂಗಳ, ಕೊನೆಗೆ ವಿಘ್ನೇಶ್ವರನ ನಮಸ್ಕಾರ ಪದ್ಯಗಳೂ ಶಿಲಾ ಶಾಸನ ದಲ್ಲಿರುವುವು. ಈ ಶಾಸನ ಪ್ರತಿಯು ಅರ್ಥಶಾಸ್ತ್ರ ವಿಶಾರದ ಮಹಾಮಹೋಪಾ ಧ್ಯಾಯ ಡಾಕ್ಟರ್ ಆರ್. ಶಾಮಶಾಸ್ತ್ರಿಗಳು, ಎಂ.ಎ., ಪಿಹೆಚ್.ಡಿ., ಎಂ.ಆರ್. ಎ.ಎಸ್. ಅವರ ದಯೆಯಿಂದ ನನಗೆ ಲಬ್ಧವಾಗಿ, ವಿಷಯ ಗ್ರಹಣಕ್ಕೆ ಅವಕಾಶ ವಾಯ್ತು. ಇದಕ್ಕಾಗಿ ಅವರನ್ನು ಕೃತಜ್ಞತೆಯೊಡನೆ ವಂದಿಸುತ್ತೇನೆ. ಈ ಕೇಶಿ ದಂಡನಾಯಕನೇ 'ಗದಾ ಯುದ್ಧ'ದ ಯಾಜ್ಞಿಕ ವೈದಿಕ ಬ್ರಾಹ್ಮಣನಾದ ರನ್ನನ

ಗ್ರಂಥ ಶೋಧಕನು. ಈತನ ವಂಶದ ಹೆಸರು, ಮದ್ರಾಸ್ ಸರ್ಕಾರದ ೪೬ನೆಯ ನಂಬರು ಶಾಸನದಲ್ಲಿ, "ಅಂಭೋರುಹಗರ್ಭವಂಶ" ಎಂದೂ ಹೇಳಿರುತ್ತದೆ. ಗದಾಯುದ್ಧದಲ್ಲೂ—

> ಕಂ ॥ ವನರುಹಭವನೆನಿಸಿದ ದಂ ।
> ಡನಾಯಕಂ ಕೇಶಿ ತಿರ್ದೆ ಪೇೞ್ದಿಂ ಕವಿ ರ ॥
> ನ್ನನ ಪೇೞ್ದ ಕೃತಿ ಯಶಶ್ರೀ ।
> ವನಿತೆಗಲಂಕೃತಿಯೆನಿಪ್ಪುದೊಂದಚ್ಚರಿಯೇ ॥

ಈ ರೀತಿ ಹೇಳಲ್ಪಟ್ಟಿರುವುದು. ಅಲ್ಲದೆ, ಕಾಲಗಣನೆಯಿಂದಲೂ ಶಾಸನದ ಕೇಶಿಯೇ ಗದಾಯುದ್ಧವನ್ನು ತಿದ್ದಿದ ಕೇಶಿಯಾಗಿರುತ್ತಾನೆಂದು ನಾವು ಅರಿಯಬಹುದು.—




ಯಾಜ್ಞಿಕ ರನ್ನನು ಗದಾಯುದ್ಧವನ್ನು ತಿದ್ದಬೇಕಾದರೆ, ಸತ್ಯಾಶ್ರಯನ ಕೊನೆಯ ಯುದ್ಧವು ಪರ್ಯವಸಾನ ಹೊಂದಿದ ೧೦೦೮ರಲ್ಲಿ, ಈ ಕೇಶಿಗೆ ೨೫ ವರ್ಷಗಳ ವಯಸ್ಸಾಗಿರಬಹುದೆಂದು ಊಹಿಸಲವಕಾಶವಿರುತ್ತದೆ. ಇಲ್ಲಿಂದ ಶಾಸನ ಕಾಲಕ್ಕೆ ೨೧ ವರ್ಷವಾಗುತ್ತದೆ. ಆದುದರಿಂದ, ಈ ಕಾಲದಲ್ಲಿ ಕೇಶಿ ದಂಡನಾಯಕನಿಗೆ ೪೦–೪೧ ವಯಸ್ಸಾಗುವುದು. ಇದೇ ಕಾಲದಲ್ಲಿ ಈ ಶಾಸನವನ್ನು ಬರೆಯಿಸಿದ ಈತನ ತಂದೆ ಮಲ್ಲಿಯೂ ಇದ್ದಕಾರಣ, ಈ ವಯಸ್ಸನ್ನು ಸುಮಾರಿನಲ್ಲಿ ಒಪ್ಪಲವಕಾಶವಿರುವುದು. ಈತನ ಈ ವಯಸ್ಸು, ಮತ, ಅಧಿಕಾರಗಳೆಲ್ಲದರಲ್ಲೂ ಹೋಲಿಕೆಗೊಂಡುದರಿಂದಲೇ, ಯುವಕ ರನ್ನನು ಈ ಕೇಶಿಯಿಂದ ತನ್ನ ಗ್ರಂಥವನ್ನು ತಿದ್ದಿಸುವುದಕ್ಕೂ, ಗ್ರಂಥ ರಚನೆಯಲ್ಲಿ ಅಸಹಾಯನೂ, ವೃದ್ಧನೂ ಆದ ಅಜಿತರನ್ನನು ಈತನ ಪರಿಚಯವನ್ನು ತನ್ನ ಪುರಾಣದಲ್ಲಿ ಹೇಳಿಕೊಳ್ಳಲಿಲ್ಲವೆಂದು ನನ್ನ ಅಭಿಪ್ರಾಯವು. ಇದು ಅಷ್ಟು ಅಪ್ರಕೃತವಲ್ಲವಾದುದರಿಂದ ಇಲ್ಲಿ ಪ್ರಸ್ತಾಪಿಸಿರುತ್ತೇನೆ. ಇಂತಹ ಕಾಲ, ದೇಶ ನಿರೂಪಣದಿಂದ, ಕುಡತನಿಯ ಶಾಸನದ ಕೇಶಿಯೂ, ಗದಾಯುದ್ಧದ ಕೇಶಿಯೂ ಒಂದೇ ಎಂದು ಹೇಳುವುದಕ್ಕೆ ಯಾವ ಸಂದೇಹವೂ ಹುಟ್ಟುವಂತಿಲ್ಲ. ಮ॥ ರಾ॥ ತಿ. ತಾತಾಚಾರ್ಯ ಶರ್ಮರವರೂ 'ಪ್ರಬುದ್ಧ ಕರ್ಣಾಟಕ'ದಲ್ಲಿ, ಇದೇ ಶಾಸನದ ಕೆಲವು ಆಧಾರಗಳಿಂದ,

"ಸದ್ಯಕ್ಕೆ ಗದಾಯುದ್ಧವನ್ನು ತಿದ್ದಿದ ದಂಡನಾಯಕ ಕೇಶಿಯು ಕುಡುತನಿಯ ಶಾಸನದ ಪಂಡಿತಪಾರಿಜಾತ ಕೇಶಿ ದಂಡನಾಯಕನೆಂದು ಗುರುತಿಸಿದ್ದಾಯ್ತು"

ಎಂದು ಬರೆದಿರುವರು. ಈ ರೀತಿಯ ಈ ಕೇಶಿ ದಂಡನಾಯಕನ ತಂದೆಯ ಹೆಸರು, ಈತನ ಹೆಸರನ್ನು ನೋಡಿದರೂ, ಅಧಿಕಾರ ಪಾಂಡಿತ್ಯಗಳನ್ನು ನೋಡಿದರೂ, ಶಬ್ದಮಣಿ ದರ್ಪಣದ ಕೇಶಿರಾಜನಿಗೆ ಇವನು ಪೂರ್ವಿಕನಾದ ಅದೇ ವಂಶೀಯನಾಗಿರಬಹುದು ಎಂದೂ ತೋರುತ್ತದೆ. ಈ ಕುಡತನಿಯ ೧೦೭೮ನೆಯ ಇಸವಿಯ ೪೬ನೆಯ ಶಾಸನದಿಂದ, ಕರ್ಣಾಟಕದಲ್ಲಿ ವೈದಿಕ ಬ್ರಾಹ್ಮಣರ ರಾಜ್ಯವಿದ್ದಿತೆಂಬ ಊಹೆಗೂ, ಬ್ರಾಹ್ಮಣರ ರಾಜ ವಂಶವಿದ್ದಿತೆಂಬ ಸ್ಪಷ್ಟತೆಗೂ ಅವಕಾಶವಿರುವುದು. ಡಾಕ್ಟರ್ ಶಾಮಶಾಸ್ತ್ರಿಗಳವರ ಪರಾಮರ್ಶೆಗೆ ಬಂದಿರುವ ಅನೇಕ ಶಾಸನಗಳನ್ನು ನೋಡಿದರೆ, ವೈದಿಕ ಬ್ರಾಹ್ಮಣರು ಅನೇಕ ರಾಜ್ಯ ಪ್ರತಿಷ್ಠಾಪಕರಾಗಿ ಮಹಾವಿದ್ವಾಂಸರೂ ಕವಿಗಳೂ ಆಗಿರುತ್ತ, ಒಂದು ಕೈಯಲ್ಲಿ ಶಸ್ತ್ರವನ್ನೂ ಒಂದು ಕೈಯಲ್ಲಿ ಶಾಸ್ತ್ರ ವನ್ನೂ, ಅಥವಾ ದರ್ಭೆಯನ್ನೂ ಹಿಡಿದು ರಾಜ್ಯಭಾರಮಾಡುತ್ತ ಸ್ವತಂತ್ರ ರಾಜ ರಾಗಿರುತ್ತಿದ್ದರೆಂಬುದಕ್ಕೆ ಅನೇಕ ಉದಾಹರಣೆಗಳು ಸಿಕ್ಕಿವೆ. ಇದರ ಚರಿತ್ರ ಪ್ರಪಂಚವೇ ಬೇರೊಂದು ರೀತಿಯಲ್ಲಿ ಜಗತ್ಪ್ರಸಿದ್ಧವಾಗಬಹುದೆಂದು ತೋರುತ್ತದೆ.

**೧೩.** ಪ್ರಕೃತದಲ್ಲಿ, ಕೇಶವನಿಗೆ ಕೇಶಿರಾಜನೆಂದು ಹೆಸರು ಬಂದಿರುವುದಕ್ಕೆ ಕಾರಣವನ್ನು ತಿಳಿಸಲು ಈ ಪ್ರಸ್ತಾಪವನ್ನು ಮಾಡಲಾಯ್ತು. ರಾಜರಾಗಿದ್ದ ಇಂತಹ ಬ್ರಾಹ್ಮಣರೂ, ರಾಜರಾಗಿಲ್ಲದಿದ್ದ ಅನೇಕ ಬ್ರಾಹ್ಮಣರೂ, ದ್ರೋಣಾಚಾರ್ಯರ ಕಾಲದಿಂದ ನಮ್ಮ ಕೆಲವು ಹಿಂದಿನ ತಲೆಯವರೆಗೆ, ದಂಡಾಧಿಕಾರಿಗಳು, ಅಥವಾ ಕಟಕಾಚಾರ್ಯರು ಆಗಿರಬಹುದೆಂಬ ನಿದರ್ಶನಕ್ಕೆ ಸಾಕಾಗಬಹುದಾದ ಶಾಸನ ಚರಿತ್ರವು ವಿಸ್ಮಯಾವಹವಾಗಿ ತೋರಿಬರುವುದು. ಈಗಿನ ನಮ್ಮ ಬ್ರಾಹ್ಮಣ್ಯದ ಪಾಡಿಗೂ, ಆ ಬ್ರಾಹ್ಮಣ್ಯದ ಸರ್ವತೋಭದ್ರವಾದ ಮೇಲ್ಮೆಗೂ ಸಂಬಂಧವೇ ತೋರಿಬರುವಂತಿಲ್ಲ. ಯಾಜ್ಞಿಕರಾಗಿ, ಕತ್ತಿಯನ್ನು ಕಂಡರೆ ಕೈ ಮುದುರಿಕೊಳ್ಳುವ ನಾವೆಲ್ಲಿ? ಶಸ್ತ್ರಪಾಣಿ ಗಳಾಗಿ, ರಾಜ್ಯ ಪ್ರತಿಷ್ಠಾಪಕರಾಗಿ, "ಶಾಪಾದಪಿ ಶರಾದಪಿ" ಎಂಬ ಪೂರ್ವಿಕ ವೀರ ಬ್ರಾಹ್ಮಣರೆಲ್ಲಿ? ಅಗೋ! ಅಂತಹ ಶೂರ ವೀರ ಧೀರರಾದ ಬ್ರಾಹ್ಮಣರಲ್ಲಿ ಕೇಶಿ ದಂಡ ನಾಯಕನು ಹೇಗೋ ಹಾಗೆಯೇ ಶಬ್ದಮಣಿದರ್ಪಣದ ಯಾದವ ಕಟಕಾಚಾರ್ಯನಾದ ಕೇಶಿರಾಜನೂ ಪ್ರಸಿದ್ಧನಾದವನು. ಸಂಶಯವೇಕೆ? ಈತನ ವಂಶ ವೃಕ್ಷವನ್ನು ಪರಾಂಬರಿಸಿ, ಈ ಶಾಸನಗಳೂ, ಇವುಗಳಲ್ಲಿ ಕಂಡ ವಂಶವೃಕ್ಷವೂ, ದರ್ಪಣದ ಕೇಶಿ ರಾಜನನ್ನೂ ಬ್ರಾಹ್ಮಣನೆಂದೇ ಹೇಳುತ್ತಿವೆ. ಕವಿಚರಿತೆಕಾರರಾದ ಶ್ರೀಮದಾಚಾರ್ಯ ರವರ ಮತ್ತು ಡಾಕ್ಟರ್ ವೆಂಕಟಸುಬ್ಬಯ್ಯನವರ ಜೈನ ಬ್ರಾಹ್ಮಣನೆಂಬ ವಾದ ವಿವಾದಗಳೂ ಬಗೆಹರಿಯಲೆಂದು ಈ ಸಂದರ್ಭದಲ್ಲಿ ನಾನು ಆಶಿಸುತ್ತೇನೆ.—


೧. ಹೊಯಿಸಳರ ವಿನಯಾದಿತ್ಯನ ಕಾಲದಲ್ಲಿ—
೨. ವಿಷ್ಣುವರ್ಧನನ ಕಾಲದಲ್ಲಿ—
(೧೧೦೧—೧೧೪೧)
೩. ನರಸಿಂಹ ಕ್ಷಿತಿಪಾಲಕನ ಕಾಲದಲ್ಲಿ—
(೧೧೩೬—೧೧೭೧)
೪. ವೀರಬಲ್ಲಾಳನ ಕಾಲದಲ್ಲಿ—
(೧೧೭೩—೧೨೨೦)
೫. ೨ನೆಯ ನರಸಿಂಹ ಬಲ್ಲಾಳನ ಕಾಲದಲ್ಲಿ—
(೧೨೨೦—೧೨೩೫)
೬. ವೀರಸೋಮೇಶ್ವರನ ಕಾಲದಲ್ಲಿ—
(೧೨೩೩—೧೨೫೪ (೬೫)
೧ ರಾಮ ದಂಡಾಧಿಪ
೨ ಶ್ರೀಧರ ದಂಡಾಧಿನಾಥ
೩ ಮಲ್ಲಿದೇವ ದಂಡಾಧಿಪ
ಧಾಮರಾಜ
ಸಚಿವೋತ್ತಮ
ಕೇಶವರಾಜ
ಮುಖ್ಯ ಸೇನಾಪತಿ
೪ ಮಾಧವಾಮಾತ್ಯ
(ಮಾದಿರಾಜ)
ಬೆಟ್ಟರಸ
ಶ್ರೀದಾಮ
ದಂಡೇಶ ಮಂತ್ರಿ
ಹರಿಹರದೇವ
ಮಾಧವ ಚಮೂವರ
ಆಚಣ ದಂಡನಾಥ
ದಾವರಸ
ಕೇಶವ
ಮಲ್ಲಪ
ಮಾರಮಯ್ಯ
ಕಂಜಲದೇವಿ
ಮಾಧವ
ಬೆಟ್ಟರಸ
ಧಾಮಣ ದಂಡನಾಥ
ಕೇಶವ ದೇವ
ಬೆಟ್ಟ ಚಮೂಪ

ಈ ವಂಶ ವೃಕ್ಷವನ್ನು ಚನ್ನರಾಯಪಟ್ಟಣದ ತಾಲ್ಲೂಕು ಬೆಳಗುಲಿಯ ಈಶ್ವರ ದೇವಸ್ಥಾನದ ಎಡ ಭಾಗದ ಗೋಡೆಗೆ ಸೇರಿದ ಕಲ್ಲಿನ (6′ 6″×2′ 6″) ೧೨೨ನೆಯ ಇಸವಿ ೨೪೪ನೆಯ ನಂಬರು ಶಾಸನದಿಂದ (ಹಾಸನ ಡಿಸ್ಟ್ರಿಕ್ಟು ಶಾಸನ, ೬೭೮ನೆಯ ಪುಟ) ತೆಗೆಯಲಾಗಿದೆ: ಶಕ ೧೧೭೪—ಕ್ರಿ.ಶ. ೧೨೫೨. ಈ ವಂಶವೃಕ್ಷದ ಕೊನೆಯ ಕೇಶವ ದೇವನಿಗೆ ಮೇಲಿನ ಹಾಸನದ ಶಾಸನವು ಕೇಶವ ದಂಡನಾಥ, ಕೇಶವ ಚಮೂಪ, ವೀರಬಲ್ಲಾಳನ ಮಂತ್ರಿ ಮಂಡನ ಶಿರೋಮಣಿ ಕೇಶವ ದಂಡನಾಥ, ಕೇಶಿರಾಜ—ಎಂಬ ಹೆಸರುಗಳಿಂದ ಗುರುತಿಸುತ್ತಿದೆ. ಶಬ್ದಮಣಿದರ್ಪಣವು ಕವಿ ಕೇಶವ, ಕೇಶಿರಾಜ, ಕೇಶವ, ಯಾದವ ಕಟಕಾಚಾರ್ಯ ಕವಿಕೇಶವ ಎಂದು ಹೇಳುತ್ತಿದೆ. ಇಲ್ಲಿ ಹೇಳುವ "ಯಾದವ ಕಟಕಾಚಾರ್ಯ" ಎಂಬುದರ ಯಾದವರು ಮೇಲೆ ಕಂಡ ವಂಶವೃಕ್ಷದ ವೀರಬಲ್ಲಾಳನೇ ಮೊದಲಾದವರಾಗಿರುತ್ತಾರೆ. ಇವರ ಕಟಕಾಚಾರ್ಯನೇ ಈತನೆಂಬುದನ್ನು ಕೇಶವನು ಶಾಸನದ ಕೇಶವನಾದರೆ ತಾನಾಗಿಯೇ ಸಿದ್ಧವಾಗುತ್ತದೆ. ಈತನ ತಂದೆ ಮಲ್ಲಪನೆಂದು ಶಾಸನವು ಹೇಳುತ್ತಿದೆ. ಕವಿಚರಿತೆಯು ಕೇಶಿರಾಜನ ತಂದೆಗೆ ಮಲ್ಲಪ, ಮಲ್ಲ, ಚಿದಾನಂದ ಮಲ್ಲಿಕಾರ್ಜುನ ಎಂಬ ಹೆಸರುಗಳೂ ಉಂಟೆಂದು ಒಪ್ಪುತ್ತದೆ. ಕೇಶವನು ಶಬ್ದಮಣಿದರ್ಪಣದಲ್ಲಿ, "ಯೋಗಿ ಪ್ರವರ ಚಿದಾನಂದ ಮಲ್ಲಿಕಾರ್ಜುನ ಸುತನೆಂ" ಎಂದು ಹೇಳಿರುತ್ತಾನೆ. ಆದುದರಿಂದ, ಮಲ್ಲಿಕಾರ್ಜುನನ ಹೆಸರು ಮಲ್ಲಪನೆಂದೊಪ್ಪುವ ಈ ಶಾಸನ, ಕವಿಚರಿತೆಗಳು, ಈ ಮಲ್ಲಪನು ಹೊಯ್ಸಳ ವೀರಬಲ್ಲಾಳ, ಇವನ ಮಕ್ಕಳು ೨ನೆಯ ನರಸಿಂಹಬಲ್ಲಾಳ, ವೀರಸೋಮೇಶ್ವರ—ಇವರ ಕಾಲದವನೆಂದೂ ಆಶ್ರಿತನೆಂದೂ ಒಪ್ಪಿರುವುವು. ಮಲ್ಲಿಕಾರ್ಜುನನು ತಾನು ರಚಿಸಿರುವ 'ಸೂಕ್ತಿ ಸುಧಾರ್ಣವ'ವನ್ನು ಹೊಯ್ಸಳ ವೀರಸೋಮೇಶ್ವರನ "ವಿನೋದಾಕರ್ಣನ ಕೌತುಕೋತ್ಪಾದಿತ"ವೆಂದು ಹೇಳಿಕೊಂಡಿರುವುದರಿಂದ, ಈತನು ಹೊಯ್ಸಳ ವೀರಸೋಮೇಶ್ವರನ ಆಶ್ರಿತನು, ಮತ್ತು ಆ ಕಾಲದವನು ಎಂಬುದಕ್ಕೆ ಅಡ್ಡಿಯಿಲ್ಲ. ಈ ಕಾರಣಗಳಿಂದ, ಶಾಸನದ ಮಲ್ಲಪನೇ ಕೇಶಿರಾಜನ ತಂದೆ ಮಲ್ಲಿ ಕಾರ್ಜುನನಾಗಿರಬೇಕೆಂಬುದಕ್ಕೆ ಅವಕಾಶವೇರ್ಪಟ್ಟಿತು. ಈ ಅವಕಾಶದಿಂದ, ಶಾಸನದ ಮಲ್ಲಪನೇ ಸೂಕ್ತಿಸುಧಾರ್ಣವದ ಮಲ್ಲಿಕಾರ್ಜುನನೆಂದೊಪ್ಪುವುದಾದರೆ, ಶಾಸನದ ಕೊನೆಯ ಕೇಶವನೇ ಶಬ್ದಮಣಿದರ್ಪಣದ ಕೇಶಿರಾಜನೆಂದೊಪ್ಪಲು ಅಡ್ಡಿ ಯಿಲ್ಲ. ದರ್ಪಣವು ಹೇಳುವ ಕೇಶಿರಾಜನ ಕಟಕಾಚಾರ್ಯತೆಯನ್ನೂ ಶಾಸನವು ಸ್ಪಷ್ಟಪಡಿಸುವುದೆಂದು ನಾವು ತಿಳಿಯಲಿಕ್ಕೂ ಒಂದು ಸಮಾಧಾನವುಂಟು ಎಂದು ಭಾವಿಸಿ, ಶಾಸನವು ಈ ವಂಶೀಯರ ಮತ್ತು ಕೇಶಿರಾಜನ ವಿಷಯವನ್ನು ಕುರಿತು ಏನು ಹೇಳುತ್ತದೆಂದು ವಿಚಾರಿಸಲು ತೊಡಗೋಣ. ಈ ಕೇಶಿರಾಜನ ವಿಷಯವಾಗಿ—

> ೧೪. ವೃ ॥ ಮಾಳವ ದಂಡನಾಥ ಗಜಕೇಸರಿ ಚೋಳ ಚಮೂಪ ಶೈಳದಂ ।
> ಭೋಳಿ ವರಾಳ ಸೈನ್ಯಪತಿ ಸಾಗರ ಬಾಡವ ತೀವ್ರ ವಹ್ನಿ ನೇ ॥
> ಪಾಳ ಬಳೇಶ ಕಂಜ ವನ ಕುಂಜರನೆಂಬುದು ಧಾತ್ರಿ ವೀರ ಬ ।
> ಲ್ಲಾಳನ ಮಂತ್ರಿ ಮಂಡನ ಶಿರೋಮಣಿ ಕೇಶವ ದಂಡನಾಥನಂ ॥

ಕಂ ॥ ಬಲ್ಲನೆರಡಿಲ್ಲದೀಯಲು ।
ಬ(ಲ್ಲಂ) ಪರವ. . . . ದ್ಯನೊಲ್ಲನಿಲ್ಲೆಂಬನಿತಂ ॥
ಕೆಲ್ಲಂ ಧುರದೊಳು ಮಱವುಗೆ ।
ಕೊಲ್ಲಂ ಕೇಶವ ಚಮೂಪತನೆಯೆಂ ಬಲ್ಲಂ ॥

ವೃ ॥ ಆಯುರ್ವೃದ್ಧಿಯನಬ್ಜಜಂ ಸಿರಿಯ ಪೆರ್ಚ್ಚಂ ಶ್ರೀವರಂ ಕೀರ್ತ್ತಿಯಂ ।
ಜ್ಯಾಯಂ ಶಂಕರನಾಗಳುಂ ಕುಡೆ ಯದು ಕ್ಷೋಣೀಶ ರಾಜ್ಯಕ್ಕೆ ತಾ ॥
ನಾಯುರ್ವ್ವೃದ್ಧಿಯನಾಗಳುಂ ಸಿರಿಯ ಪೆರ್ಚ್ಚಂ ಕೀರ್ತ್ತಿಯಂ ಪೊಯ್ಸಳಾ ।
ನ್ನಾಯಾಂಭೋಧಿ ಸುಧಾಂಶು ಕೇಶವ ಚಮೂಪಂ ಮಾಡುವಂ ಲೀಲೆಯಿಂ ॥

ಕಂ ॥ ಎನ್ದಾಯ್ತು ಪೊಯ್ಸಳಾನ್ವಯ ।
ಮಂದಾದುದು ಕೇಶಿರಾಜನನ್ವಯಮದುತಾ ॥
ನಿಂದಾಯ್ತು ನಿಂನೆಯಾಯ್ತೆಂ ।
ಬಂದದ ಪೊಸ ದಂಡನಾಥರೊಂದನ್ವಯಮೇ ॥

ಎಂದು ಹೇಳಿ—

ಕಂ ॥ ವಿನೆಯಾದಿತ್ಯನ ಶಚಿವಂ ।
ವಿನೂತ ಶೌರ್ಯ್ಯಾಬ್ಧಿ ರಾಮ ದಂಡಾಧಿಪನಾ ॥
ತನ ಪುತ್ರಂ ಶ್ರೀಧರ ದಂ ।
ಡನಾಥನೆಱಿಯಂಗನೃಪ ನೃಪನ ಮಂತ್ರಿಲಲಾಮಂ ॥

ಎಂಬಿವೇ ಮೊದಲಾದ ಕೆಲವು ಪದ್ಯಗಳಿವೆ. ಈ ಪದ್ಯಗಳಿಂದಲೇ ಮೇಲಿನ ಕೇಶವನ ವಂಶವೃಕ್ಷವನ್ನು ಬರೆದುದು. ಈ ಶಾಸನದ ಕಾಲ, ಶಕ ೧೧೩೧ (ಕ್ರಿ. ಶ. ೧೨೦೯).

ಅದೇ ದೇವಸ್ಥಾನದ ದಕ್ಷಿಣಬಾಗಿಲ ಬಲಭಾಗದ ಗೋಡೆಯ ಕಲ್ಲಿನ (6′×2′ 6″, ಸಂ. ೨೪೩)—

ಕಂ ॥ ಶ್ರೀ ವರನುಮಾವರಂ ವಾ ।
ಣೀ ವರನೆನೆ ನೆಗಟ್ದ ಮೂವರು ಕೇಶವಂ ಸೇ ॥
ನಾವರನಭೀಷ್ಟ ಸಿದ್ಧಿಯ ।
ನೀವರ್ವ್ವೆಳುಗಲಿಯೊಳಿರ್ದ್ದು ಸತತೋತ್ಸವದಿಂ ॥

"ಆ ಕೇಶಿರಾಜನ ಸೇನಾವಲ್ಲಭನ ಕುಲಸ್ವಾಮಿಗಳಪ್ಪ ಪೊಯ್ಸಳರನ್ವಯವ ದೆಂತೆನೆ" ಎಂದು ಮೊದಲಾಗಿ ಹೊಯ್ಸಳ ವಂಶವೃಕ್ಷವನ್ನು ಪ್ರಕಟಿಸುವ ಕೆಲವು ಪದ್ಯಗಳಿವೆ. ಈ ವಂಶದ ವಿವರಣೆಯು ವಿನಯಾದಿತ್ಯನಿಂದ ಹಿಡಿದು ೨ನೆಯ ನರಸಿಂಹ ಬಲ್ಲಾಳನ ವರೆಗಿರುತ್ತದೆ.

ಚನ್ನರಾಯಪಟ್ಟಣದ ತಾಲ್ಲೂಕು ಅದೇ ಬೆಳುಗಲಿಯ ಈಶ್ವರದೇವಸ್ಥಾನದ ಪೂರ್ವಭಾಗದ ೨೪೨ನೆಯ ನಂಬರು ಶಾಸನದಲ್ಲಿಯ (7′×3′) ಸಂಗ್ರಹೀತವಾದ ವಿಷಯಗಳು :—

"ಶ್ರೀಮತು ಪ್ರತಾಪ ಚಕ್ರವರ್ತ್ತಿ ಹೊಯ್ಸಳ ಶ್ರೀ ವೀರಬಲ್ಲಾಳ ದೇವರಸರ ಕೈಯ್ಯಲು ಶ್ರೀ ಮಹಾ ಪ್ರಧಾನಂ ಕೇಶಿರಾಜ ದಣ್ನಾಯಕರು ತಾವು ಮಾಡಿದ ಅಗ್ರಹಾರ ಕೇಶವಪುರವಾದ......ಬೆಳುಗಲಿಯಲು ತಾವು ಪ್ರತಿಷ್ಠೆ ಮಾಡಿದ ಶ್ರೀ ಕೇಶವೇಶ್ವರ ದೇವರ ಅಂಗಭೋಗ ರಂಗಭೋ......ಜೀರ್ಣೋದ್ಧಾರಕ್ಕೆಂದು"

ವೃ || ಜಯವಿಸ್ಫೂರ್ಜಿತದರ್ಪಂ ಹೊಯ್ಸಳ ನೃಪನ ಭುಜೋತ್ಖಾತ ಖಡ್ಗಕ್ಕೆ ಭೂಯೋ |
ದಯವಿಸ್ಫೂರ್ಜಿತದರ್ಪಂ ಬಾಂಧವ ಬುಧಜನ ಶಿಷ್ಟೇಷ್ಟ ವರ್ಗ್ಗಕ್ಕೆ ಪುಂಣ್ಯಾ ||
ಶ್ರಯವಿಸ್ಫೂರ್ಜಿತದರ್ಪಂ ಶ್ರೀ ಶ್ರುತಿ ವಿಹಿತ ಪುರಾಣೋಕ್ತಮಾರ್ಗ್ಗಕ್ಕುಮಾದೇ |
ವಿಯ ರಾಜ್ಯ ಶ್ರೀ ವಧೂಟೀ ಮಣಿಮಯ ಮುಕುರಂ ಕೇಶವಂ ಕೀರ್ತ್ತಿಕಾನ್ತಂ ||

ವೃ || ಪರ ನಾರೀ ದೂರನಂ ಶೂರನನಖಿಳ ಜನಾಧಾರನಂ ಸಾರನಂ ವಿ |
ಸ್ತರ ತೇಜೋದಿತ್ಯನಂ ನಿತ್ಯನನಮಳ ಗುಣಾಗಣ್ಯನಂ ಪುಂಣ್ಯನಂ ಸೌಂ ||
ದರ ರೂಪೋದ್ದಾಮನಂ ಕಾಮನನರಿನೃಪಹೃತು ಸೆಲ್ಲನಂ ಬಲ್ಲನಂ ಪೋ |
ಲ್ವರದಾಭೂರ್ಭಾಗದೊಳ್ ಚಾಗದೊಳಸಮತರ ಖ್ಯಾತಿಯಿಂ ನೀತಿಯಿಂದಂ ||

ಈ ಕೇಶಿರಾಜನ ವಂಶೀಯರನ್ನು ವರ್ಣಿಸುವ ಒಂದು ಪದ್ಯವು (೨೪ನೆಯ ನಂಬರಿನ ಶಾಸನದ್ದು) ಹೀಗಿದೆ:—

ಕಂ|| ಬಲ್ಲಾಳ ನೃಪನ ರಾಜ್ಯದೊ |
ಳೆಲ್ಲರುಮುವರಧಿಕ ಪುಣ್ಯರನುಪಮ ಶೌರ್ಯ್ಯರ್ ||
ಕಲ್ಲದ ವಿದ್ಯೆಯುಮವರ್ಗ್ಗಳ |
ಗೆಲ್ಲದ ರಿಪು ಬಳಮುಮಿಲ್ಲ ಭೂಮಂಡಲದೊಳ್ ||

ಈ ವಂಶವೃಕ್ಷವೂ ಈ ಕೇಶಿರಾಜನೂ ಶಬ್ದಮಣಿದರ್ಪಣದ ಕೇಶಿರಾಜನೇ ಆದಲ್ಲಿ ಈತನು ಜೈನನಾದಾನೋ? ಕೇಶಿರಾಜನ ಶಬ್ದಮಣಿದರ್ಪಣದಿಂದಲೂ, ಆತನು ಜೈನನಲ್ಲವೆಂದು ತಿಳಿಯುತ್ತಿದೆ. ಹಾಗಾದರೂ, ಈ ಶಾಸನವು ಈತನನ್ನು ಜೈನ ಬ್ರಾಹ್ಮಣನೆಂದು ಏಕೆ ಹೇಳಿರಬಾರದು? ವರ್ಣಾಶ್ರಮ ವಿಚಾರ ಗೋತ್ರಾದಿಗಳಲ್ಲಿ, ನಾವು, ಎಂದರೆ ವೈದಿಕರೂ ಜೈನರೂ ಒಂದೇ ಅಲ್ಲವೊ? ಹಾಗಾದರೆ, ಈತನನ್ನು ಜೈನ ಬ್ರಾಹ್ಮಣನೆಂದೇ ತಿಳಿಯೋಣ; ಏಕೆ ಆಗಕೂಡದು? ಆದರೆ ಹಾಗೆ ತಿಳಿಯಲು ಅವಕಾಶವಿಲ್ಲ. ಹಿಂದೆಯೇ ಜೈನ ಶಾಸ್ತ್ರ ಪದ್ಧತಿಯೂ ಜೈನ ಸಂಪ್ರದಾಯವೂ ವೇದ, ಶ್ರುತಿ, ಆಮ್ನಾಯ—ಈ ರೀತಿಯಾದ ಸಂಕೇತವನ್ನು ತಮ್ಮ ಆಗಮಕ್ಕೆ ಸಂಕೇತ, ಅಥವಾ ಹೆಸರೆಂದು ಒಪ್ಪುವುದಿಲ್ಲವೆಂದು ವಿವರಿಸಿರುತ್ತದೆ. ಅಲ್ಲದೆ, ಜೈನರು ಶಾಸನ ವನ್ನು ಬರೆದುದೇ ಆದರೆ—

ಶ್ಲೋ || ಶ್ರೀಮತ್ಪರಮ ಗಂಭೀರ ಸ್ಯಾದ್ವಾದಾಮೋಘ ಲಾಂಛನಂ |
ಜೀಯಾತ್ತ್ರೈಲೋಕ್ಯ ನಾಥಸ್ಯ ಶಾಸನಂ ಜಿನ ಶಾಸನಂ ||

ಎಂಬಿವೇ ಮೊದಲಾದ ಸಂಪ್ರದಾಯ, ಅಥವಾ ಪದ್ಧತಿಗಳನ್ನವಲಂಬಿಸಿ ಬರೆಯುತ್ತಾರೆ.

ಶಕ ೧೧೭೪, ಅಥವಾ ೧೨೫೨ನೆಯ ಇಸವಿ, ಪರೀಧಾವಿ ಸಂವತ್ಸರದಲ್ಲಿ ಹುಟ್ಟಿದ ಚೆನ್ನರಾಯಪಟ್ಟಣದ ೨೪೨ನೆಯ ನಂಬರು ಶಾಸನದಲ್ಲಿ—

ಕಂ॥ ಶ್ರೀಯೊಳ್ ತಳ್ತಿಪ್ಪಾರ್ಯ್ಯಯುಂ ।
ಶ್ರೀಯಂ ದೊರೆವೆತ್ತನೂನ ಶೌರ್ಯ್ಯ ಶ್ರೀಯಂ ॥
ಜ್ಯಾಯಂ ಮಾಧವ ಸಚಿವಂ ।
ಗೀಯುತ್ತಿರ್ತ್ತೊಲ್ದು ಗೌತಮೇಶ್ವರ ದೇವಂ ॥

ಎಂದು ಪ್ರಾರಂಭವಾಗಿರುತ್ತದೆ. ಇಲ್ಲಿಯೂ, ಗೌತಮ ಗಣಧರನ ಶಂಕೆಯು ಮಹಾತಿಶಯರಿಗೆ ಬೇಡ. ಈ ಮಂಗಳವು ಈ ಶಾಸನವಿರುವ ಬೆಳುಗಲಿಯ ಗೌತಮೇಶ್ವರನ ಸಂಬಂಧವಾದುದು. ೨೪೩ನೆಯ ನಂಬರಿನ ಶಾಸನವಾದರೋ—

ಶ್ಲೋ॥ ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ ।
ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ ॥
ನಮಃ ಶಿವಾಯ ಗಣಪತ್ಯಾಯ ನಮಃ ಸೂರ್ಯ್ಯಾಯ ನಮಃ ॥

ಎಂದು ಮೊದಲಾಗಿದೆ. ಈ ಕಾರಣದಿಂದಲೂ ಈತನು ಜೈನನಲ್ಲ. ಇದು ನಮ್ಮ ವೈದಿಕರ ಸಂಪ್ರದಾಯಕ್ಕೆ ಸೇರಿದುದು. ನಮ್ಮ ವೈದಿಕರಲ್ಲೇ ಬ್ರಾಹ್ಮಣ ಭೇದವನ್ನು ಆಯಾ ಮತತ್ವ, ಸಂಪ್ರದಾಯ ಮತ್ತು ಚಿಹ್ನೆಗಳಿಂದ ಹೇಗೆ ಬೇರೆ ಬೇರೆಯೆಂದು ತಿಳಿಯುತ್ತೇವೆಯೋ ಹಾಗೆ ನಮ್ಮ ಸಮಾಪವರ್ತಿಗಳು, ಎಂದರೆ ಕರ್ಮ, ಜ್ಞಾನಾಂತರ್ಯದ ನಂಬಿಕೆ, ಪರಲೋಕದ ನಂಬಿಕೆ ಮೊದಲಾದುವುಗಳಲ್ಲೂ ವರ್ಣಾಶ್ರಮ ಪ್ರವರ ಗೋತ್ರಗಳಲ್ಲೂ ನಮ್ಮಂತೆಯೇ ತೋರುತ್ತ, ನಿರೀಶ್ವರ ವಾದಿತ್ವ, ಭಿನ್ನ ಪ್ರಮಾಣ ವಾದಿತ್ವ, ಭಿನ್ನ ಸಂಪ್ರದಾಯತಾದಿಗಳಿಂದ ನಮ್ಮಿಂದ ಬೇರೆಯಾಗಿರುತ್ತಾರೆಂದು ನಾವು ತಿಳಿದುಕೊಳ್ಳಬೇಕಾಗಿರುತ್ತದೆ. ಈ ರೀತಿ ನೋಡಿದರೆ, ಈತನು ಜೈನ ಮತಾನುಯಾಯಿಯಲ್ಲವೆಂಬುದು ಸ್ಪಷ್ಟವು. ಇವರ ಶಾಸನವೆಂದರೆ, ಅದರಲ್ಲಿ ಜಿನ, ತೀರ್ಥಂಕರ, ಪಂಚಾಚಾರ್ಯಾದಿ ಮಂಗಳವಿರಬೇಕು. ಇದೊಂದು ದೊಡ್ಡ ಗುರುತು. ಇರಲಿ, ಈ ಕೇಶವನ ಕಾಲವೂ ಈತನ ತಂದೆ ಮತ್ತು ಮಾತಾಮಹರ ಕಾಲವೂ ಕವಿಚರಿತೆಯಲ್ಲೂ ಅದರ ವಿಮರ್ಶೆಯಲ್ಲೂ ಹೇಳಲ್ಪಟ್ಟಿರುವುದಷ್ಟೆ! ಆ ಕಾಲಕ್ಕೂ ಈ ಶಾಸನದ ವಂಶ ವೃಕ್ಷದ ಕಾಲಕ್ಕೂ ಹೋಲಿಕೆ ಬಂದು ಕೇಶವನ ಜೀವಿತ ಕಾಲವೂ ಈತನ ಗ್ರಂಥ ನಿರ್ಮಾಣ ಕಾಲವೂ ತಾಳೆಬರುತ್ತದೆಯೋ ಸ್ವಲ್ಪ ವಿಚಾರಿಸುವ. ಕಾಲ ಪ್ರಮಾಣವು ಸ್ವಲ್ಪ ಹೆಚ್ಚು ಕಡಿಮೆ ಮತ ಭೇದದಿಂದಲೂ ನಿಷ್ಕೃಷ್ಟ ಕಾರಣಗಳ ಬಲದಿಂದಲೂ ಒಂದು ರೀತಿಯಾಗಿ ಸರಿಹೋಗುತ್ತದೆ; ಬಹುತರವಾಗಿ ನಿರ್ಣಯಕ್ಕೂ ಬರುತ್ತದೆ. ಹೇಗೆಂದರೆ—

೨೪೨ನೆಯ ನಂ. ಶಾಸನವು ೧೨೫೨ರಲ್ಲಿ ಹುಟ್ಟಿದುದು.
ವೀರ ಸೋಮೇಶ್ವರನು ೧೨೩೩–೧೨೫೪ (೬೫)ರ ವರೆಗೆ ರಾಜ್ಯಭಾರ ಮಾಡಿದನು.
ವೀರ ನರಸಿಂಹ ಬಲ್ಲಾಳನು ೧೨೨೦–೧೨೩೫ ರ ವರೆಗೆ ಆಳಿದನು.
ವೀರಬಲ್ಲಾಳನು ೧೧೭೩–೧೨೨೦ ರ ವರೆಗೆ ಆಳಿದನು.

ಕೇಶವನ ಮಾತಾಮಹನು, ಎಂದರೆ ಕವಿ ಸುಮನೋಬಾಣನು ಹೊಯ್ಸಳ ನರಸಿಂಹನಲ್ಲಿ ಕಟಕೋಪಾಧ್ಯಾಯನಾಗಿದ್ದಂತೆಯೂ, ಕೇಶಿರಾಜನು ೧೨೬೦ರಲ್ಲಿ ಇದ್ದಂತೆಯೂ, ಈತನ ತಂದೆ ಮಲ್ಲಿಕಾರ್ಜುನನು ಹೊಯ್ಸಳ ವೀರ ಸೋಮೇಶ್ವರನ ಕಾಲದಲ್ಲಿದ್ದಂತೆಯೂ ಕವಿಚರಿತೆಕಾರರು ಒಪ್ಪಿರುತ್ತಾರೆ. ಡಾಕ್ಟರ್ ಎ. ವೆಂಕಟ ಸುಬ್ಬಯ್ಯನವರು ಕವಿ ಸುಮನೋಬಾಣನು ಬ್ರಾಹ್ಮಣನೆಂದೊಪ್ಪಿದಂತೆ, "೧೨೨೦–೧೨೩೫ರ ವರೆಗೆ ರಾಜ್ಯವಾಳಿದ ೨ನೆಯ ನರಸಿಂಹನಲ್ಲಿ ಕಟಕೋಪಾಧ್ಯಾಯನಾಗಿದ್ದು ಆ ಕಾಲದಲ್ಲಿ ಜೀವಿಸುತ್ತಿದ್ದನೆಂದೂ ವ್ಯಕ್ತವಾಯ್ತು" ಎಂದು ಬರೆದಿರುತ್ತಾರೆ. ಏವಂಚ, ಕಾಲ ದೇಶಗಳಲ್ಲಿ ಹೆಚ್ಚು ವ್ಯತ್ಯಾಸಗಳು ಕಂಡುಬರುತ್ತಿಲ್ಲ. ಶಾಸನದ ಕಾಲಕ್ಕೂ ಕವಿಚರಿತೆಯ ಕಾಲಕ್ಕೂ ಹೋಲಿಕೆ ಬರುತ್ತಿದೆ. ಆದರೆ, ಕೇಶವನು ೧೨೪೯ರಲ್ಲೇ, ಹೊಯ್ಸಳ ಬಲ್ಲಾಳದೇವನು ರಾಜ್ಯಭಾರಮಾಡುತ್ತಿದ್ದಾಗಲೇ—

> ತತ್ಪಾದ ಪದ್ಮೋಪಜೀವಿ ಶ್ರೀಮನ್ಮಹಾ ಪ್ರಧಾನಂ ಬಾಹತ್ತರ ನಿಯೋಗಾಧಿಪತಿ, ಕೇಶಿರಾಜ ಚಮೂಪತಿ ಶಕವರ್ಷ ಸಾಸಿರದ ನೂರಮೂವತ್ತೊಂದನೆಯ ಶುಕ್ಲ ಸಂವತ್ಸರದ ಪುಷ್ಯ ಶುದ್ಧ ಸಪ್ತಮಿ ಸೋಮವಾರದುತ್ತರಾಯಣ ಸಂಕ್ರಮಣದಂದು ನೀರ್ಗುಂದ ನಾಡ, ಪಂಜಾಡಿಯ ಬೆಳ್ಗಲಿಯಂ ಧಾರಾ ಪೂರ್ವಕಂಬಡೆದು ಕೇಶವಪುರ ಮೆಂಬ ಅಗ್ರಹಾರಮಂ ಮಾಡಿ ಕೇಶವ ಸಮುದ್ರ ಲಕ್ಷ್ಮೀ ಸಮುದ್ರಮೆಂಬ ಕೆರೆಗಳಂ ಕಟ್ಟಿಸಿ ಮಹೋತ್ತುಂಗಮಪ್ಪೀಶ ಕೇಶವಾಯತನಮನಿದನೆತ್ತಿಸಿ ಮತ್ತಂ

ಇತ್ಯಾದಿ ಶಾಸನ ವಾಕ್ಯವಿರುವುದರಿಂದ, ಆಗಲೇ ಆತನು ೨೦–೨೫ ವರ್ಷದ ಪ್ರಾಯದವನಾಗಿದ್ದಿರಬೇಕೆಂದು ತೋರುತ್ತದೆ. ಈ ಶಾಸನ ಕಾಲ, ಎಂದರೆ ೧೨೫೦ಕ್ಕೇ, ೬೩–೬೮ ವರ್ಷಗಳಾಗುತ್ತದೆ. ಈತನ ತಂದೆ ಮಲ್ಲಿಕಾರ್ಜುನನ ಕಾಲ ನಿಷ್ಕರ್ಷೆಯು ಕವಿಚರಿತೆಯಿಂದಲೂ ತದ್ವಿಮರ್ಶಕರಾದ ಡಾಕ್ಟರವರಿಂದಲೂ ಹಿಂದೆ ಹೇಳಿದಂತೆ ೧೨೪೫ರಲ್ಲಿ (೨೬೦–೬೫ರಲ್ಲಿ) ಎಂದು ನಿಶ್ಚಿತವಾಗಿದೆ. ಆದರೆ, ಈ ಇರ್ವರ ಲೇಖನದ ಒಂದು ಅಭಿಪ್ರಾಯವು ಒಂದಾನೊಂದು ಆಶ್ಚರ್ಯಕರವಾದ ಭಾವವನ್ನು ಕೊಡುವಂತಿದೆ. ಆ ಭಾವವಾದರೋ, ಒಬ್ಬ ರಾಜನ ಕಾಲದಲ್ಲಿ ಒಬ್ಬ ಕವಿಯಿದ್ದನೆಂದರೆ, ಆ ರಾಜನ ಆಯುಷ್ಯಕಾಲವೆಲ್ಲ ಆ ಕವಿಯೂ ಬದುಕಿರಬೇಕೆಂಬ ಭಾವನೆಯು ತಲೆದೋರಿದಂತೆ ಉಲ್ಲೇಖಿಸಿರಬಹುದೆಂದು ಅರ್ಥವಾಗುತ್ತದೆ. ಈ ನಿಯಮದ ಭಾವವಿದ್ದರೆ ಅದು ಅಂಗೀಕಾರ್ಯವಲ್ಲ. ಒಬ್ಬ ರಾಜನ ಕಾಲದಲ್ಲಿ ಕೆಲವು ಕಾಲ ಮಾತ್ರ ಒಬ್ಬ ಕವಿಯು ಜೀವಿಸಿರಬಹುದು; ಆ ರಾಜನು ಸತ್ತಮೇಲೆಯೂ ಕವಿಯು ಬದುಕಿರಬಹುದು. ಡಾಕ್ಟರವರು ಹೇಳುವಂತೆ ಒಪ್ಪಿದರೆ, ಕೇಶವನಿಗೆ ೭೬ ವರ್ಷಗಳಾಗುತ್ತದೆ. ಆಗ ಇವನ ತಂದೆಗೆ ೯೬ ವರ್ಷಗಳಾದರೂ ಆಗಿರಬಹುದು. ಈ ವಯಸ್ಸಿನಲ್ಲಿ, ಸೂಕ್ತಿಸುಧಾರ್ಣವವನ್ನು ಬರೆದನೆಂದೊಪ್ಪಲಾದೀತೆ? ಒಂದು ವೇಳೆ ಈ ಮಲ್ಲಿಕಾರ್ಜುನನು ತನ್ನ ಅಪರ ವಯಸ್ಸಿನಲ್ಲಿ ಸಂನ್ಯಾಸಿಯಾಗಿ ಚಿದಾನಂದಸ್ವಾಮಿಯೆಂಬ ಹೆಸರಿನಿಂದಿದ್ದನೆಂದು, "ಯೋಗಿಪ್ರವರ ಚಿದಾನಂದ ಮಲ್ಲಿಕಾರ್ಜುನ" ಎಂಬ ಅಂಕಿತದಿಂದ ಹೇಳಬಹುದಾಗಿರುವುದರಿಂದ, ಏಕೆ ೯೬ನೆಯ ವಯಸ್ಸಿನಲ್ಲಿಯೂ ಕಾವ್ಯ

ರಚನೆಯನ್ನು ಮಾಡಿರಬಾರದು? ನಡೆನಳಿಕೆಗೆ ಹೋಲಿಸಿದರೆ ಸಾಧ್ಯವಿಲ್ಲ. ಮಲ್ಲಿಯು, ಪಂಚತಂತ್ರವನ್ನು ರಾಜಕುಮಾರರ ವಿದ್ಯಾಭ್ಯಾಸಂಗಕ್ಕಾಗಿ ವಿಷ್ಣುಶರ್ಮನು ರಚಿಸಿದ ರೀತಿಯಲ್ಲಿ, "ವೀರಸೋಮೇಶ್ವರನ ವಿನೋದಾಕರ್ಣನೋತ್ಪಾದಿತ" ಎಂದು ಹೇಳುವುದರಿಂದ, ಈತನ ತಂದೆ ವೀರಬಲ್ಲಾಳನ ಕಾಲದಲ್ಲೇ, ಪ್ರಾಯಕ್ಕೆ ಬಂದಿದ್ದಾಗಲೋ, ಅಥವಾ ೧೨೨೦ರಿಂದೀಚೆಗೆ ೧೨೩೫ರೊಳಗಾಗಿ ಯುವರಾಜನಾಗಿದ್ದಾಗಲೋ, ಆತನ ರಾಜಕೀಯ ವಿದ್ಯಾಭ್ಯಾಸಾರ್ಥವಾಗಿ ಏಕೆ ಮಾಡಿರಬಾರದು? ಕವಿ ಕೇಶವನಾದರೂ, ಮಲ್ಲಿಕಾರ್ಜುನನಾದರೂ, ಒಂದು ವೇಳೆ ೧೨೫೦ರ ಮೇಲೆ ಹುಟ್ಟಿದ ಗ್ರಂಥಗಳಿಂದ ತಮ್ಮ ಗ್ರಂಥಗಳಲ್ಲಿ ಉದಾಹರಣೆಗಳನ್ನು ಕೊಟ್ಟಿದ್ದರೂ, ಇವರ ಗ್ರಂಥ ಕಾಲವನ್ನು ಮುಂದಕ್ಕೆ ಹೇಳಬಹುದಾಗಿದ್ದಿತು. ಅಂಥವೂ ಇಲ್ಲ. ಡಾಕ್ಟರವರು ೧೨೬೦ರಲ್ಲಿ ನಡೆದ ಮಹಾದೇವನ ಪರಾಜಯವು ವರ್ಣಿತವಾಗಿದೆಯೆಂದು ಹೇಳುವ ಸೂಕ್ತಿಸುಧಾರ್ಣವದ "ಹಣಿದಂಬೊಯ್ಯಲ್" ಎಂಬ ಪದ್ಯದ ಅರ್ಥವು ಅವರ ಅರ್ಥವನ್ನು ದೃಢೀಕರಿಸುವಂತಿಲ್ಲ. ಇದರಿಂದ, ಕವಿಚರಿತೆಕಾರರ ಮತವೇ ಅಲ್ಲಿ ಸಾಧುವಾಗಿ ಅದ್ಭುತಾರ್ಥಕ, ಅಥವಾ ದೈವಸ್ಮರಣಾರ್ಥಕ ಮಹಾದೇವ ಪದನೇ ಆಗಿರುತ್ತದೆಂದು ತೋರುತ್ತದೆ. ಈ ಸಣ್ಣ ವಿಷಯವು ವಾದ ವಿವಾದ ಗ್ರಸ್ತವಾಗಿರುವಾಗ, ಮಲ್ಲಿಕಾರ್ಜುನನು ತನ್ನ ೯೬ನೆಯ ವರ್ಷದಲ್ಲಿ ಗ್ರಂಥ ರಚನೆ ಮಾಡಿದನೆಂದೇ ಒಪ್ಪುವುದಾದರೆ, ನನ್ನ ಅಡ್ಡಿಯಿಲ್ಲ. ಇಂತಹ ತೊಂದರೆಗಳಿಂದ, ಸೂಕ್ತಿಸುಧಾರ್ಣವವು ಸುಮಾರು ೧೨೩೫ರ ಒಳಗೂ, ದರ್ಪಣವು ೧೨೩೫–೪೦ರ ಒಳಗೂ ರಚಿಸಲ್ಪಟ್ಟಿರುವುವೆಂದು ಹೇಳಲಿಕ್ಕೂ ಅವಕಾಶವಿರುವುದು. ಶ್ರೀಮಾನ್ ಕವಿಚರಿತೆಕಾರರು ಕವಿಚರಿತ್ರ ಸಾಗರದಲ್ಲಿ, ಚಿದಾನಂದನು ಬೇರೆ, ಮಲ್ಲಿಕಾರ್ಜುನನು ಬೇರೆ ಎಂದು ಭ್ರಮಿಸಿ, ಚಿದಾನಂದನು ೧೨೩೪ರಲ್ಲಿ ಇದ್ದಂತೆಯೂ, ಈತನು ಬ್ರಾಹ್ಮಣನೆಂದೂ, ೨ನೆಯ ಹೊಯ್ಸಳ ನಾರಸಿಂಹನ ಕಾಲದಲ್ಲಿದ್ದಂತೆಯೂ ಒಪ್ಪಿರುತ್ತಾರೆ. ಮಲ್ಲಿಕಾರ್ಜುನನು ಸಂನ್ಯಾಸಿಯಾಗಿದ್ದನೆಂದು ಎಲ್ಲಿಯೂ ಹೇಳದಿದ್ದರೂ, ಆತನ ವಯೋಧರ್ಮ ಜ್ಞಾನಾದಿಗಳನ್ನು ನೋಡುವಲ್ಲಿ, ಆ ಕಾಲದ ಶಸ್ತ್ರ ಶಾಸ್ತ್ರ ಧುರೀಣರಾದ ಬ್ರಾಹ್ಮಣರ ಧರ್ಮದಂತೆ, ಸಂನ್ಯಾಸಿಯಾಗಿರಬಹುದೆಂಬುದಕ್ಕೆ, "ಯೋಗಿಪ್ರವರ ಚಿದಾನಂದ ಮಲ್ಲಿಕಾರ್ಜುನ" ಎಂಬ ನಾಮಧೇಯವು ವ್ಯಂಜಕವಾಗಿರುವುದು. ಸಂನ್ಯಾಸಿಗಳು ಗೃಹಸ್ಥಾಶ್ರಮದ ಹೆಸರನ್ನು ತುರೀಯಾಶ್ರಮದಲ್ಲಿ ಹೇಳಿಕೊಳ್ಳುವುದಿಲ್ಲ. ಆದುದರಿಂದಲೇ, ಚಿದಾನಂದನು ಬೇರೆಯಾಗಿರಬಹುದೆಂದು ಶ್ರೀಮದಾಚಾರ್ಯರು ತಿಳಿಯಲವಕಾಶವಾಯ್ತೆಂದು ಭಾವಿಸುತ್ತೇನೆ. ದರ್ಪಣದ ಕೇಶಿಯೂ, ತನ್ನ ತಂದೆ ಸಂನ್ಯಾಸಿಯಾದ ಮೇಲೆ ದರ್ಪಣವನ್ನು ಬರೆದ ಕಾರಣ, "ಯೋಗಿಪ್ರವರ ಚಿದಾನಂದ ಮಲ್ಲಿಕಾರ್ಜುನ ಸುತನೆಂ" ಎಂದು ವಂಶ ವಿಶುದ್ಧತೆಯ ಗೌರವವನ್ನು ಕೊಂಡಾಡಿಕೊಂಡಿರುತ್ತಾನೆಂದು ಯೋಚಿಸಲು ಅವಕಾಶವೂ ಇರುತ್ತದೆ. ಅದ್ಭುತವಾದ ಮಲ್ಲಿಕಾರ್ಜುನ ಕೇಶಿರಾಜರ ವೇದಮಾರ್ಗ ಚಾರಿತ್ರವು, ಪರಶುರಾಮ, ದ್ರೋಣ, ಭೀಷ್ಮಾಚಾರ್ಯರ ಚರಿತ್ರವನ್ನು ಸ್ಮರಣೆಗೆ ತರದೆ ಬಿಡದು. ನಮ್ಮ ಪೂರ್ವಿಕರು ಸೈನ್ಯ

ದಲ್ಲಿದ್ದು ಪಕಾಲಿಯ ನೀರನ್ನು ಕುಡಿದು, ಕತ್ತಿ ಹಿರಿದು, ಮೈಕೈಯೆಲ್ಲ ಶಸ್ತ್ರದ ಗಾಯ ವಾಗಿರುತ್ತಿದ್ದರೂ, ರಾಜಕೀಯ ಮಂತ್ರಿತ್ವ ಸೇನಾಪತ್ಯಾದ್ಯಧಿಕಾರದಲ್ಲಿದ್ದರೂ, ಪ್ರಾಣವೇ ಹೋಗುತ್ತಿದ್ದರೂ, ಶ್ರುತಿ ವಿಹಿತ ಕರ್ಮಠರಾಗಿದ್ದರೆಂಬುದಕ್ಕೆ ಈ ತಂದೆ ಮಕ್ಕಳು ನಿದರ್ಶಕರಲ್ಲವೆ! 'ಓ! ವಿಧಿಯೇ! ನಮ್ಮನ್ನೂ ಈ ಮಹನೀಯರಂತೆಯೇ ಈ ಕಾಲದಲ್ಲಿ ಏಕೆ ಸೃಷ್ಟಿಮಾಡಬಾರದಾಗಿದ್ದಿತು?' ಎನ್ನುವಂತೆ ತೋರುತ್ತಿದೆ. ಇರಲಿ, ನಾವು ಆ ಅದೃಷ್ಟವನ್ನು ಪಡೆದವರಲ್ಲ. ಕರ್ಮಾಯತ್ತ ಫಲವನ್ನು ಕೊಡು ವುದೂ, ಅದಕ್ಕೆ ತಕ್ಕಂತೆ ಸೃಷ್ಟಿಸುವುದೂ ವಿಧಿಯ ಕರ್ತವ್ಯವು. ಪ್ರಕೃತ, ಮಲ್ಲಿಕಾರ್ಜುನನು ಚಿದಾನಂದ ಯೋಗೀಶ್ವರನಾದಾಗ, ತಾನು ಯಾವ ಗುರುವಿನಿಂದ ಉಪದೇಶವನ್ನು ಪಡೆದು ಸಂನ್ಯಾಸವನ್ನು ಸ್ವೀಕರಿಸಿದನೋ, ಆತನನ್ನೇ ತಂದೆಯೆಂದು ಒಪ್ಪಬೇಕು. ಈಗಲೂ ಕರ ಕಮಲ ಸಂಜಾತರಾದ ಮತ್ತು ಮಠಾಧಿಪತಿಗಳಾದ ಸಂನ್ಯಾಸಿ ಶಿರೋಮಣಿಗಳ ಬಿರುದುಗಳನ್ನು ನೆನಪಿಗೆ ತಂದುಕೊಂಡರೆ ಈ ಸಂಪ್ರದಾ ಯಾರ್ಥವು ಎಲ್ಲರಿಗೂ ಸುಲಭವಾದುದೆಂದು ವಿಜ್ಞಾಪಿಸಿಕೊಳ್ಳುತ್ತೇನೆ. ಈ ಸಂಪ್ರದಾಯಾನುಗುಣವಾಗಿ ಚಿದಾನಂದ ಯೋಗೀಶ್ವರರು ತಮ್ಮ ಗುರುಗಳಾದ ಪರಮ ಪ್ರಕಾಶ ಯೋಗೀಶ್ವರರ ತನಯರಾಗಿದ್ದಾರೆಂದು ತಿಳಿಯಲಿಕ್ಕೂ ಆಸ್ಪದವುಂಟು. ಆದುದರಿಂದ, ಕವಿಚರಿತೆಕಾರರಿಗೂ ಡಾಕ್ಟರವರಿಗೂ ನಡೆದ ವಿವಾದದಲ್ಲಿ ನಾನು ಈ ಮಾಧ್ಯಸ್ಥವನ್ನು ಮಾಡಲು ಸಿದ್ಧನಾಗಿರುತ್ತೇನೆ. ಮುಖ್ಯವಾಗಿ, ದೇಶ ಕಾಲಗಳ ಸಾಮಂಜಸ್ಯವೂ ಏಕ ವಾಕ್ಯತೆಯೂ ಬಹು ದೂರ ಬಂದಿರುವುದರಿಂದ ಈ ಶಾಸನದ ಕೇಶಿರಾಜನೇ ಶಬ್ದಮಣಿದರ್ಪಣದ ಕೇಶಿರಾಜನೆಂದು ನಂಬಲು ವಿಶೇಷ ಕಾರಣಗಳು ಪ್ರಬಲಗಳಾಗಿವೆ. ಮೇಲೂ, ಇಲ್ಲಿಯೇ ವಿವರಿಸಿದಂತೆ—

(೧) ಶಾಸನವು ಚಮೂಪತಿ, ದಂಡನಾಯಕ ಎಂದು ಹೇಳಿದರೆ, ಶಬ್ದಮಣಿ ದರ್ಪಣವು ಯಾದವ ಕಟಕಾಚಾರ್ಯನೆಂಬುದನ್ನೂ—

(೨) ಮಲ್ಲಪನ ಮಗನೆಂದರೆ, ಕವಿಚರಿತೆ ತದ್ವಿಮರ್ಶ ಗ್ರಂಥಗಳೂ ದರ್ಪ ಣವೂ, ಮಲ್ಲಪನೆಂಬ ಹೆಸರುಳ್ಳ ಚಿದಾನಂದ ಮಲ್ಲಿಕಾರ್ಜುನನ ಮಗನೆಂಬುದನ್ನೂ—

(೩) ಶಾಸನವು "ಆಮ್ನಾಯಾಂಭೋಧಿ ಸುಧಾಂಶು, ಶ್ರೀ ಶ್ರುತಿ ವಿಹಿತ ಪುರಾಣೋಕ್ತಮಾರ್ಗಕ್ಕೆ ಪುಣ್ಯಾಶ್ರಮವಿರ್ದಂತಿರ್ದಪಂ, ಅಗಸ್ತ್ಯಪ್ರವರಪ್ರಖ್ಯಾತಂ, ಬಲ್ಲನೆರಡಿಲ್ಲದೆ ಚತುರ ಚತುರ್ಮುಖಂ" ಎಂಬೀ ಮೊದಲಾದ ವಿಶೇಷಣಗಳಿಂದ, ಕೇಶವನು ವೈದಿಕ ಮತದ ವಿದ್ವದ್ಬ್ರಾಹ್ಮಣನೆಂದರೆ, "ಅಖಿಳಶಾಸ್ತ್ರಾಮ್ನಾಯವಂ ಬಲ್ಲವಂ, ಅಭಿನವ ಬ್ರಹ್ಮಂ, ವಿಚಿತ್ರತರ ವಿದ್ಯಾವೇಶಿ"—ಈ ಮೊದಲಾದ ಪರ್ಯಾಯ ವಿಶೇಷಣಗಳಿಂದ ಅದೇ ಅರ್ಥವನ್ನೂ—

(೪) "ಎಂದಾಯ್ತೊ ಪೊಯ್ಸಳಾನ್ವಯಮಂದಾಯ್ತು ಕೇಶವನನ್ವಯಂ ಪೊಸ ದಂಡನಾಥರೊಂದನ್ವಯಮೇ" ಎಂದು ಕೇಶವನನ್ನು ಸಪ್ತ ಪೌರುಷದಿಂದ ಹೊಯ್ಸಳ ರಾಜರ ಆಶ್ರಿತನೆಂದರೆ, ಕವಿಚರಿತವೂ ದರ್ಪಣವೂ ಅದನ್ನು ಸಮ್ಮತಿಸುತ್ತ,

ಚೋಳ ಪಾಲಕರಾದ ಹೊಯ್ಸಳರ ಚರಿತವನ್ನು ಬರೆದ ಸ್ವಾಮಿ ಭಕ್ತಿ ಪ್ರದರ್ಶನದಿಂದ ಹೊಯ್ಸಳ ರಾಜಾಶ್ರಯದ ಪರಾಕಾಷ್ಠೆಯನ್ನೂ—

(೫) ಶಾಸನವು ಜೈನ ಮತಸ್ಥನಲ್ಲವೆಂದು ಹೇಳುವಂತೆ, ಶಬ್ದಮಣಿದರ್ಪಣವೂ ಕೇಶವನು ಜೈನ ಮತದವನಲ್ಲವೆಂದು ಹೇಳುವ ತತ್ಪ್ರೋಕ್ತಿ ವ್ಯಕ್ತತೆಯನ್ನೂ—

ಸಾಮರಸ್ಯದಿಂದ ಹೇಳುತ್ತಿವೆಯಾಗಿ, ಶಾಸನದ ಕೇಶವನೇ ಶಬ್ದಮಣಿದರ್ಪಣದ ಕೇಶವನೆಂದೂ, ಈತನು ವೈದಿಕ ಮತದ ಬ್ರಾಹ್ಮಣನೇ ಆಗಿರುತ್ತಾನೆಂದೂ ನಿರ್ಧರಿಸಲವಕಾಶವಾಯ್ತು. ಇದು ಯಾವುದೋ ಒಂದು ರೀತಿಯ ಮಮತೆಯೆಂದರೆ, ನಾನು ಬ್ರಾಹ್ಮಣನಾದುದರಿಂದ ಪಕ್ಷಪಾತ ದೋಷಕ್ಕೆ ಪಾತ್ರನಾಗಿ ಹೇಳುತ್ತಿಲ್ಲ; ಗ್ರಂಥದ ವ್ಯಾಸಂಗದಿಂದ ಗ್ರಂಥವು ಯಾವ ಸತ್ಯಾಂಶವನ್ನು ಹೇಳುತ್ತಿದೆಯೋ, ಅದಕ್ಕನುಗುಣಗಳಾದ ಪ್ರಮಾಣಗಳು ಏನು ಹೇಳುತ್ತಿವೆಯೋ, ಆ ರೀತಿ ತೋರಿದ ಯಥಾರ್ಥಾಂಶವನ್ನು ವಿಜ್ಞಾಪಿಸಿರುತ್ತೇನೆ.

ಈ ಮಹನೀಯನಾದ ಕೇಶಿರಾಜನ ಚರಿತ್ರವಷ್ಟೂ ನನ್ನ ಈ ಉಪನ್ಯಾಸದಲ್ಲಿ ಅಲ್ಲಲ್ಲಿ ಸ್ಪಷ್ಟವಾಗಿರುತ್ತಾದುದರಿಂದ, ಪರಿಸಮಾಪ್ತಿ ವಾಕ್ಯದಲ್ಲಿ ಕ್ರೋಢೀಕರಿಸಿ ಹೇಳುವುದು ಪುನರುಕ್ತಿಯಂತೆ ಆಗಬಹುದೆಂದು ಪುನಃ ಸಂಕ್ಷೇಪಿಸಿ ಹೇಳಿಲ್ಲ.

**ಶ್ರೀನಿವಾಸ ರಂಗಾಚಾರ್ಯ.**

---

## ಪರಿಶಿಷ್ಟ

ಈಗ ಅಚ್ಚಾಗಿ ಪ್ರಕಟಿಸಲ್ಪಟ್ಟಿರುವ ಶಬ್ದಮಣಿದರ್ಪಣದ ಪುಸ್ತಕಗಳು ಕೇಶಿರಾಜನಿಂದ ರಚಿಸಲ್ಪಟ್ಟಂತೆಯೇ ಇಲ್ಲವೆಂದು ಅವುಗಳ ಪರಸ್ಪರ ಭೇದಗಳಿಂದಲೇ ವ್ಯಕ್ತವಾಗುತ್ತಲಿದೆ; ಎಂದರೆ, ಅನೇಕರು ತಿದ್ದುಪಾಡುಗಳನ್ನು ಮನಸ್ವೀ ಮಾಡಿರುತ್ತಾರೆ ಎಂದೂ ತೋರಿಬರುತ್ತದೆ. ಇದಕ್ಕೆ ನಿದರ್ಶನವಾಗಿ, ೧೯–೨–೧೯೩೧ರಲ್ಲಿ ಮಂಜೇಶ್ವರದ ಶ್ರೀಮಾನ್ ಗೋವಿಂದ ಪೈ ಎಂಬವರಿಂದ ನನಗೆ ದೊರೆತಿರುವ ಲೇಖನವನ್ನು ಇಲ್ಲಿ ಉದಾಹರಿಸುತ್ತೇನೆ:—

"ಮೊನ್ನೆ ತಾನೆ ನಾನು ಮದ್ರಾಸಿಗೆ ಹೋದಾಗ ಕನ್ನಡ ಶಾಖೆಯ ಪಾಠಕರಾಗಿರುವ ಮದ್ರಾಸ್ ಯೂನಿವರ್ಸಿಟಿಯ ಶ್ರೀಮಾನ್ ಅಲೆಮಾರ್ ವೆಂಕಟರಾಯರೊಂದಿಗೆ, ಅವರಲ್ಲಿಂದಲೋ ಸಂಪಾದಿಸಿ ನಕಲು ತೆಗೆದಿಟ್ಟುಕೊಂಡಿರುವ, ಲಿಂಗಣಾರಾಧ್ಯನೆಂಬುವನ ವ್ಯಾಖ್ಯಾನ ಸಹಿತವಾದ ಕೇಶಿರಾಜನ ಶಬ್ದಮಣಿದರ್ಪಣದ ಪ್ರತಿಯನ್ನು ಕಂಡೆ. ಸಮಗ್ರ ಗ್ರಂಥವನ್ನು ಓದಿ ನೋಡುವವರೆಗೇನೂ ಅವಕಾಶವಿಲ್ಲದಿದ್ದರೂ, ಅದರ ಕೊನೆಯಲ್ಲಿಯ 'ದೊರೆವಡೆದ ಚೋಳಪಾಲಕ' ಮತ್ತು 'ಶಿರಿಗೀಕ್ಷಿಪ ರಸಚಿತ್ರಂ' ಎಂಬ ಅವೆರಡು ಕಂದಗಳ ನಡುವೆ ಹೊಸತೇನೆ ಮೂರು ಪದ್ಯಗಳಿರುವುದನ್ನು ಕಂಡು ಅವನ್ನು ಬರೆದುಕೊಂಡೆ; ಮತ್ತು ಅವನ್ನಿಲ್ಲಿ ತಮ್ಮ ಅವಗಾಹನೆಯ ಬಗ್ಗೆ ಕೊಟ್ಟಿರುತ್ತೇನೆ.—

ಕಂ ॥ ನಡೆಯಿಸುವ ಕಥೆಯೊಳೇಂ (ಳಂ) ”, ।
(ತಡೆಯದೆ) ಸೈತಾಗಿ ಚೆನ್ನಕೇಶವ ದೇವಂ ॥
ನುಡಿಯಿಸಿದ ತೆರದೆ ಭಾರತಿ ।
ನುಡಿವಳ್ ಸೌಭಾಗ್ಯಮಿಂತು ಸೊಗಯಿಸವೇಡಾ ॥ ೩ ॥

ವೃ ॥ ನಿಲವಿನ(ನಿರ್ಪ) ರೇಖೆ ಪೊಸ ಭಂಗಿಗೆ ಸಲ್ವುದು ದೇಶಿ ಮಾರ್ಗಮುಂ ।
ನಿಲಿಸೆಯುಮಿಟ್ಟಮುಂ ಪಡೆವುದೊಟ್ಟಜೆ ದಂಡಮಲಂಕ್ರಿಯಾರ್ಥಮುಂ ॥
ಸುಲಲಿತ ರೀತಿ ತನ್ನ ಪತಿಯಾದೊಡೆ ಪಲ್ಲವ ರೀತಿಯೆಂದು ಮೆ ।
ಚ್ಚ(ಲು ಮಿತಿ) ಪೇೞ್ದು ಮೆಚ್ಚಿಸಲುವಾರ್ಪೊಡೆ ಮಹಾ ಕವಿ ಚೆನ್ನಕೇಶವಂ ॥ ೪ ॥
ಅದನೇವೇೞ್ದುದೊ ಲೌಕಿಕಾಗಮ ಕಳಾ ಕೌತೂಹಳ ವ್ಯಾಪ್ತಿಗೆ ।
ತ್ತಿದ ಸೂತ್ರಂ ವಚನ ಪ್ರಚಾರಮಿವನಂತಃಕೌಶಳಾಳಾಪ(ಮಂ) ॥
(ತದುವಂ) ಭಾವಿಸಿ ಬಲ್ಲನಾವನೆನಲೀತಂ ಬಣ್ಣಿಸಲ್ ಸತ್ಕಳಾ ।
ನಿದನೊಲ್ದಾದರಿಪಂ ಸರಸ್ವತಿಯ ಭಾಷಾ ಕೋಶವಂ ಕೇಶವಂ ॥ ೫ ॥

ತಮ್ಮ ಸಾಧನೆಗೆ ಇದರಿಂದ ಏನಾದರೂ ಸಹಾಯವಾಗಬಹುದೋ ಏನೋ ಎಂದು ನಿನ್ನೆ ಇಲ್ಲಿಗೆ ಬಂದ ಕೂಡಲೇ ಈ ಹೊತ್ತೇ ತಮಗೆ ಬರೆದು ಕಳುಹಿಸಿರುತ್ತೇನೆ . . . . . . ಇತಿ ನಮಸ್ಕಾರ.

M. Govinda Pai.''

ಈ ಲೇಖನವನ್ನು ನಮಗೆ ಕಳುಹಿಸಿದ ಪರೋಕ್ಷ ಪ್ರಿಯ ಮ॥ ರಾ॥ ಗೋವಿಂದ ಪೈ ನಮ್ಮ ಮಿತ್ರ ರತ್ನಕ್ಕೆ ನಾನು ಬಹಳ ಕೃತಜ್ಞನಾಗಿರುತ್ತೇನೆ. ಈ ಪದ್ಯಗಳನ್ನು ನೋಡಿದರೆ ಮೂಲ ಗ್ರಂಥದ ವ್ಯತ್ಯಾಸಗಳು ಎಷ್ಟಿರಬಹುದೋ ಹೇಳಲು ಸಾಧ್ಯವಿಲ್ಲ. ವಿದ್ಯಾ ಖಾತೆಯ ಅಧಿಕಾರಿಗಳು ಇಂಥವುಗಳನ್ನು ದಯೆಯಿಟ್ಟು ಪರಿಶೀಲನೆಯಿಂದ ಪ್ರಕಟಿಸುವಂತೆ ಕರುಣಿಸಬೇಕೆಂದು ಕೋರುತ್ತೇನೆ. ಮತ್ತು ಚೆನ್ನಕೇಶವ ಎಂಬ ನಾಮಧೇಯವು ಈತನಿಗೆ ಇರುವುದಾದರೆ, ಈತನನ್ನು ಜೈನಿಗರವನೆಂದು ಹೇಳಲು ಕುತ್ತಿಗೆ ಹಿಡಿಯುವುದಿಲ್ಲವೋ?

ಬೇಲೂರು ಚೆನ್ನಕೇಶವಸ್ವಾಮಿಯ ನಾಮಧೇಯವನ್ನು ತಾಳಿದ, ಅಖಿಳ ಶಾಸ್ತ್ರಾಮ್ನಾಯಮುಂ ಬಲ್ಲ, ಅಭಿನವ ಬ್ರಹ್ಮನಾದ ಈತನು, ಜೈನನಲ್ಲವೆಂಬುದನ್ನು ಸಾಧಿಸಬೇಕಾದ ವಿಷಯವೊಂದು ಇದೆಯೇ ಎಂದೂ ತೋರಿಬರುವುದು.

**ಶ್ರೀನಿವಾಸ ರಂಗಾಚಾರ್ಯ.**

---

# ಜೈಮಿನಿ ಭಾರತ (ಅಶ್ವಮೇಧಿಕ ಪರ್ವ)

## *ಸಂಸ್ಕೃತ ಜೈಮಿನಿ ಭಾರತದ ಕನ್ನಡದ ಅನುವಾದ

---

### ಇಪ್ಪತ್ತಾರನೆಯ ಅಧ್ಯಾಯ

ಶ್ರೀರಾಮನು ತಮ್ಮ ಪೂರ್ವಿಕರ ಮಾರ್ಗವನ್ನನುಸರಿಸಿ ಹತ್ತು ಸಾವಿರ ವರ್ಷಗಳ ಕಾಲ ರಾಜ್ಯಭಾರ ಮಾಡಿದನು; ಆದರೆ ಸೀತಾದೇವಿಯಲ್ಲಿ ಸಂತಾನವನ್ನು ಪಡೆಯಲಿಲ್ಲ. ಬಳಿಕ ಬಹು ಕಾಲದ ಮೇಲೆ ಸೀತೆಯು ಗರ್ಭವತಿಯಾದಳು. ಶ್ರವಣ ನಕ್ಷತ್ರದ ಕೊನೆಯ ಪಾದದ ಚರ ಲಗ್ನದಲ್ಲಿ ಗರ್ಭ ಧಾರಣೆಯಾದುದರಿಂದ ಆ ಗರ್ಭವು ತಾಯಿಗೆ ದೇಶಾಂತರ ಪ್ರಾಪ್ತಿಯನ್ನುಂಟುಮಾಡುವುದಾಗಿದ್ದಿತು. ಹೀಗೆ ಶ್ರೀರಾಮನು ಪತ್ನಿಯೊಡನೆ ಬಳಿಕ ನಾಲ್ಕು ತಿಂಗಳನ್ನು ವಿನೋದವಾಗಿ ಕಳೆದನು. ಸೀತೆಗೆ ಐದನೆಯ ತಿಂಗಳು ಪ್ರಾರಂಭವಾಗಲು, ಶ್ರೀರಾಮನು ಒಂದು ದಿನ ರಾತ್ರಿ—ಲಕ್ಷ್ಮಣನು ಸೀತಾದೇವಿಯನ್ನು ಭಾಗೀರಥೀ ತೀರದಲ್ಲಿ ಬಿಟ್ಟುಬಂದಂತೆಯೂ, ಅಲ್ಲಿ ಆಕೆಯು ಅನಾಥಳಂತೆ ರೋದಿಸುತ್ತಿದ್ದಂತೆಯೂ ಸ್ವಪ್ನವನ್ನು ಕಂಡು ಆಶ್ಚರ್ಯಯುಕ್ತನಾಗಿ, ಬೆಳಗಾದ ಕೂಡಲೆ ಆಹ್ನಿಕವನ್ನು ತೀರಿಸಿಕೊಂಡು, ವಸಿಷ್ಠನನ್ನು ಕುರಿತು, "ಅಯ್ಯಾ ಮುನಿವರ್ಯನೇ! ಸೀತಾದೇವಿಯು ಭಾಗೀರಥೀ ತಟದಲ್ಲಿ ರೋದಿಸುತ್ತಿದ್ದಂತೆ ಸ್ವಪ್ನವನ್ನು ಕಂಡೆನು. ಆದಕಾರಣ, ಆಕೆಯ ಗರ್ಭ ವಿಘ್ನ ಶಾಂತ್ಯರ್ಥವಾಗಿ ಪುನ್ನಕ್ಷತ್ರ ಯುಕ್ತವಾದ ಯಾವುದಾದರೂ ಒಂದು ಶುಭ ದಿನದಲ್ಲಿ ಪುಂಸವನ ಕರ್ಮವು ನಡೆಯುವುದಕ್ಕೆ ಅಪ್ಪಣೆ ಕೊಡು" ಎಂದು ಕೇಳಲು, ವಸಿಷ್ಠನು ಆ ಮಾತನ್ನು ಕೇಳಿ, "ಎಲೈ ಪ್ರಭುವೇ, ಸೂರ್ಯನು ಪುಷ್ಯ ನಕ್ಷತ್ರದಲ್ಲಿರುವಾಗ ಶುದ್ಧ ಪಂಚಮಿಯಲ್ಲಿ ಪುಂಸವನವು ನಡೆಯಬೇಕಾಗುತ್ತದೆ. ಕೃಷ್ಣಪಕ್ಷವು ಕಳೆಯಲಿ; ಆ ಮುಹೂರ್ತವು ಪ್ರಾಪ್ತವಾಗುವ ವರೆಗೂ ಬ್ರಾಹ್ಮಣ ಸಂತರ್ಪಣೆಯನ್ನು ನಡೆಯಿಸುತ್ತಿರು" ಎಂದು ಹೇಳಿದನು. ರಾಮನು ವಸಿಷ್ಠನ ಮಾತನ್ನು ಕೇಳಿ ಲಕ್ಷ್ಮಣನೊಡನೆ, "ಅಯ್ಯಾ ಸಹೋದರನೇ! ಸೀತೆಯ ಪುಂಸವನವು ಪಂಚಮೀ ದಿನವಾಗುವುದು. ಅಷ್ಟರಲ್ಲಿ ನೀನು ಹೋಗಿ ಜನಕರಾಜನನ್ನೂ, ಋಷಿಗಳ ಗುಂಪಿನೊಡನೆ ಆ ವಿಶ್ವಾಮಿತ್ರ ಮುನಿಯನ್ನೂ ಕರೆದುಕೊಂಡುಬಾ" ಎಂದು ಹೇಳಲು, ಲಕ್ಷ್ಮಣನು ರಾಮನಿಗೆ ನಮಸ್ಕಾರ ಮಾಡಿ ಕೂಡಲೆ ಹೊರಟುಹೋದನು.

ಬಳಿಕ ಶ್ರೀರಾಮನು ಶಿಲ್ಪಿಗಳನ್ನು ಕರೆಯಿಸಿ ಎರಡು ಹರಿದಾರಿಯ ಉದ್ದವೂ ಅಗಲವೂ ಉಳ್ಳ ಮಂಟಪವನ್ನು ಕಟ್ಟಿಸಿದನು. ಆ ಮಂಟಪದಲ್ಲಿ ವಸಿಷ್ಠನು ಮನೋ

---

* ಕ. ಸಾ. ಪರಿಷತ್ಪತ್ರಿಕೆಯ ೧೭ನೆಯ ಸಂಪುಟದ ೨ನೆಯ ಸಂಚಿಕೆಯ ೧೩೯ನೆಯ ಪುಟದಿಂದ ಮುಂದುವರಿದುದು.

ಹರವಾದ ಅಗ್ನಿಕುಂಡವನ್ನು ಮಾಡಿಸಿ ಕರ್ಮಾಂಗಗಳಾದ ಅತ್ತಿಯ ಹಣ್ಣಿನ ಸರ, ಮುಳ್ಳುಹಂದಿಯ ಮುಳ್ಳು, ಮೂರು ಮಡಿಕೆಯಾಗಿ ಸುತ್ತಿದ ಹಸಿಯ ನೂಲಿನ ಸಿಂಬಿ, ಚೌಕವಾದ ಅತ್ತಿಯ ಮರದ ಮಣೆ, ವೀಣೆ ಮೊದಲಾದುವುಗಳನ್ನು ಸಿದ್ಧಪಡಿಸಿದನು. ಅಷ್ಟರಲ್ಲಿ ಲಕ್ಷ್ಮಣನು ಜನಕನನ್ನೂ ವಿಶ್ವಾಮಿತ್ರನನ್ನೂ ಕರೆತಂದು ಶ್ರೀರಾಮನಿಗೆ ನಮಸ್ಕರಿಸಿ, "ಅಣ್ಣಾ! ಜನಕನೂ ವಿಶ್ವಾಮಿತ್ರನೂ ಬಂದಿರುವರು. ಇವರನ್ನು ಅರ್ಘ್ಯಾದಿಗಳಿಂದ ಪೂಜಿಸು" ಎಂದನು. ರಾಮನು ಆ ಮಾತನ್ನು ಕೇಳಿ ಅದೇ ಪ್ರಕಾರ ನಮಸ್ಕಾರಾರ್ಘ್ಯಾದಿಗಳಿಂದ ಅವರಿಬ್ಬರನ್ನೂ ಪೂಜಿಸಿದನು. ಬಳಿಕ, ಯೋಗ್ಯವಾದ ಮುಹೂರ್ತವು ಪ್ರಾಪ್ತವಾದ ಕೂಡಲೆ ವಸಿಷ್ಠನು, "ಎಲೈ ರಾಮನೇ! ಸೀತೆಯೊಡನೆ ನೀನು ಸ್ನಾನಾದಿ ಕರ್ಮಗಳನ್ನು ಮಾಡಿ ತಮ್ಮಂದಿರೊಡನೆ ಮಂಟಪ ಪ್ರವೇಶಮಾಡು" ಎಂದನು. ಆಗ ಶ್ರೀರಾಮನು ಸೀತೆಯೊಡನೆ ಮಂಗಳ ಸ್ನಾನ ಮಾಡಿ ವೇದ ಶಾಸ್ತ್ರ ಪಾರಗರಾಗಿಯೂ ಸದಾಚಾರ ಸಂಪನ್ನರಾಗಿಯೂ ಕರ್ಮಜ್ಞರಾಗಿಯೂ ಇರುವ ಬ್ರಾಹ್ಮಣರಿಂದಲಂಕೃತವಾದ ಮಂಟಪವನ್ನು ಹೊಕ್ಕನು.

ಬಳಿಕ ವಸಿಷ್ಠನು ಶ್ರೀರಾಮನನ್ನು ಪೀಠದ ಮೇಲೆ ಕುಳ್ಳಿರಿಸಿ ಕ್ರಮವಾಗಿ ಚರು, ತಿಲಾಜ್ಯಾಹುತಿಗಳನ್ನು ಮಾಡಿಸಿ, ಶಾಂತ್ಯುದಕದಿಂದ ಶ್ರೀರಾಮನಿಗೆ ಅಭಿಷೇಕ ಮಾಡಿ, ಹಾಗೆಯೇ ಸೀತಾದೇವಿಯ ಮುಡಿಯ ಮೇಲೆ ದಾರದ ಸಿಂಬಿಯನ್ನಿಟ್ಟು ಅತ್ತಿಯ ಹಣ್ಣಿನ ಸರವನ್ನು ಆಕೆಗೆ ಧರಿಯಿಸಿದನು. ಆಗ ಆಕೆಯು ಬ್ರಹ್ಮಾಂಡಗಳನ್ನು ಧರಿಸಿದಂತೆ ಪ್ರಕಾಶಿಸಿದಳು. ವೀಣಾ ವಾದ್ಯ ಪ್ರವೀಣನಾದ ಭರತನು ಗರ್ಭಸ್ಥವಾದ ಶಿಶುವಿಗೆ ವೀಣಾಭ್ಯಾಸ ಮಾಡಿಸುವನೋ ಎಂಬಂತೆ ಸೀತೆಯ ಎದುರಿಗೆ ವೀಣೆಯನ್ನು ಬಾರಿಸಿದನು. ಹೀಗೆ ಶ್ರೀರಾಮನು ಶುಭ ಕಾರ್ಯವನ್ನು ನೆರವೇರಿಸಿ ಬ್ರಾಹ್ಮಣರನ್ನು ಪಾಯಸಾಜ್ಯಾದಿಗಳಿಂದ ತೃಪ್ತಿಗೊಳಿಸಿ ಸುವರ್ಣ ವಸ್ತ್ರ ಭೂಷಣಾದಿಗಳನ್ನೂ ಅಶ್ವರಥಾದಿಗಳನ್ನೂ ದಾನ ಮಾಡಿದನು. ಜನಕನು ಶ್ರೀರಾಮನಿಗೆ ನಿಷ್ಕಂಟಕವಾದ ತನ್ನ ರಾಜ್ಯವನ್ನೊಪ್ಪಿಸಿಕೊಟ್ಟು ವಿಶ್ವಾಮಿತ್ರನೊಡನೆ ವನವಾಸಕ್ಕೆ ತೆರಳಿದನು.

ಹೀಗೆ ಕೆಲವು ಕಾಲ ಕಳೆದ ಮೇಲೆ, ಒಂದು ದಿನ ರಾತ್ರಿ ಅಯೋಧ್ಯೆಯಲ್ಲಿ ಶ್ರೀರಾಮನು ಸೀತೆಯೊಡನೆ ಶಯನ ಸುಖವನ್ನನುಭವಿಸುತ್ತ ಸಂತೋಷದಿಂದ ಸೀತಾದೇವಿಯನ್ನು ಕುರಿತು, "ಎಲೌ ಭದ್ರೇ! ನಿನಗೆ ಯಾವ ವಸ್ತುವಿನಲ್ಲಿ ಬಯಕೆ, ಅದನ್ನು ತಿಳಿಸು" ಎಂದನು. ಅದಕ್ಕೆ ಸೀತಾದೇವಿಯು, "ಎಲೈ ಪ್ರಾಣ ಕಾಂತನೇ! ನಿನ್ನ ಅನುಗ್ರಹದಿಂದ ನಾನು ಯಾವಾಗಲೂ ಪೂರ್ಣ ಕಾಮಳಾಗಿರುವೆನು. ಆದರೆ ಭಾಗೀರಥೀ ತೀರದಲ್ಲಿ ಕೃಷ್ಣಾಜಿನ ಧಾರಿಣಿಯರಾಗಿರುವ ಋಷಿ ಪತ್ನಿಯರು ವಾಸಿಸುತ್ತಿರುವ ಪ್ರದೇಶಕ್ಕೆ ಹೋಗಿಬರಬೇಕೆಂಬ ಕುತೂಹಲವು ನನಗೆ ಬಹಳವಾಗಿರುವುದು" ಎಂದಳು. ಅದಕ್ಕೆ ರಾಮನು ನಸು ನಗುತ್ತ, "ಇದೇನು! ನೀನು ಹದಿನಾಲ್ಕು ವರ್ಷಗಳು ದಂಡಕಾ ವನ ವಾಸ ಮಾಡಿದರೂ ಇನ್ನೂ ನಿನಗೆ ತೃಪ್ತಿಯುಂಟಾಗಲಿಲ್ಲವೆಂದು ಕಾಣುತ್ತದೆ. ಇರಲಿ, ಈಗಲೂ ನಿನ್ನ ಮೊದಲನೆಯ ಗರ್ಭ

ದೋಹದವು ಹೇಗೆ ವ್ಯರ್ಥವಾದೀತು? ನಾಳೆಯೇ ನೀನು ಭಾಗೀರಥೀ ತೀರಕ್ಕೆ ಹೊರಡಬಹುದು" ಎಂದು ಹೇಳಿ ಆ ರಾತ್ರಿ ಸುಖವಾಗಿ ಮಲಗಿ ನಿದ್ರಿಸಿದನು.

ಆ ರಾತ್ರಿಯು ಕಳೆದ ಕೂಡಲೆ ಪುರದ ಗೂಢಚಾರರು ಮರುದಿನ ರಾತ್ರಿ ರಾಮನ ಬಳಿಗೆ ಬೇರೆಬೇರೆ ಬಂದು ತಾವು ತಿಳಿದುಬಂದ ಸಂಗತಿಗಳನ್ನು ಹೇಳುತ್ತ, "ಎಲೈ ರಾಮನೇ! ನಿನ್ನ ಕೀರ್ತಿ ಪ್ರತಾಪಗಳನ್ನು ಎಲ್ಲೆಲ್ಲಿಯೂ ಎಲ್ಲರೂ ಹೊಗಳುತ್ತಿರುವರು" ಎಂದು ಹೇಳಿದರು. ಅದನ್ನು ಕೇಳಿ ಶ್ರೀರಾಮನು ಅವರಲ್ಲೊಬ್ಬನನ್ನು ಬಲವಾಗಿ ಚಂಡಿಸಿ, "ಎಲೋ! ರಾಜ್ಯದ ನಡೆವಳಿಕೆ ಹೇಗಿದೆ? ನಾನು, ನನ್ನ ಹೆಂಡತಿ, ನನ್ನ ಸಹೋದರರು—ಇವರ ವಿಷಯದಲ್ಲಿ ಜನರು ಆಡಿಕೊಳ್ಳುವ ಒಳ್ಳೆಯ, ಅಥವಾ ಕೆಟ್ಟ ಅಭಿಪ್ರಾಯಗಳೇನು? ರಾತ್ರಿಯಲ್ಲಿ ನೀನು ಕೇಳಿದ ಅಂತಹ ಸಂಗತಿಗಳೇನು? ಇದ್ದುದನ್ನು ಇದ್ದಹಾಗೆ ನೀನು ಸತ್ಯವಾಗಿ ಹೇಳು; ನಿನ್ನನ್ನು ದಂಡಿಸುವುದಿಲ್ಲ, ಹೆದರಬೇಡ" ಎಂದು ಕೇಳಿದನು. ಆ ಚಾರನು ನಗುತ್ತ ಶ್ರೀರಾಮನನ್ನು ಕುರಿತು, "ಎಲೈ ಶ್ರೀರಾಮನೇ! ನಿನ್ನ ದರ್ಶನಮಾತ್ರದಿಂದಲೇ ದುಷ್ಕೃತವು ಸುಟ್ಟು ಬೂದಿಯಾಗುವುದು. ಹೀಗಿರುವಾಗ, ನಿನ್ನಲ್ಲಿ ದುಷ್ಕೃತವು ತೋರುವುದೆಂದರೇನು? ಇದು ವಿಪರೀತವೇ ಸರಿ. ನಾವು ಪಾಪಕಾರ್ಯಗಳಲ್ಲಿಯೂ ಪಾಪಿಷ್ಠ ಪ್ರದೇಶಗಳಲ್ಲಿಯೂ ಓಡಾಡುವೆವು. ನಿನ್ನ ದರ್ಶನದಿಂದ ನಮ್ಮ ಪಾಪವೆಲ್ಲವೂ ಪರಿಹಾರವಾಗುವುದು. ಹೀಗಿದ್ದರೂ ಲೋಕಕ್ಕೆ ತಡೆಯಿಲ್ಲ; ನಾನು ಅರ್ಧ ರಾತ್ರಿಯಲ್ಲಿ ಸಂಚರಿಸುತ್ತಿರುವಾಗ ಒಂದು ವಿಚಿತ್ರವನ್ನು ಕಂಡೆನು:

ಈ ಪಟ್ಟಣದ ಯಾವನೋ ಒಬ್ಬ ಅಗಸನು ತನ್ನ ಹೆಂಡತಿಯ ಮೇಲೆ ಕೋಪಿಸಿಕೊಂಡು ಅವಳನ್ನು ತನ್ನ ಮನೆಯಿಂದ ಬಿಟ್ಟೋಡಿಸಿದನು. ಅವಳು ತೌರುಮನೆಗೆ ಸೇರಿ ಅಲ್ಲಿ ನಾಲ್ಕು ದಿನಗಳಿದ್ದಳು. ಬಳಿಕ ಅವಳ ತಂದೆಯು, "ಆಃ! ವೇದಾಗಮವಿರುದ್ಧವಾಗಿ ನಾನು ಮಗಳನ್ನು ನನ್ನ ಮನೆಯಲ್ಲಿಟ್ಟುಕೊಂಡೆನು; ಹೀಗಿರುವುದು ಸರಿಯಲ್ಲ; ಇವಳನ್ನು ಇವಳ ಗಂಡನ ಮನೆಗೆ ಕಳುಹಿಸಿಬಿಡುವೆನು. ಬಟ್ಟೆಯಲ್ಲಿರುವ ಕೊಳೆಯನ್ನು ನಾನು ನನ್ನ ಕೈಯಿಂದಲೇ ಕಳೆದು ಶುದ್ಧ ಮಾಡುವೆನಲ್ಲವೇ! ಹೀಗಿರುವಾಗ ನನ್ನ ಮಗಳನ್ನು ನನ್ನ ಮನೆಯಲ್ಲಿ ಸೇರಿಸಿಕೊಂಡು ಇದರಿಂದ ದೋಷಕ್ಕೊಳಗಾಗಿದ್ದರೂ ಇದನ್ನು ಶುದ್ಧಿಪಡಿಸಿಕೊಳ್ಳದಿರುವುದು ಯಾವ ಧರ್ಮ?" ಎಂದಾಲೋಚಿಸಿ ತನ್ನ ಮಗಳನ್ನು ಕರೆದುಕೊಂಡು ತನ್ನ ಸಹೋದರರೊಡನೆ ಕೂಡಿ ಅಳಿಯನ ಮನೆಗೆ ಹೋಗಿ ಅವಳನ್ನು ಅವನ ಮನೆಗೆ ಬಿಟ್ಟನು. ಅದಕ್ಕೆ ಅಳಿಯನು ಕೋಪಯುಕ್ತನಾಗಿ, ನಾಲಗೆಯಿಂದ ಕಟವಾಯನ್ನು ಸವರಿಕೊಳ್ಳುತ್ತ, ಕೈಯನ್ನು ಮೇಲಕ್ಕೆತ್ತಿಕೊಂಡು, ರಾಕ್ಷಸನ ಮನೆಯಲ್ಲಿದ್ದ ಸೀತೆಯನ್ನು ಕರೆತಂದು ತನ್ನ ಮನೆಗೆ ಸೇರಿಸಿಕೊಂಡ ಆ ಶ್ರೀರಾಮನೆಂದು ನೀವು ನನ್ನನ್ನು ತಿಳಿದಿರೋ? ಅವನು ದೊರೆಯಾಗಿರುವೆನೆಂದು ಅಧಿಕಾರ ದರ್ಪದಿಂದ ಯಾರ ಲಕ್ಷ್ಯವೂ ಇಲ್ಲದೆ ಹೀಗೆ ಮಾಡಿದ ಮಾತ್ರಕ್ಕೆ ನಾನು ಹಾಗೆ ಮಾಡುವೆನೇ?" ಎಂದು ಪುನಃಪುನಃ ಅದೇ ಮಾತನ್ನೇ ಮೈಮರೆತು ಹೇಳುತ್ತಿರಲು, ಇತರರು

ಯಾರೂ ಅದಕ್ಕೆ ಪ್ರತಿಯಾಗಿ ಮಾತನಾಡಿ ಸಮಾಧಾನ ಮಾಡಲಾರದೆಹೋದರು. ಆಗ ನಾನು ನನ್ನ ಮನಸ್ಸಿನಲ್ಲಿ, 'ಈ ರಜಕನು ಹೇಳುವ ಮಾತು ಸತ್ಯವಾಗಿರಬಹುದೇ? ಶ್ರೀರಾಮನು ಗಂಗಾ ನದೀ ತೀರದಲ್ಲೆಲ್ಲ ಯೂಪ ಸ್ತಂಭಗಳನ್ನು ಸ್ಥಾಪಿಸಿದ ಧರ್ಮಿಷ್ಠನು; ತಂದೆಯ ಮಾತನ್ನು ಮೀರದವನು; ರಾವಣನನ್ನು ಗೆದ್ದವನು; ಲೋಕಕ್ಕೆ ಆಶ್ರಯನಾದವನು; ಈ ಲೋಕದಲ್ಲಿ ಅವನಿಗೆ ಸಮಾನರು ಯಾರಿರುವರು? ಆತನು ಸದಾಚಾರ ಸಂಪನ್ನನು, ಗುಣಗಳಲ್ಲಿಯೂ ಆಶೆಯನ್ನು ತೊರೆದವನು; ಅಂತಹ ಸದ್ಗುಣ ಸಂಪನ್ನನಾದ ರಾಮನನ್ನು ಮೂಢನಾದ ಅಗಸನೇನು ಬಲ್ಲನು?' ಎಂದು ಚಿಂತಿಸುತ್ತ ನಿನ್ನ ಬಳಿಗೆ ಬಂದೆನು'' ಎಂದು ಹೇಳಲು, ಶ್ರೀರಾಮನು ಅವನ ಮಾತುಗಳೆಲ್ಲವನ್ನೂ ಕೇಳಿ ಅವನನ್ನು ಕಳುಹಿಸಿ, ತನ್ನಲ್ಲಿ, ''ಸೀತಾದೇವಿಯು ಅಗ್ನಿ ಶುದ್ಧಳಾಗಿದ್ದರೂ ಈ ಲೋಕ ನಿಂದೆಗೊಳಗಾದಳು. ಆದಕಾರಣ ಈಕೆಯನ್ನು ಪರಿತ್ಯಾಗ ಮಾಡಲೆ? ಬೇಡವೆ?'' ಎಂದು ಆಕೆಯನ್ನು ನೆನೆದು, ''ಹರಿಣಾಕ್ಷಿ ಯಾಗಿಯೂ ಪದ್ಮಾಸನೆಯಾಗಿಯೂ ಇರುವ ಸೀತೆಯನ್ನು, ಮುಖ್ಯವಾದ ಆಚಾರ ಪದ್ಧತಿಯನ್ನು ಬಿಡುವ ಶ್ರೋತ್ರಿಯನಂತೆಯೂ, ವೇದವನ್ನು ಬಿಟ್ಟ ಬ್ರಾಹ್ಮಣ ನಂತೆಯೂ ಹೇಗೆ ಬಿಡಲಿ?'' ಎಂದು ಚಿಂತಿಸುತ್ತಿರಲು, ಅಷ್ಟರಲ್ಲಿ ಬೆಳಗಾಯಿತು.

ಬಳಿಕ ಶ್ರೀರಾಮನು ಸೀತಾ ತ್ಯಾಗದಲ್ಲಿ ಮನಸ್ಸು ಮಾಡಿದವನಾಗಿ ಲಕ್ಷ್ಮಣ ಭರತ ಶತ್ರುಘ್ನರನ್ನು ಕರೆಯಿಸಲು, ಕೂಡಲೆ ಆ ಮೂರು ಮಂದಿಯೂ ರಾಮನನ್ನು ಸೇವಿಸಲು ಬಂದರು. ಅವರು, ದುಃಖಿತನಾಗಿಯೂ ಮನೋವ್ಯಾಕುಲತೆಯುಳ್ಳವ ನಾಗಿಯೂ ಇರುವ ರಾಮನನ್ನು ನೋಡಿ ಒಬ್ಬರಿಗೊಬ್ಬರು, ''ಇದೇನು! ಶ್ರೀರಾಮನು ನಾವು ಬೇಗ ಬರಲಿಲ್ಲವೆಂದೋ, ಪ್ರಾತಃಕಾಲದಲ್ಲಿ ಬ್ರಾಹ್ಮಣ ಪೂಜೆ ಯನ್ನೂ ನಿತ್ಯ ದಾನವನ್ನೂ ಮಾಡದೆ ಬಂದಿರುವೆವೆಂದೋ, ಪ್ರಾತಃಕಾಲದಲ್ಲಿ ಬೇಗನೆ ನಾವು ಎಚ್ಚರಗೊಂಡಿರಲಿಲ್ಲವೆಂದೋ, ನಾವು ಬಂದ ಕೂಡಲೆ ನಮಸ್ಕರಿಸಲಿಲ್ಲ ವೆಂದೋ, ಮತ್ತೆ ಯಾವ ಕಾರಣದಿಂದಲೋ ನಮ್ಮ ಮೇಲೆ ಕೋಪಿಸಿಕೊಂಡಿರು ವನೋ ಏನೊ!'' ಎಂದೆಂದುಕೊಳ್ಳುತ್ತ ಆತನ ಸಮೀಪಕ್ಕೆ ಬಂದು ನಮಸ್ಕರಿಸಿ, ''ಎಲೈ ಶ್ರೀರಾಮನೇ! ಯಾವಾಗಲೂ ನಿನ್ನಿಷ್ಟದಂತೆ ನಡೆಯುತ್ತ, ನಮ್ಮ ಕಾರ್ಯ ಗಳೆಲ್ಲವನ್ನೂ ನಿನಗೆ ನಿವೇದಿಸುತ್ತ, ನಿನ್ನ ದರ್ಶನದಲ್ಲಿ ಕುತೂಹಲವುಳ್ಳವರಾಗಿ ಬಂದಿರುವ ನಮ್ಮನ್ನು ನೀನು ಆದರಿಸದಿರಲು ಕಾರಣವೇನು?'' ಎಂದು ಕೇಳಿದರು. ಅವರ ಮಾತನ್ನು ಕೇಳಿ ಶ್ರೀರಾಮನು ಮೆಲ್ಲಗೆ ಹೀಗೆ ಹೇಳಿದನು:—

ಇಂತು ರಾಮ ವಾಕ್ಯವೆಂಬ ಇಪ್ಪತ್ತಾರನೆಯ ಅಧ್ಯಾಯವು.

---

## ಇಪ್ಪತ್ತೇಳನೆಯ ಅಧ್ಯಾಯ

ಶ್ರೀರಾಮನು ತನ್ನ ತಮ್ಮಂದಿರನ್ನು ಕುರಿತು, ಗೂಢಚಾರನು ರಾತ್ರಿಯಲ್ಲಿ ಹೇಳಿದ ಮಾತನ್ನು ತಿಳಿಸಿ, ''ಪಾಷಂಡರು ಶ್ರುತಿಯನ್ನು ನಿಂದಿಸುವಂತೆ ಜನರು ಸೀತೆಯನ್ನು ನಿಂದಿಸುತ್ತಿರುವರು. ಆದಕಾರಣ, ಲೋಕಾಪವಾದ ಭೀತನಾದ ನಾನು,

ಸಂಸಾರಭಯ ಭೀತನಾದ ಯೋಗಿಯು ಮಮತೆಯನ್ನು ಬಿಡುವಂತೆ, ಸೀತೆಯನ್ನು ಪರಿತ್ಯಾಗ ಮಾಡುತ್ತೇನೆ'' ಎಂದು ಹೇಳಲು, ಅವನ ಮೂವರು ತಮ್ಮಂದಿರೂ ವಜ್ರಾಯುಧವು ಹೊಡೆದಂತಾಗಿ, ಆ ಮಾತನ್ನು ಕೇಳಿ ರೋಮಾಂಚವನ್ನು ಹೊಂದಿದರು. ಭರತನು ಶ್ರೀರಾಮನನ್ನು ಕುರಿತು, ''ಎಲೈ ರಾಮಚಂದ್ರನೇ! ಗೋವನ್ನು ಚಂಡಾಲರ ಅಧೀನದಿಂದ ಬಲಾತ್ಕಾರವಾಗಿ ತಪ್ಪಿಸಿ ತಂದು ಬಳಿಕ ಅದು ದುಸ್ಸಂಗದಲ್ಲಿದ್ದುದರಿಂದ ತ್ಯಾಜ್ಯವಾದುದೆಂದು ಭಾವಿಸಿ ಅದನ್ನು ಕಾಡಿಗಟ್ಟುವವನಂತೆ ರಾಕ್ಷಸನ ವಶದಿಂದ ತಪ್ಪಿಸಿ ತಂದ ಈ ಸೀತೆಯನ್ನು ಈಗ ಬಿಡುವುದಕ್ಕೆ ಯತ್ನಿಸುವ ನಿನ್ನ ಕೃಪಾಳುತ್ವವು ಸ್ತೋತ್ರಾರ್ಹವಾದುದೇ ಸರಿ! ಹಿಂದೆ, ಉರಿಯು ಆಕಾಶವನ್ನು ವ್ಯಾಪಿಸುವಂತೆ ಚಿತೆಯನ್ನು ಹೊತ್ತಿಸಿ ಸೀತಾದೇವಿಯು ಅಗ್ನಿ ಪ್ರವೇಶ ಮಾಡಿದಾಗ, ತಂದೆಯಾದ ದಶರಥನು ಆಕಾಶದಲ್ಲಿ ವಿಮಾನಾರೂಢನಾಗಿದ್ದು, ''ಎಲೈ ಮಗನೇ! ಪತಿವ್ರತೆಯಾದ ಈಕೆಯು ಶುದ್ಧಳೆಂದು ತಿಳಿ. ಇವಳ ಸದಾಚಾರದಿಂದ ನಮ್ಮ ಕುಲವೆಲ್ಲವೂ ಪವಿತ್ರವಾಯಿತು. ಸೀತಾದೇವಿಯು ನಮಗೆ ಸೊಸೆಯಾದುದರಿಂದ, ಪುತ್ರ ಶೋಕದಿಂದ ಮೃತರಾದವರೆಲ್ಲರಿಗೂ ಉತ್ತಮ ಗತಿಯುಂಟಾಯಿತು'' ಎಂದು ನಿನಗೆ ಹೇಳಿದ ಮಾತುಗಳನ್ನು ನೀನು ಮರೆತೆ. ಬ್ರಹ್ಮಾದಿ ದೇವತೆಗಳು ನಿನ್ನನ್ನು ಕುರಿತು, ''ಅಯ್ಯಾ ರಾಮಚಂದ್ರನೇ! ಸೀತಾದೇವಿಯು ಅಗ್ನಿಶುದ್ಧಳಾಗಿ ಅರಳು ಮಗ್ಗಿನ ಹೂವಿನ ದಂಡೆಯಂತಿರುವಳು ಎಂದು ಹೇಳಿದುದನ್ನು ಜ್ಞಾಪಿಸಿಕೊ. ಹಾಗಿದ್ದರೂ ನಿನ್ನ ಮನಸ್ಸು ಕಠಿನವಾಗಿರುವಂತೆ ಕಾಣುತ್ತದೆ'' ಎಂದನು.

ಭರತನ ಮಾತನ್ನು ಕೇಳಿ ಶ್ರೀರಾಮನು ಅವನನ್ನು ಕುರಿತು, ''ತಮ್ಮಾ! ನೀನು ಹೇಳಿದುದು ಸತ್ಯ: ಜಾನಕಿಯು ಶುದ್ಧಳು. ಆದರೂ, ಲೋಕಾಪವಾದವು ತಡೆಯಲಶಕ್ಯವಾದುದು. ಅದು ದೊರೆಗಳ ಯಶಸ್ಸನ್ನು ಹಾಳು ಮಾಡುವುದು. ಕೀರ್ತಿಹೀನರಾಗಿ ಬದುಕುವವರು ಸತ್ತವರಂತೆಯೇ ಸರಿ. ಲೋಕದಲ್ಲಿ ಪುರೂರವ ಹರಿಶ್ಚಂದ್ರ ನಹುಷ ಪೃಥು ಮೊದಲಾದ ರಾಜಶ್ರೇಷ್ಠರು ಪ್ರಖ್ಯಾತರಾಗಿ ಯಶಸ್ಸನ್ನು ಪಡೆದಿರುವರು; ಮಾಂಧಾತ ಸಗರ ಅಂಬರೀಷ ಭಗೀರಥ ಋತುಪರ್ಣ ನಳ ಮೊದಲಾದವರು ಪುಣ್ಯಕೀರ್ತಿಯಿಂದಲೇ ಪ್ರಸಿದ್ಧಿಗೆ ಬಂದರು. ಮನುಷ್ಯರಿಗೆ ಕೀರ್ತಿಗೆ ಸಮಾನವಾದುದು ಯಾವುದೂ ಇಲ್ಲ. ಅದರಿಂದಲೇ ಪಾಪ ಪರಿಹಾರವೂ ಪುಣ್ಯಪ್ರಾಪ್ತಿಯೂ ಸ್ವರ್ಗಾದಿ ಪುಣ್ಯಲೋಕಗಳೂ ಉಂಟಾಗುವುವು. ಲೋಕದಲ್ಲಿ ಯಾವನ ಅಪಕೀರ್ತಿಯು ಜನರಲ್ಲಿ ಹರಡುವುದೋ ಅವನ ಜನ್ಮವೂ ಜೀವನವೂ ವ್ಯರ್ಥವೇ ಸರಿ. ಒಂದು ಮುಹೂರ್ತ ಕಾಲವಾದರೂ ಸದಾಚಾರ ಸಂಪನ್ನನೆಂದೆನಿಸಿಕೊಂಡು ಬದುಕಿದ್ದರೆ ಸಾಕು. ಅಪಕೀರ್ತಿಯನ್ನು ಪಡೆದು ಯುಗಾಂತರದವರೆಗೂ ಜೀವಿಸಿದರೂ ಪ್ರಯೋಜನವಿಲ್ಲ. ಕಾಗೆ ಗೂಬೆ ಮೊದಲಾದ ಹಕ್ಕಿಗಳು ಬಹು ಕಾಲ ಬದುಕಿರುವುವು. ಅದರಿಂದೇನು ಫಲ? ಕೀರ್ತಿಯನ್ನು ಪಡೆಯದವನ ಬಾಳೂ ಹಾಗೆಯೇ ಸರಿ. ತನಗೆ ತನ್ನ ಮಕ್ಕಳು ಹೆಂಡತಿ ಬಂಧುಗಳು ಮೊದಲಾದ ಯಾರಿಂದ ಅಪಯಶಸ್ಸು ಬಂದರೂ, ತನಗೆ ಪ್ರಾಣಾಪ್ತರಾಗಿದ್ದರೂ, ಅವರನ್ನು ಬಿಟ್ಟುಬಿಡಬೇಕು.

ಪೂರ್ವದಲ್ಲಿ ಶಿಬಿಯು ತನ್ನ ಮಾತನ್ನುಳಿಸಿಕೊಂಡು ಕೀರ್ತಿಯನ್ನು ಸಂಪಾದಿಸಿಕೊಳ್ಳುವುದಕ್ಕಾಗಿ ವಿಷ್ಣುವಿಗೆ ತನ್ನ ದೇಹಮಾಂಸವನ್ನು ಕೊಟ್ಟುಬಿಟ್ಟನೆಂದು ಪ್ರಸಿದ್ಧವಾಗಿದೆ. ಹಾಗೆಯೇ, ಕರ್ಣನು ಇಂದ್ರನಿಗೆ ಕವಚವನ್ನು ಕೊಟ್ಟನು. ಅದರಂತೆಯೇ, ಜೀಮೂತವಾಹನನು ಗರುಡನಿಗೆ ತನ್ನ ಪ್ರಾಣವನ್ನೇ ಕೊಟ್ಟನು. ದಧೀಚಿಯು ತನ್ನ ಬೆನ್ನಿನ ಮೂಳೆಯನ್ನು ಕೊಟ್ಟು ಕೀರ್ತಿವಂತನಾದನು. ಆದಕಾರಣ, ಹಾವು ಹಳೆಯ ಪರೆಯನ್ನು ಬಿಡುವಂತೆ, ಸೀತೆಯನ್ನು ಬಿಟ್ಟುಬಿಡುವೆನು. ಎಲೈ ಭರತನೇ! ನಾನು ಬದುಕಬೇಕೆಂಬ ಅಪೇಕ್ಷೆಯು ನಿನಗಿದ್ದ ಪಕ್ಷದಲ್ಲಿ ನನ್ನ ಮಾತಿಗೆ ನೀನು ಬದಲು ಹೇಳಬೇಡ'' ಎಂದನು.

ಅಷ್ಟರಲ್ಲಿ ಲಕ್ಷ್ಮಣನು ಕೋಪದಿಂದ ಕೆರಳಿ, ಕೈಯನ್ನು ಕೊಡಹುತ್ತ, ಹಾವಿನಂತೆ ಬುಸುಗುಟ್ಟುತ್ತ, ಕೈಯನ್ನು ಕೈಯಿಂದ ಹಿಸುಕಿಕೊಳ್ಳುತ್ತ, ದುಃಖದಿಂದ ಕಣ್ಣುಗಳಲ್ಲಿ ಬಿಸಿ ನೀರನ್ನು ಸುರಿಸುತ್ತ, ರಾಮನನ್ನು ಕುರಿತು, ''ಆಃ! ಲೋಕಾಪವಾದಕ್ಕಾಗಿ ಸೀತೆಯನ್ನು ಬಿಡಬಹುದೇ? ಹೆಂಡತಿಯ ಜಗಳಕ್ಕಾಗಿ ಯಾರಾದರೂ ತಾಯಿಯನ್ನು ಬಿಡುವರೆ? ಜಗನ್ಮಾತೆಯಾದ ಸೀತೆಯನ್ನು ನೀನು ಪರಿತ್ಯಾಗ ಮಾಡಲು ಹೇಗೆ ಇಚ್ಛಿಸುತ್ತೀಯೆ? ಸೀತೆಯನ್ನು ದೂಷಿಸುವ ಪಾಪಿಗಳನ್ನು ನಾನು ಈಗಲೇ ಸಂಹರಿಸುವೆನು. ಅರ್ಧ ಅರ್ಧವಾಗಿ ತಲೆಯನ್ನು ಕತ್ತರಿಸಿಕೊಳ್ಳುವ ಮ್ಲೇಚ್ಛರಿಗೆ ಗೌರವಾಸ್ಪದರಾದ ಯವನರು ವೇದವನ್ನು ದೂಷಿಸುವರು. ಬ್ರಾಹ್ಮಣರು ಅದನ್ನು ತ್ಯಾಗಮಾಡುವರೇ? ಇದನ್ನು ವಿಚಾರಮಾಡಿ ನೋಡು'' ಎಂದನು. ಆಗ ಶತ್ರುಘ್ನನು ಕುಪಿತನಾಗಿ ರಾಮನನ್ನು ಕುರಿತು, ''ಎಲೈ ರಾಮನೇ! ನಾನು ಪ್ರಾಣಗಳನ್ನು ಬಿಡುವೆನೆಂದು ನೀನು ಹೇಗೆ ಹೇಳಿದೆ? ನೀನು ಬಿಟ್ಟ ಪ್ರಾಣಗಳು ದೇವತ್ವವನ್ನು ಹೊಂದುವುವು; ನೀನೂ ಅಮರನಾಗುವೆ. ಹಾಗೆಯೇ, ನಿನ್ನನ್ನನುಸರಿಸಿಕೊಂಡಿರುವ ಪಾಪಿಗಳು ಕೂಡ ದುಃಖವೂ ರೋಗವೂ ಇಲ್ಲದವರಾಗುವರು. ಇನ್ನು ಸೀತೆಯ ವಿಷಯವನ್ನು ಹೇಳಬೇಕಾದುದೇನು? ಒಂದು ವೇಳೆ ನೀನು ಮೃತನಾದರೂ ಸೀತೆಯು ಬದುಕಿಸಬಲ್ಲಳು. ಆಕೆಯು ಮೃತಳಾದರೆ ನೀನು ಹೇಗೆ ಬದುಕಿಸುವೆ?'' ಎಂದು ಹೇಳಲು, ಶ್ರೀರಾಮನು ಅದನ್ನು ಕೇಳಿ, ಮೆಲ್ಲಮೆಲ್ಲಗೆ, ''ಎಲೈ ಪುರುಷಶ್ರೇಷ್ಠನೇ! ಲೋಕಾಪವಾದ ಭೀತಿಯಿಂದ ನಾನು ನನ್ನನ್ನೂ ನಿಮ್ಮನ್ನೂ ಬಿಡಲೇ ಬೇಕಾಗುವುದು; ಇನ್ನು ಸೀತೆಯ ಸುದ್ದಿಯೇನು?'' ಎಂದನು.

ಈ ಪ್ರಕಾರವಾಗಿ ಹೇಳಿ ರಾಮನು ಸೀತಾ ಪರಿತ್ಯಾಗಕ್ಕೆ ಪ್ರಯತ್ನಪಡುತ್ತಿರಲು, ಭರತ ಶತ್ರುಘ್ನರು ತಮ್ಮ ಮನೆಗೆ ಹೊರಟುಹೋದರು; ದುಃಖಾಟವಿಯಲ್ಲಿ ಪ್ರವೇಶಿಸಿರುವ ರಾಮನನ್ನು ಬಿಟ್ಟು ಲಕ್ಷ್ಮಣನು ಹೊರಡದೆ ಅಲ್ಲಿಯೇ ಇದ್ದನು. ಶ್ರೀರಾಮನು ಲಕ್ಷ್ಮಣನೊಬ್ಬನೇ ಇರುವುದನ್ನು ಕಂಡು ಅವನನ್ನು ಕುರಿತು, ''ಎಲೈ ಲಕ್ಷ್ಮಣನೇ! ಸ್ವಲ್ಪವೂ ಹಿಂದು ಮುಂದು ನೋಡದೆ ನನ್ನ ತಲೆಯನ್ನು ಕತ್ತಿಯಿಂದ ಕತ್ತರಿಸು; ಅಥವಾ, ಸೀತೆಯನ್ನು ಭಾಗೀರಥೀ ತೀರಕ್ಕೆ ಬೇಗ ಬಿಟ್ಟುಬಾ.

ಸೀತಾ ಪರಿತ್ಯಾಗ ದೋಷವು ನನಗಲ್ಲದೆ ನಿನಗಲ್ಲ. ಎಲೈ ಸಹೋದರನೇ! ನಿನ್ನ ಕಾಲ್ಗೆರಗುವೆನು; ಭಾಗೀರಥೀ ತೀರದಲ್ಲಿ ಸೀತೆಯನ್ನು ಬಿಟ್ಟುಬಾ" ಎಂದನು. ಅದನ್ನು ಕೇಳಿ ಲಕ್ಷ್ಮಣನು ನಾಚಿಕೆಯಿಂದ ತಲೆಬಗ್ಗಿಸಿಕೊಂಡು ನಿಟ್ಟುಸಿರನ್ನು ಬಿಡುತ್ತ, ಸಂದೇಹಾಸ್ಪದವಾದ ಮನಸ್ಸುಳ್ಳವನಾಗಿ, ಹಾಗೆಯೇ ತನ್ನಲ್ಲಿ, "ಹಿರಿಯರ ಆಜ್ಞೆಯು ದೊಡ್ಡದೆಂದು ಶಾಸ್ತ್ರವಿದೆ. ಪೂರ್ವದಲ್ಲಿ ಪರಶುರಾಮನು ತಂದೆಯ ಮಾತಿನಿಂದ ತನ್ನ ತಾಯಿಯ ತಲೆಯನ್ನು ಕೊಡಲಿಯಿಂದ ಕಡಿದನು. ಆದಕಾರಣ ರಾಮನ ಮಾತನ್ನು ನಡೆಯಿಸುವುದೇ ಸರಿ" ಎಂದು ನಿಶ್ಚಯಿಸಿಕೊಂಡು, ಕುದುರೆಗಳನ್ನು ರಥಕ್ಕೆ ಹೂಡಿ ತೆಗೆದುಕೊಂಡು ಬಾರೆಂದು ಸಾರಥಿಗೆ ಹೇಳಿ, ಅವನು ತಂದ ರಥವನ್ನು ಹತ್ತಿ ಸೀತಾದೇವಿಯ ಮನೆಗೆ ಹೊರಟನು. ಕುದುರೆಗಳು ನಡೆಯುತ್ತ ನೆಲಕ್ಕೆ ಬಿದ್ದುವು; ಚಾವಟಿಯನ್ನು ತೆಗೆದುಕೊಂಡು ಹೊಡೆಯಲು, ಮೆಲ್ಲಮೆಲ್ಲಗೆ ನಡೆದುವು. ಲಕ್ಷ್ಮಣನು ಸೀತಾದೇವಿಯ ಮನೆಯ ಬಳಿಗೆ ಬಂದು ರಥದಿಂದಿಳಿದು ಮನೆಯೊಳಕ್ಕೆ ಹೋಗಿ ಅಡ್ಡಮೋರೆಯನ್ನು ಹಾಕಿಕೊಂಡು ಆಕೆಗೆ ನಮಸ್ಕಾರ ಮಾಡಿದನು. ಸೀತಾದೇವಿಯು ಲಕ್ಷ್ಮಣನಿರುವ ರೀತಿಯನ್ನು ನೋಡಿ, "ಎಲೈ ಲಕ್ಷ್ಮಣನೇ! ರಾಜೀವ ಲೋಚನನಾಗಿಯೂ, ಇಷ್ಟಾರ್ಥ ಪ್ರದನಾಗಿಯೂ ಇರುವ ನನ್ನ ಪತಿಯು ರಾತ್ರಿ ನಾನು ನಗುತ್ತ ಕೇಳಿಕೊಂಡುದನ್ನು ನಡೆಯಿಸಿಕೊಟ್ಟನು. ಆದರೆ ನಿನ್ನನ್ನು ಕಾಣದೆ ಇದ್ದುದರಿಂದ, ಕೊಟ್ಟರೂ ವ್ಯರ್ಥವಾಗಿದ್ದಿತು. ಈಗ ನೀನು ಆತನ ಮಾತನ್ನುಳಿಸುವುದಕ್ಕಾಗಿ ಬಂದೆ. ಶ್ರೇಯೋಭಿವೃದ್ಧಿಗಾಗಿ ಮುನಿಗಳಿಗೂ ಮುನಿಪತ್ನಿಯರಿಗೂ ಕೊಡುವುದಕ್ಕಾಗಿ ವಿಚಿತ್ರ ವಸ್ತ್ರಗಳನ್ನೂ ಚಂದನಾಗುರು ಮೊದಲಾದ ಸುಗಂಧ ವಸ್ತುಗಳನ್ನೂ ತೆಗೆದುಕೊಳ್ಳುವೆನು" ಎಂದಳು. ಲಕ್ಷ್ಮಣನು ಆಕೆಯ ಮಾತನ್ನು ಕೇಳಿ ಮನನೊಂದು ಕಣ್ಣೀರನ್ನು ಸುರಿಸುತ್ತ, "ಹಾಗೆಯೇ ಮಾಡು" ಎಂದನು. ಹೀಗೆ ಲಕ್ಷ್ಮಣನು ಅಣ್ಣನ ಮಾತಿಗೆ ಕಟ್ಟುಬಿದ್ದು ಪರವಶನಾದನು.

ಬಳಿಕ ಸೀತಾದೇವಿಯು ದುಕೂಲ ವಸ್ತ್ರಗಳನ್ನೂ ಕೃಷ್ಣಾಜಿನಗಳನ್ನೂ ಬಗೆಬಗೆಯ ಭಕ್ಷ್ಯಗಳನ್ನೂ ರತ್ನ ಖಚಿತವಾದ ಶ್ರೀರಾಮನ ಪಾದುಕೆಗಳನ್ನೂ ತೆಗೆದು ರಥದಲ್ಲಿಟ್ಟುಕೊಂಡು ಅತ್ತೆಯನ್ನು ಕೇಳುವುದಕ್ಕಾಗಿ ಹೊರಟಳು. ರಾಮನ ತಾಯಿಯಾದ ಕೌಸಲ್ಯೆಗೆ ಸೀತೆಯು ನಮಸ್ಕರಿಸಿ, "ಭಾಗೀರಥೀ ತೀರದಲ್ಲಿ ವಿಹರಿಸಬೇಕೆಂದು ನನಗೆ ಬಯಕೆಯುಂಟಾಯಿತು; ಅದನ್ನು ಸಲಿಸುವುದಕ್ಕಾಗಿ ನನ್ನ ಮೈದುನನಾದ ಲಕ್ಷ್ಮಣನು ಬಂದಿರುವನು. ನಿಮ್ಮ ಆಜ್ಞೆಯಾದರೆ ಆ ವನಕ್ಕೆ ಪ್ರಯಾಣ ಮಾಡುವೆನು" ಎಂದು ಕೇಳಿದಳು. ಅದನ್ನು ಕೇಳಿ ಕೌಸಲ್ಯೆಯು, "ಎಲೌ ಕೋಮಲಾಂಗಿಯಾದ ಸೀತೆಯೇ! ಬಹು ಕಾಲಕ್ಕೆ ಸಿಕ್ಕಿರುವ ರಾಜ್ಯ ಸುಖವನ್ನು ಬಿಟ್ಟು, ಮುಳ್ಳುಗಿಡಗಳಿಂದಲೂ ಹಂದಿ ಹುಲಿ ಸಿಂಹ ಮೊದಲಾದ ಕ್ರೂರ ಮೃಗಗಳಿಂದಲೂ ತುಂಬಿ, ಗಾಳಿ ಬಿಸಿಲು ಮಳೆಗಳ ಬಾಧೆಯಿಂದ ಕೂಡಿ, ಕಠಿನ ಹೃದಯರು ಪ್ರವೇಶಿಸುವುದಕ್ಕೆ ಅರ್ಹವಾದ ವನವನ್ನು ನೀನು ಹೇಗೆ ಪ್ರವೇಶಿಸುತ್ತೀಯೆ?

ರಾಮನನ್ನು ಬಿಟ್ಟು ನೀನು ಅರಣ್ಯಕ್ಕೆ ಹೋಗುವುದು ಯುಕ್ತವಾದುದಲ್ಲ. ಪ್ರಾತಃ ಕಾಲದಲ್ಲಿಯೇ ನಿನ್ನ ಮುಖವು ಮಲಿನವಾಗಿ ಆಯಾಸದಿಂದ ತುಟಿಗಳು ಒಣಗುತ್ತವೆ" ಎಂದಳು. ಅದನ್ನು ಕೇಳಿ ಸೀತಾದೇವಿಯು ನನ್ನ ಪತಿಯು ವನವಾಸ ಮಾಡುತ್ತ, ಸರ್ವದಾ ಶತ್ರುಮರ್ದನ ಮಾಡಿ, ಯುದ್ಧದಲ್ಲಿ ಅನೇಕ ಕೋಟಿ ಕಪಿಗಳನ್ನು ಬದುಕಿಸಿದ್ದಾನೆ. ಅವನನ್ನು ನೆನೆಯುವುದರಿಂದ ಕಾಡಿನಲ್ಲಿ ನನಗೆ ಕಷ್ಟ ಉಂಟಾಗಲಾರದು. ರಾಮನಾಮವನ್ನು ಜಪಿಸುತ್ತಿರುವ ನನ್ನ ಓಷ್ಠ ಪುಟಗಳು ಒಣಗುವುದುಂಟೇ? ನಾನು ಕರಣ ತ್ರಯದಿಂದಲೂ ನಿಮ್ಮ ಸೇವೆಯನ್ನು ಮಾಡಿದ್ದೇನೆ; ಆದಕಾರಣ ನನಗೆ ಕಾಡಿನಲ್ಲಿ ಬಾಧೆಯುಂಟಾಗದು. ಇಗೋ! ನಿಮಗೆ ನಮಸ್ಕರಿಸುವೆನು" ಎಂದು ಹೇಳಿ ಆಕೆಯನ್ನು ಸಮಾಧಾನಪಡಿಸಿ, ಪ್ರದಕ್ಷಿಣೆ ಮಾಡಿ ಕೈಕೇಯಿ ಸುಮಿತ್ರೆಯರ ಅಪ್ಪಣೆಯನ್ನು ಕೇಳಿ, ಅಲ್ಲಿಂದ ಹೊರಟು, ಶೂರನಾದ ಲಕ್ಷ್ಮಣನು ರಥವನ್ನು ಸಿದ್ಧಪಡಿಸಿ ಕಾದುಕೊಂಡಿದ್ದ ಸ್ಥಳಕ್ಕೆ ಬಂದು, ಮನಸ್ಸಿನಲ್ಲಿ ಬಹಳ ಹರ್ಷಗೊಳ್ಳುತ್ತ ರಥವನ್ನು ಹತ್ತಿದಳು. ಲಕ್ಷ್ಮಣನು ಗದ್ಗದ ಧ್ವನಿಯುಳ್ಳವನಾಗಿ ಸಾರಥಿಯನ್ನು ಕುರಿತು, "ಎಲೈ ಸಾರಥಿಯೇ! ಚಾವಟಿಯಿಂದ ಹೊಡೆದು ಕುದುರೆಗಳನ್ನು ಬೇಗ ನಡೆಯಿಸು" ಎಂದನು. ಅದಕ್ಕೆ ಸಾರಥಿಯು, "ಎಲೈ ಪುರುಷ ಶ್ರೇಷ್ಠನೇ! ನಾನು ಈ ಕುದುರೆಗಳ ಅಭಿಪ್ರಾಯವನ್ನು ಚೆನ್ನಾಗಿ ಬಲ್ಲೆನು: ಈ ಕುದುರೆಗಳು ಮೂಗನ್ನು ಮೇಲಕ್ಕೆತ್ತಿಕೊಂಡಿರುವುದರಿಂದ, 'ನಾವು ಬೇಗನೆ ಓಡಿದರೆ, ಸೀತೆಯ ದುಃಖದಿಂದ ಮೊದಲೇ ವ್ಯಥೆಪಡುತ್ತಿದ್ದ ಭೂಮಿಯು ನಮ್ಮ ಕಾಲಿನ ತುಳಿತದಿಂದ ಮತ್ತಷ್ಟು ವ್ಯಥೆಪಡುವಳೋ ಏನೋ! ನಾವು ಯುದ್ಧಕ್ಕಾಗಿ ಉತ್ಸಾಹದಿಂದೋಡುವುದು ಶ್ಲಾಘ್ಯವಾದುದು; ಇಂತಹ ಅಮಾರ್ಗದಲ್ಲಿ ನಡೆಯುವುದಕ್ಕಲ್ಲ' ಎಂದು ಮನಸ್ಸಿನಲ್ಲಿ ತಿಳಿದು, ಅದನ್ನು ನನಗೆ ಹೇಳುತ್ತಿವೆಯೋ ಎಂಬಂತಿದೆ. ಆದರೂ, ಈಗ ಬೇಗ ನಡೆಯಿಸುವೆನು; ನನ್ನ ಹಸ್ತಲಾಘವವನ್ನು ನೋಡು" ಎಂದು ಹೇಳಿ, ಹಗ್ಗಗಳನ್ನೆಳೆದು ಎರಡು ಕೈಗಳಿಂದಲೂ ಕುದುರೆಗಳ ಬೆನ್ನನ್ನು ತಟ್ಟಿ, ಚಾವಟಿಯನ್ನು ತೆಗೆದುಕೊಂಡು ಕುದುರೆಗಳನ್ನು ಬೇಗ ನಡೆಯಿಸಿದನು.

ಇಂತು ಲಕ್ಷ್ಮಣ ಪ್ರಸ್ಥಾನವೆಂಬ ಇಪ್ಪತ್ತೇಳನೆಯ ಅಧ್ಯಾಯವು.

---

# ಪತ್ರ ವ್ಯವಹಾರ

## ಅಸಗ, ಪಂಪ, ಪೊನ್ನ

ಪಂಪಭಾರತದ ಸಂಪಾದಕರವರ ಸ॥ ಕ್ಕೆ.

ಕೃತಾನೇಕ ನಮಸ್ಕಾರ ವಿನಂತಿ ವಿಜ್ಞಾಪನಾ.

ಹಿಂದೆ ಬರೆದ ಪತ್ರದಲ್ಲಿ* ಅಸಗನ ವರ್ಧಮಾನ ಪುರಾಣ, ಶಾಂತಿ ಪುರಾಣಗಳ ಪ್ರಶಸ್ತಿ ಶ್ಲೋಕಗಳನ್ನು ಉದ್ಧೃತ ಮಾಡಿ ಕಳುಹಿಸಿದ್ದೇವೆ. ವರ್ಧಮಾನ ಪುರಾಣದ—

ಸಂವತ್ಸರೇ ದಶ ನವೋತ್ತರ ವರ್ಷಯುಕ್ತೇ ।
ಭಾವಾದಿಕೀರ್ತಿ ಮುನಿನಾಯಕ ಪಾದಮೂಲೇ ॥
ಮೌದ್ಗಲ್ಯ ಪರ್ವತ ನಿವಾಸ ವನಸ್ಥ ಸಂಪತ್ ।
ಸಚ್ಛ್ರಾವಿಕಾ ಪ್ರಜನಿತೇ ಸತಿ ವಾಮುಮತ್ವೇ ॥

ಎಂಬ ಪ್ರಶಸ್ತಿ ಶ್ಲೋಕದಿಂದ, ಆ ಗ್ರಂಥವನ್ನು ಅಸಗನು ಶಕೆ ೯೧೦ (ಕ್ರಿ. ಶ. ೯೮೮) ರಲ್ಲಿ ಮುಗಿಸಿದಂತೆ ಗೊತ್ತಾಗುವುದು. ಮತ್ತು—

ವಿದ್ಯಾ ಮಯಾ ಪ್ರಪಠಿತೇತ್ಯಸಗಾಹ್ವಯೇನ ।
ಶ್ರೀನಾಥ ರಾಜ್ಯಮಖಿಲಂ ಜನತೋಪಕಾರಿ ॥
ಪ್ರಾಪ್ಯೈವ ಚೋಡ ವಿಷಯೇ ವಿರಲಾ ನಗರ್ಯಾಂ ।
ಗ್ರಂಥಾಷ್ಟಕಂ ಚ ಸಮಕಾರಿ ಜಿನೋಪದಿಷ್ಟಂ ॥

ಎಂಬ ಶ್ಲೋಕದಿಂದ, ಅದಕ್ಕೂ ಪೂರ್ವದಲ್ಲಿ ಅಸಗನು ಎಂಟು ಗ್ರಂಥಗಳನ್ನು ರಚಿಸಿದಂತೆ ತಿಳಿಯುವುದು.

ಕನ್ನಡ ಕವಿತೆಯೊಳಸಗಂ।ಗಂ ನೂರ್ಮಡಿ ರೇಖೆಗಗ್ಗಳಂ

ಎಂದು ಪೊನ್ನನೂ,

ಪೊಸತೆನಿಸಿ ದೇಸೆಯುಂ ನವ ।
ರಸವೆಸೆಯಲ್ಕೊಳ್ಳುವೆತ್ತ ಮಾರ್ಗದಿನಿಳೆಗೇ ॥
ನೆಸೆದುವೊ ಸುಕವಿಗಳೆನೆ ನೆಗ ।
ಅಸಗನ ಮನಸಿಜನ ಚಂದ್ರಭಟ್ಟನ ಕೃತಿಗಳ್ ॥

* ಕ. ಸಾ. ಪರಿಷತ್ಪತ್ರಿಕೆ, XVII. ೨, ಪುಟ ೧೫೨.

ಎಂದು ದುರ್ಗಸಿಂಹನೂ,

ಅಸಗನ ದೇಸೆ.............ಶೋ।
ಭಿಸೆ ನೆಲಸಿರ್ಕೆ ಧಾರಿಣಿ ಮನಂಗೊಳೆ ಮತ್ಕೃತಿಯೊಳ್ ನಿರಂತರಂ ||

ಎಂದು ನಯಸೇನನೂ,

ಅಸಗನ......ಸುಮಾರ್ಗಮಿದಜಿಕೊಳೆ ಲಕ್ಷ್ಯಂ ||

ಎಂದು ಕೇಶಿರಾಜನೂ ಹೇಳಿರುವುದರಿಂದ, ಆ ಎಂಟು ಗ್ರಂಥಗಳಲ್ಲಿ ಕೆಲವಾದರೂ ಕನ್ನಡದಲ್ಲಿ ಇದ್ದಿರಬೇಕೆಂಬುದಾಗಿ ತೋರುವುದು.

ಪೊನ್ನನು ಶಾಂತಿ ಪುರಾಣದಲ್ಲಿ—

ಆದಿ ಜಿನೇಂದ್ರ ಪಾದ ಕಮಲ ಭ್ರಮರಂ ಜಿನಚಂದ್ರ ದೇವನು।
ತ್ಪಾದಿತ ಪೂಜ್ಯ ಪಾದ ಚರಿತಂ ಜಯ ವಾದ್ಯಕಳಂಕ ಸನ್ನಿಭಂ ||
ಭೀ ದುರಿತಾರಿ ದೂರನನವದ್ಯ ಜಿನಾಗನು ವಿದ್ಯನಿದ್ಧ ದು।
ಗ್ಧೋದಧಿ ಧೌತ ಕೀರ್ತಿ ವಿಶದಂ ಭರತಾವನಿ ರಾಜ ಪೂಜಿತಂ ||　(೧—೨೯)

ಎಂದು ಹೇಳಿದಂತೆಯೇ, ಜಿನಚಂದ್ರ ಮುನಿಯನ್ನು ಶ್ರವಣಬೆಳ್ಗೊಳದ ೫೫ನೆಯ ಶಾಸನದ ೨೩ನೆಯ ಪದ್ಯದಲ್ಲಿ—

ಜೈನೇಂದ್ರ ಪೂಜ್ಯ ಪಾದಃ ಸಕಲ ಸಮಯ ತರ್ಕೇ ಚ ಭಟ್ಟಾಕಲಂಕಃ।
ಸಾಹಿತ್ಯೇ ಭಾರವಿಸ್ಸ್ಯಾತ್ ಕವಿ ಗಮಕ ಮಹಾವಾದ ವಾಗ್ಮಿತ್ವ ರುಂದ್ರಃ ||
ಗೀತೇ ವಾದೇ ಚ ನೃತ್ಯೇ ದಿಶಿ ವಿದಿಶಿ ಚ ಸಂವರ್ತಿ ಸತ್ಕೀರ್ತಿ ಮೂರ್ತಿಃ।
ಸ್ಥೇಯಾಚ್ಛ್ರೀ ಯೋಗಿ ವೃಂದಾರ್ಚಿತ ಪದ ಜಿನಚಂದ್ರೋ ವಿತಂದ್ರೋ ಮುನೀಂದ್ರಃ ||

ಎಂದು ಪ್ರಶಂಸಿಸಿ, ಅವರ ಸಧರ್ಮರು—

ಬಂಕಾಪುರ ಮುನೀಂದ್ರೋಽಭೂ। ದ್ದೇವೇಂದ್ರೋ ರುಂದ್ರ ಸದ್ಗುಣಃ ||
ಸಿದ್ಧಾಂತಾದ್ಯಾಗಮಾರ್ಥಜ್ಞೋ। ಸಜ್ಞಾನಾದಿ ಗುಣಾನ್ವಿತಃ || (೨೪)

ಎಂದು ಹೊಗಳಲ್ಪಟ್ಟ ದೇವೇಂದ್ರ ಮುನಿಯೇ ಪಂಪ ಕವಿಯ ಗುರುವೆಂಬುದು ನಿಶ್ಚಯವು. ಈ ಬಂಕಾಪುರವು ಪಂಪನಿದ್ದ ಪುಲಿಗೆರೆಗೆ (ಲಕ್ಷ್ಮೇಶ್ವರಕ್ಕೆ) ತೀರ ಸಮೀಪದಲ್ಲಿದೆ. ಪಂಪನು ಆದಿ ಪುರಾಣವನ್ನು ಕ್ರಿ. ಶ. ೯೪೧ರಲ್ಲಿ ಬರೆದನಂತರ ಭಾರತವನ್ನು ಬರೆದಿರುವನು. ಸೋಮದೇವನು 'ಯಶಸ್ತಿಲಕ ಚಂಪೂ'ದ ಕೊನೆಯಲ್ಲಿ, ಶಕೆ ೮೮೧ (ಕ್ರಿ. ಶ. ೯೫೯) ರಲ್ಲಿ—

ಪಾಂಡ್ಯ ಸಿಂಹಲ ಚೋಳ ಚೇರಮ ಪ್ರಭೃತೀನ್ಮಹೀಪತೀನ್ಪ್ರಸಾಧ್ಯ ಮೇಲಪಾಟೀ ಪ್ರವರ್ಧಮಾನ ರಾಜ್ಯ ಪ್ರಭಾವೇ ಶ್ರೀ ಕೃಷ್ಣರಾಜ ದೇವೇ ಸತಿ ತತ್ಪಾದ ಪದ್ಮೋಪ ಜೀವಿನಃ ಸಮಧಿಗತ ಪಂಚ ಮಹಾ ಶಬ್ದ ಮಹಾ ಸಾಮಂತಾಧಿಪತೇಶ್ಚಾಲುಕ್ಯ ಕುಲ ಜನ್ಮನಃ ಸಾಮಂತ ಚೂಡಾಮಣೇಃ ಶ್ರೀಮದರಿಕೇಸರಿಣಃ ಪ್ರಥಮ ಪುತ್ರಸ್ಯ ಶ್ರೀಮ ದ್ವದ್ಯಗರಾಜಸ್ಯ ಲಕ್ಷ್ಮೀ ಪ್ರವರ್ಧಮಾನ ವಸುಧಾರಾಯಾಂ ಗಂಗಾ ಧಾರಾಯಾ ವಿನಿರ್ಮಾಪಿತಮಿದಂ ಕಾವ್ಯಂ.

ಎಂದು ಹೇಳಿರುವುದರಿಂದ, ಅದಕ್ಕೂ ಪೂರ್ವದಲ್ಲಿ, ಅರಿಕೇಸರಿಯು ರಾಜ್ಯಭಾರ ಮಾಡುತ್ತಿರುವಾಗ್ಗೆ, ಪಂಪನು ಭಾರತವನ್ನು ರಚಿಸಿದ್ದಾನೆ. ಅದರಲ್ಲಿ, ಅರಿಕೇಸರಿಯನ್ನು ಅರ್ಜುನನಿಗೆ ಹೋಲಿಸಿ ಬರೆದಂತೆ, ಪೊನ್ನನಾದರೂ ತನ್ನ 'ಭುವನೈಕ ರಾಮಾಭ್ಯುದಯ'ದಲ್ಲಿ ಕೃಷ್ಣನರೇಂದ್ರನನ್ನು ರಾಮನಿಗೆ ಹೋಲಿಸಿ ಬರೆದಿರಬಹುದೆಂಬುದಾಗಿ ಶಬ್ದಮಣಿದರ್ಪಣದೊಳಗೆ ಉದ್ಧೃತವಾಗಿರುವ—

ಉದಯಾಸ್ತೋನ್ನತ ಶೈಲ ಸೇತು ಹಿಮವತ್ ಕುತ್ಕೀಲ ಪರ್ಯಂತ ಸಂ ।
ಪದೆಯಂ ವಾರ್ಧಿ ತರಂಗ ರಂಗ ನಿನದತ್ಕಾಂಚೀ ಕಲಾಪಾಂಚಿತಾ ॥
ಸ್ಪದೆಯಂ ಸಾಧಿಸಿ ಕಬ್ಬಿಗಂಗೆ ನೆಲನಂ ನಿರ್ವ್ಯಾಜದಿಂದಂ ನಿಮಿ ।
ರ್ಚಿದ ಗೆಲ್ಲಂ ಭುವನೈಕ ರಾಮ ಮಹಿಪಂಗಕ್ಕುಂ ಪೆಜರ್ಗಕ್ಕುಮೇ ।

. . . . . . . . ಆನೆಯ ಮೇಲಮಾಳ ಮೇಲೆಯುಂ ।
ಕುದುರೆಯ ಮೇಲೆಯುಂ ಪರಿದುದೊಂದೆ ಗಜಂ ಭುವನೈಕ ರಾಮನಾ ॥

ಎಂಬ ಪದ್ಯಗಳಿಂದ ಊಹಿಸಲಾಗುವುದು. ಪೊನ್ನನು ಜಿನಚಂದ್ರ ಮುನಿಯನ್ನು ಶಾಂತಿ ತೀರ್ಥಂಕರರಿಗೆ ಹೋಲಿಸಿ ಬರೆದಂತೆ, ಕೃಷ್ಣನರೇಂದ್ರನನ್ನು ರಾಮನಿಗೆ ಹೋಲಿಸಿ ಬರೆದಿರಬಹುದೆಂದೆನ್ನಲಿಕ್ಕೆ ಏನೂ ಅಡ್ಡಿಯಿಲ್ಲ; ರಾಮಾಭ್ಯುದಯವನ್ನು ಬರೆದನಂತರ, ತೈಲಪನ (ಕ್ರಿ. ಶ. ೯೭೩–೯೯೭) ಚಮೂಪತಿಗಳಾದ ಮಲ್ಲಪ ಪುನ್ನಮಯ್ಯರ ಆಶ್ರಯದಲ್ಲಿದ್ದು ಶಾಂತಿಪುರಾಣವನ್ನು ಬರೆದಿರುವನು. ಪುನ್ನಮನು ತೈಲಪನಿಗಾಗಿ ಕಾದಿ ಕಾವೇರೀ ತೀರದಲ್ಲಿ ಮಡಿದನೆಂದು ಅಜಿತಪುರಾಣದ—

ಪರಮ ದ್ರೋಹರೊಳೊಂದಿ ತನ್ನೊಳಿಜಿಯಲ್ ಗೋವಿಂದರ್ ಬರ್ಪುದುಂ ।
ಸೆರಗಂ ಪಾರದೆ ತಾಗಿ ತೈಲಪ ನೃಪಂ ಬಾಟ್ಗೆಂದು ಬಾಳ್ಗಿತ್ತು ಮ ॥
ಚ್ಚರದಿಂ ಸಾರ್ಚಿದರಂ ಪಡಲ್ವಡಿಸಿ ಕಾವೇರೀ ಸರಿತ್ತೀರದೊಳ್ ।
ಸುರ ಲೋಕಾತಿಥಿಯಾದ ಪೊನ್ನನೆ ಮಲಂ ಗಂಡಂ ಪೆಜರ್ ಗಂಡರೇ ॥ (೧–೩೬)

ಎಂಬ ಪದ್ಯದಲ್ಲಿ ಹೇಳಿರಲು, ಸ್ವಾ॥ ಆರ್. ತಾತಾಚಾರ್ಯರು ಶಾಂತಿಪುರಾಣದ ಮುನ್ನುಡಿಯ ೩೩ನೆಯ ಪುಟದಲ್ಲಿ, ಪುನ್ನಮಯ್ಯನು ಕೃಷ್ಣನರೇಂದ್ರನಿಗಾಗಿ ಕಾದಿ ಮಡಿದನೆಂದು ಹೇಳಿ, ಮೇಲಿನ ಶ್ಲೋಕವನ್ನು ಉದ್ಧರಿಸಿದ್ದು ಆಶ್ಚರ್ಯಕರವಾಗಿದೆ. ಅದರಲ್ಲಿ, ತೈಲಪ ನೃಪನಿಗಾಗಿಯೆಂದು ಸ್ಪಷ್ಟ ಬರೆದಿರಲು, ಕೃಷ್ಣನರೇಂದ್ರನಿಗಾಗಿಯೆಂದೆನ್ನುವುದು ತೀರ ತಪ್ಪಾಗಿದೆ. ರಾಷ್ಟ್ರಕೂಟರನ್ನು ತಳ್ಳಿಹಾಕಿ ೯೭೩ರಲ್ಲಿ ಪಟ್ಟವೇರಿದ ತೈಲಪನ ಸೇನಾನಾಯಕನಾದ ಪುನ್ನಮಯ್ಯನು ಕೃಷ್ಣನರೇಂದ್ರನಿಗಾಗಿ ಕಾದುವುದು ಅಸಂಭವವು. ಆ ಕಾಲಕ್ಕೆ ಕೃಷ್ಣನರೇಂದ್ರನು ಮೃತವಾಗಿ ಹೋಗಿದ್ದನು. ಗೋವಿಂದರಸು ತೈಲಪನಮೇಲೆ ಏರಿಬಂದಿದ್ದನೇ ಹೊರತು ಈತನ ಮೇಲೆ ಬಂದಿಲ್ಲ. ರಾಷ್ಟ್ರಕೂಟ ರಾಜ್ಯವು ನಾಶವಾದ (೯೭೩) ನಂತರ, ಅಲ್ಲಿದ್ದ ಪೊನ್ನ ಕವಿಯು ತೈಲಪನ ಚಮೂಪತಿಗಳ ಆಶ್ರಯಕ್ಕೆ ಬಂದು, ಪುನ್ನಮನು ಕಾವೇರೀ ತೀರದಲ್ಲಿ ಸ್ವರ್ಗಸ್ಥನಾಗುವ ಪೂರ್ವದಲ್ಲಿಯೇ, ಸುಮಾರು ೯೭೫ರಲ್ಲಿ,

ಶಾಂತಿಪುರಾಣವನ್ನು ರಚಿಸಿರಬೇಕು. ಅದರಲ್ಲಿ ಪುನ್ನಮನ ಉಲ್ಲೇಖವಿದೆ ಯೆಂಬುದೇ ಇದಕ್ಕೆ ಕಾರಣವು. ಜಿನಚಂದ್ರ ಮುನಿಗಳ ಪರೋಕ್ಷದಲ್ಲಿ ಗ್ರಂಥವನ್ನು ರಚಿಸಿದಂತೆ—

ದ್ವಿಜ ಕುಲ ತಿಲಕೋಪಮರ।
ಗ್ರಜಾನುಜರ್ ಮಲ್ಲಪಯ್ಯ ಪುನ್ನಮಯ್ಯಂಗಳ್ ॥
ನಿಜ ಗುರು ಪರೋಕ್ಷ ವಿನಯದಿ।
ನಜಿತರ್ ಜಿನಚಂದ್ರ ಕೃತಿಗೆ ಕಲಶಮನಿಟ್ಟರ್॥ (೧೨–೬೩)

ಎಂಬ ಪದ್ಯದಲ್ಲಿ ಪೊನ್ನನೇ ಹೇಳಿದ್ದಾನೆ. ಮಲ್ಲಪನ ಮಗಳಾದ ಅತ್ತಿಮಬ್ಬೆಯು ೯೩೩ರಲ್ಲಿ ರನ್ನನಿಂದ ಬರೆಯಿಸಿದ ಅಜಿತಪುರಾಣದ—

ಗುರು ಜಿನಚಂದ್ರ ಮುನೀಂದ್ರರ।
ಪರೋಕ್ಷದೊಳ್ ತಮ್ಮ ತಿರ್ವರುಂ ಪೊನ್ನಿಗನಿಂ॥
ಬರೆಯಿಸಿದರ್ ಸಕಳೋರ್ವಿಗೆ।
ಪರೆಯಿಸಿದರ್ ಸಲೆ ಪುರಾಣ ಚೂಡಾಮಣಿಯಂ॥ (೧–೩೪)

ಎಂಬ ಪದ್ಯದಿಂದಲೂ ಗೊತ್ತಾಗುವುದು. ದೇವೇಂದ್ರ ಮುನಿಗಳ ಕಾಲದಲ್ಲಿಯೇ ಬರೆಯಲ್ಪಟ್ಟ ಪಂಪನ ಆದಿ ಪುರಾಣವು, ಅವರ ಸಧರ್ಮಿಗಳಾದ ಜಿನಚಂದ್ರ ಮುನಿಗಳ ಪರೋಕ್ಷದಲ್ಲಿ ಬರೆಯಲ್ಪಟ್ಟ ಹೊನ್ನನ ಶಾಂತಿಪುರಾಣಕ್ಕಿಂತಲೂ ಪ್ರಾಚೀನವಾದು ದೆಂಬಲ್ಲಿ ಸಂಶಯವಿಲ್ಲ. ಅರಿಕೇಸರಿಯ ಕಾಲದಲ್ಲಿಯೇ ಬರೆದ ಪಂಪ ಭಾರತ ವಾದರೂ, ಅರಿಕೇಸರಿಯ ಮಗ ಬದ್ದಿಗನ ಕಾಲದಲ್ಲಿಯೂ (೯೫೫) ಇದ್ದ ಕೃಷ್ಣ ನರೇಂದ್ರನ ಆಶ್ರಿತನಾದ ಪೊನ್ನನ ರಾಮಾಭ್ಯುದಯಕ್ಕಿಂತಲೂ ಪ್ರಾಚೀನವಾದು ದೆನ್ನಲಿಕ್ಕೆ ಅಡ್ಡಿಯಿಲ್ಲ. ಪಂಪನು ಭಾರತದಲ್ಲಿ—

ಬೆಳಗುವೆನಿಲ್ಲಿ ಲೌಕಿಕಮನಲ್ಲಿ ಜಿನಾಗಮಮಂ ಸಮಸ್ತ ಭೂ।
ತಳಕೆ ಸಮಸ್ತ ಭಾರತಮುಮಾದಿಪುರಾಣಮುಮೆಂದು ಮೆಯ್ಯಸಂ॥
ಗೊಳುತಿರೆ ಪೂಣ್ದು ಪೂಣ್ದ ತೆಱದೊಂದಱುದಿಂಗಳಳೊಂದು ಮೂಱು ತಿಂ।
ಗಳೊಳೆ ಸಮಾಪ್ತಿಯಾದುದೆನೆ ಬಣ್ಣಿಸಿದಂ ಕವಿತಾ ಗುಣಾರ್ಣವಂ॥ (೧೪–೬೦)

ಎಂಬ ಪದ್ಯದೊಳಗೆ ಹೇಳಿದಂತೆಯೇ, ಪೊನ್ನನು ಶಾಂತಿಪುರಾಣದಲ್ಲಿ

ಪ್ರಕಟಂ ಲೋಕೋತ್ತರ ಲೌ।
ಕಿಕ ಪರಿಣತಿ ಪುನ್ನಿಗಂಗೆ ಶಾಂತೀಶ್ವರ ರಾ॥
ಮ ಕಥಾ ಪ್ರಶಸ್ತಿಯಿಂದಾ।
ದ ಕೃತಿಗಳಿಂ (ಕೃತಿಯುಗಂಗಳ) ನ್ನವುವೊಳವೇ॥ (೧೨–೬೫)

ಎಂಬ ಪದ್ಯದೊಳಗೆ ಹೇಳಿರುತ್ತಾನೆ.

ಮುನ್ನುಳ್ಳ ಕಾಳಿದಾಸಂ।
ಗಂ ನಾಲ್ವಡಿ ರಚನೆಯೊಳ್ ಕುರುಳ್ಗಳ ಸವಣಂ॥ (೧–೧೧)

ಎಂದು ಶಾಂತಿಪುರಾಣದಲ್ಲಿ, ಮಹಾ ಕವಿ ಕಾಲಿದಾಸನನ್ನು ಕೀಳ್ಮಾಡಿ, ತನ್ನ ಬಡಾಯಿಯನ್ನು ಕೊಚ್ಚಿಕೊಂಡ ಪೊನ್ನನು, ಪಂಪಕವಿಯ ಹೆಸರನ್ನು ಹೇಳದಿರುವದು ಅಸಮಂಜಸವಾದುದಲ್ಲ: ಮೊದಲು, ಜನ್ಮಭಾಷೆಯಾದ ಕನ್ನಡದಲ್ಲಿ ಗ್ರಂಥಗಳನ್ನು ಬರೆದು, ಹಿಂದಿನಿಂದ ಸಂಸ್ಕೃತ ಭಾಷೆಯಲ್ಲಿ ೯೮೮ರೊಳಗೆ ವರ್ಧಮಾನ ಪುರಾಣವನ್ನೂ, ಆಮೇಲೆ ಶಾಂತಿಪುರಾಣವನ್ನೂ ಬರೆದ ಅಸಗನಿಗಿಂತಲೂ ಅವನನ್ನು ನಿರ್ದೇಶಿಸಿದ ಪೊನ್ನನ ಕಾಲವನ್ನು ೯೩೫ರ ವರೆಗೆ ಒಯ್ಯುವದು ಸಮಂಜಸವಾಗಲಾರದು. ಪಂಪನು ೯೪೧ರಲ್ಲಿ ಆದಿಪುರಾಣವನ್ನೂ, ಮುಂದೆ ಸ್ವಲ್ಪ ದಿವಸಗಳಲ್ಲಿಯೇ, ಸುಮಾರು ೯೪೫ರಲ್ಲಿ, ಭಾರತವನ್ನೂ ಬರೆದಿರಬಹುದು. ಪೊನ್ನನು ಸುಮಾರು ೯೫೮ರಲ್ಲಿ—

> ಪಾಂಡ್ಯ ಸಿಂಹಲ ಚೋಲ ಚೇರಮ ಪ್ರಭೃತೀನ್ಮಹೀಪತೀನ್ಪ್ರಸಾಧ್ಯ
> ಮೇಲಪಾಟೀ ಪ್ರವರ್ಧಮಾನ ರಾಜ್ಯಪ್ರಭಾವೇ ಕೃಷ್ಣರಾಜ ದೇವೇ ಸತಿ

ಅವನನ್ನು ರಾಮನಿಗೆ ಹೋಲಿಸಿ 'ಭುವನೈಕ ರಾಮಾಭ್ಯುದಯ' ವನ್ನು ಬರೆದಿರಬಹುದಾಗಿ ತೋರುವುದು. ಆ ರಾಜ್ಯವು ನಾಶವಾದನಂತರ, ತೈಲಪನ ಚಮೂಪತಿಗಳಾದ ಮಲ್ಲಪ ಪುನ್ನಮಯ್ಯರ ಆಶ್ರಯದಲ್ಲಿ ಬಂದು, ಸುಮಾರು ೯೭೫ರಲ್ಲಿ, ಅವರ ಗುರುಗಳಾಡ ಜಿನಚಂದ್ರರನ್ನು ಶಾಂತಿ ತೀರ್ಥಂಕರರಿಗೆ ಹೋಲಿಸಿ, ಶಾಂತಿಪುರಾಣವನ್ನು ಬರೆದಿರಬೇಕೆಂಬುದೇ ನಮ್ಮ ಮಾನ್ಯತೆಯು. ಪಂಪನ ತರುವಾಯ ಪೊನ್ನನ ಹೆಸರನ್ನು, ಅವರಿಗೆ ತೀರ ಸಮೀಪದ ಕಾಲದಲ್ಲಿದ್ದ ರನ್ನನೂ, ನಾಗಚಂದ್ರ, ಅಗ್ಗಳ, ಆಚಣ್ಣ, ಪಾರ್ಶ್ವಪಂಡಿತ, ಜನ್ನ, ಗುಣವರ್ಮ ಮೊದಲಾದ ಕವಿಗಳೂ ಹೇಳಿರಲು, ಹಿಂದಿನ ಕಾಲದಲ್ಲಿದ್ದ ದುರ್ಗಸಿಂಹ, ನಯಸೇನಾದಿ ಕೆಲವು ಕವಿಗಳು ಹೆಸರನ್ನು ಮೊದಲು ಹೇಳಿದ ಮಾತ್ರಕ್ಕೇ ಪೊನ್ನನು ಪ್ರಾಚೀನನಾಗಲಾರನು. ಕಬ್ಬಿಗರ ಕಾಲವನ್ನು ಅನುಸರಿಸಿಯೇ ಅವರ ಹೆಸರನ್ನು ಹೇಳುವ ಪದ್ಧತಿಯು ಎಲ್ಲ ಕವಿಗಳಲ್ಲಿ ಕಂಡು ಬರುವದಿಲ್ಲ. ಶಾಂತಿಪುರಾಣದ ಸಹಸ್ರ ಪ್ರತಿಗಳನ್ನು ಪ್ರತಿ ಮಾಡಿಸಿ ಬೀರಿದ ಸಂಗತಿಯು ೯೯೩ರಲ್ಲಿ ಬರೆದ ಅಜಿತಪುರಾಣದಲ್ಲಿ ಬಂದಿರುವದಿಲ್ಲ; ಅತ್ತಿಮಬ್ಬೆಯು ಎಲ್ಲಿಯವರೆಗೆ ಜೀವಿಸಿದ್ದಳೆಂಬುದೂ ತಿಳಿದಿಲ್ಲ. ಆಕೆಯ ಕಾಲಕ್ಕೆ ಗೆದ್ದಲು ಹಿಡಿದುಹೋಗಿರಬಹುದೆಂದು ಹೇಳಿ ಪೊನ್ನನ ಕಾಲವನ್ನು ಹಿಂದೆ ಒಯ್ಯುವದು ಸಮರ್ಪಕವಾಗುವದಿಲ್ಲ. ತಂದೆಯ ಮರಣದನಂತರ ಆತನ ಸ್ಮರಣಾರ್ಥವಾಗಿ ಸಾವಿರ ಪ್ರತಿಗಳನ್ನು ಬೀರಿರುವಲ್ಲಿ, ಆ ಗ್ರಂಥವು ಗೆದ್ದಲು ಹಿಡಿದಂತಾಗಲಿಲ್ಲ.

ಅಸಗನ ಶಾಂತಿಪುರಾಣದ ಪ್ರಶಸ್ತಿಯನ್ನೂ ಅದರ ಅನುವಾದವನ್ನೂ ಈ ಲೇಖದೊಡನೆ ಮುದ್ರಿಸಬೇಕಾಗಿ ವಿನಂತಿಯದೆ. ಅದರಲ್ಲಿ ಹೇಳಿದ ನಾಗನಂದ್ಯಾಚಾರ್ಯರ ವಿಷಯವಾಗಿ ಏನೂ ತಿಳಿಯುವದಿಲ್ಲ. ವರ್ಧಮಾನ ಪುರಾಣದ ಪ್ರಶಸ್ತಿಯಲ್ಲಿ ಹೇಳಿದ ಭಾವಕೀರ್ತಿ ಯಾರೆಂಬುವದೂ ಗೊತ್ತಾಗುವದಿಲ್ಲ. ಅಸಗನ ವರ್ಧಮಾನ ಪುರಾಣದಲ್ಲಿ, ಹರಿಚಂದ್ರನ ಜೀವಂಧರ ಚಂಪೂಕ್ಕೆ ಸಮಾನವಾದ ಶ್ಲೋಕಗಳೂ,

ವೀರನಂದಿಯ ಚಂದ್ರಪ್ರಭ ಚರಿತಕ್ಕೆ ಸಮಾನವಾದ ಶ್ಲೋಕಗಳೂ ದೊರೆಯುತ್ತವೆ. ಕೆಳಗೆ ಬರೆದವುಗಳನ್ನು ನೋಡಿರಿ:—

ಜೀವಂಧರ ಚಂಪೂ.—I. ೧೩, ೧೭, ೨೬, ೨೭; III. ೮, ೯, ೧೪, ೧೫; VI. ೩, ೨೫; X. ೪೭, ೪೯, ೫೫, ೭೬.

ವರ್ಧಮಾನ ಚರಿತ.—I. ೧೫, ೨೫, ೪೩, ೪೪; V. ೩, ೫, ೯, ೧೦; XIII. ೪೨; I. ೨೬; IX. ೧೪, ೨೭, ೩೯, ೭೭.

ಚಂದ್ರಪ್ರಭ ಚರಿತ.—I. ೩೬, ೭೨; II. ೧೪೨; IV. 49.

ವರ್ಧಮಾನ ಚರಿತ.—V. ೧೯; X. ೩೬; V. ೧೨; VII. ೬೪.

ಗುಣಭದ್ರಾಚಾರ್ಯನ (೮೯೮) ಉತ್ತರ ಪುರಾಣದಲ್ಲಿದ್ದ ಜೀವಂಧರ ಚರಿತೆಯ ಮೇಲಿಂದ, ಹರಿಚಂದ್ರನು ಜೀವಂಧರ ಚಂಪೂವನ್ನು ಬರೆದಿರುವನು. ಕನೋಜದ ಮಹೇಂದ್ರಪಾಲ ಮಹೀಪಾಲ (೯೦೩–೯೧೭) ರಲ್ಲಿದ್ದ ರಾಜಶೇಖರನು ಕರ್ಪೂರ ಮಂಜರಿಯ ವಿದೂಷಕೋಕ್ತಿಯಲ್ಲಿ ಹರಿಚಂದ್ರನ ಹೆಸರನ್ನು ಹೇಳಿರುವದರಿಂದ ಈ ಕವಿಯು ಸುಮಾರು ೯೦೫ರಲ್ಲಿ ಇರಬಹುದು. ವಾದಿರಾಜ ಸೂರಿಯು (೧೦೨೫) ಪಾರ್ಶ್ವನಾಥ ಚರಿತ್ರದಲ್ಲಿ ವೀರನಂದಿಯನ್ನು—

ಚಂದ್ರಪ್ರಭಾಭಿ ಸಂಬದ್ಧಾ ರಸಪುಷ್ಟಾ ಮನಃಪ್ರಿಯಂ ||
ಕುಮುದ್ವತೀವ ನೋ ಧತ್ತೇ ಭಾರತೀ ವೀರನಂದಿನಃ ||

ಹೀಗೆ ಹೇಳಿರುವ ಮೂಲಕ, ಆವನಿಗಿಂತಲೂ ಪೂರ್ವದಲ್ಲಿ, ಅಸಗನಿಗಿಂತಲೂ ಹಿಂದೆ, ಸುಮಾರು ೯೫೦ರಲ್ಲಿ ವೀರನಂದಿಯು ಇರಬಹುದು. ಪೊನ್ನನೂ ಅಸಗನೂ ಸಮಕಾಲೀನರೆಂದು ಹೇಳಲಿಕ್ಕೆ ಏನೂ ಅಡ್ಡಿಯಿರುವದಿಲ್ಲ.

**ಚಂದ್ರಕಾಂತ ನಿಂಗರಾಜ ಪಾಟೀಲ**

# ವಿವಿಧ ವಿಷಯಗಳು

**ಭಾಷಾಂತರೀಕರಣ ಗ್ರಂಥಗಳು.**—ಈ ವಿಷಯದಲ್ಲಿ ಆಂಧ್ರ ಸಾಹಿತ್ಯ ಪರಿಷತ್ಪತ್ರಿಕೆಯ XXI, ೨ನೆಯ ಸಂಚಿಕೆಯಲ್ಲಿ ಈ ರೀತಿಯಾಗಿ ಹೇಳಿರುವುದು:— "ಈಗಿನ ಕಾಲದಲ್ಲಿ ಭಾಷಾಂತರೀಕರಣಗಳು ಬಹಳ ಪ್ರಬಲವಾಗುತ್ತಿವೆ. ಸ್ವಲ್ಪ ಪ್ರಸಿದ್ಧಿ ಹೊಂದಿದ ಪ್ರತಿ ಸಂಸ್ಕೃತ ಗ್ರಂಥಕ್ಕೂ ಐದಾರು ಭಾಷಾಂತರೀಕರಣಗಳಿವೆ. ಚೆನ್ನಾಗಿ ಪ್ರಸಿದ್ಧಿ ಹೊಂದಿದ ಗ್ರಂಥಗಳಿಗೆ (ಶಾಕುಂತಲ ಮೊದಲಾದುವಕ್ಕೆ) ಮೂವತ್ತು ನಾಲ್ವತ್ತು ಭಾಷಾಂತರೀಕರಣಗಳುಂಟೆಂದು ತಿಳಿಯಬರುವುದು. ಭಾಷಾಂತರೀಕರಣವೆಂದರೆ, ಮೂಲಗ್ರಂಥವನ್ನನುಸರಿಸಿ ಬರೆಯುವುದೇ ವಿನಾ, ಎಷ್ಟು ಮಂದಿ ಭಾಷಾಂತರೀಕರಿಸಿದರೂ ಅವುಗಳಲ್ಲಿ ವಿಶೇಷಗಳೇನೂ ಇರಲಾರವು. ಆದುದರಿಂದ, ಒಂದು ಗ್ರಂಥಕ್ಕೆ ಇಷ್ಟು ಭಾಷಾಂತರೀಕರಣಗಳು ಅನಾವಶ್ಯಕ. . . . . ಈ ಭಾಷಾಂತರೀಕರಣಕ್ಕೆ ಪ್ರತಿಯೊಬ್ಬರೂ ತೊಡಗುವುದು ಉಚಿತವಲ್ಲ. ಹಾಗಾದಲ್ಲಿ, ಲೋಕಕ್ಕೆ ಈ ಭಾಷಾಂತರೀಕರಣಗಳಿಂದ ಹೆಚ್ಚು ಉಪಕಾರ ಲಭಿಸದು. ಸಮರ್ಥರಾದವರು, ಮೂಲಕ್ಕೆ ಸರಿಯಾಗಿ ಭಾಷಾಂತರೀಕರಿಸಿ, ಪಂಡಿತರಿಗೆ ತೋರಿಸಿ, ಮುದ್ರಿಸಿದಲ್ಲಿ ದೇಶಕ್ಕೆ ಕೊಂಚ ಮಟ್ಟಿಗೆ ಉಪಕಾರವಾಗುವುದು.

"ಈಗ ನಮಗೆ ದೊರೆಯುವ ಭಾಷಾಂತರೀಕರಣಗಳೆಲ್ಲವನ್ನೂ ತಿರುಗಿಹಾಕಿ ನೋಡಿದಲ್ಲಿ ಎಷ್ಟೋ ತಪ್ಪುಗಳು ಅವುಗಳಲ್ಲಿ ದೊರೆಯುವುವು. ಇಂತಹ ಭಾಷಾಂತರೀಕರಣಗಳನ್ನು ಒಳ್ಳೆಯ ಹೊಳಪು ಕಾಗದದ ಮೇಲೆ ಅಚ್ಚೊತ್ತಿಸಿ ಕ್ಯಾಲಿಕೋ ಬೈಂಡು ಮಾಡಿಸಿ ಪ್ರಕಟಿಸುವುದು ತಾವು ಆನಂದಿಸುವುದಕ್ಕೋ ದೇಶಕ್ಕೆ ಉಪಕಾರ ಮಾಡುವುದಕ್ಕೋ ತಿಳಿಯದಿದೆ.

"ಭಾಷಾಂತರೀಕರಣ ಮಾಡುವ ಭಾಷಾಭಿಮಾನಿಗಳೇ! ವಿನಯ ಪೂರ್ವಕವಾಗಿ ನಮಸ್ಕರಿಸಿ ಮಾಡಿಕೊಳ್ಳುವ ಮನವಿ: ನಿಮ್ಮ ಭಾಷಾಂತರೀಕರಣಗಳು ಲೋಕಕ್ಕೆ ಉಪಯೋಗವಾಗಿ ಚಿರಕಾಲ ಬಾಳಬೇಕಾದರೆ ಇದುವರೆಗೆ ಭಾಷಾಂತರೀಕರಿಸದಿರುವ ಗ್ರಂಥಗಳನ್ನು ಭಾಷಾಂತರೀಕರಿಸುವುದಕ್ಕೆ ಪ್ರಯತ್ನಿಸಿರಿ. ನೀವು ಬರೆದುದನ್ನು ಪಂಡಿತರಿಗೆ ತೋರಿಸಿ ಅಚ್ಚೊತ್ತಿಸಿದಲ್ಲಿ ಹೆಚ್ಚಾಗಿ ಲೋಕೋಪಕಾರವಾಗುವುದು."

**ದಿವಂಗತರಾದ ಪ್ರೊಫೆಸರ್ ಕೆ. ಬಿ. ಪಾಠಕರು, ಬಿ.ಎ.**—ಈಗ ಮೂವತ್ತೈದು ವರುಷಗಳ ಹಿಂದೆ, ಮೈಸೂರು ದೇಶದ ಪ್ರಾಚ್ಯ ವಸ್ತ್ವನ್ವೇಷಣದ ಇಲಾಖೆಯ ಅಧ್ಯಕ್ಷರಾಗಿದ್ದ ಮೆ॥ ಲ್ಯೂಯಿ ರೈಸ್ ಅವರ ಸಹಾಯಕರಾಗಿದ್ದು, 'ಕವಿರಾಜಮಾರ್ಗ'ವನ್ನು ಪರಿಷ್ಕರಿಸಿ, ಅದರ ಸಂಪಾದಕತ್ವವನ್ನು ವಹಿಸಿ, ಅದೇ

ಗರ್ಲಲನೆಯ ಇಸವಿಯಲ್ಲಿ ಮಿ|| ಲ್ಯೂಯಿ ರೈಸ್ ಅವರು ಪರಿಷ್ಕರಿಸಿ ಪ್ರಕಟಿಸಿದ ಪಂಪನ 'ವಿಕ್ರಮಾರ್ಜುನ ವಿಜಯ'ಕ್ಕಾಗಿ, ಅದರ ಕಥಾ ಸಂಗ್ರಹವನ್ನು ಬರೆದು ಸಹಾಯ ಮಾಡಿದ ಪಂಡಿತರೇ ಈ ಪಾಠಕರು. ಇವರು ಸುಪ್ರಸಿದ್ಧರಾದ ಇತಿಹಾಸ ಸಂಶೋಧಕರು, ದೊಡ್ಡ ಸಂಸ್ಕೃತ ಪಂಡಿತರು, ಕೇವಲ ಭಾಷಾಭಿಮಾನಿಗಳು. ಇವರ ಪ್ರೌಢ ಲೇಖನಗಳು 'ಇಂಡಿಯನ್ ಆಂಟಿಕ್ವೆರಿ', 'ಎಪಿಗ್ರಾಫಿಯಾ ಇಂಡಿಕ', 'ರಾಯಲ್ ಏಷ್ಯಾಟಿಕ್ ಸೊಸೈಟಿ ಜರ್ನಲ್' ಮೊದಲಾದ ಪ್ರಸಿದ್ಧ ಪತ್ರಿಕೆಗಳಲ್ಲಿ ಆಗಾಗ ಪ್ರಕಟವಾಗುತ್ತಿದ್ದುವು. ಇವರು ಪುಣೆಯ ಡೆಕ್ಕನ್ ಕಾಲೇಜಿನಲ್ಲಿ ಬಹು ಕಾಲ ಪ್ರೊಫೆಸರರಾಗಿದ್ದು ಅಲ್ಲಿಯ ಭಾಂಡಾಗಾರದ ಸಂಶೋಧನ ಮಂದಿರದಲ್ಲಿ, ಕರ್ಣಾಟಕದ ಚರಿತ್ರೆಗೆ ಸಂಬಂಧಪಟ್ಟ ಅನೇಕ ಸಂಶೋಧನ ಕಾರ್ಯಗಳನ್ನು ಮಾಡಿರುವರು. ಇವರು ಉತ್ತರ ಕರ್ಣಾಟಕದವರು. ಬಹಳ ವಯಸ್ಸಾಗಿದ್ದರೂ, ಇತಿಹಾಸ ಸಂಶೋಧನ ಕಾರ್ಯವೆಂದರೆ ಅವರಿಗೆ ಬಹಳ ಅಭಿಮಾನ. ಈ ಮಹನೀಯರು ಈಗ ಕೆಲವು ದಿನಗಳ ಹಿಂದೆ ಕಾಲವಶರಾದುದು ಕನ್ನಡಿಗರಿಗೆ ಮಾತ್ರವೇ ಅಲ್ಲ, ನಮ್ಮ ಹಿಂದೂ ದೇಶಕ್ಕೇ ದೊಡ್ಡ ನಷ್ಟವೆಂದು ಹೇಳಬೇಕು.

**ದ್ರಾವಿಡ ಭಾಷೆಗಳಲ್ಲಿ ಕೆಲವು ಕ್ರಿಯಾ ಧಾತುಗಳ ಅರ್ಥ ವಿಸ್ತರಣ.**— ಪದಗಳ ವ್ಯುತ್ಪತ್ತಿಯನ್ನು ಕಂಡುಹಿಡಿದು ಅವಕ್ಕೆ ಮೊದಲಿದ್ದ ಅರ್ಥವು ಕ್ರಮೇಣ ಹೇಗೆ ವಿಸ್ತಾರ ಹೊಂದುತ್ತ ಹೋಗಿರುವುದೆಂಬ ವಿಚಾರವನ್ನು ಮಾಡುವುದು ಭಾಷಾಶಾಸ್ತ್ರಜ್ಞನಿಗೆ ಕೇವಲ ಮನೋರಂಜಕವಾದ ಸಂಶೋಧನಾ ಕಾರ್ಯ. ಮೊದಲು ಸಾಮಾನ್ಯವಾದ ಅರ್ಥವುಳ್ಳ ಪದಗಳಿಗೆ ಕ್ರಮೇಣ ವಿಶೇಷಾರ್ಥಗಳೊದಗಿ ಅಂತಹ ಪದಗಳ ವ್ಯುತ್ಪತ್ತಿಯನ್ನು ಕಂಡುಹಿಡಿಯುವುದು ಕಷ್ಟಸಾಧ್ಯವಾಗುವುದು. ಭಾಷೆಯ ಬೆಳವಣಿಗೆಯಲ್ಲಿ ಅಂತಹ ಸಂದರ್ಭಗಳು ಅಸಾಮಾನ್ಯವಾದುವೇನೂ ಅಲ್ಲ. ನಮ್ಮ ಜೀವನದ ಸಾಧನ ಸಾಮಗ್ರಿಗಳು ಹೆಚ್ಚಿದಂತೆಲ್ಲ ಭಾಷೆಯೂ ಅಂತಹ ಸಂದರ್ಭಕ್ಕೆ ತಕ್ಕಂತೆ ಅಭಿವೃದ್ಧಿ ಹೊಂದುತ್ತ ಹೋಗಬೇಕು. ಹೀಗೆ ಅಭಿವೃದ್ಧಿ ಮಾಡುವುದಕ್ಕೆ ಅನೇಕ ಉಪಾಯಗಳುಂಟು: ಇತರ ಭಾಷೆಯನ್ನಾಡುವ ಜನರ ಬಳಕೆಯಿಂದ, ಅವರ ಭಾಷೆಯ ಮಾತುಗಳು ಕೆಲವನ್ನು, ವಿಷಯ ನಿರೂಪಣೆಗಾಗಿ, ಅಂತಹ ಪದಗಳು ನಮ್ಮಲ್ಲಿಲ್ಲದಿದ್ದರೆ, ನಮ್ಮ ಭಾಷೆಗೆ ಸೇರಿಸಿಕೊಳ್ಳಬಹುದು. ಇಂಗ್ಲಿಷು ಭಾಷೆಯಲ್ಲಿ ಅಂತಹ ಪದಗಳು ಅನೇಕವುಂಟು. ಕೆಲವು ಸಂದರ್ಭಗಳಲ್ಲಿ ಹೊಸ ಪದಗಳನ್ನು ಕಲ್ಪನೆ ಮಾಡಬೇಕಾಗುವುದು. ಆದರೆ, ಭಾಷೆಯ ಸಂಪ್ರದಾಯವು, ಸಾಮಾನ್ಯವಾಗಿ, ಇರುವ ಪದಗಳನ್ನೇ ಬೇರೆ ಅರ್ಥದಲ್ಲಿ ಉಪಯೋಗಿಸುವುದು. ಈ ರೀತಿಯಾಗಿ ಒಂದು ಪದದ ಅರ್ಥವನ್ನು ವಿಸ್ತರ ಮಾಡಿ ನಮಗೆ ಬೇಕಾದ ಭಾವವನ್ನು ಸೂಚಿಸುವಂತೆ ಏರ್ಪಡಿಸಬಹುದು. ಧಾತುಗಳು ಸಾಮಾನ್ಯವಾಗಿ ಈ ರೀತಿಯ ವಿಸ್ತರಣಕ್ಕೆ ಸಿಕ್ಕಿ, ಒಂದೇ ಧಾತುವು ಅನೇಕ ಅರ್ಥಗಳನ್ನು ಕೊಡುವಂತೆ ಹಲವು ಸಂದರ್ಭಗಳಲ್ಲಿ ಏರ್ಪಟ್ಟಿದೆ. ಅನೇಕ ಕ್ರಿಯಾಪದಗಳು ತಮ್ಮ ಆದ್ಯರ್ಥವನ್ನು ಬಿಟ್ಟು ಲಾಕ್ಷಣಿಕವಾದ ಬೇರೆ ಅರ್ಥಗಳನ್ನು ಹೊಂದಿವೆ. ಕೆಲವು ಸಂದರ್ಭಗಳಲ್ಲಿ ಒಂದೇ

ಕ್ರಿಯಾಪದವನ್ನು ಅನೇಕ ಅರ್ಥಗಳಲ್ಲಿಯೂ, ಒಂದೇ ಕ್ರಿಯೆಯನ್ನು ಅನೇಕ ಪದಗಳಿಂದಲೂ ರೂಪಿಸುವುದುಂಟು :

ಉದಾಹರಣೆಗಾಗಿ, ದ್ರಾವಿಡ ಭಾಷೆಗಳಲ್ಲಿ ದೊರೆಯುವ 'ಪಾರ್' ಎಂಬ ಧಾತುವನ್ನು ಪರಿಗಣಿಸೋಣ: ಇದರ ಆದ್ಯರ್ಥವು, 'ನೋಡು' ಎಂದು. ತಮಿಳಿನಲ್ಲಿ ಈ ಧಾತುವಿಗೆ ಈಗಲೂ ಇದೇ ಅರ್ಥವಿರುವುದು. ಇದಕ್ಕೆ ಯುಗಾಂತರಗಳಲ್ಲಿ ಎಷ್ಟು ವಿಧವಾದ ಅರ್ಥಗಳು ಬಂದಿವೆಯೆಂಬುದನ್ನು ನೋಡೋಣ: ತಮಿಳು ನೂತನ ನಿಘಂಟುವಿನಲ್ಲಿ, ಈ ಧಾತುವಿಗೆ—

> **ನೋಡು, ಪರಿಗಣಿಸು, ಪರ್ಯಾಲೋಚಿಸು, ಪರೀಕ್ಷಿಸು, ತಿಳಿದುಕೊಳ್ಳು, ಅಪೇಕ್ಷಿಸು, ಹುಡುಕು, ಅರ್ಚಿಸು, ಅಂದಾಜು ಮಾಡು, ಮರಳಿ ನೋಡು, ದೃಷ್ಟಿ ಹಾಕು, ಆದರಿಸು, ಗುರಿಯಿಡು—**

ಇವೇ ಮೊದಲಾದ ಅನೇಕ ಅರ್ಥಗಳು ಇರುವಂತೆ ಬರೆದಿದೆ. ಕನ್ನಡದಲ್ಲಿ ಈ ಕ್ರಿಯಾಪದವು 'ಪಾರು'[1] ಎಂತಲೂ, ಮಳೆಯಾಳದಲ್ಲಿ 'ಪಾರ್ಕ್ಕ' ಎಂತಲೂ ರೂಢಿಯಲ್ಲಿದೆ. ತೆಲುಗಿನಲ್ಲಿ ಈ ಧಾತುವು 'ಪಾರುಪ ಜೂಚುಟ' (ನೇರವಾಗಿ ನೋಡುವುದು) ಎಂಬ ಪದದಲ್ಲಿಯೂ 'ಪರಾಕು' (ಗಮನವಿಲ್ಲದಿರುವಿಕೆ) ಎಂಬ ಪದದಲ್ಲಿಯೂ ಕಾಣುತ್ತಿದೆ. ತಮಿಳಿನಲ್ಲಿಯ 'ಪಾರ್‌ವಾಯಿ ಇಲ್ಲೈ' (ಕುರುಡ) ಎಂಬ ಪದವನ್ನು ಹೋಲಿಸಿ ನೋಡಬಹುದು.

ಈ ಕ್ರಿಯಾಪದದಿಂದ ಹುಟ್ಟಿರುವ ನಾಮಪದಗಳಲ್ಲಿ—ತಮಿಳಿನಲ್ಲಿ 'ಪಾರ್‌ವಲ್' (ನೋಡು, ಕಾಯು; ಹಾರಲಾರದ ಹಕ್ಕಿಯ ಮರಿ, ಜಿಂಕೆಯ ಮರಿ), 'ಪಾರ್ಪ್ಪು' (ಹಾರಲಾರದ ಹಕ್ಕಿಯ ಮರಿ; ಆಮೆ, ಕಪ್ಪೆ, ಹಲ್ಲಿ ಚತುಷ್ಪಾದ ಜಂತು—ಇವುಗಳ ಮರಿ) ಎಂಬ ಪದಗಳನ್ನು ನೋಡೋಣ. ಈ ಅರ್ಥಗಳು ಬರುವುದಕ್ಕೆ ಕಾರಣಗಳು ಬಹಳ ವಿಚಿತ್ರವಾಗಿರುವುವು; ಎಳೆಯ ಮರಿಗಳನ್ನು, ಅನಕ್ಕೆ ಹಾನಿಯುಂಟಾಗದಂತೆ ಕಾಪಿಡಬೇಕು; ಅವುಗಳ ತಾಯಿಗಳು ಅವನ್ನು 'ನೋಡಿ'ಕೊಂಡಿರಬೇಕು. ಈ ಕಾರಣದಿಂದ, ಯಾವ ಜಂತುಗಳನ್ನು ನೋಡಿಕೊಂಡು, ಅಥವಾ ಕಾಪಿಟ್ಟುಕೊಂಡಿರಬೇಕೋ, ಅಂಥವಕ್ಕೆ ಈ ಹೆಸರನ್ನು ಕೊಟ್ಟಿದೆ. ತಮಿಳಿನಲ್ಲಿಯ 'ಪಾರ್‌ವೈ' ಎಂಬ ಪದಕ್ಕೆ 'ನೋಟ' ಎಂಬ ಅರ್ಥ ಬರುವುದಕ್ಕೆ, ಹಾಗೆ ನೋಟ ಮಾಡುವವನು 'ಜ್ಞಾನಿ', ಅಥವಾ 'ಮುಂದಣ ದೃಷ್ಟಿ'ಯುಳ್ಳವನಾಗಿರಬೇಕೆಂಬ ಭಾವನೆ. ಬ್ರಾಹ್ಮಣನಿಗೆ 'ಪಾರ್ವನ್' ಎಂಬ ಹೆಸರು ಬಂದಿರುವುದಕ್ಕೂ ಇದೇ ಕಾರಣ.

ತೆಲುಗಿನಲ್ಲಿ, "ಪಾರುವಮು, ಪಾರುವಾಯಿ, ಪಾವುರಮು, ಪಾವುರಾಯಿ" ಎಂಬ ಪದಗಳಿಗೆ 'ಪಾರಿವಾಳ' ಎಂಬರ್ಥ.[2] ತಮಿಳಿನಲ್ಲಿ—'ಪುರಾ' (ಪಾರಿವಾಳ), 'ಪಾರಾವತಂ' (ಪಾರಿವಾಳ, ಕಪೋತ), 'ಪರುಂಡಲ್' (ಹದ್ದು).

---

1. ಹಾರು ? (ಸಂಪಾದಕ). 2. ಕನ್ನಡದಲ್ಲಿ 'ಪಾರಾವತ'—(ಸಂ.).

'ಓಡುವುದು, ಹರಿಯುವುದು' ಎಂಬ ಅರ್ಥಗಳಲ್ಲಿ ಈ ಧಾತುವು ಉಪಯೋಗವಾಗಿ, ಕೊನೆಗೆ, 'ವಿಸ್ತಾರವಾಗಿ ಹರಡಿರುವ ನೀರು', ಎಂದರೆ, 'ಸಮುದ್ರ' ಎಂದಾಗಿದೆ; ಇದರಿಂದ, ಯಾವುದಾದರೂ ವಿಸ್ತಾರವಾಗಿ ಹರಡಿರುವುದು, ಬೇಗನೆ ಹರಿಯುವುದು—ಎಂಬ ಅರ್ಥಗಳು ಬಂದಿವೆ: ತಮಿಳಿನಲ್ಲಿ,—'ಪಾರಾವಾರಂ' (ಸಮುದ್ರದ ದಡ);[3] 'ಪಾರಾ' (ಪಾದರಸ).

ಒಂದೇ ಪದದಿಂದ ಕೆಲವು ಸಂದರ್ಭಗಳಲ್ಲಿ ವಿರೋಧಾರ್ಥಗಳು ಸೂಚಿತವಾಗುವುದು ಚಿತ್ರವಾಗಿದೆ: ತೆಲುಗಿನಲ್ಲಿ 'ಪಾರುಟ' ಎಂಬ ಪದಕ್ಕೆ 'ಬೇಗನೆ ಹರಿಯುವುದು' ಎಂಬ ಅರ್ಥದೊಂದಿಗೆ 'ಸಾವಕಾಶವಾಗಿ ಹರಿಯುವುದು' ಎಂಬ ಅರ್ಥವೂ ಇದೆ; ಇದರಿಂದ, 'ಭೇದಿಯಾಗುವಿಕೆ', 'ಹರಡಿಕೊಂಡು ಸುತ್ತುವರಿಯುವಿಕೆ' ಎಂಬ ಅರ್ಥಗಳೂ ಸೂಚಿತವಾಗುವುದು. 'ಪರುವು' (ಬೇಗನೆ ಓಡು), 'ಪರ್ವುಟ' (ಹರಡುವಿಕೆ), 'ಪರಿಗೊನುಟ' (ಸುತ್ತಿಕೊಳ್ಳುವಿಕೆ), 'ಪರವು' (ಹಾಸಿಗೆ), 'ಪರಚು' (ಹಾಸು), 'ಪರ್ತಿ' (ಹತ್ತಿ)—ಇವು ಮತ್ತೆ ಕೆಲವು ಉದಾಹರಣೆಗಳು.—[*Journal of the Andhra Historical Research Society for Oct. 1932*—ಇದರಿಂದ ಸಂಗ್ರಹಿಸಿದೆ.]

---

3. ಕನ್ನಡದಲ್ಲಿಯೂ, ಈ ಪದಕ್ಕೆ 'ಸಮುದ್ರದ ದಡ' ಮತ್ತು 'ಸಮುದ್ರ' ಎಂಬ ಅರ್ಥಗಳಿವೆ—(ಸಂ.); ಆದರೆ, 'ಪಾರಾವತ', 'ಪಾರಾವಾರ' ಎಂಬ ಪದಗಳು ಸಂಸ್ಕೃತ ಪದಗಳಲ್ಲವೆ?—(ಸಂ.)

# ಗ್ರಂಥ ವಿಮರ್ಶೆ

## ೧. ಕವಿ ಸಾರ್ವಭೌಮ ಶ್ರೀ ಜಗನ್ನಾಥ ಪಂಡಿತರಾಯ ಚರಿತ್ರೆ

ಲೇಖಕರು.—ಕಾರುಪಲ್ಲಿ ಶಿವರಾಮದಾಸರು (ವಿದ್ಯಾನಿಧಿ), ಕೆಲಮಂಗಲ (ಸೇಲಂ).

ಪ್ರಕಾಶಕರು.—ಟಿ. ಆರ್. ವೈದ್ಯೇಶ್ವರಯ್ಯನವರು, ಮೈಸೂರು.

ಡೆಮ್ಮೈ ಅಷ್ಟಪತ್ರ ಪುಟಗಳು ೧೬+೧೧೨ ; ಬೆಲೆ ರೂ. ೧—೮—೦; ೧೯೩೨.

ಈ ಗ್ರಂಥವು 'ಆನಂದ ಚಂದ್ರಿಕೆ'ಯ ೧೬ನೆಯ ಸಂಪುಟದ ೧, ೨, ೩ನೆಯ ಸಂಚಿಕೆಗಳ ವಸ್ತುವಾಗಿದೆ. ಇದಕ್ಕೆ ಗ್ರಂಥಕರ್ತರು 'ಭೂಮಿಕೆ'ಯನ್ನು ಬರೆದು, ಅದರಲ್ಲಿ, ತಾವು ಈ ಗ್ರಂಥ ಸಂಗ್ರಹಕ್ಕಾಗಿ ಪಟ್ಟ ಶ್ರಮವನ್ನೂ, ಓದಿ ನೋಡಿದ ಗ್ರಂಥಗಳು ಪತ್ರಿಕೆಗಳು ಮೊದಲಾದವುಗಳ ಹೆಸರುಗಳನ್ನೂ ತಿಳಿಸಿರುತ್ತಾರೆ; "ಈ ಚರಿತ್ರೆಗೆ ಸಂಬಂಧಿಸಿದ ಇನ್ನೂ ಅನೇಕ ಸಂವಿಧಾನಗಳನ್ನು ಗ್ರಂಥವಿಸ್ತರ ಭಯದಿಂದಲೂ ಕಾರ್ಯಬಾಹುಳ್ಯ ಮಗ್ನತೆಯಿಂದ ವಿರಾಮವಿಲ್ಲವಾಗಿಯೂ ಪ್ರತ್ಯೇಕಿಸಿ ಭದ್ರಪಡಿಸಿರುತ್ತೇನೆ. ಇದಕ್ಕೆ ಪುನರ್ಮುದ್ರಣ ಯೋಗವುಂಟಾಗುವುದಾದರೆ, ಆಗ್ಗೆ ಸವಿಸ್ತಾರವಾಗಿ ವಿಶದಪಡಿಸುವುದಾಗುತ್ತದೆ" ಎಂದು ಹೇಳಿರುತ್ತಾರೆ.

ಇದು ಪಂಡಿತರಾಯರ 'ಚರಿತ್ರೆ'ಯೆನ್ನಲಾಗುವುದಿಲ್ಲ; ಅವರ ವಿಷಯವಾಗಿ ಗ್ರಂಥಕರ್ತರು ಬರೆದಿರುವ ಉಪನ್ಯಾಸರೂಪವಾದ ವಿಮರ್ಶೆ. ಆ ಪಂಡಿತರಾಯರ ಮೇಲೆ ಹುಟ್ಟಿರುವ ಅಪವಾದಗಳನ್ನು ನಿರ್ಮೂಲ ಮಾಡಿ, ಆತನನ್ನು ದೈವಾಂಶ ಸಂಭೂತನೆಂದೂ, ನಿಷ್ಕಳಂಕನೆಂದೂ, ಅಸಾಮಾನ್ಯ ಪಂಡಿತನೆಂದೂ ತೋರಿಸುವುದೇ ಈ ಗ್ರಂಥದ ಮುಖ್ಯೋದ್ದೇಶವೆಂದು ತೋರುವುದು. 'ಲವಂಗೀ ಜನ್ಮ ವೃತ್ತಾಂತ' ಎಂಬ ಪ್ರಕರಣದಲ್ಲಿ ಲವಂಗಿಯು ಶಾಪ ಗ್ರಸ್ತಳಾದ ಸರಸ್ವತಿಯ ಅವತಾರವೆಂದೂ, ಜಗನ್ನಾಥನು ಬ್ರಹ್ಮನ ಅವತಾರವೆಂದೂ ಹೇಳಿದೆ. ಲವಂಗಿಯು ದುರ್ವಾಸನ ಅವತಾರವಾದ ವಿಶ್ವನಾಥ ಪಂಡಿತನೆಂಬ ಬ್ರಾಹ್ಮಣನ ಮಗಳೆಂದೂ, ಆತನು ಕಾಲವಾದ ಮೇಲೆ, ಪಾಲಕರಿಲ್ಲದೆ ಆಕೆಯು ಶಹಜಾನನ ಕೈವಶಳಾದಳೆಂದೂ, ಆತನ ಮಗನಾದ ದಾರಾ ಯುವರಾಜನಿಗೆ ಆಕೆಯಲ್ಲಿ ಅನುರಾಗವಿದ್ದಿತೆಂದೂ, ಜಗನ್ನಾಥ ಪಂಡಿತನಿಗೂ ದಾರಾವಿಗೂ ಬಹಳ ಸ್ನೇಹವಿದ್ದುದರಿಂದ, ಲವಂಗಿಯ ಮೇಲೆ ಬಹಳ ಪ್ರೇಮವಿದ್ದ ಜಗನ್ನಾಥನಿಗೆ ದಾರಾ ಯುವರಾಜನು ಲವಂಗಿಯ ವೃತ್ತಾಂತವನ್ನು ತಿಳಿಸಿ, "ಆಕೆಯನ್ನು ಜಗನ್ನಾಥ ಪಂಡಿತರಾಯರ ಮನೋವಲ್ಲಭೆಯಾಗಿ ಮಾಡಿದ" ನೆಂದೂ 'ಲವಂಗೀಲಾಭ'ವೆಂಬ ಪ್ರಕರಣದಲ್ಲಿ ಹೇಳಿದೆ.

"Jagannath, who was a Tailinga Brahman (as we learn from a Sanskrit source) composed songs only in the Karnataka

language. His charming songs are written in the Karnataka language."

*Court Life of Shah Jahan.*

ಈ ವಾಕ್ಯವನ್ನು ಹಿಡಿದು ಗ್ರಂಥಕರ್ತರು, "ಜಗನ್ನಾಥ ಪಂಡಿತರಾಯರು ಕರ್ನಾಟಕದಲ್ಲಿ ಅನೇಕ ಕೀರ್ತನೆಗಳನ್ನು (ಗೇಯಗಳನ್ನು) ವಿರಚಿಸಿರುವರೆಂದು ವಿಶದವಾಗುತ್ತದೆ.......ಕರ್ಣಾಟಕ ಭಾಷೆಯಲ್ಲಿ ಕೀರ್ತನೆಗಳನ್ನು ವಿರಚಿಸಿರುವುದರಿಂದ ಇವರು ಕನ್ನಡಿಗರಾಗಿರಬಹುದೆಂದು ಕೆಲವು ಮಂದಿ ವಿದ್ವಾಂಸರಭಿಪ್ರಾಯಪಡುತ್ತಾರೆ" ಎಂದು ಪರಿಶಿಷ್ಟ ಪ್ರಕರಣದಲ್ಲಿ ಹೇಳಿದ್ದಾರೆ. ಇದನ್ನು ನಂಬಲಾಗುವುದಿಲ್ಲ. ಮೇಲೆ ಹೇಳಿರುವ ವಾಕ್ಯವನ್ನು ಬರೆದ ಚರಿತ್ರಕಾರನು 'ಕರ್ಣಾಟಕ' ಎಂಬ ಪದವನ್ನು 'ದ್ರಾವಿಡ' ಎಂಬ ಅರ್ಥದಲ್ಲಿ ಉಪಯೋಗಿಸಿರಬೇಕು. ಈ ಗೀತೆಗಳು ತೆಲುಗಿನಲ್ಲಿರಬೇಕು.

"Composed songs *only* in the Karnataka language" ಎಂದರೇನು? **ತೆಲುಗ**ನಾದ ವಿದ್ವಾಂಸನು **ಕನ್ನಡದಲ್ಲಿ ಮಾತ್ರವೇ** ಗೀತೆಗಳನ್ನು ಬರೆದನೆಂದು ನಂಬಬಹುದೆ?

ಜಗನ್ನಾಥ ಪಂಡಿತನಿಗೆ 'ಮರ್ಕಭಟ್ಟ' ಎಂಬ ಮತ್ತೊಂದು ಹೆಸರಿದ್ದಿತೆಂದೂ, ಆತನ ಶಿಷ್ಯರಾಗಿದ್ದ ಮೈಸೂರು ದೇಶದ ಕೆಲವರು ಪಂಡಿತರು ಮೈಸೂರು ದೇಶಕ್ಕೆ ಹಿಂದಿರುಗಿದ ಮೇಲೆ, ಅವರಲ್ಲಿ ಈರ್ಷ್ಯೆ ಹುಟ್ಟಿ, ಇತರ ಪಂಡಿತರು ಅವರನ್ನು 'ಮಾರ್ಕ'ರೆಂದು ಕರೆದು, ಬಹಳ ತೊಂದರೆಗಳಿಗೊಳಪಡಿಸಿದರೆಂದೂ ಹೇಳಿ, ಈ ಪಂಗಡದವರ ವಿಚಾರವನ್ನು ಪರಿಶಿಷ್ಟ ಪ್ರಕರಣದಲ್ಲಿ ಗ್ರಂಥಕರ್ತರು ವಿಸ್ತಾರವಾಗಿ ಬರೆದಿದ್ದಾರೆ.

---

## ೨-೫. ಕೆಲವು ಮುಜರಾಯಿ ದೇವಸ್ಥಾನಗಳ ಮ್ಯಾನ್ಯುಯಲ್, ಯಾ ಕೈಪಿಡಿಗಳು

(೨) ಶ್ರೀರಂಗಪಟ್ಟಣದ ಶ್ರೀರಂಗನಾಥಸ್ವಾಮಿ ದೇವಸ್ಥಾನ.
ಡೆಮ್ಮೈ ಅಷ್ಟಪತ್ರ ಪುಟಗಳು ೧೬೫ ; ಬೆಲೆ ರೂ. ೧—೮—೦.

(೩) ನಂಜನಗೂಡು ಶ್ರೀ ಶ್ರೀಕಂಠೇಶ್ವರಸ್ವಾಮಿ ದೇವಸ್ಥಾನ.
ಡೆಮ್ಮೈ ಅಷ್ಟಪತ್ರ ಪುಟಗಳು ೧೮೨ ; ಬೆಲೆ ರೂ. ೧—೮—೦.

(೪) ಶ್ರೀ ಚಾಮರಾಜೇಶ್ವರಸ್ವಾಮಿ ದೇವಸ್ಥಾನ.
ರಾಯಲ್ ಅಷ್ಟಪತ್ರ ಪುಟಗಳು ೨೧೪ ; ಬೆಲೆ ರೂ. ೧—೧೨—೦.

(೫) ಶ್ರೀ ವೇಲಾಪುರಿ ಸೌಮ್ಯಕೇಶವ ದೇವರ ದೇವಸ್ಥಾನ.
ರಾಯಲ್ ಅಷ್ಟಪತ್ರ ಪುಟಗಳು ೧೪೯ ; ಬೆಲೆ ರೂ. ೧—೦—೦.

ಸಂಪಾದಕರು.—ಬಿ. ರಾಮಯ್ಯನವರು, ಬಿ.ಎ., ಬೆಂಗಳೂರು.

ಪ್ರಕಾಶಕರು.—ಮೈಸೂರು ಸರಕಾರದವರು.

ಮುದ್ರಣಕಾರರು.—ಮೈಸೂರು ಸರಕಾರದ ಮುದ್ರಣಾಲಯ,
ಬೆಂಗಳೂರು ; ೧೯೩೨.

ಈ ಕೈಪಿಡಿಗಳನ್ನು ಮೈಸೂರು ಸರಕಾರದವರು ಆಯಾ ದೇವಸ್ಥಾನಗಳ ಅಧಿಕಾರಿಗಳ ಉಪಯೋಗಕ್ಕಾಗಿಯೂ ಇತರರ ಉಪಯೋಗಕ್ಕಾಗಿಯೂ ಬರೆಯಿಸಿ ಪ್ರಕಟಿಸಿರುತ್ತಾರೆ. ಪ್ರತಿ ಪುಸ್ತಕದಲ್ಲಿಯೂ ಆ ದೇವಸ್ಥಾನದ ನಕಾಸೆಯನ್ನೂ, ಮುಂಭಾಗದ ಛಾಯಾ ಚಿತ್ರವನ್ನೂ ಕೊಟ್ಟಿದೆ. ಕ್ಷೇತ್ರ ಮಹಿಮೆ, ದೇವಸ್ಥಾನದ ಪೂರ್ವ ಚರಿತ್ರೆ, ನೌಕರರೂ ಅವರ ಕೆಲಸಗಳೂ, ವರಮಾನ ಮತ್ತು ಖರ್ಚುಗಳು, ಸೇವಾರ್ಥಗಳ ಪಟ್ಟಿ, ಸೇವೆಗಳು, ಮಹನೀಯರಿಗೆ ನಡೆಯತಕ್ಕ ಮರ್ಯಾದೆಗಳು, ಅಲ್ಲಿರುವ ಶಾಸನಗಳು, ಸಾಲು ಗುಡಿಗಳೂ ವಿಗ್ರಹಗಳೂ, ಗ್ರಾಮ ಭೂಮಿ ಮೊದಲಾದ ಆಸ್ತಿಗಳು—ಇವೇ ಮೊದಲಾದ ವಿಷಯಗಳನ್ನು ವಿಶದವಾಗಿ ತಿಳಿಸಿದೆ.

---

## ೬. ಮರ್ಮಾಂಕಗಳು

ಲೇಖಕರು.—ಗ್ರಾ. ತಿ. ನಾರಾಯಣಯ್ಯಂಗಾರ್ಯರು, ಬೆಂಗಳೂರು.

ಡೆಮ್ಮೈ ಅಷ್ಟಪತ್ರ ಪುಟಗಳು ೧೪ ; ಮೋದಿ ಪವರ್ ಪ್ರಿಂಟಿಂಗ್ ವರ್ಕ್ಸ್, ಬೆಂಗಳೂರು ಸಿಟಿ.

ಈ ಉಪನ್ಯಾಸದಲ್ಲಿ, ಲೇಖಕರು ಕೆಲವು ಸಂಖ್ಯೆಗಳಿಗೆ ಜನರಲ್ಲಿ ರೂಢಿಯಾಗಿರುವ ಮರ್ಮಾರ್ಥಗಳನ್ನು ವಿಚಾರ ಮಾಡಿ ಅವಕ್ಕೆ ಕಾರಣವೇನಿರಬಹುದೆಂದು ತಿಳಿಯಲು ಪ್ರಯತ್ನಿಸಿರುತ್ತಾರೆ. ಅಳೆಯುವಾಗ, 'ಏಳು' ಎಂಬ ಸಂಖ್ಯೆಯನ್ನುಚ್ಚರಿಸದೆ 'ಆರು ಮತ್ತೊಂದು' ಎನ್ನುವುದೂ, ಅವನ ಕಥೆ "ಏಳೂ ಹನ್ನೊಂದೂ" ಆಗಿ ಹೋಯಿತು ಎನ್ನುವುದೂ, ಮೂರು ಮತ್ತು ಏಳನೆಯ ಸಂಖ್ಯೆಗಳ ವಿಷಯವಾಗಿ ಜನರಿಗಿರುವ ನಂಬಿಕೆ—ಇವೇ ಮೊದಲಾದ ವಿಷಯಗಳನ್ನು ಲೇಖಕರು ಸರಸವಾಗಿ ವಿವರಿಸಿರುತ್ತಾರೆ.

---

## ೭. ಸಚಿತ್ರ ಹೊಸ ಕನ್ನಡ ಬಾಲಬೋಧೆ

ಲೇಖಕರು.—ನರಸಿಂಹ ಪುರಾಣಿಕರು, ತಿಪಟೂರು.

ಮುದ್ರಣಕಾರರು.—ಶ್ರೀ ಪಾರ್ಶ್ವನಾಥ ಮುದ್ರಾಲಯ, ತುಮಕೂರು.

ಕ್ರೌನ್ ಅಷ್ಟಪತ್ರ ಪುಟಗಳು ೪೦ ; ಬೆಲೆ ೮ ಆಣೆ ; ೧೯೩೨.

"ಮಕ್ಕಳಿಗೆ ಪದಾರ್ಥಗಳನ್ನು ಬಳಕೆ ಮಾಡಿ ಅವುಗಳ ಹೆಸರುಗಳನ್ನು ಬರೆಸು ಪದರ ಮೂಲಕ ಅವರಿಗೆ ಅಕ್ಷರ ಪರಿಚಯವನ್ನು ಮಾಡಿಸುವ ಆಧುನಿಕ ಪದ್ಧತಿಯಲ್ಲಿ

ಈ ಪುಸ್ತಕ"ವನ್ನು ಬರೆದಿದೆ. ಅಕ್ಷರಗಳು ದೊಡ್ಡವಾಗಿಯೂ ಸ್ಫುಟವಾಗಿಯೂ ಇವೆ. ಮೊದಲ ೨೮ ಪಾಠಗಳಿಗೂ ೬೯ನೆಯ ಪಾಠಕ್ಕೂ ಚಿತ್ರಗಳಿವೆ. ಕೊನೆಯಲ್ಲಿ ಅಂಕೆಗಳೂ, ಮಗ್ಗಿಯೂ, ಎರಡು ಸ್ತೋತ್ರಗಳೂ ಇವೆ. ಈ ಪುಸ್ತಕದ ರೀತಿಯಲ್ಲಿ ಸರಿಯಾಗಿ ಪಾಠಕಲಿಸಿದರೆ ಹುಡುಗರಿಗೆ ಒಂದು ವರುಷದಲ್ಲಿ ಅಕ್ಷರ ಜ್ಞಾನವು ಚೆನ್ನಾಗಿ ಆಗುವುದು. 'ಋ' ಎಂಬ ಸ್ವರವನ್ನು ಬಿಟ್ಟಿರುವುದು ಅಷ್ಟು ಸಮರ್ಪಕವಾಗಿ ಕಾಣುವುದಿಲ್ಲ. 'ಕೃ' ಮೊದಲಾದುವನ್ನು ಕಲಿಸುವುದು ಹೇಗೆ? ಇಂತಹ ಮೊದಲ ನೆಯ ಪುಸ್ತಕದಲ್ಲಿ ತಪ್ಪುಗಳಿಗೂ, ತಪ್ಪು ತಿಳಿವಳಿಕೆಗೂ ಸ್ವಲ್ಪವೂ ಅವಕಾಶ ಕೊಡ ಬಾರದು. ಇದರಲ್ಲಿ ಈ ನ್ಯೂನತೆಗಳು ಇಲ್ಲದೆಯಿಲ್ಲ. ಇವಕ್ಕೆ ಕೆಲವು ಉದಾಹರಣೆ ಗಳನ್ನು ಕೊಡುವೆವು:—

(೧) ಮುಂದೆ ಹೇಳುವ ರೂಪಗಳು ಸುಷ್ಠುವಲ್ಲ:—

ಬರಹ (೯), ಪಠ (೧೪), ತರ (೧೬), ಜಾನಿ (೩೭), ಸೀಸಿ (೩೮), ಹಾರೆಯ ಕಾಲು (೪೨), ಜೈಸು (೪೩), ದುಖ್ಖ (೫೩), ಮ್ಯೆಯ್ಯಿ (೫೮), ನೈಯ್ಗೆ (೭೪), ಸಿವ್ನು (೬೩), ಚಿನ್ನೆ (೬೩), ಅನ್ಹಿಕ (೬೩), ಮತ್ಸರ್ಯ (೬೪), ಕೋಪಿಸ್ಟ (೬೫), ಮಧ್ಯಾನ್ಹ (೭೫), ಬ್ರಾಮ್ಹಣ (೭೫).

(೨) ಒಂದೇ ಪದಕ್ಕೆ ಎರಡು ರೂಪಗಳು.—

ಮಟ (೧೦), ಮಠ (೧೪); ಚೆಂಡು, ಚಂಡು (೪೯); ಡಬ್ಬ, ಡಬ್ಬಿ (೫೭); ಬರಹ (೯), ಬರೆಹ (೬೪); ದುಃಖಿಸು (೪೮), ದುಖ್ಖಿ (೫೩); ತುಪ್ಪಾತಂದ (೫೭), ತುಪ್ಪ ಬೇಕು (೫೭).

(೩) ಮಹಾಪ್ರಾಣಾಕ್ಷರಗಳು.—

ಪಠ (೧೪), ಮಠ (೧೪), ಅಕ್ಷ (೫೩), ಪಿಥ (೫೬), ತುತ್ಥ (೫೬), ಭಾವಿ (೭೧).

(೪) ಅಪ್ರಸಿದ್ಧವಾದ ಪದಗಳು.—

ಉಡ (೧೭), ಘಮ (೧೯), ಐಲ (೨೯), ತುತ್ಥ (೫೬), ತತ್ತು (೫೬).

(೫) ಅರ್ಕಾವತ್ತಿನ ವಿಚಾರವನ್ನು ಹೇಳದೆಯೇ ಅದನ್ನು ಕೆಲವು ಕಡೆ ಉಪ ಯೋಗಿಸಿರುತ್ತಾರೆ.—

ಉದಾ.—ಪದಾರ್ಥ (೭೦), ಕರ್ಣಾಟ (೭೯).

(೬) 'ವುದು' ಎಂಬ ರೂಪಕ್ಕೆ ಬದಲಾಗಿ 'ವದು' ಎಂಬ ರೂಪವನ್ನೇ ಸಾಮಾನ್ಯ ವಾಗಿ ಉಪಯೋಗಿಸಿದೆ; ಆದರೆ 'ವುದು' ಎಂಬುವುದೂ ಕೆಲವು ಕಡೆ ಕಾಣಬರುತ್ತದೆ.

ವಾಗಿರುವದು (೪೯), ಬರುವುವು (೪೯), ಳಿರುವುದರಿಂದ (೬೯), ಕೇಡಾಗುವ ದುಂಟು (೬೯).

(೭) ಪಾಲ್ಕಿ (೬೦), ಗರ್ದ್ದ (೬೧), ಬಟ್ಲು (೬೩), ಅಂಗ್ಳ (೬೩), ಸಂಬ್ಳ (೬೩)— ಇವೇ ಮೊದಲಾದ ರೂಪಗಳು ಸುಷ್ಠುವಲ್ಲ.

(೮) ಮುದ್ರಣದ ತಪ್ಪುಗಳು.—

ಪೌಳಿಯು (೪೬), ಹೋಡೆ (೪೯), ಅನುಕೂವಾದ (೭೧, ೭೩).

ಬಾಲಕರಿಗಾಗಿ ಬರೆದ ಪುಸ್ತಕಗಳಲ್ಲಿ ಒಂದು ತಪ್ಪೂ ಇರಬಾರದು; ಇದ್ದಲ್ಲಿ, ಅಂತಹ ತಪ್ಪುಗಳು ಅವರಲ್ಲಿ ನಟ್ಟು, ಮುಂದೆ ಅವನ್ನು ತಿದ್ದುವುದು ಬಹಳ ಕಷ್ಟವಾಗುವುದು.

---

## ೮. ಗೌತಮ ಧರ್ಮಸೂತ್ರಮುಲು

ಪ್ರಕಾಶಕರು ಮತ್ತು ಮುದ್ರಾಪಕರು.—ಪಂಚಾಗ್ನುಲ ಆದಿನಾರಾಯಣ ಶಾಸ್ತ್ರಿಗಳು, ಮದ್ರಾಸು.

ಕ್ರೌನ್ ಚತುಷ್ಪತ್ರ ಪುಟಗಳು ೫೨೧ ; ಬೆಲೆ ರೂ. ೯—೦—೦;
(ಚಂದಾದಾರರಿಗೆ ಮಾತ್ರ ರೂ. ೪—೮—೦); ೧೯೨೭.

ಇದು 'ಆರ್ಯಭಾರತೀ ಗ್ರಂಥಮಾಲಿಕೆ'ಯ ಮೊದಲನೆಯ ಕುಸುಮ; ಪ್ರಸಿದ್ಧವಾದ ಧರ್ಮಶಾಸ್ತ್ರ ಗ್ರಂಥ. ಮೂಲವನ್ನು ಸಂಸ್ಕೃತ ಭಾಷೆಯಲ್ಲಿ ತೆಲುಗಕ್ಷರದಲ್ಲಿ ಸೂತ್ರರೂಪವಾಗಿ ಕೊಟ್ಟಿದೆ; ಹರದತ್ತಾಚಾರ್ಯರ 'ಮಿತಾಕ್ಷರ'ವೆಂಬ ಸಂಸ್ಕೃತ ವ್ಯಾಖ್ಯಾನದೊಡನೆಯೂ, ತೆಲುಗು ಭಾಷೆಯಲ್ಲಿ ಬರೆದ ವಿವರಣೆ ವಿಶೇಷಾಂಶಗಳೊಡನೆಯೂ ಪೀಠಿಕೆಯೊಡನೆಯೂ ಮುದ್ರಿಸಿದೆ.

---

## ೯. ವಾತ್ಸ್ಯಾಯನ ಕಾಮಸೂತ್ರಮುಲು

ಪ್ರಕಾಶಕರು.—ಪಂಚಾಗ್ನುಲ ಆದಿನಾರಾಯಣ ಶಾಸ್ತ್ರಿಗಳು, ಮದ್ರಾಸು.

ಕ್ರೌನ್ ಚತುಷ್ಪತ್ರ ಪುಟಗಳು ೭೨೮, ಬೆಲೆ ರೂ. ೨೦—೦—೦;
(ಚಂದಾದಾರರಿಗೆ ಮಾತ್ರ ರೂ. ೧೦—೦—೦) ; ೧೯೩೦.

ಇದು 'ಆರ್ಯಭಾರತೀ ಗ್ರಂಥಮಾಲೆ'ಯ ಎರಡನೆಯ ಕುಸುಮ; ವಾತ್ಸ್ಯಾಯನ ಋಷಿಗಳಿಂದ ಬರೆಯಲ್ಪಟ್ಟುದೆಂದು ಪ್ರಸಿದ್ಧಿಪಡೆದ ಗ್ರಂಥ. ಮೂಲವನ್ನು ಸಂಸ್ಕೃತ ಭಾಷೆಯಲ್ಲಿ ತೆಲುಗಕ್ಷರದಲ್ಲಿ ಸೂತ್ರರೂಪವಾಗಿ ಕೊಟ್ಟಿದೆ; ಯಶೋಧರನ 'ಜಯಮಂಗಳ' ವೆಂಬ ಸಂಸ್ಕೃತ ವ್ಯಾಖ್ಯಾನದಿಂದಲೂ, ತೆಲುಗು ಭಾಷೆಯಲ್ಲಿ ಬರೆದ ವಿವರಣೆ, ವಿಶೇಷಾಂಶ, ಪೀಠಿಕೆಗಳೊಡನೆಯೂ ಮುದ್ರಿಸಿದೆ. ಈ ಗ್ರಂಥದ 'ಸಾಧಾರಣಾಧಿಕರಣ' ವೆಂಬ ಮೊದಲನೆಯ ಪ್ರಕರಣದಿಂದ ಗ್ರಂಥ ವಿಷಯವೆಲ್ಲವೂ ಸಂಗ್ರಹವಾಗಿ ತಿಳಿಯಬರುತ್ತದೆ.

---

## ೧೦. ರಾಜಶೇಖರ ಕವಿ ಕಾವ್ಯ ಮೀಮಾಂಸ

ಅನುವಾದಕರು.—ಪಂಚಾಗ್ನುಲ ಆದಿನಾರಾಯಣ ಶಾಸ್ತ್ರಿಗಳು, ಮದ್ರಾಸು.

ಪ್ರಕಾಶಕರು.—ಆರ್ಯಭಾರತೀ ಗ್ರಂಥಮಾಲಿಕಾಧಿಪತಿಗಳು, ಮದ್ರಾಸು.

ಕ್ರೌನ್ ಅಷ್ಟಪತ್ರ ಪುಟಗಳು ೪೫೭; ಬೆಲೆ ೩ ರೂಪಾಯಿ;

(ಚಂದಾದಾರರಿಗೆ ರೂ. ೧—೮—೦); ೧೯೩೦.

ಇದು 'ಆರ್ಯಭಾರತೀ ಗ್ರಂಥಮಾಲೆ'ಯ ಮೂರನೆಯ ಕುಸುಮ; ಸಾಹಿತ್ಯ ವಿಷಯಕ ವಿಮರ್ಶಕ ಗ್ರಂಥ. ಇದಕ್ಕೆ ಆಂಧ್ರ ವಿವರಣೆಯನ್ನು ಕೊಟ್ಟಿದೆ. ರಾಜಶೇಖರನೆಂಬ ಈ ಸಂಸ್ಕೃತ ಮಹಾಕವಿಯು ಪ್ರಖ್ಯಾತನು. ಬಾಲರಾಮಾಯಣಾದಿ ಅನೇಕ ದೃಶ್ಯ ಶ್ರಾವ್ಯ ಕಾವ್ಯಗಳನ್ನು ರಚಿಸಿದ್ದಾನೆ. ಕಾವ್ಯಗಳಲ್ಲಿ ಬರುವ ಶಬ್ದಾರ್ಥಗಳ ಸ್ವರೂಪವನ್ನು ಈ ಗ್ರಂಥದಲ್ಲಿ ವಿಚಾರ ಮಾಡಿದೆ. ಸಂಸ್ಕೃತದಲ್ಲಿ ಧ್ವನ್ಯಾಲೋಕ, ಕಾವ್ಯಪ್ರಕಾಶ ಮೊದಲಾದವುಗಳಲ್ಲಿ ಹೇಳುವಂತೆ, ಕಾವ್ಯಗಳ ವಿಮರ್ಶೆಯನ್ನು ಮಾಡುವುದಲ್ಲದೆ ಇತರ ಶಾಸ್ತ್ರವಿಷಯಗಳು ಕೆಲವನ್ನೂ ಈ ಗ್ರಂಥವು ಸೂಕ್ಷ್ಮವಾಗಿ ತಿಳಿಸುವುದು. ಲಕ್ಷಣವನ್ನು ಆಂಧ್ರ ಭಾಷೆಯಲ್ಲಿ ವಿವರಿಸಿ, ಉದಾಹರಣೆಗಳನ್ನು ಪ್ರಾಚೀನ ಪ್ರಸಿದ್ಧವಾದ ಸಂಸ್ಕೃತ ಗ್ರಂಥಗಳಿಂದ ಆರಿಸಿ ಕೊಟ್ಟಿದೆ. ಇದರಲ್ಲಿ ೧೮ ಅಧ್ಯಾಯಗಳಿವೆ. ಪುಸ್ತಕದ ಕೊನೆಯಲ್ಲಿ ಪೀಠಿಕೆಯನ್ನು ಆಂಧ್ರ ಭಾಷೆಯಲ್ಲಿ ಕೊಟ್ಟಿದೆ.

---

೧೯೩೧ನೆಯ ಡಿಸೆಂಬರು ೨೯ನೆಯ ತಾರೀಖು ಮೊದಲ್ಗೊಂಡು

## ಕಾರವಾರದಲ್ಲಿ ನಡೆದ ಕರ್ಣಾಟಕ ಸಾಹಿತ್ಯ ಸಮ್ಮೇಳನದ ೧೭ನೆಯ ಅಧಿವೇಶನದ ಮತ್ತು ಕರ್ಣಾಟಕ ಏಕೀಕರಣ ಸಮ್ಮೇಳನದ ಅಧಿವೇಶನದ ಆಯ ವ್ಯಯದ ಲೆಕ್ಕ

**ಆಯ.—**

| | ಮೊಬಲಗು ರೂ. ಆ. ಪೈ |
|---|---|
| ೧೩೮ ಮಂದಿ ಪ್ರತಿನಿಧಿಗಳಿಂದ ಬಂದ ಚಂದಾ ಮೊಬಲಗು .. | ೨೯೮–೧೦–೦ |
| ೪೭ ಮಂದಿ ಸ್ವಾಗತ ಮಂಡಲಿಯ ಸದಸ್ಯರಿಂದ ,, .. | ೨೩೫–೦–೦ |
| ೭೦ ಮಂದಿ ಆಗಂತುಕರಿಂದ (೮ ಆಣೆಯ ಮೇರೆ) ,, .. | ೩೫–೦–೦ |
| ೫೯ ,, ,, (೪ ,, ,,) ,, .. | ೧೪–೧೨–೦ |
| ಚಿಲ್ಲರೆ ಚಂದಾ ಮೊಬಲಗು .. .. .. | ೬೯–೪–೦ |
| ಇತರ ಸಹಾಯ ದ್ರವ್ಯ .. .. .. | ೨೩–೦–೦ |
| ೨೨ ಮಂದಿ ಪ್ರತಿನಿಧಿಗಳಿಂದ ಊಟಕ್ಕಾಗಿ ಬಂದ ಮೊಬಲಗು (೩ ರೂಪಾಯಿಗಳ ಮೇರೆ) | ೬೬–೦–೦ |
| ಉಳಿದುಹೋದ ಪದಾರ್ಥಗಳನ್ನು ಮಾರಿದ್ದರಿಂದ ,, .. | ೩೩–೪–೩ |
| ಭಾವ ಚಿತ್ರಗಳನ್ನು ಮಾರಿದ್ದರಿಂದ ,, .. | ೪–೦–೦ |
| ಶಿರಸಿ ಮ್ಯುನಿಸಿಪಾಲಿಟಿಯಿಂದ ಬಂದ ಸಹಾಯ ದ್ರವ್ಯ .. | ೨೫–೦–೦ |
| ಕುಮಟದ ,, ,, .. | ೨೫–೦–೦ |
| ,, ತಾಲ್ಲೂಕು ಬೋರ್ಡಿನಿಂದ ,, .. | ೧೦–೦–೦ |
| ಕೆನರಾ ಡಿಸ್ಟ್ರಿಕ್ಟು ಬೋರ್ಡಿನಿಂದ ,, .. | ೧೦–೦–೦ |
| ಶಿದ್ದಾಪುರದ ತಾಲ್ಲೂಕು ಬೋರ್ಡಿನಿಂದ ,, .. | ೪–೧೪–೦ |
| ಒಟ್ಟು ರೂ. .. | ೮೫೩–೧೨–೩ |

**ವ್ಯಯ.—**

| | ರೂ. ಆ. ಪೈ |
|---|---|
| (೧) ಪ್ರಯಾಣದ ವೆಚ್ಚ .. .. .. | ೮೧–೨–೬ |

| | ರೂ. ಆ. ಪೈ |
|---|---|
| (೧) ಸಾಹಿತ್ಯ ಸಮ್ಮೇಳನದ ಅಧ್ಯಕ್ಷರು ಮ॥ ಮುಳಿಯ ತಿಮ್ಮಪ್ಪಯ್ಯನವರಿಗೆ | ೨೫–೦–೦ |
| (೨) ಕವಿ ಸಮ್ಮೇಳನದ ಅಧ್ಯಕ್ಷರು ಮ। ವಿ. ಸೀತಾರಾಮಯ್ಯನವರಿಗೆ | ೨೧–೪–೦ |
| (೩) ಏಕೀಕರಣ ಸಭೆಯ ಅಧ್ಯಕ್ಷರು ಮ॥ ಜೆ. ಎ. ಸಾಲ್ಡಾನ್ಹಾ ಅವರಿಗೆ | ೨೫–೪–೦ |
| (೪) ಕಾರ್ಯದರ್ಶಿಯವರು ಡಿಸ್ಟ್ರಿಕ್ಟಿನಲ್ಲಿ ಪ್ರಯಾಣ ಮಾಡಿದ ವೆಚ್ಚ | ೭–೧೦–೬ |
| (೫) ಮ॥ ಯಾಜೀಯವರಿಗೆ | ೨–೦–೦ |
| ಒಟ್ಟು ರೂ. | ೮೧–೨–೬ |

| | |
|---|---|
| (೨) ಅಂಚೆ ಮತ್ತು ತಂತಿಯ ವೆಚ್ಚ .. .. | ೩೮–೨–೦ |
| (೩) ಊಟ ಉಪಾಹಾರಗಳ ವೆಚ್ಚ .. .. | ೧೧೫–೪–೦ |

| | | ರೂ. ಆ. ಪೈ |
|---|---|---|
| (೧) | ಹಾಲು | ೧೭—೬—೦ |
| (೨) | ಅಡಿಗೆಯ ಸಾಮಾನು | ೫೩—೧೧—೩ |
| (೩) | ಅಡಿಗೆಯವರಿಗೆ ರುಸುಂ | ೧೨—೮—೦ |
| (೪) | ಉಡುಪಿ ಹೋಟಲಿಗೆ | ೧೨—೮—೦ |
| (೫) | ಅಂಕೋಲದಿಂದ ಬಂದ ಸಂಗೀತಗಾರರಿಗೆ ಊಟ | ೨—೪—೦ |
| (೬) | ಸ್ವಯಂ ಸೇವಕರಿಗೆ ಉಪಾಹಾರ | ೧೬—೧೪—೯ |
| | ಒಟ್ಟು ರೂ. | ೧೧೫—೪—೦ |

| | | |
|---|---|---|
| (೪) | ಪ್ರತಿನಿಧಿಗಳು ಮೊದಲಾದವರಿಗೆ ಗುರುತಿನ ಪದಕಗಳಿಗಾಗಿ .. .. | ೮—೧—೩ |
| (೫) | ಕೂಲಿ .. .. .. | ೪೮—೯—೦ |
| (೬) | ಬರೆವಣಿಗೆಯ ಸಾಮಗ್ರಿ .. .. | ೧೯—೨—೦ |
| (೭) | ಮುದ್ರಣದ ವೆಚ್ಚ .. .. | ೨೫೭—೬—೦ |
| (೮) | ಮ॥ ಗರುಡ ಸದಾಶಿವರಾಯರಿಗೆ ಕೊಟ್ಟ ಬಹುಮಾನ ಪದಕಕ್ಕೆ .. .. | ೨೦—೧೦—೦ |
| (೯) | ಭಾವ ಚಿತ್ರಗಳಿಗೆ .. .. .. | ೪೫—೮—೦ |
| (೧೦) | ಕೀರ್ತನಕಾರರು ಮ॥ ಶಿವಮೂರ್ತಿಶಾಸ್ತ್ರಿಗಳ ವೆಚ್ಚ | ೩೫—೦—೦ |
| (೧೧) | ಅಂಕೋಲದ ಸಂಗೀತಗಾರರ ವೆಚ್ಚ .. .. | ೧೧—೮—೦ |
| (೧೨) | ಹಾಡಿದ ಹುಡುಗಿಯರಿಗೆ ಪಾವಡಗಳ ವೆಚ್ಚ .. | ೪—೮—೦ |
| (೧೩) | ದೀಪದ ವೆಚ್ಚ .. .. .. | ೨೪—೦—೦ |
| (೧೪) | ಕುರ್ಚಿ ಮೊದಲಾದ ಸಾಮಾನುಗಳ ವೆಚ್ಚ .. | ೭—೦—೦ |
| (೧೫) | ಇತರ ಚಿಲ್ಲರೆಯ ಸಾಮಾನು ವಗೈರೆಯ ವೆಚ್ಚಗಳು | ೬೩—೧೨—೬ |
| (೧೬) | ಧಾರವಾಡದ ಕರ್ಣಾಟಕ ಏಕೀಕರಣ ಸಭೆಗೆ | ೨೩—೪—೦ |
| * (೧೭) | ಬೆಂಗಳೂರು ಕರ್ಣಾಟಕ ಸಾಹಿತ್ಯ ಪರಿಷತ್ತಿಗೆ | ೫೦—೮—೦ |
| (೧೮) | ಕೈಯಲ್ಲಿ ಉಳಿದಿರುವುದು .. .. | ೦—೭—೦ |
| | ಒಟ್ಟು ರೂ. .. | ೮೫೩—೧೨—೩ |

ಸೂಚನೆ.—ಮ್ಯುನಿಸಿಪಾಲಿಟಿಗಳವರೂ ಲೋಕಲ್ ಬೋರ್ಡುಗಳವರೂ ತಮ್ಮ ಸಹಾಯ ದ್ರವ್ಯವನ್ನು ೧೯೩೨ನೆಯ ಆಗಷ್ಟು ವರೆಗೂ ಕಳುಹಿಸಲಿಲ್ಲವಾದುದರಿಂದ ಲೆಕ್ಕವನ್ನು ಪ್ರಕಟಿಸಲು ಇಷ್ಟು ಸಾವಕಾಶವಾಯಿತು.

ಲೆಕ್ಕವನ್ನು ಸರಿನೋಡಿದುದಕ್ಕೆ ಕಾರ್ಯಕಾರಿ ಮಂಡಲಿಯ ಅಧ್ಯಕ್ಷರಾದ ಮ॥ ತೇಲಂಗರವರ ಸೈನೂ, ಏಕೀಕರಣ ಸಮ್ಮೇಳನದ ಸ್ವಾಗತ ಮಂಡಲಿಯ ಅಧ್ಯಕ್ಷರೂ ಮತ್ತು ಕಾರವಾರದ ಅಡ್ವೋಕೇಟರೂ ಆದ ಮ॥ ಎಸ್. ಸಿಲ್ವಾ, ಎಲ್‌ಎಲ್.ಬಿ. ಅವರ ಸೈನೂ ಆಗಿದೆ.

* ಈ ಮೊಬಲಗು ಪರಿಷತ್ತಿಗೆ ಇನ್ನೂ ಪಾವತಿಯಾಗಿಲ್ಲ.—ಸಂಪಾದಕ.




ಶ್ರೀಃ

ಕರ್ಣಾಟಕ ಸಾಹಿತ್ಯ

# ಪರಿಷತ್ಪತ್ರಿಕೆ



ಸಂಪುಟ ೧೭]    ಆಂಗೀರಸ ಸಂ॥ ಪುಷ್ಯಮಾಸ    [ಸಂಚಿಕೆ ೪

## ಹದಿನೆಂಟನೆಯ ಕರ್ಣಾಟಕ ಸಾಹಿತ್ಯ ಸಮ್ಮೇಳನ

ಕರ್ಣಾಟಕದ ಸಾಹಿತ್ಯ ಸಮ್ಮೇಳನದ ಹದಿನೆಂಟನೆಯ ಅಧಿವೇಶನವು ಕೊಡಗು ದೇಶದ ಮುಖ್ಯ ನಗರವಾದ ಮಡಿಕೇರಿಯಲ್ಲಿ ಆಂಗೀರಸ ಸಂವತ್ಸರದ ಪುಷ್ಯ ಶುದ್ಧ ಪಾಡ್ಯಮಿಯ ದಿನ (೧೯೩೨ನೆಯ ಇಸವಿ ಡಿಸೆಂಬರು ೨೮ನೆಯ ತಾರೀಖು) ಆರಂಭವಾಗಿ ಮೂರು ದಿನಗಳು ಬಹಳ ವಿಜೃಂಭಣೆಯಿಂದ ನಡೆಯಿತು. ಕೊಡಗಿನಲ್ಲಿ ಕನ್ನಡ ಭಾಷೆಯು ಅಷ್ಟು ಹೆಚ್ಚಾಗಿ ಪ್ರಚಾರವಿಲ್ಲದಿದ್ದರೂ, ಅಲ್ಲಿಯ ಮಹಾ ಜನರು ಸಮ್ಮೇಳನದ ವಿಚಾರದಲ್ಲಿ ತೋರಿಸಿದ ಉತ್ಸಾಹಾತಿಶಯವನ್ನು ನೋಡಿದ ಪ್ರತಿಯೊಬ್ಬ ಕನ್ನಡಿಗನೂ ಬಹಳ ಸಂತೋಷಪಟ್ಟು, ಕೊಡಗು ಬಾಂಧವರನ್ನು ಮನವಾರೆ ಕೊಂಡಾಡಿದನು. ಸ್ವಾಗತ ಸಮಿತಿಯವರು ತೋರಿಸಿದ ಆದರಾತಿಶಯಗಳೂ, ಕೊಡಗಿನ ಮಹಾಜನರು ಮುಕ್ತ ಹಸ್ತದಿಂದ ನೀಡಿದ ಸತ್ಕಾರವೂ ಪ್ರತಿನಿಧಿಗಳನ್ನು ಸಂತೋಷಾತಿಶಯದಿಂದ ಮುಗ್ಧರಾಗುವಂತೆ ಮಾಡಿದುವು. ಮೈಸೂರು, ಬೆಂಗಳೂರು, ದಕ್ಷಿಣ ಕನ್ನಡ, ಉತ್ತರ ಕನ್ನಡ, ನಿಜಾಂ ಕರ್ಣಾಟಕ ಮೊದಲಾದ ಪ್ರಾಂತಗಳಿಂದಲೂ ಕೊಡಗು ದೇಶದ ನಾನಾ ಭಾಗಗಳಿಂದಲೂ ಅನೇಕ ಮಂದಿ ಭಾಷಾಪ್ರೇಮಿಗಳು ಬಂದಿದ್ದರು. ಮಹಿಳೆಯರು ಎಂದಿಗಿಂತಲೂ ಈ ಸಲ ಬಹಳ ಹೆಚ್ಚು ಮಂದಿ, ಸಭೆಗಳನ್ನಲಂಕರಿಸಿದ್ದರು. ಇವರಲ್ಲಿ ಕೊಡಗಿನ ಮಹಿಳೆಯರೇ ಪ್ರಮುಖರು.

ಬುಧವಾರ (೨೮ನೆಯ ತಾರೀಖು) ಬೆಳಗ್ಗೆ ಒಂಬತ್ತೂವರೆ ಗಂಟೆಗೆ ಸಮ್ಮೇಳನವು ಆರಂಭವಾಗಬೇಕೆಂದು ಗೊತ್ತಾಗಿದ್ದಿತು. ಆ ಕಾಲಕ್ಕೆ ಮುಂಚಿತವಾಗಿಯೇ ಸಭಾಮಂಟಪವು ಜನಸಮುದಾಯದಿಂದ ಕಿಕ್ಕಿರಿಯುತ್ತಿದ್ದಿತು. ಈ ಸಲದ ಸಮ್ಮೇಳನಕ್ಕೆ ಅಧ್ಯಕ್ಷರಾಗುವಂತೆ ಪ್ರಾರ್ಥಿಸಲ್ಪಟ್ಟು ಮಡಿಕೇರಿಗೆ ದಯಮಾಡಿಸಿದ್ದ ಶ್ರೀಮಾನ್ ಡಿ. ವಿ. ಗುಂಡಪ್ಪನವರ ಬಿಡಾರಕ್ಕೆ ಸ್ವಾಗತ ಮಂಡಲಿಯ ಅಧ್ಯಕ್ಷರೂ ಸದಸ್ಯರೂ ಬಂದು, ಅವರನ್ನು ವಾದ್ಯಘೋಷದೊಡನೆ ಸಭಾ ಮಂಟಪಕ್ಕೆ ಮೆರೆವಣಿಗೆ ಮಾಡಿ ಕರೆದುಕೊಂಡುಹೋಗಿ, ಅಲ್ಲಿ ರಚಿಸಿದ್ದ ಉನ್ನತವಾದ ವೇದಿಕೆಯಮೇಲೆ ಕುಳ್ಳಿರಿಸಿ

ದರು. ಪ್ರಮುಖರಾದವರು ಅವರ ಸುತ್ತಲೂ ಆ ವೇದಿಕೆಯ ಮೇಲೆಯೇ ಕುಳಿತುಕೊಂಡರು. ಸುಮಾರು ೧೧೦ ಮಂದಿ ಸ್ವಾಗತ ಸಮಿತಿಯ ಸದಸ್ಯರೂ, ೪೦೦ಕ್ಕೆ ಮೀರಿದ ಸಂಖ್ಯೆಯ ಪ್ರತಿನಿಧಿಗಳೂ, ೫೦೦ಕ್ಕೆ ಮೀರಿದ ಪ್ರೇಕ್ಷಕರೂ ಆ ಮಂಟಪದಲ್ಲಿ ನೆರೆದಿದ್ದರು. ಮಹಿಳೆಯರ ಸಂಖ್ಯೆಯು ೨೦೦ಕ್ಕೆ ಮೀರಿದ್ದಿತು.

ಪ್ರಾರಂಭದಲ್ಲಿ, ಮೂವರು ಬಾಲಿಕೆಯರು ಸ್ವಾಗತ ಗೀತೆಯನ್ನು ಸುಶ್ರಾವ್ಯವಾಗಿ ಹಾಡಿದರು. (ಇದನ್ನು ಮುಂದೆ ಕೊಟ್ಟಿದೆ). ಅನಂತರ, ಸ್ವಾಗತ ಮಂಡಲಿಯ ಅಧ್ಯಕ್ಷರಾದ ಶ್ರೀಮಾನ್ ಕೋದಂಡ ಮಾದಯ್ಯ ದೇವಯ್ಯನವರು ಕೊಡಗಿನ ಚರಿತ್ರಾಂಶಗಳಿಂದಲೂ ಭಾಷಾ ವಿಚಾರಗಳಿಂದಲೂ ತುಂಬಿದ ಮನೋಹರವಾದ ಭಾಷಣವನ್ನು ಓದಿ, ಪ್ರತಿನಿಧಿಗಳೆಲ್ಲರ ಸುಖಾಗಮನಕ್ಕೆ ಸಂತೋಷಪಟ್ಟರು.

ಅನಂತರ, ಕೊಡಗಿನ ವಿದ್ಯಾಭ್ಯಾಸದ ಇಲಾಖೆಯ ಇನ್‌ಸ್ಪೆಕ್ಟರರಾದ ಶ್ರೀಮಾನ್ ಎಸ್. ಕುಶಾಲಪ್ಪನವರು ಶ್ರೀಮಾನ್ ಡಿ. ವಿ. ಗುಂಡಪ್ಪನವರ ಗುಣ ಕಥನ ಮಾಡಿ, ಈ ಸಮ್ಮೇಳನದ ಅಧ್ಯಕ್ಷತೆಯನ್ನು ಅವರು ವಹಿಸಬೇಕೆಂದು ಸೂಚಿಸಿದರು. ಈ ಸೂಚನೆಯನ್ನು ಮಡಿಕೇರಿಯ ಮ್ಯುನಿಸಿಪಲ್ ಪ್ರೆಸಿಡೆಂಟರಾದ ಶ್ರೀಮಾನ್ ಪಟ್ಟಮಾಡ ದೇವಯ್ಯನವರು ತಕ್ಕಂತೆ ಅನುಮೋದಿಸಿದನಂತರ, ಬೆಂಗಳೂರಿನ ಶ್ರೀಮಾನ್ ಮಾಸ್ತಿ ವೆಂಕಟೇಶ ಐಯಂಗಾರ್ಯರೂ, ಏ. ವೆಂಕಟಪ್ಪನವರೂ, ಧಾರವಾಡದ ಶ್ರೀಮಾನ್ ನಾರಾಯಣ ವೆಂಕಟೇಶ ಕುರಡಿಯವರೂ, ಕೊಪ್ಪಳದ ಶ್ರೀಮಾನ್ ನಾರಾಯಣ ಶಾಸ್ತ್ರೀ ಭಾವೂ ಶಾಸ್ತ್ರಿಯವರೂ ಸಮಯೋಚಿತ ಭಾಷಣಗಳಿಂದ ಮೇಲಿನ ಸೂಚನೆಯನ್ನು ಪುಷ್ಟೀಕರಿಸಿದರು. ಇದಾದ ಮೇಲೆ, ಪ್ರೇಕ್ಷಕರ ಸಂತೋಷ ಸೂಚಕವಾದ ಕರತಾಡನವಾಗುತ್ತಿರುವಲ್ಲಿ, ಶ್ರೀಮಾನ್ ಗುಂಡಪ್ಪನವರು ಅಧ್ಯಕ್ಷ ಸ್ಥಾನವನ್ನಲಂಕರಿಸಿ, ತಮ್ಮ ಕೃತಜ್ಞತಾ ಸೂಚಕವಾಗಿ ಕೆಲವು ಮಾತುಗಳನ್ನಾಡಿದರು. ತರುವಾಯ, ಕರ್ಣಾಟಕ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಗಳಾದ ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯನವರು ಪರಿಷತ್ತಿನ ಹಿಂದಣ ವರುಷದ ವರದಿಯಲ್ಲಿ ಪ್ರಸಕ್ತವಾದ ಕೆಲವು ಭಾಗಗಳನ್ನು ಓದಿದರು. ಮುದ್ರಣ ಮಾಡಿದ್ದ ಆ ವರದಿಯ ಪ್ರತಿಗಳನ್ನು ಸಭಿಕರಿಗೆ ಹಂಚಲಾಯಿತು. ತರುವಾಯ, ಸ್ವಾಗತ ಮಂಡಲಿಯ ಕಾರ್ಯದರ್ಶಿಗಳಲ್ಲೊಬ್ಬರಾದ ಶ್ರೀಮಾನ್ ಸಿ. ಎಂ. ರಾಮರಾಯರವರು ಪರಿಷತ್ತಿನ ಈ ಅಧಿವೇಶನದ ವಿಷಯದಲ್ಲಿ ತಮ್ಮ ಅಭಿನಂದನಗಳನ್ನು ಸೂಚಿಸಿ, ಈ ಸಮ್ಮೇಳನಕ್ಕೆ ಬರಲು ಪ್ರಾರ್ಥಿತರಾಗಿದ್ದ ನಾನಾ ಪ್ರಾಂತಗಳ ಮಹನೀಯರು ಸಮ್ಮೇಳನಕ್ಕೆ ಜಯವನ್ನು ಬಯಸಿ, ತಾವು ಬರಲು ಸಾಧ್ಯವಿಲ್ಲದುದಕ್ಕೆ ಪರಿತಾಪವನ್ನು ಸೂಚಿಸಿ ಬರೆದಿದ್ದ ಪತ್ರಗಳನ್ನೂ ತಂತೀ ವರ್ತಮಾನಗಳನ್ನೂ ಓದಿದರು. ಬಳಿಕ, ಅಧ್ಯಕ್ಷರು ಸ್ಫೂರ್ತಿದಾಯಕವಾದ ತಮ್ಮ ಭಾಷಣವನ್ನು ಓದಿ ಹೇಳಿ ಸಭಿಕರನ್ನು ಆನಂದಗೊಳಿಸಿದರು. (ಇದನ್ನು ಮುಂದೆ ಕೊಟ್ಟಿದೆ).

ಬಳಿಕ, ವಸ್ತು ಪ್ರದರ್ಶನವನ್ನು ಸಮಾರಂಭಗೊಳಿಸುವ ಕಾರ್ಯವು ನಡೆಯಿತು. ಕೊಡಗಿನ ಸಬಾರ್ಡಿನೇಟ್ ಜಡ್ಜಿಯವರಾದ ಶ್ರೀಮಾನ್ ಪಾಲೇಕಂಡ ಮೇದಪ್ಪನವರ

ಪತ್ನಿಯರಾದ ಶ್ರೀಮತಿ ಪೂವಮ್ಮನವರು ಇಂಪಾದ ಭಾಷಣ ಮಾಡಿ ಪ್ರದರ್ಶನವನ್ನು ಸಮಾರಂಭಗೊಳಿಸಿದರು. (ಈ ಭಾಷಣವನ್ನು ಮುಂದೆ ಕೊಟ್ಟಿದೆ). ಈ ಪ್ರದರ್ಶನದಲ್ಲಿ, ಕೊಡಗರು ಹಿಂದಿನ ಕಾಲದಲ್ಲಿ ಉಪಯೋಗಿಸುತ್ತಿದ್ದ ಆಯುಧಗಳು, ಉಡುಪುಗಳು, ಆಭರಣಗಳು, ಹೊತ್ತಿಗೆಗಳು, ಚಿತ್ರಗಳು, ಇತರ ಕುಶಲವಸ್ತುಗಳು—ಇವೇ ಮೊದಲಾದುವನ್ನು ಅಂದವಾಗಿ ಅಳವಡಿಸಿದ್ದರು.

ಮಧ್ಯಾಹ್ನ ಮೂರು ಗಂಟೆಗೆ ಮತ್ತೆ ಸಮ್ಮೇಳನವು ಸೇರಿತು. ಕೊಡಗಿನ ಹಲವು ಮಂದಿ ಬರೆಹಗಾರರ ಲೇಖನಗಳಿಂದ ಕೂಡಿ ಈ ಸಮ್ಮೇಳನಕ್ಕಾಗಿಯೇ ಸಿದ್ಧಪಡಿಸಿದ್ದ "ಕೊಡಗಿನ ಕಾಣಿಕೆ" ಎಂಬ ಪುಸ್ತಕವನ್ನು ಅದರ ಸಂಪಾದಕರಾದ ಶ್ರೀಮಾನ್ ಓಡ್ಲಮನೆ ಆತ್ಮರಾಮ ಶಾಸ್ತ್ರಿಗಳು ಅಧ್ಯಕ್ಷರಿಗೂ ಪರಿಷತ್ತಿನ ಅಧಿಕಾರಿಗಳಿಗೂ ಒಪ್ಪಿಸಿದರು. ತರುವಾಯ, ವಿಷಯ ನಿಯಾಮಕ ಸಮಿತಿಯು ಏರ್ಪಟ್ಟು, ಅದಕ್ಕೆ ೨೫ ಮಂದಿ ಸದಸ್ಯರನ್ನು ಚುನಾಯಿಸಲಾಯಿತು. ಬಳಿಕ, ಕೊಪ್ಪಳದ ಶ್ರೀಮಾನ್ ನಾರಾಯಣಶಾಸ್ತ್ರೀ ಭಾವೂಶಾಸ್ತ್ರಿಯವರು ಕೊಪಣನಗರದ ವಿಚಾರವಾಗಿ, ನೃಪತುಂಗನ ಕವಿರಾಜಮಾರ್ಗದ ಮೇಲೆ ತಾವು ನಡೆಯಿಸಿದ, ಸಂಶೋಧನದ ಫಲಿತಾಂಶಗಳನ್ನು ಕುರಿತು ಉಪನ್ಯಾಸ ಮಾಡಿದರು. ಇದಾದನಂತರ, ಮಂಗಳೂರಿನ ಶ್ರೀಮಾನ್ ಶೆಡ್ಯಾಪು ಕೃಷ್ಣಭಟ್ಟರವರು ಛಂದಸ್ಸಿನ ವಿಷಯವಾಗಿ ತಾವು ಬರೆದಿದ್ದ ಪ್ರಬಂಧವನ್ನು ಓದಿದರು. ಆ ಬಳಿಕ, ಪುತ್ತೂರಿನ ವೇದಾಂತ ಶಿರೋಮಣಿ ಶ್ರೀಮಾನ್ ಶಂಭು ಶಾಸ್ತ್ರಿಗಳವರು, ಅನುಮತಿ ದೊರೆತರೆ, ಆಧುನಿಕ ಕನ್ನಡ ಕವಿತ್ವವನ್ನು ಕುರಿತು ಸ್ವಲ್ಪ ಕಾಲ ಭಾಷಣ ಮಾಡಲು ಇಷ್ಟಪಟ್ಟಿರುವರೆಂದೂ, ಅವರು ಉಪನ್ಯಾಸವನ್ನು ಬರೆದು ತಂದಿಲ್ಲವೆಂದೂ, ಅವರಿಗೆ ಅವಕಾಶಕೊಡಬಹುದೆಂದೂ ಶ್ರೀಮಾನ್ ಓಡ್ಲಮನೆ ಆತ್ಮಾರಾಮ ಶಾಸ್ತ್ರಿಗಳವರು ಅಧ್ಯಕ್ಷರಿಗೆ ಸೂಚಿಸಲು, ಅಧ್ಯಕ್ಷರು ಶ್ರೀಮಾನ್ ಶಂಭು ಶಾಸ್ತ್ರಿಗಳವರನ್ನು ಉಪನ್ಯಾಸ ಕೊಡುವುದಕ್ಕಾಗಿ ಆಹ್ವಾನಿಸಿದರು. ಶ್ರೀಮಾನ್ ಶಂಭು ಶಾಸ್ತ್ರಿಗಳವರು ಪುರಾತನ ಕವಿತೆಗಳನ್ನೂ, ಹೊಸ ಮಾರ್ಗದಲ್ಲಿ ರಚನೆಯಾಗುತ್ತಿರುವ ಆಧುನಿಕ ಕವಿತೆಗಳನ್ನೂ ಹೋಲಿಸುವ ಪ್ರಯತ್ನ ಮಾಡಿ, ಈ ಹೊಸ ಕವಿತೆಗಳ ದೋಷಗಳನ್ನು ತೋರ್ಪಡಿಸುವ ಉದ್ದೇಶದಿಂದ ಉಪನ್ಯಾಸ ಮಾಡಿದರು ; ಕುಮಾರ ವ್ಯಾಸನು ಸಹ ವ್ಯಾಕರಣ ಸೂತ್ರಗಳಿಗೆ ವಿರುದ್ಧವಾಗಿ ನಡೆದಿರುವನೆಂದು ಉದಾಹರಿಸಿ ಆಧುನಿಕ ಕವಿತ್ವವನ್ನು ಖಂಡಿಸಿದರು. ಈ ಉಪನ್ಯಾಸಕರ ಅಭಿಪ್ರಾಯಗಳನ್ನು ಖಂಡಿಸಿ ಶ್ರೀಮಾನ್ ಮಾಸ್ತಿ ವೆಂಕಟೇಶ ಐಯಂಗಾರ್ಯರೂ, ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯನವರೂ, ಶ್ರೀಮಾನ್ ಟಿ. ಎಸ್. ವೆಂಕಣ್ಣಯ್ಯನವರೂ, ಶ್ರೀಮಾನ್ ತೀ. ನಂ. ಶ್ರೀಕಂಠಯ್ಯನವರೂ ಭಾಷಣಗಳನ್ನು ಮಾಡಿದರು. ಈ ವೇಳೆಗೆ ಸಂಜೆ ಸುಮಾರು ಏಳು ಗಂಟೆಯಾಗಿತ್ತು. ಆ ದಿನ ಬೆಳಗ್ಗಿನಿಂದಲೂ ಬಹು ಮಟ್ಟಿಗೆ ಭಾಷೆ ಸಾಹಿತ್ಯಗಳ ಶಾಸ್ತ್ರ ಭಾಗದ ವಿಚಾರಗಳನ್ನು ಕುರಿತೇ ಉಪನ್ಯಾಸಗಳಾಗಿದ್ದುದರಿಂದಲೂ, ಶ್ರೀಮಾನ್ ಶಂಭು ಶಾಸ್ತ್ರಿಗಳವರು ಪ್ರಾರಂಭ ಮಾಡಿದ್ದ ಚರ್ಚೆಯೇ ಅಗ್ಗೆ ಸುಮಾರು ಒಂದೂವರೆ ಗಂಟೆಗಳ ಕಾಲ ನಡೆದಿದ್ದುದ

ರಿಂದಲೂ, ಆಗ ಕತ್ತಲೆ ಪ್ರಾರಂಭವಾಗಿದ್ದುದರಿಂದಲೂ ಆ ಚರ್ಚೆಯನ್ನು ಇನ್ನೂ ಮುಂದೆ ಬೆಳಸುವ ವಿಷಯದಲ್ಲಿ ಸಭಿಕರ ಇಷ್ಟ ಹೇಗಿರುವುದೆಂದು ಅಧ್ಯಕ್ಷರು ಕೇಳಲಾಗಿ, ಅದಕ್ಕೆ ಸಭೆಯ ಅನೇಕ ಕಡೆಗಳಿಂದ ಚರ್ಚೆಯನ್ನಲ್ಲಿಗೆ ನಿಲ್ಲಿಸಬೇಕೆಂದೂ ಜನಸಾಮಾನ್ಯಕ್ಕೆ ತಿಳಿಯುವ ವಿಷಯಗಳ ಮೇಲೆ ಉಪನ್ಯಾಸಗಳಾಗಬೇಕೆಂದೂ ಉತ್ತರ ಬಂದಿತು. ಅದರ ಮೇಲೆ ಅಂದಿನ ಸಭೆಯು ಮುಕ್ತಾಯವಾಯಿತು. ಅದೇ ರಾತ್ರಿ ಏಳು ಗಂಟೆಯ ವೇಳೆಯಲ್ಲಿ, ಹೈಸ್ಕೂಲಿನ ಬಯಲಿನಲ್ಲಿ, ಕೊಡಗರ ಬೆಳಕಾಟ ಮತ್ತು ಕೋಲಾಟ ಎಂಬ ನರ್ತನಗಳು ನಡೆದುವು. ರಾತ್ರಿ ಒಂಬತ್ತು ಗಂಟೆಯ ಮೇಲೆ ಶ್ರೀಮಾನ್ ಕುಶಾಲಪ್ಪನವರೇ ಮೊದಲಾದವರು, "ಜೊಗ್ಗು", "ಇಬ್ಬರೂ ಘಾಟಿಗಳೇ" ಎಂಬ ಎರಡು ಪ್ರಹಸನಗಳನ್ನು ಅಭಿನಯಿಸಿ ಸಭಿಕರನ್ನು ಆನಂದಗೊಳಿಸಿದರು.

---

## ಎರಡನೆಯ ದಿನ

ಬೆಳಗ್ಗೆ ಒಂಬತ್ತು ಗಂಟೆಯಿಂದ ಹತ್ತೂವರೆ ಗಂಟೆಯ ವರೆಗೆ ವಿಷಯ ನಿರ್ಧಾರಕ ಸಮಿತಿಯ ಚರ್ಚೆಗಳು ನಡೆದು, ಸಮ್ಮೇಳನದಲ್ಲಿ ಸೂಚಿಸಲು ಗೊತ್ತುವಳಿಗಳು ಸಿದ್ಧವಾದುವು.

ಆ ಬಳಿಕ, ಕವಿ ಸಮ್ಮೇಳನವು ಉಪಕ್ರಮವಾಯಿತು. ಮಂಗಳೂರಿನ "ರಾಷ್ಟ್ರಬಂಧು" ಪತ್ರಿಕೆಯ ಸಂಪಾದಕರೂ ಮತ್ತು ಆಧುನಿಕ ತರುಣ ಕವಿಗಳೂ ಆದ ಶ್ರೀಮಾನ್ ಕಡೆಂಗೋಡ್ಲು ಶಂಕರಭಟ್ಟರವರು ಕವಿ ಸಮ್ಮೇಳನದ ಅಧ್ಯಕ್ಷರಾಗಿ ಆರಿಸಲ್ಪಟ್ಟು, ಅಧ್ಯಕ್ಷತೆಯನ್ನು ವಹಿಸಿ, ತಾವು ರಚಿಸಿದ್ದ ಕಾವ್ಯ ಸ್ವಭಾವ ವಿಮರ್ಶಾತ್ಮಕವಾದ ಒಂದು ಪ್ರೌಢ ಉಪನ್ಯಾಸವನ್ನು ಬಂಧುರವಾಗಿ ಓದಿಹೇಳಿದರು. ಅನಂತರ, ಕೊಡಗಿನ ಕವಿಯಾದ ಶ್ರೀಮಾನ್ ಅಚ್ಚನಾಡ ಬೋಪಯ್ಯನವರೂ, ಶ್ರೀಮಾನ್ ನ. ಚಿ. ಸುಬ್ಬಯ್ಯನವರೂ, ಶ್ರೀಮಾನ್ ಟಿ. ಎಂ. ಕಾರ್ಯಪ್ಪನವರೂ ತಮ್ಮ ತಮ್ಮ ಕವಿತೆಗಳನ್ನು ಓದಿದರು. ಆ ಬಳಿಕ, ಧಾರವಾಡದ ಶ್ರೀಮಾನ್ ನರೇಗಲ್ಲ ಪ್ರಹ್ಲಾದರಾಯರು ತಮ್ಮ, ಶ್ರೀಮಾನ್ ಬೇಂದ್ರೆಯವರ ಮತ್ತು ಶ್ರೀಮಾನ್ ಸಾಲಿ ರಾಮಚಂದ್ರರಾಯರವರ ಕವಿತೆಗಳನ್ನು ಅಭಿನಯದೊಡನೆ ಓದಿ ಹೇಳಿದರು. ಅನಂತರ, ಮೈಸೂರಿನ ಶ್ರೀಮಾನ್ ಕೆ. ವಿ. ಪುಟ್ಟಪ್ಪನವರು ತಮ್ಮ ಮೂರು ಕವನಗಳನ್ನು ಓದಿಹೇಳಿದರು. ಇದಾದ ಮೇಲೆ, ಮಂಗಳೂರಿನ ಶ್ರೀಮಾನ್ ಕೆ. ಕೃಷ್ಣಭಟ್ಟರು ಜೋಗುಳದ ಪದಗಳನ್ನೂ, ಶ್ರೀಮಾನ್ ಕಡೆಂಗೋಡ್ಲು ಶಂಕರಭಟ್ಟರ "ಮಾದ್ರಿಯ ಚಿತೆ" ಎಂಬ ಕವಿತೆಯ ಕೆಲವು ಭಾಗಗಳನ್ನೂ ಓದಿದರು. ತರುವಾಯ, ಶ್ರೀಮಾನ್ ತೀ. ನಂ. ಶ್ರೀಕಂಠಯ್ಯನವರು 'ಒಲುಮೆ' ಎಂಬ ತಮ್ಮ ಕವನಗಳನ್ನೂ, ಶ್ರೀಮಾನ್ ಮಾಸ್ತಿ ವೆಂಕಟೇಶ ಐಯಂಗಾರ್ಯರು "ಚೆಲುವು" ಎಂಬ ತಮ್ಮ ಕವಿತಾ ಗ್ರಂಥದಿಂದ "ಕಟ್ಟೆಮುಳಲ್ಪಾಡಿ ನೀಲಗಾರ ಮಾದಣ್ಣ" ಮತ್ತು

"ಚಿಕ್ಕಮಲ್ಲಮ್ಮ" ಎಂಬ ಕವನಗಳನ್ನು ಓದಿಹೇಳಿದರು. ಇದಾದನಂತರ, ಮೈಸೂರಿನ ಗಮಕಿಗಳಾದ ಶ್ರೀಮಾನ್ ಸಂಪತ್ಕುಮಾರಾಚಾರ್ಯರವರು ಶ್ರೀಮಾನ್ ಡಿ. ವಿ. ಗುಂಡಪ್ಪನವರ "ಕೊಡಗಿನ ಬೆಡಗು" ಎಂಬ ಕವಿತೆಯನ್ನು ಹಾಡಿದರು. ಇಲ್ಲಿಗೆ ಆಗಿನ ಸಭೆಯು ಮುಕ್ತಾಯವಾಯಿತು.

ಮಧ್ಯಾಹ್ನಾನಂತರ ಮತ್ತೆ ಸಭೆ ಸೇರಿತು. ಮಂಗಳೂರಿನ ಶ್ರೀಮಾನ್ ಪರಮೇಶ್ವರಯ್ಯನವರು ಛಂದಶ್ಶಾಸ್ತ್ರವನ್ನು ಕುರಿತು ತಾವು ರಚಿಸಿದ್ದ ಒಂದು ಪ್ರಬಂಧವನ್ನು ಓದಿದರು. ಆ ಬಳಿಕ, ವಿಷಯ ನಿಯಾಮಕ ಸಮಿತಿಯಲ್ಲಿ ನಿರ್ಧಾರ ವಾಗಿದ್ದ ಗೊತ್ತುವಳಿಗಳಲ್ಲಿ ಹದಿನೈದು ಗೊತ್ತುವಳಿಗಳು ತೀರ್ಮಾನವಾದುವು. (ಇವನ್ನು ಮುಂದೆ ಕೊಟ್ಟಿದೆ).

ತರುವಾಯ, ಕವಿ ಸಮ್ಮೇಳನದ ಕಾರ್ಯವು ಮತ್ತೆ ಪ್ರಾರಂಭವಾಯಿತು: ಶ್ರೀಮಾನ್ ಸಂಪತ್ಕುಮಾರಾಚಾರ್ಯರು ಕುಮಾರ ವ್ಯಾಸನ ಕನ್ನಡ ಭಾರತ, ಲಕ್ಷ್ಮೀಶನ ಜೈಮಿನಿ ಭಾರತ ಮೊದಲಾದ ಗ್ರಂಥಗಳಿಂದ ಕೆಲ ಕೆಲವು ಪದ್ಯಗಳನ್ನು ತಕ್ಕ ರಾಗ ಗಳಿಂದ ಓದಿದರು. ಆಮೇಲೆ, ಮೈಸೂರಿನ ಶ್ರೀಮಾನ್ ಜಿ. ಪಿ. ರಾಜರತ್ನಮಯ್ಯಂಗಾ ರ್ಯರೂ, ಬೆಂಗಳೂರಿನ ಶ್ರೀಮಾನ್ ಎಂ. ಆರ್. ಶ್ರೀನಿವಾಸಮೂರ್ತಿಗಳೂ, ಮಂಗ ಳೂರಿನ ಶ್ರೀಮಾನ್ ಲಕ್ಷ್ಮೀನಾರಾಯಣ ಪುಣಿಂಚತ್ತಾಯರೂ, ಬೆಳಗಾಂವಿಯ ಆನಂದ ಕವಿಗಳೂ, ಮೈಸೂರಿನ ಶ್ರೀಮಾನ್ ಪಿ. ಟಿ. ನರಸಿಂಹಾಚಾರ್ಯರೂ ತಮ್ಮ ತಮ್ಮ ಕವನಗಳನ್ನು ಓದಿದರು. ತರುವಾಯ, ಕವಿ ಸಮ್ಮೇಳನದ ಅಧ್ಯಕ್ಷರ ಉಪಸಂಹಾರ ಭಾಷಣವು ನಡೆಯಿತು. ಅಲ್ಲಿಗೆ ಕವಿ ಸಮ್ಮೇಳನವು ಮುಕ್ತಾಯ ವಾಯಿತು.

ರಾತ್ರಿ ಹತ್ತು ಗಂಟೆಯ ಮೇಲೆ, ಕಾಸರಗೋಡಿನ ಶ್ರೀಮಾನ್ ಬಲಿಪ ನಾರಾಯಣ ಭಾಗವತರು ತಮ್ಮ ಅನುಯಾಯಿಗಳೊಡನೆ, ತಾಳ ಮದ್ದಲೆ ಸಮೇತ ವಾದ ಯಕ್ಷಗಾನದ ಹಾಡಿಕೆಯನ್ನು ನಡೆಯಿಸಿದರು.

---

## ಮೂರನೆಯ ದಿನ

ಮೊದಲೇ ನಿರ್ಣಯವಾಗಿದ್ದಂತೆ, ಬೆಳಗ್ಗೆ ಒಂಬತ್ತು ಗಂಟೆಗೆ, ಕರ್ಣಾಟಕ ಸಾಹಿತ್ಯ ಪರಿಷತ್ತಿನ ವಾರ್ಷಿಕಾಧಿವೇಶನವು ಅಧ್ಯಕ್ಷರ ಬಿಡಾರದಲ್ಲಿ ನಡೆಯಿತು. (ಇದರ ಕಾರ್ಯ ವಿವರವನ್ನು ಮುಂದೆ ಕೊಟ್ಟಿದೆ). ಮಧ್ಯಾಹ್ನಾನಂತರ, ಸಭಾ ಮಂದಿರದಲ್ಲಿ ಮರಳಿ ಸಭೆ ಸೇರಿ, ಉಳಿದ ಗೊತ್ತುವಳಿಗಳು ಚರ್ಚೆಯಾಗಿ ಅಂಗೀಕೃತವಾದುವು. (ಅವುಗಳನ್ನು ಮುಂದೆ ಕೊಟ್ಟಿದೆ). ಆ ಬಳಿಕ, ಶ್ರೀಮಾನ್ ಸಂಪತ್ಕುಮಾರಾಚಾರ್ಯರ ಭಾರತ ಪಠನವು ನಡೆಯಿತು. ತರುವಾಯ, ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ತಾವು ಪರಿವರ್ತನೆ ಮಾಡಿದ್ದ ಪಾಶ್ಚಾತ್ಯ ಕವಿಗಳ ಕೆಲವು ಕವಿತೆಗಳ ಗಾಂಭೀರ್ಯವನ್ನೂ ಮಾಧುರ್ಯವನ್ನೂ ವಿವರಿಸಿ ತಮ್ಮ ಪರಿವರ್ತನೆಯನ್ನು ಓದಿಹೇಳಿದರು.

ಆ ಬಳಿಕ, ಹುಬ್ಬಳ್ಳಿಯ ಗಂಗಾಧರ ಸಂಸ್ಕೃತ ಕಾಲೇಜಿನ ಅಧ್ಯಕ್ಷರಾದ ವ್ಯಾಕರಣತೀರ್ಥ ಶ್ರೀಮಾನ್ ಚಂದ್ರಶೇಖರ ಶಾಸ್ತ್ರಿಗಳು, ಮುಂದೆ ನಡೆಯಬೇಕಾದ ಕರ್ಣಾಟಕ ಸಾಹಿತ್ಯ ಸಮ್ಮೇಳನದ ಹತ್ತೊಂಬತ್ತನೆಯ ಅಧಿವೇಶನವು ಹುಬ್ಬಳ್ಳಿಯಲ್ಲಿ ನಡೆಯಬೇಕೆಂದು ಹುಬ್ಬಳ್ಳಿಯ ಶ್ರೀ ಮೂರು ಸಾವಿರ ಮಠದ ಶ್ರೀ ಸ್ವಾಮಿಗಳವರ ಅಪ್ಪಣೆಯಾಗಿದೆಯೆಂದು ಸಭೆಗೆ ತಿಳಿಸಿ ಪರಿಷತ್ತಿಗೆ ಆಹ್ವಾನವನ್ನಿತ್ತರು.

ಅನಂತರ, ಸಮ್ಮೇಳನದ ಅಧ್ಯಕ್ಷರ ಉಪಸಂಹಾರ ಭಾಷಣವು ನಡೆಯಿತು. ಅದರಲ್ಲಿ, ಅಧ್ಯಕ್ಷರು ಸಮ್ಮೇಳನದ ಪರವಾಗಿ ಸ್ವಾಗತ ಮಂಡಲಿಯವರಿಗೂ, ಮುಖ್ಯವಾಗಿ, ದೇಹಶ್ರಮವನ್ನು ಲಕ್ಷಿಸದೆ, ಪ್ರತಿನಿಧಿಗಳಿಗೆ ಎಲ್ಲ ವಿಧದಲ್ಲಿಯೂ ಬಹಳ ವಿಚಕ್ಷಣತೆಯಿಂದಲೂ, ದಕ್ಷತೆಯಿಂದಲೂ ಅನುಕೂಲ್ಯಗಳನ್ನೇರ್ಪಡಿಸಿ ಸಹಾಯ ಮಾಡಿದ ಸ್ವಾಗತಾಧ್ಯಕ್ಷರಿಗೂ ಕಾರ್ಯದರ್ಶಿಗಳಿಗೂ ಕೊಡಗಿನ ಮಹಾ ಜನರಿಗೂ ವಂದನೆಗಳನ್ನರ್ಪಿಸಿ, ಪ್ರದರ್ಶನವು ಕೊಡಗಿನ ಪೂರ್ವ ವೈಭವದ ಸೂಚೀಪತ್ರವಾಗಿದ್ದಿತೆಂದೂ, ಹಿಂದಣವರ ಹಿರಿಯ ಬಾಳಿಗನುಗುಣವಾಗಿ, ದೊಡ್ಡ ಅಂತಸ್ತಿನಲ್ಲಿ ಇಂದಿನ ಜನರ ಜೀವನವನ್ನಳನಡಿಸುವುದು ಈಗಿನವರ ಕರ್ತವ್ಯವೆಂದೂ ತಿಳಿಸಿದರು. ಅನಂತರ, ಪರಿಷತ್ತಿನ ಗೌರವ ಕಾರ್ಯದರ್ಶಿಗಳಾದ ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯನವರು ಪರಿಷತ್ತಿನ ಪರವಾಗಿ ಸಮ್ಮೇಳನದ ಅಧ್ಯಕ್ಷರಿಗೂ, ಸ್ವಾಗತ ಮಂಡಲಿಗೂ, ಕೊಡಗಿನ ಮಹಾಜನರಿಗೂ, ಪ್ರತಿನಿಧಿಗಳಿಗೂ, ಕವಿ ಸಮ್ಮೇಳನದ ಅಧ್ಯಕ್ಷರೇ ಮೊದಲಾದವರಿಗೂ, ಭಾಗವತರು, ನಟರು, ಗಮಕಿಗಳು ಮೊದಲಾಗಿ ಸಮ್ಮೇಳನವು ಸಫಲವಾಗುವಂತೆ ಸಹಾಯ ಮಾಡಿದ ಸಮಸ್ತರಿಗೂ ವಂದನೆಗಳನ್ನು ಸಮರ್ಪಿಸಿದರು.

ತರುವಾಯ, ಸ್ವಾಗತ ಮಂಡಲಿಯ ಅಧ್ಯಕ್ಷರು, ಈ ಸಮ್ಮೇಳನದಲ್ಲಿ ಭಾಗಿಗಳಾಗಿ ತಮಗೆ ಗೌರವವನ್ನು ತಂದ ಕೊಡಗಿನ ಮತ್ತು ಇತರ ಪ್ರಾಂತಗಳ ಮಹನೀಯರನ್ನು ವಂದಿಸಿ, ಸಮ್ಮೇಳನ ಕಾರ್ಯದಲ್ಲಿ ತಮಗೆ ವಿಶೇಷ ಸಹಾಯ ಮಾಡಿದ ಸ್ವಾಗತ ಮಂಡಲಿಯ ಕಾರ್ಯದರ್ಶಿಗಳಾದ ಶ್ರೀಮಾನ್ ಕುಶಾಲಪ್ಪನವರಿಗೂ, ಶ್ರೀಮಾನ್ ರಾಮರಾಯರಿಗೂ, ತರುಣ ಸ್ವಯಂ ಸೇವಕರಿಗೂ, ಕೊಡಗಿನ ಕಮಿಷನರವರಿಗೂ, ಮಡಿಕೇರಿಯ ಮ್ಯುನಿಸಿಪಾಲಿಟಿಯವರೇ ಮೊದಲಾದವರಿಗೂ ವಂದನೆಗಳನ್ನು ಸಮರ್ಪಿಸಿದರು. ಅನಂತರ, ಮ|| ರಾ|| ಶ್ರೀಗಳಾದ ಮಂಗಳೂರಿನ ಮುಳಿಯ ತಿಮ್ಮಪ್ಪಯ್ಯನವರೂ, ಕೊಲ್ಹಾಪುರದ ಕುಂದಣಗಾರರೂ, ಬೆಳಗಾಂವಿಯ ಶಾಮರಾಯರೂ, ಧಾರವಾಡದ ಪ್ರಹ್ಲಾದರಾಯರೂ, ಕೊಪ್ಪಳದ ಭಾವೂಶಾಸ್ತ್ರಿಗಳೂ, ಬೆಂಗಳೂರಿನ ಎ. ಎನ್. ಸುಬ್ಬರಾಯರೂ, ಮೈಸೂರಿನ ಶ್ರೀಮತಿ ನಾಗಮ್ಮನವರೂ ಕೊಡಗಿನ ಸ್ವಾಗತ ಮಂಡಲಿಯವರಿಗೂ, ಕೊಡಗಿನ ಮಹಾ ಜನರಿಗೂ ಕೃತಜ್ಞತೆಯಿಂದೊಡಗೂಡಿದ ತಮ್ಮ ವಿಶ್ವಾಸಪೂರ್ವಕವಾದ ವಂದನೆಗಳನ್ನು ಅರ್ಪಿಸಿದರು. ಶ್ರೀಮಾನ್ ಕುಶಾಲಪ್ಪನವರು ಪ್ರತ್ಯಭಿವಂದನಗಳನ್ನು ಸಮರ್ಪಿಸಿದ ಮೇಲೆ, ಪ್ರತಿನಿಧಿಗಳಿಗೆ ಆದರಾತಿಥ್ಯಗಳನ್ನು ನಡೆಯಿಸುವುದರಲ್ಲಿ ಕಾರ್ಯದರ್ಶಿಗಳಾಗಿದ್ದ

ಶ್ರೀಮಾನ್ ರಾಮರಾಯರವರು, ನಾನಾ ಪ್ರಾಂತಗಳಿಂದ ಭಾಷಾ ಸೇವೆಗಾಗಿ ಕೊಡಗಿಗೆ ಬಂದಿದ್ದ ಮಹನೀಯರಿಗೆ ಸೇವೆ ಮಾಡುವ ಸುಯೋಗವು ತಮಗೆ ಲಭಿಸಿದುದಕ್ಕಾಗಿ ಅತ್ಯಂತ ಸಂತೋಷಪಟ್ಟು ಎಲ್ಲರಿಗೂ ವಂದನೆಗಳನ್ನರ್ಪಿಸಿದರು. ಸ್ವಾಗತ ಮಂಡಲಿಯ ಪ್ರಮುಖ ಸದಸ್ಯರಲ್ಲೊಬ್ಬರಾದ ಅಡ್ವೊಕೇಟ್ ಶ್ರೀಮಾನ್ ಸಿ. ಎನ್. ವೆಂಕಪ್ಪಯ್ಯನವರು ಸಮ್ಮೇಳನದ ಮಹಾ ಜನರಿಗೆಲ್ಲ ತಮ್ಮ ವಂದನೆಗಳನ್ನರ್ಪಿಸಿ, ದೇಶೋನ್ನತಿಗೆ ಭಾಷಾ ಸೇವೆಯೇ ಮೊದಲಿನ ಮೆಟ್ಟಿಲಾದುದರಿಂದ, ಈ ವಿಚಾರದಲ್ಲಿ ಎಲ್ಲ ಪಂಗಡದವರೂ ಏಕೀಭವಿಸಿ ನಡೆದುಕೊಳ್ಳಬೇಕೆಂದು ಹೇಳಿದರು. ಮಂಗಳವನ್ನು ಶ್ರೀಮಾನ್ ಸಂಪತ್ಕುಮಾರಾಚಾರ್ಯರು ಹಾಡಿದ ಮೇಲೆ ಸಮ್ಮೇಳನವು ಮುಕ್ತಾಯವಾಯಿತು. ರಾತ್ರಿ ಒಂಬತ್ತು ಗಂಟೆಗೆ ಮೈಸೂರಿನ "ಆರ್ಟ್ಸ್ ಕ್ಲಬ್ಬಿ"ನವರು 'ಶಾಕುಂತಲಾ', 'ಮಂಜುಳಾ', 'ಹೋಂ ರೂಲ್' ಎಂಬ ನಾಟಕಗಳ ಕೆಲವು ದೃಶ್ಯಗಳನ್ನು ಅಭಿನಯಿಸಿದರು. ಭಾಷಾ ಮಾತೆಯ ವರ್ಧಂತ್ಯುತ್ಸವದಂತೆ ನಡೆದ ಸಮ್ಮೇಳನದ ಕಾರ್ಯ ಕಲಾಪಗಳು ಅಲ್ಲಿಗೆ ಪೂರಯಿಸಿದುವು.

---

## ಗೊತ್ತುವಳಿಗಳು

೧. ಸನ್ ೧೯೩೨ನೆಯ ಇಸವಿ ಡಿಸೆಂಬರು ೨೬ನೆಯ ತಾರೀಖಿನಲ್ಲಿ ಮಡಿಕೇರಿಯಲ್ಲಿ ಸೇರಿದ ಕರ್ಣಾಟಕ ಸಾಹಿತ್ಯ ಪರಿಷತ್ಸಮ್ಮೇಳನವು ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರ ದಿವ್ಯ ಸನ್ನಿಧಿಯಲ್ಲಿ, ಮಹಾಸ್ವಾಮಿಯವರು ಕನ್ನಡ ಭಾಷೆಯ ಏಳಿಗೆಗಾಗಿಯೂ, ಸಾಹಿತ್ಯ ಪರಿಷತ್ತಿನ ಕಟ್ಟಡಕ್ಕಾಗಿಯೂ ಅನುಗ್ರಹಿಸಿರುವ ಉದಾರಾಶ್ರಯಕ್ಕಾಗಿ ಪ್ರೀತಿಪೂರ್ವಕವಾದ ಭಕ್ತಿ ವಿಶ್ವಾಸಗಳನ್ನೊಪ್ಪಿಸಲು ಅಪ್ಪಣೆಯನ್ನು ಬೇಡುತ್ತದೆ.

ಅಧ್ಯಕ್ಷಸ್ಥಾನದಿಂದ ಸೂಚನೆ.

೨. ಕರ್ಣಾಟಕ ಸಾಹಿತ್ಯ ಪರಿಷತ್ತಿನ ಸ್ಥಾಪಕರಲ್ಲೊಬ್ಬರಾಗಿದ್ದು, ಅದರ ಅಭಿವೃದ್ಧಿಗಾಗಿ ನಿರಂತರವೂ ಶ್ರಮಿಸಿ, ಕರ್ಣಾಟಕ ಸಾಹಿತ್ಯ ಪರಿಷತ್ತಿಗಾಗಿ ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರ ನಾಮಾಂಕಿತದ ಮೇಲೆ ನಿರ್ಮಿತವಾಗಿರುವ ಕಟ್ಟಡದ ನಿರ್ಮಾಣ ಸಂಬಂಧದಲ್ಲಿ ತೀವ್ರಾಸಕ್ತಿಯಿಂದ ಕೆಲಸ ಮಾಡಿದ, ಪರಿಷತ್ತಿನ ಉಪಾಧ್ಯಕ್ಷರು ರಾಜ ಸಭಾ ಭೂಷಣ, ವಿದ್ಯಾ ಭೂಷಣ ಶ್ರೀ ಮಾ ನ್ ಕರ್ಪೂರ ಶ್ರೀನಿವಾಸರಾಯರವರು ದಿವಂಗತರಾದುದರಿಂದ ಈ ಸಮ್ಮೇಳನವು ಅಪಾರವಾಗಿ ದುಃಖಗೊಂಡು ಕರ್ಣಾಟಕಕ್ಕೆ ಇವರ ಮರಣದಿಂದುಂಟಾದ ನಷ್ಟವನ್ನು ಕುರಿತು ಶೋಕ ಸಂತಾಪಗಳನ್ನು ಸೂಚಿಸುತ್ತದೆ.

ಅಧ್ಯಕ್ಷಸ್ಥಾನದಿಂದ ಸೂಚನೆ.

**೩.** ಕನ್ನಡ ನಾಡಿನ ಹೊರಗಣ ದೇಶದಲ್ಲಿ, ಯಾವ ಪಟ್ಟಣದಲ್ಲಿ ಎರಡು ಸಾವಿರಕ್ಕಿಂತ ಹೆಚ್ಚು ಜನ ಕನ್ನಡಿಗರು ಇರುವರೋ, ಆ ಪಟ್ಟಣದ ಪೌರ ಸಭೆ (ಮ್ಯುನಿಸಿಪಾಲಿಟಿ) ಯವರು, ಅಥವಾ ಅಲ್ಲಿಯ ಶಿಕ್ಷಣ ಶಾಖೆಯವರು ಕನ್ನಡದ ಶಿಕ್ಷಣದ ಬಗ್ಗೆ ಅನುಕೂಲತೆ ಮಾಡಿಕೊಡಬೇಕೆಂದು ಈ ಸಮ್ಮೇಳನವು ಆಯಾಯ ಪಟ್ಟಣದ ಪೌರ ಸಭೆಯು, ಅಥವಾ ಶಿಕ್ಷಣ ಶಾಖೆಯ ಅಧಿಕಾರಿಗಳಿಗೆ ಬಿನ್ನಹ ಮಾಡಿ ಕೊಳ್ಳುತ್ತದೆ.

ಸೂಚಕರು :—ಮ|| ರಾ|| ಕಡೆಂಗೋಡ್ಲು ಶಂಕರಭಟ್ಟರು.

ಅನುಮೋದಕರು :—ಮ|| ರಾ|| ಟಿ. ಅಪ್ಪೂರಾಯರು, ಬಿ.ಎ., ಬಿ.ಎಲ್.

**೪.** ಕೊಡಗು ಶಾಲೆಗಳಲ್ಲಿ ಪ್ರಾಥಮಿಕ ಶಿಕ್ಷಣವನ್ನು ಮಾಫಿಯಾಗಿ ಕೊಡು ತ್ತಿರುವುದಕ್ಕಾಗಿ ಈ ಸಮ್ಮೇಳನವು ಕೊಡಗಿನ ಸರ್ಕಾರದ ವಿದ್ಯಾ ಇಲಾಖೆಯನ್ನೂ, ಡಿಸ್ಟ್ರಿಕ್ಟ ಬೋರ್ಡನ್ನೂ, ಮ್ಯುನಿಸಿಪಾಲಿಟಿಗಳನ್ನೂ ಅಭಿನಂದಿಸುತ್ತದೆ; ಮತ್ತು ಆ ವಿದ್ಯಾಭ್ಯಾಸವನ್ನು ಕಡ್ಡಾಯವಾಗಿಯೂ ಮಾಡಿಸುವಂತೆ ಏರ್ಪಡಿಸಿಕೊಡ ಬೇಕೆಂದು ಇದಕ್ಕೆ ಸಂಬಂಧಪಟ್ಟ ಅಧಿಕಾರಿಗಳನ್ನು ಈ ಸಮ್ಮೇಳನವು ಗೌರವ ಪೂರ್ವಕವಾಗಿ ಕೇಳಿಕೊಳ್ಳುತ್ತದೆ.

ಸೂಚಕರು :—ಮ|| ರಾ|| ರ. ಹರಿಶೆಣ್ಯೈ ಅವರು.

ಅನುಮೋದಕರು :—ಮ|| ರಾ|| ಸಿದ್ಧಲಿಂಗದೇವರು.

**೫.** ಮದರಾಸಿನ ಎಸ್.ಎಸ್.ಎಲ್.ಸಿ. ಬೋರ್ಡಿನವರು ಐಚ್ಛಿಕ ಗುಂಪಿಗೆ ಸೇರಿದ ಭಾಷೇತರ ಪಾಠ ವಿಷಯುಗಳನ್ನು ದೇಶ ಭಾಷೆಯಲ್ಲಿ ಕಲಿಸು ವುದಕ್ಕೂ, ಅದೇ ಭಾಷೆಯಲ್ಲಿ ಪರೀಕ್ಷಿಸುವುದಕ್ಕೂ ಅನುಮತಿಕೊಟ್ಟುದಕ್ಕಾಗಿ ಈ ಸಮ್ಮೇಳನವು ಅವರನ್ನು ಅಭಿನಂದಿಸುತ್ತದೆ; ಆದರೆ, ಕರ್ಣಾಟಕ ದೇಶಗಳ ಉಪಾಧ್ಯಾಯರು ಈ ರೀತಿಯ ಪ್ರಯೋಜನವನ್ನು ತಮ್ಮ ವಿದ್ಯಾರ್ಥಿಗಳಿಗೆ ಉಂಟುಮಾಡಿಕೊಡುವುದರಲ್ಲಿ ಏನೂ ಉತ್ಸಾಹವನ್ನು ತೋರದಿರುವುದಕ್ಕಾಗಿ ವಿಷಾದಿಸುತ್ತದೆ.

ಸೂಚಕರು :—ಮ|| ರಾ|| ರ. ಹರಿಶೆಣ್ಯೈ ಅವರು.

ಅನುಮೋದಕರು :— ಮ|| ರಾ|| ಓ. ಆತ್ಮಾರಾಮ ಶಾಸ್ತ್ರಿಗಳು.

**೬.** ಭಾಷಾಭ್ಯಾಸಕ್ಕೆ ಆವಶ್ಯಕವಿರುವ ಪಠ್ಯ ಪುಸ್ತಕಗಳನ್ನು ತಯಾರಿಸುವ, ಎಂದರೆ, ಪಠ್ಯ ಭಾಗಗಳನ್ನು ಆರಿಸುವ ಮತ್ತು ಅವುಗಳನ್ನು ಸಂಪಾದಿಸುವ ಕೆಲಸ ವನ್ನು, ಕರ್ಣಾಟಕ ಸಾಹಿತ್ಯ ಪರಿಷತ್ತಿಗೆ ಒಪ್ಪಿಸುವುದಲ್ಲದೆ, ಕನ್ನಡ ಭಾಷೆಯ ನ್ನಾಡುವ ಪ್ರಾಂತ್ಯಗಳಲ್ಲಿ ಸರ್ಕಾರದ ಮತ್ತು ವಿಶ್ವವಿದ್ಯಾಲಯದ ಪರೀಕ್ಷೆಗಳಿಗಾಗಿ ಉಪಯೋಗಿಸುವ ಭಾಷೇತರ ವಿಷಯುಗಳ ಪಠ್ಯ ಪುಸ್ತಕಗಳನ್ನು ಕನ್ನಡ ಭಾಷೆಯಲ್ಲಿ ತಯಾರಿಸುವ ಕೆಲಸವನ್ನೂ ಪರಿಷತ್ತಿಗೇ ವಹಿಸಿಕೊಡಬೇಕೆಂದೂ, ಪರಿಷತ್ತು ಬೇರೆ

ಬೇರೆ ಪ್ರಾಂತ್ಯಗಳ ಸಂದರ್ಭಗಳಿಗೆ ತಕ್ಕಂತೆ ಈ ಕೆಲಸವನ್ನು, ಉಪಾಧ್ಯಾಯರ ಸಹಾಯದಿಂದ, ನಡೆಯಿಸಬೇಕೆಂದೂ, ಕರ್ಣಾಟಕಸ್ಥರ ಪಾಠಶಾಲೆಗಳಲ್ಲಿ ವಿದ್ಯಾಭ್ಯಾಸದ ಆಡಳಿತವನ್ನು ನಡೆಯಿಸುವ ಅಧಿಕಾರಿಗಳನ್ನು ಈ ಸಮ್ಮೇಳನವು ವಿನಯ ಪೂರ್ವಕವಾಗಿ ಪ್ರಾರ್ಥಿಸುತ್ತದೆ.

ಸೂಚಕರು :—ಮ॥ ರಾ॥ ರ. ಹರಿಶೆಣ್ಯೈ ಅವರು.

ಅನುಮೋದಕರು :—ಮ॥ ರಾ॥ ಪರಮೇಶ್ವರಮಯ್ಯನವರು.

೭. ಮದರಾಸು ವಿಶ್ವವಿದ್ಯಾನಿಲಯದ ಪ್ರೆಸಿಡೆನ್ಸೀ ಕಾಲೇಜಿನಲ್ಲಿ ಕನ್ನಡ ಆನರ್ಸ್ ತರಗತಿಯನ್ನು ತೆರೆಯಬೇಕೆಂದು ಈ ಸಮ್ಮೇಳನವು ಮದರಾಸು ಸರಕಾರವನ್ನು ನಮ್ರತೆಯಿಂದ ಪ್ರಾರ್ಥಿಸುತ್ತದೆ.

ಸೂಚಕರು :—ಮ॥ ರಾ॥ ಪಿ. ಎಸ್. ನಾರಾಯಣರಾಯರು.

ಅನುಮೋದಕರು :—ಮ॥ ರಾ॥ ಡಿ. ಎನ್. ಕೃಷ್ಣಯ್ಯನವರು.

೮. ಧಾರವಾಡದ ಕರ್ಣಾಟಕ ಕಾಲೇಜಿನ ಕನ್ನಡ ಪ್ರೊಫೆಸರರ ಬಗ್ಗೆ ಈಚೆಗೆ ಮಾಡಿರುವ ಬದಲಾವಣೆಗಳಿಂದ ಕನ್ನಡ ಭಾಷೆ, ವಾಙ್ಮಯ, ಸಂಸ್ಕೃತಿ—ಇವುಗಳನ್ನು ಕಲಿಸುವುದರಲ್ಲಿ ಮತ್ತು ಕಲಿಯುವವರಲ್ಲಿ ಉತ್ಸಾಹವು ಕುಂದಿಹೋಗುತ್ತಿರುವುದನ್ನು ಆಲೋಚಿಸಿ, ಈಗ ಕಾಲೇಜಿನಲ್ಲಿ ಕನ್ನಡದ ಬಿ.ಎ. ಆನರ್ಸ್ ಮತ್ತು ಉಚ್ಚ ಪ್ರಗತಿಯ ಎಮ್.ಎ. ವ್ಯಾಸಂಗವೂ ನಡೆಯಬೇಕಾದ ಸಂದರ್ಭದಲ್ಲಿ, ಅನುಭವಿಕರೂ ಪಂಡಿತರೂ ಆದ ವಿದ್ವಾಂಸರ ಸೇವೆಯನ್ನು ಉಳಿಸಿಕೊಂಡು, ಉಳಿದ ವಿಷಯಗಳ ಪ್ರೊಫೆಸರರುಗಳಿಗಿರುವಂತೆಯೇ ಅವರ ಸ್ಥಾನವನ್ನು ಮಾನ್ಯ ಮಾಡಬೇಕೆಂದು ಈ ಸಮ್ಮೇಳನವು ಮುಂಬಯಿ ಸರಕಾರದವರಿಗೆ ನಮ್ರತೆಯಿಂದ ಸೂಚಿಸುತ್ತದೆ.

ಸೂಚಕರು :—ಮ॥ ರಾ॥ ಟಿ. ಅಪ್ಪೂರಾಯರು, ಬಿ.ಎ., ಬಿ.ಎಲ್.

ಅನುಮೋದಕರು :—ಮ॥ ರಾ॥ ಚಂದ್ರಶೇಖರ ಶಾಸ್ತ್ರಿಗಳು.

೯. ವಿಮರ್ಶೆಯ ತತ್ತ್ವಗಳ ದೃಷ್ಟಿಯಿಂದ ಕನ್ನಡ ಕಾವ್ಯಗಳನ್ನು ಪರಿಶೀಲಿಸುವ ಗ್ರಂಥಗಳು ಕನ್ನಡ ವಾಙ್ಮಯದಲ್ಲಿಲ್ಲದುದರಿಂದ, ಅಂತಹ ಗ್ರಂಥಗಳನ್ನು ಬರೆಯಿಸುವ ಕಾರ್ಯವನ್ನು ಮೈಸೂರು, ಮದರಾಸು, ಮುಂಬಯಿ ವಿಶ್ವವಿದ್ಯಾನಿಲಯಗಳೂ, ಕರ್ಣಾಟಕ ಸಾಹಿತ್ಯ ಪರಿಷತ್ತೂ ವಹಿಸಬೇಕೆಂದು ಈ ಸಮ್ಮೇಳನವು ನಿರ್ಣಯಿಸುತ್ತದೆ.

ಸೂಚಕರು :—ಮ॥ ರಾ॥ ಕೆ. ಜಿ. ಕುಂದಣಗಾರರು, ಎಂ.ಎ.

ಅನುಮೋದಕರು :—ಮ॥ ರಾ॥ ಚಂದ್ರಶೇಖರ ಶಾಸ್ತ್ರಿಗಳು.

೧೦. ನಿಜಾಂ ಕರ್ಣಾಟಕದ ಶಾಸನ ಪ್ರಕಟನ ಕಾರ್ಯವು ಪ್ರಕೃತದಲ್ಲಿ ಹೇರಳವಾಗಿರುತ್ತದೆ; ಆ ಕಾರ್ಯವನ್ನು ಹೊತ್ತ ಹೈದರಾಬಾದು ಆರ್ಕಿಯೊಲಾಜಿಕಲ್

ಇಲಾಖೆಯವರಿಗೆ ಆ ಕಾರ್ಯವನ್ನು ಶೀಘ್ರದಲ್ಲಿ ಮಾಡುವುದು ಕಷ್ಟವಾಗಿರುವುದರಿಂದ, ಆ ಸಂಸ್ಥಾನದಲ್ಲಿ ಈ ಕಾರ್ಯವನ್ನು ಶ್ರದ್ಧೆಯಿಂದ ಮಾಡುವ ಸ್ಥಾನಿಕ ಖಾಸಗಿ ಸಂಸ್ಥೆಗಳನ್ನು ಆ ಇಲಾಖೆಯವರು ರೆಜಿಸ್ಟರು ಮಾಡಿಕೊಂಡು, ಈ ಕೆಲಸಕ್ಕೆ ಸಹಾಯ ಮಾಡಬೇಕಾಗಿ ಈ ಸಮ್ಮೇಳನವು ಸೂಚಿಸುತ್ತದೆ.

ಸೂಚಕರು :—ಮ|| ರಾ|| ನಾ. ಭಾ. ಶಾಸ್ತ್ರಿಗಳು.

ಅನುಮೋದಕರು :—ಮ|| ರಾ|| ಕಡೆಂಗೋಡ್ಲು ಶಂಕರಭಟ್ಟರು.

**೧೧.** ಕನ್ನಡ ಉದ್ಗ್ರಂಥಗಳು ಸಾಕಾದಷ್ಟು ಪ್ರಮಾಣದಿಂದ ಮುದ್ರಣವಾಗಿಲ್ಲದುದರಿಂದ, ಮುಂಬಯಿ, ಮದರಾಸು ಮತ್ತು ಮೈಸೂರು ವಿಶ್ವವಿದ್ಯಾನಿಲಯದವರು ಇದಕ್ಕೆ ಹೆಚ್ಚು ಗಮನ ಕೊಟ್ಟು, ಹೆಚ್ಚು ಪುಸ್ತಕಗಳು ಪ್ರಕಟವಾಗುವಂತೆ ಏರ್ಪಾಡು ಮಾಡಬೇಕೆಂದು ಆಯಾ ವಿಶ್ವವಿದ್ಯಾನಿಲಯದ ಅಧಿಕಾರಿಗಳಿಗೆ ಈ ಸಮ್ಮೇಳನವು ಬಿನ್ನಹ ಮಾಡಿಕೊಳ್ಳುತ್ತದೆ.

ಸೂಚಕರು :—ಮ|| ರಾ|| ಕೆ. ಜಿ. ಕುಂದಣಗಾರರು, ಎಂ.ಎ.

ಅನುಮೋದಕರು :—ಮ|| ರಾ|| ಡಿ. ಎನ್. ಕೃಷ್ಣಯ್ಯನವರು.

**೧೨.** ಪ್ರಾಯ ಪ್ರಬುದ್ಧರ ಜ್ಞಾನ ವಿಕಾಸಕ್ಕೆ ಗಮಕಿಗಳು ಆವಶ್ಯಕವಿರುವುದರಿಂದ, ಪರಿಷತ್ಸಮ್ಮೇಳನ ಕಾಲದಲ್ಲಿ ಆಯಾ ಸ್ಥಳೀಕ ಗಮಕಿಗಳ ಭಾಷಾನೈಪುಣ್ಯ ಪ್ರದರ್ಶನವನ್ನು ಏರ್ಪಡಿಸಿ ಬಹುಮಾನಗಳನ್ನು ಕೊಡಲು ಅನುಕೂಲಪಡಿಸಬೇಕೆಂದು ಈ ಸಮ್ಮೇಳನವು ಪ್ರಾರ್ಥಿಸುತ್ತದೆ.

ಸೂಚಕರು :—ಮ|| ರಾ|| ಡಿ. ಎಂ. ಸಿದ್ಧಲಿಂಗಯ್ಯನವರು.

ಅನುಮೋದಕರು :—ಮ|| ರಾ|| ಆತ್ಮಾರಾಮ ಶಾಸ್ತ್ರಿಗಳು.

**೧೩.** ಕೆಲವು ಕನ್ನಡ ಪದಗಳು ಬೇರೆ ಬೇರೆ ಪ್ರಾಂತ್ಯಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ಪ್ರಯೋಗವಾಗುತ್ತ, ಕೆಲವು ರುಚಿಯಿಲ್ಲದೆಯೂ ತಪ್ಪು ತಪ್ಪಾಗಿಯೂ ಇರುವುದರಿಂದ, ಇವುಗಳನ್ನು ಪರಿಶೋಧಿಸುವ ಅಗತ್ಯವಿದೆಯೆಂದು ಈ ಸಮ್ಮೇಳನವು ಅಭಿಪ್ರಾಯಪಡುತ್ತದೆ.

ಅನೇಕ ಸಂಸ್ಕೃತ ಪದಗಳು ಕನ್ನಡದಲ್ಲಿ ತಪ್ಪು ರೀತಿಯಲ್ಲಿ ಉಚ್ಚಾರಣೆಯಾಗುತ್ತ, ಹೊಸ ಹೊಸ ಪದಗಳನ್ನು ಕನ್ನಡಕ್ಕೆ ಪರಿವರ್ತನೆ ಮಾಡುವಾಗ ಒಬ್ಬೊಬ್ಬರು ಒಂದೊಂದು ವಿಧದಲ್ಲಿ ಸೃಷ್ಟಿ ಮಾಡಿ, ಅಥವಾ ಕಲ್ಪನೆ ಮಾಡಿ ಉಪಯೋಗಿಸುತ್ತಿರುವುದರಿಂದ, ಇವುಗಳನ್ನು ಒಂದು ಕ್ರಮಕ್ಕೆ ತರಲು ತಕ್ಕ ಪ್ರಯತ್ನವು ಅಗತ್ಯವಾಗಿದೆಯೆಂದು ಈ ಸಮ್ಮೇಳನವು ಅಭಿಪ್ರಾಯಪಡುತ್ತದೆ.

ಮೇಲಣ ನಿರ್ಣಯಗಳನ್ನು ಕ್ರಮವಾಗಿಯೂ ಫಲಕಾರಿಯಾಗಿಯೂ ನಡೆಯಿಸಲು ಪರಿಷತ್ತು ಉಪ ಸಮಿತಿಯೊಂದನ್ನು ಏರ್ಪಡಿಸಿ, ತಕ್ಕ ಪ್ರಚಾರ ಮಾಡಲು ತನ್ನ ಸಮ್ಮತಿಯನ್ನು ಕೊಡಬೇಕೆಂದು ಈ ಸಮ್ಮೇಳನವು ಅಭಿಪ್ರಾಯಪಡುತ್ತದೆ.

ಸೂಚಕರು :—ಮ॥ ರಾ॥ ಎ. ಎನ್. ಸುಬ್ಬರಾಯರು.

ಅನುಮೋದಕರು :—ಮ॥ ರಾ॥ ಲಕ್ಷ್ಮೀನಾರಾಯಣ ಪುಣಿಂಚತ್ತಾಯರು.

**೧೪.** ಭಾಷಾ ಶಾಸ್ತ್ರ ವಿಷಯಕವಾದ ಪುಸ್ತಕಗಳು ಕನ್ನಡದಲ್ಲಿಲ್ಲದಿರುವುದರಿಂದಲೂ, ಇರತಕ್ಕ ಒಂದು ಪುಸ್ತಕವು ಆಂಗ್ಲ ಭಾಷೆಯಲ್ಲಿರುವುದರಿಂದಲೂ, ರಾವ್ ಬಹಾದ್ದೂರ್ ಮ॥ ರಾ॥ ರಾ. ನರಸಿಂಹಾಚಾರ್ಯರ ಮೈಸೂರು ವಿಶ್ವವಿದ್ಯಾನಿಲಯದ 'ರೀಡರ್‌ಷಿಪ್' ಉಪನ್ಯಾಸಗಳು ಮುದ್ರಣವಾಗಿಲ್ಲದಿರುವುದರಿಂದಲೂ, ಭಾಷಾ ಶಾಸ್ತ್ರ ವಿಷಯಕವಾದ ಪುಸ್ತಕಗಳನ್ನು ಬರೆಯಿಸುವ, ತಿದ್ದುವ ಮತ್ತು ಮುದ್ರಣ ಮಾಡಿಸುವ ಕಾರ್ಯವನ್ನು ಮುಂಬಯಿ, ಮದರಾಸು ಮತ್ತು ಮೈಸೂರು ವಿಶ್ವವಿದ್ಯಾನಿಲಯದವರು ಕೆಲಮಟ್ಟಿಗಾದರೂ ಕೈಕೊಳ್ಳಬೇಕೆಂದು ಈ ಸಮ್ಮೇಳನವು ಸೂಚಿಸುತ್ತದೆ.

ಸೂಚಕರು :—ಮ॥ ರಾ॥ ಕೆ. ಜಿ. ಕುಂದಣಗಾರರು, ಎಂ.ಎ.

ಅನುಮೋದಕರು :—ಮ॥ ರಾ॥ ಕೆ. ಪರಮೇಶ್ವರಮಯ್ಯನವರು.

**೧೫.** ಕರ್ಣಾಟಕ ಸಾಹಿತ್ಯ ಪರಿಷತ್ತಿನವರು ತಮ್ಮ ಪ್ರಚಾರಕರನ್ನು ಕನ್ನಡ ಸಾಹಿತ್ಯ ಬೆಳೆವಣಿಗೆಗಾಗಿ ಕರ್ಣಾಟಕದ ಎಲ್ಲ ಕಡೆಗಳಿಗೂ—ಅದರಲ್ಲೂ ಕೊಡಗು ದೇಶಕ್ಕೆ ಹೆಚ್ಚಾಗಿಯೂ—ಕಳುಹಿಸುವಂತೆ ಏರ್ಪಾಡು ಮಾಡಬೇಕಾದುದು ಆವಶ್ಯಕವೆಂದು ಈ ಸಮ್ಮೇಳನವು ಅಭಿಪ್ರಾಯಪಡುತ್ತದೆ.

ಸೂಚಕರು :—ಮ॥ ರಾ॥ ಬಿ. ಎನ್. ಕೃಷ್ಣಮೂರ್ತಿಗಳು.

ಅನುಮೋದಕರು :—ಮ॥ ರಾ॥ ಸಿದ್ಧಲಿಂಗಯ್ಯನವರು.

**೧೬.** ಕೊಡಗಿನಲ್ಲಿರುವ ಶಾಸನಗಳ ಮತ್ತು ಚರಿತ್ರೆಗೆ ಸಂಬಂಧಿಸಿದ ಲೇಖನಗಳ ವಿಚಾರವು ಚರಿತ್ರ ಸಂಶೋಧಕರಿಗೆ ದೊರೆಯುವಂತೆ ಕೊಡಗು ಸರಕಾರವು ಏರ್ಪಡಿಸಬೇಕೆಂದು ಈ ಸಮ್ಮೇಳನವು ಅವರನ್ನು ಪ್ರಾರ್ಥಿಸುತ್ತದೆ.

ಸೂಚಕರು :—ಮ॥ ರಾ॥ ಬಿ. ಎನ್. ಕೃಷ್ಣಮೂರ್ತಿಗಳು.

ಅನುಮೋದಕರು :—ಮ॥ ರಾ॥ ಸಿದ್ಧಲಿಂಗಯ್ಯನವರು.

**೧೭.** ಸಮಗ್ರ ಕರ್ಣಾಟಕಕ್ಕೆ ಒಂದು ನಿಘಂಟುವನ್ನೂ ವಿಶ್ವಕೋಶವನ್ನೂ ರಚಿಸುವುದಲ್ಲದೆ ಒಂದು ವ್ಯಾಕರಣವನ್ನೂ ರಚಿಸಲು ಏರ್ಪಾಡು ಮಾಡಬೇಕೆಂದು ಈ ಸಭೆಯು ಸಾಹಿತ್ಯ ಪರಿಷತ್ತನ್ನು ಕೇಳಿಕೊಳ್ಳುತ್ತದೆ.

ಸೂಚಕರು :—ಮ॥ ರಾ॥ ಬಿ. ಎನ್. ಕೃಷ್ಣಮೂರ್ತಿಗಳು.

ಅನುಮೋದಕರು :—ಮ॥ ರಾ॥ ಸಿದ್ಧಲಿಂಗಯ್ಯನವರು.

---

## ಸ್ವಾಗತ ಗೀತೆ

೧

ಬನ್ನಿರಿ ಕರ್ಣಾಟಕ ಬಂಧುಗಳೇ,
ನಮ್ಮಾ ಕುಡುಮಲೆಗೆ
ಕೊಡಗಿನ ನಡುವಿನ ಗುಡ್ಡದ ಮೇಲ್
ರಾರಾಜಿಪ ಮಡಿಕೆರೆಗೆ,
ಬಲು ಬೆಡಗಿನ ಮಡಿಕೆರೆಗೆ.

ಬನ್ನಿರಿ ಕನ್ನಡ ಕವಿಗಳು, ವಾಗ್ಮಿಗ-
ಳಂದದ ಬರೆಹಗರು,
ಬನ್ನಿರಿ ವೈಯಾಕರಣರು, ಗಾಯಕ
ವೃಂದವು, ನಟವರರು,
ಸೋದರಿಯರು, ವಿದುಷಿಯರು.

೨

ಪಾಳೆಯಗಾರರು ಕಟ್ಟಿದ ನಾಡಿ-
ಕ್ಕೇರಿಯ ನೃಪವರರು
ಆಳಿದ ನಾಡಿದು ಮತ್ತಾಂಗ್ಲೇಯರ
ವಶವಾಗಿಹ ನಾಡು,
ಈ ಕೊಡಗಿನ ಮಲೆನಾಡು.

ಇಲ್ಲೆಲ್ಲಿಯು ಹೆಗ್ಗಾಡಿನ ಕೂಟ,
ತಿಳಿ ನೀರಿನ ಓಟ,
ಎಲ್ಲಿಯು ಹಚ್ಚಗೆ ಕಂಗೊಳಿಸುವ ಹಿರಿ
ಬಯಲಿನ ಸವಿ ನೋಟ,
ಆನಂದದ ಹೂದೋಟ.

ವಾಣೀ ರಮಣನ ಆಡುಂಬೊಲವಿದು,
ಸಿರಪತಿಯುದ್ಯಾನ,
ಗೌರೀ ವರನುತ್ಸಾಹದಿ ಬೇಟೆಯ
ನಾಡುವ ಕಾನನವು,
ಮೇಣಿಂದ್ರನ ನಂದನವು.




ಇಲ್ಲಿಯ ಅಡವಿಗಳಲ್ಲಿವೆ ಆನೆಯು,
ಹುಲಿ, ಕರಡಿಯು, ಚಿರತೆ,
ಹುಲ್ಲೆಯು ಕರು, ಕೆನ್ನಾಯಿಯು, ಕಾಟಿಯು,
ಕಡವೆಯು, ಕಬ್ಬೆಕ್ಕು
ಬಿಲ್ಲಾಳ್ಗಳ ಮನದುಕ್ಕು!

ದಂತಿಯನಿರಿಯುವ ಹುಲಿಯನು ಸಿಗಿಯುವ
ಕೊಡವರ ನೆಲೆವೀಡು.
ಕತ್ತಿಯು ಕೋವಿಯು ಧರಿಸುವ ಕಲಿಗಳ
ಕಾವೇರಿಯ ನಾಡು ;
ಇದು ಸಿಹಿ ಜೇನಿನ ಗೂಡು.

ಭತ್ತವು, ಕಿತ್ತಳೆ, ಬಾಳೆಯು, ಮೆಣಸು,
ಕಾಫಿಯು, ಏಲಕ್ಕಿ ;
ಸುತ್ತಲು ಬೆಳೆದುರೆ ಸೊಂಪಾಗಿರುವುದು
ಕೊಡವರ ತಾಯ್ನಾಡು ;
ಈ ಕನ್ನಡಿಗರ ನಾಡು.

ಬಡಗಲು, ತೆಂಕಲು, ಹೇಮಾವತಿಯು
ರಾಮಾನುಜ ತೀರ್ಥ,
ಪಡುವಲು ತಲೆಕಾವೇರಿಯು, ಮೂಡಲು
ರಾಮಕ್ಷೇತ್ರವಿವೇ
ಬಲು ಪಾವನ ತೀರ್ಥಗಳು.

೩

ಸ್ವಾಗತವನು ನಿಮಗೀಗಳೆ ಬಯಸುವೆ-
ವಾದರದಲಿ ನಾವು,
ಮೋದದಿ ಕರ್ಣಾಟಕ ಸಮ್ಮೇಲನ
ಕಾರ್ಯವನನುಗೊಳಿಸೆ,
ನಿಮ್ಮಯ ನೇಹವ ಗಳಿಸೆ.

ಮೂಡಣ, ಪಡುವಣ, ಬಡಗಣ ಕನ್ನಡ
ನಾಡಿನ ಬುಧ ವರರೇ,
ಬನ್ನಿರಿ ಸ್ವಾಗತವೀಯಲು ಕಾದಿಹ
ಕೊಡಗಿನ ಮಡಿಕೆರೆಗೆ,
ನಡು ನಾಡಿನ ಮಡಿಕೆರೆಗೆ.

೪

ಮಂಗಳವೀಯಲಿ ಓಂಕಾರೇಶನು
ಪರಿಷನ್ಮಂಡಲಕೆ!
ಮಂಗಳವೀಯಲಿ ಸಿರಿಗನ್ನಡ ಸ–
ಮ್ಮೇಲನ ಸಂಭ್ರಮಕೆ!
ಶ್ರೀನಿಲಯನ ಬಲದೊರಕೆ.

**ಜಿ. ಶ್ರೀನಿವಾಸಮೂರ್ತಿ.**

---

## ಸ್ವಾಗತ ಮಂಡಲದ ಅಧ್ಯಕ್ಷರ ಭಾಷಣ

ಕರ್ಣಾಟಕ ಸಾಹಿತ್ಯ ಪ್ರೇಮಿಗಳಾದ ಪ್ರತಿನಿಧಿಗಳಿರಾ! ತಾಯಿನುಡಿಯ ಹಬ್ಬವನ್ನು ಜರುಗಿಸಲು ಕನ್ನಡ ನಾಡಿನ ಬೇರೆ ಬೇರೆ ಕಡೆಗಳಿಂದ ಬಂದಿರುವ ತಮ್ಮೆಲ್ಲರಿಗೆ ನಾನು ಈ ಹೊತ್ತು ಹೃತ್ಪೂರ್ವಕವಾಗಿ ಸ್ವಾಗತವನ್ನೀಯುತ್ತೇನೆ. ಸಾಹಿತ್ಯ ಸಮ್ಮೇಳನಕ್ಕೆ ಕೊಡಗಿನ ಪರವಾಗಿ ಈ ಮೊದಲೇ ಆಹ್ವಾನವು ಕೊಡಲ್ಪಟ್ಟಿತ್ತು. ಆದರೆ, ಆ ಆಹ್ವಾನವನ್ನು ಪೂರಯಿಸುವ ಸುಯೋಗವು ಇದುವರೆಗೆ ಬಂದಿರಲಿಲ್ಲ. ಈ ವಿಷಯುವನ್ನು ಕುರಿತು ಕರ್ಣಾಟಕ ಸಾಹಿತ್ಯ ಪರಿಷತ್ತಿನ ವಿಭವ ಸಂವತ್ಸರದ ವರದಿಯಲ್ಲಿ ಮುಂದಿನ ಮಾತುಗಳು ಇವೆ:—"ಕರ್ಣಾಟಕ ಸಾಹಿತ್ಯ ಸಮ್ಮೇಳನವು ಮೈಸೂರು ಸಂಸ್ಥಾನದಲ್ಲಿ ಏಳು ಸಲವೂ, ಮುಂಬಯಿ ಕರ್ಣಾಟಕದಲ್ಲಿ ಮೂರು ಬಾರಿಯೂ, ಮದ್ರಾಸು ಕರ್ಣಾಟಕದಲ್ಲಿ ಮೂರಾವೃತ್ತಿಯೂ ಕೂಡಿರುತ್ತದೆ. ನಿಜಾಂ ಕರ್ಣಾಟಕ, ಮುಂಬಯಿ ಉತ್ತರ ಕನ್ನಡ ಜಿಲ್ಲೆ, ಕೊಡಗು ಸೀಮೆ— ಈ ಪ್ರಾಂತಗಳಲ್ಲಿ ಸಮ್ಮೇಳನವು ಕೂಡಲು ಇದುವರೆಗೆ ಅವಕಾಶ ದೊರೆಯಲಿಲ್ಲ." ಈ ರೀತಿಯಿಂದ ಉಪಕ್ರಮದ ಮಾತುಗಳಿದ್ದು ಅನಂತರ ಕಲ್ಬುರ್ಗಿಯವರು ಸಮ್ಮೇಳನವನ್ನು ಕರೆದುದಕ್ಕಾಗಿ ಅವರಿಗೆ ಧನ್ಯವಾದವನ್ನು ಸಮರ್ಪಿಸಿ, ಮುಂದೆ ಆ ವರದಿಯಲ್ಲಿ ಬರೆದಿರುವುದೇನೆಂದರೆ—"ಮುಂದಣ ಎರಡು ವರ್ಷಗಳಲ್ಲಿ ಸಮ್ಮೇಳನವು, ಉಳಿದಿರುವ, ಮುಂಬಯಿ ಉತ್ತರ ಕನ್ನಡ ಜಿಲ್ಲೆಯಲ್ಲಿಯೂ, ಕೊಡಗು ಸೀಮೆಯಲ್ಲಿಯೂ ಅಲ್ಲಿಯ ಭಾಷಾಭಿಮಾನಿಗಳ ಉತ್ಸಾಹೌದಾರ್ಯಗಳಿಂದ ನಡೆಯುವ ಪಕ್ಷಕ್ಕೆ ಕರ್ಣಾಟಕ ಮಂಡಲದ ಮುಖ್ಯ ಪ್ರದೇಶಗಳಲ್ಲಿ ಕರ್ಣಾಟಕ ಸಾಹಿತ್ಯ ಸಮ್ಮೇಳನದ ಪರ್ಯಟನವು ಒಂದು ಸಾರಿ ಮುಗಿದಂತಾಯಿತು." ಕೂಡಲೆ ಮುಂದೆ, "ಈ ಸಾರಿ (೧೯೩೦ನೆಯ ಇಸವಿಯಲ್ಲಿ) ಕರ್ಣಾಟಕ ಸಾಹಿತ್ಯ ಸಮ್ಮೇಳನವನ್ನು ಕೊಡಗು ಪ್ರಾಂತಕ್ಕೆರಾಜಧಾನಿಯಾದ ಮಡಿಕೇರಿಯಲ್ಲಿ ನೆರೆಯಿಸಬೇಕೆಂದು ಅಲ್ಲಿಯ ಪ್ರಮುಖರು ಕೆಲವರು ಮಾಡಿದ ಪ್ರಯತ್ನವು ಹಲವು ಕಾರಣಗಳಿಂದ ಫಲಿಸಲಿಲ್ಲ." ಹೀಗೆಂದು ವರದಿಯಲ್ಲಿ ಸೂಚಿಸಿದ ಮೇರೆಗೆ, ಹಿಂದೆ ಈ ಸಮ್ಮೇಳನವನ್ನು ಇಲ್ಲಿ ಜರುಗಿಸಲು ಯಾವ ಹಲವು ಕಾರಣಗಳಿಂದ ಸಾಧ್ಯವಾಗಲಿಲ್ಲವೊ ಆ ಕಾರಣಗಳು ಈ ಹೊತ್ತಾದರೂ

ಕಡಿಮೆಯಾಗಿವೆ ಎಂದಲ್ಲವೆಂದು ಮಾತ್ರವಲ್ಲ; ಆರ್ಥಿಕ ದೃಷ್ಟಿಯಿಂದ ಉತ್ಪನ್ನವಾದ ಜಾಗೃತಿಕ ದುರವಸ್ಥೆಯು ನಮ್ಮ ಕೊಡಗು ಸೀಮೆಯನ್ನೇನಾದರೂ ಬಿಟ್ಟಿಲ್ಲ; ಎಂದ ಮೇಲೆ, ಮೊದಲಿಗಿಂತಲೂ ಈಗ ಅಡಚಣೆಗಳೇ ಹೆಚ್ಚು. ಆದರೂ, ಈ ಸಾರಿ ಸಾಹಿತ್ಯ ದೇವಿಯ ಅನುಗ್ರಹದಿಂದಲೊ, ಪರಿಷತ್ತಿನ ಮನಃಶಕ್ತಿಯ ಪ್ರಭಾವದಿಂದಲೊ, ಇಲ್ಲವೆ ನಮ್ಮಲ್ಲಿ ಉಂಟಾದ ಕರ್ತವ್ಯದ ಅರಿವಿನಿಂದಲೊ, ತಮ್ಮನ್ನು ಬರಮಾಡಿಕೊಳ್ಳುವ ಸುಸಂದರ್ಭವನ್ನು ಒದಗಿಸಿಕೊಂಡಿದ್ದೇವೆ. ಒದಗಿರುವ ಈ ಸುಸಂದರ್ಭವು ಯಶಸ್ವಿಯಾಗುವಂತೆ ನಮ್ಮ ಸ್ವಾಗತ ಮಂಡಲವು ಯಥಾ ಶಕ್ತಿ ಯತ್ನಿಸುತ್ತಿದೆ. ಆದರೆ ತಾವು ಇದುವರೆಗೆ ಮೈಸೂರಿನಂತಹ ರಾಜಧಾನಿಯ, ಬೆಂಗಳೂರು, ಧಾರವಾಡಗಳಂತಹ ದೊಡ್ಡ ದೊಡ್ಡ ಪಟ್ಟಣಗಳ ಆದರಾತಿಥ್ಯವನ್ನು ಅನುಭವಿಸಿದವರು. ಕುದುರೆಯ ವಾಹನ, ಮೋಟಾರುಗಳಂತಹ ರಥಗಳಲ್ಲಿಯ ಸಂಚಾರ, ರುಚಿಕರವಾದ ಪಕ್ವಾನ್ನಗಳ ಊಟ ಉಪಚಾರ, ವಿದ್ಯುದ್ದೀಪದ ಪ್ರಕಾಶ—ಇವೇ ಮೊದಲಾದ ಸಮೃದ್ಧ ಸಾಧನಗಳು ಒಂದೆಡೆ; ಪತ್ರಿಕಾ ಗ್ರಂಥಗಳ ವಾಚನಮಂದಿರ, ವಿದ್ಯಾಪೀಠ, ಕವಿಸಮಾಜ –ಇವೇ ಮುಂತಾದ ವಿದ್ಯಾ ಸಾಧನಗಳು ಇನ್ನೊಂದೆಡೆ; ಈ ಮೇರೆಗೆ ಲಕ್ಷ್ಮೀ ಮತ್ತು ಸರಸ್ವತಿಯ ಅನುಗ್ರಹವನ್ನು ಮೇಲಿನ ಪಟ್ಟಣಗಳಲ್ಲಿ ತಾವು ಇದುವರೆಗೆ ಪಡೆದವರು. ಆದರೆ, ಅಂತಹದೊಂದು ಸಂಗತಿಯೂ ನಮ್ಮಲ್ಲಿ ಇಲ್ಲವಾದುದರಿಂದ, ತಮ್ಮಗಳಿಗೆ ನಮ್ಮ ಆತಿಥ್ಯೋಪಚಾರಗಳೆಂದರೆ ಇನ್ನೊಂದರ್ಥದಲ್ಲಿ ಉಪಚಾರವೇ ಸರಿ. ಭಗವಂತನಿಗೆ, ವೈಭವದಿಂದ ತುಂಬಿ ತುಳುಕುತ್ತಿರುವ ಯುಧಿಷ್ಠಿರನ ಅರಮನೆಯಲ್ಲಿ ಇರುವಷ್ಟೇ ಆತ್ಮೀಯ ಭಾವವು ಕುಚೇಲನ ಗುಡಿಸಿಲಿನಲ್ಲಿಯೂ ಇತ್ತಲ್ಲವೆ? ಹಾಗೆಯೇ, ಕನ್ನಡ ತಾಯಿಯು ಕೂಡ ಐಶ್ವರ್ಯದಿಂದ ಮತ್ತು ವಿದ್ಯೆಯಿಂದ ಕೂಡಿದ ಇತರ ಕಡೆಗಳಲ್ಲಿಯ ಮಹೋತ್ಸವಗಳಲ್ಲಿ ಆನಂದಪಟ್ಟಂತೆ, ಇಲ್ಲಿಯ ನಮ್ಮ ಚಿಕ್ಕ ಹಬ್ಬದೊಳಗಿನ ಬಡ ಆತಿಥ್ಯದಿಂದ ಸಂತುಷ್ಟಳಾಗಬೇಕೆಂದು ಕೇಳಿಕೊಂಡರೆ ಅದು ತಪ್ಪಾಗಲಾರದು.

ನಮ್ಮ ಕೊಡಗು ಸೀಮೆಯು ಅಂದವಾದ ಗಿರಿ ಶಿಖರಗಳಿಂದಲೂ, ಹಸುರಾದ ವನಶ್ರೀಯಿಂದಲೂ, ಸ್ವಚ್ಛವಾದ ಚಿಕ್ಕ ಚಿಕ್ಕ ಬುಗ್ಗೆಗಳಿಂದಲೂ ಪ್ರೇಕ್ಷಕರ ಕಣ್ಣನ್ನು ಆಕರ್ಷಿಸುತ್ತಿರುವಾಗ, ತನ್ನ ಪುರಾಣ ಮತ್ತು ಇತಿಹಾಸಗಳಿಂದ ಭಕ್ತರ ಮತ್ತು ಜಿಜ್ಞಾಸುಗಳ ಮನಸ್ಸನ್ನು ಎಳೆಯುತ್ತಿರುವುದು. ದಕ್ಷಿಣ ಹಿಂದುಸ್ಥಾನದಲ್ಲಿ ಆರ್ಯರ ಮೊದಲನೆಯ ವಸತಿಯನ್ನು ಕಲ್ಪಿಸಿದ ಅಗಸ್ತ್ಯಮುನಿಯ ಆಶ್ರಮವೂ, ಮಹಾ ನದಿಗಳಲ್ಲೊಂದಾದ ಕಾವೇರಿಯ ಉದ್ಭವವೂ, ಬ್ರಹ್ಮಗಿರಿಯ ಸಾನ್ನಿಧ್ಯವೂ, ಭಗಂಡ ಕ್ಷೇತ್ರವೂ, ಲಕ್ಷ್ಮಣ ತೀರ್ಥವೂ ಈ ದೇಶವನ್ನು ಪಾವನ ಮಾಡುವಂತೆ, ಎರಡು ಶತಮಾನಗಳ ವರೆಗೆ ಆಳಿದ ವೀರರಾಜರ ವಂಶದ ಆಳಿಕೆಯು ಕನ್ನಡಿಗರ ಇತಿಹಾಸ ಪ್ರದೇಶವನ್ನು ಉಜ್ಜ್ವಲವನ್ನಾಗಿ ಮಾಡುತ್ತಿದೆ.

ನಮ್ಮ ಕೊಡಗಿನ ಇತಿಹಾಸವು ಭಾರತವರ್ಷದ ಬೇರೆ ಬೇರೆ ಭಾಗಗಳದರಂತೆ ಅನ್ಯದೇಶೀಯರಿಂದಲೆ ಮೊದಲಾಗಿ ಬರೆಯಲ್ಪಟ್ಟಿದೆ. ದೇಶದ ರಾಜಕೀಯ ಮತ್ತು ಸಾಮಾಜಿಕ ಪರಿಸ್ಥಿತಿಯ ಇತಿಹಾಸವನ್ನು ಸುಸಂಗತವಾಗಿ ಬರೆದಿಡುವ ಕ್ರಮವು

ಭಾರತೀಯರಿಗೆ ಹೊಸದು. ಆದುದರಿಂದ, ಎಲ್ಲೆಲ್ಲಿಯೂ ಪಾಶ್ಚಾತ್ಯರ ಲೇಖನಿಯೇ ಈ ವಿಷಯದಲ್ಲಿ ಮೊದಲಾಗಿ ತೊಡಗಿದುದು ಕಂಡುಬರುತ್ತದೆ. ತಾಮ್ರಶಾಸನ, ಶಿಲಾಲೇಖ, ಬಖರಿ, ಹಳೆಯ ಲೇಖನ, ಕಾವ್ಯಾದಿಗಳಲ್ಲಿ ಬರುವ ಕವಿಗಳ ಇತಿವೃತ್ತ, ಮತ್ತು ಅದೇ ಸಂದರ್ಭದಲ್ಲಿ ಅವರು ವರ್ಣಿಸಿರುವ ಆಯಾ ಕಾಲದ ರಾಜರ ವರ್ಣನೆ, ಹೊರಗಿನ ಯಾತ್ರಿಕರು ಬರೆದಿಟ್ಟ ಚರಿತ್ರೆ—ಇವೇ ನಮ್ಮ ದೇಶದ ಇತಿಹಾಸದ ತಳಹದಿ. ಈ ಸಾಧನೆಗಳು ಇತ್ತಲಾಗಿ ಕಾಲಕ್ರಮೇಣ ಹೆಚ್ಚು ಹೆಚ್ಚು ಪ್ರಮಾಣದಲ್ಲಿ ಬೆಳಕಿಗೆ ಬರುತ್ತಿರುವುದರಿಂದ, ಕೆಲವು ವರ್ಷಗಳ ಹಿಂದೆ ಅನ್ಯದೇಶೀಯರು ಬರೆದ ಈ ದೇಶದ ಬೇರೆ ಬೇರೆ ಭಾಗಗಳ ಇತಿಹಾಸದಲ್ಲಿ ಹೇಗೆ ಎಷ್ಟು ತಿದ್ದುಪಾಟಗಳು ಆಗಿವೆಯೊ ಹಾಗೆಯೇ ಕೊಡಗಿನ ಇತಿಹಾಸದಲ್ಲಿ ಇನ್ನೂ ಸಂಶೋಧನವು ಆಗಬೇಕಾಗಿದೆ. ಇತಿಹಾಸ ಪ್ರೇಮಿಗಳಾದ ಕನ್ನಡಿಗ ಸಂಶೋಧಕರು ಈ ಕಾರ್ಯವನ್ನು ಕೈಕೊಂಡು ಕೊಡಗಿನ ಹಿಂದಿನ ಇತಿಹಾಸವನ್ನೂ, ವೀರರಾಜರ ವಂಶವು ಆಳಿದ ಕಾಲದ ಇತಿಹಾಸವನ್ನೂ ವಿಶ್ವಸನೀಯವಾಗಿ ಬೈಲಿಗೆ ತರುವುದು ಇಷ್ಟವಾಗಿದೆ. ಆದರೆ, ಇದುವರೆಗೆ ಸುಶಿಕ್ಷಿತರ ತಿಳಿವಳಿಕೆಗೆ ಬಂದಿರುವ ಚರಿತ್ರಾಂಶಗಳನ್ನು ಪರಿಶೀಲಿಸಿ ಹೇಳುವುದಾದರೆ, ಇಲ್ಲಿಯ ಸ್ವರಾಜ್ಯದ ಕಾಲದಲ್ಲಿ ರಾಜಾಶ್ರಯವನ್ನು ಹೊಂದಿದ ಕವಿಗಳೂ ಗ್ರಂಥಕರ್ತರೂ ಇದ್ದುದು ಕಂಡುಬರುವುದಿಲ್ಲ. ರಾಜಾಶ್ರಯದಿಂದ ಅಲ್ಲವಾದರೂ ಈ ಸೀಮೆಯಲ್ಲಿ ಕೆಲವು ಕವಿಗಳು ಇದ್ದರೆಂದು ಸಂಶೋಧಕರು ಅಭಿಪ್ರಾಯಪಡುತ್ತಾರೆ. ಅಪ್ರಸಿದ್ಧವಾಗಿರುವ ಅಂತಹ ಕಾವ್ಯಗಳನ್ನು ಅಚ್ಚುಹಾಕಿದರೆ ಅದರಿಂದ ಕನ್ನಡ ವಾಙ್ಮಯಾಭಿವೃದ್ಧಿಗೆ ಎಷ್ಟೋ ಸಾಹಾಯ್ಯವಾದೀತೆಂಬುದಕ್ಕೆ ಸಂಶಯವಿಲ್ಲ. ಆದುದರಿಂದ, ಈ ದಿಕ್ಕಿನಿಂದ ನಮ್ಮ ಸಂಶೋಧಕರ ಪ್ರಯತ್ನ ನಡೆಯುವುದು ಅವಶ್ಯವಾಗಿದೆ. ಇದು ಮುಂದಿನ ಸಂಗತಿಯಾದರೂ ಒಂದು ಮಾತೇನೊ ಖಂಡಿತವಾದುದು: ಕೊಡಗಿನ ಸೀಮೆಯದೆಂದು ಬೆರಳಿಟ್ಟು ತೋರಿಸುವಂತೆ ಕನ್ನಡ ಕಾವ್ಯವಾಗಲಿ, ಗ್ರಂಥವಾಗಲಿ ಇದುವರೆಗೆ ಬೆಳಕಿಗೆ ಬಂದಿಲ್ಲ.

ಹಿಂದಿನ ಕಾಲದ ಮಟ್ಟಿಗೆ ಈ ರೀತಿಯಿಂದ ಸಂಶಯಾಸ್ಪದವಾದ ವಾಙ್ಮಯ ಪರಿಸ್ಥಿತಿಯಿದ್ದರೂ, ವರ್ತಮಾನ ಕಾಲದ ಪರಿಸ್ಥಿತಿಯು ಆಶಾಜನಕವಾಗಿದೆಯೆನ್ನಬಹುದು. ನಮ್ಮ ಕೊಡಗು ಸೀಮೆಯ ಅನೇಕ ತರುಣ ಸ್ತ್ರೀ ಪುರುಷರು ವಿದ್ಯಾ ಜ್ಞಾನ ಸಂಪನ್ನರಾಗಿ ಕನ್ನಡ ಭಾಷೆಯ ಸೇವೆಯನ್ನು ಮಾಡಲು ಉದ್ಯುಕ್ತರಾಗಿದ್ದಾರೆ. ದೊಡ್ಡ ದೊಡ್ಡ ಕಾವ್ಯಗಳದಾಗಲಿ, ಗ್ರಂಥಗಳದಾಗಲಿ ರಚನೆ ಇಲ್ಲವಾದರೂ, ಪುಟ್ಟ ಪುಟ್ಟ ಪದ್ಯಗಳನ್ನೂ ಲೇಖನಗಳನ್ನೂ ಬರೆಯುವ ತರುಣರ ಉತ್ಸಾಹವನ್ನು ನೋಡಿದರೆ ವಾಙ್ಮಯ ವಿಷಯದಲ್ಲಿ ಕೊಡಗಿನ ಭವಿಷ್ಯತ್ಕಾಲವು ಉಜ್ಜ್ವಲವಾಗಿ ತೋರುತ್ತದೆ. ಮತ್ತು, ಇದಕ್ಕೆ ಶುಭ ಶಕುನವೆಂಬಂತೆ, ಅಥವಾ ಮಂಗಳಕರವಾದ ಪ್ರಾರಂಭವೆಂಬಂತೆ, ಅಖಿಲ ಕರ್ಣಾಟಕದ ಸಾಹಿತ್ಯ ಪರಿಷತ್ತು ತನ್ನ ಸಾನ್ನಿಧ್ಯದಿಂದ ನಮ್ಮನ್ನು ಈ ಹೊತ್ತು ಅನುಗ್ರಹಿಸುತ್ತಿದೆ. ಇಲ್ಲಿ ನೆರೆದಿರುವ ಮಹಾ ಮಹಾ ಸಾಹಿತ್ಯ ಭಕ್ತರೂ, ಸಾಹಿತ್ಯೋಪಾಸಕರೂ ಕನ್ನಡ ಸಾಹಿತ್ಯದ ಮತ್ತು ಭಾಷೆಯ

ಪುರೋಭಿವೃದ್ಧಿಗೆ ಬರಬಹುದಾದ ಯಾವ ಯಾವ ಎಡರುಗಳಿವೆಯೊ ಅವುಗಳನ್ನು ಹೇಗೆ ಬದಿಗೊತ್ತಬಹುದು? ಅನುಕೂಲವಾದ ಸಾಧನಗಳನ್ನು ಹೇಗೆ ನಿರ್ಮಿಸಿಕೊಳ್ಳಬಹುದು? ಸಾಹಿತ್ಯ ಪರಿಷತ್ತಿನ ಪ್ರಚಾರ ಕಾರ್ಯವನ್ನು ಹೇಗೆ ಯಶಸ್ವಿಯನ್ನಾಗಿ ಮಾಡಬಹುದು? ಇವೇ ಮುಂತಾದ ಪ್ರಶ್ನೆಗಳನ್ನು ಚರ್ಚಿಸಿ, ದೇಶದವರ ಆದರಣೆಯ ಬಗ್ಗೆ ತಮ್ಮ ನಿರ್ಣಯುಗಳನ್ನು ಕೊಟ್ಟಾರೆಂಬುದು ನಿಜ. ಆದರೂ, ಈ ಸಂದರ್ಭದಲ್ಲಿ ಒಂದೆರಡು ಸೂಚನೆಗಳನ್ನು ಕೊಡಹೋದರೆ ಅದು ಅಪ್ರಾಸಂಗಿಕವಾಗಲಾರದೆಂದು ಮನಗಂಡು ಈ ಸಾಹಸವನ್ನು ಮಾಡತೊಡಗಿದ್ದೇನೆ.

ಆಡುವ ಯಾವ ಭಾಷೆಯೇ ಆಗಲಿ, ಅದು ಎಲ್ಲ ಕಡೆಗಳಲ್ಲಿಯೂ ಒಂದೇ ರೂಪದಿಂದ ಇರುವುದು ಬಹು ಕಡಿಮೆ. ಭಾಷೆಯು ವ್ಯಾಪನೆಗೆ ಒಳಪಟ್ಟ ಪ್ರದೇಶವು ಎಷ್ಟೆಷ್ಟು ದೊಡ್ಡದೊ ಅಷ್ಟಷ್ಟು ಆ ಭಾಷೆಯ ಏಕರೂಪತ್ವವು ಕಡಿಮೆಯಾಗುವುದು. ಈ ಮಾತಿಗೆ ಇಂಗ್ಲಿಷು, ಹಿಂದಿ, ಇತ್ಯಾದಿ ಯಾವ ಭಾಷೆಯನ್ನು ಬೇಕಾದರೂ ಉದಾಹರಿಸಿಕೊಳ್ಳಬಹುದು. ಭೂಸ್ಥಿತಿ, ವಾಯು ಗುಣ, ಸುತ್ತಲೂ ಇತರ ಭಾಷೆಗಳನ್ನಾಡುವವರ ಸಹವಾಸ—ಈ ಕಾರಣಗಳಿಂದ, ಮೇಲೆ ಹೇಳಿದಂತೆ, ಆಡುವ ಭಾಷೆಗಳಲ್ಲಿ ವ್ಯತ್ಯಾಸಗಳು ಬಂದು ಅವುಗಳ ಏಕರೂಪತೆಗೆ ಭಂಗಬರುವುದು ಅಪರಿಹಾರ್ಯವೆಂದು ಹೇಳಬಹುದು. ಒಂಬತ್ತು ಮೈಲು ದಾಟಿದೊಡನೆ, ನುಡಿ ಒಂದೆಯಾದರೂ, ಉಚ್ಚಾರ, ಸ್ವರಭೇದ ಮೊದಲಾದುದರಿಂದ ಅದು ರೂಪಾಂತರವನ್ನು ಹೊಂದುತ್ತದೆಯೆಂದು ಕೆಲವು ಭಾಷಾ ನಿರೀಕ್ಷಕರು ಅಭಿಪ್ರಾಯಪಡುತ್ತಾರೆ. ಈ ಮಾತಿಗನುಸಾರವಾಗಿ ನಮ್ಮ ಕನ್ನಡ ನುಡಿಯಲ್ಲಿ ಉಚ್ಚಾರಭೇದ, ಸ್ವರಭೇದ—ಇವು ಇರಬಹುದಾದರೂ, ಗ್ರಂಥದಲ್ಲಿ ಬರುವಾಗ ಅದರ ಏಕರೂಪತೆಯನ್ನಪೇಕ್ಷಿಸಹೋದರೆ ಅದು ತಪ್ಪಾದೀತೆ? ಪರಂತು, ದುಃಖದ ಮಾತೇನೆಂದರೆ, ಕನ್ನಡ ಭಾಷೆಯ ಲೇಖನವು ಒಂದೊಂದು ಕಡೆಯಲ್ಲಿ ಒಂದೊಂದು ವಿಧವಾದ ರೂಪವನ್ನು ತಾಳಿದೆ! ಆದರೆ, 'ಇದು ಕುಂದಲ್ಲ, ಅಲ್ಲಲ್ಲಿಯ ಅದರ ವೈಶಿಷ್ಟ್ಯ' ಎಂಬುದಾಗಿ ಗ್ರಾಂಥಿಕ ಭಾಷೆಯ ರೂಪಭೇದವನ್ನು ಗುಣದ ಕಡೆಗೆ ತಿರುಗಿಸಿ ಒಂದು ವೇಳೆ ಯಾರಾದರೂ ಸಮರ್ಥಿಸಬಹುದು. ಈ ಸಮರ್ಥನೆಯು ಅಷ್ಟೊಂದು ಸಮಂಜಸವಾದುದಲ್ಲ. ಗ್ರಾಂಥಿಕ ಭಾಷೆಯಲ್ಲಿಯೂ ವ್ಯತ್ಯಾಸಗಳು ಬರುವುದೆಂದರೆ, ಅದಕ್ಕೆ ಒಂದೇ ಹಿಡಿತವಿಲ್ಲವೆಂಬುದೇ ಅರ್ಥ. ಈ ಕಾರಣದಿಂದಲೇ ನಮ್ಮ ಕನ್ನಡ ಭಾಷೆಗೆ ಇಂತಹ ದುರ್ದಶೆಯು ಬಂದಿರುವುದು. ಕನ್ನಡ ನುಡಿಯನ್ನಾಡುವ ಒಂದೇ ಸಂಸ್ಕೃತಿಯ ಪಂಗಡದವರು ಬೇರೆ ಬೇರೆ ಸರಕಾರಗಳ ಆಡಳಿತದಲ್ಲಿ ಸೇರಿಹೋದುದರಿಂದ ಅವರು ಬರೆಯುವ ಭಾಷೆಯು ಒಂದೇ ಕನ್ನಡವಾದರೂ, ಅದಕ್ಕೆ, 'ಮೈಸೂರು ಕನ್ನಡ,' 'ಧಾರವಾಡ ಕನ್ನಡ,' 'ಮಂಗಳೂರು ಕನ್ನಡ'–ಇತ್ಯಾದಿ ಬೇರೆ ಬೇರೆ ಒಳ ಹೆಸರುಗಳು ರೂಢವಾಗಿವೆ. ಇದು ನಿಜವಾಗಿಯೂ ಶೋಚನೀಯವಾದ ಸಂಗತಿ. ಕನ್ನಡದ ಈ ದುರವಸ್ಥೆಯನ್ನು ಹೋಗಲಾಡಿಸಬೇಕಾದರೆ, ಕನ್ನಡ ಪ್ರಾಂತದ ಏಕೀಕರಣವಾಗಬೇಕೆಂಬುದು ನಿಜ. ಆದರೆ ಭಾಷಾನುರೂಪವಾದ ಪ್ರಾಂತ ಘಟನೆಯು ಇಡೀ

ಹಿಂದೂಸ್ಥಾನದ ರಾಜಕೀಯ ಪ್ರಶ್ನೆಯಾಗಿದೆ, ಬರೆ ನಮ್ಮ ಅಂಕೆಯಲ್ಲಿ ಇದ್ದುದಲ್ಲ; ಅಲ್ಲದೆ, ಇದು ಸಾಹಿತ್ಯ ಸಮ್ಮೇಳನಕ್ಕೆ ಸಂಬಂಧಿಸಿದ ವಿಷಯವೂ ಅಲ್ಲ. ಅಂತಹ ಸುಧಾರಣೆಯು ಬರುವ ವರೆಗೂ ಮುಂಬಯಿ, ಮದ್ರಾಸು, ಮೈಸೂರು, ಹೈದರಾಬಾದು, ಕೊಡಗು—ಈ ಪ್ರಾಂತಗಳ ಕ್ರಮಿಕ ಪುಸ್ತಕಗಳನ್ನೂ ಪಠ್ಯ ಪುಸ್ತಕಗಳನ್ನೂ ಮಧ್ಯವರ್ತಿಯಾದ ಒಂದೇ ಸಂಸ್ಥೆಯ ಮೇಲ ತನಿಖೆಯಿಂದ ಹೊರಡಿಸುವ ವ್ಯವಸ್ಥೆಯನ್ನು ಕಲ್ಪಿಸಿಕೊಂಡರೆ, ಆದರಿಂದ ಕನ್ನಡ ಭಾಷೆಯ ಏಕ ರೂಪತೆಯನ್ನು ತಕ್ಕ ಮಟ್ಟಿಗಾದರೂ ಸಾಧಿಸಬಹುದು.

ಮದ್ರಾಸು, ಮೈಸೂರು, ಹೈದರಾಬಾದುಗಳ ವಿಶ್ವವಿದ್ಯಾಲಯಗಳಲ್ಲಿ ಕನ್ನಡಕ್ಕೆ ಪ್ರವೇಶವು ದೊರೆತಿದೆ. ಮುಂಬಯಿ ವಿಶ್ವವಿದ್ಯಾಲಯವಾದರೂ ಇದಕ್ಕೆ ಅಪವಾದವಲ್ಲ. ಈ ಪ್ರವೇಶದಿಂದಲೇ ಶಿಕ್ಷಣ ಇಲಾಖೆಗಳೊಳಗಿನ ಕನ್ನಡದ ಕೊರತೆಗಳು ಮಾಯವಾದುವೆಂದು ನೆನಸಲಾಗದು. ಮಾಧ್ಯಮಿಕ ಶಿಕ್ಷಣದಲ್ಲಿ ದೇಶಭಾಷೆಗಳನ್ನು ಮಾಧ್ಯಮಗಳನ್ನಾಗಿ ಮಾಡಬೇಕೆಂದು ಶಿಕ್ಷಣ ವ್ಯವಸಾಯದಲ್ಲಿ ನುರಿತವರು ಈಗ ಎಷ್ಟೋ ಸಮಯದಿಂದ ಹೇಳುತ್ತಿರುವರಲ್ಲದೆ, ಕಲಕತ್ತೆಯ ಸ್ಯಾಡ್ಲರ್ ಕಮಿಷನು ಕೂಡ ತನ್ನ ವರದಿಯಲ್ಲಿ ಈ ಅಭಿಪ್ರಾಯವನ್ನು ಒತ್ತಿ ಹೇಳಿದೆಯೆಂಬುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ನಮ್ಮ ಪರಿಷತ್ತು ಕೂಡ ಈ ವಿಷಯದಲ್ಲಿ ಗೊತ್ತುವಳಿಯನ್ನು ಈ ಮೊದಲೇ ದಾಟಿಸಿದೆ. ಆಕಾಂಕ್ಷಾ ರೂಪದಲ್ಲಿ, ಅಥವಾ ಪ್ರಾರ್ಥನಾ ರೂಪದಲ್ಲಿ ಇರುವ ಈ ಗೊತ್ತುವಳಿಗೆ ಕಾರ್ಯರೂಪತೆಯನ್ನು ಕೊಡಲು ಪರಿಷತ್ತು ಪ್ರಯತ್ನಿಸುವುದು ಅವಶ್ಯವಾಗಿದೆ.

ಉಚ್ಚ ಶಿಕ್ಷಣದಲ್ಲಿ ಒಂದು ಭಾಷೆಗೆ ಪ್ರವೇಶವನ್ನು ಕೊಟ್ಟ ಮಾತ್ರದಿಂದ ವಿಶ್ವವಿದ್ಯಾಲಯದ ಕರ್ತವ್ಯವು ಪೂರ್ತಿಯಾಗಲೊಲ್ಲದು; ಭಾಷಾಭಿವೃದ್ಧಿಗೆ ಅವಶ್ಯವಾದ ಗ್ರಂಥಗಳನ್ನು ಬರೆಯಿಸಬೇಕು. ಸಾಹಿತ್ಯಾಭಿವೃದ್ಧಿಯೆಂದರೆ ಬರೆ ಕಾವ್ಯ, ನಾಟಕ, ಕಥೆ ಮುಂತಾದವುಗಳ ನಿರ್ಮಿತಿಯೇ ಅಲ್ಲ. ವಾಙ್ಮಯದೊಳಗೆ ಇದೊಂದು ಶಾಖೆ. ಇತಿಹಾಸ, ತತ್ತ್ವಜ್ಞಾನ, ಭೌತಿಕ ಶಾಸ್ತ್ರ, ಜ್ಯೋತಿಶ್ಶಾಸ್ತ್ರ, ಸ್ಥಾಪತ್ಯ—ಇತ್ಯಾದಿ ಮಹತ್ತ್ವಾದ ಅನೇಕ ಶಾಖೆಗಳು ವಾಙ್ಮಯ ವೃಕ್ಷದಲ್ಲಿ ಪಲ್ಲವಿತವಾಗಬೇಕು. ಇಂತಹ ಪ್ರಯತ್ನವನ್ನು ವಿಶ್ವವಿದ್ಯಾಲಯಗಳು ತಮ್ಮ ಅಧಿಕಾರದಲ್ಲಿ ನಡಿಸಬೇಕು. ಮೈಸೂರಿನ ವಿಶ್ವವಿದ್ಯಾಲಯವು ಈ ರೀತಿಯಿಂದ ಪ್ರಯತ್ನವನ್ನು ನಡೆಯಿಸಿ ಉಚ್ಚ ತರಗತಿಯ ಗ್ರಂಥ ಸಂಪತ್ತನ್ನು ಪ್ರಕಟಿಸುತ್ತಿದೆ. ಇದು ಸಮಾಧಾನಕರವಾದ ಮತ್ತು ಅಭಿನಂದನೀಯವಾದ ಸಂಗತಿಯಾಗಿದೆ. ಮದ್ರಾಸು ಮೊದಲಾದ ಬೇರೆ ವಿಶ್ವವಿದ್ಯಾಲಯಗಳು ಸಹ ಇದನ್ನೇ ಅನುಕರಿಸುವುದು ವಿಹಿತವಾಗಿದೆ. ಆದರೆ, ಈ ತೆರದ ಕಾರ್ಯವನ್ನು ಕೈಕೊಳ್ಳಲು ವಿಲಂಬವಿದ್ದುದಾದರೆ, ಆ ವಿಶ್ವವಿದ್ಯಾಲಯಗಳು ಧಾರವಾಡದಲ್ಲಿಯ ನವಜೀವನ ಗ್ರಂಥಮಾಲೆಯಂತಹ ಸಂಸ್ಥೆಗೆ ಸಂಪೂರ್ಣ ದ್ರವ್ಯ ಸಾಹಾಯ್ಯವನ್ನು ಕೊಟ್ಟು ಪ್ರೌಢವಾದ ಶಾಸ್ತ್ರೀಯ ಗ್ರಂಥಗಳ ನಿರ್ಮಿತಿಯ ಉಪಕ್ರಮಕ್ಕೆ ಕೈಹಚ್ಚಬೇಕು.

ಶಿಕ್ಷಣದ ದೃಷ್ಟಿಯಿಂದ ವಿಶ್ವವಿದ್ಯಾಲಯಗಳೂ, ಮಧ್ಯಮ ಶಿಕ್ಷಣದ ಸಂಸ್ಥೆಗಳೂ ಕನ್ನಡ ವಾಙ್ಮಯವನ್ನು ಈ ಮೇರೆಗೆ ಪ್ರೋತ್ಸಾಹಿಸಬೇಕೆಂದು ಹೇಳುವುದರ ತಾತ್ಪರ್ಯವು ಕನ್ನಡಿಗರ ಶ್ರೇಯಸ್ಸುಂಟಾಗಬೇಕೆಂಬುದೇ ಆಗಿದೆ. ಕಲಾ, ಶಾಸ್ತ್ರ, ವಾಙ್ಮಯ—ಇವುಗಳ ಅಭಿವೃದ್ಧಿಯು ಏಕೆ ಆಗಬೇಕು? ಈ ಪ್ರಶ್ನೆಗೆ ಮೇಲೆ ಹೇಳಿದ ಜನತೆಯ ಉತ್ಕರ್ಷವೆಂಬುದೇ ಉತ್ತರವಾಗಿದೆ. ಜನತೆಯ ಸುಖವು ವಾಙ್ಮಯ ದ್ವಾರಾ ಶಿಕ್ಷಣದ ಇಲಾಖೆಯ ಕೈಯಲ್ಲಿ ಹೇಗೆ ಇದೆಯೊ ಹಾಗೆಯೇ ವ್ಯಾವಹಾರಿಕ ದೃಷ್ಟಿಯಿಂದ ಸರಕಾರದ ಕೈಯಲ್ಲೂ ಇದೆ ಎನ್ನಬೇಕು. ಪೋಸ್ಟಾಫೀಸು, ಕೋರ್ಟು, ಕಚೇರಿ ಮೊದಲಾದವುಗಳಲ್ಲಿಯ ಬೇರೆ ಬೇರೆ ಫಾರಮ್ಸು (ನಮೂನೆ) ಗಳು ಕನ್ನಡದಲ್ಲಿ ಅಚ್ಚಾಗುತ್ತಿವೆ. ಹಾಗು, ಸಾಧಾರಣವಾಗಿ ಅಧಿಕಾರಿ ವರ್ಗ ದವರೂ ಕನ್ನಡವನ್ನಾಡಲೂ ಬರೆಯಲೂ ತಿಳಿದವರೇ ಬರುತ್ತಾರೆ. ಇದೆಲ್ಲವೂ ಒಳ್ಳೆಯದೆಂಬುದಾಗಿಯೇ ಎನ್ನಬೇಕು. ಆದರೂ, ಜಿಲ್ಲಾಧಿಕಾರಿಗಳೂ, ನ್ಯಾಯಾ ಧಿಪತಿಗಳೂ, ಹಾಗು, ಇತರ ಮೇಲು ಹುದ್ದೆಯ ಅಧಿಕಾರಿಗಳೂ ಎಷ್ಟೋ ಸಾರಿ ದೇಶಭಾಷೆಯ ಜ್ಞಾನವಿಲ್ಲದವರು ಬರುವರು. ಅವರಿಗೆ ತಮ್ಮ ಅಶಿಕ್ಷಿತ ಪ್ರಜೆ ಗಳೊಡನೆ, ಇಲ್ಲವೆ, ಇಂಗ್ಲಿಷನ್ನರಿಯದ ಜನರೊಡನೆ ಮಾತನಾಡಲೂ, ಅವರ ಸುಖ ದುಃಖಗಳನ್ನು ಕೇಳಿ ತಿಳಿದುಕೊಳ್ಳಲೂ ಪ್ರಯಾಸವಾಗುವುದು. ಆಯಾ ದೇಶೀಯ ಭಾಷೆಯ ಪರಿಚಯ ಪಡೆದು ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕೆಂಬ ಸರಕಾರಿ ಸಂಕೇತವು ಜಿಲ್ಲಾಧಿಕಾರಿ ಮುಂತಾದವರ ವಿಷಯದಲ್ಲಿ ಉಂಟೇ ಉಂಟು. ಈ ಸಂಕೇತವನ್ನು ತಪ್ಪದೆ ಆಚಾರದಲ್ಲಿ ತರಬೇಕು. ಇಷ್ಟು ಮಾತ್ರವಲ್ಲ; ಜಿಲ್ಲಾಧಿ ಕಾರಿಗಳು ಮತ್ತು ಜಿಲ್ಲಾ ನ್ಯಾಯಾಧಿಕಾರಿಗಳು ತಮ್ಮ ತೀರ್ಪುಗಳನ್ನು ಮತ್ತು ನ್ಯಾಯ ನಿರ್ಣಯಗಳನ್ನು ದೇಶಭಾಷೆಯಲ್ಲೇ ಕೊಡುವಂತೆ ಏರ್ಪಾಡಾಗುವುದು ಆಯಾ ದೇಶಭಾಷಾಭಿವೃದ್ಧಿಯ ದೃಷ್ಟಿಯಿಂದ ಅತಿ ಆವಶ್ಯಕವಾಗಿದೆ.

ಭಾಷಾಭಿವೃದ್ಧಿಯೇ ಅಲ್ಲ, ಯಾವ ಕಾರ್ಯವಾದರೂ ಸರ್ವದಾ ಇನ್ನೊಬ್ಬರ ಸಾಹಾಯ್ಯದಿಂದಲೇ ಸಾಧ್ಯವಾಗಬೇಕೆಂದು ನೆನಸುವುದು ಸರಿಯಲ್ಲ; 'ಸ್ವಾವಲಂಬನ ಹೊನ್ನು, ಪರಾವಲಂಬನ ಮಣ್ಣು'. ಆದುದರಿಂದ, ತನ್ನ ಪ್ರಯತ್ನವೇ ಮೊದಲ ನೆಯದು. ಅಂತಹ ಪ್ರಯತ್ನವನ್ನು ಕೈಕೊಂಡು, ಅವರಿವರೆಂದು ನೋಡದೆ, ಏಕ ಪ್ರಕಾರವಾಗಿ ತನ್ನ ಧ್ಯೇಯದ ಕಡೆಗೆ ಮುಂದುವರಿಯುವವನಿಗೆ ಬೇರೆಯವರ ಸಾಹಾಯ್ಯ, ದೈವ ಬಲ—ಇವೆಲ್ಲವೂ ಅನಂತರ ತಾವಾಗಿಯೇ ಒದಗುತ್ತವೆ. ಈ ದೃಷ್ಟಿ ಯಿಂದ, ಕನ್ನಡ ಸಾಹಿತ್ಯದ ಪುರೋಭಿವೃದ್ಧಿಯ ಕಾರ್ಯವನ್ನು ಸಾಹಿತ್ಯೋಪಾಸಕರು ತಾವೇ ಕೈಕೊಳ್ಳಬೇಕಾಗಿದೆ. ಸಂಶೋಧನದಿಂದ ಹಳೆಯ ಕಾವ್ಯ ಮುಂತಾದವು ಗಳನ್ನು ಪ್ರಕಟಿಸುವುದು, ತಮ್ಮ ದೀರ್ಘ ವ್ಯಾಸಂಗ ಮತ್ತು ಅನುಭವಗಳ ಬಲದಿಂದ ಸ್ವತಂತ್ರವಾದ ಗ್ರಂಥ ರಚನೆಯನ್ನು ಮಾಡುವುದು, ಇತರ ಭಾಷೆಗಳಲ್ಲಿ ಬರೆದಿರುವ ಶಾಸ್ತ್ರೀಯ, ಹಾಗು, ಉಚ್ಚ ವಿಚಾರಗಳಿಂದ ತುಂಬಿದ ಗ್ರಂಥಗಳನ್ನು ಕನ್ನಡಿಸುವುದು, ಹಿಂದಿನ ಉದ್ಗ್ರಂಥಗಳನ್ನು ಸುಲಭ ಶೈಲಿಗೆ ಇಳಿಸಿ ಸಾಮಾನ್ಯರು

ಕೂಡ ಅವುಗಳ ರಸವನ್ನು ಹೀರುವಂತೆ ಮಾಡುವುದು—ಇವೆಲ್ಲ ಹೇಗೆ ವಾಙ್ಮಯೋಪಾಸಕರ ಕರ್ತವ್ಯವಾಗಿರುವುದೊ ಹಾಗೆಯೇ ಆ ವಾಙ್ಮಯೋಪಾಸಕರಿಗೆ ದ್ರವ್ಯ ಸಾಹಾಯ್ಯವನ್ನೀಯುವುದು ಧನಿಕರ ಕರ್ತವ್ಯವಾಗಿದೆ. ಸಾಹಿತ್ಯ ಭಕ್ತರು ಸಾಹಿತ್ಯ ಕ್ಷೇತ್ರದಲ್ಲಿ ಹಗಲೂ ಇರುಳೂ ದುಡಿದು ರಚಿಸಿದ ಸಾಹಿತ್ಯ ಸಂಪತ್ತನ್ನು ಶ್ರೀಮಂತರೂ ಸುಖ ಜೀವಿಗಳೂ ಕೊಂಡುಕೊಳ್ಳದೆ ಹೋದರೆ, ಅವರಿಗೆ ಯಥಾ ಶಕ್ತಿ ಪ್ರೋತ್ಸಾಹ ವನ್ನು ಕೊಡದೆ ಹೋದರೆ, ವಾಙ್ಮಯಾಭಿವೃದ್ಧಿಯು ನಿಜವಾಗಿ ಉಂಟಾಗಲಿಕ್ಕಿಲ್ಲ. ವಾಙ್ಮಯ ಸೇವಕರನ್ನು ಹತ್ತಿರ ಕರೆದುಕೊಂಡು, ಅವರಿಂದ ಬಹುಶ್ರುತತೆಯನ್ನು ಪಡೆಯುವುದೇ ಶ್ರೀಮಂತರ ಧನದ ಸದ್ವಿನಿಯೋಗವು. ಈ ಮೇರೆಗೆ ಸರಸ್ವತೀ ಪುತ್ರರೂ, ಲಕ್ಷ್ಮೀ ಪುತ್ರರೂ ಒಟ್ಟಿಗೆ ಸೇರಿ ವಾಙ್ಮಯ ಸೇವೆಯನ್ನು ನಡೆಯಿಸಿದಲ್ಲಿ ಭಗವಂತನು, "ಪರಸ್ಪರರಿಗೆ ಉಪಕಾರ ಮಾಡಹತ್ತಿದರೆ ನೀವು ಶ್ರೇಯಸ್ಸನ್ನು ಹೊಂದುವಿರಿ" ಎಂದು ಗೀತೆಯಲ್ಲಿ ಹೇಳಿದಂತೆ, ಆಗ ಕನ್ನಡದ ವಾಙ್ಮಯವು ನಿಜವಾಗಿ ಅಭಿವೃದ್ಧಿಯನ್ನು ಹೊಂದುವುದು.

ಈ ಮೇರೆಗೆ ನನ್ನ ಹಲವು ಸೂಚನೆಗಳಿದ್ದರೂ ಮುಖ್ಯವಾಗಿ ಒಂದು ಮಾತನ್ನು ಪ್ರತಿನಿಧಿಗಳ ಅವಗಾಹನಕ್ಕೆ ತರಬೇಕೆಂದಿದ್ದೇನೆ: ಪರಿಷತ್ತಿನ ಸಮ್ಮೇಳನಗಳಲ್ಲಿ ಇದುವರೆಗೆ ಉಪಯುಕ್ತವಾದ ಅನೇಕ ಗೊತ್ತುವಳಿಗಳು ನಿರ್ಣಯಿಸಲ್ಪಟ್ಟಿವೆ. ಪರಿಷತ್ತಿನ ಪರವಾಗಿ ಹೊರಡುವ ಸಾಹಿತ್ಯ ಪರಿಷತ್ಪತ್ರಿಕೆಯ ಮುಖಾಂತರ ಪರಿಷತ್ತಿನ ಉದ್ದೇಶದ ಮತ್ತು ಆ ಗೊತ್ತುವಳಿಗಳ ಅಭಿಪ್ರಾಯದ ಪ್ರಚಾರವು ಯಥಾ ಶಕ್ತಿ ಯಾಗುತ್ತಿರುವುದಲ್ಲದೆ, ಕೆಲವು ಮಹನೀಯರನ್ನು ಕರ್ಣಾಟಕದ ಬೇರೆ ಬೇರೆ ಭಾಗ ಗಳಿಗೆ ಕಳುಹಿಸಿ ಪ್ರಚಾರ ಕಾರ್ಯವನ್ನು ಮಾಡಿಸಿದುದು ಸಹ ಪರಿಷತ್ತಿನ ಹಿಂದಿನ ಇತಿವೃತ್ತದ ಮೇಲಿಂದ ಕಂಡುಬರುತ್ತದೆ. ಆದರೂ, ಈ ಪ್ರಚಾರ ಕಾರ್ಯವು ಸಾಲದು. ಪ್ರತಿ ವರ್ಷ ಹಲವು ಗೊತ್ತುವಳಿಗಳನ್ನು ದಾಟಿಸುವುದಕ್ಕಿಂತ ಯಾವು ದಾದರೂ ಒಂದೊ ಎರಡೊ ಗೊತ್ತುವಳಿಗಳನ್ನು ತೆಗೆದುಕೊಂಡು ವರ್ಷದ ಹನ್ನೆರಡೂ ತಿಂಗಳು ಅವುಗಳ ಕೆಲಸ ನಡೆಯುವಂತೆ ಮಾಡಹತ್ತಿದರೆ ಪರಿಷತ್ತು ತನ್ನ ಉದ್ದೇಶ ವನ್ನು ಆದಷ್ಟು ಬೇಗನೆ ಕೈಗೂಡಿಸೀತೆಂದು ತೋರುತ್ತದೆ. ನನ್ನ ಈ ಮಾತಿನ ಅರ್ಥವು, ಸಮ್ಮೇಳನಗಳಲ್ಲಿ ತುಂಬ ಗೊತ್ತುವಳಿಗಳನ್ನು ದಾಟಿಸಬಾರದೆಂಬುದಾಗಿ ಅಲ್ಲ; ಸಮ್ಮೇಳನಗಳಲ್ಲಿ ಬೇರೆ ಬೇರೆ ವಿಧದ ಗೊತ್ತುವಳಿಗಳನ್ನು ತಂದು ಸಾಹಿತ್ಯ ಭಕ್ತರು ಚರ್ಚಿಸುವುದರಿಂದ ಜನತೆಗೆ ಒಂದು ಬಗೆಯ ಶಿಕ್ಷಣವನ್ನು ಕೊಟ್ಟಂ ತಾಗುತ್ತದೆ. ಇದರಿಂದ ಉಂಟಾಗತಕ್ಕ ಸುಪರಿಣಾಮವು ಯಾವುದೆಂದರೆ—ಲೋಕ ಮತವು ಸಾಹಿತ್ಯದ ಬೆಳೆವಣಿಗೆಯ ಪ್ರಶ್ನೆಯ ಕಡೆಗೆ ಅನುಕೂಲವಾಗುತ್ತದೆ. ಈ ಬಗೆಯ ಲಾಭವನ್ನು ಇಂತಹ ಗೊತ್ತುವಳಿಗಳಿಂದ ನಾವು ನಮ್ಮ ಸೆರಗಿನಲ್ಲಿ ಕಟ್ಟಿಕೊಳ್ಳಬಹುದಾದರೂ, ನಾನು ಈಗಲೇ ಹೇಳಿದಂತೆ, ಕೆಲವು ಅತ್ಯಾವಶ್ಯಕ ಮತ್ತು ಮಹತ್ತ್ವದ ಗೊತ್ತುವಳಿಗಳನ್ನು ವರ್ಷದ ಹನ್ನೆರಡೂ ತಿಂಗಳು ದುಡಿದು, ಕಾರ್ಯ ರೂಪದಲ್ಲಿ ತಂದರೆ ಅದು ಹೊನ್ನಿಗಿಂತಲೂ ಹಳದಿಯಾದೀತೆಂದು ತೋರುತ್ತದೆ; ಇರಲಿ.

ಪ್ರತಿನಿಧಿಗಳಿರಾ! ನಾನು ನನ್ನ ಭಾಷಣವನ್ನು ಇನ್ನು ಉದ್ದ ಬೆಳಿಸುವುದು ಚೆಂದವಲ್ಲ. ಕರ್ಣಾಟಕದ ಬೇರೆ ಬೇರೆ ಭಾಗಗಳಿಂದ ಕನ್ನಡ ಸಾಹಿತ್ಯ ಸಮ್ಮೇಳನದ ಮಹೋತ್ಸವಕ್ಕಾಗಿ ನಾವು ತಮ್ಮನ್ನು ಬರಮಾಡಿಕೊಂಡಿದ್ದೇವೆ. ಆದರೆ ನಾವು ಇದುವರೆಗೆ ಇಂತಹ ಕೂಟಗಳನ್ನು ಜರುಗಿಸಿ ಅನುಭವವನ್ನು ಪಡೆದವರಲ್ಲ. ರೈಲು ಬಂಡಿಯ ಸಂಚಾರವು ಇಲ್ಲಿ ಇಲ್ಲದಿರುವುದರಿಂದ, ಬೇಕಾದ ಸಾಹಿತ್ಯಗಳನ್ನು ಒದಗಿಸಿ ಕೊಳ್ಳುವ ಸೌಕರ್ಯವು ಕಡಿಮೆ. ನಮ್ಮ ದೇಶವು ಅಷ್ಟೊಂದು ಸಮೃದ್ಧವಾದುದೂ ಅಲ್ಲ. ಈ ಎಲ್ಲ ಕಾರಣಗಳಿಂದ, ನಮ್ಮ ಆತಿಥ್ಯೋಪಚಾರಗಳಲ್ಲಿ ಅನೇಕ ಕುಂದು ಕೊರತೆಗಳು ಇದ್ದೇ ಇವೆ. ಈ ಉಪಚಾರಗಳಲ್ಲಿರುವಂತೆಯೇ ನಮ್ಮ ಸ್ವಾಗತ ಮಂಡಲದ ನಿಬಂಧ ವಾಚನ, ಉಪನ್ಯಾಸ, ನಾಟಕ, ಪ್ರಹಸನ, ಸ್ಮಾರಕ ಪುಸ್ತಕ ಪ್ರಕಾಶನ—ಇತ್ಯಾದಿ ಇತ್ಯಾದಿ ಸಾಹಿತ್ಯ ಪ್ರದರ್ಶನದಲ್ಲಿಯೂ ಕೊರತೆಗಳು ತುಂಬ ಇದ್ದೇ ಇವೆ. ಈ ಸಂಗತಿಗಳನ್ನೆಲ್ಲ ಮನಸ್ಸಿಗೆ ತರುವಾಗ ತಮ್ಮಂತಹ ಪ್ರಬುದ್ಧ ಸಾಹಿತ್ಯೋಪಾಸಕರನ್ನು ದೂರ ದೂರದಿಂದ ಕರೆಯಿಸಿ ಊಟ ಉಪಚಾರಗಳಿಂದಾಗಲಿ, ಮನೋ ವಿನೋದಗಳಿಂದಾಗಲಿ ಯೋಗ್ಯವಾಗಿ ಸತ್ಕರಿಸಲು ತಮ್ಮಿಂದ ಆಗಲಿಲ್ಲವಲ್ಲವೆ ಎಂಬುದೊಂದು ಯೋಚನೆಯು ಸ್ವಾಗತ ಮಂಡಲದವರಿಗೆ ಹುಟ್ಟದೆ ಇರುವುದಿಲ್ಲ. ಸವಿಯಾದ ಊಟ ಉಪಚಾರಗಳನ್ನು ಕೊಡಲು ಆಗದೆ ಇದ್ದರೂ, ಕಟ್ಟಕಡೆಗೆ, "ತೃಣಾನಿ ಭೂಮಿರುದಕಂ ವಾಕ್ ಚತುರ್ಥೀ ಚ ಸೂನೃತಾ" ಎಂದು ಹೇಳಿದಂತೆ, ರಸ ಭರಿತವಾದ ಒಂದು ಸವಿ ನುಡಿಯನ್ನಾದರೂ ಆಡೋಣವೆಂದರೆ, ನಾವು ಅಷ್ಟೊಂದು ವಿದಗ್ಧರೂ ಅಲ್ಲ. ಸಾರಾಂಶ, ನಾನು ನನ್ನ ಭಾಷಣದ ಪ್ರಾರಂಭದಲ್ಲಿ ಹೇಳಿದಂತೆ, ನಮ್ಮ ಆತಿಥ್ಯೋಪಚಾರಗಳೆಂದರೆ ಇನ್ನೊಂದರ್ಥದಲ್ಲಿ ಅದು ಬರೆ ಉಪಚಾರದ ಮಾತೇ ಸರಿ. ಈ ರೀತಿಯ ಪರಿಸ್ಥಿತಿಯಿದ್ದರೂ ಸಮಾಧಾನ ಪಡತಕ್ಕ ನಮಗೊಂದು ಸಂಗತಿ ಇದೆ: ಮೊದಲೇ ತಾವು ಉನ್ನತ ಮನಸ್ಕರು; ಅದರಲ್ಲೂ ಇಲ್ಲಿಯ ಮೇಲಿನ ಪ್ರದೇಶಕ್ಕೆ ಬರುವಾಗ ತಮ್ಮ ದೃಷ್ಟಿ ಇನ್ನಷ್ಟು ಉನ್ನತವಾಗಿಯೇ ಇದೆ. ಆದುದರಿಂದ, ನಾವು ಪ್ರೇಮ ಪೂರ್ವಕವಾಗಿ ಕೊಡುವ ಸ್ವಾಗತವನ್ನು ಉನ್ನತ ಮನಸ್ಸಿನಿಂದಲೂ ಉನ್ನತ ದೃಷ್ಟಿಯಿಂದಲೂ ಸ್ವೀಕರಿಸಿ, ನಮ್ಮಲ್ಲಿ ತಾವು ಪ್ರೇಮವನ್ನು ವೃದ್ಧಿಗೊಳಿಸಬೇಕೆಂದು ಕೇಳಿಕೊಂಡರೆ ಅದು ತಪ್ಪಾಗಲಾರದು. ಏಕೆಂದರೆ, ಪ್ರೇಮವು ಪ್ರೇಮವನ್ನು ಬೆಳಿಸುತ್ತದೆ. ಬೇರೆ ಯಾವುದರ ನ್ಯೂನತೆಯಿದ್ದರೂ ತಮ್ಮ ಬಂಧುಗಳಾದ ನಮ್ಮಲ್ಲಿ ಕನ್ನಡ ನಾಡಿನ ವಿಷಯವಾಗಿಯೂ ಕನ್ನಡಿಗರ ವಿಷಯವಾಗಿಯೂ ನಿರ್ವ್ಯಾಜವಾದ ಪ್ರೇಮವು ತುಂಬಿಕೊಂಡಿದೆಯೆಂದು ತಾವು ತಿಳಿದುಕೊಳ್ಳಬಹುದೆಂದು ನಾನು ವಿನಯ ಪೂರ್ವಕವಾಗಿ ಹೇಳುವೆನು. ನಮ್ಮಲ್ಲಿ ಯಾವ ಸಿದ್ಧತೆ ಇರುವುದಿಲ್ಲವಾದರೂ ತಮ್ಮನ್ನು ಇಲ್ಲಿಗೆ ಬರಮಾಡಿಕೊಳ್ಳಲು ನಮಗೆ ಪ್ರೇರಕವೂ ಪ್ರೋತ್ಸಾಹಕವೂ ಒಂದೇ: ಅದು ಕನ್ನಡಿಗರ ಮೇಲಿರುವ ನಮ್ಮ ಪ್ರೇಮವೇ ಸರಿ. ಆದುದರಿಂದ, ನಾವು ಕೊಡುವ ಊಟದಲ್ಲಿ ಷಡ್ರಸಗಳಿಲ್ಲವಾದರೂ ಪ್ರೇಮ ರಸವಿದೆ; ನಾವು ಪ್ರದರ್ಶಿಸುವ ಸಾಹಿತ್ಯದಲ್ಲಿ ನವ ರಸಗಳಿಲ್ಲವಾದರೂ ಪ್ರೇಮ ರಸವಿದೆ. ಆ

ಪ್ರೇಮವು ಅಮೂರ್ತವಾದರೂ ತಮ್ಮ ಪ್ರೇಮದ ಕಣ್ಣಿಗೆ ಅದು ಕಾಣಿಸಬಹುದು; ಆ ಪ್ರೇಮವು ಅಶಬ್ದವಾದರೂ ಅದರ ಇಂಪಾದ ಹಾಡು ತಮ್ಮ ಪ್ರೇಮದ ಕಿವಿಗೆ ಕೇಳಿಸಬಹುದು. ಇಷ್ಟುಮಾತ್ರವೇ ಅಲ್ಲ, ಕನ್ನಡಿಗರ ವಿಷಯದಲ್ಲಿರುವ ನಮ್ಮ ಪ್ರೇಮದ ರಸವನ್ನೂ ಪ್ರೇಮದ ಸೌಗಂಧ್ಯವನ್ನೂ ಪ್ರೇಮದ ಸುಖಸ್ಪರ್ಶವನ್ನೂ ತಾವು ತಮ್ಮ ಪ್ರೇಮದ ರಸನೇಂದ್ರಿಯದಿಂದಲೂ ಪ್ರೇಮದ ಘ್ರಾಣೇಂದ್ರಿಯ ದಿಂದಲೂ ಪ್ರೇಮದ ಸ್ಪರ್ಶೇಂದ್ರಿಯದಿಂದಲೂ ಅನುಭವಿಸಬಹುದು. ಕೊನೆಗೆ, ಕನ್ನಡ ಸಾಹಿತ್ಯಾಭಿಮಾನಿಗಳಾದ ಸ್ತ್ರೀ ಪುರುಷ ಪ್ರತಿನಿಧಿಗಳಿರಾ! ನಮ್ಮಲ್ಲಿಯೂ ನಮ್ಮ ದೇಶದಲ್ಲಿಯೂ ಆತ್ಮೀಯತ್ವಾಭಿಮಾನವನ್ನಿಟ್ಟು ನಮ್ಮ ಆಹ್ವಾನವನ್ನು ಸ್ವೀಕರಿಸಿ ಇಲ್ಲಿಗೆ ದಯಮಾಡಿಸಿರುವ ತಮ್ಮಗಳಿಗೆ ನಾನು ನಮ್ಮ ಈ ಸ್ವಾಗತ ಮಂಡಲದ ಪರವಾಗಿ ಸ್ವಾಗತ ವಚನವನ್ನಿತ್ತು ಇನ್ನು ಮುಂದಿನ ಕಾರ್ಯವನ್ನು ನಡೆಯಿಸಲು ಸೂಚಿಸಿ ನನ್ನ ಸ್ಥಾನವನ್ನು ಅಂಗೀಕರಿಸುವೆನು.

---

## ಸಮ್ಮೇಳನದ ಅಧ್ಯಕ್ಷರ ಆರಂಭ ಭಾಷಣ

---

### ಕೆಲವು ಸಾಹಿತ್ಯ ಸಮಸ್ಯೆಗಳು

ಮಹಾಶಯರೆ! ಇಂಥಾ ಸಭೆಯಲ್ಲಿ ಅಧ್ಯಕ್ಷಸ್ಥಾನಕ್ಕೆ ಬಂದವರು ಕೃತಜ್ಞತೆ ಯನ್ನೂ ನಮ್ರತೆಯನ್ನೂ ವಿಜ್ಞಾಪಿಸಿಕೊಳ್ಳುವುದು ಪ್ರಸಿದ್ಧವಾದ ಸಂಪ್ರದಾಯ. ಆದರೆ ನಾನು ಈಗ ಆ ರೀತಿಯಲ್ಲಿ ಮಾತನಾಡುವುದು ಸಂಪ್ರದಾಯಕ್ಕೆ ವಿಧೇಯ ನಾಗಿ ಅಲ್ಲ. ವಾಸ್ತವವಾಗಿ ಸಾಹಿತ್ಯಕ್ಷೇತ್ರದಲ್ಲಿ ನಾನೊಬ್ಬ ಆಗಂತುಕ. ಅದರಲ್ಲಿ ನಾನು ಸಂತತವಾಗಿ ಪರಿಶ್ರಮಿಸಿದವನಲ್ಲ. ಇಲ್ಲಿ ಕೃತಕೃತ್ಯನಾಗಲು ಬೇಕಾದ ಪ್ರತಿಭೆಯಾಗಲಿ ಪಾಂಡಿತ್ಯವಾಗಲಿ ನನ್ನಲ್ಲಿಲ್ಲ; ಅದಕ್ಕೆ ಬೇಕಾದ ದೀಕ್ಷೆಯೂ ಚಿತ್ತೈಕಾಗ್ರತೆಯೂ ಸಹ ನನ್ನವಲ್ಲ. ಒಂದು ಕ್ಷಣದ ಬರಿಯ ಉತ್ಸಾಹ, ಒಂದು ಕ್ಷಣದ ಆತ್ಮಯೋಗ್ಯತಾ ಭ್ರಾಂತಿ—ಇವು ಈಗಾಗ ನನ್ನನ್ನು ಈ ನಿಸರ್ಗ ಮೋಹಕ ವಾದ ಕ್ಷೇತ್ರಕ್ಕೆ ಸೆಳೆದು ಇಲ್ಲಿ ಸುಳಿದಾಡಿಸಿರುವುದು ದಿಟ. ನನ್ನ ಮಿತ್ರರ ಪ್ರೀತಿ ಗಾದರೋ ಇದೇ ಚಳವಳಕ್ಕೊಂದು ನೆವವಾಯಿತು.

> ಪರಗುಣ ಶೀಕರಮುದಧಿಂ ಕೃತ್ವಾ ತತ್ರೈವ ಖೇಲದ್ಭ್ಯಃ ।
> ಅಜ್ಞಾತ ಮತ್ಸರೇಭ್ಯಃ ತೇಭ್ಯಃ ಸದ್ಭ್ಯೋ ನಮೋಸ್ತು ವಿದ್ವದ್ಭ್ಯಃ ॥

[ಅಸೂಯೆಯನ್ನರಿಯದ ವಿದ್ವಾಂಸರವರು; ಇತರರ ಗುಣದ ಒಂದು ಹನಿ ಯನ್ನು ಒಂದು ಸಮುದ್ರವನ್ನಾಗಿ ಮಾಡಿ ಅದರಲ್ಲಿ ಓಲಾಡುವ ಸಜ್ಜನರವರು; ಅವರಿಗೆ ನಮಸ್ಕಾರ.]

ಇಂಥವರು ನನ್ನನ್ನು ಈ ಹಸೆಗೆ ಕರೆತಂದಿರುವವರು. ನನಗೆ ಪೂಜ್ಯರೂ ನಮ್ಮ ನಾಡಿಗೆ ಮಾನ್ಯರೂ ಆದ ಅವರ ಮಾತಿಗೆ ತಲೆಬಾಗಿ ಇಲ್ಲಿ ನಿಂತಿದ್ದೇನೆ. ತಾವೂ ಅವರಂತೆ ಅಭಿಮಾನ ತೋರಿಸಲು ಸಮ್ಮತಿಸಿದ ಹೊರತು ನನಗೆ ಕೃತಕಾರ್ಯ ನೆಂದೆನ್ನಿಸಿಕೊಳ್ಳುವ ಆಶೆಯಿರದು.

ಈ ಅಧ್ಯಕ್ಷ ಪದವಿಯ ಕರ್ತವ್ಯ ಭಾರಗಳಲ್ಲಿ ಹೆಚ್ಚಿನದು ಉಪನ್ಯಾಸ ರಚನೆ ಯದು. ಹಿಂದೆ ಈ ಪದವಿಯಲ್ಲಿದ್ದವರ ಮುಖದಿಂದ ಬಂದುದು ಅಧಿಕಾರೋಚಿತ ವಾದ ವಾಣಿ. ಅವರ ಉಪನ್ಯಾಸದ ಪ್ರೌಢಿಮೆಯನ್ನು ತಾವು ನೆನಪಿನಲ್ಲಿಟ್ಟುಕೊಂಡು ನನ್ನ ಮಾತುಗಳನ್ನು ವಿಮರ್ಶೆಗೊಳಪಡಿಸುವುದಾದರೆ ನನಗೆ ಕಷ್ಟ ತಪ್ಪದು. ನನ್ನ ಸ್ವಲ್ಪ ಶಕ್ತಿಗೆ ಸಾಧ್ಯವಿರುವ ಮಟ್ಟಿಗಾದರೂ ಚೆನ್ನಾಗಿ ಒಂದು ಉಪನ್ಯಾಸವನ್ನು ಬರೆಯಬೇಕೆಂದರೆ ಕಾಲ ಸಾಲದೆಹೋಯಿತು. ದ್ರೌಪದಿಯ ತಪ್ಪಲೆಯಲ್ಲಿದ್ದ ಅಗುಳು ಕೃಷ್ಣನ ಕರುಣೆಯಿಂದ ಸಮೃದ್ಧವಾದಂತೆ, ನನ್ನ ಮಾತು ತಮ್ಮ ವಿಶ್ವಾಸ ದಿಂದ ಗುಣಶಾಲಿಯಾಗಿ, ನನಗೆ ಮಾನ ಉಳಿಯಬೇಕಾಗಿದೆ.

## ಕನ್ನಡ ಬದುಕಬೇಕಾದುದು

ಕನ್ನಡ ಜನದ ಪುರಾತನತೆಯನ್ನೂ ಕಾರ್ಯದಕ್ಷತೆಯನ್ನೂ ಕಲಾ ಕುಶಲತೆ ಯನ್ನೂ, ಕನ್ನಡ ಸಾಹಿತ್ಯದ ವಿಸ್ತಾರವನ್ನೂ ವಿವಿಧತೆಯನ್ನೂ ಹಿಂದಿನ ಅಧ್ಯಕ್ಷೋಪ ನ್ಯಾಸಗಳು ವರ್ಣಿಸಿವೆ. ಕರ್ಣಾಟಕಕ್ಕೊಂದು ಚರಿತ್ರೆಯಿದೆ. ಅದರಲ್ಲಿ ರಾಜ್ಯ ಸ್ಥಾಪಕರು, ರಾಜ್ಯ ನಿರ್ವಾಹಕರು, ಶೂರರು, ಸಾಹಸಿಗಳು, ತತ್ತ್ವಜ್ಞಾನಿಗಳು, ಶಾಸ್ತ್ರವೇತ್ತರು, ಸಮಾಜ ಸಂಸ್ಕರ್ತರು, ವಾಸ್ತು ತಟಾಕ ಶಿಲ್ಪಿಗಳು, ತಕ್ಷಕರು, ಚಿತ್ರಕಾರರು, ಗಾಯಕರು, ಕವಿಗಳು—ಎಲ್ಲರೂ ಸೇರಿ ಆ ಚರಿತ್ರೆಯನ್ನು ಭರತ ಖಂಡದ ಚರಿತ್ರೆಯಲ್ಲಿ ಒಂದು ಉಜ್ಜ್ವಲ ಪ್ರಕರಣವೆನ್ನಿಸಿದ್ದಾರೆ. ನಮ್ಮ ಸಾಹಿತ್ಯದ ಕಾವೇರಿಯು ಸಾವಿರ ವರ್ಷಗಳ ಹಿಂದಣಿಂದ ಅವಿಚ್ಛಿನ್ನವಾಗಿ ತೆರೆ ತೆರೆಯಾಗಿ ಪ್ರವಹಿಸುತ್ತ ಬಂದಿರುವುದು ಈಗ ನಮ್ಮ ಕಣ್ಣಿಗೆ ಕಾಣಿಸುತ್ತಿದೆ. ಈ ಪ್ರವಾಹಕ್ಕೆ ನಾನಾ ದಿಕ್ಕುಗಳಿಂದಲೂ ಹೊಳೆ ತೊರೆಗಳು ಕಾಣಿಕೆಯನ್ನು ತಂದು ಸಲ್ಲಿಸಿವೆ. ಶ್ರೀಮಾನ್ ನರಸಿಂಹಾಚಾರ್ಯರವರ ವಿದ್ವತ್ಪರಿಶ್ರಮದಿಂದ ನಮಗೆ ಪರಿಚಿತ ರಾಗಿರುವ ಸುಮಾರು ೧,೨೦೦ ಮಂದಿ ಕನ್ನಡ ಗ್ರಂಥಕರ್ತರಲ್ಲಿ ಈ ನಾಡಿನ ಎಲ್ಲ ಮತಗಳವರೂ, ಎಲ್ಲ ಕುಲಗಳವರೂ, ಎಲ್ಲ ತರಗತಿಗಳವರೂ ಪ್ರಾತಿನಿಧ್ಯವನ್ನು ಪಡೆದಿದ್ದಾರೆ. ದೊರೆಗಳು, ದಂಡನಾಯಕರು, ಪಂಡಿತರು, ಕೈ ಕಸಬಿನವರು, ವಿರಕ್ತರು, ಹೆಂಗಸರು—ಎಲ್ಲರೂ ಅವರವರ ಕಾಲಕ್ಕೆ ತಕ್ಕಂತೆ, ಅವರವರ ಸುತ್ತ ಮುತ್ತಲಿನ ಸ್ಥಿತಿಗೆ ಬೇಕಾದಂತೆ, ತಮ್ಮಲ್ಲಿದ್ದ ಅರಿವನ್ನೂ ಆನಂದವನ್ನೂ ಇತರರಿಗೆ ಕೊಡಲು ದುಡಿದಿದ್ದಾರೆ.

ಈ ಸಾಹಿತ್ಯ ಧಾರೆಯ ಆಯತಿಯನ್ನೂ ನಿರಂತರತೆಯನ್ನೂ ನಾವು ಜ್ಞಾಪಕ ದಲ್ಲಿಟ್ಟುಕೊಳ್ಳಬೇಕಾದುದು ನಮ್ಮ ಭಾಷೆಯ ಸಜೀವತ್ವವನ್ನು ಮುಂದಟ್ಟು ಮಾಡಿ

ಕೊಳ್ಳುವುದಕ್ಕಾಗಿ. ಯಾವ ಭಾಷೆಯ ಗ್ರಂಥರಾಶಿ ಇಷ್ಟು ವಿಪುಲವಾಗಿರುವುದೋ ಅದು ಸಾಯಬೇಕಾದುದಲ್ಲ. ಯಾವ ಜನದ ಜ್ಞಾನಿಗಳೂ, ವಿದ್ವಾಂಸರೂ, ವೀರ್ಯವಂತರೂ, ಪ್ರತಿಭಾವಂತರೂ, ಜಾಣ್ಮೆ ನಲ್ಮೆಗಳನ್ನು ಬಿತ್ತರಿಸಲು ಈ ಬಗೆಯಾಗಿ ಎಡೆಬಿಡದೆ ಪ್ರಯಾಸಪಟ್ಟಿರುವರೋ ಅವರ ನುಡಿ ಸಾಯತಕ್ಕುದಲ್ಲ. ಈ ಸಂಗತಿಯನ್ನು ಕನ್ನಡಿಗರೂ, ಅವರ ಪಕ್ಷದವರೂ, ಅವರ ಪ್ರತಿಪಕ್ಷದವರೂ ಕೂಡ, ನೆನಪಿನಲ್ಲಿಡುವುದು ಆವಶ್ಯಕ. ಏಕೆಂದರೆ, ನಮ್ಮ ದೇಶದಲ್ಲಿ ಇದು ಭಾಷೆಗಳ ಹೋರಾಟದ ಕಾಲ. ಒಂದು ಕಡೆ, ಸಂಸ್ಕೃತ ಆರ್ಷೇಯ ಭಾಷೆ, ದೇವ ಭಾಷೆ, ಅದರ ಮುಂದೆ ಕನ್ನಡವೇತರದು ?—ಎಂದು ಕೇಳುವವರು ; ಇನ್ನೊಂದು ಕಡೆ, ಇಂಗ್ಲೀಷು ನಾಗರಿಕತೆಯ ಭಾಷೆ, ಸ್ವಾತಂತ್ರ್ಯದ ಭಾಷೆ, ವಿಜ್ಞಾನದ ಭಾಷೆ, ಮುಪ್ಪಾಗ ಪಾಲು ಪ್ರಪಂಚದ ಭಾಷೆ, ಇದರ ಪಕ್ಕದಲ್ಲಿ ಕನ್ನಡ ಹೇಗೆ ನಿಂತೀತು ?—ಎಂದು ಕೇಳುವವರು ; ಮತ್ತೊಂದು ಕಡೆ, ಹಿಂದೀ ನಮಗೆ ಜಾನಪದ ಭಾಷೆ, ಭರತಖಂಡವನ್ನೊಂದಾಗಿಸುವ ಭಾಷೆ, ಜೋರುಳ್ಳ ಭಾಷೆ, ಅದರೆದುರಿಗೆ ಕನ್ನಡವೇಕೆ ?—ಎಂದು ಕೇಳುವವರು ; ಹೀಗೆ ಕನ್ನಡ ಹೋದರೆ ಹೋಗಲಿ, ಅಥವಾ ಇರಲೇಬೇಕೆಂದರೆ ಶ್ರೀಮಂತರ ಮನೆಯ ಬಡ ಬಳಗದಂತೆ ಮೂಲೆಯಲ್ಲಿದ್ದುಕೊಂಡಿರಲಿ ಎಂದು ವಾದಿಸುವವರು ಈಗ ಪ್ರಬಲ ಸ್ಥಾನಗಳಲ್ಲಿದ್ದಾರೆ. ಅವರಿಗೆ ನಾವು ಹೇಳಬೇಕಾದುದಿಷ್ಟೇ: ಇದುವರೆಗೆ ನಿಮ್ಮ ಭಾಷೆಗಳು ದೊಡ್ಡವಾಗಿರುವುದು ನಿಜ; ಆದರೆ ಇನ್ನು ಮುಂದಕ್ಕೆ ನಮ್ಮ ಭಾಷೆಯನ್ನೂ ದೊಡ್ಡದನ್ನಾಗಿಸಬೇಕೆಂದಿದ್ದೇವೆ. ನೀವು ನಮಗೆ ಉಪಕಾರಿಗಳು, ನಿಜ; ಆದರೆ ಈಗ ನಾವು ನಮ್ಮ ಬೆಂಬಲದಿಂದಲೇ ನಿಂತು ನಿಮ್ಮ ಸಹಾಯವನ್ನು ಸಾರ್ಥಕಗೊಳಿಸಬೇಕೆಂದಿದ್ದೇವೆ. ಉಪಕೃತನು ಸ್ವಾವಲಂಬಿಯಾದಾಗಲೇ ಅಲ್ಲವೆ ಉಪಕಾರಿಯ ಯಶಸ್ಸು ಪರಿಪೂರ್ಣತೆಗೆ ಬರುವುದು ?

## ಸಂಸ್ಕೃತವು ಹೊರೆಯಾಗಬಾರದು

ಕೆಲ ಮಂದಿ ಮಹನೀಯರು ಕನ್ನಡಕ್ಕೂ ಸಂಸ್ಕೃತಕ್ಕೂ ಪೋಟಾಪೋಟಿ ಕಟ್ಟಿಸಿ, ಕನ್ನಡದ ಕಡೆಯವರು ಸಂಸ್ಕೃತ ವಿರೋಧಿಗಳೆಂದೂ, ತಾವೇ ಸಂಸ್ಕೃತ ಸಂರಕ್ಷಕರೆಂದೂ ಭ್ರಾಂತಿಯನ್ನುಂಟುಮಾಡಲು ಪ್ರಯತ್ನಿಸುತ್ತಿರುವುದನ್ನು ನನ್ನಂತೆಯೇ ತಾವೂ ಆಶ್ಚರ್ಯ ವಿಷಾದಗಳೊಡನೆ ನೋಡಿರಬಹುದು. ಅಂಥವರಿಗೆ ಪ್ರತ್ಯುತ್ತರವಾಗಿ ಒಂದು ಮಾತು ಹೇಳಬೇಕಾಗಿದೆ: ಸಂಸ್ಕೃತವು ಪ್ರಾಚೀನತಮವೂ ಪೂಜ್ಯತಮವೂ ಆದ ಭಾಷೆಯೆಂಬುದನ್ನು ಎಲ್ಲರೂ ಒಪ್ಪುತ್ತಾರೆ. ಅದರ ಉಪಕಾರವು ನಮಗೆ ಇನ್ನುಮುಂದೆಯೂ ಬೇಕಾಗಿದೆ. ಆದರೆ ಆ ಭಾಷೆಯ ಬೆಲೆಗೂ ಒಂದು ಮಿತಿಯುಂಟೆಂಬುದನ್ನು ಮಾತ್ರ ಮರೆಯಲಾಗದು. ಅದು ಕೃತಕೃತ್ಯತೆಯನ್ನು ಪಡೆದಿರುವ ಭಾಷೆ.

**ಧನ್ಯೋಽಹಂ ಧನ್ಯೋಽಹಂ ಕರ್ತವ್ಯಂ ಮೇ ನ ವಿದ್ಯತೇ ಕಿಂಚಿತ್ ।**
**ಧನ್ಯೋಽಹಂ ಧನ್ಯೋಽಹಂ ಪ್ರಾಪ್ತವ್ಯಂ ಸರ್ವಮದ್ಯ ಸಂಪನ್ನಂ ॥**

"ಮಾಡಬೇಕಾದುದನ್ನು ಮಾಡಿದ್ದಾಯಿತು; ಪಡೆಯಬೇಕಾದುದನ್ನು ಪಡೆದದ್ದಾಯಿತು; ಇನ್ನೇನುಳಿದಿದೆ?"—ಎಂಬುದು ಅದರ ಸ್ಥಿತಿ. ಅದು ತಿಳಿಸಬೇಕಾದುದನ್ನು ತಿಳಿಸಿ ಮುಗಿಸಿದೆ. ಇನ್ನುಮೇಲೆ ಹೊಸದಾಗಿ ಅದು ಏನನ್ನೂ ತಿಳಿಸುವಂತಿಲ್ಲ. ಅದು ಪುನಃ ಸಾಮಾನ್ಯ ಜನದ ದಿನಚರಿಯ ಭಾಷೆಯಾಗಿ, ಹೊಸ ಹೊಸ ಶಾಸ್ತ್ರಗಳು ಅದರಲ್ಲಿ ಹುಟ್ಟುವ ಕಾಲವು ಮತ್ತೊಮ್ಮೆ ಬರುವುದಾದರೆ, ಅದನ್ನು ಯಾರೂ ಬೇಡವೆನ್ನುವುದಿಲ್ಲ. ಸದ್ಯಕ್ಕೆ ಅಂಥಾ ಕಾಲದ ಸೂಚನೆಗಳೆಲ್ಲಿಯೂ ಕಾಣಬರುತ್ತಿಲ್ಲ. ಅಂಥಾ ಕಾಲವನ್ನುಂಟಾಗಿಸಬೇಕೆಂಬ ಪ್ರಯತ್ನವು ಕಾಲ ಚಕ್ರವನ್ನು ಹಿಂದಕ್ಕೆ ತಿರುಗಿಸುವ ಪ್ರಯತ್ನದಂತೆ—ಗಂಗಾ ಪ್ರವಾಹವನ್ನು ಬೇರೊಂದು ಮಾರ್ಗದಲ್ಲಿ ಹರಿಯಿಸಬೇಕೆಂಬ ಪ್ರಯತ್ನದಂತೆ—ವಿಪರೀತ ಸಾಹಸವಾಗಿ ಕಾಣುತ್ತದೆ. ಸಂಸ್ಕೃತವೊಂದೇ ಸರ್ವ ಕಾಲವೂ ಜಗತ್ತಿನಲ್ಲಿ ನಿಲ್ಲಬೇಕೆಂಬುದು ಸೃಷ್ಟಿಯ ಉದ್ದೇಶವಾಗಿದ್ದಿದ್ದರೆ ಇತರ ಭಾಷೆಗಳು ಹುಟ್ಟಬೇಕಾಗಿಯೇ ಇರಲಿಲ್ಲ. ಭಟ್ಟಾಕಲಂಕನು ಕನ್ನಡವೂ ಭಗವದ್ವಾಣಿಯ ಒಂದು ಅವತಾರವೇ ಎಂದು ಎಲ್ಲರೂ ಒಪ್ಪುವಂತೆ ಸಿದ್ಧಾಂತ ಮಾಡಿದ್ದಾನೆ:

> ಭಗವದ್ಭಾಷಾಪಿ ಸ್ವೋತ್ಪತ್ತಿ ಸಮಯೇ ಸಮುದ್ರಘೋಷವತ್
> ಅವ್ಯಕ್ತೈಕ ಭಾಷಾ ರೂಪಾಪಿ ತತ್ತಚ್ಛ್ರೋತೃ ಶ್ರೋತ್ರದೇಶಂ
> ಪ್ರಾಪ್ತಾಸತೀ ತತ್ತದ್ಭಾಷಾತ್ಮನಾ ಪರಿಣಮತಿ ವಿಚಿತ್ರ ಶಕ್ತಿತ್ವಾತ್ ।
>
> * * * *
>
> ದೇವಾ ದೈವೀಂ ನರಾ ನಾರೀಂ ಶಬರಾಶ್ಚಾಪಿ ಶಾಬರೀಂ ।
> ತಿರ್ಯಂಚೋಪಿ ಚ ತೈರಶ್ಚೀಂ ಮೇನಿರೇ ಭಗವದ್ಗಿರಂ ॥

"ಆಕಾಶದಿಂದ ಬೀಳುವ ನೀರಿನ ತೊಟ್ಟು ಒಂದು ಚಿಪ್ಪಿನಲ್ಲಿ ಬಿದ್ದು ಮುತ್ತಾಗುತ್ತದೆ, ಒಂದು ಗಿಡದಲ್ಲಿ ಬಿದ್ದು ಕರ್ಪೂರವಾಗುತ್ತದೆ; ಒಂದು ನೆಲದ ಮೇಲೆ ಬಿದ್ದು ಉಪ್ಪಾಗುತ್ತದೆ, ಇನ್ನೊಂದು ನೆಲದ ಮೇಲೆ ಬಿದ್ದು ಸಿಹಿಯಾಗುತ್ತದೆ. ಮಳೆ ಒಂದೇ ಆದರೂ ಪಾತ್ರ ಗುಣ ಭೇದದಿಂದ ಆ ನೀರಿನ ಉಪಯುಕ್ತ ರೂಪಗಳು ಬೇರೆ ಬೇರೆಯಾಗುತ್ತವೆ. ಹಾಗೆಯೇ, ಸೃಷ್ಟಿ ಸಮಯದಲ್ಲಿ ಸಮುದ್ರ ಗರ್ಜನೆಯಂತೆ ಹೊರಟ ಏಕಾಕಾರವಾದ ನಾದವು ಅದನ್ನು ಕೇಳಿದ ನಾನಾ ಪ್ರಾಣಿಗಳ ನಾನಾ ಸ್ವರೂಪಗಳಿಗನುಸಾರವಾಗಿ ಅವರ ಬಾಯಿಗಳಿಂದ ನಾನಾ ರೂಪಗಳಲ್ಲಿ ಪ್ರಚಾರಗೊಂಡಿತು. ಒಂದೇ ದೇವ ವಾಕ್ಕನ್ನು ದೇವತೆಗಳು ದೇವ ಭಾಷೆಯಾಗಿಯೂ, ಮನುಷ್ಯರು ಮಾನುಷ ಭಾಷೆಯಾಗಿಯೂ, ಕಾಡು ಜನರು ಕಾಡು ಭಾಷೆಯಾಗಿಯೂ, ಮೃಗಗಳು ಮೃಗ ಭಾಷೆಯಾಗಿಯೂ ತೆಗೆದುಕೊಂಡರು." ಈ ಅರ್ಥವನ್ನೇ ವೇದದ "ದೇವೀಂವಾಚಮಜನಯನ್ತ", "ಗೌರೀಮಿಮಾಯ" ಮೊದಲಾದ ವಾಕ್ಯಗಳು ಸಮರ್ಥಿಸುತ್ತವೆ.

ಹೀಗೆ, ಕನ್ನಡದಲ್ಲಿಯೂ ದೇವಾಂಶವು ಇತರ ಭಾಷೆಗಳಲ್ಲಿರುವಷ್ಟರ ಮಟ್ಟಿಗಾದರೂ ಇರಬೇಕೆಂದು ಸಾಧಿಸುವುದು ನ್ಯಾಯವಾಗಿದೆ. ಸಂಸ್ಕೃತವು ಆ

ಮೂಲವಾಣಿಯು ಹಿರಿಯ ಮಗನಾಗಿರಬಹುದು; ಕನ್ನಡವು ಕಿರಿಯವನಿರಬಹುದು. ಹಿರಿಯನು ಈಗ ಸಿದ್ಧ ಪುರುಷನಾಗಿದ್ದಾನೆ; ಕಿರಿಯನು ಇನ್ನೂ ಸಾಧಕನಾಗಿದ್ದಾನೆ. ನಮ್ಮ ಮೈಯ ಮೂಳೆಗಳು ಚಿಕ್ಕಂದಿನಿಂದ ಬೆಳೆದು ಪರಿಪುಷ್ಟವಾಗುತ್ತಬಂದು, ಅಪರ ವಯಸ್ಸಿನಲ್ಲಿ ಬೆಳವಳಿಗೆಯನ್ನು ಸಾಕುಮಾಡಿಕೊಳ್ಳುತ್ತವೆಯೆಂದು ಶರೀರ ಶಾಸ್ತ್ರಜ್ಞರು ಹೇಳುವರಂತೆ. ಸಂಸ್ಕೃತದ ಬೆಳವಳಿಗೆ ಹಾಗೆ ನಿಂತುಹೋಗಿದೆ. ಅದರಲ್ಲಿರುವ ಜ್ಞಾನ ರತ್ನಗಳು ಅಮೂಲ್ಯವಾದುವು; ಆದರೆ ನಮ್ಮ ಈಗಿನ ಜೀವನಕ್ಕೆ ಅಷ್ಟು ಮಾತ್ರವೇ ಸಾಲದು. ಮಾನವನ ಅನುಭವಗಳಿಗೂ ಮನೋಭಾವ ಗಳಿಗೂ ಸಂಸ್ಕೃತ ಕಾವ್ಯಗಳೇನೂ ಕೊನೆ ಮುಟ್ಟಿಸಿಲ್ಲ; ಪ್ರಕೃತ ಕಾಲದ ಜೀವನೋಪಕರಣಗಳನ್ನೂ ಸನ್ನಿವೇಶಗಳನ್ನೂ ಸಂಸ್ಕೃತ ಶಾಸ್ತ್ರಗಳ ಬಲದಿಂದಲೇ ನಾವು ಸ್ವಾಧೀನ ಮಾಡಿಕೊಳ್ಳುವಂತಿಲ್ಲ; ಸಂಸ್ಕೃತ ನಿಗಮಾಗಮಗಳ ತತ್ತ್ವಗಳು ಸಹ ನಮ್ಮ ಕಾಲದ ವಿಚಾರ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದಲ್ಲದೆ ನಮ್ಮ ಮನಸ್ಸಿಗೆ ಒಪ್ಪಿಗೆಯಾಗುವಂತಿಲ್ಲ. ಸಂಸ್ಕೃತದಲ್ಲಿ ಕಾವ್ಯ ಶಾಸ್ತ್ರ ರಚನೆ ನಿಂತುಹೋದಾಗ ನಮ್ಮ ಮನೋಬುದ್ಧಿಗಳ ಬೆಳವಣಿಗೆಯೇನೂ ನಿಂತುಹೋಗಿಲ್ಲ. ಪ್ರಪಂಚವಿನ್ನೂ ದೊಡ್ಡದಾಗುತ್ತಿದೆ. ನಮ್ಮ ಆಲೋಚನೆಗಳೂ ಅಭಿಲಾಷೆಗಳೂ ಹಬ್ಬುತ್ತಿವೆ. ಇವುಗಳಿಗೆ ಒದಗುವ ಭಾಷೆಯಲ್ಲವೆ ನಮಗೀಗ ಬೇಕಾದುದು?

ಇದು ಸಂಸ್ಕೃತವನ್ನು ಅಲ್ಲಗಳೆಯುವ ಮಾತಲ್ಲ, ಕನ್ನಡಕ್ಕಿರುವ ಆವಶ್ಯಕತೆ ಯನ್ನು ತೋರಿಸುವ ಮಾತು. ಸಂಸ್ಕೃತವು ವಾನಪ್ರಸ್ಥಾಶ್ರಮವನ್ನು ಹೊಕ್ಕಂದಿ ನಿಂದ ಉಳಿದಿರುವ ಕೆಲಸವನ್ನು ಕನ್ನಡವೀಗ ನಡೆಸಬೇಕಾಗಿದೆ. ತಂದೆ ತಾಯಿಗಳು ವೃದ್ಧರೂ ವಿರಕ್ತರೂ ಆದ ಬಳಿಕ ಅವರ ಜೀವನದ ಲೌಕಿಕ ಧರ್ಮಗಳು ಅವರ ಸಂತತಿಯ ಜೀವನದ ಮೂಲಕ ನಡೆವಂತೆ, ಸಂಸ್ಕೃತದ ಇನ್ನುಮೇಲಣ ಜೀವನವು ಕನ್ನಡದ ಮೂಲಕ ನಡೆಯಬೇಕಾಗಿದೆ; ಎಂದರೆ, ಸಂಸ್ಕೃತದ ಪ್ರಯೋಜನವು ಜನ ಸಾಮಾನ್ಯಕ್ಕೆ ಕನ್ನಡದ ಮೂಲಕ ದೊರೆಯಬೇಕಾಗಿದೆ. ಜಗತ್ತಿನ ಈಗಿನ ಪರಿಸ್ಥಿತಿ ಯನ್ನು ಗಮನಕ್ಕೆ ತಂದುಕೊಳ್ಳೋಣ: ಈಗ ಸಾಮಾನ್ಯ ಜನರಿಗೆ—ಎಂದರೆ ಪಾಂಡಿತ್ಯವನ್ನೇ ಕಸಬಾಗಿ ಮಾಡಿಕೊಳ್ಳದ ಮತ್ತು ಯಥೇಷ್ಟವಾಗಿ ದ್ರವ್ಯಾನುಕೂಲ ವನ್ನು ಪಡೆಯದ ಜನರಿಗೆ—ಅನೇಕ ಭಾಷೆಗಳನ್ನು ಕಲಿಯಲು ಕಾಲವೆಲ್ಲಿದೆ? ಹಣ ವೆಲ್ಲಿದೆ? ಜೀವನೋಪಾಯದ ಪ್ರಶ್ನೆಯು ದಿನೇ ದಿನೇ ಕಷ್ಟವಾಗುತ್ತಿದೆ; ಶಾಸ್ತ್ರಗಳ ರಾಶಿ ಅಪಾರವಾಗುತ್ತಿದೆ; ರಾಜಕೀಯ ಕ್ಷೋಭೆಗಳೂ, ಆರ್ಥಿಕ ಕ್ಷೋಭೆಗಳೂ ಸಮಾಜದ ಸಮಾಧಾನವನ್ನು ಸೂರೆಗೊಳ್ಳುತ್ತಿವೆ. ಇಂಥಾ ಸಮಯದಲ್ಲಿ ನಮ್ಮ ಜನರು ಪದಗಳನ್ನು ಕಲಿಯಬೇಕೆ? ಅಥವಾ, ಪದಾರ್ಥಗಳನ್ನು ಹಿಡಿಯಬೇಕೆ? ಇಷ್ಟರ ಮೇಲೆ, ಸಂಸ್ಕೃತವೇನೂ ಸುಲಭವಾದ ಭಾಷೆಯಲ್ಲ. ಅದರ ನಿಘಂಟು ವ್ಯಾಕರಣಗಳೂ, ಪಾಶ್ಚಾತ್ಯರಿಂದ ಬಂದಿರುವ ವಿಜ್ಞಾನ ಶಾಸ್ತ್ರ ಸಮಾಜ ವ್ಯವಸ್ಥಾ ಶಾಸ್ತ್ರಗಳೂ, ಎರಡೂ ಒಟ್ಟಿಗೆ ಒಂದೇ ತಲೆಯಲ್ಲಿ ಅಡಗಿರುವುದು—ಅದು ಸಾಮಾನ್ಯ ತಲೆಯಾದರೆ—ಸಾಧ್ಯವಲ್ಲ. ಹೀಗಿರುವಲ್ಲಿ, ಲೋಕ ರೀತಿಯನ್ನು ತಿಳಿದು

ಮಾನವ ವರ್ಗದಲ್ಲಿ ಸಹಾನುಭೂತಿಯನ್ನಿಟ್ಟುಕೊಂಡಿರುವವರು ಮಾತಿಗಿಂತಲೂ ವಿಷಯಕ್ಕೆ ಹೆಚ್ಚು ಗಮನ ಕೊಡದೆ ಇರಲಾರರು. ಇಂಥವರು ಸಂಸ್ಕೃತದ, ಅಥವಾ ಇಂಗ್ಲಿಷಿನ, ಅಥವಾ ಮತ್ತೊಂದು ಅನ್ಯ ಭಾಷೆಯ ಶಬ್ದಗಳಿಗಾಗಿ—ಬರಿಯ ಶಬ್ದಗಳಿಗಾಗಿ—ಜನರನ್ನು ಶ್ರಮಪಡಿಸುವುದಕ್ಕಿಂತ, ಆ ಭಾಷೆಗಳ ಸಾಹಿತ್ಯ ಸಾರವನ್ನು ಅವರಿಗೆ ಹವಣಿಸಿಕೊಡುವುದರಲ್ಲಿ ಹೆಚ್ಚು ಉತ್ಸಾಹವುಳ್ಳವರಾಗಿರುವರು.

ಕನ್ನಡವು ಇದುವರೆಗೂ ಈ ಸಾರ ಸಂಗ್ರಹದ ಕೆಲಸವನ್ನು ಮಾಡಿದೆ. ಸಂಸ್ಕೃತವು ಮೂಲ ವಿಗ್ರಹದಂತೆ ಗುಡಿಯೊಳಗೆ ಕುಳಿತಿದ್ದಾಗ ಕನ್ನಡವು ಉತ್ಸವ ವಿಗ್ರಹದಂತೆ ಹೊರಕ್ಕೆ ಬಂದು ಜನರಿಗೆ ದಿವ್ಯ ದರ್ಶನವನ್ನು ದೊರಕಿಸಿದೆ. ಲೋಕೋಪಕಾರದ ವಿಸ್ತೀರ್ಣವನ್ನು ಅಳೆದುನೋಡಿದರೆ, ಬಸವಣ್ಣ ಅಲ್ಲಮರುಗಳಿಂದಲೂ ಪುರಂದರ ಕನಕರುಗಳಿಂದಲೂ ಆಗಿರುವಷ್ಟು ವೇದಾಂತ ತತ್ತ್ವ ಪ್ರಚಾರವು ಅನೇಕ ಉಪನಿಷದ್ವ್ಯಾಖ್ಯಾತರುಗಳಿಂದ ಆಗಿಲ್ಲವೆಂದು ಧಾರಾಳವಾಗಿ ಹೇಳಬಹುದು; ಕುಮಾರ ವ್ಯಾಸ ಕುಮಾರ ವಾಲ್ಮೀಕಿಗಳಿಂದ ಆಗಿರುವಷ್ಟು ಭಾರತ ರಾಮಾಯಣ ಕಥಾ ಪ್ರಸಾರವು ಸಂಸ್ಕೃತದಲ್ಲಿ ವ್ಯಾಖ್ಯಾನ ಬರೆದ ನೀಲಕಂಠ ಗೋವಿಂದರಾಜರುಗಳಿಂದ ಆಗಿಲ್ಲವೆಂದು ಹೇಳಬಹುದು. ಹೀಗೆ ಸಂಸ್ಕೃತದ ಸಂತತಿ ಖ್ಯಾತಿಗಳು ಕನ್ನಡದ ಮೂಲಕ ಅಭಿವೃದ್ಧಿಯಾಗುತ್ತಿವೆ. ಹೀಗಿರುವಾಗ, ಕನ್ನಡವು ಸಂಸ್ಕೃತಕ್ಕೆ ವೈರಿಯೆಂದು ಹೇಳಬಹುದೆ? ಹಿಂದೆ ಸಂಸ್ಕೃತದಿಂದ ಕನ್ನಡ ಬದುಕಿತು; ಮುಂದಕ್ಕೆ ಕನ್ನಡದಲ್ಲಿ ಸಂಸ್ಕೃತ ಬದುಕಬೇಕು.

ಕನ್ನಡವು ಸಂಮಿಶ್ರಿತ ಭಾಷೆ. ಅದರ ಶರೀರದಲ್ಲಿ ಬಹು ಭಾಗ ಸಂಸ್ಕೃತದಿಂದ ಪರಿಪುಷ್ಟವಾದುದು. ಇದಕ್ಕಾಗಿ ಅದು ತಲೆತಗ್ಗಿಸ ಕಾರಣವಿಲ್ಲ. ಸಂಸ್ಕೃತಕ್ಕೆ ಕೂಡ ಋಣದ ಪ್ರಸಕ್ತಿ ತಪ್ಪಿಲ್ಲವೆಂದು ಕೆಲವರು ಹೇಳುತ್ತಾರೆ. ಪ್ರಪಂಚದ ಬಹು ಭಾಗವನ್ನಾಕ್ರಮಿಸಿಕೊಂಡು ಆಳುತ್ತಿರುವ ಇಂಗ್ಲೀಷಿನ* ಶರೀರದಲ್ಲಿ ಅನ್ಯ ಭಾಷಾ ಸಾಮಗ್ರಿಯಿಂದ ಬೆಳೆದ ಭಾಗವೇನೂ ಕಡಮೆಯಾಗಿಲ್ಲ. ಆ ಅನ್ಯ ಭಾಷೆಗಳ ವಿಷಯದಲ್ಲಿ ಇಂಗ್ಲೀಷೇನೂ ಸೇವಕ ಭಾವವನ್ನು ತಾಳಿಲ್ಲ. ಕನ್ನಡವೂ ಆ ಧೋರಣೆಯನ್ನನುಸರಿಸಬೇಕು. ಎಲ್ಲ ಭಾಷೆಗಳೂ ವಿಶ್ವ ಪ್ರಕೃತಿಯವು; ಅವುಗಳಲ್ಲಿ ತನಗೆ ಬೇಕಾದ ಸಾಮಗ್ರಿ ಯಾವುದರಲ್ಲಿದ್ದರೂ ಅದನ್ನು ಆರಿಸಿಕೊಳ್ಳುವ ಅಧಿಕಾರವು ಪ್ರತಿಯೊಂದು ಭಾಷೆಗೂ ಉಂಟು. ಹಾಗೆ ಮಾಡದ ಭಾಷೆಯು ಆತ್ಮ ವಂಚನೆ ಮಾಡಿಕೊಳ್ಳುತ್ತದೆ. ಈ ಸಂಗ್ರಹ ಕಾರ್ಯದಲ್ಲಲ್ಲ ತಪ್ಪಾಗುವುದು; ಅದನ್ನು ಮಾಡುವ ರೀತಿಯಲ್ಲಿ. ಆರಿಸುವುದನ್ನು ತಿಳಿವಳಿಕೆಯಿಂದ—ಔಚಿತ್ಯ ದೃಷ್ಟಿಯಿಂದ—ಯುಕ್ತಾಯುಕ್ತ ವಿವೇಚನೆಯಿಂದ—ಆರಿಸಬೇಕು. ಆರಿಸಿಕೊಂಡ ಬಳಿಕ ಅದು

* "If a language would live, it must eat. And the English language, in all its times of best health, has been a good feeder, if not a gross one. Nothing that it had a mind to, has ever stuck in its throat, or failed to turn into good flesh-forming stuff in its gizzard. Look at the way it has browsed on all the technical jargons of sport, from hawking to golf, picking out every term or figure apt for literary use."
—C. E. MONTAGUE.

ನಮ್ಮದು. ನಮ್ಮ ಹಿಂದಿನ ಕವಿಗಳಲ್ಲನೇಕರು ಸಂಸ್ಕೃತ ಪದಗಳನ್ನು ಉಪಯೋಗಿಸಿದರೆಂಬುದಲ್ಲ ಆಕ್ಷೇಪಣೆ; ಅನಾವಶ್ಯಕವಾಗಿ ರಸವಿವೇಕವಿಲ್ಲದೆ ತುಂಬಿದರೆಂಬುದು. ಇತರರ ಉಗ್ರಾಣದಿಂದ ನಾವು ಸಂಗ್ರಹಿಸಬೇಕಾದುದು ತಿರುಳಿಲ್ಲದ ಒಣ ಸಿಪ್ಪೆಯನ್ನಲ್ಲ, ಜೀವಪೋಷಕವಾದ ಸಾಮಗ್ರಿಯನ್ನು. ಈ ನಿಯಮವನ್ನು ನೆನಪಿನಲ್ಲಿಟ್ಟು ನಾವು ಇನ್ನು ಮುಂದೆಯೂ ಸಂಸ್ಕೃತದ ಸಹಾಯವನ್ನು ತೆಗೆದುಕೊಳ್ಳಲೇಬೇಕು. ಹೊಸ ಹೊಸ ಅಭಿಪ್ರಾಯಗಳನ್ನೂ ಹೊಸ ಹೊಸ ಸಂಗತಿಗಳನ್ನೂ ತಿಳಿಸಲು ನಮಗೆ ಹೊಸ ಹೊಸ ಪದಗಳು ಬೇಕಾಗುತ್ತವೆ. ಇಂಥಾ ನೂತನ ಪದ ರಚನೆಗೆ ಅವಶ್ಯವಾದ ಮೂಲ ಸಾಮಗ್ರಿಯು ಸಂಸ್ಕೃತದಲ್ಲಿ ಅಪರಿಮಿತವಾಗಿದೆ. ಹೀಗಿರುವಾಗ, ಕನ್ನಡದ ಅಭಿಮಾನಿಗಳು ಸಂಸ್ಕೃತವನ್ನು ಹೇಗೆ ತಾನೆ ಬಿಟ್ಟಾರು? ಸಂಸ್ಕೃತವು ಶಾಶ್ವತವಾಗಿರಲಿ; ಅದರ ವ್ಯಾಸಂಗವು ದೇಶದಲ್ಲಿ ಹರಡಲಿ; ಆದರೆ ಅದು ದೇಶ ಭಾಷೆಗಳನ್ನು ದಾಸ್ಯದಲ್ಲಿಟ್ಟಿರುವುದಾಗದೆ, ಅವುಗಳ ಸ್ವಾತಂತ್ರ್ಯಕ್ಕೆ—ಅವುಗಳ ಸ್ವಭಾವ ವಿಕಾಸಕ್ಕೆ—ಅವುಗಳ ಆತ್ಮ ಮಹಿಮಾ ವಿಸ್ತಾರಕ್ಕೆ—ಉಪಕಾರಕವಾಗಲಿ. ಸಿಂದಬಾದನ ಹೆಗಲೇರಿ ಕುಳಿತಿದ್ದ ಸಮುದ್ರ ವೃದ್ಧನ ನೀತಿಯು ಸಂಸ್ಕೃತಕ್ಕೆ ಸರಿಯಲ್ಲ. ತಾನು ಮುಂದೆ ತನ್ನ ಮಕ್ಕಳಿಂದಲೇ ಚರಿತಾರ್ಥಳಾಗಬೇಕೆಂಬುದನ್ನು ಆ ಮಹಾ ತಾಯಿ ಮರೆಯದಿರಲಿ.

ಇಂಗ್ಲಿಷ್ ಮತ್ತು ಇತರ ಭಾಷೆಗಳ ವಿಷಯದಲ್ಲಿ ನಾವು ಅನುಸರಿಸಬೇಕಾದ ಮರ್ಯಾದೆಯೂ ಇಷ್ಟೇ: ಆವಶ್ಯಕತೆ, ಔಚಿತ್ಯ, ಅಥವಾ ಹೊಂದಿಕೆ—ಈ ಎರಡು ತತ್ತ್ವಗಳನ್ನು ಮರೆಯದೆ ಎಲ್ಲಿಂದ ಪದಸಂಗ್ರಹ ಮಾಡುವುದಕ್ಕೂ ಹಿಂಜರಿಯಬೇಕಾದುದಿಲ್ಲ. ನಮ್ಮ ಪ್ರತ್ಯಯದ ಮುದ್ರೆಯನ್ನೊತ್ತಿದ ಮೇಲೆ—ನಮ್ಮ ತದ್ಭವದ ಸಂಕಲಿಕೆಯನ್ನುಡಿಸಿದ ಮೇಲೆ—ಎಲ್ಲಿಂದ ಬಂದ ಪದವಾದರೂ ಅದು ನಮ್ಮದೇ. ಪ್ರಕೃತಿ-ವಿಜ್ಞಾನ ಸಮಾಜ-ವಿಜ್ಞಾನ ಶಾಸ್ತ್ರಗಳನ್ನು ಬರೆಯುವಾಗ ಇಂಗ್ಲಿಷ್, ಜರ್ಮನ್, ಲ್ಯಾಟಿನ್ ಭಾಷೆಗಳ ಮಾತುಗಳನ್ನು—ಸಮಾಸ ಪದಗಳನ್ನು—ಉಂಡುಂಡೆಯಾಗಿ, ಅನಾಮತ್ತಾಗಿ, ತೆಗೆದುಕೊಳ್ಳಬೇಕಾದೀತು. ಅದಕ್ಕೆ ಸಂಕೋಚಪಡಬೇಕಾದುದಿಲ್ಲ. ಇಂಗ್ಲಿಷಿನವರು ಹಾಗೆ ಮಾಡಿದ್ದಾರೆ. ಆವಶ್ಯಕತೆ ಔಚಿತ್ಯಗಳಿಗೆ ತಕ್ಕಂತೆ ಶಬ್ದಗಳನ್ನಾಯ್ದು ಜೋಡಿಸಿಕೊಳ್ಳುವ ಸ್ವಾತಂತ್ರ್ಯದಲ್ಲಿ ಕುಮಾರವ್ಯಾಸ ಮಹಾ ಕವಿ ನಮಗೆ ಗುರುವಾಗಿದ್ದಾನೆ. ನಮಗೆ ಸಂಸ್ಕೃತವೂ ಬೇಕು, ಇಂಗ್ಲೀಷೂ ಬೇಕು, ಹಿಂದೀ ಮರಾಠೀ ಬಂಗಾಳೀಗಳೂ ಬೇಕು. ಇವುಗಳ ಉಪಭಾಷೆ ಶಾಖಾಭಾಷೆಗಳೂ ಸಹ ಬೇಕು; ಆದರೆ ನಮ್ಮ ಮೇಲೆ ಕೈ ನಡೆಸುವುದಕ್ಕಲ್ಲ, ನಮ್ಮ ಬಲವನ್ನು ಹೆಚ್ಚಿಸುವುದಕ್ಕೆ.

ಸಾಹಿತ್ಯ ಕ್ಷೇತ್ರದಲ್ಲಿ ಸ್ವದೇಶೀ ವ್ರತಕ್ಕೆ ಅವಕಾಶವಿಲ್ಲ. ಜನ ಜನಾಂಗಗಳ ಜೀವನದಲ್ಲಿ ಸರಸ್ವತಿ ಧನ್ವಂತರಿಯರು ಕಾಲ ದೇಶಗಳ ಅವಧಿಗೆ ಒಳಪಡದೆ ಸಂಚರಿಸಬೇಕಾದವರು. ಆಕಾಶದಂತೆ, ಸೂರ್ಯ ಚಂದ್ರರಂತೆ, ಎಲ್ಲರಿಗೂ ಸೇರಿದುದು ಜ್ಞಾನ. ಅದರ ಬೆಳಕೂ ಬಿಸಿಲೂ ಬೇಡವೆನ್ನುವ ಜನರು ತಮ್ಮ ಶುಭವನ್ನು ತಾವಾಗಿ ತೊರೆದು

ಕೊಂಡವರಾಗುತ್ತಾರೆ. ಎಂದು ನಮ್ಮ ಪೂರ್ವಿಕರು ಅನ್ಯದೇಶ ಸಂಪರ್ಕವು ಮೈಲಿಗೆಯೆಂದು ಜರೆದರೋ ಅಂದು ಅವರು ಸ್ವಜನ ಜೀವನವನ್ನು ಗುಣಿಯೊಳಕ್ಕೆ ತಳ್ಳಿದರು. ಗುಣಿಯೊಳಗೆ ನಿಂತ ನೀರು ಕೆಲವು ದಿನದ ಬಳಿಕ ರೊಚ್ಚಾಗಿ ನಾರುವಂತೆ, ದೇಶ ವಿದೇಶಗಳೊಡನೆ ವ್ಯವಹಾರವನ್ನು ಬಿಟ್ಟ ಜನರ ಬುದ್ಧಿಯು ಮಲಿನವಾಗುವುದು ಸ್ವಾಭಾವಿಕವಾಗಿದೆ. ಬುದ್ಧಿತಟಾಕದೊಳಕ್ಕೆ ನೀರು ನಾಲ್ಕು ಕಡೆಯಿಂದಲೂ ಬರುತ್ತ, ಅಲ್ಲಿಂದ ನಾಲ್ಕು ಕಡೆಗಳಿಗೂ ಹರಿಯುತ್ತ ಇರಬೇಕು. ನಮ್ಮ ಜೀವನದ ಹೊರಮನೆಗೆ ಕಿಟಿಕಿಗಳಿರುವಂತೆ ಅದರ ಒಳಮನೆಗೂ ಇದ್ದು, ಅಲ್ಲಿಯೂ ಗಾಳಿಯ ಸಂಚಾರವಾಗುತ್ತಿರಬೇಕು. ಯಾವ ಸಾಹಿತ್ಯವು ಹೀಗೆ ಎಲ್ಲ ಕಡೆಗಳಿಂದಲೂ ಬೆಳಕನ್ನೂ ಗಾಳಿಯನ್ನೂ ಬರಮಾಡಿಕೊಳ್ಳುವುದೋ ಅದು ತನ್ನ ನೈರ್ಮಲ್ಯವನ್ನು ಕಾಪಾಡಿಕೊಂಡು, ಚೈತನ್ಯವನ್ನು ಹೆಚ್ಚಿಸಿಕೊಂಡು, ಮುಪ್ಪನ್ನು ದೂರದಲ್ಲಿಟ್ಟಿರುವುದು.

## ಈಗಿನ ಸಾಹಿತ್ಯ

ಅನ್ಯ ಸಾಹಿತ್ಯ ಸಂಸರ್ಗದಿಂದ ಕನ್ನಡಕ್ಕೆ ಪ್ರಯೋಜನವುಂಟೆಂಬುದು ಈಗ ಎಲ್ಲರಿಗೂ ಪ್ರತ್ಯಕ್ಷವಾಗಿದೆ. ಕಳೆದ ಐವತ್ತು ವರ್ಷಗಳಲ್ಲಿ ಕನ್ನಡ ಸಾಹಿತ್ಯವು ಒಂದು ನವೀನ ಕಾಂತಿಯನ್ನೂ ಶಕ್ತಿಯನ್ನೂ ಸಂಪಾದಿಸಿಕೊಳ್ಳುತ್ತಬಂದಿದೆ. ಅದರಲ್ಲಿಯೂ ಈಗ ೧೫–೨೦ ವರ್ಷಗಳಲ್ಲಿ—ಕರ್ಣಾಟಕ ಸಾಹಿತ್ಯ ಪರಿಷತ್ತು, ಧಾರವಾಡದ ವಿದ್ಯಾವರ್ಧಕ ಸಂಘ, ಬೆಂಗಳೂರಿನ ಕರ್ಣಾಟಕ ಸಂಘ, ಧಾರವಾಡದ ಗೆಳೆಯರ ಗುಂಪು, ಮಂಗಳೂರಿನಲ್ಲಿ ಬಾಲ ಸಾಹಿತ್ಯ ಮಂಡಲ, ಮೈಸೂರು ಕರ್ಣಾಟಕ ಸಂಘ ಮೊದಲಾದ ಸಂಸ್ಥೆಗಳ ಸ್ಥಾಪನೆಯಾದ ಮೇಲೆ—ಈ ಸಂಸ್ಥೆಗಳ ಮೂಲಕವೂ, ಅವುಗಳ ಪ್ರಭಾವದಿಂದುಂಟಾದ ವಾತಾವರಣದ ಪ್ರೇರಣೆಯಿಂದಲೂ ಹೊಸ ಜಾತಿಯ ಗ್ರಂಥ ರಾಶಿಯು ದೇಶದ ಗಮನವನ್ನಾಕರ್ಷಿಸಿಕೊಳ್ಳುವಷ್ಟರ ಮಟ್ಟಿಗೆ ಬೆಳೆದಿದೆ. ಈ ಗ್ರಂಥಗಳಲ್ಲಿ ಕೆಲವುಗಳ ವಿಷಯ ಹೊಸದು, ಕೆಲವುಗಳ ರೀತಿ ಹೊಸದು. ವಾತಾವರಣದ ಲಕ್ಷಣಗಳನ್ನು ನೋಡಿದರೆ ಈಗ ಇನ್ನೂ ವಸಂತಾರಂಭದಂತೆ ತೋರುತ್ತದೆ. ಸಾಹಿತ್ಯೋಪಾಸನೆಯ ಉತ್ಸಾಹವು ನೂರಾರು ಎಳೆಯ ಕಣ್ಣುಗಳಲ್ಲಿ ಹೊಳೆಯುತ್ತಿದೆ. ಇಂತಹ ಸಮಯದಲ್ಲಿ ತರುಣನಲ್ಲದೆ ಪರಿಣತನಾಗದೆ ಇರುವ ನನ್ನಂಥವನು ನೂತನ ಸಾಹಿತ್ಯವನ್ನು ಕುರಿತು ಒಂದೆರಡು ಮಾತನ್ನಾಡಿದರೆ ಅದು ಕಿರಿಯರ ಗಮನಕ್ಕೆ ತಕ್ಕುದಾಗಿರಬಹುದಲ್ಲವೆ? ಅದು ನಾನು ಗ್ರಂಥ ಲೇಖಕನಾಗಿ ಆಡುವ ಮಾತಲ್ಲ, ಗ್ರಂಥ ವಾಚಕನಾಗಿ ಆಡುವ ಮಾತು. ನನ್ನ ಮಿತ್ರರು ಅದನ್ನು ಒಪ್ಪಿಕೊಳ್ಳಬೇಕಾದುದಿಲ್ಲ, ವಿಚಾರ ಮಾಡಿದರೆ ಸಾಕು.

ಸಾಹಿತ್ಯ ಶಬ್ದದಿಂದ, ವಿಸ್ತಾರವಾದ ಅರ್ಥದಲ್ಲಿ, ವಿವಿಧ ಗ್ರಂಥ ಸಮೂಹವೆಂದು ತಿಳಿಯಬಹುದು; ಪರಿಮಿತವಾದ ಅರ್ಥದಲ್ಲಿ, ಕಾವ್ಯ ಸಮುದಾಯವೆಂದು ತಿಳಿಯಬಹುದು. ಈ ಎರಡರಲ್ಲಿ ಕಾವ್ಯವನ್ನು ವಿನಾಯಿಸಿದ ಸಾಹಿತ್ಯವನ್ನು ಕುರಿತು ಹೇಳಬೇಕಾದುದು ಹೆಚ್ಚೇನೂ ನನಗೆ ತೋರಿಲ್ಲ. ಈ ಗ್ರಂಥಗಳ ವಿಷಯಗಳು

ಬಹು ಮಟ್ಟಿಗೆ ನಮ್ಮ ಜೀವನದ ಬಹಿರಂಗ ಭಾಗಕ್ಕೆ ಸೇರಿದುವು; ಆದಕಾರಣ ಅವು ಪ್ರತ್ಯಕ್ಷ ಪ್ರಯೋಜಕಗಳಾದುವು. ಒಟ್ಟಿನ ಮೇಲೆ, ಇವುಗಳನ್ನು ಶಾಸ್ತ್ರ ಸಂತತಿಯೆಂದು ಹೇಳಬಹುದು. ಪ್ರಕೃತಿ-ವಿಜ್ಞಾನದ ಮತ್ತು ಸಮಾಜ-ವಿಜ್ಞಾನದ ನಾನಾ ಶಾಖೋಪಶಾಖೆಗಳೇ ಇವು. ಭೌತ ಶಾಸ್ತ್ರ, ರಸಾಯನ ಶಾಸ್ತ್ರ, ಭೂಗರ್ಭ ಶಾಸ್ತ್ರ, ಸಸ್ಯ ಶಾಸ್ತ್ರ, ಪ್ರಾಣಿ ಶಾಸ್ತ್ರ, ಖಗೋಳ ಶಾಸ್ತ್ರ, ವಾತಾವರಣ ಶಾಸ್ತ್ರ, ವಾಸ್ತು ಶಿಲ್ಪ, ಜಲ ಶಿಲ್ಪ, ಯಂತ್ರ ಶಿಲ್ಪ, ವಿದುಚ್ಛಿಲ್ಪ—ಇವುಗಳೂ, ದೇಶ ವಿದೇಶ ಚರಿತ್ರೆ, ಅರ್ಥ ಶಾಸ್ತ್ರ, ರಾಜ್ಯ ಶಾಸ್ತ್ರ, ವ್ಯವಹಾರ ಶಾಸ್ತ್ರ, ಕುಲಾಚಾರ ಶಾಸ್ತ್ರ—ಇವುಗಳೂ, ಇವುಗಳ ಅಂಗೋಪಾಂಗಗಳೂ ಸೇರಿದ ವೈಜ್ಞಾನಿಕ ಸಾಹಿತ್ಯವು ಇಂಗ್ಲಿಷಿನಲ್ಲಿ ಹೇರಳವಾಗಿದೆ. ಅದು ಸಾಲದೆಂದು ಇಂಗ್ಲಿಷ್ ವೈಜ್ಞಾನಿಕರು ಈ ಉದ್ಗ್ರಂಥಗಳನ್ನು ಜರ್ಮನ್, ಫ್ರೆಂಚ್ ಮೊದಲಾದ ಭಾಷೆಗಳಲ್ಲಿ ಓದುತ್ತಾರೆ. ಈ ಶಾಸ್ತ್ರಗಳ ಪ್ರತಿ ದಿನೋಪಯೋಗವನ್ನು—ಎಂದರೆ, ಬಗೆ ಬಗೆಯ ಕಸಬು ಕಾರ್ಖಾನೆಗಳಿಗೆ ಸಂಬಂಧಪಟ್ಟ ಯಂತ್ರ ಸಂಧಾನಗಳನ್ನು—ಕುರಿತ ದೊಡ್ಡ ಸಣ್ಣ ಪ್ರಕರಣಗಳಿಗಂತೂ ಇಂಗ್ಲಿಷಿನಲ್ಲಿ ಲೆಕ್ಕವೇ ಇಲ್ಲ. ಈ ಬಗೆಯ ಗ್ರಂಥಗಳು ಜನರ ಲೌಕಿಕ ಜ್ಞಾನಕ್ಕೂ ಅವರ ಜೀವನ ವೃತ್ತಿಗೂ ಸಹ ಸಾಧಕಗಳಾಗಿರುತ್ತವೆ. ಇಂಥಾ ಗ್ರಂಥಗಳು ಕನ್ನಡದಲ್ಲಿ ತೀರಾ ಸ್ವಲ್ಪವಾಗಿವೆ. ಈ ಬಡತನವನ್ನು ನೀಗಿಸುವುದು ಇಂಗ್ಲಿಷ್ ಕಲಿತವರ—ಅವರಲ್ಲಿಯೂ ವಿಜ್ಞಾನಾಭ್ಯಾಸ ಮಾಡಿದವರ—ಮೊದಲನೆಯ ಕರ್ತವ್ಯ. ಈ ಕಾರ್ಯದಲ್ಲಿ ಪಾರಿಭಾಷಿಕ ಪದಗಳನ್ನು ಸಂಪಾದಿಸುವುದು ಈಗ ಇರುವ ವಿಶೇಷ ಕಷ್ಟ. ಆದರೆ, ಪದಗಳು ದೊರೆಯುವ ತನಕ ಲೇಖಣಿ ಹಿಡಿಯುವುದಿಲ್ಲವೆಂದು ಕಾದಿರುವವನ ಮಶೀಪಾತ್ರೆ ಎಂದಿಗೂ ತುಂಬಿಕೊಂಡೇ ಇದ್ದುಬಿಡುವುದು. ಧೈರ್ಯ ಮಾಡಿ, ದೃಢ ಪ್ರತಿಜ್ಞೆ ಮಾಡಿ, ಲೇಖಣಿಯನ್ನು ನುಗ್ಗಿಸುತ್ತ ಹೋದರೆ ಪದಗಳು ತಾವಾಗಿಯೇ ಬರುವುವು. ಕನ್ನಡವಿಲ್ಲದಿದ್ದರೆ ಸಂಸ್ಕೃತ ಸಿದ್ಧವಾಗಿದೆ; ಸಂಸ್ಕೃತ ಒದಗದೆ ಹೋದರೆ ಇಂಗ್ಲಿಷು ಇದ್ದೇ ಇದೆ. ಇದರಲ್ಲಿ ಯಾವುದನ್ನು ಬೇಕಾದರೂ ಉಪಯೋಗಿಸಿಕೊಂಡು ಜನಕ್ಕೆ ವಿಷಯವನ್ನು ತಿಳಿಯಪಡಿಸಿದರೆ ಸಾಕು. ವಿಷಯ ಮೊದಲನೆಯದು, ಮಾತು ಆಮೇಲಿನದು. ಮನಸ್ಸಿನಲ್ಲಿ ವಿಷಯ ತುಂಬಿರುವವನ ನಾಲಗೆಗೆ ಪದಗಳು ಒಂದರಮೇಲೊಂದು ನುಗ್ಗಿಕೊಂಡು ಬರುತ್ತವೆ.

ಶಾಸ್ತ್ರ ವಿಷಯಗಳು ಬಹುವಾಗಿ ರಸವತ್ತಾದುವುಗಳಲ್ಲ; ಅವು ಪಾಠಕರಿಗೆ ಕಾವ್ಯಗಳಷ್ಟು ಮನೋರಂಜಕಗಳಾಗಲಾರವು. ಆದಕಾರಣ, ಶಾಸ್ತ್ರ ಲೇಖಕರು ತಮ್ಮ ಶೈಲಿಯನ್ನು ಚಿತ್ತಾಕರ್ಷಕವನ್ನಾಗಿ ಮಾಡಲು ಕಾವ್ಯ ಲೇಖಕರಿಗಿಂತ ಹೆಚ್ಚಾಗಿ ಪ್ರಯಾಸಪಡಬೇಕು. ಇದಕ್ಕೆ ಬೇಕಾದ ಗುಣಗಳಲ್ಲಿ ಮುಖ್ಯವಾದುವು ಮೂರು: (೧) ವಿಷಯದ ಅಂಶಗಳ ಜೋಡಣೆಯಲ್ಲಿ ಕ್ರಮ; (೨) ವಾಕ್ಯಗಳಲ್ಲಿ ವಿಶದತೆ; (೩) ಕಾರ್ಯ ಕಾರಣ ವಿವರಣೆಯಲ್ಲಿ ಅವ್ಯಾಪ್ತಿ ಅತಿವ್ಯಾಪ್ತಿ ದೋಷಗಳಿಗೆ ಅವಕಾಶಕೊಡದ ಸೂಕ್ಷ್ಮತೆ. ಶಾಸ್ತ್ರ ಗ್ರಂಥಗಳಲ್ಲಿರಬೇಕಾದ ಉತ್ತಮೋ

ತ್ತ್ರವು ಗುಣವು ಪ್ರಾಮಾಣಿಕತೆ. ಅದು ಲೇಖಕನಿಗೆ ವಿಷಯದ ಮೇಲಿರುವ ಅಧಿಕಾರ, ವಾಕ್ಯರಚನೆಯಲ್ಲಿರುವ ಜಾಗರೂಕತೆ—ಇವೆರಡರ ಫಲ.

ಈ ಸಂದರ್ಭದಲ್ಲಿ, ನನಗೆ ಪೂಜ್ಯರೂ ಅಭಿಮಾನಿಗಳೂ ಆಗಿರುವ ಶ್ರೀಮಾನ್ ಬೆಳ್ಳಾವೆಯ ವೆಂಕಟನಾರಾಯಣಪ್ಪನವರು ವಿಜ್ಞಾನ ಪ್ರಚಾರಕ್ಕಾಗಿ ಕೆಲವು ವರ್ಷಗಳ ಹಿಂದೆ—ದಿವಾನ್ ಸರ್ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರ ಮಹದಾಶ್ರಯದಲ್ಲಿ—ಆರಂಭಿಸಿದ ಕೆಲಸವನ್ನು ತಮ್ಮ ಜ್ಞಾಪಕಕ್ಕೆ ತರುವುದು ಯುಕ್ತವಾಗಿದೆ. ಅವರು "ವಿಜ್ಞಾನ"ವೆಂಬ ಮಾಸಪತ್ರಿಕೆಯ ಮೂಲಕವೂ, ವಿಜ್ಞಾನೋಪನ್ಯಾಸಗಳ ಮೂಲಕವೂ ದೊಡ್ಡ ಕೆಲಸವನ್ನಾರಂಭಿಸಿದರು. ಈಗ ಮರಳಿ ಅಂಥಾ ಪ್ರಯತ್ನ ನಡೆಯಬೇಕೆಂದು ನಾನು ಆಶಿಸುವಂತೆಯೇ ತಾವೂ ಆಶಿಸಬಹುದೆಂದು ನಾನು ತಿಳಿದುಕೊಂಡಿದ್ದೇನೆ. ಈಚೆಗೆ, ಬೆಂಗಳೂರು ಸೆಂಟ್ರಲ್ ಕಾಲೇಜಿನ ವಿಜ್ಞಾನ ಪಂಡಿತರು ಕೆಲವರು ಅಲ್ಲಿಯ ಕರ್ಣಾಟಕ ಸಂಘದ ಆಶ್ರಯದಲ್ಲಿ ವೈಜ್ಞಾನಿಕ ಸಂಗತಿಗಳನ್ನು ಕುರಿತು ಉಪನ್ಯಸಿಸಿದುದೂ, ಆ ಉಪನ್ಯಾಸಗಳನ್ನು ಕೇಳಲು ಜನರು ಕುತೂಹಲದಿಂದ ನೆರೆದು ಮೆಚ್ಚಿಕೊಂಡುದೂ ಸಂತೋಷದ ವಿಷಯ. ಈಚೆಗೆ, ಇನ್ನು ಕೆಲವು ವಿಜ್ಞಾನ ಗ್ರಂಥಗಳೂ ಪ್ರಕಟವಾಗಿವೆ. ಈ ಜಾತಿಯ ವ್ಯವಸಾಯವು ಈಗಿನ ಹತ್ತರಷ್ಟು—ನೂರರಷ್ಟು—ನಡೆಯಬೇಕೆಂದೂ, ನಮ್ಮ ವಿಜ್ಞಾನ ಪರಿಚಯವುಳ್ಳ ತರುಣ ಸಾಹಿತಿಗಳು ಈ ಕಡೆಗೆ ಹೆಚ್ಚಾಗಿ ಗಮನ ತಿರುಗಿಸಬೇಕೆಂದೂ ವಿಜ್ಞಾಪಿಸತಕ್ಕವನಾಗಿದ್ದೇನೆ.

ಈ ಮೇಲಿನ ವಿಜ್ಞಾಪನೆಯಲ್ಲಿ ನಾನು ವಿಜ್ಞಾನ ಶಾಸ್ತ್ರದ ತತ್ತ್ವಶೋಧಕರನ್ನೂ ನೂತನ ಪರೀಕ್ಷಾ ಕರ್ತರುಗಳನ್ನೂ ಸೇರಿಸಿಲ್ಲ. ಇಂಥಾ ಅಜ್ಞಾತ ವಿಷಯಾನ್ವೇಷಿಗಳು ಕನ್ನಡ ನಾಡಿನಲ್ಲಿ ಇಲ್ಲದೆ ಇಲ್ಲ. ಅವರು ತಮ್ಮ ಪರಿಶ್ರಮದ ಫಲಿತಾಂಶಗಳನ್ನು ಕನ್ನಡದಲ್ಲಿ ಬರೆದು ಪ್ರಕಟಗೊಳಿಸಿದರೆ ಸ್ವಭಾಷೆಗೆ ಒಂದು ವಿಶೇಷ ಪ್ರಶಸ್ತಿಯನ್ನು ಸಂಪಾದಿಸಿಕೊಟ್ಟಂತಾಗುತ್ತದೆ.

ಸಾಹಿತ್ಯ ಭೂಮಿಯ ಶಾಸ್ತ್ರ ಪ್ರಾಂತವು ಮುಖ್ಯವಾಗಿ ನಮ್ಮ ಬಹಿರಂಗ ಜೀವನಕ್ಕೆ ಸಂಬಂಧಪಟ್ಟುದೆಂದು ಹೇಳಿದೆ. ಈ ಪ್ರಾಂತದ ಅಂಚೂ, ಅಂತರಂಗ ಪ್ರಾಂತದ ಅಂಚೂ ಕೆಲವೆಡೆ ಅಂಟಿಕೊಂಡು ಒಂದಾಗಿ ಕಾಣುತ್ತವೆ. ಹೀಗೆ ಭೌತ ವಿಚಾರವೂ ಆತ್ಮವಿಚಾರವೂ ಒಂದರೊಡನೊಂದು ಹೆಣೆದುಕೊಂಡಿರುವ ಜಡೆಯನ್ನು ನಾವೀಗ ಬಿಡಿಸಬೇಕಾದುದಿಲ್ಲ. ಅದೂ ಸಾಹಿತ್ಯ ಕ್ಷೇತ್ರದೊಳಗೆ ಸೇರಿದ ವಸ್ತುವೇ. ಅದನ್ನು ಕುರಿತಾಗಲಿ, ನಮ್ಮ ಮತ ಧರ್ಮ ತತ್ತ್ವಗಳನ್ನು ಕುರಿತಾಗಲಿ, ನಮ್ಮ ಇತರ ಪುರಾತನ ಶಾಸ್ತ್ರಗಳನ್ನು ಕುರಿತಾಗಲಿ ಪ್ರತ್ಯೇಕವಾಗಿ ಹೇಳಬೇಕಾದುದೇನೂ ನನಗೆ ಕಾಣುವುದಿಲ್ಲ.

## ಕಾವ್ಯ ವಿಚಾರ

ಇನ್ನು ಕಾವ್ಯ ಪ್ರಾಂತಕ್ಕೆ ಹೊರಡೋಣ. ಕಾವ್ಯವು ನಮ್ಮ ಅಂತರಂಗ ಜೀವನದ—ವಿಶೇಷವಾಗಿ ನಮ್ಮ ಹೃದಯ ವಿಕಸನದ—ಪ್ರತಿಚ್ಛಾಯೆ. ಕವಿಯ

ಮನಸ್ಸು ಬಿಂಬಗ್ರಾಹಕ (ಫೋಟೊ) ಯಂತ್ರದಲ್ಲಿರುವ ಗಾಜಿನ ಹಲಗೆಯಂತೆ ರೂಪ ರೇಖಾ ವಿವರಗಳನ್ನು ತೆಗೆದಿಟ್ಟುಕೊಳ್ಳಬಲ್ಲುದು. ಈ ಪ್ರಪಂಚದಲ್ಲಿ ನಮ್ಮ ಕಣ್ಣಿಗೆ ಕಾಣಬೀಳದ ಆಕಾರ ವಿಕಾರಗಳು ಅವನ ಅಂತಃಕರಣದ ಕನ್ನಡಿಯಲ್ಲಿ ಪ್ರತಿ ಬಿಂಬಿಸುತ್ತವೆ; ನಮ್ಮ ಕಿವಿಗೆ ಕೇಳಬಾರದ ನಗುವು ಅಳುವುಗಳು ಅವನ ಮನಸ್ಸಿನ ಗುಹೆಯಲ್ಲಿ ಪ್ರತಿಧ್ವನಿತವಾಗುತ್ತವೆ. ಹೀಗೆ ಸೂಕ್ಷ್ಮಾನುಭವ ಶಕ್ತಿಯನ್ನು ಪಡೆದಿರುವುದು ಮಾತ್ರವೇ ಅಲ್ಲ; ಈ ಅನುಭವಗಳಿಂದ ಕೆರಳಿ, ಆವೇಗದಲ್ಲಿ ತನ್ನೊಳಗೆ ಬೇರೊಂದು ಪ್ರಪಂಚವನ್ನು ಕಟ್ಟುವ ಶಕ್ತಿಯೂ ಅವನಿಗಿರುತ್ತದೆ. ಇದೇ ಪ್ರತಿಭೆ. ಈ ಪ್ರತಿಭೆಯ ಮಹಿಮೆಯಿಂದ ಅವನು ಹೊರಗೆ ಕಂಡಿರಬಹುದಾದ ಸಾಸುವೆಯ ಕಾಳು ಅವನ ಮಾಯಾಪ್ರಪಂಚದಲ್ಲಿ ಹಿಮಾಲಯಾಕೃತಿಯನ್ನು ತಾಳಬಹುದು; ಆನೆಯು ಇರುವೆಯಂತಾಗಬಹುದು; ಮನುಷ್ಯನು ದೇವತೆಯಾಗಬಹುದು; ದೇವತೆ ಮನುಷ್ಯನಾಗಬಹುದು. ಈ ಪ್ರತಿಭೆಯನ್ನು ನಮ್ಮ ಪೂರ್ವಿಕರು ಪ್ರಾಚೀನ ಕರ್ಮ ಫಲವೆಂದು ಹೇಳಿದ್ದಾರೆ. ಹಾಗಿದ್ದರೂ ಇರಬಹುದು. ಪ್ರತಿಭೆಯಿರುವವನಿಗೆ ಬಾಹ್ಯ ಪ್ರಪಂಚದ ಅನುಭವವಿದ್ದೇ ಇರಬೇಕೆ?—ಎಂಬುದೂ ಒಂದು ಕಠಿನ ಸಮಸ್ಯೆಯೇ. ಅವನಿಗೆ ಅದು ಇರಲಿ, ಇಲ್ಲದಿರಲಿ; ಅವನ ಕೃತಿಯು ಸಾರ್ಥಕವಾಗಬೇಕಾದರೆ ಅವನು ಕಟ್ಟಿದ ಪ್ರಪಂಚಕ್ಕೂ, ನಾವು ಕಂಡಿರುವ ಪ್ರಪಂಚಕ್ಕೂ ಹೋಲಿಕೆಯ ಸಂಬಂಧ ವಿರಬೇಕೆಂಬುದೇನೋ ಖಂಡಿತ. ಅವನ ಕಾವ್ಯವು ನಮ್ಮ ಮನಸ್ಸಿನಲ್ಲಿ ಪ್ರತಿಧ್ವನಿ ಮಾಡಬೇಕು; ಅವನ ಚಿತ್ರಗಳು ನಮಗೆ ರೋಮಾಂಚವನ್ನುಂಟುಮಾಡಬೇಕು; ಎಂದರೆ, ನಮಗೆ ಕಾವ್ಯ ಶ್ರವಣಕ್ಕೆ ಹಿಂದೆ ಆಗಿದ್ದ ಬಾಹ್ಯ ಪ್ರಪಂಚಾನುಭವಗಳಿಗೂ, ಕವಿಯು ಹೊಸದಾಗಿ ಉಂಟುಮಾಡಿಕೊಡುವ ಆಂತರಿಕಾನುಭವಗಳಿಗೂ ಪರಸ್ಪರ ರುಜುವಾತಿರಬೇಕು. ಈ ರುಜುವಾತು—ಈ ಹೊರ ಜಗತ್ತು ಒಳ ಜಗತ್ತುಗಳ ಪರಸ್ಪರ ಅನುಮೋದನೆ—ನಮಗೆ ಎಷ್ಟೆಷ್ಟು ಮಟ್ಟಿಗೆ ಮನದಟ್ಟಿದರೆ, ಅಷ್ಟಷ್ಟು ಯಾಥಾರ್ಥ್ಯವು ಅವನ ಕವಿತೆಯಲ್ಲಿದೆಯೆನ್ನುತ್ತೇವೆ. ಈ ಯಾಥಾರ್ಥ್ಯವನ್ನು ಬಹು ಜನರು ಒಪ್ಪಿಕೊಳ್ಳುವಂತೆ ಮಾಡಿದವನು ಲೋಕ ಪ್ರಿಯ ಕವಿ; ಅದನ್ನು ಕೆಲ ಮಂದಿ ಸುಸಂಸ್ಕೃತ ಜನರು ಅಂಗೀಕರಿಸುವಂತೆ ಮಾಡಿದವನು ಉತ್ಕೃಷ್ಟ ಕವಿ. ಇಬ್ಬರೂ ಮಹಾ ಕವಿಗಳೇ. ಈ "ಮಹಾ" ಬಿರುದಿನಲ್ಲಿ ಎಷ್ಟೋ ದರ್ಜೆಗಳುಂಟು; "ಮಹಾ" ಅಲ್ಲದ ದರ್ಜೆಯಂತೂ ಉಂಟೇವುಂಟು.

ಶಾಸ್ತ್ರ ಪ್ರಬಂಧದಲ್ಲಿರಬೇಕಾದ ಮುಖ್ಯ ಗುಣವು ಪ್ರಾಮಾಣಿಕತೆ–ಯಾಥಾರ್ಥ್ಯ—ಎಂದು ಆಗಲೇ ಅರಿಕೆ ಮಾಡಿದೆ. ಈ ಶಾಸ್ತ್ರ ಯಾಥಾರ್ಥ್ಯಕ್ಕೂ ಕಾವ್ಯ ಯಾಥಾರ್ಥ್ಯಕ್ಕೂ ಇರುವ ಭೇದವನ್ನು ಸೂಚಿಸುವುದು ಅವಶ್ಯವೆಂದು ತೋರುತ್ತದೆ. ಶಾಸ್ತ್ರದ ವಿಷಯುಗಳು ಬಾಹ್ಯೇಂದ್ರಿಯಗಳಿಗೆ ಗೋಚರಿಸತಕ್ಕುವು; ಅವು ತೂಕ ಅಳತೆಗಳಿಗೆ ಸಿಕ್ಕುತ್ತವೆ; ಅವುಗಳ ಗಾತ್ರ, ಆಕಾರ, ಬಣ್ಣ ಮೊದಲಾದ ವಿವರಗಳನ್ನು ಗುರುತಿಸಿ, ಗೊತ್ತಾದ ಮಾತುಗಳಲ್ಲಿ ಹಿಡಿದಿರಿಸಲಾಗುತ್ತದೆ. ಆದಕಾರಣ, ಅವುಗಳ ವಿಷಯದಲ್ಲಿ ಜನರಿಗೆ ಅನುಭವ ಸಾಮ್ಯವೂ ಅಭಿಪ್ರಾಯೈಕ್ಯವೂ ಸಾಧ್ಯವಾಗಿವೆ.

ಕಾವ್ಯದ ವಿಷಯುಗಳು ಹಾಗೆ ಹಿಡಿತಕ್ಕೆ ಸಿಕ್ಕತಕ್ಕುವಲ್ಲ: ಸೀತೆಯ ಶೋಕ, ದ್ರೌಪದಿಯ ರೋಷ, ಭೀಮನ ಕ್ರೋಧ, ಯುಧಿಷ್ಠಿರನ ಸಹನೆ—ಇವುಗಳನ್ನು ಅಳೆಯುವುದು ಹೇಗೆ? ಕುಂತಿಗೆ ಸವತಿಯ ಮಕ್ಕಳ ಮೇಲೆ ಪ್ರೀತಿಯಿದ್ದುದಕ್ಕೂ, ಕೈಕೆಗೆ ಸವತಿಯ ಮಕ್ಕಳಲ್ಲಿ ಸಹನೆಯಿಲ್ಲದುದಕ್ಕೂ ಕಾರಣವನ್ನು ತೋರಿಸುವ ದುರ್ಬಿನ್ ಯಂತ್ರವೆಲ್ಲಿದೆ? ಹೀಗೆ ನಿಷ್ಕರ್ಷೆ ಮಾಡುವುದು ಅಸಾಧ್ಯವಾಗಿರುವುದ ರಿಂದಲೇ ಕಾವ್ಯ ವಿಷಯದಲ್ಲಿ ಜನರಿಗೆ ವಿವಿಧಾನುಭವಗಳೂ ಭಿನ್ನಾಭಿಪ್ರಾಯಗಳೂ ಸಹಜವಾಗಿವೆ. ಶಾಸ್ತ್ರದ್ದು ಕಲ್ಲಿನ ಪ್ರಪಂಚ, ಕಾವ್ಯದ್ದು ಮೋಡದ ಪ್ರಪಂಚ. ಶಾಸ್ತ್ರವು ಪ್ರತ್ಯಕ್ಷ ಪ್ರಮಾಣವುಳ್ಳದ್ದು; ಕಾವ್ಯವು ಅಂತರಾತ್ಮ ಪ್ರಮಾಣವುಳ್ಳದ್ದು. ಶಾಸ್ತ್ರಕ್ಕೆ ರುಜುವಾತು ಸಕಲ ಜನ ಸಮ್ಮತಿಯಿಂದ ಬರುತ್ತದೆ; ಕಾವ್ಯಕ್ಕೆ ರುಜುವಾತು ಪ್ರತಿಯೊಬ್ಬ ವ್ಯಕ್ತಿಯ ಮನಸ್ಸಿನಲ್ಲಿಯೂ ಬೇರೆ ಬೇರೆಯಾಗಿ ಬರುತ್ತದೆ. ಏವಂಚ, ಪ್ರಮಾಣ—ರುಜುವಾತು—ಎಂಬ ಪರೀಕ್ಷೆಯೇನೋ ಶಾಸ್ತ್ರ ಕಾವ್ಯ ಗಳೆರಡಕ್ಕೂ ಉಂಟು.

ಕಾವ್ಯದ "ಋಜು" ಮಾತೇ, ಅದರ ಪ್ರಮಾಣ ಯುಕ್ತತೆಯ ಲಕ್ಷಣವೇ, ರಸ. ಇದೇ ಕಾವ್ಯದ ಸತ್ಯ. ಗಣಿತಜ್ಞನಿಗೆ, ಒಂದಕ್ಕೊಂದು ಸೇರಿದರೆ ಎರಡೆಂಬುದು ಸತ್ಯ; ಕಾವ್ಯ ರಸಜ್ಞನಿಗೆ ಸಾಲೊಮನ್ ದೊರೆಗಿದ್ದ ಅಂತರ್ದೃಷ್ಟಿ ಸತ್ಯ. ಆತನ ಆಸ್ಥಾನಕ್ಕೆ ಇಬ್ಬರು ಹೆಂಗಸರು ಒಂದು ಮಗುವನ್ನು ತಂದು, ಅದು ನನ್ನದು ತನ್ನದೆಂಬ ಜಗಳವನ್ನು ವಿಮರ್ಶೆಗೊಡ್ಡಿದಾಗ, ಆತನು ಆ ಮಗುವನ್ನೆರಡಾಗಿ ಸೀಳಿ ಹಂಚುವೆನೆನ್ನಲು, ಆಗ ಯಾರು ಅದು ಬೇಡವೆಂದು ಬೇಡಿಕೊಂಡಳೋ ಅವಳೇ ಅದರ ನಿಜವಾದ ತಾಯಿ ಎಂದು ತೀರ್ಮಾನಿಸಿದನಂತೆ. ಇದು ಕವಿಗೆ ಬೇಕಾದ ಸತ್ಯ. ಸತ್ಯ ಶಬ್ದದ ಈ ಅರ್ಥವನ್ನು ನಾವು ಚೆನ್ನಾಗಿ ನೆನಪಿನಲ್ಲಿಡಬೇಕೆಂದು ನನಗೆ ತೋರು ತ್ತದೆ. ಏಕೆಂದರೆ, ಸತ್ಯ, ಸೌಂದರ್ಯ ಎಂಬ ಪದಗಳು ಕಾವ್ಯ ವಿಮರ್ಶೆಯಲ್ಲಿ ಪದೇ ಪದೇ ಪ್ರಯೋಗವಾಗತಕ್ಕುವು. ಇನ್ನೊಂದು ಉದಾಹರಣೆಯನ್ನು ನೋಡೋಣ: ವಕೀಲನೊಬ್ಬನು ನನ್ನನ್ನು ನ್ಯಾಯಸ್ಥಾನಕ್ಕೆ ಕರೆಯಿಸಿ, ಅಲ್ಲಿರುವ ಒಬ್ಬ ಆಪ್ತ ಸ್ನೇಹಿತನ ಕಡೆಗೆ ಕೈತೋರಿಸಿ, "ನೀನೀತನನ್ನು ಬಲ್ಲೆಯಾ?" ಎಂದು ಕೇಳಿದರೆ, ನಾನು "ಬಲ್ಲೆ" ಎಂದು ಉತ್ತರ ಕೊಡುತ್ತೇನೆ. ಅದರ ಮೇಲೆ ವಕೀಲನು, "ಆತನ ಹಲ್ಲು ಮೇಲು ಸಾಲಿನಲ್ಲೆಷ್ಟಿದೆ? ಕೆಳ ಸಾಲಿನಲ್ಲೆಷ್ಟಿದೆ?" ಎಂದು ಕೇಳಿದರೆ ನನಗೆ ತಿಳಿಯದೆಂದು ಹೇಳಬೇಕಾಗುತ್ತದೆ. ಹಾಗಾದರೆ, ಮೊದಲು "ಬಲ್ಲೆ" ಎಂದು ಹೇಳಿದಾಗ ನಾನು ಅಸತ್ಯ ನುಡಿದಂತಾಯಿತೆ? ವಕೀಲನಿಗೆ ಬೇಕಾಗಿದ್ದುದು ದಂತ ಪಂಕ್ತಿಯ ಸತ್ಯ; ನನ್ನ ಮನಸ್ಸಿನಲ್ಲಿದ್ದದ್ದು ಶೀಲ ಸ್ವಭಾವಗಳ ಸತ್ಯ. ಇನ್ನೊಂದು ಉದಾಹರಣೆಯನ್ನು ನೋಡೋಣ: ನಾನು ಲಂಡನ್ ಪಟ್ಟಣಕ್ಕೆ ಹೋದವನಲ್ಲ; ಆದರೆ, ಆ ಪಟ್ಟಣದ ನಕ್ಷೆಗಳನ್ನೂ ಚಿತ್ರಗಳನ್ನೂ ಕುತೂಹಲದಿಂದ ನೋಡಿದ್ದೇನೆ; ಅದರ ಹಾದಿ ಬೀದಿಗಳ ವಿವರಗಳನ್ನೂ ಅಲ್ಲಿಯ ಜೀವನ ಕ್ರಮದ ವಿವರಗಳನ್ನೂ ಕುರಿತು ಓದಿದ್ದೇನೆ; ಅಲ್ಲಾಗುವ ಅನುಭವಗಳ ವರ್ಣನೆಯನ್ನು ಎಷ್ಟೋ ಸಲ ಕೇಳಿದ್ದೇನೆ. ಹೀಗೆ ನಾನು ಸಂಪಾದಿಸಿರುವ ತಿಳಿವಳಿಕೆಗೆ ಪ್ರತಿಯಾಗಿ, ನನ್ನ ಮಿತ್ರರೊಬ್ಬರ

ಆಳೊಬ್ಬನು ಅವರೊಡನೆ ಲಂಡನ್ನಿಗೆ ಹೋಗಿಬಂದಿದ್ದಾನೆ. ಅವನಿಗೆ ಇಂಗ್ಲಿಷು ಬಾರದು; ಅವನು ಯಾವ ನಕಾಶೆ ಚಿತ್ರಪಟಗಳನ್ನೂ ನೋಡಿದವನಲ್ಲ; ಅವನಿಗೆ ಆಂಗ್ಲೇಯ ಸಮಾಜವನ್ನು ಒಳಹೊಕ್ಕು ನೋಡುವ ಅವಕಾಶ ದೊರೆತಿರಲಿಲ್ಲ. ಹಾಗಿದ್ದರೂ, ಲಂಡನ್ನಿನ ಸತ್ಯವು ನನಗೆ ತಿಳಿದಿರುವುದಕ್ಕಿಂತ ಆ ಆಳಿಗೆ ಹೆಚ್ಚಾಗಿ ತಿಳಿದಿದೆಯೆಂಬುದಕ್ಕೆ ಸಂಶಯವಿರದು. ಅದು ಮಾತಿನಿಂದ ವಿವರಿಸಲಾಗದ ಸ್ವಾನುಭವದ ಸತ್ಯ. ಹೀಗೆ ಮಾನವ ಸ್ವಭಾವ ಪ್ರಕಾಶಕವಾಗಿ, ಸ್ವಾನುಭವೈಕ ಸಿದ್ಧವಾಗಿರುವ ಸತ್ಯವೇ ಕಾವ್ಯಕಾವೇರಿಗೆ ಬ್ರಹ್ಮಗಿರಿ.

ಕಾವ್ಯವನ್ನು ಓದುವುದು ಕರ್ತವ್ಯ ನಿರ್ಬಂಧದಿಂದಲೋ, ಸ್ವತಂತ್ರ ಕುತೂಹಲದಿಂದಲೋ? ಬರಿಯ ಸತ್ಯಕ್ಕಾಗಿ—ಒಣ ಸತ್ಯಕ್ಕಾಗಿ—ಯಾರೂ ಅದನ್ನೋದುತ್ತಿರಲಿಲ್ಲ. ವೈಜ್ಞಾನಿಕ ಸತ್ಯದಲ್ಲಿಲ್ಲದ ಒಂದು ಚಿತ್ತಾಕರ್ಷಣ ಶಕ್ತಿಯು ಕಾವ್ಯ ಸತ್ಯದಲ್ಲಿ—ಹಾರ್ದ ಸತ್ಯದಲ್ಲಿ—ಅಡಗಿರುತ್ತದೆ. ಈ ಶಕ್ತಿಯ ಪರಿಣಾಮವು ಎರಡು ಮೆಟ್ಟಿಲುಗಳಲ್ಲಿ ನಡೆಯುತ್ತದೆ: ಮೊದಲು ಅದು ವಾಚಕನನ್ನು ಅವನ ದೇಹದ ಸುತ್ತಮುತ್ತಲಿನ ಲೋಕದಿಂದ ಬೇರೊಂದು ಲೋಕಕ್ಕೆ—ಚಿನ್ನದ ನೆಲವೂ ಮೃದು ರತ್ನದ "ಸೋಫಾ"ಗಳೂ ಇರುವ ಲೋಕಕ್ಕೆ, ಬಾಡಿಸದ ಬಿಸಿಲೂ ಕೊರೆಯದ ಗಾಳಿಯೂ ಇರುವ ಲೋಕಕ್ಕೆ, ಸಿಂಹವು ಹುಲ್ಲೆಯನ್ನು ಸಾಕುವ ಲೋಕಕ್ಕೆ, ಗೋವು ಹುಲಿಯನ್ನರಸಿ ಹೋಗುವ ಲೋಕಕ್ಕೆ—ಕರೆದೊಯ್ಯುತ್ತದೆ. ಅಲ್ಲಿಯ ಸೊಗಸಿಗೆ ನಾವು ಬೆರಗಾಗಿ ಮೈ ಮರೆಯುತ್ತೇವೆ. ನಮ್ಮ ಲೋಕದಲ್ಲಿ ಯಾವುದನ್ನು ನಾವು ಒಳ್ಳೆಯದೆಂದೂ ಸೊಗಸೆಂದೂ ತಿಳಿದುಕೊಂಡು, ಎಲ್ಲೋ ಒಂದರೆಕ್ಷಣ ಇಲ್ಲಲ್ಲಿ ಚೂರು ಚೂರಾಗಿ ಕಂಡು, ಪೂರ್ತಿಯಾಗಿ ಸ್ಥಿರವಾಗಿ ದೊರೆಯಲಿಲ್ಲವಲ್ಲಾ ಎಂದು ಹಂಬಲಿಸುತ್ತಿರುತ್ತೇವೆಯೋ ಅದನ್ನೆಲ್ಲ—ಆ ಸೌಜನ್ಯ ಸೌಭಾಗ್ಯಗಳನ್ನೆಲ್ಲ—ಕವಿ ತನ್ನ ಕೃತಕ ಲೋಕದಲ್ಲಿ ನಮ್ಮ ಮನೋನಯನದ ಮುಂದೆ ರೂಪುಗೊಳಿಸುತ್ತಾನೆ. ಇದರಿಂದಾಗುವ ಆನಂದವೇ—ಈ ಪಾರವಶ್ಯವೇ—ಕಾವ್ಯಶ್ರೀ ಸೌಧದ ಉಪವನದ ಮಹಿಮೆ. ಅಲ್ಲಿಂದೊಳಕ್ಕೆ ಹೋಗಿ ಅಲ್ಲಿಯ ಜನರನ್ನು ನೋಡಿ ನೋಡಿದಹಾಗೆಲ್ಲಾ—ಅವರ ಪರಿಚಯವು ಹೆಚ್ಚಿದಹಾಗೆಲ್ಲಾ—ಅವರು ಅಷ್ಟೇನು ದೂರದವರಲ್ಲ, ನಮ್ಮ ಜಾತಿಯ ಪ್ರಾಣಿಗಳೇ, ನಮ್ಮ ಬಂಧು ಮಿತ್ರರೇ ಎಂದು ತೋರುತ್ತಬರುವುದು. ನಮ್ಮಂತೆಯೇ ಇವರೂ ಗೋಳಿಡುತ್ತಾರೆ; ಇವರಿಗೂ ಮುಖದ ಮೇಲೆ ಕೆಂಪೇರುತ್ತದೆ; ಇವರೂ ವಿಧಿಯ ಮುಂದೆ ಕೈಲಾಗದವರು—ಹೀಗೆಂಬ ಜ್ಞಾನವು ನಮ್ಮಲ್ಲಿ ಬೆಳೆಯುತ್ತಹೋಗುತ್ತದೆ. ಕಡೆಗೆ, ಆ ಕೃತಕ ಜನರೊಡನೆ ನಾವೂ ಕಣ್ಣೀರಿಡುತ್ತೇವೆ; ಹುಬ್ಬು ಗಂಟುಹಾಕುತ್ತೇವೆ; ಅದೃಷ್ಟ ಶಕ್ತಿಗಳನ್ನು ಹೊಗಳಿ, ಶಪಿಸಿ, ಒಲಿಸಿಕೊಳ್ಳಲು ಯತ್ನಿಸುತ್ತೇವೆ. ಇದನ್ನೇ ಅಲ್ಲವೆ ನಮ್ಮವರು ತಲ್ಲೀನತೆಯೆಂದು ಕರೆದಿರುವುದು? ಈ ಅನುಭವಗಳ ಕೊನೆಯಲ್ಲಿ ನಮ್ಮನ್ನು ನೋಡಿಕೊಂಡು ನಾವೇ ಅಚ್ಚರಿಗೊಳ್ಳುತ್ತೇವೆ. ಆಹಾ! ನಿಜವಾಗಿ ಇಂಥಾ ಗುಣಗಳಿಷ್ಟು ನನ್ನ ಸ್ವಭಾವದಲ್ಲಿರುವುವೆ? ಭರತನಂತೆ ನಾನೂ ನಡೆಯುತ್ತಿದ್ದೆನಲ್ಲವೆ—ರಾಮನಂಥ ಅಣ್ಣನಿದ್ದಿದ್ದರೆ? ಭೀಮನಲ್ಲಿಲ್ಲದ ಕನಿಕರವನ್ನು ನಾನು

ತೋರುತಿದ್ದೆನಲ್ಲವೆ ಕೆಳಗೆ ಬಿದ್ದ ದುರ್ಯೋಧನನಲ್ಲಿ? ಅರ್ಜುನನು ಊರ್ವಶಿಯಲ್ಲಿ ತೋರಿದ ಮರ್ಯಾದೆಯನ್ನು ನಾನು ಅಷ್ಟು ಮೆಚ್ಚಿಕೊಂಡುದು ಹೇಗೆ? ಸುಭದ್ರೆಯಿಂದ ಅವನು ಮೋಹಿತನಾದಾಗಲೂ ನಾನು ಸಮ್ಮತಿಕೊಟ್ಟುದು ಹೇಗೆ?—ಈ ತೆರದ ವಿಚಾರ ಕುಂಚಿಕೆಯು ಹೃದಯ ಕವಾಟವನ್ನು ತೆರೆದು ನಮ್ಮ ಒಳಗಿನ ವಿಶ್ವರೂಪವನ್ನು ನಮಗೆ ತೋರಿಸುವುದು. ನಮ್ಮ ಸ್ವಭಾವವು ದೊಡ್ಡ ಮನೆತನದವರುಡುವ ಭಾರೀ ಸೀರೆಯಂತೆ, ಅಥವಾ ರಾಜಾಸ್ಥಾನದ ವಿದ್ವಾಂಸರು ಸುತ್ತುವ ಭಾರೀ ಶಾಲಿನಂತೆ, ಪದರ ಪದರವಾಗಿರುತ್ತದೆ. ಅದರಲ್ಲಿ ಯಾವ ಮಡಿಕೆಯಲ್ಲಿ ಯಾವ ಜರತಾರಿಯ ಚಿತ್ರವಿದೆಯೋ, ಇನ್ನಾವ ಮಡಿಕೆಯಲ್ಲಿ ಯಾವ ಎಣ್ಣೆಯ ಕರೆಯಿದೆಯೋ ಸಾಧಾರಣ ದಿನದಲ್ಲಿ ನಮ್ಮ ಕಣ್ಣಿಗೆ ಬೀಳುವುದಿಲ್ಲ. ರಸ ಶಕ್ತಿಯು ಅದನ್ನು ಬಿಚ್ಚಿಸಿ ಕಾವ್ಯ ಭಾಸ್ಕರನೆದುರಿಗೆ ಆರಹಾಕಿಸಿದಾಗ ಅದರ ಗೂಢವಾದ ಅಂದ ಕುಂದುಗಳು ನಮ್ಮ ತಿಳಿವಳಿಕೆಗೆ ಬರುತ್ತನೆ. ಇದೊಂದು ಬಗೆಯ ಆತ್ಮ ಜ್ಞಾನ ಲಾಭವಲ್ಲವೆ? ಆತ್ಮ ಲಾಭ ಸಾಧನವಲ್ಲವೆ?

ಕಾವ್ಯೋಪಾಸನೆಯು ಉತ್ತಮ ಆತ್ಮ ಸಂಸ್ಕಾರವೆಂದು ನಾನು ನಂಬಿಕೊಂಡಿದ್ದೇನೆ. ನಮ್ಮ ದೌರ್ಬಲ್ಯಗಳ ಸೀಮೆಯನ್ನೂ, ನಮ್ಮ ಸತ್ಪ್ರೋತ್ಸಾಹದ ಆಳವನ್ನೂ, ನಮ್ಮ ಮನೋರಥಗಳ ಪರಿಪೂರ್ಣ ದಶೆಯನ್ನೂ ಕವಿಯು ವ್ಯಾಜ ಪ್ರಕಾರದಿಂದ ತೋರಿಸಿಕೊಡುತ್ತಾನೆ. ಅವನ ಲೋಕದ ದೇವ ನದಿಯು ನಮ್ಮ ಸ್ವಭಾವವನ್ನು ತೊಳೆದು ಜಾಲಿಸುತ್ತದೆ; ಅಲ್ಲಿಯ ಸೂರ್ಯ ಕಿರಣವು ನಮ್ಮೆದೆಯ ಮೊಗ್ಗನ್ನು ಅರಳಿಸಿ ಸೌರಭವನ್ನು ಹರಡಿಸುತ್ತದೆ. ಅಲ್ಲಿಯ ಗಾಳಿಯ ಸೋಂಕು ನಮ್ಮ ಅಂತರಂಗದ ಮೂಳೆಗಳನ್ನು ಉಕ್ಕಿನ ಕಂಬಗಳನ್ನಾಗಿ ಮಾಡುತ್ತದೆ. ಆದರೆ, ಈ ಇಂದ್ರಜಾಲವನ್ನು ಮಾಡಬೇಕೆಂಬುದು ಅವನ ಉದ್ದೇಶವಾಗಿರಬೇಕಾದುದಿಲ್ಲ. ಇದೇ ಕವಿಕರ್ಮದಲ್ಲಿರುವ ವಿಚಿತ್ರ. ದುಂಬಿಯನ್ನು ರೇಗಿಸಬೇಕೆಂದಲ್ಲ ಮಾಧೂಕವು ಬಿರಿಯುವುದು; ವಿರಹಿಯನ್ನು ನೋಯಿಸಬೇಕೆಂದಲ್ಲ ಕೋಗಿಲೆ ಬಾಯ್ಬಿಡುವುದು. ಸೌಂದರ್ಯದ ಹಾಡನ್ನು ಹಾಡುತ್ತಿರುವುದು ಕವಿಗೆ ಸಹಜ ಧರ್ಮ; ಅದನ್ನು ಕೇಳಿದವನ ಅಂತರಂಗದ ಕಲ್ಲು ಬೆಣ್ಣೆಯಾಗುವುದೂ, ಮಣ್ಣು ವಜ್ರವಾಗುವುದೂ ಮಾನವ ಕುಲಕ್ಕೆ ಸಹಜ ಧರ್ಮ.

ಸೌಂದರ್ಯವೆಂಬುದೇನು? ಅದು ಮನಸ್ಸನ್ನಾಕರ್ಷಿಸಿ ಮೋಹಗೊಳಿಸುವ ಶಕ್ತಿ. ಈ ಶಕ್ತಿಯು ಆಯಾ ವಸ್ತುವಿನ ನಾನಾ ಅಂಶಗಳ ಒಂದು ತೆರದ ಜೋಡಣೆಯಿಂದ, ಒಂದು ಪರಿಯ ಏರ್ಪಾಟಿನಿಂದ, ಹುಟ್ಟುತ್ತದೆ,—ಕಣ್ಣಿಗೆ ಕಾಣುವುದಾದರೆ ರೂಪ ರೇಖೆಗಳ ಮತ್ತು ವರ್ಣಚ್ಛಾಯೆಗಳ ಒಂದು ಪ್ರಕಾರದಿಂದ; ಕಿವಿಗೆ ಕೇಳುವುದಾದರೆ ಸ್ವರ ತಾಳಗಳ ಒಂದು ವಿನ್ಯಾಸದಿಂದ. ಹೀಗೆ ಒಂದು ಪ್ರಕಾರದ ಆಕಾರದಲ್ಲಿಯೇ ಏಕೆ ಆ ಆಕರ್ಷಣೆಯಿರಬೇಕು? ಒಂದು ಕ್ರಮದ ನಾದ ಗತಿಯಿಂದಲೇ ಏಕೆ ಆ ಮೋಹವಾಗಬೇಕು?—ಈ ಪ್ರಶ್ನೆಗಳಿಗೆ ಉತ್ತರವು ಬಹುಶಃ ಸೃಷ್ಟಿಯ ರಹಸ್ಯ ಪೇಟಿಕೆಯಲ್ಲಿರಬಹುದು. ಅದು ನನ್ನ ಕೈಗೆ ಸಿಕ್ಕುವಹಾಗಿಲ್ಲ. ಮಗುವಿನ

ಬಾಯಲ್ಲಿ ಸಕ್ಕರೆಯನ್ನಿಟ್ಟರೆ ಏಕೆ ಚಪ್ಪರಿಸಬೇಕು? ಮೆಣಸಿನ ಪುಡಿಯನ್ನಿಟ್ಟರೆ ಏಕೆ ಕಿರಿಚಬೇಕು? ನಮ್ಮ ಕಣ್ಣಿಗೆ ಆಕಾಶದ ಬಣ್ಣವು ಏಕೆ ಬೇಕಾಗಬೇಕು? ಕತ್ತೆಯ ಬಣ್ಣವು ಏಕೆ ಬೇಡವಾಗಬೇಕು? ಈ ಒಗಟೆಗಳನ್ನು ನಾವೀಗ ಬಿಡಿಸಬೇಕಾದುದಿಲ್ಲ. ಬಹುಶಃ ಮಾನವ ಕುಲದ ಸಾವಿರಾರು ತಲೆಮೊರೆಗಳಲ್ಲಾಗಿರುವ ಅಭ್ಯಾಸವೂ ಸಂಸ್ಕಾರವೂ ನಮ್ಮ ಅಭಿರುಚಿಗಳಿಗೆ ಮುಖ್ಯ ಕಾರಣವಾಗಿರಬಹುದು. ನಮ್ಮ ಈಗಿನ ಪ್ರಸಂಗಕ್ಕೆ ಅನುಭವ ಸಿದ್ಧವಾಗಿರುವ ಒಂದು ಸಂಗತಿಯನ್ನು ಆಧಾರವಾಗಿಟ್ಟುಕೊಂಡರೆ ಸಾಕು: ಆ ಸಂಗತಿ—ನಮ್ಮ ಗೋಚರಕ್ಕೆ ಬರುವ ಕೆಲವು ಆಕೃತಿಗಳಲ್ಲಿ, ಕೆಲವು ವರ್ಣಗಳಲ್ಲಿ, ಕೆಲವು ಧ್ವನಿಗಳಲ್ಲಿ ಆಕರ್ಷಕ ಶಕ್ತಿಯೂ ಮೋಹಕ ಶಕ್ತಿಯೂ ಇರುತ್ತವೆಂಬುದು. ಸುಂದರ ಎಂಬ ಪದವನ್ನು "ಮುದ್ದಾದ", "ಚೆಲುವಾದ" ಎಂಬ ಸಣ್ಣ ಅರ್ಥದಲ್ಲಿ ಬಳಸುವುದುಂಟು; ಇಲ್ಲಿ ನಾವು ಅದನ್ನು ವಿಶಾಲವಾದ ಅರ್ಥದಲ್ಲಿ ತೆಗೆದುಕೊಳ್ಳಬೇಕು: "ಹೃದ್ಯ", "ರಮಣೀಯ", "ಮನೋಹರ" ಎಂಬ ಪದಗಳು ಸೌಂದರ್ಯದ ಕಾರ್ಯವನ್ನು ಸೂಚಿಸುತ್ತವೆ. ಸೌಂದರ್ಯವು ಮನಸ್ಸನ್ನು ಹಿಡಿದು ನಿಲ್ಲಿಸಿಕೊಳ್ಳುವ ಶಕ್ತಿ.

ಈ ಶಕ್ತಿಯಿರುವುದು ಬಹಿರಿಂದ್ರಿಯಗಳಿಗೆ ಗೋಚರಿಸುವ ವಸ್ತುಗಳಲ್ಲಿ ಮಾತ್ರವೇ ಅಲ್ಲ. ಹೊಂಬಿಸಿಲು, ತೆಂಗಾಳಿ, ಮಾಂದಳಿರು, ಮಲ್ಲಿಗೆಯರಲು, ಗಿಳಿವಿಂಡು, ನವಿಲ್ಗರಿ, ಚೆಂದುಟಿ, ಕಿರು ನಗೆ, ಕುಡಿ ನೋಟ—ಇಂಥವು ಮಾತ್ರವೇ ಅಲ್ಲ ಸೌಂದರ್ಯದ ಜನ್ಮ ಸ್ಥಾನಗಳು. ಮಾನವ ಹೃದಯವು ತಾಳುವ ಆವೇಶಗಳಲ್ಲಿಯೂ, ತರುವ ಅವಸ್ಥೆಗಳಲ್ಲಿಯೂ, ಮಾಡಿಸುವ ಚೇಷ್ಟೆಗಳಲ್ಲಿಯೂ ಸೌಂದರ್ಯವುಂಟು; ಹಾಗೆಯೇ, ಅಂತರಾತ್ಮ ಮಹಿಮೆಯಿಂದ ಬುದ್ಧಿಯು ಹೃದಯಕ್ಕೆ ಮಾಡಿಸುವ ಪ್ರತೀಕಾರಗಳೂ, ಹಿಡಿಸುವ ಪ್ರತಿಜ್ಞೆಗಳೂ, ಇಡಿಸುವ ದಂಡಗಳೂ ಸೌಂದರ್ಯಾಸ್ಪದಗಳಾದುವು. ಹೃದಯ ಸಂಕ್ಷೋಭೆ, ಹೃದಯ ಸಂಯಮನ; ವ್ಯಾಮೋಹ, ವಿವೇಕ; ಆವೇಶ, ಸಮಾಧಿ—ಈ ಪರಿಯ ಹಾರ್ದ ಜೀವನವೇ ಕಾವ್ಯ ವಸ್ತು. ಕಾವ್ಯದ ಕನ್ನಡಿಯಲ್ಲಿ ನಮ್ಮ ಅಂತರವಯವಗಳ ಬಗೆಯನ್ನು ನಾವು ನೋಡಿಕೊಳ್ಳುತ್ತೇವೆ; ಮುಮ್ಮೈಯ ಚೆಡಗನ್ನು ಇತರ ಬಗೆಗಳಲ್ಲಿ ತಿಳಿಯಲಾದೀತು; ಆದರೆ ಹಣೆಯ ತಿಲಕವನ್ನಾಗಲಿ ಬೆನ್ನಿನ ಗಂತಿಯನ್ನಾಗಲಿ ಕಾಣಲು ಕನ್ನಡಿಗೇ ಹೋಗಬೇಕು. ಕಾವ್ಯ ಮುಕುರದ ಬಿಂಬದಲ್ಲಿ ಈ "ನಮ್ಮ" ತನವು—ಈ ಆತ್ಮ ಬಾಂಧವ್ಯವು—ಇರುವುದರಿಂದಲೇ ಅದು ನಮಗೆ ಪ್ರಿಯವಾಗುತ್ತದೆ. ಮನೋರಾಜ್ಯದಲ್ಲಿ ರಾಗ, ಭಾವ, ಸಂಶಯ, ಭಯ, ಹಟ, ತಾಳ್ಮೆ—ಈ ನಾನಾ ಪ್ರಜೆಗಳು ಹೇಗೆ ಹೇಗೆ ಚಳವಳ ನಡೆಸಬಹುದೋ, ಆತ್ಮರಾಜನು ಅವುಗಳನ್ನು ಹೇಗೆ ಆಳಬಹುದೋ ಅದನ್ನು ಕವಿಯು ಚಿತ್ರಿಸಿರುತ್ತಾನೆ. ರಾಮನ ಅಸಂಶಯ ಸ್ನೇಹ, ಲಕ್ಷ್ಮಣನ ಅವ್ಯಾಜ ಪ್ರೀತಿ, ಧರ್ಮರಾಯನ ಅಜಾತ ಶತ್ರುತೆ, ನಳನ ವಿರಹ ವ್ಯಥೆ, ಕರ್ಣನ ಹುಚ್ಚು ಔದಾರ್ಯ, ಅಶ್ವತ್ಥಾಮನ ಹುಚ್ಚು ಶೌರ್ಯ, ಉತ್ತರನ ಕ್ಷಣಿಕ ಪ್ರತಾಪ, ದುರ್ಯೋಧನನ ಕರ್ಣ ಪ್ರಲಾಪ, ರಾವಣನ ನಿಶ್ಚಲ ವೈರ, ಭೀಷ್ಮನ ಸ್ವಾಮಿ ನಿಷ್ಠೆ, ವಿಭೀಷಣನ "ದಂಗೆ", ಸುರುಚಿಯ ಈರ್ಷ್ಯೆ, ಸತ್ಯಭಾಮೆಯ ಸತ್ಯಾಗ್ರಹ—ಈ ನಾನಾ ಉದ್ವೇಗ

ಗಳೂ ವಿಲಾಸಗಳೂ ವೀರವ್ರತಗಳೂ ಯಾರ ಮನಸ್ಸಿನಲ್ಲಿ ತಾನೆ ಪ್ರತಿಧ್ವನಿಗಳನ್ನು ಹುಟ್ಟಿಸುವುದಿಲ್ಲ? ಕಾವ್ಯಭೂಮಿಯಲ್ಲಿ ಜೀವನು ಹೃದಯ ಲೀಲೆ, ಆತ್ಮ ಶಿಕ್ಷೆ—ಇವೆರಡರ ನಡುವೆ ಬಿದ್ದು ಹೊರಳಾಡುತ್ತಿರುತ್ತಾನೆ. ಅದರ ಸಂದರ್ಶನವು ಆತ್ಮ ಸಂಸ್ಕಾರವಲ್ಲದಿದ್ದರೆ ಆ ಸಂಸ್ಕಾರವು ಇನ್ನೆಲ್ಲಿ ದೊರೆತೀತು?

ವಿಶ್ವ ಪ್ರಕೃತಿ ಮಾನವ ಪ್ರಕೃತಿಗಳಲ್ಲಿರುವ ವಿಶೇಷ ಶಕ್ತಿಗಳು, ವಿಚಿತ್ರ ಕಾಂತಿಗಳು, ವಿವಿಧ ಮಹಿಮೆಗಳು—ಇವೇ ಸೌಂದರ್ಯಗಳ ಬೇರು. ಸೌಂದರ್ಯವೆಂದರೆ ಶೃಂಗಾರ ಮಾತ್ರವೇ ಅಲ್ಲವೆಂದು ಹಿಂದೆಯೇ ಹೇಳಿದ್ದೇನೆ. ಕಾವ್ಯ ಕಲೆಗಳ ಸೌಂದರ್ಯದಲ್ಲಿ ಕರುಣೆ, ರೌದ್ರ, ಅದ್ಭುತ, ಹಾಸ್ಯ—ಇವೆಲ್ಲವೂ ಸೇರಿವೆ. ಈ ನಾನಾ ಸೌಂದರ್ಯಗಳಲ್ಲಿ ಕೆಲವು ಸಮಾಧಾನಕಾರಿಗಳು, ಕೆಲವು ಕಾರ್ಯ ಪ್ರೇರಕಗಳು. ಬ್ರಹ್ಮಗಿರಿಯ ಮೇಲೆಯೋ ಗಗನಚುಕ್ಕಿಯ ಮುಂದೆಯೋ ಮಂಕು ಬಡಿದವನಂತೆ ನಿಂತಾಗ ಆಗುವುದು ಸಮಾಧಾನ—ಬರಿಯ ಸಮಾಧಾನ; ಜಕಣಾಚಾರಿಯ ಮಕ್ಕಳು ನಮ್ಮ ಕಣ್ಣು ರೆಪ್ಪೆಗಳನ್ನು ಅಗಲಿಸಿ ನಿಲ್ಲಿಸಿದಾಗ, ಶೇಷಣ್ಣನವರ ವೀಣೆ ನಮ್ಮ ನಾಲಗೆಯನ್ನು ಕಟ್ಟಿದಾಗ ಆಗುವುದು ಸಮಾಧಾನ—ಬರಿಯ ಸಮಾಧಾನ. ಅದರಿಂದ ಹೊಟ್ಟೆ ತುಂಬುವುದಿಲ್ಲ; ಇನ್ನಾವ ಕೆಲಸವೂ ಆಗುವುದಿಲ್ಲ. ಆದರೆ, ಹಂಪೆಯ ಹಾಳು ಗುಡಿಗಳನ್ನು ನೋಡಿದಾಗ, ವಂದೇ ಮಾತರಂ ಗೀತವನ್ನು ಕೇಳಿದಾಗ, ಅಮೃತಸರದ ಕಥೆಯನ್ನು ನೆನೆದಾಗ, ಬಡತನದ ಕಷ್ಟವು ಕಣ್ಣು ಮುಂದೆ ಬಂದಾಗ ಆಗುವುದು ಕಾರ್ಯ ಪ್ರೇರಣೆ. ಹೀಗೆ ಎರಡು ಬಗೆಯ ಸ್ಥಿತಿಗಳನ್ನುಂಟಾಗಿಸುವ ಸೌಂದರ್ಯಗಳೂ ಕಾವ್ಯದಲ್ಲಿರುತ್ತವೆ. ಮಾನವ ಸ್ವಭಾವದಲ್ಲಿ ಯಾವ ಯಾವದು ಬಚ್ಚಿಟ್ಟುಕೊಂಡಿರುತ್ತದೆಯೋ, ಯಾವ ಯಾವದು ಅಲ್ಲಿ ಎದ್ದು ಕೆಲಸ ಮಾಡಿ ಅವನ ಜೀವನವನ್ನು ಪ್ರೇರಿಸಿ ರೂಪುಗೊಳಿಸಬಲ್ಲುದೋ, ಅದೆಲ್ಲವೂ ಅವನ ಪಾಲಿಗೆ ಸತ್ಯ; ತನಗೇ ಸಂಬಂಧಪಟ್ಟಿರುವ ಕಾರಣ ಅದರ ನೋಟವು ಅವನಿಗೆ ಸುಂದರ. ಯಾವ ಯಾವದು ಮಾನವನಿಗೆ ಸುಂದರವೋ, ಯಾವ ಯಾವದು ಅವನ ಮನಸ್ಸನ್ನು ಕೆಣಕಿ ಅವನ ಶಕ್ತಿಗಳನ್ನೆಬ್ಬಿಸಬಲ್ಲುದೋ, ಆ ಸಂದರ್ಭಗಳೇ ಅವನ ಪಾಲಿಗೆ ಸತ್ಯ. ಹೀಗೆ ಜೀವನೋಪಯುಕ್ತವಾದ ಸತ್ಯ, ಜೀವನೋತ್ತೇಜಕವಾದ ಸೌಂದರ್ಯ—ಇವುಗಳನ್ನು ಹಿಡಿದು ಕೆಲಸ ಮಾಡುವವನು ಕವಿ. ಅವನ ಸಾಮಗ್ರಿಗೆ ಮಿತಿಯಿಲ್ಲ; ಅವನ ಕಾರ್ಖಾನೆಗೆ ಕೊನೆಯಿಲ್ಲ. ಮಾನವ ಸ್ವಭಾವದ ವೃತ್ತಿ ಪ್ರವೃತ್ತಿಗಳ ಖಾನೇಷುಮಾರಿ ಯಾರಿಗೆ ಸಾಧ್ಯ? ನಕ್ಷತ್ರಗಳನ್ನೆಣಿಸಿಯಾರು; ಸಮುದ್ರ ವೀಚಿಗಳನ್ನು ಗುಣಿಸಿಯಾರು; ಈ ಸಣ್ಣ ಎದೆಯೊಳಗಿನ ಸದ್ದುಗದ್ದಲಗಳು ಇಷ್ಟೇ ಎಂದು ಯಾರೂ ಹೇಳಲಾರರು.

ಸ್ವಭಾವ, ಸತ್ಯ, ಸೌಂದರ್ಯ, ಧರ್ಮ, ಆನಂದ, ಜೀವನ—ಇವೆಲ್ಲವೂ ಕವಿಗೆ ಒಂದೇ ವಸ್ತುವಿನ ಅನೇಕ ಪ್ರಕಾರಗಳು.

| | |
|---|---|
| ನಿಯತಿ ಕೃತ ನಿಯಮ ರಹಿತಾಂ | ನಿರ್ಬಂಧವಿಲ್ಲದ್ದು, |
| ಹ್ಲಾದೈಕಮಯೀಂ | ಕೇವಲ ಸಂತೋಷರೂಪವಾದದ್ದು, |
| ಅನನ್ಯ ಪರತಂತ್ರಾಂ | ಇತರರ ಅಪ್ಪಣೆ ಅಡ್ಡಿಗಳಿಗೆ ಒಳಪಡದ್ದು |

ಎಂದು ಮಮ್ಮಟ ಭಟ್ಟರು ಕವಿಧರ್ಮವನ್ನು ವರ್ಣಿಸಿದ್ದಾರೆ. ಅದೇ ಪರಮ ಸಿದ್ಧಾಂತ. ಕವಿಯು ಲೋಕ ನಿರ್ಮಿತಿಯಲ್ಲಿ ಅವನು ಸ್ವತಂತ್ರನು; ಅವನ ಕಾರ್ಯವು ಅವನ ಆತ್ಮಸಂತೋಷದಿಂದ ನಡೆಯತಕ್ಕುದು. ಇಲ್ಲಿ "ಹ್ಲಾದ"ವೆಂದರೆ ಭೋಗ ಸಂತೃಪ್ತಿಯಿಂದಲ್ಲ; ಅಪೂರ್ವ ಸೌಂದರ್ಯ ಸಾಕ್ಷಾತ್ಕಾರದಿಂದ ಅವನಿಗಾಗುವ ಆನಂದಾತಿಶಯ. ಆ ಸೌಂದರ್ಯವು ನಮ್ಮ ಸ್ಮೃತಿ ಶಿಷ್ಟಾಚಾರಗಳನ್ನು ಮೀರಿ, ಹೊಸ ಸಮಾಜ-ನೀತಿಗೆ ದಾರಿಬಿಡಿಸುವುದು ಕೂಡ ಆಗಬಹುದು. ಪರಂಪರೆ ಯಿಂದ ಬಂದಿರುವ ನೀತಿ ವ್ಯವಸ್ಥೆಯೇ ಸರಿ ಎಂದು ಅವನು ಒಪ್ಪಬೇಕಾದುದಿಲ್ಲ. ಇರುವುದೆಲ್ಲ ಸರಿ ಎಂಬವನು ಹೊಸದನ್ನು ಬಯಸುವುದು ಹೇಗೆ? ತನ್ನ ಸುತ್ತ ಮುತ್ತಲಿನ ಸಂದರ್ಭಗಳಲ್ಲಿ ಯಾವುದೋ ಕೊರತೆಯಿದೆ, ಯಾವುದೋ ಕೆಟ್ಟಿದೆ— ಎಂಬ ಕೊರಗಿನಿಂದಲೇ ಅವನಿಗೆ ಕಾವ್ಯಪ್ರೇರಣೆಯಾಗಬಹುದು. ಆಗ ಅವನು ಒಂದು ಆದರ್ಶಲೋಕವನ್ನು, ಒಂದು ಸರ್ವಾಂಗಸುಂದರ ಸಮಾಜವನ್ನು, ಸೃಷ್ಟಿಸ ಹೊರಡುವನು. ಹೀಗೆ ಆಗುವುದೇ ಸಂಕ್ಷೋಭೆಯ ಸಾಹಿತ್ಯ. ಅವನು ಸುಧಾರಣೆಯ ಪಟ್ಟಿಗಳನ್ನು ತಯಾರು ಮಾಡಿಕೊಡುವುದಿಲ್ಲ; ಅಂಥಾ ಪಟ್ಟಿ ಗಳನ್ನು ಇತರರು ತಯಾರಿಸಲು ಬೇಕಾದ ಪ್ರೇರಣೆಯನ್ನೊದಗಿಸುತ್ತಾನೆ. ಹೀಗೆ ಕವಿಯು ಧರ್ಮಕ್ಕೆ ಹೊಸ ಉಡುಗೊರೆಗಳನ್ನು ತೊಡಿಸಲು ಕೂಡ ಅರ್ಹ ನಾಗುತ್ತಾನೆ.

ಕಾವ್ಯದಲ್ಲಿ ಬುದ್ಧಿ ಕಾರ್ಯ ಹೆಚ್ಚೆ? ಹೃದಯ ಕಾರ್ಯ ಹೆಚ್ಚೆ? ವಿಚಾರ ಹೆಚ್ಚೆ? ಆವೇಶ ಹೆಚ್ಚೆ? ಕೇವಲ ಬುದ್ಧಿಕಾರ್ಯವು ಶಾಸ್ತ್ರವಾಗುವುದು; ಬುದ್ಧಿಯ ಸ್ಪರ್ಶವೇ ಇಲ್ಲದ ಶಬ್ದೋದ್ಗಾರವು ಅಸಂಬದ್ಧ ಪ್ರಲಾಪವೆನಿಸುವುದು. ಒಳ್ಳೆಯ ಕಾವ್ಯದಲ್ಲಿ ಮನೋಬುದ್ಧಿಗಳೆರಡೂ ಬಟ್ಟೆಯ ಹಾಸು ಹೊಕ್ಕುಗಳಂತೆ, ಸೂರ್ಯ ಕಿರಣದ ಬೆಳಕು ಶಾಖಗಳಂತೆ, ಒಂದಾಗಿ ಸೇರಿರುತ್ತವೆ. ಅವೆರಡರ ಪರಸ್ಪರ ಪರಿಮಾಣಗಳಲ್ಲಿ ಪಂಕ್ತಿಯಿಂದ ಪಂಕ್ತಿಗೆ ವ್ಯತ್ಯಾಸವಿರಬಹುದು. ಆದರೆ, ದೀಪಕ್ಕೆ ಎಣ್ಣೆ ಬತ್ತಿಗಳೆರಡೂ ಬೇಕಾಗಿರುವಂತೆ, ಕಾವ್ಯಕ್ಕೆ ಉದ್ವೇಗ ಪ್ರಸಾದಗಳೆರಡೂ ಬೇಕು. ಮ್ಯಾತ್ಯೂ ಆರ್ನಾಲ್ಡ್ ಕವಿಯು* ಒಂದು ಉಪಾಖ್ಯಾನವನ್ನು ಹೇಳಿದ್ದಾನೆ: ಇಟಲೀ ದೇಶದ ಕವಿಯೊಬ್ಬನು ಒಂದು ಹಬ್ಬದ ದಿವಸ ಜನರ ವಿನೋದ ಕೂಟವನ್ನು ನೋಡುವು ದಕ್ಕೆಂದು ತನ್ನ ಹೆಂಡತಿಯೊಡನೆ ಊರ ಚೌಕಕ್ಕೆ ಬಂದನು. ಆಕೆ ಪ್ರಾಯದವಳು, ಸುಂದರಿ, ಉಡಿಗೆ ತೊಡಿಗೆಗಳಿಂದ ಸಿಂಗಾರವಾಗಿ ಬಂದಿದ್ದಳು. ಅವರು ಅಲ್ಲಿದ್ದ ಒಂದು ಮರದ ಹಲಗೆಯ ಜಗಲಿಯ ಮೇಲೆ ಕುಳಿತುಕೊಂಡರು; ಆದರೆ ಅಕಸ್ಮಾ ತ್ತಾಗಿ ಆ ಜಗಲಿಯ ಕೆಳಕಂಬವೊಂದು ಮುರಿಯಲು, ಆ ಹಲಗೆಗಳು ಕುಸಿದು, ಅವುಗಳ ಮೇಲಿದ್ದ ಆ ಸುಂದರಿಯು ಉರುಳಿಬಿದ್ದು ಸತ್ತಳು. ಆಗ ಅಲ್ಲಿ ನೆರೆದ ಜನರು ಶವವನ್ನು ಪರೀಕ್ಷಿಸಿ ನೋಡುತ್ತಾರೆ; ಅದೊಂದು ವಿಚಿತ್ರ! ಆಕೆಯ ಸೊಗಸಿನ ಉಡುಪುಗಳ ಒಳಗಡೆ ಚರ್ಮಕ್ಕಂಟಿಕೊಂಡಿದ್ದದ್ದು ವಿರಕ್ತಿ ಸೂಚಕ

* Matthew Arnold's sonnet: *Austerity of Poetry.*

ವಾದ ನಾರು ಮಡಿ (ಅಥವಾ, ಕಾವಿಯ ಬಟ್ಟೆ). ಹೀಗಿರತಕ್ಕವಳು ಕಾವ್ಯದೇವಿ; ಮೇಲೆ ಅಲಂಕಾರ, ಒಯ್ಯಾರ, ಒಲಪು; ಒಳಗೆ ಚಿಂತೆ, ಪ್ರಜ್ಞೆ, ಶಮೆ.

ಕವಿ ಮನೋಧರ್ಮದ ಬೀಜಾಂಶವು ಪ್ರಾಕೃತ ರೂಪದಲ್ಲಿ ಸಮ್ಮೆಲ್ಲರಲ್ಲಿಯೂ ಅವ್ಯಕ್ತವಾಗಿ, ಅಥವಾ ಸ್ವಲ್ಪ ವ್ಯಕ್ತವಾಗಿ ಇರುತ್ತದೆ; ಅವನಲ್ಲಿ ಅದು ಪೂರ್ಣ ವ್ಯಕ್ತ ವಾಗುತ್ತದೆ. ಅವನ ಸಂಪತ್ತಿನ ಅಲ್ಪಾಂಶವಾದರೂ ನಮ್ಮಲ್ಲಿರುವುದರಿಂದಲೇ ಅವನಾಡುವ ಮಾತು ನಮಗೆ ಅರ್ಥವಾಗಿ ನಮ್ಮೆದೆಯು ಅವನೆದೆಯೊಡನೆ ಬೆರೆಯು ವಂತಾಗುತ್ತದೆ. ಕಾವ್ಯವು ಹೃದಯದ ಭಾಷೆಯ ಒಂದು ಭಾಗ, ಆ ಭಾಷೆಯ ಇನ್ನೊಂದು ಭಾಗವು ಸಂಗೀತ. ಹೃದಯ ಗುಹೆಯ ಮಧ್ಯಾಂಗಣದಲ್ಲಿ ತುಂಬಿ ಕೊಳ್ಳುವುದು ಕವಿವಾಕ್ಕು; ಅದರ ಮೂಲೆ ಮೊಡಕುಗಳಲ್ಲಿ ವ್ಯಾಪಿಸುವುದು ಗಾಯಕ ಧ್ವನಿ. ಒಂದು ಗುಲಾಬಿ, ಇನ್ನೊಂದು ಪನ್ನೀರು; ಒಂದು ಸಕ್ಕರೆ, ಇನ್ನೊಂದು ಕೀರು. ಈ ಎರಡು ಬಗೆಯ ಭಾಷೆಗಳೂ ಮಾನುಷ ಹೃದಯಕ್ಕೆ ಸಹಜವಾದುದೆಂಬುದನ್ನು ಎಳೆಮಕ್ಕಳ ನಡತೆಯಲ್ಲಿಯೇ ಕಾಣಬಹುದು. ಅವರೇ ನಾದರೂ ವಿಶೇಷವನ್ನು ಕಂಡಾಗ—ಮೋಟಾರು ಹೊರಡುವ ಶಬ್ದವನ್ನು ಕೇಳಿದಾಗ, ಸರ್ಕಸ್ಸಿನ ವಿಚಿತ್ರಗಳನ್ನು ನೋಡಿದಾಗ,—ತಮಗಾಗುವ ಆಶ್ಚರ್ಯವನ್ನೂ ಸಂತೋಷವನ್ನೂ ತಮ್ಮಲ್ಲೇ ಇಟ್ಟುಕೊಳ್ಳಲಾರದೆ ಕಂಠದಿಂದಲೂ ಕೈಯಿಂದಲೂ ಅನುಕರಿಸಿ ತೋರಿಸುತ್ತಾರೆ; ಅದು ಮೂಕ ಕವಿತೆ; ಅಳುವಾಗ, ಹಾಡಿದರೆ ಸುಮ್ಮ ನಾಗುತ್ತಾರೆ; ಅದು ಗಾನ ರಸಿಕತೆ. ನಾವು ಬೆಳೆದಂತೆ ನಮ್ಮ ದೃಷ್ಟಿ ಪಾಟವವೂ ನಮ್ಮ ವಚನ ವೈಭವವೂ ಬೆಳೆಯದಿರುವುದರಿಂದ ದೊಡ್ಡವರಾದ ಮೇಲೆ ನಾವು ಮೂಕರಾಗಿಯೇ ನಿಂತುಬಿಡುತ್ತೇವೆ; ಕವಿ ಮಾತ್ರ ಉತ್ಕಟಾನುಭವಗಳನ್ನು ಅನುಭವಿಸುತ್ತಲೂ ಅವುಗಳ ಹೊರೆಯನ್ನಿಳಿಸಿಕೊಳ್ಳಬೇಕೆಂಬ ಸ್ವಾಭಾವಿಕ ಪ್ರವೃತ್ತಿ ಯಿಂದ ಅವುಗಳನ್ನು ಕಾವ್ಯ ರೂಪದಲ್ಲಿ ಹೊರಗೆಡಹುತ್ತಲೂ ಹೋಗುತ್ತಾನೆ. ಆ ಕಾವ್ಯವು ನಮ್ಮಲ್ಲಡಗಿ ನಿದ್ರಿಸುತ್ತಿರುವ ಕವಿ ಮೂಲ ಗುಣವನ್ನು ಎಬ್ಬಿಸಿ ಕೆಲಸ ಮಾಡಿಸುತ್ತದೆ.

ಕಾವ್ಯ ಸೌಂದರ್ಯ ದರ್ಶನವು—ರಸಾನುಭವವು—ವೈಯಕ್ತಿಕ ಸಾಕ್ಷ್ಯ ವುಳ್ಳದ್ದು; ಅದು ಪ್ರತಿ ಮನುಷ್ಯನಿಗೂ ಅವನ ಮನೋಧರ್ಮ ಸಂಸ್ಕಾರಗಳಿಗನು ಗುಣವಾಗಿರುತ್ತದೆ; ಆದ್ದರಿಂದ, ಕಾವ್ಯ ವಿಮರ್ಶೆಯಲ್ಲಿ ಐಕಮತ್ಯವು ಸಾಧ್ಯವಿಲ್ಲ; "ಲೋಕೋ ಭಿನ್ನರುಚಿಃ" ಎಂದು ಹೇಳಿದೆ. ಅದು ಸಂಪೂರ್ಣ ವಾಕ್ಯವಲ್ಲ; ಅರ್ಧ ವಾಕ್ಯ. ಉಳಿದರ್ಧ ಇಲ್ಲಿದೆ: ಒಂದು ಅಂತಸ್ತಿನ ವರೆಗೂ ನಮ್ಮಲ್ಲಿ ಐಕಮತ್ಯವು ಪ್ರಕೃತಿ ಸಿದ್ಧವಾಗಿರುತ್ತದೆ. ಇದು ಮಾನವ ಕುಲದ ಸಾಮಾನ್ಯಾನುಭವ ಸಾಮಾನ್ಯ ಸಂಸ್ಕಾರಗಳ ಫಲವಿರಬಹುದು. ನಮ್ಮ ಹೊರಗಣ ಅಭಿರುಚಿಗಳನ್ನು ನೋಡೋಣ: ಕಬ್ಬು ಎಲ್ಲರಿಗೂ ಸಿಹಿಯೇ, ಬೇವು ಎಲ್ಲರಿಗೂ ಕಹಿಯೇ; ಆದರೆ ಅವೆರಡರ ನಡುವೆ, ಬೆಲ್ಲ ಸಕ್ಕರೆಗಳಲ್ಲಿ, ಹೇರಳೆ ಹಾಗಲಗಳಲ್ಲಿ, ಒಬ್ಬೊಬ್ಬರಿಗೆ ಒಂದೊಂದು ಇಷ್ಟವಾಗಿರು ತ್ತದೆ. ಹಾಲು, ಮೊಸರು, ಮಜ್ಜಿಗೆ, ಕಾಫಿ, ಟೀ—ಇವುಗಳಲ್ಲಿ ಒಬ್ಬೊಬ್ಬರಿಗೆ

ಒಂದೊಂದು ಹಿತವಾಗಿರುತ್ತದೆ. ಹಾಗೆಯೇ, ಶ್ರೀಗಂಧವು ಎಲ್ಲ ಮೂಗುಗಳಿಗೂ ಇಷ್ಟವೇ; ಅದರಿಂದ ಕೆಳಕ್ಕೆ ಸೇವಂತಿ, ಚಂಡುಮಲ್ಲಿಗೆ, ಸಸ್ಯ, ಹಿಂಗು, ಗೋಮಯ— ಈ ದರ್ಜೆಗಳಿಗಿಳಿದರೆ ಕೆಲವು ಮೂಗುಗಳಂತೂ ಸುಖಪಡಲಾರವು. ಹೀಗೆಯೇ, ಕಾವ್ಯ ವಸ್ತು, ಕಾವ್ಯ ಸನ್ನಿವೇಶಗಳ ಅನುಭವವೂ ಕೂಡ. ನಮ್ಮ ಪುಣ್ಯಾವಶದಿಂದ ಕವಿಯು—ಪ್ರತಿಭೆಯೊಂದರ ಹೊರತು ಮಿಕ್ಕ ವಿಷಯಗಳಲ್ಲಿ—ಸಾಮಾನ್ಯ ಮನುಷ್ಯ ನಾಗಿಯೇ ಇರುತ್ತಾನೆ. ಅವನಿಗೂ ವಾಚಕರಿಗೂ ಎಷ್ಟೋ ಗುಣಧರ್ಮಗಳು ಸಮಾನವಾಗಿರುತ್ತವೆ. ಈ ಸಾಮಾನಾಧಿಕರಣ್ಯವಿರುವಷ್ಟರ ಮಟ್ಟಿಗೆ ಅವರಲ್ಲಿ ಅಭಿಪ್ರಾಯೈಕ್ಯವು ತೋರಿಬರುತ್ತದೆ. ಇದರಿಂದಲೇ ವಾಲ್ಮೀಕಿಯನ್ನೂ ಪಂಪನನ್ನೂ ಎಲ್ಲರೂ ಮೆಚ್ಚುವುದು ಸಾಧ್ಯವಾಗಿರುವುದು. ಅಲ್ಲಿಂದ ಮುಂದಕ್ಕೆ ಸಾಮಾನಾಧಿ ಕರಣ್ಯವು ಎಷ್ಟೆಷ್ಟು ತಪ್ಪಿಹೋಗುವುದೋ ಅಭಿಪ್ರಾಯ ವ್ಯತ್ಯಾಸವು ಅಷ್ಟಷ್ಟು ಹೆಚ್ಚುವುದು. ಆದರೆ, ಈ ಅಭಿಪ್ರಾಯ ವೈಷಮ್ಯಗಳು ನಿಜವಾದ ಕವಿಯನ್ನು ನೋಯಿಸಲಾರವು. ಅವನು ತನ್ನ ಪ್ರತಿಭೆಗೆ ತೋರಿದ ಸತ್ಯ, ತನ್ನ ಕಲ್ಪನೆಗೆ ಒಗ್ಗಿದ ಸೌಂದರ್ಯ—ಇಷ್ಟಕ್ಕೆ ಮಾತ್ರವೇ ಬಾಧ್ಯನು; ಉಳಿದುದು ಅವನೆಣಿಕೆಗೆ ಬಾರದು. "ಕಾಲೋಹ್ಯಯಂ ನಿರವಧಿರ್ವಿಪುಲಾ ಚ ಪೃಥ್ವೀ" ಎಂದು ಅವನು ಕಾದಿರುವನು. ಈ ಮುದ್ರಣ ಯಂತ್ರದ ಕಾಲದಲ್ಲಿ ಗ್ರಂಥ ನಷ್ಟದ ಭಯವೇನೂ ಇಲ್ಲ.

ಇಷ್ಟು ದೂರ ಕಾವ್ಯದ ಒಳಮೈಯನ್ನು ಕುರಿತು ಹೇಳಿದ್ದಾಯಿತು. ಇನ್ನು, ಅದರ ಹೊರಮೈಯೆಂದರೆ ಮಾತುಗಳು, ಮಾತುಗಳ ಜೋಡಣೆ—ಇದನ್ನು ಕುರಿತು ಹೇಳಬೇಕಾದುದನ್ನೆಲ್ಲ ಕೇಶಿರಾಜನು ಸಂಗ್ರಹವಾಗಿ—

> ಶ್ರೀವಾಗ್ದೇವಿಗೆ—ಶಬ್ದದಿ—
> ನಾವಾವಿಂದ್ರಿಯದ ವಿಷಯಮಂ ಶ್ರೋತ್ರದೊಳು
> ದ್ಭಾವಿಪ ನಿರ್ಮಲ ಮೂರ್ತಿಗೆ......

ಎಂಬ ವಾಕ್ಯಖಂಡದಲ್ಲಿ ಅಡಗಿಸಿದ್ದಾನೆ. ಎಲ್ಲ ಇಂದ್ರಿಯಗಳು ಉಂಟುಮಾಡಿಕೊಡುವ ಅನುಭವಗಳನ್ನೂ ಮನಸ್ಸಿಗೆ ಕಿವಿಯೊಂದರ ಮೂಲಕ ಮಾಡಿಸಿಕೊಡುವುದೇ ಶಬ್ದದ ಮಹಿಮೆ. ಕವಿಯು ನಮಗೆ ಕೊಡಲೆಳಸುವ ಅನುಭವಗಳು ಲೋಕೋತ್ತರವಾದುವು; ಆದ್ದರಿಂದ ಅವನ ಶಬ್ದ ಪ್ರಯೋಗದಲ್ಲಿ ವಿಶೇಷ ಮಹಿಮೆಯಿರಬೇಕು. ಈ ಮಹಿಮೆ ಯಿಂದ ಎರಡು ಕೆಲಸಗಳಾಗಬೇಕು: ಮೊದಲು, ಶಬ್ದವು ವಾಚಕನ ಕಿವಿಯನ್ನು ಮೆಚ್ಚಿಸಿ, ಅಥವಾ ಬೆರಗಾಗಿಸಿ, ಆ ಮನಸ್ಸಿನ ದ್ವಾರಪಾಲಕನನ್ನು ಸ್ವಾಧೀನಪಡಿಸಿ ಕೊಳ್ಳಬೇಕು. ಆಮೇಲೆ, ಮನಸ್ಸಿನ ರಂಗದಲ್ಲಿ ಕವಿಯ ಲೋಕದ ಜನರನ್ನು ನೆಲೆಗೊಳಿಸ ಬೇಕು. ಈ ಎರಡು ಕೆಲಸಗಳನ್ನೂ ಏಕಕಾಲದಲ್ಲಿ ಮಾಡುವ ಶಕ್ತಿ ಅನೇಕ ಪದ ಗಳಿಗಿರುತ್ತದೆ. ಲಲಿತ, ಗಂಭೀರ, ಅದ್ಭುತ—ಈ ಪದಗಳು ಕಿವಿಗೆ ತಾಕಿದಂತೆಯೇ ಅವುಗಳ ಭಾವಗಳೂ ಮನಸ್ಸಿಗೆ ಬೋಧೆಯಾಗುತ್ತವೆ. ಈ ಬಗೆಯ ಪದ ಶಕ್ತಿಯನ್ನು —ನಮ್ಮ ಪೂರ್ವದ ಆಲಂಕಾರಿಕರು ಹೇಳಿರುವ ಅರ್ಥವನ್ನು ಸ್ವಲ್ಪ ವಿಸ್ತಾರ ಮಾಡಿ

—ಧ್ವನಿಶಕ್ತಿಯೆಂದು ಕರೆಯಬಹುದು. ಈ ಶಕ್ತಿಯ ಶ್ರವಣ ಹಿತ ಭಾಗವು ಅಕ್ಷರೋಚ್ಚಾರಣೆಯಿಂದ ಆಗುವುದು :

"ಲಲಿತ ಲವಂಗ ಲತಾ ಪರಿಶೀಲನ ಕೋಮಲ ಮಲಯ ಸಮೀರೇ"
"ಗರ್ಜದ್ದುರ್ಜಯ ಗಂಧ ಸಿಂಧುರ ಘಟಾ ಸಂಘಟ್ಟನಷ್ಟಾಷ್ಟ ದಿಕ್"
"ಮುಳಿದೆಚ್ಚಾಗಳ್ ಮಹೋಗ್ರ ಪ್ರಳಯ ಶಿಖಿ ಶಿಖಾನೀಕಮಂ ವಿಸ್ಫುಲಿಂಗಂ"

"ಅಡ್ಡಮೋರೆಯ ಗಂಟು ಮೂಗಿನ
ಜಡ್ಡು ದೇಹದ ಗುಜ್ಜುಗೊರಲಿನ"



ಕೆಲವು ಅಕ್ಷರಗಳ ಸೋಂಕು ಹೊಡೆತಗಳು ಕೆಲವು ಬಗೆಯ ಕಿವಿಯ ನರಗಳನ್ನು ಕೆಲವು ವಿಶೇಷ ರೀತಿಗಳಲ್ಲಿ ಕೆಣಕತಕ್ಕವಾಗಿರುತ್ತವೆ. ದೃಷ್ಟಾಂತಕ್ಕಾಗಿ—(೧) ತ, ಟ, ಡ; (೨) ಲ, ಳ, ಡ; (೩) ಸ, ಶ, ಷ—ಈ ಮೂರು ಗುಂಪುಗಳ ಅಕ್ಷರಗಳು ಉಚ್ಚಾರಣೆಯಲ್ಲಿ ಒಂದಕ್ಕೊಂದು ಹತ್ತಿರ ಹತ್ತಿರದುವಾಗಿ ಕಾಣುತ್ತವೆ; ಆದರೆ, ಕಾವ್ಯ ಪಂಕ್ತಿಯಲ್ಲಿ ಅವು ಸೇರಿದಾಗ, ಕಿವಿಯ ಮೇಲೆ ಅವುಗಳಿಂದಾಗುವ ಪರಿಣಾಮದಲ್ಲಿ ವ್ಯತ್ಯಾಸವು ವಿಶೇಷವಾಗಿರುತ್ತದೆ. ಈ ಅಕ್ಷರ ಶ್ರವಣ ಬಾಂಧವ್ಯವು ಮಾನವ ಕುಲದ ಬಹು ಯುಗಗಳ ಸಂಸ್ಕಾರದ ಫಲಿತಾಂಶವಿದ್ದೀತು.

ಇನ್ನು ಕೆಲವು ಪದಗಳಲ್ಲಿ ಅಕ್ಷರ ಗುಣದ ವಿಶೇಷವೇನೂ ಇಲ್ಲದೆ ಅಂತರ್ಭಾವವು ಹೆಚ್ಚಾಗಿರುತ್ತದೆ: ಋಷಿ, ತೀರ್ಥ, ಆಶ್ರಮ—ಈ ಪದಗಳನ್ನು ಕೇಳಿದೊಡನೆಯೇ ಮನಸ್ಸಿನಲ್ಲಿ ಒಂದು ಮಹತ್ತ್ವದ ಕಲ್ಪನೆಯೂ ಒಂದು ಪೂಜಾ ಬುದ್ಧಿಯೂ ಉಂಟಾಗುತ್ತದೆ. ಈ ಸೂಚಕ ಶಕ್ತಿಯನ್ನು ಇಂಗ್ಲಿಷಿನಲ್ಲಿ Suggestion ಎನ್ನುತ್ತಾರೆ. ನಿಘಂಟುವಿನಲ್ಲಿ ಕಾಣುವ ಅರ್ಥಕ್ಕಿಂತ ಹೆಚ್ಚಾಗಿ ಆ ಶಬ್ದಗಳಿಂದ ಮನಸ್ಸಿಗೆ ಬೋಧ್ಯವಾಗುತ್ತದೆ. ಈ ಭಾಸಕ ಶಕ್ತಿ, ಅಥವಾ ಧ್ವನಿ ಶಕ್ತಿಯು ಬಹು ಕಾಲದ ಮಹಾ ಕವಿ ಪ್ರಯೋಗಗಳಿಂದಲೂ ಮಹಾ ಜನ ರೂಢಿಯಿಂದಲೂ ಪದಗಳಿಗೆ ಲಭಿಸುತ್ತದೆ.

ಕಿವಿಯನ್ನೊಲಿಸಿಕೊಳ್ಳುವ ಉಪಾಯಗಳಲ್ಲಿ ಮೊದಲನೆಯದು ಅಕ್ಷರ ಗುಣದ್ದು, ಎರಡನೆಯದು ಛಂದಸ್ಸಿನದು, ಮೂರನೆಯದು ಸಂಗೀತದ್ದು. ಅಕ್ಷರ ಗುಣದಲ್ಲಿ ಪ್ರಾಸ ಭಾಗವೂ ಛಂದಸ್ಸು ಸಂಗೀತಗಳೆರಡೂ ವಿಶೇಷವಾಗಿ ಪದ್ಯ ಕಾವ್ಯಗಳಿಗೆ ಸೇರತಕ್ಕುವೆಂಬುದು ಸ್ಪಷ್ಟವಾಗಿದೆ. ಆದರೆ, ಛಂದಸ್ಸಿಗೆ ಆಧಾರಭೂತವಾದ ಧಾಟಿಯೆಂಬ ಒಂದು ಹ್ರಸ್ವ ದೀರ್ಘಾನುಕ್ರಮವು ಒಳ್ಳೆಯ ಗದ್ಯದಲ್ಲಿಯೂ ಕಾಣಬರುತ್ತದೆ. ಜಾಗರೂಕತೆಯಿಂದ ಕಟ್ಟಿದ ವಾಕ್ಯಗಳು ಒಂದು ಪದ ಮೈತ್ರಿ, ಒಂದು ತರಂಗ ಗತಿ, ಒಂದು ಲಯ ಭಂಗಿ—ಇವುಗಳಿಂದ ಸುಂದರವಾಗಿರುತ್ತವೆ. ಇದನ್ನು ನಮ್ಮ ಚಂಪೂ ಗದ್ಯದಲ್ಲಿ ಕಾಣಬಹುದು.

ಈಗ ಛಂದಸ್ಸಿನ ಮಾತನ್ನೆತ್ತುವುದರಲ್ಲಿ ನನಗೊಂದು ಉದ್ದೇಶವುಂಟು : ಕಳೆದ ಮೂರು ನಾಲ್ಕು ವರ್ಷಗಳಲ್ಲಿ ಪ್ರಕಟವಾಗಿರುವ ಕನ್ನಡ ಕಾವ್ಯಗಳು ಛಂದಸ್ಸನ್ನು

ಬಿಟ್ಟಿವೆಯೆಂದು ಕೆಲವರು ತಿಳಿದುಕೊಂಡಿರುವಂತಿದೆ. ಪರೀಕ್ಷಿಸಿ ನೋಡಿದರೆ, ಅವುಗಳಲ್ಲಿ ಒಂದು ಛಂದೋವಿಧಾನವು ಕಾಣಬರುತ್ತದೆ. ಬಹು ಮಟ್ಟಿಗೆ ಅದು ಹೊಸದು ಕೂಡ ಅಲ್ಲ; ನಮ್ಮ ಹಳೆಯ ಚೌಪದಿ, ರಗಳೆ, ಗೋವಿನ ಕಥೆಯ ಮಟ್ಟು, ಸಾಂಗತ್ಯ, ಸೀಸ ಪದ್ಯ—ಈ ಜಾತಿಗಳಲ್ಲಿಯೇ ಸಾಮಾನ್ಯವಾಗಿ ನಮ್ಮ ಹೊಸ ಪದ್ಯಗಳ ಪಾದಗಳು ಸೇರತಕ್ಕುವಾಗಿವೆ. ಕಣ್ಣಿನ ಅನುಕೂಲಕ್ಕಾಗಿ ಆ ಪಂಕ್ತಿಗಳನ್ನು ಹೊಸ ರೀತಿಗಳಲ್ಲಿ ವಿಂಗಡಿಸಿ ಜೋಡಿಸಿ ಅಚ್ಚು ಮಾಡಿರಬಹುದು. ಆದರೆ ಅವುಗಳನ್ನು ಧಾಟಿಯಿಂದ ಓದಿನೋಡಿದರೆ ಅವು ಹೊಸದಲ್ಲವೆಂಬುದು ಗೊತ್ತಾಗುತ್ತದೆ. ಒಂದು ವೇಳೆ ಅವು ಹೊಸದಾಗಿದ್ದರೆ ಅದರಲ್ಲಿ ತಪ್ಪೇನು? ಕಾವ್ಯವು ಆಕರ್ಷಕವಾಗುವುದಕ್ಕೆ ಅದರಲ್ಲಿ ಒಂದು ನವ್ಯತೆಯಿರಲೇಬೇಕು. ಈ ನವ್ಯತೆಯು ಭಾವಕ್ಕಾಗಲಿ, ಧಾಟಿಗಾಗಲಿ ಕಷ್ಟ ತಂದರೆ ಅದನ್ನಾಕ್ಷೇಪಿಸುವುದು ನ್ಯಾಯವಾಗುತ್ತದೆ. ಹೊಸ ರೀತಿಯು ಕಿವಿಗೆ ಇಂಪಾಗುವುದಾದರೆ ಅದನ್ನೇಕೆ ಆದರಿಸಬಾರದು? ಛಂದಸ್ಸು ಪದ್ಯದ ಭಾವಕ್ಕೆ ಒಪ್ಪುತಕ್ಕುದಾಗಿರಬೇಕು. ಒಂದು ಸೂಕ್ಷ್ಮ ಭಾವ, ಒಂದು ಸಣ್ಣ ಚಿಂತೆ, ಒಂದು ಲಘು ಚಿತ್ರ—ಇವುಗಳಿಗೆ ಭಾರವೂ ವಿಸ್ತಾರವೂ ಆದ ಛಂದಸ್ಸುಗಳನ್ನಾರಿಸಿದವರು, ಆ ಭಾವ, ಚಿಂತೆ, ಚಿತ್ರಗಳನ್ನು ಅಪ್ರಕೃತ ಶಬ್ದ ರಾಶಿಯಲ್ಲಿ ಹೂತಿಡಬೇಕಾಗುತ್ತದೆ. ಅದೇ ಕಾವ್ಯದ ಸಾವು. ಕನ್ನಡದ ಮನೋಧರ್ಮವೇ ಬೇರೆ; ಅದಕ್ಕೆ ಸಂಸ್ಕೃತದ ಛಂದಸ್ಸು ಕೂಡಲೇ ಕೂಡದು—ಎಂದು ನಾನು ಹೇಳತಕ್ಕವನಲ್ಲ. ಸಂಸ್ಕೃತ ಛಂದಸ್ಸಿನ ಕಾವ್ಯಗಳನ್ನು ತೆಗೆದು ಬಿಸುಟರೆ ಕನ್ನಡದ ಭಾಂಡಾರದಲ್ಲಿ ಉಳಿಯುವುದು ಬಹಳವೆಂದು ನಾನು ಹೇಳಲಾರೆ. ಕನ್ನಡವು ವಾಸ್ತವವಾಗಿ ಸಂಮಿಶ್ರಿತ ಭಾಷೆಯೆಂದು ಆಗಲೇ ಹೇಳಿದ್ದೇನೆ. ಆದ್ದರಿಂದ, ಉಭಯ ಛಂದಸ್ಸುಗಳೂ ಕನ್ನಡಕ್ಕೆ ಒಪ್ಪಿಗೆಯಾಗಲೇ ಬೇಕು. ಆದರೆ ಯಾವ ಕೆಲಸಕ್ಕೆ ಯಾವ ಸಾಧನವೋ ಅದನ್ನು ಮಾಡುವವನೇ ನಿಶ್ಚಯಿಸಿಕೊಳ್ಳಬೇಕು.

ಪ್ರಾಸದ ವಿಚಾರವೂ ಇಷ್ಟೇ. ಅದು ಬೇಕಾದುದು ಕಿವಿಯ ಪ್ರಸಾದಕ್ಕಾಗಿ. ಆದರೆ ಕಿವಿಗಿಂತ ಮನಸ್ಸು ಮುಖ್ಯವೆಂಬುದನ್ನು ಪೂರ್ವ ಪಂಡಿತರೂ ಒಪ್ಪಲೇಬೇಕು. ಪೂರ್ವ ಕವಿಗಳು ಪ್ರಾಸಕ್ಕೆ ದಾಸರಾಗಿ ಭಾವಕ್ಕೆ ಸಾವು ತಂದರು ಎಂದು ಹೇಳುವುದುಂಟು. ಈ ವಾಕ್ಯವೇನೋ ಪ್ರಾಸಬದ್ಧವಾಗಿದೆ; ಆದರೆ ಅದರಲ್ಲಿರುವುದು ಪೂರ್ಣ ಸತ್ಯವಲ್ಲ. ಪಂಪನೂ ರನ್ನನೂ ಕುಮಾರ ವ್ಯಾಸನೂ ಕನಕನೂ ಪ್ರಾಸ ಬಿಟ್ಟವರಲ್ಲ; ಅವರದು ರಸವತ್ಕಾವ್ಯಗಳಲ್ಲವೆಂದರೆ, ಅಂಥಾ ಕಾವ್ಯದ ಸ್ವರೂಪವು ನಮಗಿನ್ನೂ ತಿಳಿದಿಲ್ಲವೆಂದೇ ಹೇಳಬೇಕಾಗುತ್ತದೆ. ಕಾವ್ಯವು ರಸಪ್ರಧಾನವಾಗಿರಬೇಕೆಂಬುದಂತೂ ಖಂಡಿತ. ಆ ರಸಾವಿರ್ಭಾವಕ್ಕೆ ಪ್ರಾಸವು ಎಷ್ಟೋ ಸಂದರ್ಭಗಳಲ್ಲಿ ಅನುಕೂಲವಾಗುತ್ತದೆ; ಇನ್ನೆಷ್ಟರಲ್ಲಿಯೋ ಪ್ರತಿಕೂಲವಾಗುತ್ತದೆ. ಆದುದರಿಂದ, ಪ್ರಾಸವು ಹೀಗೆಯೇ ಸರಿ ಎಂದು ಶಾಸನ ಮಾಡುವುದು ಸಾಧ್ಯವಿಲ್ಲ. ಇಷ್ಟು ಮಾತ್ರ ಹೇಳಬಹುದು: ಪ್ರಾಸದಿಂದಲೂ ಪೂರ್ವ ಛಂದಸ್ಸಿನಿಂದಲೂ ಪದ್ಯಕ್ಕೆ ಒಂದು ಬಿಕ್ಕಟ್ಟು ಬರುತ್ತಿತ್ತು; ಹಾಗೆ ಅದು ಮನಸ್ಸನ್ನು ಆಕ್ರಮಿಸಿ ನಿಲ್ಲುವುದು ಸುಲಭವಾಗಿತ್ತು; ಮತ್ತು ಅದರ ಅರ್ಥದಾರಿದ್ರ್ಯವು ಕೊಂಚ ಮಟ್ಟಿಗೆ ನಮ್ಮ ಗಮನ

ವನ್ನು ತಪ್ಪಿಸಿಕೊಳ್ಳುತ್ತಿತ್ತು. ಪ್ರಾಸ ತೊರೆದ ರೀತಿಯಲ್ಲಿ ಈ ಅನುಕೂಲವಿಲ್ಲ. ಆದರೆ ನಮ್ಮ ನೂತನ ಕವಿಗಳಲ್ಲಿ ಎಲ್ಲರೂ ಪ್ರಾಸವನ್ನು ಬಿಟ್ಟವರಲ್ಲ. ಅವರು ದ್ವಿತೀಯಾಕ್ಷರ ಪ್ರಾಸವನ್ನು ಬಿಟ್ಟಿದ್ದರೂ ಪಾದಾಂತ್ಯದಲ್ಲಿಯೋ, ಪಾದಮಧ್ಯ ದಲ್ಲಿಯೋ, ಒಂದು ಬಿಟ್ಟು ಮತ್ತೊಂದು ಪಾದದಲ್ಲಿಯೋ ಪ್ರಾಸವನ್ನಿಟ್ಟಿರುವರು. ಇದು ಎಷ್ಟು ಮಟ್ಟಿಗೆ ಜನರಂಜಕವಾಗುವುದೋ ನಿಶ್ಚಯಿಸಲು ಇನ್ನೂ ಸ್ವಲ್ಪ ಕಾಲ ಬೇಕಾಗಬಹುದು.

ನೂತನ ಕವಿತ್ವದ ವಿಷಯದಲ್ಲಿ ಯಾವ ದೃಷ್ಟಿಯಿಂದಲೂ ನಿಷ್ಕರ್ಷೆಯಾದ ಅಭಿಪ್ರಾಯವನ್ನು ಹೇಳಲು ಇನ್ನೂ ತಕ್ಕಷ್ಟು ಕಾಲವಾಗಿಲ್ಲ. ನಾವು ಇನ್ನೂ ಮಾರ್ಗಾನ್ವೇಷಿಗಳಾಗಿದ್ದೇವೆ. ಹೊಸ ವಸ್ತು, ಹೊಸ ರೀತಿ, ಹೊಸ ಶೈಲಿಗಳನ್ನು ಕಲ್ಪಿಸಲು ಪೀಠಿಕಾ ರೂಪದ ಪ್ರಯತ್ನಗಳನ್ನು ನಡೆಸುತ್ತಿದ್ದೇವೆ. ದೊಡ್ಡ ಸಂಗೀತ ವಿದ್ವಾಂಸರೊಬ್ಬರ ಕಥೆಯನ್ನು ನಾನು ಕೇಳಿದ್ದೇನೆ: ಅವರು ಸಭೆಯಲ್ಲಿ ಹಾಡ ಬೇಕಾಗಿದ್ದ ದಿವಸ, ಗೊತ್ತಾಗಿದ್ದ ವೇಳೆಗೆ ಎರಡು ಗಂಟೆ ಮುಂಚಿತವಾಗಿ, ಸಭಾ ಮಂದಿರದಲ್ಲಿ ಕುಳಿತು ವಾದ್ಯಗಳನ್ನು ಶ್ರುತಿ ಮಾಡಿಸಿ ವಿಧ ವಿಧವಾಗಿ ಆಲಾಪನೆ ಮಾಡುತ್ತಿದ್ದರಂತೆ. ಆಗ ಅವರ ಕಂಠದಿಂದ ಹೊರಟ ಸ್ವರಗಳು ಸಾಮಾನ್ಯವಾಗಿ ಶುದ್ಧವಾಗಿ ಮಧುರವಾಗಿದ್ದರೂ ಒಂದೊಂದು ವೇಳೆ ಮೃಗವರಚಿದಂತೆ, ಪಕ್ಷಿ ಕೂಗಿದಂತೆ, ಗಾಣ ಮೊರೆದಂತೆ ಕೇಳಬರುತ್ತಿದ್ದುವಂತೆ. ಹೀಗೆ ಒಂದು ಗಂಟೆಯಾದ ಮೇಲೆ ಕಂಠಗುಣವು ಸ್ತಿಮಿತಕ್ಕೆ ಬಂದು, ಅಲ್ಲಿಂದ ಮುಂದೆ ಹಾಡಿಕೆಯು ಸಭಿಕ ರನ್ನು ತಲೆದೂಗಿಸುತ್ತಿತ್ತಂತೆ. ನಾವು ಈಗ ಆ ಬಗೆಯ ಕಂಠ ಶೋಧನೆಯ ಸ್ಥಿತಿ ಯಲ್ಲಿದ್ದೇವೆ. ನಮ್ಮ ಸ್ವರಗಳು ಕೆಲವರಿಗೆ ವಿಚಿತ್ರವೆಂದೂ ವಕ್ರವೆಂದೂ ತೋರ ಬಹುದು. ಪ್ರತಿಯೊಂದು ಹೊಸ ಏರ್ಪಾಟೂ—ಹೊಸದಾದ ಕಾರಣ—ಹಳಬರಿಗೆ ಹಾಗೆ ತೋರುವುದು ಆಶ್ಚರ್ಯವಲ್ಲ. ಆದರೆ ನಮ್ಮ ಉದ್ದೇಶವು ಚೆನ್ನಾಗಿ ಹಾಡು ವುದೇ ಎಂಬುದನ್ನು ಅವರು ಅಂಗೀಕರಿಸಿ ಸಹಾನುಭೂತಿ ತೋರಬೇಕು. ಹೀಗೆ ಹೇಳಿದ್ದರಿಂದ, ನೂತನ ಕಾವ್ಯಗಳ ಬೆಲೆಯನ್ನು ನಾನೇ ಕೀಳುಮಾಡಿದೆನೆಂಬುದಾಗಿ ಯಾರೂ ತಿಳಿದುಕೊಳ್ಳುವುದಿಲ್ಲವೆಂದು ನಂಬಿದ್ದೇನೆ. ನೂತನ ಕಾವ್ಯಗಳು ಕನ್ನಡದ ಸಹಜ ಗುಣವನ್ನು ತೋರಿಸುತ್ತಿವೆ, ಸ್ವತಂತ್ರತೆಯನ್ನು ತೋರಿಸುತ್ತಿವೆ, ಸರಳತೆ ಯನ್ನು ತೋರಿಸುತ್ತಿವೆ; ಇಷ್ಟೇ ಅಲ್ಲ, ದೇಶದ ತಾತ್ಕಾಲಿಕ ಮನೋವೃತ್ತಿಯನ್ನು ಪ್ರತಿಫಲಿಸುತ್ತಿವೆ; ಅವು ಸ್ವಾನುಭವ ಜನಿತಗಳಾಗಿ "ಹ್ಲಾದಮಯ"ಗಳಾಗಿವೆ. ಅವುಗಳಲ್ಲಿ ಕೆಲವಾದರೂ ಚಿರಕಾಲ ಬಾಳುವ ಜೀವಕಳೆಯನ್ನು ತೋರುತ್ತಿವೆ. ಇದು ಉಪಚಾರೋಕ್ತಿಯಲ್ಲ, ನನ್ನ ಮನಸ್ಸಿನಲ್ಲಿರುವ ನಂಬಿಕೆ.

ಇದನ್ನು ಹೇಳಿದ ಬಳಿಕ ನನ್ನ ಕಳವಳವೊಂದನ್ನು ಹೇಳಲು ಹಿಂಜರಿಯ ಬೇಕಾದುದಿಲ್ಲವೆಂದು ತೋರುತ್ತದೆ: ನಮ್ಮ ಹಿಂದಿನ ರೀತಿಯ ಗುಣವನ್ನು ಆಗಲೇ ಸೂಚಿಸಿದ್ದೇನೆ. ಆ ರೀತಿಯ ಪದ್ಯರಚನೆ ನಿಂತುಹೋದಂತಿದೆಯಲ್ಲಾ ಎಂಬುದು ನನಗಿರುವ ಕಳವಳ. ನಾನು ಬೇಡುವುದು ಇನ್ನೊಂದು "ಜಗನ್ನಾಥ ವಿಜಯ'

ವನ್ನಲ್ಲ, ಇನ್ನೊಂದು "ಗದಾಯುದ್ಧ"ವನ್ನು. ಹಳೆಯ ಜಾತಿಯ ಪದ್ಯಗಳನ್ನು ಬರೆಯುವುದು ಪ್ರಯಾಸವಿರಬಹುದು; ಆದರೆ ಅದರಲ್ಲಿ ಒಂದು ಹಿಡಿತ, ಒಂದು ಗುಂಫನ, ಒಂದು ಆಕ್ರಮಣ ಶಕ್ತಿ ಇರುತ್ತದೆ. ಹೊಸ ಜಾತಿಯ ಪದ್ಯ ರಚನೆ ಸುಲಭವಿರಬಹುದು; ಇದರಲ್ಲಿ ಸ್ವಾತಂತ್ರ್ಯ ಹೆಚ್ಚಿರಬಹುದು. ಆದರೆ ಈ ಪದ್ಯ ಗಳೊಳಕ್ಕೆ ಕಾವ್ಯಾನರ್ಹ ವಿಷಯಗಳು ನುಣುಚಿಕೊಳ್ಳುವುದೂ, ಜಳ್ಳು ವಚನದ ತುಂಡುಗಳು ದೂರಿಕೊಳ್ಳುವುದೂ ಕೂಡ ಸುಲಭವೆಂದು ತೋರುತ್ತದೆ. ಈ ದೋಷ ಗಳನ್ನು ದೂರವಿಡುವುದಕ್ಕಾಗಿ ಹೊಸ ಜಾತಿಯ ಕವಿಗಳು ತೆಗೆದುಕೊಳ್ಳಬೇಕಾ ಗಿರುವ ಎಚ್ಚರಿಕೆಯು ಪೂರ್ವಿಕರು ಪಡುತ್ತಿದ್ದ ಪ್ರಯಾಸಕ್ಕಿಂತ ಕಡಿಮೆಯಾದುದಲ್ಲ. ಅಭ್ಯಾಸಕ್ಕಾಗಿಯಾದರೂ ವಿದ್ಯಾರ್ಥಿಗಳು ಆಗಾಗ ಕಂದ ವೃತ್ತಗಳ ರಚನೆಗೆ ಪ್ರಯತ್ನಪಟ್ಟರೆ ಅವರಿಗೆ ಪ್ರಯೋಜನವುಂಟೆಂದು ನಾನು ತಿಳಿದುಕೊಂಡಿದ್ದೇನೆ. ಅದರಿಂದ ಕೈ ಕುದುರುತ್ತದೆ.

ನನ್ನ ಸ್ವಂತ ಅಭಿರುಚಿಯನ್ನಿಲ್ಲಿ ಸೂಚಿಸಬಹುದಾದರೆ, ಓಜಸ್ವಿತೆಯಲ್ಲಿ ನನಗೆ ಅಭಿಮಾನ ಹೆಚ್ಚು. ಅತಿ ಸ್ವತಂತ್ರವು ಶೈಥಿಲ್ಯಕ್ಕೂ ರಸಾಭಾಸಕ್ಕೂ ಪ್ರೋತ್ಸಾಹ ಕೊಟ್ಟೀತೆಂಬ ಭೀತಿಗೆ ಇಂಗ್ಲೀಷಿನ Free Verse (*Vers libre*) ಎಂಬ ನವೀನ ಪ್ರಬಂಧಗಳನ್ನು ನೋಡಿದರೆ ಕಾರಣ ತೋರುತ್ತದೆ. ಇಲ್ಲಿ ಒಂದೆರಡುದಾಹರಣೆ ಗಳನ್ನು ಕೊಡಬಹುದು:—

(1) Within an office whose exterior
Resembles an ultra-conservative mind
You battle with the avaricious words
Of a meager, petrified man.

(2) Messengers
Of varied fate,
Of pitch and toss and gain,
Of life and driven time,
And the inane
Of jesters.

(3) Out into a garden backyard came a woman in a blue apron
Carrying yellow meal in a bright tin pail.

"ಪಂಚ್" (*Punch*) ಪತ್ರಿಕೆಯ ವಿಕಟ ಕವಿಯೂ ಒಂದು ಅನುಕರಣವನ್ನು ಮಾಡಿದ್ದಾನೆ.—

(4) Among two hundred acres of pasture and root-crops
The only moving thing
Was the tail of a donkey.

A man and a woman
Are two.
A man and a woman and a donkey
Are three.

At the sight of a donkey
Ambling down a green field
Even a slave of traditional rhythm
Must be abashed.

The dinner-gong is sounding,
The donkey will be moving,
A man moves also.

ಇದು ಇಂಗ್ಲಿಷಿನಲ್ಲಿ ಹುಟ್ಟಿರುವ ಹೊಸ ಪರಿಯ ಕಾವ್ಯಾಭಾಸ. ನಾನು ನೋಡಿರುವ ಮಟ್ಟಿಗೆ, ಕನ್ನಡದಲ್ಲಿ ಇಂತಹುದು ಇನ್ನೂ ಹುಟ್ಟಿಲ್ಲ; ಹುಟ್ಟಿದರೆ ವಿನೋದಪಡಬಹುದು. ಆದರೆ ಸಂಪ್ರದಾಯವನ್ನು ಒದ್ದು ಕೆಡಹದ ಇನ್ನೊಂದು ತೆರದ ಸರಸ ಕವಿಗಳೂ ಇಂಗ್ಲಿಷಿನಲ್ಲಿರುವಂತೆ ನಮ್ಮಲ್ಲಿರಬೇಕು. ಅಂಥವರಿಲ್ಲದಿರುವಾಗ ಈ ಮೇಲಣ ಬಗೆಯ ಕವಿತ್ವವು ಸಂತೋಷವನ್ನುಂಟುಮಾಡಲಾರದೆ ಹೋದೀತು.

ಭಾವ ಜೀವಾಳವನ್ನು ದೃಢವಾದ ಶಬ್ದಕಾಯದಲ್ಲಿ ಸೇರಿಸಿದ ಹೊರತು ಅದಕ್ಕೆ ಸ್ಥಿರವಾಗಿ ನಿಲ್ಲುವುದು ಸಾಧ್ಯವಾಗದು. ಆದಕಾರಣ, ಕಾವ್ಯದ ಹೊರಮೈಯ ವಿಚಾರದಲ್ಲಿಯೂ ಎಚ್ಚರಿಕೆ—ಬಿಗಿ, ಕಟ್ಟುಪಾಡು—ಇರಬೇಕು. ಇದೇ ಸಂಪ್ರದಾಯ ಮತದ ಮೂಲ ತತ್ತ್ವ.

ಬಹು ಸಾಹಸ ಮಾಡಿ ಮಾತನಾಡಿದ್ದೇನೆ. ಆದರೆ ಅದರಲ್ಲಿ ದುರುದ್ದೇಶ ವೆಳ್ಳಷ್ಟೂ ಇಲ್ಲವೆಂಬುದನ್ನು ತಮಗೆ ಹೇಳಬೇಕಾಗಿಲ್ಲವೆಂದು ನಂಬಿಕೊಂಡಿದ್ದೇನೆ. ಕಾವ್ಯವು ಪವಿತ್ರ ವಸ್ತುವೆಂದು ನನ್ನ ಮತ; ಅದರಿಂದಲೇ ಇಷ್ಟು ಮಾತನಾಡಿದ್ದು.

ಶಬ್ದಶಕ್ತಿಯನ್ನೂ ಛಂದಸ್ಸನ್ನೂ ಪ್ರಾಸವನ್ನೂ ಕುರಿತು ಎಷ್ಟು ಹೇಳಿದರೂ ಕವಿಕರ್ಮ ವಿಧಾನಗಳನ್ನು ಪೂರ್ತಿಯಾಗಿ ವರ್ಣಿಸಿದಂತಾಗುವುದಿಲ್ಲ. ಒಟ್ಟಿನ ಮೇಲೆ, ಅದೊಂದು ಮಾತಿನ ಮಾಟ, ಅದೊಂದು ರಸ ಕ್ರಿಯೆ; ಎಂದರೆ, ಮಣ್ಣನ್ನು ಹೊನ್ನಾಗಿಸುವ ಕೆಲಸ. ಅದೊಂದು ಮಂಕುಬೂದಿಯಾಟ. ಅದರ ಮರ್ಮವನ್ನು ಕವಿಯೊಬ್ಬನೇ ಅರಿತವನು—ಅಥವಾ, ಅವನು ಅರಿತಿರುವನೆಂಬುದೂ ಪೂರ್ಣ ಸತ್ಯವಲ್ಲದಿರಬಹುದು. ಯಾವುದೋ ಒಂದು ಭೂತವು ಅವನ ಒಳಹೊಕ್ಕು, ಅವನಿಂದ ಪದ್ಯಗಳನ್ನು ಹೊರಡಿಸುತ್ತದೆ. ಅವನ ಕೈಗೆ ದೊರಕುವ ಪದಗಳೇನೋ ಹಳೆಯವು; ಅವನ ಭಾವಗಳು ಮಾತ್ರ ಹೊಸವು. ಈ ಅಪೂರ್ವ ಭಾವಗಳನ್ನು ರೂಪುಗೊಳಿಸುವುದಕ್ಕೆ ಅವನು ಪೂರ್ವ ಪದ

ಗಳನ್ನು ಹೊಸ ಹೊಸ ಪರಿಗಳಲ್ಲಿ ಜೋಡಿಸಬೇಕಾಗುತ್ತದೆ. ಈ ಪಲ್ಲಕ್ಕಿ ಸೇವೆಯುವರ ಚಮತ್ಕಾರದಿಂದ, ಅವರ ಸಾಹಸದಿಂದ, ಅವರ ಜಾಗರೂಕತೆಯಿಂದ, ಕವಿಯ ಕನಸಿನ ಜನರು ನಮ್ಮ ಮನಸಿನ ಮನೆಯೊಳಕ್ಕೆ ಸಾಗಿ ಬರುವಂತಾಗುತ್ತದೆ. ನಮ್ಮ ಲೋಕದ ಸೌಂದರ್ಯವು ಹೇಗೋ ಕವಿಯ ಲೋಕದ ಸೌಂದರ್ಯವೂ ಹಾಗೆಯೇ ಒಂದು ರೇಖೆಯ ಹೆಚ್ಚು ಕಡಿಮೆಯಿಂದ ವಿಕಾರವಾಗಬಹುದು. ಒಂದು ಕಲ್ಲು ಉಪ್ಪು ಹೆಚ್ಚಿ ಸಾರಿನ ರುಚಿ ಕೆಡುವುದು ; ಒಂದು ಸಣ್ಣ ಮಚ್ಚೆಯಿಂದ ಮುಖದ ಅಂದವು ಕುಂದುವುದು ; ಹಾಗೆಯೇ, ಒಂದು ಮಾತು ಹೆಚ್ಚಿದರೆ, ಅಥವಾ ಕಡಮೆಯಾದರೆ ಒಂದು ಪದ್ಯವು ನಿರರ್ಥಕವಾಗುವುದು. ಸೌಂದರ್ಯಕ್ಕೂ ಅಸೌಂದರ್ಯಕ್ಕೂ ನಡುವೆ ಇರುವುದೊಂದೇ ಗೆರೆ. ಕಣ್ಣು ಮೂಗು ಬಾಯಿಗಳು ಎಲ್ಲ ಮುಖಗಳಿಗೂ ಇರುತ್ತವೆ; ಅದರಲ್ಲಿ ಒಂದು ಸೊಗಸೇಕೆ? ಇನ್ನೊಂದು ಅಲ್ಲವೇಕೆ? ಸಣ್ಣ ರೇಖೆಗಳ ಭೇದದಿಂದ, ಅಷ್ಟೇ. ಅರ್ಥವೂ ಶಬ್ದವೂ ಪರಸ್ಪರ ಕ್ಲ್ಪಪ್ತಗಳಾಗಿವೆ. ಪದ್ಯದ ಸೊಗಸು ಅದರ ರಸ ಪದಗಳೆರಡರ ಆನುಗುಣ್ಯದಿಂದ ಫಲಿಸತಕ್ಕದ್ದು. ವಾಸ್ತವ ವಾಗಿ ಅವೆರಡೂ ಸೇರಿ ಒಂದು ಪ್ರಾಣಿ. ಒಂದು ಜೀವಕ್ಕೆ ಅದರ ಕರ್ಮಾನುಸಾರ ಒಂದು ದೇಹವಿರುವುದೆಂದು ಹೇಳುವಂತೆ, ಒಂದು ಭಾವವನ್ನು ಯಥಾವತ್ತಾಗಿ ವ್ಯಕ್ತಪಡಿಸುವ ಮಾತು ಒಂದೆರಡಕ್ಕಿಂತ ಹೆಚ್ಚಾಗಿರುವುದಿಲ್ಲ. ಇಂಥಾ ಮಾತನ್ನು ಹುಡುಕಿ ತೆಗೆಯುವುದೂ, ಅದು ಅವನುಪಯೋಗಿಸಬೇಕಾಗಿರುವ ಇತರ ಮಾತು ಗಳೊಡನೆ ಹೊಂದಿಕೊಳ್ಳುವುದೂ ಸುಲಭವಾಗಿ ಆಗುವ ಕೆಲಸವಲ್ಲ. ಹೀಗೆ ಜಾಗ ರೂಕತೆಯಿಂದ ಆರಿಸಿ ಚಮತ್ಕಾರದಿಂದ ಜೋಡಿಸಿದ ಪದವನ್ನು ಗಮನವಿಟ್ಟು ನೋಡಿ, ಅದರ ಭಾವವನ್ನು ಸಂಪೂರ್ಣವಾಗಿ ಗ್ರಹಿಸುವುದೂ ಸಾಮಾನ್ಯವಲ್ಲ. ಅಂಥಾ ಲೇಖಕ ವಾಚಕರಿಬ್ಬರೂ ಅಪರೂಪವಾದುದರಿಂದಲೇ ಪೂರ್ವಿಕರು ಹೀಗೆ ಹೇಳಿರು ವುದು :—

> ಏಕಃ ಶಬ್ದಃ ಸುಪ್ರಯುಕ್ತಃ ಸಮ್ಯಕ್ ಜ್ಞಾತಃ
> ಸ್ವರ್ಗೇ ಲೋಕೇ ಕಾಮಧುಗ್ಭವತಿ ॥

ಯಾವ ಕವಿಯ ಕಾವ್ಯವು ಅವನ ಮನಸ್ಸಿನೊಳಗಿನ ಸೊಬಗನ್ನೆಲ್ಲ—ಅಲ್ಲಿ ತೋರಿದ ರಂಗು, ಅಲ್ಲಿಯ ರೂಪು, ಅಲ್ಲಿಯ ನಯ, ಅಲ್ಲಿಯ ನವುರು, ಅಲ್ಲಿಯ ಸಂಭ್ರಮ, ಅಲ್ಲಿಯ ಆವೇಗ—ಇದನ್ನೆಲ್ಲ ಹೆಚ್ಚು ಕಡಿಮೆಯಿಲ್ಲದಂತೆ ಸಜೀವವಾದ ಪಡಿಯ ಚ್ಚಾಗಿ ನಮ್ಮ ಮನಸ್ಸಿನೊಳಕ್ಕೆ ತರುವುದೋ ಅವನೇ ಧನ್ಯನು. ಈ ಧನ್ಯತೆಗೆ ಇದೇ ದಾರಿಯೆಂದು ನಿಷ್ಕರ್ಷೆ ಮಾಡಿ ಹೇಳುವರಾರೂ ಇಲ್ಲ. ಅಲಂಕಾರ ಶಾಸ್ತ್ರ ಛಂದಶ್ಶಾಸ್ತ್ರ ಮೊದಲಾದ ಕಾವ್ಯ ಮೀಮಾಂಸೆಯೆಲ್ಲವೂ ದಿಕ್ಪ್ರದರ್ಶನಾರ್ಥವಾ ದುವು. ಜ್ಯೋತಿಷ್ಕನು ಅರುಂಧತೀ ನಕ್ಷತ್ರವೀ ಕಡೆಯಿದೆ, ಅದರ ಮೇಲಿದೆ, ಇನ್ನೊಂ ದರ ಕೆಳಗಿದೆ, ಮತ್ತೊಂದರ ಹತ್ತಿರವಿದೆ ಎಂದು ಹೇಳಬಹುದೇ ಹೊರತು, ಸೂರ್ಯ ಚಂದ್ರರನ್ನು ತೋರಿಸಲಾಗುವಂತೆ ಅದನ್ನು ತೋರಿಸಲಾಗದು. ಕವಿಕರ್ಮದ ರಹಸ್ಯವು ಅದಕ್ಕಿಂತ ಸೂಕ್ಷ್ಮವಾದುದು.

## ವಚನ ಗ್ರಂಥಗಳು

ಅತಿಮಾನುಷರಾದ ಈ ಪದ್ಯಕವಿಗಳಿಗೆ ಇನ್ನು ಕೈ ಮುಗಿದು, ನನಗೆ ಹತ್ತಿರದವರಾದ ಗದ್ಯಲೇಖಕರಲ್ಲಿ ಒಂದು ಬೇಡಿಕೆಯನ್ನೊಪ್ಪಿಸಲಿಚ್ಛಿಸುತ್ತೇನೆ. ನಾನು ನಮ್ಮ ಜನದ ಸದ್ಯದ ಆವಶ್ಯಕತೆಯ ದೃಷ್ಟಿಯಿಂದ ಮಾತನಾಡತಕ್ಕವನು. ಅವರಿಗೆ ಈಗ ತಿಳಿವು ಕೊಡುವ ತಿಳಿಯಾದ ವಚನ ಗ್ರಂಥಗಳು ಅಮಿತವಾಗಿ ಬೇಕಾಗಿವೆ. ಒಳ್ಳೊಳ್ಳೆಯ ಸಣ್ಣ ಕಥೆಗಳು ಈಚೆಗೆ ಹೆಚ್ಚಾಗಿ ಪ್ರಕಟವಾಗುತ್ತಿರುವುದು ಸಂತೋಷದ ಸಂಗತಿ. ಇನ್ನು, ದೊಡ್ಡವಾದ ದೊಡ್ಡ ಕಥೆಗಳನ್ನು ನಿರೀಕ್ಷಿಸಿಕೊಂಡಿರತಕ್ಕವರಲ್ಲಿ ನಾನೊಬ್ಬನು. ನಮ್ಮ ಸಮಾಜದ ಜೀವನದಲ್ಲಿ ದೊಡ್ಡ ಕಥೆಗೆ ಬೇಕಾದ ಸಾಮಗ್ರಿ ದೊರೆಯುವುದಿಲ್ಲವೆ? ದೊಡ್ಡ ಕಥೆಗೂ ಪ್ರತಿಭೆ ಬೇಕೆಂಬುದು ನಿಜ; ಅದಕ್ಕೆ ಬಹು ಕಾಲದ ವ್ಯವಸಾಯವೂ ಏಕಾಗ್ರತೆಯೂ ಬೇಕು. ಆದರೆ, ಎಲ್ಲ ದೊಡ್ಡ ಕೆಲಸವೂ ತಪಶ್ಚರ್ಯೆಯೇ ಅಲ್ಲವೆ? ಸರಸ್ವತಿಯು ತಪಸ್ಸಿಲ್ಲದ ನೈವೇದ್ಯಕ್ಕೆ ಒಲಿಯುವಷ್ಟು ಸರಳೆಯಲ್ಲ. ಸುಲಭವಾಗಿ ಆದದ್ದು ಸುಲಭವಾಗಿ ಹೋಗಬಹುದು; ಪ್ರಯಾಸದಿಂದ ಸಾಧಿಸಿದ್ದು ಸ್ವಲ್ಪ ಕಾಲವಾದರೂ ಉಳಿದೀತು.

ಸ್ವಾತಂತ್ರ್ಯವು ಕವಿಯ ಹಕ್ಕೆಂಬುದನ್ನು ಆಗಲೇ ಹೇಳಿದೆ. ಆ ಸ್ವಾತಂತ್ರ್ಯವು ನೂತನ ತತ್ತ್ವಸಾಧನೆಗಾಗಿ. ಕವಿಯ ದೃಕ್ಪಥಕ್ಕೆ ಯಾವುದೂ ಗೋಡೆ ಕಟ್ಟಿದಂತಾಗಬಾರದು. ವೇದ, ಶಾಸ್ತ್ರ, ಪುರಾಣ, ಪೂರ್ವಾಚಾರ, ಜನಾಭಿಮತ—ಈ ಯಾವ ಕಣ್ಣಡಿಕೆ(Blinkers)ಗಳನ್ನೂ ಕವಿಯು ಕಟ್ಟಿಕೊಳ್ಳಬಾರದು. ಆಗ ತಾನೆ ಅವನ ದೃಷ್ಟಿ ಸರ್ವತೋಮುಖವಾಗಿ, ಅವನ ಸೃಷ್ಟಿ ನಿಸ್ಸಂಕೋಚವಾಗಿ ನಡೆಯುವುದು. ಎಲ್ಲ ಹೆದರಿಕೆಗಳನ್ನೂ ತೊರೆದು ತನ್ನ ಹೃದಯಸ್ಥವಾದ ಜೀವ ಕಾರುಣ್ಯವೊಂದರಿಂದಲೇ ಅವನು ಲೋಕವನ್ನು ನೋಡಬೇಕು. ಆಗ ಅವನಿಗೆ ಸ್ವತಂತ್ರ ಕಾವ್ಯ, ಸ್ವತಂತ್ರ ಕಾದಂಬರಿಗಳನ್ನು ಬರೆಯುವ ಸ್ಫೂರ್ತಿಯುಂಟಾಗುವುದು. ಇದರ ದೃಷ್ಟಾಂತವನ್ನು ಷೆಲ್ಲಿ, ಬ್ರೌನಿಂಗ್, ಮೆರೆಡಿತ್, ಹಾರ್ಡೀ—ಇವರ ಕೃತಿಗಳಲ್ಲಿ ಕಾಣಬಹುದು. ಇತರಾಧಿಕಾರ ಭಯವಿಲ್ಲದ ಪರೀಕ್ಷೆ, ಇತರ ಸಮ್ಮತಿಗಾಗಿ ಕಾದಿರದ ತತ್ತ್ವ ನಿರೂಪಣೆ—ಈ ಎರಡು ಕಾರ್ಯಗಳೂ ವಿಜ್ಞಾನಿಯಿಂದ ಹೇಗೆ ನಡೆಯಬೇಕೋ ಕವಿಯಿಂದಲೂ ಹಾಗೆಯೇ ನಡೆಯಬೇಕು. ಆಗ ಹುಟ್ಟುವುದು ನಿಜವಾದ ನವೀನ ಮಹಾ ಕಾವ್ಯ.

ವಿಜ್ಞಾನ ಗ್ರಂಥಗಳ ಆವಶ್ಯಕತೆಯನ್ನು ಮೊದಲೇ ಪ್ರಸ್ತಾವಿಸಿದ್ದೇನೆ. ನಮ್ಮ ಪ್ರತಿ ದಿನದ ಜೀವನದಲ್ಲುಪಯುಕ್ತವಾಗುವ ಯಂತ್ರಗಳು, ರಸಾಯನ ದ್ರವ್ಯಗಳು, ಆರ್ಥಿಕ ಸಾಧನಗಳು—ಇವುಗಳನ್ನು ಕುರಿತ ಸಣ್ಣ "ಕಥೆ"ಗಳು ಬೇಕಾಗಿವೆ. ರೆಯಿಲ್ವೇ ಎಂಜಿನ್, ಮೋಟಾರ್ ಗಾಡಿ, ಏರೋಪ್ಲೇನ್, ವಿದ್ಯುದ್ದೀಪ, ಗಡಿಯಾರ, ಅಚ್ಚಿನ ಯಂತ್ರ, ನೆಯ್ಯುವ ಕಾರ್ಖಾನೆ, ರಂಗಾರೆಯ ಕಾರ್ಖಾನೆ, ರಬ್ಬರು ಕಾರ್ಖಾನೆ, ತೊಗಲು ಹದ ಮಾಡುವ ಕಾರ್ಖಾನೆ, ಟಂಕಸಾಲೆಯ ಏರ್ಪಾಟು, ಬ್ಯಾಂಕುಗಳ ಏರ್ಪಾಟು—ಇವುಗಳನ್ನು ಕುರಿತ ಸಣ್ಣ ಪುಟ್ಟ ಸಚಿತ್ರ ಲೇಖನಗಳು

ಜನರಿಗೆ ಹೊಸ ಜ್ಞಾನವನ್ನು ಕೊಡುವುವಲ್ಲದೆ ಅವರ ಕಸಬು ಕೈಗಾರಿಕೆಗಳಲ್ಲಿಯೂ ಸಹಾಯವಾಗಿ ದೇಶದ ಸಂಪತ್ಸಾಧನ ಕಾರ್ಯಕ್ಕೆ ಅನುಕೂಲವಾಗುವುವು.

ಕಳೆದ ವರ್ಷ (೧೯೩೧) ಡಿಸೆಂಬರಿನಲ್ಲಿ ಬೆಂಗಳೂರಲ್ಲಿ ನಡೆದ ಪಾಠಶಾಲೋಪಕರಣ ಪ್ರದರ್ಶನದಲ್ಲಿ, ಹೈದರಾಬಾದು ಸಂಸ್ಥಾನದ ಉಸ್ಮಾನಿಯಾ ವಿಶ್ವವಿದ್ಯಾ ಪೀಠದವರು ತಮ್ಮಿಂದ ಪ್ರಕಟವಾಗಿದ್ದ ಉರ್ದು ಗ್ರಂಥಗಳನ್ನು ಇರಿಸಿದ್ದರು. ಅವು ಬಹು ಮಟ್ಟಿಗೆ ಪ್ರಸಿದ್ಧ ಇಂಗ್ಲಿಷ್ ಗ್ರಂಥಗಳ ಭಾಷಾಂತರಗಳು. ಚರಿತ್ರೆ, ರಾಜ್ಯಶಾಸ್ತ್ರ, ವ್ಯವಹಾರ ಶಾಸ್ತ್ರ, ಅರ್ಥ ಶಾಸ್ತ್ರ; ಫಿಸಿಕ್ಸ್, ಕೆಮಿಸ್ಟ್ರಿ, ಬಯಾಲಜಿ ಮೊದಲಾದ ವಿಜ್ಞಾನ ಶಾಸ್ತ್ರಗಳು—ಇವೆಲ್ಲವೂ ಆ ಪ್ರದರ್ಶನದಲ್ಲಿದ್ದುವು. ಅವುಗಳನ್ನು ನೋಡಿ ನನಗೆ ಅತ್ಯಂತ ಸಂತೋಷವಾಯಿತು. ಪ್ರಯತ್ನಪಟ್ಟರೆ, ಪ್ರೋತ್ಸಾಹ ದೊರೆತರೆ, ಅಂಥಾ ಗ್ರಂಥಗಳನ್ನು ಕನ್ನಡದಲ್ಲಿ ಬರೆಯುವುದು ಸಾಧ್ಯವೆಂಬುದಕ್ಕೆ ಅಲ್ಲಿ ನಿದರ್ಶನವು ಸಿದ್ಧವಾಗಿತ್ತು. ನಾವು ಭಾಷಾಂತರವನ್ನೇ ಮಾಡಬೇಕೆಂದು ನಾನು ಹೇಳುವುದಿಲ್ಲ. ಆ ಬಗೆಯ ಘನ ವಿಷಯಗಳಿಗೆ ನಮ್ಮ ಭಾಷೆಯನ್ನು ಒಗ್ಗಿಸಿಕೊಳ್ಳಲಾಗುವುದೆಂಬುದು ಮಾತ್ರವೇ ನನ್ನ ಸೂಚನೆ.

ದೇಶ ವಿದೇಶಗಳ ಸಂಕ್ಷೇಪ ಚರಿತ್ರೆಗಳನ್ನು ಬರೆಯಲು ನಮ್ಮವರೇತಕ್ಕೆ ಮೊದಲುಮಾಡಬಾರದು? ನಾನಾ ಜನ ಜನಾಂಗಗಳು ಸ್ವಾತಂತ್ರ್ಯಕ್ಕಾಗಿ, ಉಚ್ಛ್ರಾಯಕ್ಕಾಗಿ, ಸಮಾಜ ಸಂಸ್ಕಾರಕ್ಕಾಗಿ, ಭಾಷಾಭ್ಯುದಯಕ್ಕಾಗಿ ನಡೆಸಿದ ಹೋರಾಟಗಳೂ, ಪಟ್ಟ ಶ್ರಮಗಳೂ, ಹಿಡಿದ ಉಪಾಯಗಳೂ, ಸಾಧಿಸಿದ ಆಕಾಂಕ್ಷೆಗಳೂ ನಮ್ಮವರಿಗೆ ತಿಳಿಯಬೇಡವೆ? ಅಥವಾ, ಸ್ವಾರಸ್ಯಪಡಲಾರವೆ? ಚರಿತ್ರೆಯು ಪ್ರತ್ಯಕ್ಷ ಕಾವ್ಯ. ಜಗಜ್ಜೀವಿತ ಪ್ರವಾಹದಲ್ಲಿ ಕಾಣಬಾರದ ಕಾವ್ಯವಸ್ತು ಮತ್ತೆಲ್ಲಿ ದೊರೆಯಲಾದೀತು? ಮನಸ್ಸಿನೊಳಗಿನ ಆವಿಯ ಕಾವ್ಯವು ಸಾರ್ಥಕವಾಗಿ ಬಾಳಬೇಕಾದರೆ ಅದನ್ನು ಬರೆಯುವವನಿಗೂ ಓದುವವರಿಗೂ ತಮ್ಮ ಹೊರಗಿನ ಜೀವ ಸಮುದ್ರದ ಕಾವ್ಯವು ಚೆನ್ನಾಗಿ ತಿಳಿದಿರಬೇಕು—ಎಂದರೆ, ಲೋಕ ಪರಿಸ್ಥಿತಿಯ ಜ್ಞಾನವು ವಿಶದವಾಗಿರಬೇಕು. ಹೀಗೆ ಉತ್ತಮ ಸಾಹಿತ್ಯ ದೃಷ್ಟಿಯಿಂದಲೂ ಸಹ ಚರಿತ್ರೆಯು ಅವಶ್ಯವಾಗಿದೆ. ನಮ್ಮ ಜನರಲ್ಲಿ ಒಂದು ಹೊಸ ಹುರುಪೂ, ಹೊಸ ವಿಚಾರ ಬುದ್ಧಿಯೂ, ಹೊಸ ಸಂಸ್ಕಾರ ಶ್ರದ್ಧೆಯೂ ಹುಟ್ಟುವುದಕ್ಕಂತೂ ಚರಿತ್ರೆಯಿಂದಾಗಬಹುದಾದ ಉಪಕಾರವು ಅಷ್ಟಿಷ್ಟಲ್ಲ.

ಈ ಸ್ಥೂಲ ಲೋಕಜೀವನದ ವಿಷಯಗಳು ಉತ್ತಮ ಲೇಖನ ಶಕ್ತಿಗೆ ತಕ್ಕವಲ್ಲವೆಂದು ಯಾರೂ ತಿಳಿದಿರಲಾರರು. ಪಾಶ್ಚಾತ್ಯರಲ್ಲಿ ಕಾವ್ಯದಷ್ಟು ಸರಸ ರೀತಿಯಿಂದ ವಿಜ್ಞಾನ ವಿಷಯಗಳನ್ನು ನಿರೂಪಿಸುವವರಿದ್ದಾರೆ; ಕಾದಂಬರಿಯಷ್ಟು ಕುತೂಹಲ ಹುಟ್ಟಿಸುವಂತೆ ಚರಿತ್ರೆ ಬರೆಯುವವರಿದ್ದಾರೆ. ನಮ್ಮಲ್ಲಿ ಅದು ಅಸಾಧ್ಯವೆಂದು ನಾನು ನಂಬಲಾರೆ.

ಇನ್ನೂ ಒಂದು ಮಾತನ್ನು ಲಾಲಿಸಬೇಕು: ಲೇಖಕರಲ್ಲಿ ಅನೇಕ ಅಂತಸ್ತುಗಳು ಸ್ವಭಾವ ಸಿದ್ಧವಾಗಿ ಇದ್ದೇ ಇರುತ್ತವೆ. ಎಲ್ಲರೂ ಮೊದಲನೆಯ ಅಂತಸ್ತಿಗೇ

ಕೈಹಾಕುವುದರಿಂದ ನಮ್ಮಲ್ಲಿರುವ ಶಕ್ತಿಗೆ ಪೂರ್ಣ ಪ್ರತಿಫಲ ದೊರೆವಂತಾಗುವುದಿಲ್ಲ. ಎರಡನೆಯ ಅಂತಸ್ತು ಮೂರನೆಯ ಅಂತಸ್ತುಗಳ ಲೇಖಕರಿಗೂ ನಾಡಿನ ಬಾಳಿಕೆಯಲ್ಲಿಯೂ ನಾಡಿಗರ ಕೃತಜ್ಞತೆಯಲ್ಲಿಯೂ ಬೇಕಾದಷ್ಟು ಸ್ಥಳವಿದೆ. ಮೊದಲ ದರ್ಜೆಯ ಪ್ರಯತ್ನದಲ್ಲಿ ಅರ್ಧ ಜಯವನ್ನೋ ಸಂದಿಗ್ಧ ಜಯವನ್ನೋ ಪಡೆವುದಕ್ಕಿಂತ ಎರಡನೆಯ ದರ್ಜೆಯಲ್ಲಿ ಪೂರ್ಣ ಜಯವನ್ನು ಪಡೆವುದು ಲೇಖಕನಿಗೆ ಹೆಚ್ಚು ಯಶಸ್ಕರವೆಂದೂ ದೇಶಕ್ಕೆ ಹೆಚ್ಚು ಪ್ರಯೋಜನಕರವೆಂದೂ ನಾನು ಭಾವಿಸಿದ್ದೇನೆ. ನ್ಯಾಯವಾಗಿ ನೋಡಿದರೆ, ಸರಸ್ವತಿಯ ಊಳಿಗದಲ್ಲಿ ಮೇಲು ಕೀಳುಗಳ ಎಣಿಕೆಯಿರಬಹುದೆ?

## ಮಹಾಜನ ವಾಚನಾಭ್ಯಾಸ

ಸಾಹಿತ್ಯಾಭಿವೃದ್ಧಿಯನ್ನು ಕುರಿತು ಮಾತನಾಡುವಾಗ ದೇಶದ ಮಹಾಜನರು ಅದಕ್ಕಾಗಿ ಹೇಗೆ ಸಹಕರಿಸಬಹುದೆಂಬುದನ್ನು ಸೂಚಿಸದೆ ತೀರದು. ಕನ್ನಡದಲ್ಲಿ ಕಾಲೋಚಿತವಾದ ಗ್ರಂಥರಚನೆ ಇಲ್ಲವೆಂದು ಹೇಳುವ ದಿವಸ ಹೋಗಿದೆ. ಗ್ರಂಥ ರಾಶಿಯು ದಿನೇ ದಿನೇ ಬೆಳೆಯುತ್ತಿದೆ. ಆದರೆ ಓದುವವರ ಸಂಖ್ಯೆ ಅದರಂತೆ ಬೆಳೆಯುತ್ತಿಲ್ಲ. ನಮ್ಮ ನೆರೆಹೊರೆಯ ತಮಿಳರಲ್ಲಿಯೂ, ತೆಲುಗರಲ್ಲಿಯೂ ಇರುವ ಮಟ್ಟಿಗೆ ವಾಚನಾಭ್ಯಾಸವು ನಮ್ಮಲ್ಲಿಲ್ಲ. ನಮ್ಮ ವಾಚಕರಲ್ಲಿ ತಾರತಮ್ಯ ವಿಮರ್ಶೆಯ ಅಭ್ಯಾಸವೂ ಇನ್ನೂ ಬೆಳೆಯಬೇಕೆಂದು ತೋರುತ್ತದೆ. ಓದುವವರಲ್ಲಿ ಕಾಲಯಾಪನೆಗೆಂದು ಪುಸ್ತಕ ಕೈಗೆ ತೆಗೆದುಕೊಳ್ಳುವವರೇ ಬಹು ಮಂದಿ. ನಮ್ಮ ಇಂಗ್ಲಿಷ್ ವಿದ್ಯಾವಂತರಂತೂ ಕನ್ನಡ ಪುಸ್ತಕಗಳು ಹೆಂಗಸರಿಗೆ ಮಾತ್ರವೇ ಎಂದು ತಿಳಿದುಕೊಂಡಿರುವಂತೆ ನಡೆಯುತ್ತಾರೆ. ಗಂಡಸರೂ—ಇಂಗ್ಲಿಷ್ ಬಲ್ಲವರೂ ಸಹ—ಓದಿ ಲಾಭಪಡೆಯಲಾಗುವಂಥ ಪುಸ್ತಕಗಳು ಕನ್ನಡದಲ್ಲಿ ಹುಟ್ಟಿವೆ, ಇನ್ನೂ ಹುಟ್ಟುತ್ತವೆ. ಆದರೆ ಮಹಾಜನರು ಉದಾಸೀನರಾಗಿ ನಿಂತರೆ, ಅವು ಏಕೆ ಹುಟ್ಟಬೇಕು? ಟೆಕ್ಸ್ಟ್ ಬುಕ್ ಕಮಿಟಿಯ ಪ್ರಸಾದವನ್ನವಲಂಬಿಸಿದಲ್ಲದೆ ಪುಸ್ತಕಕ್ಕೆ ನಿಲುಕಡೆ ದೊರೆಯದ ಹಾಗಿದ್ದರೆ, ಅಂಥಾ ದೇಶದ ಸಾಹಿತ್ಯವು ದೂರ ಸಾಗದು. ವಾಚಕಾಲಯಗಳಿಂದ ಪುಸ್ತಕಗಳನ್ನೆರುವಲಾಗಿ ತೆಗೆದುಕೊಳ್ಳುವುದರಲ್ಲಿ—ಲೇಖಕನಿಗೆ ಪ್ರೋತ್ಸಾಹ ಕಡಮೆಯಾಗುವ ಮಾತಂತಿರಲಿ—ವಾಚಕನಿಗೆ ಪ್ರಯೋಜನ ಕಡಮೆ. ಒಳ್ಳೆಯ ಪುಸ್ತಕವು ಒಂದು ಸಲದ ಓದಿನಿಂದ ಸಿಪ್ಪೆಯಾಗಿ ಹೋಗತಕ್ಕುದಲ್ಲ; ಪದೇಪದೇ ನೋಡುವುದರಿಂದಲೇ ಅದರ ಗುಣವನ್ನರಿಯಲಾಗುವುದು. ಇದಕ್ಕಾಗಿ ಅದು ನಮ್ಮ ಬಳಿಯಿರಬೇಕು. ಕನ್ನಡ ನಾಡಿನಲ್ಲಿ ಪ್ರತಿಯೊಂದು ಮನೆಗೂ ದೀಪವು ಹೇಗೆಯೋ ಪುಸ್ತಕವೂ ಹಾಗೆಯೇ ಅವಶ್ಯವಸ್ತುವೆಂಬುದನ್ನು ನಮ್ಮವರು ಗ್ರಹಿಸಬೇಕಾಗಿದೆ.

## ಜನದಂತೆ ಸಾಹಿತ್ಯ

ಇದಕ್ಕಿಂತ ಬಲು ದೊಡ್ಡ ವಿಚಾರವೊಂದಿದೆ: ಸಾಹಿತ್ಯ ಗುಣವು ಮುಖ್ಯವಾಗಿ ಜನ ಜೀವನ ಗುಣದ ಪ್ರತಿಫಲ. ಲೇಖಕನಿಗೆ ಬೇಕಾಗಿರುವ ಕಾವೂ ಹುರುಪೂ

ಮುಖ್ಯವಾಗಿ ಅವನ ಸುತ್ತುಮುತ್ತಲಿನ ಸನ್ನಿವೇಶಗಳಿಂದ ದೊರೆಯಬೇಕು. ತನ್ನ ಲೇಖನಕ್ಕೆ ಜೀವ ಕೊಡುವ ಪ್ರವೃತ್ತಿಯನ್ನೂ ಪ್ರೇರಣೆಯನ್ನೂ ತನ್ನ ಸಮಾಜದಿಂದ ಅವನು ಸಂಪಾದಿಸಿಕೊಳ್ಳಬೇಕು. ಹೀಗಾಗಲು, ಆ ಸಮಾಜವು ಉತ್ಕರ್ಷಕರಗಳಾದ ಪ್ರವೃತ್ತಿಗಳಿಂದಲೂ ಉಜ್ಜ್ವಲಗಳಾದ ಪ್ರೇರಣೆಗಳಿಂದಲೂ ಕೂಡಿದ್ದಾಗಿರಬೇಕು. ಜನದ ಮನೋಬುದ್ಧಿಗಳು ಒಂದು ವೇಗದಿಂದ, ಒಂದು ತೀವ್ರ ಗತಿಯಿಂದ, ಒಂದು ಪೌರುಷದಿಂದ, ಒಂದು ಉತ್ಸಾಹದಿಂದ ಸಂಚರಿಸುತ್ತಿರಬೇಕು. ನೂತನ ಭಾವ ಸಂಘರ್ಷಣೆ, ನೂತನಾಭಿಪ್ರಾಯ ಸಂಘಟ್ಟನೆ, ನೂತನ ಸಂದೇಹ ವಿಮರ್ಶನೆ, ನೂತನ ತತ್ತ್ವ ಪರಿಶೋಧನೆ—ಇವು ಲೇಖಕರಿಗೆ ಬೇಕಾದ ವಾತಾವರಣ. ಹೊಸ ಆಶಯ, ಹೊಸ ಉತ್ಸಾಹ, ಹೊಸ ವೀರ್ಯ—ಇವು ಇಲ್ಲದಿದ್ದರೆ ಜನತೆಯ ಜೀವನವೂ ಹೊಸದಾಗದು, ಅದರ ಸಾಹಿತ್ಯವೂ ಹೊಸದಾಗದು. ಜನವಿದ್ದಂತೆ ಸಾಹಿತ್ಯ. ಆದಕಾರಣ, ಕನ್ನಡಿಗರು ತಮ್ಮ ಬಾಳು ಬದುಕುಗಳನ್ನು ತಿದ್ದಿಕೊಂಡು, ಅದಕ್ಕೊಂದು ಹೊಸತನವನ್ನು ತಂದುಕೊಳ್ಳಬೇಕು. ಎಲ್ಲ ಜಾನಪದ ಸಮಾರಂಭಗಳೂ—ರಾಜಕೀಯವಾದುವೂ, ಸಾಮಾಜಿಕವಾದುವೂ, ಆರ್ಥಿಕವಾದುವೂ, ತಾತ್ತ್ವಿಕವಾದುವೂ—ಅದರಲ್ಲಿ ವ್ಯಾಪಿಸಿ ಅಭಿವರ್ಧಿಸಿದಷ್ಟೂ ಸಾಹಿತ್ಯಕ್ಕೆ ಸ್ಫೂರ್ತಿಯೂ ಪುಷ್ಟಿಯೂ ಹೆಚ್ಚಾಗಿ ದೊರೆಯುವುವು.

## ಸಹೃದಯ ಲಕ್ಷಣ

ಕಾವ್ಯ ವಾಚಕರು ವಿಶಾಲವಾದ, ಸರ್ವತೋಮುಖವಾದ, ಗ್ರಹಣ ಶಕ್ತಿಯನ್ನು ಸಂಪಾದಿಸಬೇಕು. ಸೌಂದರ್ಯದ ಅನುಭವವು ಅಭ್ಯಾಸದಿಂದ ಬೆಳೆಯುತ್ತದೆ. ಮನಸ್ಸು ದೊಡ್ಡದಾದಷ್ಟೂ, ನವುರಾದಷ್ಟೂ, ವಿವಿಧ ರಸಗಳ ಸುಖಗಳು ಅದಕ್ಕೆ ದೊರೆಯುತ್ತವೆ. ಕಾವ್ಯವು ಒಂದು ವಿಸ್ತಾರವಾದ ತೋಟ. ಅದರಲ್ಲಿ ಸಣ್ಣ ಪುಟ್ಟ ಗಿಡಗಳೂ, ಚಿಕ್ಕ ದೊಡ್ಡ ಮರಗಳೂ, ಅಲೆದಾಡುವ ಬಳ್ಳಿಗಳೂ, ಮೌನವಾದ ಹುಲ್ಲುಗಾವಲುಗಳೂ—ಎಲ್ಲವೂ ಇರುತ್ತವೆ. ಕಾವ್ಯೋಪಾಸಕನು ಎಲ್ಲದರ ಸೊಬಗನ್ನೂ ಕಾಣುವವನಾಗಬೇಕು. ಬೆಟ್ಟ ಹತ್ತುವಾಗ ಹೆಜ್ಜೆ ಹೆಜ್ಜೆಯಲ್ಲಿಯೂ ಮೇಲೆ ನೋಡಿದರೆ ಆಗುವ ಹರ್ಷವೊಂದು, ಹಿಂದಿರುಗಿ ನೋಡಿದರೆ ಆಗುವ ಹರ್ಷವೊಂದು ; ಝರಿ, ಜಲಪಾತ, ಕಣಿವೆ, ಕಾಡು, ಸಣ್ಣ ಸಣ್ಣ ಮೂಲಿಕೆಗಳು, ಬಂಡೆಯನ್ನು ಭೇದಿಸುವ ಭೂತವೃಕ್ಷಗಳು—ಇವುಗಳಲ್ಲಿ ಒಂದೊಂದು, ಒಂದೊಂದು ಬಗೆಯ ಸಂತೋಷವನ್ನು ಕೊಡುತ್ತದೆ. ಕಣ್ಣುಳ್ಳ ವಾಚಕನಿಗೆ ಕಾವ್ಯ ಪರ್ವತಾರೋಹಣದಲ್ಲಿ ಹಾಗೆಯೇ.

## ಒಂದು ದೊಡ್ಡ ನಷ್ಟ

ಕನ್ನಡ ಭಾಷಾ ಪ್ರಪಂಚದಲ್ಲಿ ಕಳೆದ ಕೆಲವು ತಿಂಗಳುಗಳಲ್ಲಿ ನಡೆದ ಕೆಲವು ವಿಶೇಷ ಸಂಗತಿಗಳನ್ನು ಸಂಕ್ಷೇಪವಾಗಿಯಾದರೂ ತಮ್ಮ ಗಮನಕ್ಕೆ ತರುವುದು ನನ್ನ ಕರ್ತವ್ಯವಾಗಿದೆ. ಅವುಗಳಲ್ಲಿ ಮೊದಲನೆಯದು ಶೋಕಾಸ್ಪದವಾದದ್ದು:

ಕನ್ನಡದ ಸಂತತಾಭಿಮಾನಿಗಳೂ ಕರ್ಣಾಟಕ ಸಾಹಿತ್ಯ ಪರಿಷತ್ತು ಸ್ಥಾಪನೆಯಾದಂದಿನಿಂದ ಅದಕ್ಕೆ ಆಧಾರ ಸ್ತಂಭಪ್ರಾಯರೂ ಆಗಿದ್ದ ರಾಜಸಭಾ ಭೂಷಣ ಶ್ರೀಮಾನ್ ಕರ್ಪೂರ ಶ್ರೀನಿವಾಸರಾಯರವರು ಕಾಲವಶರಾದುದು ನಮಗೆ ಎಣಿಸಲಾಗದಷ್ಟು ದೊಡ್ಡ ನಷ್ಟವಾಗಿದೆ. ಅವರಂತಹ ವಿದ್ವತ್ಪಕ್ಷಪಾತಿಗಳೂ ಸಾಹಿತ್ಯ ಪ್ರೇಮಿಗಳೂ ಸಹಾಯ ಕರ್ತರೂ ದೊರಕುವುದು ಸುಲಭವಲ್ಲ.

## ನಿಘಂಟು

ಇನ್ನುಳಿದಿರುವುವು ಸಂತೋಷ ವಾರ್ತೆಗಳು. ಮೈಸೂರಿನ ಸರಕಾರದವರೂ, ವಿಶ್ವವಿದ್ಯಾಪೀಠದವರೂ ಸೇರಿ ಇಂಗ್ಲಿಷ್–ಕನ್ನಡ ನಿಘಂಟುವೊಂದನ್ನು ತಯಾರು ಮಾಡಿಸುವ ಕಾರ್ಯವನ್ನು ಕೈಕೊಂಡು, ಅದಕ್ಕಾಗಿ ಒಂದು ಸಮಿತಿಯನ್ನು ನಿಯಾಮಕ ಮಾಡುವುದರಲ್ಲಿದ್ದಾರೆ. ಈ ನಿಘಂಟನ್ನು ಸರ್ವ ಸಮರ್ಪಕವನ್ನಾಗಿ ಮಾಡಲು ಸಾಧ್ಯವಿರುವ ಎಲ್ಲ ಪ್ರಯತ್ನಗಳೂ ನಡೆಯುವುವೆಂದೂ, ಅದು ವಿಶೇಷ ವಾಗಿ ಪಾಶ್ಚಾತ್ಯರ ವಿದ್ಯೆ ವಿಜ್ಞಾನಗಳನ್ನು ಕುರಿತು ಬರೆಯುವವರಿಗೂ ಓದುವ ವರಿಗೂ ಉಪಯುಕ್ತವಾದೀತೆಂದೂ ನನಗೆ ಭರವಸೆಯಿದೆ. ಅದನ್ನು ಬರೆಯು ವುದರಲ್ಲಿ ಬರುವ ಅನುಭವವು ಮುಂದೆ ಕನ್ನಡದ, ಕನ್ನಡ–ಇಂಗ್ಲಿಷು ಮತ್ತು ಪಾರಿಭಾಷಿಕ ಪದಗಳ ನಿಘಂಟುಗಳನ್ನು ತಯಾರು ಮಾಡುವುದಕ್ಕೆ ಉಪಯೋಗ ವಾದೀತು.

## ಪರಿಷನ್ಮಂದಿರ

ಮತ್ತೊಂದು ಲಾಭ: ಕರ್ಣಾಟಕ ಸಾಹಿತ್ಯ ಪರಿಷತ್ತು ಈ ೧೮ ವರ್ಷವೂ ಬಾಡಿಗೆಯ ಮನೆಗಳಲ್ಲಿ ವಾಸಮಾಡಿಕೊಂಡಿರಬೇಕಾಗಿತ್ತು. ಈಗ ಮೈಸೂರಿನ ಶ್ರೀಮನ್ಮಹಾರಾಜರವರ, ಅವರ ಸರಕಾರದವರ ಮತ್ತು ಇತರ ಪರಿಷದಭಿಮಾನಿಗಳ ಔದಾರ್ಯದಿಂದ, "ಶ್ರೀ ಕೃಷ್ಣರಾಜೇಂದ್ರ ಕರ್ಣಾಟಕ ಸಾಹಿತ್ಯ ಪರಿಷನ್ಮಂದಿರ"ವು ಬೆಂಗಳೂರಿನಲ್ಲಿ ನಿರ್ಮಿತವಾಗಿ, ಆವಾಸಕ್ಕೆ ಸಿದ್ಧವಾಗಿದೆ. ಶುಭ ದಿನ, ಶುಭ ಹಸ್ತದಿಂದ ಅದರ ಕವಾಟ ಪಾಟನೋತ್ಸವವನ್ನು ಮಾಡಿಸಿದ ಬಳಿಕ, ಪರಿಷತ್ತಿನ ಮುಂದಿನ ಕಾರ್ಯ ಸಮಾರಂಭಗಳು ಸಾಂಗವಾಗಿ ನಡೆಯಲು ಅಲ್ಲಿ ಬೇಕಾದ ಅನುಕೂಲ ಗಳಿರುವುವು. ಪುಸ್ತಕ ಭಾಂಡಾಗಾರಕ್ಕೂ, ಪತ್ರಿಕಾ ವಾಚಕರಿಗೂ, ಉಪನ್ಯಾಸ ಚರ್ಚೆಗಳಿಗಾಗಿ ಸೇರುವ ಪಂಡಿತ ಪರಿಶೋಧಕ ಸಭೆಗಳಿಗೂ ಅಲ್ಲಿ ತಕ್ಕ ಸ್ಥಳಾನು ಕೂಲವನ್ನು ಕಲ್ಪಿಸಿದೆ. ಅಲ್ಲಿ ನೆಲಸಿದ ಬಳಿಕ, ಪರಿಷತ್ತಿನ ಕಾರ್ಯಗಳು ಹತ್ತರಷ್ಟಿ ಪ್ಪತ್ತರಷ್ಟಾಗಿ ಬೆಳೆದು ನಡೆದಾವೆಂದು ನನ್ನ ಭರವಸೆ. ಆ ಮಂದಿರವು ಮೈಸೂರಿ ನವರದು ಮಾತ್ರ ಅಲ್ಲ, ಎಲ್ಲ ಕನ್ನಡಿಗರಿಗೂ ಸೇರಿದ್ದು. ಕರ್ಣಾಟಕ ಸಾರಸ್ವತ ಪ್ರಪಂಚಕ್ಕೆಲ್ಲ ಅದು ಕೇಂದ್ರಸ್ಥಾನವಾಗಬೇಕು. ಎಲ್ಲ ಸಾಹಿತ್ಯ ಸೇವಕರೂ ಅದನ್ನು ತಮ್ಮ ಕುಲದೈವ ಕ್ಷೇತ್ರವೆಂದು ತಿಳಿಯಬೇಕು. ಹೀಗಾಗಲು ತಮ್ಮೆಲ್ಲರ ವಿಶ್ವಾಸವೂ ಸಹಕಾರವೂ ಬೇಕೆಂದು ಪ್ರಾರ್ಥಿಸುತ್ತೇನೆ.

## ಪ್ರತ್ಯೇಕ ಕರ್ಣಾಟಕ ಪ್ರಾಂತ

ಕರ್ಣಾಟಕ ಪ್ರದೇಶಗಳ ಏಕೀಕರಣ ಕಾರ್ಯವು ಈಚೆಗೆ ಸಮರ್ಪಕವಾಗಿ ಸಾಗಿಲ್ಲ. ಇದರ ಕಾರಣಗಳು ನಮಗೆ ಈಗ ಅಪ್ರಕೃತ. ಆ ಉದ್ದೇಶವನ್ನು ಮಾತ್ರ ನಾವು ಮರೆಯದೆ ಪ್ರಕಾಶಕ್ಕೆ ತರುತ್ತಿರಬೇಕು. ಹರಕು ಮುರುಕಾಗಿ ಒಡೆದು ಹೋಗಿರುವ ಕನ್ನಡ ನಾಡು ಮತ್ತೆ ಒಂದುಗೂಡಿದಲ್ಲದೆ ನಮ್ಮ ಜನಕ್ಕೂ ನಮ್ಮ ಭಾಷೆಗೂ ಏಳಿಗೆಯಾಗದು. ಮೈಸೂರು, ಹೈದರಾಬಾದು ಮೊದಲಾದ ದೇಶೀಯ ಸಂಸ್ಥಾನಗಳ ಪ್ರಸಕ್ತಿ ತೊಡಕಾದುದು ; ಅದು ಹಾಗಿರಲಿ. ಬ್ರಿಟಿಷ್ ಸರಕಾರದ ಪ್ರತ್ಯಕ್ಷಾಧಿಪತ್ಯಕ್ಕೆ ಒಳಪಟ್ಟಿರುವ ಬೊಂಬಾಯಿ, ಮದ್ರಾಸು ಪ್ರಾಂತಗಳ ಕನ್ನಡ ಪ್ರದೇಶಗಳನ್ನೂ ಕೊಡಗನ್ನೂ ಸೇರಿಸಿ ಒಂದು ಪ್ರತ್ಯೇಕ ಕನ್ನಡ ಪ್ರಾಂತ ವನ್ನು ಏರ್ಪಡಿಸುವುದರಲ್ಲಿ ಕಷ್ಟವೇನೂ ಇಲ್ಲ. ಇದಕ್ಕೆ ಬೇಕಾಗಿರುವುದು ಸರಕಾರದ ಇಷ್ಟ. ಈ ವಿಚಾರದಲ್ಲಿ ಕನ್ನಡಿಗರಷ್ಟು ಅತಂತ್ರ ಸ್ಥಿತಿಯಲ್ಲಿ ಇಂಡಿಯಾ ದೇಶದ ಮತ್ತಾವ ದೇಶ್ಯ ಭಾಷೆಯವರೂ ಇಲ್ಲ. ನಮಗಿಂತ ಕಿರಿಯವರಾದ ಓಢ್ರರಿಗೆ ಕ್ಷಿಪ್ರದಲ್ಲಿಯೇ ಸ್ವಂತ ಪ್ರಾಂತವೇರ್ಪಡುವಂತಿದೆ. ಈ ಪ್ರಶ್ನೆಯನ್ನು ನಮ್ಮ ಜನರು ಹಿಂದಕ್ಕೆ ಬೀಳಗೊಡಿಸದೆ ಬೇಗ ಮುಂದಕ್ಕೆ ನುಗ್ಗಿಸಬೇಕು. ಇದರಲ್ಲಿ ಮಂಗಳೂರು ಕಡೆಯವರೂ ಕೊಡಗಿನವರೂ ಇದುವರೆಗೆ ತೋರಿರುವುದಕ್ಕಿಂತ ಹೆಚ್ಚು ಆಸಕ್ತಿ ಆತುರಗಳನ್ನು ತೋರಬೇಕೆಂದು ಬೇಡುತ್ತೇನೆ.

## ಕನ್ನಡ ವಿಶ್ವವಿದ್ಯಾ ಪೀಠ

ಅಖಿಲ ಕರ್ಣಾಟಕಕ್ಕೆ ವಿಶ್ವವಿದ್ಯಾಪೀಠವೊಂದು ಸ್ಥಾಪಿತವಾಗಬೇಕೆಂಬುದು ಬಹು ದಿನಗಳ ಆಶೆ. ಅದು ಶೀಘ್ರದಲ್ಲಿ ನೆರವೇರುವ ಸೂಚನೆ ಈಗ ಎಲ್ಲಿಯೂ ಕಾಣುವುದಿಲ್ಲ. ಮೈಸೂರಿನ ವಿಶ್ವವಿದ್ಯಾಲಯವೇ ತನ್ನ ಮೇರೆಯನ್ನು ವಿಸ್ತಾರ ಗೊಳಿಸಬೇಕೆಂಬುದು ಸುಲಭಸಾಧ್ಯವಾದ ಸಲಹೆಯಲ್ಲ. ಸಾರ್ವಭೌಮ ಸರಕಾರವು ತನ್ನ ಪ್ರಜೆಯನ್ನು ಆಶ್ರಿತ ಸಂಸ್ಥಾನದ ಆಶ್ರಯಕ್ಕೆ ಬಿಟ್ಟುಕೊಡಲೊಪ್ಪೀತೆ? ಹೊರಗಿನ ಜನರು ತಾವಾಗಿ ಬಂದು ಮೈಸೂರಿನ ಬಿರುದುಗಳನ್ನು ಪಡೆದರೆ ಸಾರ್ವಭೌಮ ಸರಕಾರವು ಅವರನ್ನು ಮನ್ನಿಸೀತೆ?—ಇವೇ ಮೊದಲಾದ ಅನೇಕ ಸಮಸ್ಯೆಗಳನ್ನು ಹರಿಸುವುದು ಕಷ್ಟ. ಸದ್ಯಕ್ಕೆ ನಮ್ಮ ಪರಿಷತ್ತನ್ನು ನಾವು ಬಲಪಡಿಸಿದರೆ ಅದರ ಮೂಲಕ, ಮೈಸೂರಿನ ಮತ್ತು ಇತರ ಪ್ರಾಂತಗಳ ವಿದ್ಯಾ ಪ್ರಚಾರದ ಇಲಾಖೆಗಳ ಸಹಕಾರದಿಂದ, ಕನ್ನಡ ಸಾಹಿತ್ಯ ಪಾಂಡಿತ್ಯಕ್ಕೊಂದು ಪ್ರೋತ್ಸಹನ ಕ್ರಮವು ಏರ್ಪಡಬಹುದೆಂದು ತೋರುತ್ತದೆ. ಈಗ ಮೈಸೂರಿನಲ್ಲಿ ನಡೆಯುತ್ತಿರುವ ಅಪ್ಪರ್ ಸೆಕಂಡರಿ ಮತ್ತು ಪಂಡಿತ ಪರೀಕ್ಷೆಗಳನ್ನು ಪರಿಷ್ಕಾರಗೊಳಿಸಿ, ಆ ಪ್ರಶಸ್ತಿಗಳನ್ನು ಬೊಂಬಾಯಿ, ಮದ್ರಾಸು, ಕೊಡಗು, ಹೈದರಾಬಾದುಗಳ ಸರಕಾರಗಳು ಗೌರವಿ ಸುವಂತೆ ಮಾಡಿದರೆ ನಾನಾ ಭಾಗಗಳ ಕನ್ನಡ ವಿದ್ಯಾರ್ಥಿಗಳೂ ಒಂದು ಗೋಷ್ಠಿ ಯಲ್ಲಿ ಸೇರುವಂತಾಗಿ ಆ ಮೂಲಕ ಕನ್ನಡದ ವಾತಾವರಣವು ಹಬ್ಬಿಕೊಂಡೀತೆಂದು ತೋರುತ್ತದೆ.

## ಹಳೆಯ ತೆರದ ಪಾಂಡಿತ್ಯ

ನಮಲ್ಲಿ ಹಳೆಯ ತೆರದ ಪಾಂಡಿತ್ಯವು ಕಡಮೆಯಾಗಕೂಡದೆಂದು ನನ್ನ ಕೋರಿಕೆ. ಮೈಸೂರು ಯೂನಿವರ್ಸಿಟಿಯ ಕನ್ನಡದ ಎಂ.ಎ. ತರಗತಿಯಲ್ಲಿ ಪಂಡಿತ ಪರೀಕ್ಷೆಯ ಗ್ರಂಥಗಳು ಪಾಠವಾಗುತ್ತಿವೆಯೆಂಬುದು ನಿಜ. ಆ ಪಾಂಡಿತ್ಯದ ಬಗೆ ಬೇರೆ. ಅದು ತುಂಬಾ ಬೆಲೆಯುಳ್ಳದು. ಅದು ನಮಗೆ ಅವಶ್ಯವಾಗಿ ಬೇಕು. ಅದರ ಜೊತೆಗೆ ಪೂರ್ವ ಕಾಲದ, ಎಂದರೆ ಕಾವ್ಯ ಶಾಸ್ತ್ರ ವಾಕ್ಯಗಳನ್ನು ಮುಖಸ್ಥವಾಗಿಟ್ಟು ಕೊಂಡಿರುವ, ಪಂಡಿತರ ಸಹಾಯವೂ ಬೇಕು. ಇವರಿಗೆ ಎಸ್.ಎಸ್.ಎಲ್.ಸಿ. ತರಗತಿಯ ವರೆಗಾದರೂ ಇಂಗ್ಲಿಷ್ ಭಾಷಾ ಪರಿಚಯವಿರಬೇಕು. ಇಂಥವರು ನಮ್ಮ ಪ್ರಾಥಮಿಕ ಮಾಧ್ಯಮಿಕ ಪಾಠಶಾಲೆಗಳಲ್ಲಿ ಬೋಧಕರಾದರೆ ನಮ್ಮ ಭಾಷೆಗೆ ಮಹೋಪಕಾರವಾದೀತು.

## ಮೈಸೂರು ಯೂನಿವರ್ಸಿಟಿ

ಕನ್ನಡಕ್ಕೆ ಮನ್ನಣೆ ಕೊಡುವುದು ತನ್ನ ಕರ್ತವ್ಯವೆಂಬ ತತ್ತ್ವವನ್ನು ಮೈಸೂರು ವಿಶ್ವವಿದ್ಯಾಲಯವು ಅಂಗೀಕರಿಸಿದೆ. ಕನ್ನಡ ಗ್ರಂಥ ಪ್ರಕಟನೆಗಾಗಿ ಒಂದಿಷ್ಟು ಹಣ ತೆಗೆದಿಟ್ಟು ಒಂದು ಸಮಿತಿಯಿಂದ ಕೆಲಸ ಮಾಡಿಸುತ್ತಿದೆ. ಆ ವಿದ್ಯಾ ಪೀಠವು ಕನ್ನಡಕ್ಕಾಗಿ ಮಾಡಬಹುದಾದ ಉಪಕಾರಗಳಲ್ಲಿ ಮುಖ್ಯವಾದ ಒಂದು, ಕನ್ನಡ ಪ್ರಬಂಧ ರಚನೆಯನ್ನೂ ಅದಕ್ಕೆ ಬೇಕಾಗುವಷ್ಟು ಕಾವ್ಯ ವ್ಯಾಸಂಗವನ್ನೂ ಪ್ರತಿಯೊಂದು ಶಾಖೆಯ ಮತ್ತು ಪ್ರತಿಯೊಂದು ದರ್ಜೆಯ ವಿದ್ಯಾರ್ಥಿಗಳಿಗೂ ನಿರ್ಬಂಧವನ್ನಾಗಿ ಮಾಡುವುದು. ಆ ವಿದ್ಯಾರ್ಥಿಗಳು ಗಳಿಸುವ ಎಲ್ಲ ವಿಜ್ಞಾನ, ಎಲ್ಲ ಕಲಾ ಜ್ಞಾನಗಳಿಗೂ ಪರಮ ಸಾರ್ಥಕ್ಯ ಬರುವುದು, ಆ ಪಾಂಡಿತ್ಯದ ಫಲಗಳು ಅವರ ಜನದ ಉಪಯೋಗಕ್ಕೆ ಒದಗಿದಾಗ. ಗಹನಗಳೂ ಜಟಿಲಗಳೂ ಆದ ವಿಜ್ಞಾನ ವಿಷಯಗಳನ್ನು ಸ್ಫುಟವೂ ಸುಸಂಬದ್ಧವೂ ಆದ ರೀತಿಯಿಂದ ಕನ್ನಡದಲ್ಲಿ ತಿಳಿಸ ಬೇಕೆನ್ನುವವನಿಗೆ ಬಹು ದಿನದ ಅಭ್ಯಾಸವು ಅವಶ್ಯ. ಸಂತತವಾಗಿ ಕ್ರಮವಾಗಿ ಕನ್ನಡದಲ್ಲಿ ಲೇಖನಾಭ್ಯಾಸ ಮಾಡದವನಿಗೆ ವಾಕ್ಯರಚನೆಯ ಸಾಮರ್ಥ್ಯವು ಕೇವಲ ಇಂಗ್ಲಿಷಿನಿಂದಲೂ ಅವನಿಗಿರುವ ಶಾಸ್ತ್ರ ಜ್ಞಾನದಿಂದಲೂ ಮಾತ್ರವೇ ಬರುವು ದೆಂಬುದು ಭ್ರಾಂತಿಯ ಕಲ್ಪನೆ. ಪ್ರೌಢ ವರ್ಗಗಳ ವಿದ್ಯಾರ್ಥಿಗಳ ವ್ಯಾಸಂಗಕ್ಕೆ ಅರ್ಹವಾದ ಉದ್ದಾಮ ಗ್ರಂಥಗಳು ಕನ್ನಡದಲ್ಲಿ ಹೆಚ್ಚಾಗಿಲ್ಲದೆ ಇರಬಹುದು. ಅವರು ಕನ್ನಡವನ್ನೋದಬೇಕೆನ್ನುವುದು ವಿಜ್ಞಾನ ವಿಷಯ ಸಂಗ್ರಹಕ್ಕಾಗಿ ಅಲ್ಲ, ಭಾಷಾಭ್ಯಾಸಕ್ಕಾಗಿ. ಈ ಅಭ್ಯಾಸವು ವಿಶ್ವವಿದ್ಯಾಲಯದ ಪ್ರತಿಯೊಂದು ಇಲಾಖೆ ಯಲ್ಲಿಯೂ, ಪ್ರತಿಯೊಂದು ಅಂತಸ್ತಿನಲ್ಲಿಯೂ ಇರಬೇಕು.

## ಕನ್ನಡ ಪಾಠಕ್ರಮ

ನಮ್ಮ ಪರಿಷತ್ತು ಕನ್ನಡ ಪಠ್ಯಪುಸ್ತಕಗಳ ಕಡೆಗೂ ಪಾಠಕ್ರಮಗಳ ಕಡೆಗೂ ಹೆಚ್ಚು ಗಮನ ಕೊಡಬೇಕೆಂದು ತೋರುತ್ತದೆ. ಈ ಸಂಗತಿ ಹೊರಗಡೆ ಹೇಗಿದೆಯೋ

ನನಗೆ ತಿಳಿಯದು; ಮೈಸೂರಿನಲ್ಲಿ ಮಾತ್ರ ಪರಿಷ್ಕಾರಕ್ಕೆಡೆಬಿಟ್ಟಿದೆ. ಪಾಠ ಪುಸ್ತಕಗಳನ್ನಾರಿಸುವುದರಲ್ಲಿ ವಿಷಯ ಗೌರವ, ಭಾವ ಪುಷ್ಟಿ, ಶೈಲಿಯ ಶುದ್ಧತೆ—ಈ ಮೂರಂಶಗಳನ್ನು ಮಾತ್ರವೇ ಗಣನೆಗೆ ತೆಗೆದುಕೊಳ್ಳಬೇಕು. ನೀರಸವಾದ ಗ್ರಂಥ ಗಳಿಂದ ವಿದ್ಯಾರ್ಥಿಗಳಿಗೆ ಬೇಸರ ಹುಟ್ಟಿ, ಆಮೇಲೆ ಅವರಿಗೆ ಕನ್ನಡವೆಂದರೆ ಸಾಕೆನ್ನಿ ಸುವುದು. ಅದರಲ್ಲಿಯೂ ಎಳೆಯ ಮಕ್ಕಳೋದುವ ಪುಸ್ತಕಗಳನ್ನಾರಿಸುವುದರಲ್ಲಿ ವಿಶೇಷ ವಿವೇಚನೆ ಜಾಗರೂಕತೆಗಳಿರಬೇಕು. "ಕನ್ನಡದಲ್ಲಿರುವುದಿಷ್ಟೇನೆ?"—ಎಂದೆನ್ನಿಸುವ ಹಾಗಾಗಬಾರದು. ಹಿಂದಿನ "ಪದ್ಯಸಂಗ್ರಹ"ವೂ, "ಪದ್ಯಸಾರ"ವೂ ರಸಿಕರನ್ನೊಪ್ಪಿಸುವುದಾಗಿದ್ದುವು. ಅಲ್ಲಿಯ ಧ್ರುವಚರಿತ್ರೆ ನಳ ಚರಿತ್ರೆಗಳು ಲೋಕ ಪ್ರಿಯವಾಗಬೇಕಾದ ಕಾವ್ಯ ಗುಣಗಳಿಗೆ ನಿದರ್ಶನವಾಗಿದ್ದುವು. ಒಂದೇ ಪುಸ್ತಕ ವನ್ನು ಪಾಠ ಹೇಳಿ ಉಪಾಧ್ಯಾಯರು ಬೇಸರಪಡುವರೆಂದರೆ ವ್ಯಾಸ ವಾಲ್ಮೀಕಿಗಳ, ಷೇಕ್ಸ್‌ಪಿಯರ್ ವರ್ಡ್ಸ್‌ವರ್ತುಗಳ ಗತಿಯೇನು? ಧ್ರುವ ಚರಿತ್ರೆ ನಳಚರಿತ್ರೆಗಳಿಗೆ ಸರಿತೂಗುವಂಥಾ ಕಾವ್ಯಗಳು ಕನ್ನಡದಲ್ಲಿ ಅಪಾರವಾಗಿಲ್ಲವೆಂಬುದು ನಿಜ. ಆದರೂ ಶ್ರಮ ತೆಗೆದುಕೊಂಡು ಹುಡುಕಬೇಕು. ಆ ಶ್ರಮ ವ್ಯರ್ಥವಾಗಲಾರದು. ಆಗಲೂ, ಮೇಲ್ತರಗತಿಯದು ಹೆಚ್ಚಾಗಿ ಸಿಕ್ಕದೆಹೋದರೆ ಅದು ಮುಗಿದ ಬಳಿಕ ಕೀಳ್ತರಗತಿ ಗಿಳಿಯದೆ, ಮತ್ತೆಮತ್ತೆ ಮೇಲ್ತರಗತಿಯದನ್ನೇ ಓದುವುದು ಲೇಸು. ಮೇಲ್ತರಗತಿಯ ಕಾವ್ಯವನ್ನು ಎರಡನೆಯ ಸಲ ಪಾಠ ಹೇಳುವುದರ ಬೇಸರಕ್ಕಿಂತ ಕೀಳ್ತರಗತಿಯದನ್ನು ಮೊದಲ ಸಲ ಪಾಠ ಹೇಳುವುದರ ಬೇಸರ ಕೂಡ ಕಷ್ಟವಲ್ಲವೆ?

ಪಾಠಕರ ಶಿಕ್ಷಣವೂ ಉತ್ತಮಪಡಬೇಕಾಗಿದೆ. ಹಿಂದೆ ಕಾವ್ಯ ಪಾಠ ಮಾಡಿಸು ತ್ತಿದ್ದವರು ಅಷ್ಟಿಷ್ಟಾದರೂ ಸಾಹಿತಿಗಳಾಗಿದ್ದವರು. ಅವರಿಗೆ ವ್ಯಾಕರಣದ ಮೇಲೆಯೂ ಭಾವಾರ್ಥದ ಮೇಲೆಯೂ ದೃಷ್ಟಿಯಿರುತ್ತಿತ್ತು; ಅವರಿಗೆ ಪುರಾಣ ಪೂರ್ವ ಕಥೆಗಳ ಜ್ಞಾನವಿತ್ತು. ಈಗಿನವರಿಗೆ ಪೂರ್ವ ಸಾಹಿತ್ಯದ ಪರಿಚಯ ಅಷ್ಟಿಲ್ಲ; ಇಂಗ್ಲಿಷ್ ಸಾಹಿತ್ಯದ ಸೊಬಗನ್ನೂ ಅವರು ಅರಿತವರಲ್ಲ. ಸಾಹಿತ್ಯ ಸ್ವರೂಪವನ್ನು ಸ್ವಲ್ಪ ಮಟ್ಟಿಗಾದರೂ ತಿಳಿದುಕೊಂಡಿರದವರು, ಶಿಷ್ಯರಿಗೆ ಭಾಷಾ ಮರ್ಯಾದೆ ಯನ್ನು ವಿವರಿಸುವುದೂ, ಅವರಿಗೆ ಕವಿಹೃದಯವನ್ನು ಬಿಚ್ಚಿ ತೋರಿಸುವುದೂ, ಅವರಲ್ಲಿ ಕಾವ್ಯೋತ್ಸಾಹವನ್ನು ಹುಟ್ಟಿಸುವುದೂ ಹೇಗಾದೀತು? ಇಂಗ್ಲೆಂಡಿನಲ್ಲಿ ಇಂಥಾ ಪ್ರಶ್ನೆಗಳು "ಇಂಗ್ಲಿಷ್ ಅಸೋಸಿಯೇಷನ್" ಎಂಬ ಆಂಗ್ಲ ಸಾಹಿತ್ಯ ಪರಿಷತ್ತಿನ ಪರಿಶೀಲನೆಗೆ ಬಂದು, ಸಂಸ್ಕಾರ ಪ್ರಯತ್ನಗಳು ನಡೆದಿವೆ. ನಮ್ಮ ಪರಿಷತ್ತೂ ಆ ಮೇಲ್ಪಂಕ್ತಿಯನ್ನನುಸರಿಸಿ ಕೆಲಸ ನಡೆಸಬೇಕು.

## ಕನ್ನಡ ಪತ್ರಿಕೆಗಳು

ಭಾಷೆ ಸಾಹಿತ್ಯಗಳ ಸ್ಥಿತಿಯನ್ನು ಚೆನ್ನಾಗಿರಿಸುವುದಕ್ಕೂ ಕೆಡಿಸುವುದಕ್ಕೂ ಶಕ್ತಿಯಿರತಕ್ಕ ಇತರ ಜನವರ್ಗಗಳಲ್ಲಿ ಮುಖ್ಯರಾದವರು (೧) ವೃತ್ತ ಪತ್ರಿಕೋದ್ಯೋಗಿಗಳು, (೨) ರಾಜ್ಯ ವಿಚಾರಿಗಳು, (೩) ಸರಕಾರದ ಇಲಾಖೆ ಗಳವರು, (೪) ಹೆಂಗಸರು.

ಕನ್ನಡ ಪತ್ರಿಕೆಗಳು ಅಂದದಲ್ಲಿಯೂ ರೀತಿಯಲ್ಲಿಯೂ ಉತ್ತಮಗೊಳ್ಳುತ್ತಿವೆ. ಅವುಗಳಲ್ಲಿ ಕೆಲವು ಸಾಹಿತ್ಯ ಸೇವೆಯನ್ನು ತಮ್ಮ ಮುಖ್ಯೋದ್ದೇಶದ ಭಾಗವಾಗಿ ಮಾಡಿಕೊಂಡಿವೆ. ಎಲ್ಲ ಪತ್ರಿಕೆಗಳೂ ಭಾಷಾ ಪಾರಿಶುದ್ಧ್ಯದ ಕಡೆಗೂ ಸಾಹಿತ್ಯ ಗುಣದ ಕಡೆಗೂ ಲಕ್ಷ್ಯಕೊಡುವುದಾದರೆ ನಮಗೆ ಹೆಚ್ಚಾದ ಉಪಕಾರವಾಗುವುದು. ಜನಸಾಮಾನ್ಯದ ನುಡಿಯು ರೀತಿ ಸರಿಯಾಗುವುದು ಅವರು ವರ್ಷದಲ್ಲೆಲ್ಲೋ ಒಂದೆರಡು ದಿನ ಓದುವ ಉತ್ಕೃಷ್ಟ ಲೇಖನದಿಂದಲ್ಲ; ಅವರು ಪ್ರತಿ ದಿನವೂ ಓದುವ ಸಾಮಾನ್ಯ ಲೇಖನದಿಂದ. ಆದಕಾರಣ, ದಿನಂಪ್ರತಿಯ ಲೋಕವಾರ್ತೆಯನ್ನು ಕುರಿತು ಬರೆಯುವಾಗಲೂ ಲೇಖಕರು ಭಾಷಾ ಮರ್ಯಾದೆಯನ್ನು ಗಮನದಲ್ಲಿಡುವುದು ಅವಶ್ಯವಾಗಿದೆ.

## ನಮ್ಮ ವಾಗ್ಮಿಗಳು

ರಾಜ್ಯ ವಿಚಾರಿಗಳೆಂದರೆ ಶಾಸನ ಸಭೆಗಳಲ್ಲಿಯೂ ಪ್ರಜಾ ಸಂಸ್ಥೆಗಳಲ್ಲಿಯೂ ಉಪನ್ಯಾಸ ಮಾಡಿ ಚರ್ಚೆ ನಡೆಸತಕ್ಕವರು. ಕನ್ನಡದ ವಾಗ್ಧೋರಣೆಯ ವೇಗವೂ ಬಲವೂ ವೃದ್ಧಿಯಾಗಬೇಕಾದುದು ಇವರಿಂದ. ಇವರ ಭಾಷಣಗಳಲ್ಲಿ ಸ್ಫೂರ್ತಿಯೂ ಗಂಭೀರವೂ ಚಮತ್ಕಾರವೂ ಇದ್ದಷ್ಟೂ ಇವರ ಶ್ರೋತೃಗಳಿಗೂ ವಾಚಕರಿಗೂ ಸಾಹಿತ್ಯ ಸಂಸ್ಕಾರವುಂಟಾಗುವುದು. ಆದಕಾರಣ, ಈ ರಾಜ್ಯವಿಚಾರ ಕರ್ತರೂ ಆಗಾಗ ಕಾಲ ವ್ಯವಧಾನಮಾಡಿಕೊಂಡು ಸ್ವಲ್ಪವಾದರೂ ಕಾವ್ಯ ಪರಿಚಯ ಸಂಪಾದಿಸಿದರೆ ಒಳ್ಳೆಯದಾಗುವುದೆಂದು ಆ ಮಹನೀಯರಿಗೆ ಅತ್ಯಂತ ವಿನಯದಿಂದ ಬಿನ್ನಹ ಮಾಡಿಕೊಳ್ಳುತ್ತೇನೆ.

## ಕನ್ನಡ ಸಂಕ್ಷಿಪ್ತ ಲಿಪಿ

ವೃತ್ತಪತ್ರಿಕಾ ಕರ್ತರಿಗೂ ರಾಜ್ಯ ವಿಚಾರಿಗಳಿಗೂ ಹೆಚ್ಚಾಗಿ ಸಂಬಂಧಪಟ್ಟ ಭಾಷಾನುಕೂಲಕಾರ್ಯವೊಂದು ಈಗ ಬೆಂಗಳೂರಿನಲ್ಲಿ ನಡೆಯುತ್ತಿದೆ. ಅದು ಸಂಕ್ಷಿಪ್ತ ಲಿಪಿ ರಚನೆ. ನಮ್ಮ ಸಂಕ್ಷಿಪ್ತ ಲಿಪಿ ಲೇಖಕ ಸಂಘವು ಈ ಕಾರ್ಯದಲ್ಲಿ ಶ್ರದ್ಧೆ ವಹಿಸಿರುವುದಲ್ಲದೆ, ಅದರ ಹಿರಿಯ ಸದಸ್ಯರೂ, ಮೈಸೂರು ಸರಕಾರದ ಸೆಕ್ರೆಟೇರಿಯೆಟ್ ಕಛೇರಿಯಲ್ಲಿ ಅಸಿಸ್ಟೆಂಟ್ ಸೆಕ್ರೆಟೆರಿಯವರೂ ಆಗಿರುವ ಶ್ರೀಮಾನ್ ಎನ್. ದೇವರಾಯರವರು ಒಂದು ಲಿಪಿ ಸಂಕ್ಷೇಪ ಕ್ರಮವನ್ನು ಸಿದ್ಧಪಡಿಸಿ ಪರೀಕ್ಷೆ ನಡೆಸುತ್ತಿದ್ದಾರೆ. ಆ ಕ್ರಮವು ಶೀಘ್ರದಲ್ಲಿಯೇ ಸಂಪೂರ್ಣ ದಶೆಗೆ ಬಂದು ಉಪಯೋಗಾರ್ಹವಾಗುವುದೆಂದು ನನಗೆ ನಂಬಿಕೆಯಿದೆ. ಅದು ಪ್ರಚಾರಕ್ಕೆ ಬಂದ ಮೇಲೆ ಉಪನ್ಯಾಸಕರಿಗೆ ಮಾತ್ರವೇ ಅಲ್ಲದೆ ವರ್ತಕರಿಗೂ ವ್ಯವಹಾರಿಗಳಿಗೂ ಮಹೋಪಕಾರವಾಗುವುದು.

## ಕಛೇರಿಯ ಕನ್ನಡ

ಸರಕಾರದ ನಾನಾ ಇಲಾಖೆಗಳವರು ದೇಶ ಭಾಷೆಗೆ ಸಹಾಯ ಮಾಡಲು ಬಹು ವಿಧವಾಗಿ ಅವಕಾಶವುಂಟು. ಮುಖ್ಯವಾಗಿ, ಅವುಗಳ ಲೆಕ್ಕ ಪತ್ರಗಳನ್ನು ಕೂಡಿದ ಮಟ್ಟಿಗೂ ಕನ್ನಡದಲ್ಲಿಯೇ ಬರೆಯಿಸಿಡಬೇಕು. ಅವುಗಳ ನಾನಾ ಪಟ್ಟಿಕೆ

ಗಳೂ ವರದಿಗಳೂ ಸಾಮಾನ್ಯ ಜನರನ್ನು ಮುಟ್ಟುತ್ತವೆ. ಅವುಗಳಲ್ಲಿ ಒಳ್ಳೆಯ ಭಾಷೆಯಿದ್ದರೆ ಎಲ್ಲರಿಗೂ ಒಳ್ಳೆಯದೇ. ಈ ಶೈಲಿಯನ್ನು ನೋಡಿರಿ:—

"ಈ ಹುಕ್ಕೂಮಿಗೆ ಲಗತ್ತಿರುವ ತಃಖ್ತೆಯ ಕಲಂಗಳಲ್ಲಿ ಸವಾಲಿಗೆ ಜವಾಬನ್ನು ಹುಷ್ಯಾರೀಯಿಂದ ನಮೂದಿಸತಕ್ಕದ್ದಿದೆ."

"ಈ ಕೊಳದಲ್ಲಿ ಗಲೀಜು ವಗ್ಯೈರೆ ಮಾಡುವವರನ್ನು ಪ್ರಾಸಿಕ್ಯೂಷನ್ ಮಾಡಲ್ಪಡುತ್ತದೆ."

ಇದು ಯಾವ ಸೀಮೆಯ ಕನ್ನಡ? ಈ ಉದಾಹರಣೆಗಳು ನನ್ನ ಕಲ್ಪನೆಯಲ್ಲ. ಇಂಥಾ ಅಪಸ್ಮಾರಗಳನ್ನು ತಪ್ಪಿಸುವುದು ಸರಕಾರದ ಅಧಿಕಾರಿಗಳ ಕೈಯಲ್ಲಿದೆ.

ಈ ಸಂದರ್ಭದಲ್ಲಿ, ಬೊಂಬಾಯಿ ಮದ್ರಾಸು ಪ್ರಾಂತಗಳ ಅಂಚೆಯ ಇಲಾಖೆಗಳವರು ತಮ್ಮ ಕೆಲವು ನಿಬಂಧನೆಗಳ ಮತ್ತು ಪಟ್ಟಿಕೆಗಳ ಕನ್ನಡ ಪ್ರತಿಯನ್ನು ತಿದ್ದಿ ಸರಿಪಡಿಸುವ ಕಾರ್ಯವನ್ನು ಪರಿಷತ್ತಿನ ಕಾರ್ಯದರ್ಶಿಗಳವರಿಗೆ ಒಪ್ಪಿಸಿರುವರೆಂದು ಕೇಳಲು ಸಂತೋಷವಾಗಿದೆ.

## ನಮ್ಮ ಸೋದರಿಯರ ಭಾಷಾ ಸೇವೆ

ಈಚೆಗೆ, ನಮ್ಮ ಸೋದರಿಯರು ದೇಶ ಭಾಷಾ ಸೇವೆಯ ಕಡೆಗೆ ಹೆಚ್ಚು ಗಮನ ಕೊಡುತ್ತಿರುವ ಸಂಗತಿ ವಿಶೇಷ ಸಂತೋಷಕ್ಕೂ ಹೆಮ್ಮೆಗೂ ಕಾರಣವಾದದ್ದು. ಅವರಲ್ಲಿ ವಿದ್ಯೆ ಹರಡಿದಂತೆಲ್ಲಾ ಗ್ರಂಥಗಳಿಗೆ ಆಶ್ರಯ ಹೆಚ್ಚುವುದು ಸ್ವಾಭಾವಿಕವಾಗಿದೆ. ಕಾವ್ಯರಾಜ್ಯದಲ್ಲಿ ಎಲ್ಲರೂ ಸಮಾನರು. ಅಲ್ಲಿ ಜಾತಿ ಭೇದ, ಮತ ಭೇದ, ಉದ್ಯೋಗ ಭೇದ, ಸಂಪತ್ತಿನ ಭೇದ—ಇವು ಯಾವುವೂ ಎಣಿಕೆಗೆ ಬರುವುದಿಲ್ಲ. ಕಾವ್ಯವು ಬಡವರ ಭಾಗ್ಯ. ಈ ಭಾಗ್ಯದ ಸೌಖ್ಯವು ಮನೆಯಲ್ಲಿ ತುಂಬಿರುವಂತೆ ಮಾಡುವುದು ಗೃಹಿಣಿಯರ ಕರ್ತವ್ಯ. ಅವರು ಭಾರತ ಭಾಗವತಾದಿ ಕಾವ್ಯಗಳನ್ನು ರಾಗದಿಂದ ಓದಿ, ಒಂದು ಕಡೆ ಮನೆಯ ಜನರಿಗೂ ಇನ್ನೊಂದು ಕಡೆ ಭಾಷಾ ಮಾತೆಗೂ ಉಪಕಾರ ಮಾಡುವುದು ಸುಲಭ.

## ಹಸೆಯ ಹಾಡುಗಳು

ನಮ್ಮ ಸೋದರಿಯರು ಕೆಲವರು ಗ್ರಂಥ ರಚನೆಯಲ್ಲಿ ಪ್ರಸಿದ್ಧರಾಗಿದ್ದಾರೆ. ಹೆಂಗಸರು ಮಾಡಬಹುದಾದ ಇನ್ನೊಂದು ಬಗೆಯ ಸೇವೆ, ಹಾಡುಗಳ ವಿಷಯದಲ್ಲಿ. ಹಬ್ಬ ಹರಿದಿನಗಳಲ್ಲಿ ಪೂಜೆಯ ಹೊತ್ತಿನಲ್ಲಿಯೂ, ಆರತಿ ಅಕ್ಷತೆಯ ಹೊತ್ತಿನಲ್ಲಿಯೂ ಹೇಳುವ ಹಾಡುಗಳು ಭಾಷಾ ಮರ್ಯಾದೆಗನುಸಾರವಾಗಿಯೂ ಭಾವ ಪರಿಶುದ್ಧಿಯುಳ್ಳವಾಗಿಯೂ ಇರಬೇಕು. ಪೂರ್ವ ಕಾಲದ ಮುತ್ತೈದೆಯರು ಹಾಡುತ್ತಿದ್ದ ಕೆಲ ಹಾಡುಗಳನ್ನು ನಾನು ಕೇಳಿದ ಜ್ಞಾಪಕವಿದೆ. ರೀತಿಯಲ್ಲಿಯೂ ಅರ್ಥದಲ್ಲಿಯೂ ಅವು ಮನಸ್ಸನ್ನು ಮೆಚ್ಚಿಸುವ ಸಣ್ಣ ಕಾವ್ಯಗಳು. ಶ್ರೀಮನ್ಮಹಾರಾಜ ಶ್ರೀ ಚಾಮರಾಜೇಂದ್ರ ಒಡೆಯರವರ ಕಾಲದಲ್ಲಿ ಪ್ರಕಟವಾದ "ಬಾಲಿಕಾಗೀತ ಮುಕ್ತಾಕಲಾಪ", "ಕಲ್ಯಾಣ ಗೀತಾವಳಿ" ಎಂಬ ಪುಸ್ತಕಗಳಲ್ಲಿ ವಿದ್ವದ್ರಸಿಕರು

ರಚಿಸಿದ ಹಾಡುಗಳಿದ್ದುವು. ಅವು ಹೇಗೋ ಮೂಲೆಗೆ ಬಿದ್ದಂತೆ ತೋರುತ್ತದೆ. ಈಚೆಗೆ, ಮದುವೆಯ ಮನೆಗಳಲ್ಲಿ ಹಸೆ ಹಾಸುತ್ತಲೇ, ನಾನು ಬೀದಿಗೆ ಹೊರಡುವ ಹಾಗಾಗುತ್ತದೆ. ಆ ನಾಟಕದ ಮಟ್ಟುಗಳಲ್ಲಿ ನನಗೆ ಪ್ರೀತಿಯಿಲ್ಲ; ಆದರೆ ನಿಜವಾಗಿ ಅಸಹ್ಯವಾಗುವುದು ಆ ಅಪಶಬ್ದಗಳಿಂದ. ಇದನ್ನು ವಿದ್ಯಾವತಿಯರು ಸರಿಪಡಿಸಲಾಗದೆ?

## ಹೊಸ ವ್ಯಾಕರಣ

ಎಲ್ಲಕ್ಕಿಂತ ದೊಡ್ಡದಾದ ವಿಚಾರವನ್ನು ಕಡೆಗೆ ಉಳಿಸಿಕೊಂಡಿದ್ದೇನೆ: ಅದು ನಮ್ಮ ಪರಿಷತ್ತನ್ನು ಬಲಪಡಿಸುವ ವಿಚಾರ. ಪರಿಷತ್ತಿನಿಂದ ಆಗಬೇಕಾಗಿ, ಆಗಬಹುದಾಗಿ, ಇರುವ ಕೆಲಸಗಳು ಎಣಿಸಲಾಗದಷ್ಟಿವೆ. ಅವುಗಳಲ್ಲಿ ಕೆಲವನ್ನು ತಮ್ಮ ನೆನಪಿಗೆ ತರುತ್ತೇನೆ.

ನಿಘಂಟುವಿನ ಪ್ರಸ್ತಾವ ಮೊದಲೇ ಆಗಿದೆ. ಪರಿಷತ್ತು ಈ ದೊಡ್ಡ ಕೆಲಸದಲ್ಲಿ ಭಾಗಿಯಾಗಲೇಬೇಕು. ಕನ್ನಡಕ್ಕೆ ಒಂದು ಹೊಸ ವ್ಯಾಕರಣವು ಅತ್ಯಂತ ಅವಶ್ಯವಾಗಿದೆ. ಶಬ್ದಮಣಿದರ್ಪಣ, ಶಬ್ದಾನುಶಾಸನಗಳ ಕಾಲದಿಂದ ಈಚೆಗೆ ಭಾಷೆಯಲ್ಲಿ ಎಷ್ಟೋ ವ್ಯತ್ಯಾಸಗಳಾಗಿವೆ. ಆದರೆ ಈ ವ್ಯತ್ಯಾಸಗಳನ್ನು ಪರೀಕ್ಷಿಸಿ, ಅವುಗಳಲ್ಲಿ ಅನುಕೂಲವೂ ಅನಿವಾರ್ಯವೂ ಆಗಿರುವ ವ್ಯತ್ಯಾಸಗಳನ್ನು ನಿರಾಕ್ಷೇಪಣೀಯಗಳೆಂದು ಸ್ಪಷ್ಟವಾಗಿ ಹೇಳುವ ವ್ಯಾಕರಣವು ಇನ್ನೂ ಹುಟ್ಟಬೇಕಾಗಿದೆ. ಇನ್ನು ಮುಂದೆ ಭಾಷೆಯು ಹಿಂದಿಗಿಂತ ಹೆಚ್ಚಾದ ಅವಸರ ಆತುರಗಳಿಂದ ಬೆಳೆಯತಕ್ಕದ್ದಾಗಿದೆ. ಇಂಥಾ ಸಂಧಿ ಸಮಯದಲ್ಲಿ ಭಾಷೆಗೆ ಅಸಹನೀಯವೆಂದು ತೋರಿಬಂದಿರುವ ಕಟ್ಟುಗಳನ್ನು ಸಡಲಿಸಿ, ಅದರ ಅಂಗಾಂಗಳ ಸ್ವತಂತ್ರ ಚಲನೆಗೆ ಅವಕಾಶ ಕೊಡಿಸುವ ವ್ಯಾಕರಣವು ಮಹೋಪಕಾರಕವಾಗುತ್ತದೆ. ಭಾಷೆಗೆ ನಿಯಮವಿರಕೂಡದೆಂದು ಯಾರೂ ಹೇಳರು. ಆದರೆ ಅದು ಹಿಂಗಟ್ಟುಮುರಿಯಾಗಬಾರದು. ವ್ಯಾಕರಣದ ಬಿಗಿಯು ಮೈಯ ತೊಗಲಿನ ಬಿಗಿಯಂತೆ ಅಂಗಾಂಗಗಳ ಸುಸ್ಥಿತಿಗೆ ಎಷ್ಟು ಅವಶ್ಯವೋ ಅಷ್ಟು ಮಾತ್ರವೇ ನಿರ್ಬಂಧವುಳ್ಳದಾಗಿ, ಮೈಯನ್ನು ಬಿರುಸು ಮಾಡದೆ ಇರಬೇಕು. ಈಗಿರುವ ಕೆಲವು ಪಾಠಶಾಲಾ ವ್ಯಾಕರಣಗಳು ವಿಪರೀತವಾದ ಸೂತ್ರಗಳಿಂದಲೂ ಅತಿಯಾದ ಸಂಧಿ ಸಮಾಸ ವರ್ಗೀಕರಣದಿಂದಲೂ ಸಂಸ್ಕೃತವನ್ನಣಕಿಸುವುವಾಗಿ, ವಿದ್ಯಾರ್ಥಿಗಳಿಗೆ ಭಯ ಭ್ರಾಂತಿಯನ್ನುಂಟು ಮಾಡುತ್ತವೆ. ಪರಿಷತ್ತು ನಮಗೆ ಬೇಕಾಗಿರುವ ಈ ಭಾಷೋಪಕರಣದ ನಿರ್ಮಾಣಕ್ಕೆ ತಡಮಾಡದೆ ಕೈಹಚ್ಚಬೇಕು.

## ಪರಿಷತ್ಪತ್ರಿಕೆ

ಪರಿಷತ್ಪತ್ರಿಕೆಯನ್ನು ಇನ್ನೂ ಫಲದಾಯಕವಾಗುವಂತೆ ಮಾಡುವುದಿನ್ನೊಂದು ಕೆಲಸ. ಅದು ಎಂದಿಗಾದರೂ ಪ್ರಜಾಸಾಮಾನ್ಯದ ಪತ್ರಿಕೆಯಾಗುವುದೆಂದು ನಾನು ನಂಬಿಕೊಂಡಿಲ್ಲ. ಅದು ವಿದ್ವತ್ಕಾರ್ಯಕ್ಕೆ ಸಾಧನವಾಗಿರಬೇಕಾದ ಪತ್ರಿಕೆ. ಅದರಿಂದ

ಕಾವ್ಯ ತತ್ತ್ವ ಜಿಜ್ಞಾಸೆಯೂ, ಪೂರ್ವೇತಿಹಾಸಾನ್ವೇಷಣೆಯೂ, ಪ್ರಾಚೀನ ಗ್ರಂಥ ಯೋಗ್ಯತಾ ನಿರ್ಣಯವೂ, ಭಾಷಾ ಶಾಸ್ತ್ರ ವ್ಯವಸಾಯವೂ ಆಗುವುದು ಸಾಧು ವಾಗಿದೆ. ಇದಕ್ಕೆ ಬೇಕಾದುದು ಶೋಧನಪಟುಗಳಾದ ಪಂಡಿತರ ಸಹಕಾರ.

## ಸಾರಸ್ವತ ಸನ್ನಿಧಿ

ಪರಿಷನ್ಮಂದಿರದ ಗ್ರಂಥ ಭಾಂಡಾಗಾರವನ್ನು ಸಮೃದ್ಧಿಗೊಳಿಸುವುದಿನ್ನೊಂದು ಕೆಲಸ. ಇದುವರೆಗೆ ಅಚ್ಚಾಗಿರುವ ಪ್ರತಿಯೊಂದು ಕನ್ನಡ ಪುಸ್ತಕದ ಒಂದು ಪ್ರತಿ ಯಾದರೂ ಅಲ್ಲಿರಬೇಕು. ತಾಳೆಯೋಲೆಗಳ ಸಂಗ್ರಹವೂ ಇರಬೇಕು. ಇಂಥಾ ಗ್ರಂಥ ಸಮುಚ್ಚಯವು ಒಂದು ಕಡೆ ಕೈಗೆ ಸಿದ್ಧವಾಗಿ ದೊರೆಯದಿದ್ದರೆ ಶೋಧನ ಕಾರ್ಯ ನಡೆಯಲಾರದು.

## ಸಂಸ್ಥಾ ಸಂಯೋಜನೆ

ಕನ್ನಡಕ್ಕಾಗಿ ಕೆಲಸ ಮಾಡಬೇಕೆಂಬ ಸಂಸ್ಥೆಗಳು ಕರ್ಣಾಟಕದೊಳಗೆ ಅನೇಕ ಸ್ಥಳಗಳಲ್ಲಿವೆ; ಹೊರಗೂ ಕೆಲವು ಕಡೆ ಇವೆ. ಅವುಗಳ ವಿವರಗಳನ್ನೆಲ್ಲ ಆಗಾಗ ತರಿಸಿ, ಅವುಗಳ ಕಾರ್ಯಕ್ರಮಗಳನ್ನು ಒಂದು ಸಂಯೋಜನ ವ್ಯವಸ್ಥೆಗೆ ತಂದು, ಅವಕ್ಕೆ ಬೆಂಬಲಕೊಟ್ಟು ಅವುಗಳಿಂದ ಪ್ರಯೋಜನ ಪಡೆದುಕೊಳ್ಳುವ ಏರ್ಪಾಟೂ ಪರಿಷತ್ತಿನಿಂದ ನಡೆಯಬೇಕಾಗಿದೆ.

## ಪರಿಷತ್ತಿನ ಸ್ಥಿತಿ

ಪರಿಷತ್ತಿನ ಕೆಲಸಗಳಿನ್ನೆಷ್ಟೋ ಇವೆ. ಆದರೆ ಜನವೆಲ್ಲಿ? ಹಣವೆಲ್ಲಿ? ಅದರ ಈಗಿನ ಸದ್ಯರ ಒಟ್ಟು ಸಂಖ್ಯೆ ೧೫೫. ಅದರ ವರ್ಷದ ಸಾಧಾರಣ ವರುವಾನ ಸುಮಾರು ೨,೨೦೦ ರೂಪಾಯಿಗಳು; ವೆಚ್ಚ ಅದಕ್ಕಿಂತ ಸ್ವಲ್ಪ ಹೆಚ್ಚು. ಈ ವರುಮಾನದಲ್ಲಿ ಸರಕಾರದ ಸಹಾಯ ದ್ರವ್ಯ ೧,೮೦೦ ರೂಪಾಯಿಗಳು. ಹಣದ ಮುಗ್ಗಟ್ಟಿನ ಕಾರಣದಿಂದ ಅದಕ್ಕೂ ಊನ ತಟ್ಟಬಹುದು. ಹೀಗಿದ್ದರೆ, ಪರಿಷತ್ತಿ ನಿಂದ ವೆಂಕಟನಾರಾಯಣಪ್ಪನವರ ಬೆನ್ನೆಲುವು ಬಗ್ಗಿಸುವ ಒಂದು ಕೆಲಸ ಮಾತ್ರ ಸಾಧಿಸಲಾಗುತ್ತದೆ. ಪರಿಷತ್ತಿಗೆ ಪಾರಿಷದರು ಬೇಕು. ಇನ್ನುಮುಂದೆ ಯಾರು ಪರಿಷತ್ತಿಗೆ ಹೆಚ್ಚು ಮಂದಿ ಸದಸ್ಯರನ್ನು ಸೇರಿಸುತ್ತಾರೆಯೋ ಅವರಿಗೆ ಇಂಥಾ ಸಮ್ಮೇಳನದ ಅಧ್ಯಕ್ಷ ಪಟ್ಟವನ್ನು ಕಟ್ಟುವುದು ಯುಕ್ತವೆಂದು ನನಗೆ ತೋರುತ್ತದೆ. ಏಕೆಂದರೆ, ಅವರ ಕೆಲಸವು ಭಾಷಾ ಪ್ರಾಸಾದದ ತಳಹದಿಯನ್ನು ಭದ್ರಪಡಿಸತಕ್ಕುದು. ಭಾಷಾ ಪ್ರೇಮಿಗಳ ಕೃತಜ್ಞತೆ ಗೌರವ ವಿಶ್ವಾಸಗಳು ಮೊದಲು ಅವರಿಗೆ ಸಲ್ಲುವುದು ನ್ಯಾಯ.

## ಉಪಸಂಹಾರ

ನಮ್ಮ ಸಣ್ಣ ಕೊರತೆಗಳು ಹಾಗಿರಲಿ. ಅವು ನಮ್ಮನ್ನು ಕುಗ್ಗಿಸಬೇಕಾದುದಿಲ್ಲ. ಮಾತ್ಸರ್ಯವನ್ನು ತೊರೆದು, ಒಗ್ಗಟ್ಟಿನಿಂದ ಕನ್ನಡದ ಸೇವಕರು ಕೆಲಸ ಮಾಡಿದರೆ ನಮ್ಮ ಜನ ಧನ ದಾರಿದ್ರ್ಯವನ್ನು ನೀಗುವುದೊಂದು ಮಹಾ ಕಷ್ಟವಲ್ಲ.

ದಿಗಂತವು ಪ್ರಕಾಶಮಾನವಾಗಿದೆ. ಪಕ್ಷಿಗಳು ಸಂತೋಷದ ಕಲರವದೊಡನೆ ಆಕಾಶದ ಕಡೆಗೆ ಹಾರುತ್ತಿವೆ. ನನ್ನೆದೆಯಲ್ಲಿ ಆಶೆಯುಕ್ಕುತ್ತಿದೆ. ಈಗ ೧೦–೧೫ ವರ್ಷಗಳ ಕೆಳಗೆ ಬೆಂಗಳೂರು ಮೈಸೂರುಗಳಲ್ಲಿ ಕನ್ನಡದ ಸಭೆ ಹೇಗಿರುತ್ತಿತ್ತೆಂಬುದನ್ನು ನೆನೆದು, ಈಗಿನ ತುಂಬಿ ಕಿಕ್ಕಿರಿಯುವ ಸಭೆಗಳನ್ನು ನೋಡಿದರೆ—ಆಗಿನ ತರುಣರು ಕನ್ನಡಕ್ಕೆ ತೋರುತ್ತಿದ್ದ ಉತ್ಸಾಹವನ್ನು ಈಗಿನವರದರೊಡನೆ ಹೋಲಿಸಿದರೆ—ಹೋಗಿದ್ದ ಜೀವ ತಿರುಗಿಬಂದಿತೆಂದೆನ್ನಿಸುತ್ತದೆ. ಈಗ ನಿರಾಶೆಗೆಡೆಯಲ್ಲಿ? ನಮಗಿರುವ ಕಷ್ಟಗಳನ್ನೊತ್ತಟ್ಟಿಗಿರಿಸಿ ಮುಂದೆ ಇರುವ ಕರ್ತವ್ಯದಲ್ಲಿ ಮನಸ್ಸಿಡೋಣ. ನಮ್ಮ ಭಾಷೆಯು ನಮ್ಮ ಪ್ರೀತಿ ಕೃತಜ್ಞತೆಗಳಿಗೆ ಅರ್ಹವಾದದ್ದು. ಅದು ಚೆನ್ನಾಗಿ ಬಾಳಿದರೆ ನಮ್ಮ ಜನದ ಬಾಳು ಮೇಲಾಗುತ್ತದೆ. ಅದನ್ನು ಸಮೃದ್ಧಿಪಡಿಸುವುದಕ್ಕಿಂತ ನಮಗೆ ದೊಡ್ಡ ಧರ್ಮವಾವುದು? ಅದರ ಕೋಶಾಗಾರದಲ್ಲಿ ಎಲ್ಲ ಸಂಪತ್ತುಗಳೂ ತುಂಬಿರಬೇಕು. ಅವುಗಳನ್ನು ನಮ್ಮ ಸಂತತ ಪ್ರಯತ್ನದಿಂದ ನಿರ್ಮಿಸಿ ಹೆಚ್ಚಿಸಬೇಕು. ನಮ್ಮಲ್ಲಿಲ್ಲದುದನ್ನು, ನಮ್ಮಿಂದಾಗದುದನ್ನು, ದಶ ದಿಕ್ಕುಗಳಿಂದಲೂ ಶೇಖರಿಸಿ ತರಬೇಕು. ರಾಜ ನಂದಿನಿಯ ಸಿಂಗಾರಕ್ಕೆ ಕಾಶ್ಮೀರದ ಅಗರೂ, ನೇಪಾಳದ ಕಸ್ತೂರಿಯೂ, ಗಾಂಧಾರದ ಕೇಸರಿಯೂ, ಪಾರಸಿಯ ಪನ್ನೀರೂ, ಮೈಸೂರಿನ ಚಂದನವೂ, ಮಲೆಯಾಳದ ಧೂಪವೂ ಬಂದು ಒದಗುವಂತೆ, ಭೂಮಂಡಲದ ಎಲ್ಲ ಸಾಹಿತ್ಯ ಎಲ್ಲ ವೈದುಷ್ಯಗಳ ಸಾರ ವಸ್ತುಗಳೂ ನಮ್ಮ ಭಾಷೆಯ ಭಂಡಾರಕ್ಕೆ ಬಂದು, ನಮ್ಮ ಸ್ವಶಕ್ತಿ ಕಲ್ಪಿತಗಳಾದ ನಾನಾ ಪರಿಕರಗಳೊಡಗೂಡಿ, ನಮ್ಮ ಜನದ ಜೀವನಕ್ಕನುವಾಗಬೇಕು. ಕನ್ನಡದ ಒಂದೊಂದು ನುಡಿಯೂ ಕಿಡಿಯಾಗಬೇಕು, ಸಿಡಿಲಾಗಬೇಕು, ನಕ್ಷತ್ರವಾಗಬೇಕು, ಅಮೃತಬಿಂದುವಾಗಬೇಕು. ಇದೀಗ ನಮ್ಮ ಆಶೆ. ಈ ಆಶೆಗಾಗಿ ದುಡಿಯುವುದರಲ್ಲಿ ಎಲ್ಲ ದೇಶಭಾಷಾ ಬಾಂಧವರೂ ಅವರ ಅದೃಷ್ಟ ಶಕ್ತಿಗಳೂ ಸಹಕರಿಸಲಿ.

ಕೊಡಗಿನ ಮಹಾಜನರೆ, ನಿಮ್ಮ ದೇಶವು ಸೃಷ್ಟಿಯ ಸೌಂದರ್ಯದಿಂದಲೂ, ನಿಮ್ಮ ಸರಳತೆ ಉದಾರತೆಗಳಿಂದಲೂ ಕನ್ನಡಿಗರಿಗೆಲ್ಲ ಅತ್ಯಂತ ಪ್ರಿಯವಾಗಿದೆ. ಕರ್ಣಾಟಕ ಮಹಾ ಸಮಾರಂಭದಲ್ಲಿ ಈ ನಾಡು ತಕ್ಕಷ್ಟು ಮುಂದೆ ಬಂದು ಸೇರಿಲ್ಲವಲ್ಲಾ ಎಂಬ ಕಳವಳವು ಕೆಲವರಿಗೆ ಇದುವರೆಗೂ ಇದ್ದಿತು. ಅಂಥಾ ಕೊರತೆಗೆ ಕಾರಣವಿಲ್ಲವೆಂಬುದು ಈಗ ಸ್ಪಷ್ಟವಾಗಿದೆ. ತಾವು ಭ್ರಾತೃ ವಾತ್ಸಲ್ಯದಿಂದ ಹೊರಗಿನ ಕನ್ನಡಿಗರನ್ನು ಬರಮಾಡಿಕೊಂಡು, ಕರ್ಣಾಟಕ ಸಾಹಿತ್ಯ ಪರಿಷತ್ತು ತಮಗೂ ಸೇರಿದ್ದೆಂದು ಭಾವಿಸಿ, ಅದನ್ನು ಇಲ್ಲಿಗೆ ಕರೆದು ಆದರಿಸಿರುವುದಕ್ಕಾಗಿ ಎಲ್ಲ ಕನ್ನಡಿಗರ ಪರವಾಗಿ ನಾನು ತಮ್ಮನ್ನು ಅಭಿವಂದಿಸುತ್ತೇನೆ. ನಿಮ್ಮ ನಮ್ಮ ಸೋದರ ಭಾವವೂ ನಮ್ಮೆಲ್ಲರ ನುಡಿಯೂ ನಾಡೂ ಏಳಿಗೆಪಡೆಯಲಿ.

---

# ಪ್ರದರ್ಶನವನ್ನು ತೆರೆಯುವಾಗ ಶ್ರೀಮತಿ ಪೂವಮ್ಮನವರು ಮಾಡಿದ ಭಾಷಣ

ಅಧ್ಯಕ್ಷರೇ, ಬಂಧು ಭಗಿನಿಯರೇ! ಕರ್ಣಾಟಕ ಸಾಹಿತ್ಯ ಪರಿಷತ್ತಿನ ಈ ಸುದಿವಸದಲ್ಲಿ ಕೊಡಗು ದೇಶದ ಸಾಹಿತ್ಯ ಪ್ರೇಮಿಗಳೂ, ಚರಿತ್ರೆಯಲ್ಲಿ ಕುತೂಹಲ ವುಳ್ಳವರೂ ಸೇರಿ ಈ ಪ್ರದರ್ಶನವನ್ನು ಮಾಡಿರುವರು. ಇದರಲ್ಲಿ ನಮ್ಮ ದೇಶದಲ್ಲಿ ದೊರೆತ ಓಲೆಯ ಗರಿಯ ಕಟ್ಟುಗಳನ್ನೂ, ಕೈ ಬರೆಹದ ವಹಿಗಳನ್ನೂ, ನಮ್ಮ ಹಿರಿಯರು ರಾಜರ ಕಾಲದಲ್ಲಿ ಹೇಗಿದ್ದರು ಎಂಬುದನ್ನು ತೋರುವ, ಉಡುಪು, ತೊಡಪು, ಕತ್ತಿ, ಕೋವಿಗಳು ಮೊದಲಾದುವನ್ನೂ ಇರಿಸಿವೆಯಾಗಿ ತಿಳಿಯುತ್ತೇನೆ. ಇಂತಹ ಪ್ರದರ್ಶನಗಳು ಒಂದು ದೇಶದ ಏಳಿಗೆಗೆ ಬಹಳ ಸಾಹಾಯ್ಯಮಾಡುತ್ತವೆ. ಇಲ್ಲಿರುವ ಪ್ರತಿಯೊಂದು ವಸ್ತುವೂ ನಮ್ಮ ದೇಶಸ್ಥರ ಅಭಿಮಾನವನ್ನೂ ಗೌರವವನ್ನೂ ಹೆಚ್ಚಿಸತಕ್ಕವು. ಓಲೆಯ ಗರಿಯ ಪುಸ್ತಕಗಳು ದೇಶಸ್ಥರ ಸಾಹಿತ್ಯ ಜ್ಞಾನವನ್ನು ತೋರುವವು; ಕತ್ತಿ, ಕೋವಿ, ಪದಕಗಳು ನಮ್ಮ ಹಿರಿಯರ ಶೌರ್ಯವನ್ನು ತೋರುವವು. ಇವನ್ನು ನೋಡುವ ನಮಗೆ ನಮ್ಮ ದೇಶದ ಹಿರಿಯರಲ್ಲಿ ಭಕ್ತಿ ಯುಂಟಾಗುವುದಲ್ಲದೆ, ಅವರ ಹಾಗೆಯೇ ನಾವೂ ನಮ್ಮ ದೇಶಕ್ಕೆ ಕೀರ್ತಿ ತರುವಂತಹ ಕಾರ್ಯಗಳನ್ನು ಮಾಡಬೇಕಾಗಿ ಮನವಾಗುವುದು. ಅದುಕಾರಣ, ಈ ಪ್ರದರ್ಶನವನ್ನು ನಮ್ಮ ದೇಶದವರೆಲ್ಲರೂ ಮನಗೊಟ್ಟು ನೋಡಬೇಕಾಗಿದೆ.

ಈ ಪ್ರದರ್ಶನದಲ್ಲಿರುವ ಓಲೆಯ ಗರಿಯ ಪುಸ್ತಕಗಳನ್ನು ನೋಡುತ್ತ, ಹಳೆಯ ಕಾಲದಲ್ಲಿ ಕನ್ನಡವು ಈ ದೇಶದಲ್ಲಿ ಹೇಗೆ ಇತ್ತು ಎಂಬುದನ್ನು ನಾವು ಕಾಣಬಹು ದಾಗಿದೆ. ಕನ್ನಡ ನಾಡೆಂದರೆ, 'ಕಾವೇರಿಯಿಂದ ಗೋದಾವರಿಯ ವರೆಗೆ ಇರುವ ನಾಡೇ' ಎಂದು ನೃಪತುಂಗನೆಂಬ ಕವಿಯು ತನ್ನ ಕವಿರಾಜಮಾರ್ಗದಲ್ಲಿ ಕ್ರಿ. ಶ. ಒಂಭತ್ತರಲ್ಲೇ ಹೇಳಿರುತ್ತಾನೆ. ಆಗಿನಿಂದ ಈವರೆಗೂ ಕನ್ನಡದ ತಾಯಿಯ ಮನೆಯು, ಲಕ್ಷೋಪಲಕ್ಷ ಜನರ ಜೀವನಕ್ಕೆ ಆಧಾರಳಾಗಿರುವ ಈ ಕಾವೇರೀ ತಾಯಿಯ ದಡದ ನೆರೆ ಕರೆಯೇ. ಈಗಲೂ ಈ ನೆರೆ ಕರೆಯಲ್ಲಿ ಮಾತ್ರ ಕನ್ನಡವು ಬೆಳೆಯುತ್ತ ಬಂದಿದೆ; ಹಾಗೆಯೇ, ಕೊಡಗು ದೇಶದಲ್ಲಿಯೂ ಬೆಳೆಯುತ್ತ ಬಂದಿದೆ ಯೆಂದು ಈ ಪ್ರದರ್ಶನವು ತೋರಿಸಿಕೊಡುವುದು.

ಕೊಡಗು ದೇಶದಲ್ಲಿ ಈಗ ಪ್ರಖ್ಯಾತಪಟ್ಟ ಕವಿಗಳು ಇಲ್ಲದಿದ್ದರೂ, ಒಂದು ಕಾಲದಲ್ಲಿ ತುಂಬ ಮಂದಿ ಇದ್ದರೆಂದು ನಾನು ತಿಳಿದಿರುತ್ತೇನೆ. ಅದೇ ಅಲ್ಲ; ಕೊಡಗು ದೇಶಸ್ಥರೂ ಈಚೆಗೆ, ಎಂದರೆ, ದೇಶದಲ್ಲಿ ಬಿಗು ಸರಕಾರವು ತಪ್ಪಿದ್ದ ಎರಡು ಮೂರು ಶತಮಾನಗಳ ಹಿಂದೆ, ಕನ್ನಡ ಕವನಗಳನ್ನು ಓದುವುದರಲ್ಲಿ ತುಂಬ ಇಷ್ಟಪಡುತ್ತಿದ್ದರು. ಹಾಗೆ, ಕೊಡಗರೇ ಬರೆಯಿಸಿ, ಓದಿಸಿ, ಆನಂದಪಟ್ಟ ಸಂಗತಿಗಳು ಈ ಪ್ರದರ್ಶನ ದಲ್ಲಿರುವ ಓಲೆಯ ಗರಿಗಳಲ್ಲಿ ಬರೆದಿವೆಯೆಂದು ತಮಗೆ ತಿಳಿಸಲು ನಾನು ಸಂತೋಷ ಪಡುತ್ತೇನೆ. ಆ ಕಾಲದ ಬರೆವಣಿಗೆ, ಕವಿತಾ ಸಾಮರ್ಥ್ಯ—ಇವು ನಮಗೆ ಗೌರವ ತರತಕ್ಕಂತಹವೇ.

ಈ ಓಲೆಯ ಗರಿಗಳನ್ನು ಬಿಟ್ಟು ಬೇರೆ ಕಡೆ ನೋಡಿದರೆ, ಕತ್ತಿ, ಕೋವಿಗಳೇ ನಮ್ಮ ಕಣ್ಣಿಗೆ ಕಾಣುವವು. ಇವು ಕೊಡಗರ ಜೀವದ ಗೆಳೆಯರು. ಈ ಗೆಳೆಯರ ಶಕ್ತಿ ಸಾಹಸದಿಂದಲೇ ನಮ್ಮ ಹಿರಿಯರು ಈ ದೇಶವನ್ನು ಕಟ್ಟಿ ಬಾಳಿದರು. ನಮ್ಮಲ್ಲಿಯ ಕವಿಗಳೂ ಸಹ ಕತ್ತಿ ಹಿಡಿದೇ ಪ್ರಾಣಬಿಟ್ಟಿರುತ್ತಾರೆ. ಹದಿನಾರನೆಯ, ಹದಿನೇಳನೆಯ ಶತಮಾನಗಳಲ್ಲಿದ್ದ ಕುಮಾರ ರಾಮನ ಕಥೆಯನ್ನು ಬರೆದ ನಂಜುಂಡ ನೆಂಬುವನು ತನ್ನ ಯಜಮಾನ ನಂಜರಾಜನಿಗಾಗಿ, ಕುದುರೆಯನ್ನೇರಿ ಯುದ್ಧ ಮಾಡು ವಾಗಲೇ ಪ್ರಾಣಬಿಟ್ಟನು. ಮಾಧವ, ನಕುಲಾರ್ಯ ಎಂಬ ಸೇನಾಪತಿಗಳು ಒಳ್ಳೆಯ ಬರೆಹಗಾರರಾದರೂ ವೀರರಾಗಿದ್ದರು. ಇಂತಹ ಉದಾಹರಣೆಗಳು ನಮ್ಮ ದೇಶದಲ್ಲಿ ತುಂಬ ಇದ್ದರೂ, ಅವುಗಳ ಪರಿಚಯುವನ್ನು ಸ್ವಲ್ಪ ಮಟ್ಟಿಗಾದರೂ ತಾವು ಈ ಪ್ರದರ್ಶನದಿಂದ ಮಾಡಿಕೊಳ್ಳಬಹುದಾಗಿದೆ.

ಮತ್ತೊಂದು ಕಡೆ, ಕೊಡಗು ದೇಶಸ್ಥರಿಂದಲೇ ಚಿತ್ರಿಸಲ್ಪಟ್ಟ ಲಲಿತ ಕಲೆಯ ಚಿತ್ರಗಳೂ ಇರಿಸಲ್ಪಟ್ಟಿವೆ. ಮನೋಹರವಾದ ಇವು ಖಂಡಿತವಾಗಿಯೂ ನಿಮಗೆ ಸಂತೋಷವನ್ನುಂಟುಮಾಡದಿರವು.

ಕೊಡಗು ದೇಶದಲ್ಲಿ ಇಂತಹ ಪ್ರದರ್ಶನವು ಇದೇ ಮೊದಲನೆಯದು. ಕನ್ನಡ ಸಾಹಿತ್ಯ ಸಮ್ಮೇಳನದ ಇತಿಹಾಸದಲ್ಲಿಯೂ ಇದು ಎರಡನೆಯದಾಗಿ ತಿಳಿಯುತ್ತೇನೆ. ಇಂತಹದನ್ನು ನಮ್ಮ ದೇಶದಲ್ಲಿ ನೆರೆಯಿಸುವಲ್ಲಿ ಬಹಳವಾಗಿ ಶ್ರಮ ತೆಗೆದುಕೊಂಡ ಈ ದೇಶದ ವಿದ್ಯಾ ಅಧಿಕಾರಿಗಳಾದ ಶ್ರೀಯುತ ಬಿ. ಎಸ್. ಕುಶಾಲಪ್ಪನವರಿಗೂ, ಈ ಪ್ರದರ್ಶನಕ್ಕೆ ರೂಪುಗೊಡಲು ಕಷ್ಟಪಟ್ಟ ಅವರ ಸಾಹಾಯ್ಯಕರಿಗೂ ನಮ್ಮ ದೇಶವು ಕೃತಜ್ಞವಾಗಿದೆ.

ಹೀಗೆ ಶ್ರಮಪಟ್ಟು ನಡಿಸಿರುವ ಈ ಪ್ರದರ್ಶನವನ್ನು ತೆರೆಯಲು ನನ್ನನ್ನು ಕೇಳಿಕೊಂಡದ್ದಕ್ಕೆ ನಾನು ತಮಗೆ ನನ್ನ ಮನಃಪೂರ್ವಕವಾದ ವಂದನೆಯನ್ನು ಸಲ್ಲಿಸುತ್ತೇನೆ.

ಇನ್ನು, ಈ ಪ್ರದರ್ಶನವನ್ನು ನೋಡಲು ನೀವೆಲ್ಲರೂ ಕುತೂಹಲವುಳ್ಳವ ರಾಗಿರಬಹುದು. ದೊಡ್ಡ ದೊಡ್ಡ ಪಟ್ಟಣಗಳಿಂದ ಬಂದಿರುವ ತಾವು ವಿಶೇಷ ವಸ್ತು ಗಳನ್ನು ಇಲ್ಲಿ ಕಾಣದಿದ್ದರೂ ಪ್ರದರ್ಶನವನ್ನು ಏರ್ಪಡಿಸಲಿಕ್ಕೆ ಪಟ್ಟ ಶ್ರಮವನ್ನಾದರೂ ಕಾಣಬಹುದು ಎಂದು ಹೇಳಿ, ತಮ್ಮೆಲ್ಲರ ಪ್ರೋತ್ಸಾಹಕ್ಕೂ ಮೆಚ್ಚಿಕೆಗೂ ಕೊಡಗು ದೇಶದ ಮಗಳೊಬ್ಬಳಾದ ನಾನು ಈ ಪ್ರದರ್ಶನವನ್ನು ತೆರೆದಿರುವೆನು ಎಂದು ಹೇಳಲು ಸಂತೋಷಪಡುತ್ತೇನೆ.

---

# ಕರ್ಣಾಟಕ ಸಾಹಿತ್ಯ ಪರಿಷತ್ತಿನ ಹದಿನೇಳನೆಯ ವಾರ್ಷಿಕಾಧಿವೇಶನ

ಸನ್ ೧೯೩೨ನೆಯ ಇಸವಿ ಡಿಸೆಂಬರು ೩೦ನೆಯ ತಾರೀಖು ಶುಕ್ರವಾರ ಪ್ರಾತಃಕಾಲ ೯|| ಗಂಟೆಗೆ ಮಡಿಕೇರಿಯ ಹೈಸ್ಕೂಲ್ ಕಟ್ಟಡದಲ್ಲಿ ನಡೆದ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಹದಿನೇಳನೆಯ ವಾರ್ಷಿಕಾಧಿವೇಶನದ ಕಾರ್ಯವಿವರ:—

ಅಧಿವೇಶನಕ್ಕೆ ಬಂದಿದ್ದವರು—

ಮ|| ರಾ|| ಶ್ರೀಗಳಾದ—

ಮಡಿಕೇರಿಯ

(೧) ಸಿ. ಎಂ. ದೇವಯ್ಯನವರು, (೨) ಬಿ. ಬೆಳ್ಳಿಯಪ್ಪನವರು, (೩) ಸಿ. ಎನ್. ವೆಂಕಪ್ಪಯ್ಯನವರು.

ಪೊನ್ನಂಪೇಟೆಯ

(೪) ಎಂ. ಎಸ್. ಸುಬ್ಬರಾಯರು.

ಸೋಮವಾರಪೇಟೆಯ

(೫) ಶ್ರೀಮತಿ ಡಿ. ಸಾಕಮ್ಮನವರು.

ಮಂಗಳೂರಿನ

(೬) ಮುಳಿಯ ತಿಮ್ಮಪ್ಪಯ್ಯನವರು, (೭) ಕಡೆಂಗೋಡ್ಲು ಶಂಕರಭಟ್ಟರು.

ಕಾಸರಗೋಡಿನ

(೮) ಲಕ್ಷ್ಮೀನಾರಾಯಣ ಪುಣಿಂಚತ್ತಾಯರು.

ಕೊಲ್ಹಾಪುರದ

(೯) ಕೆ. ಜಿ. ಕುಂದಣಗಾರರು, ಎಂ.ಎ.

ಕೊಪ್ಪಳದ

(೧೦) ನಾರಾಯಣ ಶಾಸ್ತ್ರೀ ಭಾವೂ ಶಾಸ್ತ್ರಿಗಳು.

ಹುಬ್ಬಳ್ಳಿಯ

(೧೧) ಚಂದ್ರಶೇಖರ ಶಾಸ್ತ್ರಿಗಳು, ವ್ಯಾಕರಣತೀರ್ಥ.

ಧಾರವಾಡದ

(೧೨) ಎಚ್. ಚೆನ್ನಕೇಶವಯ್ಯಂಗಾರ್ಯರು, (೧೩) ನಾರಾಯಣ ವೆಂಕಟೇಶ ಕುರಡಿಯವರು, (೧೪) ಎಂ. ಡಿ. ರಂಗಣ್ಣನವರು.

ಬೆಳಗಾಂವಿಯ

(೧೫) ಬಿ. ಎಸ್. ಬೆಟಿಗೇರಿಯವರು.

ಮುಂಬಯಿಯ

(೧೬) ಬಿ. ಡಿ. ಬೆಳ್ವಿಯವರು.

ಮೈಸೂರಿನ

(೧೭) ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ.

ಬೆಂಗಳೂರಿನ

(೧೮) ಟಿ. ಅಪ್ಪೂರಾಯರು, ಬಿ.ಎ., ಬಿ.ಎಲ್., (೧೯) ಡಾಕ್ಟರ್ ಜೆ. ಎ. ಈಶ್ವರಮೂರ್ತಿಗಳು, ಬಿ.ಎ., ಎಲ್.ಎಂ.ಎಸ್., ಬಿ.ಎಸ್. ಎಸ್ಸಿ., (೨೦) ಡಿ. ವಿ. ಗುಂಡಪ್ಪನವರು, (೨೧) ಆರ್. ಎಲ್. ನರಸಿಂಹಯ್ಯನವರು, ಎಂ.ಎಸ್ಸಿ., (೨೨) ಚಾ. ನರಸಿಂಹ ಶಾಸ್ತ್ರಿಗಳು, (೨೩) ಡಾಕ್ಟರ್ ಬಾದಾಮಿ ವೆಂಕಟರಾಯರು, ಎಲ್.ಎಜಿ., ಪಿಎಚ್.ಡಿ., (೨೪) ಬೆಳ್ಳಾವೆ ವೆಂಕಟನಾರಾಯಣಪ್ಪನವರು, ಎಂ.ಎ., (೨೫) ವಿ. ವೆಂಕಟಪ್ಪನವರು, (೨೬) ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್ಎಲ್.ಬಿ., (೨೭) ಮಾಸ್ತಿ ವೆಂಕಟೇಶ ಐಯಂಗಾರ್ಯರು, ಎಂ.ಎ., (೨೮) ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್., (೨೯) ನಿಟ್ಟೂರು ಶ್ರೀನಿವಾಸ ರಾಯರು, ಬಿ.ಎಸ್ಸಿ., ಬಿ.ಎಲ್., (೩೦) ವಿ. ಸೀತಾರಾಮಯ್ಯನವರು, ಎಂ.ಎ.

ಚಾಮರಾಜನಗರದ

(೩೧) ಚಾ. ವೆಂಕಟರಮಣ ಶಾಸ್ತ್ರಿಗಳು.

ಕೋಲಾರದ

(೩೨) ಎಚ್. ಹನುಮಂತರಾಯರು.

ಆನೆಕಲ್ಲಿನ

(೩೩) ಆರ್. ಸುಬ್ಬರಾಯರು.

I. ಸಮ್ಮೇಳನದ ಅಧ್ಯಕ್ಷರಾದ ಮ॥ ರಾ॥ ಶ್ರೀ ಡಿ. ವಿ. ಗುಂಡಪ್ಪನವರು ಈ ವಾರ್ಷಿಕಾಧಿವೇಶನಕ್ಕೆ ಸಭಾಧ್ಯಕ್ಷರಾಗಿರಬೇಕೆಂಬುದು ಸರ್ವಾನುಮತದಿಂದ ಅಂಗೀಕೃತವಾಯಿತು.

II. ಕಾರ್ಯ ನಿರ್ವಾಹಕ ಮಂಡಲಿಯವರು ಒಪ್ಪಿಸಿದ ಪ್ರಜೋತ್ಪತ್ತಿ ಸಂವತ್ಸರದ ವರದಿಯನ್ನೂ ಆಯ ವ್ಯಯದ ಲೆಕ್ಕದ ಪಟ್ಟಿಯನ್ನೂ ಸರ್ವಾನುಮತದಿಂದ ಅಂಗೀಕರಿಸಲಾಯಿತು.

III. ಕಾರ್ಯ ನಿರ್ವಾಹಕ ಮಂಡಲಿಯ ಅಧಿಕಾರಿಗಳನ್ನೂ ಸದಸ್ಯರನ್ನೂ ಚುನಾಯಿಸುವ ವಿಚಾರ.—

ಕಾರ್ಯ ನಿರ್ವಾಹಕ ಮಂಡಲಿಯಲ್ಲಿ ವಿರಾಮವಾದ ಸ್ಥಾನಗಳನ್ನು ಭರತಿ ಮಾಡುವ ವಿಚಾರದಲ್ಲಿ, ಪರಿಷತ್ತಿನ ೯, ೧೦, ೧೧ನೆಯ ನಿಬಂಧನೆಗಳ ಅರ್ಥವನ್ನು ಕುರಿತು ಸ್ವಲ್ಪ ಚರ್ಚೆ ಬಂದಾಗ, ಸಭಾಧ್ಯಕ್ಷರು ಆ ವಿಚಾರವಾಗಿ ಸದಸ್ಯರುಗಳ ಅಭಿಪ್ರಾಯವನ್ನು ಕೇಳಿದ ಮೇಲೆ ಮುಂದೆ ಹೇಳುವಂತೆ ತೀರ್ಮಾನಿಸಿದರು. ಅದನ್ನು ಮುಂದಿನ ದಾಖಲೆಗಾಗಿ ಇಲ್ಲಿ ಕೊಟ್ಟಿದೆ:—

(೧) ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯಲ್ಲಿ ಕೆಲವು ಅಧಿಕಾರ ಸ್ಥಾನಗಳು ಖಾಲಿಯಾಗಿ ನಿಂತರೆ ಅದರಿಂದ ಮಂಡಲಿಯು ನಿಂತುಹೋದಂತೆ ಆಗುವುದಿಲ್ಲ.

(೨) ಮಂಡಲಿಗೆ ಹೊಸ ಸದಸ್ಯರು ನಿಯಾಮಕವಾದ ಬಳಿಕ ಆ ಸದಸ್ಯರೇ ಹೊಸ ಮಂಡಲಿಯ ಸದಸ್ಯರಾಗತಕ್ಕದ್ದು.

(೩) ಅಧಿಕಾರಿಗಳ ಚುನಾವಣೆಯನ್ನು ಮುಂದೆ ಹಾಕಬೇಕೆಂದು ತೋರಿಸುವ ಕಾರಣಗಳು ಇಲ್ಲದಿದ್ದಲ್ಲಿ, ಅಧಿಕಾರಿಗಳ ಚುನಾವಣೆಯು ಕ್ಲೃಪ್ತ ಕಾಲದಲ್ಲಿ ನಡೆಯಲೇ ಬೇಕು.

(೪) ಅಧಿಕಾರಿಗಳ ಚುನಾವಣೆಯನ್ನು ಮುಂದೆ ಯಾವುದಾದರೂ ಒಂದು ದಿನಕ್ಕೆ ಸಾಗಿಸಲು ತಕ್ಕಷ್ಟು ಕಾರಣವುಂಟೇ ಇಲ್ಲವೇ ಎಂಬುದನ್ನು ಪರಿಷತ್ತಿನ ವಾರ್ಷಿಕಾಧಿವೇಶನದಲ್ಲಿ ನೆರೆದಿರುವ ಸದಸ್ಯರು ತೀರ್ಮಾನಿಸತಕ್ಕದ್ದು.

IV. ಶ್ರೀಮದ್ಯುವರಾಜರು ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹಾದ್ದೂರ್ ಅವರು ಮುಂದೆಯೂ ಈಗಿನಂತೆಯೇ ಪರಿಷತ್ತಿನ ಅಧ್ಯಕ್ಷ ಪದವಿಯನ್ನು ಅಲಂಕರಿಸುವಂತೆ ವಿಜ್ಞಾಪಿಸಿಕೊಳ್ಳಬೇಕೆಂದು ಸರ್ವಾನುಮತದಿಂದ ತೀರ್ಮಾನಿಸ ಲಾಯಿತು.

V. ಪರಿಷತ್ತಿನ ಉಪಾಧ್ಯಕ್ಷರಾಗಿರಲು, ರಾಜಕಾರ್ಯ ಪ್ರಸಕ್ತ, ದಿವಾನ್ ಬಹಾದ್ದೂರ್ ಶ್ರೀಮಾನ್ ಎಂ. ಎನ್. ಕೃಷ್ಣರಾಯರು, ಬಿ.ಎ. ಅವರನ್ನು ಕೇಳಿಕೊಳ್ಳ ತಕ್ಕುದೆಂದು ಸರ್ವಾನುಮತದಿಂದ ತೀರ್ಮಾನಿಸಲಾಯಿತು.

VI. ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್‌ಎಲ್.ಬಿ. ಅವರನ್ನು ಪರಿಷತ್ತಿನ ಗೌರವ ಕಾರ್ಯದರ್ಶಿಗಳಾಗಿಯೂ, ಶ್ರೀಮಾನ್ ಬೆಳ್ಳಾವೆ ವೆಂಕಟ ನಾರಾಯಣಪ್ಪ, ಎಂ.ಎ. ಅವರನ್ನು ಗೌರವ ಕೋಶಾಧ್ಯಕ್ಷರಾಗಿಯೂ ಚುನಾಯಿಸ ಲಾಯಿತು.

VII. ಆಂಗೀರಸ ಸಂವತ್ಸರಕ್ಕೆ ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರನ್ನು ಆಯಾ ಪ್ರಾಂತದ ಸದಸ್ಯರುಗಳು ಚುನಾಯಿಸಿದರು. ಮೈಸೂರು ವಿನಾ, ಉಳಿದ ಪ್ರಾಂತಗಳ ಪರವಾಗಿ ಸೂಚಿತವಾದ ಹೆಸರುಗಳು ಕ್ಲೃಪ್ತ ಸಂಖ್ಯೆಗಿಂತ ಹೆಚ್ಚಾಗಿರಲಿಲ್ಲವಾಗಿ ಆ ಹೆಸರುಗಳೇ ಅಂಗೀಕೃತವಾದುವು. ಮೈಸೂರು ಪ್ರಾಂತದ ಪರವಾಗಿ ಹೆಚ್ಚು ಹೆಸರುಗಳು ಸೂಚಿತವಾಗಿದ್ದ ಕಾರಣ, ಮತ (ಓಟು) ಗಳನ್ನು ತೆಗೆದುಕೊಂಡುದಾಯಿತು. ಶ್ರೀಮಾನ್ ಕೆ. ಜಿ. ಕುಂದಣಗಾರರೂ ಶ್ರೀಮಾನ್ ನಾರಾಯಣ ವೆಂಕಟೇಶ ಕುರಡಿಯವರೂ ಮತಗಳ ಎಣಿಕೆಗೆ, ಸಭಾಧ್ಯಕ್ಷರಿಂದ ನಿಯಮಿತರಾದರು. ಇವರು ಕೊಟ್ಟ ಪಟ್ಟಿಯಿಂದ ಈ ಕೆಳಗೆ ಕಂಡ ಸದಸ್ಯರು ಚುನಾವಣೆಯಾದರು:—

ಮೈಸೂರು ಪ್ರಾಂತಕ್ಕೆ—

೧ ಶ್ರೀಮತಿ ಡಿ. ಸಾಕಮ್ಮನವರು (ಬೆಂಗಳೂರು)
೨ ಮ|| ರಾ|| ಶ್ರೀ ಡಿ. ವಿ. ಗುಂಡಪ್ಪನವರು (ಬೆಂಗಳೂರು)
೩ ,, ನಿಟ್ಟೂರು ಶ್ರೀನಿವಾಸರಾಯರು, ಬಿ.ಎಸ್‌ಸಿ., ಬಿ.ಎಲ್. (ಬೆಂಗಳೂರು)
೪ ,, ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ. (ಮೈಸೂರು)
೫ ,, ಮಾಸ್ತಿ ವೆಂಕಟೇಶ ಐಯಂಗಾರ್‍ಯರು, ಎಂ.ಎ. (ಬೆಂಗಳೂರು)
೬ ,, ತಿರುಮಲೆ ತಾತಾಚಾರ್ಯ ಶರ್ಮರವರು (ಬೆಂಗಳೂರು)
೭ ,, ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ. (ಬೆಂಗಳೂರು)
೮ ,, ವಿ. ವೆಂಕಟಪ್ಪನವರು (ಬೆಂಗಳೂರು)
೯ ,, ಟಿ. ಅಪ್ಪೂರಾಯರು, ಬಿ.ಎ., ಬಿ.ಎಲ್. (ಬೆಂಗಳೂರು)
೧೦ ,, ಎನ್. ವೆಂಕಟೇಶಯ್ಯಂಗಾರ್‍ಯರು, ಬಿ.ಎ. (ಬೆಂಗಳೂರು)
೧೧ ,, ಎಂ. ಆರ್. ಶ್ರೀನಿವಾಸಮೂರ್ತಿಗಳು, ಬಿ.ಎ. (ಬೆಂಗಳೂರು)
೧೨ ,, ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್. (ಬೆಂಗಳೂರು)

ಮುಂಬಯಿ ಪ್ರಾಂತಕ್ಕೆ—

೧ ಮ|| ರಾ|| ಶ್ರೀ ಬಿ. ಡಿ. ಬೆಳ್ವಿಯವರು (ಮುಂಬಯಿ)
೨ ,, ಬಿ. ಎಸ್. ಬೆಟಿಗೇರಿಯವರು (ಬೆಳಗಾಂವಿ)
೩ ರಾ|| ಸಾ|| ಮ|| ರಾ|| ಶ್ರೀ ಪಿ. ಜಿ. ಹಳಕಟ್ಟಿಯವರು, ಬಿ.ಎ., ಎಲ್‌ಎಲ್.ಬಿ. (ಬಿಜಾಪುರ)
೪ ಮ|| ರಾ|| ಶ್ರೀ ರಂಗಪ್ಪ ಪೋತ್ದಾರರು, ಬಿ.ಎ. (ಕಾರವಾರ)
೫ ,, ಎಚ್. ಚೆನ್ನಕೇಶವಯ್ಯಂಗಾರ್‍ಯರು (ಧಾರವಾಡ)
೬ ,, ನಾರಾಯಣ ವೆಂಕಟೇಶ ಕುರಡಿಯವರು (ಧಾರವಾಡ)
೭ ,, ವೆಂಕಟೇಶ ಭೀಮರಾವ್ ಆಲೂರರವರು, ಬಿ.ಎ., ಎಲ್‌ಎಲ್.ಬಿ. (ಧಾರವಾಡ)
೮ ,, ಗುರುಸಿದ್ದಪ್ಪ ಮಹಾಲಿಂಗಪ್ಪ ಮಿರ್ಜಿಯವರು, ಬಿ.ಎ., ಎಲ್‌ಎಲ್.ಬಿ. (ಹುಬ್ಬಳ್ಳಿ)
೯ ,, ಚಂದ್ರಶೇಖರ ಶಾಸ್ತ್ರಿಗಳು, ವ್ಯಾಕರಣತೀರ್ಥ (ಹುಬ್ಬಳ್ಳಿ)

ಮದರಾಸು ಪ್ರಾಂತಕ್ಕೆ—

೧. ಮ|| ರಾ|| ಶ್ರೀ ಲಕ್ಷ್ಮೀನಾರಾಯಣ ಪುಣಿಂಚತ್ತಾಯರು (ಕಾಸರಗೋಡು)
೨. ,, ಬೆನಗಲ್ ರಾಮರಾಯರು, ಎಂ.ಎ., ಎಲ್‌ಎಲ್.ಬಿ. (ಮದರಾಸು)
೩. ,, ಎಚ್. ತಿಮ್ಮಕೃಷ್ಣರಾಯರು, ಬಿ.ಎ., ಬಿ.ಎಲ್. (ಬಳ್ಳಾರಿ)

ಉತ್ತರ ಕರ್ಣಾಟಕ ಸಂಸ್ಥಾನಗಳಿಗೆ—

೧. ಮ|| ರಾ|| ಶ್ರೀ ಕೆ. ಜಿ. ಕುಂದಣಗಾರರು, ಎಂ.ಎ. (ಕೊಲ್ಹಾಪುರ)
೨. ,, ಟಿ. ಎಸ್. ಚಿಕ್ಕೋಡಿಯವರು (ಬನಹಟ್ಟಿ)

ಹೈದರಾಬಾದು ಸಂಸ್ಥಾನಕ್ಕೆ—

೧. ಮ|| ರಾ|| ಶ್ರೀ ನಾರಾಯಣ ಶಾಸ್ತ್ರೀ ಭಾವೂ ಶಾಸ್ತ್ರಿಗಳು (ಕೊಪ್ಪಳ)
೨. ,, ಗರುಡ ಸದಾಶಿವರಾಯರು (ಹೈದರಾಬಾದು)

ಕೊಡಗು ಪ್ರಾಂತಕ್ಕೆ—

೧. ಮ|| ರಾ|| ಬಿ. ಎ. ಬೆಳ್ಳಿಯಪ್ಪನವರು (ಮಡಿಕೇರಿ)

VIII. ಪರಿಷತ್ತಿನ ಪ್ರಜೋತ್ಪತ್ತಿ ಸಂವತ್ಸರದ ಆಯ ವ್ಯಯದ ಲೆಕ್ಕಗಳನ್ನು ಪರಿಶೀಲಿಸಿ ಸಲಹೆಗಳನ್ನು ಕೊಟ್ಟಿರುವುದಕ್ಕಾಗಿ ಆಯ ವ್ಯಯ ಶೋಧಕರಾದ ಶ್ರೀಮಾನ್ ವೈ. ಸುಬ್ರಹ್ಮಣ್ಯಂ, ಎಂ.ಎ. ಅವರಿಗೆ ಪರಿಷತ್ತಿನ ಕೃತಜ್ಞತಾ ಪೂರ್ವಕವಾದ ವಂದನೆಗಳನ್ನು ಸಮರ್ಪಿಸತಕ್ಕುದೆಂದು ತೀರ್ಮಾನಿಸಲಾಯಿತು.

IX. ಪರಿಷತ್ತಿನ ಪ್ರಜೋತ್ಪತ್ತಿ ಸಂವತ್ಸರದ ಆಯ ವ್ಯಯದ ಲೆಕ್ಕಗಳ ಪರಿಶೋಧಕರು ಕೊಟ್ಟಿರುವ ಸಲಹೆಗಳನ್ನು ಓದಿದ ಬಳಿಕ, ಈ ವಿಚಾರವನ್ನು ಕಾರ್ಯ ನಿರ್ವಾಹಕ ಮಂಡಲಿಯವರು ವಿಮರ್ಶೆ ಮಾಡಿ ಯುಕ್ತ ತೋರುವ ಏರ್ಪಾಡುಗಳನ್ನು ಮಾಡತಕ್ಕುದೆಂದು ತೀರ್ಮಾನಿಸಲಾಯಿತು.

X. ಅಂಗೀರಸ ಸಂವತ್ಸರದ ಆಯ ವ್ಯಯದ ಲೆಕ್ಕಗಳನ್ನು ಪರಿಶೋಧಿಸುವ ಬಗ್ಗೆ ಆಯ ವ್ಯಯ ಪರಿಶೋಧಕರನ್ನು ನಿಯಾಮಕ ಮಾಡಿಕೊಳ್ಳಲು ಕಾರ್ಯ ನಿರ್ವಾಹಕ ಮಂಡಲಿಗೇ ಅಧಿಕಾರವನ್ನು ವಹಿಸತಕ್ಕುದೆಂದು ತೀರ್ಮಾನಿಸಲಾಯಿತು.

XI. ಹಿಂದಣ ವರ್ಷದ ಆಯ ವ್ಯಯದ ಆಧಾರದ ಮೇಲೆ ತಯಾರಿಸಿರುವ ಅಂಗೀರಸ ಸಂವತ್ಸರದ ಆಯ ವ್ಯಯದ ಅಂದಾಜು ಪಟ್ಟಿಯನ್ನು ಅಂಗೀಕರಿಸಲಾಯಿತು. (ಈ ಪಟ್ಟಿಯನ್ನು ಕಡೆಯಲ್ಲಿ ಕೊಟ್ಟಿದೆ.)

XII. ಕರ್ಣಾಟಕ ನಾಟಕಾಲಂಕಾರ, ಅಭಿನಯ ಕೇಸರಿ, ಶ್ರೀಮಾನ್ ಗರುಡ ಸದಾಶಿವರಾಯರು ನಟ, ನಾಟಕ, ನಾಟ್ಯ ಸಂಸ್ಥೆಗಳಿಗೆ ವ್ಯವಸ್ಥಿತ ಸ್ವರೂಪವು ಬರುವುದಕ್ಕಾಗಿ ಕೊಟ್ಟಿರುವ ಸೂಚನೆಗಳನ್ನು ಕಾರ್ಯ ನಿರ್ವಾಹಕ ಮಂಡಲಿಯವರು ಪರ್ಯಾಲೋಚಿಸಿ ತಕ್ಕ ಏರ್ಪಾಡುಗಳನ್ನು ಮಾಡತಕ್ಕುದೆಂದು ತೀರ್ಮಾನಿಸಲಾಯಿತು.

XIII. ಪರಿಷತ್ತಿನ ಅಂಗಗಳಾಗಿ ಸೇರಿಸಿಕೊಳ್ಳಬಹುದಾದ ಸಂಸ್ಥೆಗಳ ವಿಚಾರದಲ್ಲಿ ಆ ಉಪ ಸಮಿತಿಯವರು ಒಪ್ಪಿಸಿರುವ ನಿಬಂಧನಾವಳಿಯನ್ನು ಕಾರ್ಯ ನಿರ್ವಾಹಕ ಮಂಡಲಿಯು ಪರ್ಯಾಲೋಚಿಸಿ ಮುಂದಣ ಕಾರ್ಯವನ್ನು ನಡೆಯಿಸತಕ್ಕುದೆಂದು ತೀರ್ಮಾನಿಸಲಾಯಿತು.

XIV. ಪರಿಷತ್ತಿನ ಗೌರವ ಕಾರ್ಯದರ್ಶಿಗಳಾದ ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯನವರೂ ಗೌರವ ಕೋಶಾಧ್ಯಕ್ಷರಾದ ಶ್ರೀಮಾನ್ ಬೆಳ್ಳಾವೆ ವೆಂಕಟನಾರಾಯಣಪ್ಪನವರೂ ಉತ್ಸಾಹದಿಂದ ಶ್ರಮ ತೆಗೆದುಕೊಂಡು, ದಕ್ಷತೆಯಿಂದ ಕಾರ್ಯನಿರ್ವಾಹ ಮಾಡಿರುವುದಕ್ಕಾಗಿ ಪರಿಷತ್ತಿನ ವಿಶೇಷ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸೂಚಿಸಲಾಯಿತು.

XV. ಶ್ರೀಮಾನ್ ಡಿ. ವಿ. ಗುಂಡಪ್ಪನವರು ಅಧ್ಯಕ್ಷರಾಗಿದ್ದು ಈ ಸಭೆಯ ಕಾರ್ಯವನ್ನು ದಕ್ಷತೆಯಿಂದಲೂ ದರ್ಪದಿಂದಲೂ ಸಾಂಗವಾಗಿ ನೆರವೇರಿಸಿರುವುದಕ್ಕಾಗಿ ಪರಿಷತ್ತು ಅವರಿಗೆ ಕೃತಜ್ಞತಾ ಪೂರ್ವಕವಾದ ವಂದನೆಗಳನ್ನು ಸಮರ್ಪಿಸುತ್ತದೆಂಬ ಅಂಶವನ್ನು ಸೂಚಿಸಲಾಯಿತು.

| **ಸಿ. ಕೆ. ವೆಂಕಟರಾಮಯ್ಯ** | **ಡಿ. ವಿ. ಗುಂಡಪ್ಪ** |
| --- | --- |
| ಗೌರವ ಕಾರ್ಯದರ್ಶಿ | ಸಭಾಧ್ಯಕ್ಷ |

———

# ಆಂಗೀರಸ ಸಂವತ್ಸರದ ಆಯ ವ್ಯಯದ ಅಂದಾಜು ಪಟ್ಟಿ

## ಆಯ

| | | ರೂ. ಆ. ಪೈ |
|---|---|---|
| ೧ | ವರ್ಷಾರಂಭದ ಶಿಲ್ಕು .. .. | ೫,೫೬೮—೩—೮ |
| ೨ | ತಿಂಗಳುಗಟ್ಟಲೆ ಮೈಸೂರು ಸರ್ಕಾರದಿಂದ ಬರುವ ಸಹಾಯ ದ್ರವ್ಯ .. .. | ೧,೮೦೦—೦—೦ |
| ೩ | ಚಂದಾ ಮೊಬಲಗು (ಸದಸ್ಯರಿಂದ) ಸುಮಾರು .. | ೨೦೦—೦—೦ |
| ೪ | ಪರಿಷತ್ಪತ್ರಿಕೆಯ ಚಂದಾ (ವರ್ಗಣೀದಾರರಿಂದ) ಸುಮಾರು | ೧೬೦—೦—೦ |
| ೫ | ಸದಸ್ಯರುಗಳಿಂದ ಬರಬೇಕಾದ ಬಾಕಿ ಚಂದಾ ಮೊಬಲಗಿನ ಪೈಕಿ ವಸೂಲಾಗಬಹುದಾದುದು (ಸುಮಾರು) | ೨೦೦—೦—೦ |
| ೬ | ಪುಸ್ತಕಗಳ ಮಾರಾಟದಿಂದ ,, .. | ೧೦೦—೦—೦ |
| ೭ | ಡಿಪಾಜಿಟ್ಟುಗಳ ಮೇಲೆ ಬರಬಹುದಾದ ಬಡ್ಡಿ ,, .. | ೩೫೦—೦—೦ |
| ೮ | ಪರಿಷತ್ತಿನಲ್ಲಿರುವ ಕಾಗದದ ಬೆಲೆ ,, .. | ೧೦—೦—೦ |
| ೯ | ಪರಿಷನ್ಮಂದಿರಕ್ಕಾಗಿ ಮೈಸೂರು ಶ್ರೀಮನ್ಮಹಾರಾಜರವರ ಸರಕಾರದಿಂದ ಬರತಕ್ಕ ಸಹಾಯ ದ್ರವ್ಯ .. | ೧೫,೨೮೯—೦—೦ |
| | ಒಟ್ಟು .. | ೨೩,೬೭೭—೩—೮ |

## ವ್ಯಯ

| | | ರೂ. ಆ. ಪೈ |
|---|---|---|
| ೧ | ಸಿಬ್ಬಂದಿಯ ವೆಚ್ಚ—<br>ಸಹಾಯಕ ಕಾರ್ಯದರ್ಶಿ, ತಿಂಗಳಿಗೆ ೫೦ ರೂ. ಮೇರೆ<br>ಪಂಡಿತರು ,, ೨೫ ,,<br>ಗುಮಾಸ್ತೆ ,, ೨೫ ,,<br>ಜವಾನ ,, ೧೨ ,, | ೧,೩೪೪—೦—೦ |
| ೨ | ಮನೆಯ ಬಾಡಿಗೆ (ತಿಂಗಳಿಗೆ ೩೦ ರೂ. ಮೇರೆ) .. | ೩೬೦—೦—೦ |
| ೩ | ದೀಪದ ವೆಚ್ಚ .. .. .. | ೪೦—೦—೦ |
| ೪ | ಬರೆವಣಿಗೆಯ ಸಾಮಗ್ರಿ .. .. | ೫೦—೦—೦ |
| ೫ | ಅಂಚೆಯ ಹಾಸಲು .. .. | ೨೦೦—೦—೦ |
| ೬ | ಮುದ್ರಣದ ವೆಚ್ಚ .. .. | ೧,೫೦೦—೦—೦ |
| ೭ | ಪುಸ್ತಕ ಭಾಂಡಾಗಾರ .. .. | ೫೦೦—೦—೦ |
| ೮ | ವಾಚನ ಮಂದಿರ .. .. | ೧೦೦—೦—೦ |
| ೯ | ಪುಸ್ತಕಗಳನ್ನಿಡುವ ನಿಲುಪೆಟ್ಟಿಗೆಗಳು .. | ೨೫೦—೦—೦ |
| ೧೦ | ಪ್ರಚಾರ ಕಾರ್ಯ .. .. | ೨೫೦—೦—೦ |
| ೧೧ | ಸಮ್ಮೇಳನದ ವೆಚ್ಚ .. .. | ೨೫೦—೦—೦ |
| ೧೨ | ವಿಜ್ಞಾನ ಸಂಬಂಧವಾದ ಪುಸ್ತಕಗಳ ಪ್ರಕಟನೆ .. | ೧,೩೦೦—೦—೦ |
| ೧೩ | ಪರಿಷತ್ತಿನ ಕಟ್ಟಡ .. .. | ೧೫,೭೩೯—೦—೦ |
| ೧೪ | ಇತರ ಚಿಲ್ಲರೆ ವೆಚ್ಚಗಳು .. .. | ೪೪—೩—೮ |
| | ಒಟ್ಟು .. | ೨೧,೯೨೭—೩—೮ |
| ೧೫ | ಮುಂದಕ್ಕೆ ಶಿಲ್ಕು (ಮೂಲ ಧನಕ್ಕಾಗಿ) .. | ೧,೭೫೦—೦—೦ |
| | ಒಟ್ಟು .. | ೨೩,೬೭೭—೩—೮ |

ಸಿ. ಕೆ. ವೆಂಕಟರಾಮಯ್ಯ, ಗೌರವ ಕಾರ್ಯದರ್ಶಿ.

# * ಕವಿತೆಯೂ ಪಾಂಡಿತ್ಯವೂ

ಸರ್ವತೋಮುಖವಾದ ಜ್ಞಾನವೇ ವಿದ್ಯೆಯೆನಿಸಿಕೊಳ್ಳಲ್ಪಡುವುದು. ಈ ಸರ್ವತೋಮುಖವಾದ ಜ್ಞಾನವು ಪ್ರತಿಯೊಬ್ಬ ಮನುಷ್ಯನಲ್ಲಿಯೂ ಇರುವುದಿಲ್ಲ. ಏಕೆಂದರೆ, ಅಂತಹ ತಿಳಿವಳಿಕೆಯನ್ನು ಸಂಪಾದಿಸುವುದು ಕಷ್ಟವಾಗಿರುವುದು. ಸರ್ವತೋಮುಖವಾದ ಜ್ಞಾನವೆಂದರೆ, ಪ್ರಪಂಚದಲ್ಲಿ ಮನುಷ್ಯನ ಏಳಿಗೆಗೆ ಸಾಧನವಾದ ಪ್ರತಿಯೊಂದು ಕಲೆಯ ಪಾಂಡಿತ್ಯವು ಎಂದಮೇಲೆ, ಸಾಹಿತ್ಯ, ವೇದಾಂತ, ತರ್ಕ, ಅರ್ಥಶಾಸ್ತ್ರ, ಗಣಿತ, ಜ್ಯೋತಿಷ, ವಾಣಿಜ್ಯ, ಸಂಗೀತ, ಚಿತ್ರ, ಬಾಣಗಾರಿಕೆ, ವ್ಯವಸಾಯ—ಇವೆಲ್ಲವನ್ನೂ ವಿದ್ಯೆಯೆಂದೇ ಹೇಳಬೇಕಾಗುವುದು. ಇಂತಹ ವಿದ್ಯೆಗಳಲ್ಲಿ ನುರಿತವನು ಪೂರ್ವ ಕಾಲದಲ್ಲಿ ರಾಜಾಸ್ಥಾನಗಳಲ್ಲಿ ಪಂಡಿತ, ಕವಿ, ಗಮಕಿ, ವಾಗ್ಮಿ, ವಾದಿ ಮುಂತಾದ ಹೆಸರುಗಳಿಂದ ಶೋಭಿಸುತ್ತಿದ್ದುದಾಗಿ ಹಿಂದಿನ ಗ್ರಂಥಗಳಿಂದ ಗೊತ್ತಾಗುತ್ತದೆ. ಪ್ರಕೃತ, ಮೇಲೆ ಸೂಚಿಸಿರುವ ಪಂಡಿತ, ಕವಿಯೆಂಬ ಹೆಸರುಗಳ ಅರ್ಥ, ಕಾರ್ಯ—ಇವುಗಳ ವಿಷಯವಾಗಿ ವಿಚಾರಿಸಬೇಕೆಂಬುದೇ ಈ ಲೇಖನದ ಧ್ಯೇಯವಾಗಿರುತ್ತದೆ. ಪಂಡಾ ಎಂದರೆ ಜ್ಞಾನ; ಅದಿರುವವನು ಪಂಡಿತನೆಂದು ಹೇಳುವರು ; ಎಂದರೆ, ಒಂದೊಂದು ಕಲೆಯಲ್ಲಿಯೂ ಹೆಚ್ಚಾದ ಅರಿವುಳ್ಳವನೆಂದು ಗೊತ್ತಾಗುವುದು. ಆದರೆ, ಎಲ್ಲ ಕಲೆಗಳ ಪಾಂಡಿತ್ಯವೂ ಒಂದು ವ್ಯಕ್ತಿಯಲ್ಲಿ, ಅನೇಕ ಕಾರಣಗಳಿಂದ, ಇರುವುದಿಲ್ಲವಾದಕಾರಣ ಯಾವುದಾದರೂ ಒಂದು ಕಲೆಯಲ್ಲಿ ಸಮಗ್ರವಾಗಿ ನುರಿತ ಅನುಭವವುಳ್ಳ ಮನುಷ್ಯನನ್ನು ಪಂಡಿತನೆಂದು ಹೇಳಬಹುದು. ಆದರೂ, ಸಾಹಿತ್ಯದಲ್ಲಿ ವಿಶೇಷ ಬಳಕೆಯನ್ನು ಪಡೆದಿರುವ ಮನುಷ್ಯನನ್ನು ಮಾತ್ರ ಲೋಕದಲ್ಲಿ ಸ್ಥೂಲ ದೃಷ್ಟಿಯಿಂದ ನೋಡತಕ್ಕವರು ಪಂಡಿತನೆನ್ನುತ್ತಿರುವರು. ಇದೊಂದು ಐತಿಹ್ಯವು. "ಕವೇಃ ಕರ್ಮ, ಭಾವ ವಾ ಕಾವ್ಯಂ" ಎಂದಿರುವುದರಿಂದ, ಲೋಕದಲ್ಲಿ ಸ್ವಭಾವ ಸಿದ್ಧವಾಗಿರುವ ವಸ್ತು ಸ್ಥಿತಿಯನ್ನು ಹೃದಯಂಗಮವಾಗಿ ಬರೆಯುವುದರಿಂದ ತತ್ಸಂಬಂಧವಾದ ವರ್ಣನಾ ವಿಶೇಷದ ಪುಂಜವೇ ಕಾವ್ಯವು, ಅಥವಾ ಕವಿತೆಯು. ಹೃದಯಂಗಮವೆಂಬುದಕ್ಕೆ ಲಕ್ಷಣ ಗ್ರಂಥಗಳೇ ಪ್ರಮಾಣವಾಗಿರುವುವು. ಈ ವಿಷಯವಾಗಿ ಪೂರ್ವದಿಂದಲೂ ನಡೆದು ಬಂದಿರುವ ಕ್ರಮವನ್ನು ವಿಚಾರಿಸಿ ನೋಡುವ.

ಮೇಲೆ ಹೇಳಿದ ವ್ಯುತ್ಪತ್ತಿಯಿಂದ ಕವಿಯ ಕೆಲಸವೇ ಕಾವ್ಯವೆನ್ನಬೇಕು. ಇಂತಹ ಕಾವ್ಯದಲ್ಲಿ ಪದ್ಯಾತ್ಮಕ, ಗದ್ಯಾತ್ಮಕ, ಉಭಯಾತ್ಮಕ ಕಾವ್ಯಗಳೆಂದು ಹಿಂದಿನವರು ವಿಂಗಡಿಸಿರುವರು. ಇವುಗಳಲ್ಲಿ ಒಂದೊಂದು ಅಲ್ಲಲ್ಲಿ ಉತ್ತಮ ಮಧ್ಯಮ ಸಾಧಾರಣ ಕಾವ್ಯಗಳ ಲಕ್ಷಣಗಳಿಂದ ಕೂಡಿರಬಹುದು. ಈ ವಿಷಯಗಳು ಸಂಸ್ಕೃತ ಮತ್ತು

* ಮಡಿಕೇರಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲಿ ಓದಿದುದು.

ಕನ್ನಡ ಭಾಷೆಗಳಿಗೆ ಸಮ ಪ್ರಾಧಾನ್ಯವಾಗಿದ್ದರೂ ಸಂಸ್ಕೃತ ಭಿನ್ನವಾದ ಪ್ರಾಸವನ್ನು, ಈಗಿನವರು ದ್ರಾವಿಡಗಳೆಂದು ಹೇಳುವ ಭಾಷೆಗಳಲ್ಲಿ, ಅನುಸರಿಸುವ ವಾಡಿಕೆಯು ಬಹು ಕಾಲದಿಂದಲೂ ಬಂದಿರುವುದಾಗಿದೆ. ಸಂಸ್ಕೃತದಲ್ಲಿ ಛೇಕಾನುಪ್ರಾಸ, ವೃತ್ಯನುಪ್ರಾಸ, ಲಾಟಾನುಪ್ರಾಸ ಮುಂತಾದುವು ರೂಢಿಯಲ್ಲಿವೆ. ಅವನ್ನೇ ಕನ್ನಡದಲ್ಲಿ ಆಲಂಕಾರಿಕರು ತೆಗೆದುಕೊಂಡಿರುವರು. ಛಂದಶ್ಶಾಸ್ತ್ರಜ್ಞರು ಕನ್ನಡದಲ್ಲಿ ಎರಡನೆಯಕ್ಷರವನ್ನು ಪ್ರಾಸವಾಗಿಟ್ಟುಕೊಂಡಿರುವುದನ್ನು ನೋಡಿದರೆ, ಮೇಲೆ ಹೇಳಿದ ಅನುಪ್ರಾಸಗಳನ್ನು ನೋಡಿ ಇದೊಂದು ಹೊಸ ಕ್ರಮವನ್ನು ರೂಢಿಗೆ ತಂದಿರಬಹುದೆಂಬ ಊಹೆಗೆ ಅವಕಾಶವುಂಟು. ಆದಕಾರಣ, ಈ ಒಂದು ವಿಷಯದಲ್ಲಿಯೂ ಈ ಭಾಷೆಗಳಲ್ಲಿ ಸಮ ಪ್ರಾಧಾನ್ಯವೇ ತೋರಿಬರುವುದು ಸ್ಪಷ್ಟವಾಗಿರುವುದು. ಈ ದ್ರಾವಿಡ ಭಾಷೆಗಳಲ್ಲಿ ಈ ಮೇಲೆ ಹೇಳಿದ ಪ್ರಾಸವನ್ನಲ್ಲದೆ ಱ, ೞ, ಳ, ಮುಂತಾದ ಅಕ್ಷರಗಳನ್ನು ಪ್ರಾಚೀನರು ಗಮನಿಸುತ್ತಾರೆ; ಱ ಮತ್ತು ರ, ೞ, ಳ ಮತ್ತು ಕ್ಷಳ— ಇವುಗಳಿಂದ ಕೂಡಿದ ಶಬ್ದಗಳಿಗೆ ಅರ್ಥ ವ್ಯತ್ಯಾಸಗಳನ್ನು ಹೇಳುತ್ತಾರೆ. ದ್ರಾವಿಡ ಭಾಷೆಗಳಲ್ಲಿ ಕನ್ನಡವೂ ಒಂದೆಂದು ಕೆಲವರ ಅಭಿಪ್ರಾಯ. ಈ ನಮ್ಮ ಕನ್ನಡದಲ್ಲಿ ನಾಗವರ್ಮನು ತನ್ನ ಛಂದೋಂಬುಧಿಯಲ್ಲಿ—

> ನುತ ಶಬ್ದಾಲಂಕಾರದೊ।
> ಳತಿಶಯಮದು ಕನ್ನಡಕ್ಕೆ ಸತತಂ ಪ್ರಾಸಂ।
> ಕೃತಕೃತ್ಯಮಪ್ಪುದೆಲ್ಲರ।
> ಮತದಿಂದದು ತಪ್ಪೆ ಕಾವ್ಯಮೇಂ ಶೋಭಿಪುದೇ?॥

ಎಂದು ಬರೆಯುತ್ತಾನೆ; ಇದು ಸರ್ವರ ಮತದಿಂದ ಅಂಗೀಕೃತವಾಗಿದೆಯೆಂಬುದನ್ನು ತಿಳಿಸಿದ್ದಾನೆ. ಪ್ರಾಸ ವಿಷಯದಲ್ಲಿ ನಾಗವರ್ಮನು—

> ಪಾದದೊಳೆರಡನೆಯಕ್ಕರ।
> ಮಾದರದಿಂದಾವುದಾದುದದನಱಿತದಱಿಂ॥
> ಪಾದದೊಳಿಡುವೊಡದಕ್ಕುಂ।
> ಭೇದೋಕ್ತಿ-ಕ್ರಮ, ವಿಚಾರಿ! ತೋರ ಪ್ರಾಸಂ॥

ಎನ್ನುವನು. ಅಲ್ಲದೆ, ಪದ್ಯದ ಒಂದೊಂದು ಪಾದದಲ್ಲಿಯೂ ಒಂದೆರಡನೆಯ ಸ್ವರಗಳ ಮಧ್ಯಗತವಾದ ವ್ಯಂಜನಾಕ್ಷರವೇ ಪ್ರಾಸವು ಎಂದು ಹೇಳುವರು. ಈ ನಿಯಮವೂ ಇನ್ನು ಛಂದಶ್ಶಾಸ್ತ್ರದಲ್ಲಿ ಹೇಳುವ ಅನೇಕ ನಿಯಮಗಳೂ ವಿಶೇಷವಾಗಿ ಪದ್ಯಕ್ಕೆ ಮಾತ್ರ ಅನ್ವಯಿಸುತ್ತವೆ. ಗದ್ಯವನ್ನು ಬರೆವುದು ಪದ್ಯಕ್ಕಿಂತಲೂ ಕಷ್ಟತರವಾದ ಕಾರ್ಯವಾದ ಕಾರಣ ಪದ್ಯಕ್ಕಿರುವ ನಿರ್ಬಂಧಗಳನ್ನದಕ್ಕೆ ವಿಧಿಸಲಿಲ್ಲ. ಅದಕ್ಕಾಗಿಯೇ, ಪ್ರಾಚೀನರು "ಗದ್ಯಂ ಕವೀನಾಂ ನಿಕಷಂ ವದಂತಿ" ಎಂಬುದಾಗಿ ಹೇಳುತ್ತಾರೆ. ಎಷ್ಟೋ ಸಾವಿರಾರು ಗದ್ಯ ಗ್ರಂಥಗಳು ಸಂಸ್ಕೃತ ಮತ್ತು ದ್ರಾವಿಡ ಭಾಷೆಗಳಲ್ಲಿ ಈಚೆಗೆ ಹುಟ್ಟಿರುವುವು. ಆದರೆ, ಕಾದಂಬರಿ, ಹರ್ಷ ಚರಿತ್ರೆ ಮುಂತಾದವು

ಗಳಿಗೆ ಸಮಾನವಾದವುಗಳಾವುವೂ ಆಗಲಿಲ್ಲ. ಗದ್ಯ ಕಾವ್ಯವನ್ನು ಬರೆವುದೆಂದರೆ ಸುಲಭವಾದ ಕೆಲಸವಲ್ಲ. ಕನ್ನಡದಲ್ಲಿ, 'ಹಾಡಿದುದೆಲ್ಲ ರಾಗ, ಆಡಿದುದೆಲ್ಲ ಮಾತು' ಎಂಬುದಾಗಿ ಗಾದೆಯಿದೆ. ಈ ಗಾದೆಯಲ್ಲಿ ಸ್ಥೂಲವಾಗಿ ತೋರಿಬರುವ ಅರ್ಥವನ್ನು ಅನುಸರಿಸಿ ಗ್ರಂಥವನ್ನು ಬರೆಯುವುದಾದರೆ ಬಹು ಸುಲಭವಾದ ಕೆಲಸವಾಗುವುದು.

ಮನುಷ್ಯನು ತನಗೆ ತಿಳಿದಿರುವ ಅಪಾರವಾದ ವಿಷಯಗಳನ್ನು ಅರ್ಥಕ್ಕೆ ಲೋಪ ಬಾರದ ಹಾಗೆ, ಯಾವಾಗಲೂ ಸ್ಮೃತಿಪಥದಲ್ಲಿರುವ ಹಾಗೆ, ಹೃದಯಂಗಮವಾಗಿ, ಸುಲಭವಾಗಿ, ಸಂಗ್ರಹವಾಗಿ ಬರೆಯುವುದಕ್ಕೆ ಛಂದಶ್ಶಾಸ್ತ್ರವು ಅವಶ್ಯವಾಗಿ ಬೇಕಾದುದು. ಮೊತ್ತಮೊದಲು ಬಹು ವಿಸ್ತೃತವಾಗಿದ್ದು ಬರುತ್ತ ಬರುತ್ತ ಸೂಕ್ಷ್ಮತೆಯನ್ನು ಹೊಂದಿ, ಎಲ್ಲರಿಗೂ ಎಲ್ಲ ಕಾಲದಲ್ಲಿಯೂ ನೆನಪಿನಲ್ಲಿರುವಂತೆ ನಿಯಮಗಳನ್ನು ಬಿಡದಿರಲಿಕ್ಕಾಗಿ ಒಂದೊಂದು ಶಾಸ್ತ್ರದಲ್ಲಿಯೂ ನಿಯಮಗಳು ಏರ್ಪಟ್ಟುವೆಂದು ಚರಿತ್ರಕಾರರು ಹೇಳುವರು. ಈ ನಿಯಮವು ಅವಶ್ಯವಿಲ್ಲವೆಂಬುದು, ಓದಿದ ವಿದ್ಯಾರ್ಥಿಗೆ ಪರೀಕ್ಷೆಯು ಅವಶ್ಯವಿಲ್ಲೆಂದೂ, ಮದುವೆಯಾಗದೆ ಗಂಡ ಹೆಂಡಿರಾಗಿರಬೇಕೆಂದೂ, ಉಡಿಗೆ ತೊಡಿಗೆಗಳು ಮನುಷ್ಯನ ನೈಸರ್ಗಿಕವಾದ ಸೌಂದರ್ಯಕ್ಕೆ ಉಪದ್ರವಕಾರಕವೆಂದು ಅವನ್ನುಳಿದು ಹುಟ್ಟಿದಂತೆಯೇ ಇದ್ದರೆ ಸೊಗಸೆಂದೂ ಹೇಳಿದರೆ ಎಷ್ಟು ಸರಿಯಾಗಬಹುದೊ ಅಷ್ಟೇ ಸರಿಯಾಗುವುದು. ಆದರೆ, ಅತಿ ನಿಯಮವೂ, ನಿಯಮವಿಲ್ಲದಿರುವುದೂ ಉಪಯೋಗಕ್ಕೆ ಬಾರವು; ಅವುಗಳಿಂದ ಅನರ್ಥವೇ ಸರಿ. ಹೇಗೆಂದರೆ, ಲೋಕದಲ್ಲಿ ದೊಡ್ಡವರಾದವರನ್ನು ನಮಸ್ಕರಿಸಬೇಕೆಂಬ ನಿಯಮವಿರುವಲ್ಲಿ, ಗುರುಜನವಲ್ಲದಲ್ಲಿ ವಯಸ್ಸಿನ ಪ್ರಾಧಾನ್ಯವನ್ನು ಮಾತ್ರ ಎಣಿಸಿ ಕುಂಬಿಡುವುದು ಹೇಸಿಕೆಯಾಗುವುದು. ಈ ನಿಯಮವಾವುದೂ ಬೇಡವೆಂದು ತಾಯಿ, ತಂದೆ, ಅಣ್ಣ, ಅಕ್ಕ, ಭಾವ, ಮಾವ, ಅತ್ತೆ, ಅರಸು, ಆಳು— ಇವರೆಲ್ಲರಲ್ಲಿಯೂ ಒಂದೇ ರೀತಿಯಾಗಿ ವರ್ತಿಸಿದರೂ ಅಸಹ್ಯವೆನಿಸುವುದು. ಮತ್ತು ಗುರು ಶಿಷ್ಯ ಭಾವದಲ್ಲಿ ಗುರುವನ್ನು ಕಂಡಾಗ ಶಿಷ್ಯನು ಭಯ, ಭಕ್ತಿ, ವಿನಯ, ಶ್ರದ್ಧೆಗಳುಳ್ಳವನಾಗಿರಬೇಕೆಂಬ ನಿಯಮವನ್ನೆಣಿಸಿ, ಗುರುವಿನ ಕಾಲ ವರ್ತಮಾನಗಳನ್ನರಿಯದೆ ಕೊಡುವ ಮರ್ಯಾದೆಯು ಹೇಯವೆನಿಸುವುದು. ಅಲ್ಲದೆ, ಅವರಿರ್ವರಿಗೂ ಏನೂ ವ್ಯತ್ಯಾಸವಿಲ್ಲದಂತೆ ಪರಸ್ಪರ ತೋರ್ಪಡಿಸಿಕೊಳ್ಳುವುದು ಹೀನವು. ಹೀಗಿರುವಾಗ, ಈ ವಿಷಯದಲ್ಲಿ, ಅಥವಾ ಯಾವ ವಿಷಯದಲ್ಲಿಯಾದರೂ ಸಾಧಾರಣವಾಗಿರುವುದೇ ಉತ್ತಮವು. ಇಂತು, ಛಂದೋ ನಿಯಮವು ಪ್ರಾಚೀನರು ನಿಯಮಿಸಿರುವಷ್ಟು ಮಾತ್ರ ಅವಶ್ಯವೇ ಆಗಿದೆ.

ಕನ್ನಡದಲ್ಲಿ ಸಾಕಾದಷ್ಟು, ಅಥವಾ ಹೊಸ ಹೊಸದಾಗಿ ಎಷ್ಟು ಕಲ್ಪಿಸಿದರೂ ಅದರಲ್ಲಿಯೇ ಅಂತರ್ಗತವಾಗುವ, ಛಂದೋ ನಿಯಮಗಳು ನಿರ್ಮಿತವಾಗಿರುವಾಗ, ಅಂಧ ವಿಶ್ವಾಸದಿಂದ, ಅವನ್ನು ಸೂಕ್ಷ್ಮವಾಗಿ ಯೋಚಿಸಿ ಹಿಗ್ಗದೆ, ಬೇರೆ ಯಾವುದನ್ನೋ ನೋಡಿ ಅದು ಹೊಸದೆಂದು ಈ ಮರ್ಯಾದೆಗೆ ಅದನ್ನು ಬೆರಸಿ ತಲೆದೂಗುವುದು ಬಹು ಅನ್ಯಾಯವಾದುದು. ಹೀಗೆ ಇತರರಾರಾದರೂ ವರ್ತಿಸುತ್ತಿರಬಹುದು.

ಆದರೆ, ಅವರು ಮಾಡುತ್ತಿರುವರೆಂದು ನಾವಾದರೂ ಆರಂಭಿಸುವುದೇಕೆ? ಅಣಕಿಸುವುದಕ್ಕೆ ನಾವೇನೂ ಅರಿಯದವರೇ? ನಾವು ನಮ್ಮ ಭಾಷೆಯನ್ನು ಚೆನ್ನಾಗಿ ಶೋಧಿಸಿ ತಿಳಿದು, ಪದ್ಯ ರೂಪವಾದ ಕವಿತೆ ಮಾಡುವುದೇ ಭಾಷೆಯನ್ನುದ್ಧರಿಸುವ ಕ್ರಮವೆಂಬ ಭಾವವನ್ನು ಶಾಸ್ತ್ರೀಯವಾಗಿಟ್ಟುಕೊಂಡು, ಯಾವ ಯಾವ ಉತ್ಕೃಷ್ಟ ವಿಷಯಗಳನ್ನು ತಿಳಿದಿದ್ದರೂ, ಭಾಷಾ ಮರ್ಯಾದೆಗನುಸಾರವಾಗಿ ಬರೆದು ಸಕಲ ಕಲೆಗಳೂ ನಮ್ಮ ಭಾಷೆಯಲ್ಲಿವೆ, ನಾವು ಇನ್ನೊಂದರ ಸಹಾಯವನ್ನಪೇಕ್ಷಿಸ ಬೇಕಾಗಿಲ್ಲ ಎನ್ನಿಸುವುದೇ ಪಂಡಿತ ಕವಿಗಳ ಲಕ್ಷಣವಾಗಿರುವುದು.

"ನಹಿ ಸರ್ವಃ ಸರ್ವಂ ಜಾನಾತಿ" ಎಂಬ ಅಭಿಯುಕ್ತೋಕ್ತಿಯಂತೆ, ಲೋಕದಲ್ಲಿ ಮಾನವರೆಲ್ಲರೂ ಸಕಲ ವಿಷಯಗಳನ್ನೂ ತಿಳಿದವರಾಗಿರುವುದಿಲ್ಲ; ಅಲ್ಲದೆ, ಪ್ರಯತ್ನಿಸಿದರೂ ಎಲ್ಲರೂ ಎಲ್ಲ ವಿಷಯಗಳನ್ನು ತಿಳಿದುಕೊಳ್ಳಲು ಅಸಾಧ್ಯವಾಗಿರುವುದು. ಒಂದೊಂದು ವಿಷಯದಲ್ಲಿ ಒಬ್ಬೊಬ್ಬರಿಗೆ ಮನಃಪ್ರವೃತ್ತಿಯು ವಿಶೇಷವಾಗಿರುವುದು. ಹಾಗಿರುವಾಗ, ಅವರು ಒಂದು ವಿಷಯವನ್ನು ತಿಳಿದುಕೊಂಡಿರುವಂತೆ ಉಳಿದವನ್ನು ತಿಳಿಯುವೆವು, ಅಥವಾ ತಿಳಿದುಕೊಳ್ಳುವೆವು ಎಂದು ನಟಿಸಿ, ಲೋಕಕ್ಕೆ ಅನ್ಯಾಯ ಮಾಡುವುದು ಸರಿಯಲ್ಲ; ಅದರಲ್ಲಿ, ಒಂದಕ್ಕೊಂದು ವಿರೋಧವಾಗಿರುವ ಎರಡು ವಿಷಯಗಳಲ್ಲಿ ಸಮಾನವಾದ ಪಾಂಡಿತ್ಯವನ್ನು ಪಡೆದಿರುವೆವೆಂದು ನಟಿಸುವುದಂತೂ ದೊಡ್ಡ ಆಷಾಢಭೂತಿಯ ವೇಷವೇ ಸರಿ. ಉದಾಹರಣೆಯಾಗಿ, ಹಾಸ್ಯ ರಸವನ್ನು ಅನುಭವಿಸುವುದರಲ್ಲಿ ಗಟ್ಟಿಗನಾದ ಒಬ್ಬ ನಟನು ಶೃಂಗಾರ, ವೀರ ಮುಂತಾದ ರಸಗಳನ್ನು ಅಭಿನಯಿಸುವಾಗ ಅವನ ಹಾಸ್ಯರಸದ ಅಭಿನಯವು ಆ ಎರಡು ರಸಗಳ ಅಭಿನಯಗಳಲ್ಲಿ ಮಿಶ್ರವಾಗುವುದು ; ಅಲ್ಲದೆ, ಗಂಭೀರವಾಗಿ ಆ ಎರಡು ರಸಗಳನ್ನು ಅಭಿನಯಿಸಿ ತೋರಿಸಲು ಅವನಿಗೆ ಅಸಾಧ್ಯವಾಗುವುದು. ಆಗ ಅವನು ತನ್ನಿಂದ ಸಾಧ್ಯವಾಗದುದಕ್ಕಾಗಿ, ಮಧ್ಯೇ ಹಾಸ್ಯರಸವಿಲ್ಲದಿದ್ದರೆ ಉಳಿದುವೆರಡೂ ಶೋಭಿಸವೆಂದು ತಾನು ಅದನ್ನು ಅಲ್ಲಲ್ಲಿ ಸೇರಿಸುತ್ತೇನೆಂದು ತನಗನುಕೂಲವಾಗಿ ಹೇಳಿಕೊಳ್ಳುವನು. ಹಾಗೆಯೇ, ವೀರ ರಸವನ್ನು ಅಭಿನಯಿಸುವವನನ್ನು ಹಾಸ್ಯವನ್ನು ತೋರಿಸೆಂದರೆ ಅವನಿಗೆ ಕಷ್ಟವಾಗುವುದು. ಈ ವಿಷಯಗಳನ್ನು ನಾವು ಎಷ್ಟೋ ಕಡೆ ಈ ಕಾಲದಲ್ಲಿ ನೋಡಿ ಅನುಭವಿಸಬಹುದು. ಹೀಗೆಯೇ, ಪಾಠಶಾಲೆಯಲ್ಲಿ ಅಭ್ಯಸಿಸುವ ವಿದ್ಯಾರ್ಥಿಗಳಲ್ಲಿ ಒಬ್ಬನು ಚರಿತ್ರೆಯನ್ನೂ, ಒಬ್ಬನು ಗಣಿತವನ್ನೂ, ಮತ್ತೊಬ್ಬನು ರಸಾಯನ ಭೌತಿಕ ಶಾಸ್ತ್ರಗಳನ್ನೂ ತನತನಗೆ ಬೇಕಾದಂತೆ ಆರಿಸಿಕೊಳ್ಳುವನು. ಎಲ್ಲವನ್ನೂ ಎಲ್ಲರೂ ಕಲಿಯಬೇಕೆಂದರೆ, ಕೆಲವು ಕೆಲವರಿಗೆ ಕಷ್ಟವಾಗುವುದು. ಇದಕ್ಕೆ ಉದಾಹರಣೆಯಾಗಿ, ಹಿಂದೆ ಇಂಗ್ಲಿಷಿನಲ್ಲಿದ್ದ ಪ್ರವೇಶ ಪರೀಕ್ಷೆ (Matric) ಯಲ್ಲಿ ಎಲ್ಲ ವಿಷಯವನ್ನೂ ಎಲ್ಲರೂ ಸಾಧಾರಣವಾಗಿ ತಿಳಿದುಕೊಂಡಿರಬೇಕೆಂಬ ನಿರ್ಬಂಧವಿದ್ದುದರಿಂದ, ಅನೇಕರು ಒಂದೊಂದು ವಿಷಯದಲ್ಲಿ ಪಂಡಿತರಾಗುವಷ್ಟು ಯೋಗ್ಯತೆಯುಳ್ಳವರಾಗಿದ್ದರೂ, ತಮಗೆ ಹಿಡಿಯದಿರುವ ಕೆಲವು ವಿಷಯಗಳ ಸಂಸರ್ಗದಿಂದ, ಅನೇಕ ಸಾರಿ ಪರೀಕ್ಷಿಸಲ್ಪಟ್ಟರೂ, ಆ ಒಂದು ನ್ಯೂನತೆ

ಯಿಂದ ಎಲ್ಲ ವಿಷಯಗಳಲ್ಲಿಯೂ ತೇರ್ಗಡೆಯನ್ನು ಪಡೆಯಲಾರದೆಹೋದರೆಂಬ ನುಡಿಯನ್ನು ನಾವು ಕೇಳುತ್ತಿರುವೆವು. ಅಲ್ಲದೆ, ಅನೇಕ ವಿಷಯಗಳಲ್ಲಿ ನ್ಯೂನತೆ ಯಿದ್ದು, ಒಂದೊಂದರಲ್ಲಿ ಮಾತ್ರ ವಿಶೇಷ ಪರಿಶ್ರಮ ಹೊಂದಿ, ಎಲ್ಲದರಲ್ಲಿಯೂ ತೇರ್ಗಡೆ ಯನ್ನು ಪಡೆಯುತ್ತಿರುವ ಈಗಿನ ರೀತಿಯೂ ನಮಗೆ ಅನುಭವೈಕ ವೇದ್ಯವಾಗಿದೆ. ಇವೆರಡೂ ಸರಿಯಲ್ಲ. ಯಾವ ಮನುಷ್ಯನಿಗೆ ಯಾವುದರಲ್ಲಿ ವಿಶೇಷಾಸಕ್ತಿ ಇರು ವುದೋ ಅದಕ್ಕೆ ಪ್ರಾಧಾನ್ಯವಿತ್ತು ಉಳಿದುದಕ್ಕೆ ಸಾಮಾನ್ಯವಾದ ವ್ಯವಸ್ಥೆಯ ನ್ನೇರ್ಪಡಿಸುವುದು ಉತ್ತಮವಾದುದು. ಇಲ್ಲವಾದರೆ, "ಸಮಯ ಬಂಧ ದೋಷ" ವಾಗುವುದು. ಸಂಸ್ಕೃತದಿಂದ, ಅಥವಾ ಇತರ ಭಾಷೆಗಳಿಂದ ನಾಟಕಾದಿ ಗ್ರಂಥ ಗಳನ್ನು ಭಾಷಾಂತರಿಸುವಾಗ, ನಾಂದೀತ್ಯಾದಿ ಪದ್ಯ ಭಾಗಗಳನ್ನು ಗದ್ಯ ರೂಪವಾಗಿ ಪರಿವರ್ತನ ಮಾಡುವ ಸಂಸ್ಕಾರವೊಂದು ಕೆಲವರಲ್ಲಿ ಬಂದಿರುವುದು. ಭಾಷಾ ಮರ್ಯಾದೆ ಮತ್ತು ದೃಶ್ಯ ಕಾವ್ಯಗಳ ಮರ್ಯಾದೆಯನ್ನು ಬಿಟ್ಟ ಈ ರೀತಿಯಾದ ಪರಿವರ್ತನ ವರ್ತನವು ತಕ್ಕುದಲ್ಲ. ಇದು ಸಂಪ್ರದಾಯವನ್ನೂ ಭಾಷಾ ಗೌರವ ವನ್ನೂ ಕೆಡಿಸುವುದಾಗಿದೆ. ಇಂತಹ ಸಂದರ್ಭದಲ್ಲಿ ಭಾಷಾಂತರಕಾರನು ಶಾಸ್ತ್ರೀಯ ವಾಗಿ ಪದ್ಯ ರಚನೆಯನ್ನು ಮಾಡಲಾರದವನೆಂದೋ, ಅಥವಾ ಹೊಸ ಮಾದರಿ ಯನ್ನಿಳಿಸಲಿಕ್ಕೆ ಇಚ್ಛೆಯುಳ್ಳವನೆಂದೋ ಊಹಿಸಬೇಕಾಗುತ್ತದೆ; ಒಂದು ವೇಳೆ ಅಸಮರ್ಥನಾದರೆ ಈ ಕಾರ್ಯವನ್ನೇಕೆ ಕೈಕೊಳ್ಳಬೇಕು? ಸುಸಮರ್ಥನಾದರೆ ಏಕೆ ರಚಿಸಲಿಲ್ಲ? ಭಾಷಾಂತರೀಕರಣ ವಿಷಯದಲ್ಲಿಯಾದರೂ ಈ ಮಾದರಿಯೇಕೆ? ಹೀಗೆಯೇ, ಯಾವ ವಿಷಯವನ್ನಾದರೂ ಉದಾಹರಣೆಯಾಗಿ ಹೇಳಬಹುದು.

ಈಗ ಇಷ್ಟೆಲ್ಲ ವಿಚಾರ ಮಾಡಿದ ಮೇಲೆ, ಕನ್ನಡದಲ್ಲಿ ಕವಿತೆಯನ್ನು ಮಾಡು ವವರು ಒಂದು ನಿರ್ಬಂಧವನ್ನು ಇಟ್ಟುಕೊಂಡು, ಆ ಒಂದು ವಿಷಯವನ್ನು ಚೆನ್ನಾಗಿ ಮಾಡುವುದೊಳ್ಳೆಯದೆಂದು ಮತ್ತೊಂದು ಬಾರಿ ಹೇಳಬೇಕಾಗಿಲ್ಲ. ಕನ್ನಡದಲ್ಲಿ ಛಂದೋ ನಿಯಮಗಳಿಗೆ ಕೊರತೆಯಿಲ್ಲ. ಭಾವವೆಂಬುದು ಕವಿಯ ಅಧೀನ. ಆದರೆ ಅದನ್ನು ಸರ್ವ ಜನೇಷ್ಟವಾಗಿ, ಸರ್ವ ಗ್ರಾಹ್ಯವಾಗಿ ಭಾಷಾ ಗೌರವದಿಂದ ಬರೆಯ ತಕ್ಕುದನ್ನು ಮಾತ್ರ ಕವಿಯು ಅಭ್ಯಸಿಸಬೇಕು. ಸಂಸ್ಕೃತದಲ್ಲಿರುವ ಎಲ್ಲ ಛಂದೋ ನಿಯಮಗಳನ್ನೂ ಕರ್ಣಾಟಕ ಭಾಷೆಗೆ ತೆಗೆದುಕೊಳ್ಳಬಹುದು; ಅಷ್ಟೇಕೆ! ಹಿಂದಿ ನವರು ತೆಗೆದುಕೊಂಡೇ ಇರುವರು. 'ಸಂಸ್ಕೃತ ಛಂದೋ ನಿಯಮಗಳನ್ನು ಮಾತ್ರ ಕನ್ನಡಕ್ಕೆ ತೆಗೆದುಕೊಳ್ಳಬಹುದು; ಉಳಿದುವನ್ನು ಕೂಡದು' ಎಂದು ಹೇಳುವುದರಲ್ಲಿ ಅರ್ಥವಿದೆ. ಪ್ರಪಂಚದಲ್ಲಿರುವ ಎಲ್ಲ ಭಾಷೆಗಳಿಗಿಂತಲೂ ಸಂಸ್ಕೃತವು ಪುರಾತನ ದ್ದಾಗಿದ್ದು ದೊಡ್ಡ ಭಾಷೆಯಾಗಿರುವುದು; ಅಲ್ಲದೆ, ಎಲ್ಲ ಭಾಷೆಗಳಿಗೂ ಮಾತೃವಿ ನಂತಿರುವುದು. ಈ ಭಾಷೆಯಿಂದಲೇ ಸರ್ವರೂ, ಸಾಲದಿರುವ ಸಂದರ್ಭಗಳಲ್ಲಿ, ಪದಗಳನ್ನೂ ಅಭಿಪ್ರಾಯಗಳನ್ನೂ ತೆಗೆದುಕೊಂಡು, ಮಾರ್ಪಡಿಸಿಯೂ, ಮಾರ್ಪ ಡಿಸದೆಯೂ, ಇದು ನಮ್ಮ ಭಾಷೆಯೆಂದು ಹೇಳುತ್ತಿರುವಾಗ, ನಮ್ಮ ಪೂರ್ವಜರು ಮೊದಲು ಕಲಿಯುತ್ತಿದ್ದುದೇ ಇದಾಗಿರುವಾಗ, ನಮ್ಮ ಭಾಷೆಗಳಿಗೆಲ್ಲ ಸಂಸ್ಕೃತವು

ತಾಯಾಗಿರುವಾಗ, ಅದರ ಆಶ್ರಯದಿಂದ ಬದುಕುತ್ತಿರುವ ಉಳಿದ ಸೋದರೀ ಭಾಷೆಗಳಿಗಿಂತಲೂ, ಅದರಿಂದ ಸಾಕ್ಷಾತ್ತಾಗಿ ಆಸರೆಯನ್ನು ಪಡೆಯುವುದು ಉತ್ತಮವಲ್ಲವೆ? ಬಳಿಕ, ಕನ್ನಡದಲ್ಲಿಯ ಸಹಜವಾದ ಛಂದೋ ನಿಯಮಗಳಾವುವೆಂದು ನೋಡುವ. ಈ ವಿಷಯವಾಗಿ ಛಂದೋಂಬುಧಿಯಲ್ಲಿ—

"ಅದೆಂತೆಂದೊಡೆ—ಸಂಸ್ಕೃತಂ, ಪ್ರಾಕೃತಮಪಭ್ರಂಶಂ, ಪೈಶಾಚಿಕಮೆಂಬ ಮೂರುವರೆ ಭಾಷೆಗಳೊಳ್ ಪುಟ್ಟುವ ದ್ರವಿಡಾಂಧ್ರ ಕರ್ಣಾಟಕಾದಿ ಷಟ್ ಪಂಚಾಶತ್ ಸರ್ವ ವಿಷಯ ಭಾಷಾ ಜಾತಿಗಳಕ್ಕುಂ; ಅಲ್ಲಿ ಸಮಮರ್ಧಸಮಂ ವಿಷಮಮುಂದು ವೃತ್ತಂ ಮೂರು ತೆರನಕ್ಕುಂ; ಅಲ್ಲಿ ಉಕ್ತೆ, ಅತ್ಯುಕ್ತೆ, ಮಧ್ಯಮೆ . . . . . . ಉತ್ಕೃತಿ ಎಂದು ಇರ್ಪತ್ತಾರುಂ ಛಂದಂಗಳಕ್ಕುಂ. ಅವಱಿಂ ಪೊರಗೆ ಪುಟ್ಟುವ ಮಾಲವೃತ್ತ, ದಂಡಕ, ರಘಟೆ, ಮಾತ್ರಾರ್ಯಾ, ತ್ರಿಪದಿ, ಚತುಷ್ಪದಿ ಷಟ್ಪದಿ, ಅಷ್ಟಪದಿ, ಗಣನಿಯಮ ಕಂದ, ಶಂಖಾವೃತ್ತ, ತಾಳವೃತ್ತ ಆದಿ ಜಾತಿಗಳ್ ಉಂಟು. ಅವಾವುವೆಂದೊಡೆ—

ಕಂದ || ಮದನವತಿಯಕ್ಕರಂ ಚೌ ।
ಪದಿ ಗೀತಿಕೆಯೇಳೆ ತಿವದಿಯುತ್ಸಾಹಂ ಷ ।
ಟ್ಪದಿಯಕ್ಕರಿಕೆ ಕರಂ ಚೆ ।
ಲ್ವೊದವಿದ ಛಂದೋವತಂಸಮಬ್ಜದಳಾಕ್ಷೀ ||

ಎಂದಿದೆ; ಅಲ್ಲದೆ, ತೆಲುಗು ಭಾಷೆಯಲ್ಲಿ ವಿಶೇಷವಾಗಿ ಬಳಕೆಯಲ್ಲಿರುವ ಸೀಸ ಪದ್ಯದ ಲಕ್ಷಣವೂ ಇದೆ. ಈ ಮೇಲೆ ಹೇಳಿದ ನಿಯಮಗಳ ಸಂಖ್ಯೆಗಳನ್ನು ಎಣಿಸುವುದಾದರೆ, ಕೋಟಿಗಿಂತಲೂ ಮಿಗಿಲಾಗುವುದು. ಈ ಎಲ್ಲ ನಿಯಮಗಳನ್ನನುಸರಿಸಿ ಕನ್ನಡದಲ್ಲಿ ಬರೆದವರಿಲ್ಲ; ಮತ್ತು, ಈವರೆಗಿನ ಕವಿಗಳೆಲ್ಲರಿಂದಲಾದರೂ ಈ ನಿಯಮಗಳೆಲ್ಲವನ್ನೂ ಪೂರ್ಣಗೊಳಿಸಲಾಗಲಿಲ್ಲ. ಹೀಗಿರುವಲ್ಲಿ, "ಊರಲ್ಲಿರುವ ಉತ್ತಮ ಕನ್ಯೆಯನ್ನು ಬಿಟ್ಟು ಹೆಣ್ಣರಸಿ ಪಟ್ಟಣಕ್ಕೆ ಹೋಗಿ ಕುರುಡಿಯನ್ನು ತಂದರು" ಎಂಬಂತೆ, ನಮ್ಮ ಈಗಿನ ಛಂದೋ ನಿಯಮಗಳನ್ನು ತಿರಸ್ಕರಿಸಿ ಬೇರೆ ಯಾವುದನ್ನಾದರೂ ತಂದು ಬೆರಸುವುದು, ಇಲ್ಲದ ಸೃಷ್ಟಿ ಮಾಡುವುದು—ಈ ಕಾರ್ಯದಲ್ಲಿ ತೊಡಗಿರುವ ಜನರ ಜಾಣ್ಮೆಯನ್ನಾದರೂ ಅಪಾರವೆಂದೇ ಹೇಳಬೇಕಾಗುವುದು. ಈ ಹಲವು ರೀತಿಯಿಂದ ಸೃಷ್ಟಿ ಶ್ರಮವು ಹೆಚ್ಚಿ ಕನ್ನಡವೇ ಮಾರ್ಪಡುವ ಸ್ಥಿತಿಗೆ ಬಂದಿದೆ. ಈಗ ಈ ಸೃಷ್ಟಿ ಕರ್ತರೆಲ್ಲರೂ ಅನ್ಯ ಭಾಷೆಯಲ್ಲಿ ಪಾಂಡಿತ್ಯವಿದ್ದು, ಅದರ ಸಹಾಯದಿಂದ ಈ ದೀನ ಭಾಷೆಯನ್ನೂ, ಭಾಷಾಭಿಮಾನಿಗಳಾದ ಪಂಡಿತರನ್ನೂ ಬಲಾತ್ಕಾರದಿಂದ ಸೂರೆಗೊಳ್ಳುವ ಹಾಗಿರುವರು. ಇವರನ್ನು ಬಿಟ್ಟರೆ ಗತಿಯಿಲ್ಲದೆ, ಹಲವರು ಅವರ ಛಾಯಾನುವರ್ತಿಗಳಾಗಿರುವರು. ಈ ಸೃಷ್ಟಿ ಕರ್ತರು ತಮಗೆ ಯಾವ ಭಾಷೆಯಲ್ಲಿ ಪಾಂಡಿತ್ಯವಿದೆಯೋ ಅದರ ಶಾಸ್ತ್ರಗಳನ್ನು ಚೆನ್ನಾಗಿ ಗ್ರಹಿಸಿ, ನಮ್ಮ ಕರ್ಣಾಟಕ ಭಾಷೆಯಲ್ಲಿ ಗದ್ಯ ರೂಪವಾಗಿ ಬರೆಯಬಾರದೇಕೆ? ಬಹುಶಃ, ಅದು ಅವರಿಗೆ ಕಷ್ಟವೆಂದು ತೋರುವುದೋ ಏನೊ! ಹಿಂದಿನವರಂತೆ, ಪದ್ಯದಲ್ಲಿ ಬರೆಯುವುದೂ ಕಷ್ಟ, ಗದ್ಯಗಳಲ್ಲಿ ಶಾಸ್ತ್ರಗಳನ್ನು ಬರೆಯುವುದೂ ಕಷ್ಟ. ಆದರೆ ಕವಿಯಾಗಬೇಕೆಂಬ ಆಸೆ ಮಾತ್ರ ಇದೆ. ಪಾಪ! ಏನು ಮಾಡುವುದು? ಕವಿತ್ವವು ಕಲಿತುಬರುವುದಿಲ್ಲ;

ವಿದ್ವಾಂಸನಾದ ಮಾತ್ರಕ್ಕೇ ಕವಿಯಾಗಲಾರನು. ಸ್ವಾಭಾವಿಕವಾಗಿ ಕವಿತ್ವವೆಂಬುದು ಹುಟ್ಟು ಗುಣದಿಂದಲೇ ಬರುವುದು. ಹೆಚ್ಚಿನ ವಿದ್ವಾಂಸರಲ್ಲದಿದ್ದರೂ, ಸಾಧಾರಣ ಜ್ಞಾನವುಳ್ಳವರು ಕೆಲವರಲ್ಲಿ ಅಂದವಾದ ಕವಿತೆಯನ್ನು ಮಾಡುವ ಶಕ್ತಿಯು ಇದೆ. ವಿದ್ವಾಂಸನ ಕವಿತೆಯು ವಿಶೇಷ ಶ್ರಮದಿಂದ ಆಗುವುದು. ಸ್ವಭಾವ ಸಿದ್ಧವಾದ ಕವಿತ್ವಕ್ಕೂ ಕೃತ್ರಿಮ, ಎಂದರೆ, ಶ್ರಮ ಪೂರ್ವಕವಾದ ಕವಿತ್ವಕ್ಕೂ ಭೇದವಿದೆ. ಅವುಗಳ ಭೇದವನ್ನು ತಿಳಿಯುವುದು ಸುಲಭ. ಬೇರೆಯವರ ಪಾಲಿಗೆ ಬಂದ ಇದನ್ನು ಅಪಹಾರ ಮಾಡಿಯಾದರೂ ಹೆಸರು ಪಡೆಯಬೇಕೆಂಬ ಇಚ್ಛೆ; ಅದಕ್ಕಾಗಿ ತಮಗೆ ಬೇಕಾದಂತೆ, ಅಥವಾ ಮನಸ್ಸಿಗೆ ತೋರಿದಂತೆ ನಿಯಮಗಳನ್ನೇ ಬದಲಾಯಿಸಿ ತಮ್ಮ ಕೆಲಸಕ್ಕೆ ಅನುಕೂಲ ಮಾಡಿಕೊಳ್ಳಬೇಕು. ಒಂದೆರಡು ಪದ್ಯಗಳನ್ನು ಬರೆದು ಹೊಟ್ಟೆ ಹೊರೆಯುತ್ತಿದ್ದ, ನಿಸರ್ಗ ಸಿದ್ಧವಾಗಿ ಕವಿಯಾದ ಸಂಪ್ರದಾಯವನ್ನೂ ಬಿಡದ, ಆ ಬಡ ವಿದ್ವಾಂಸನ ಆಸ್ತಿಯು ಎಲ್ಲರಿಗೂ ಬೇಕಾಗಿ, ಇಲಿಗಳು ಹರಕು ಬಟ್ಟೆಗೆ ಕಡಿದಾಡುವಂತಾಯಿತು. ಪ್ರಪಂಚವೇ ಹೀಗೆ ಅತ್ಯಾಚರಣೆಗೆ ಅವಕಾಶವಿತ್ತರೆ, ಇನ್ನು ಈ ಬಡ ವಿದ್ವಾಂಸರೇಕೆ ಸುಮ್ಮನಿರಬೇಕು? ಪ್ರಪಂಚದಲ್ಲಿರುವ ಆಬಾಲ ವೃದ್ಧರಾದಿಯಾಗಿ ಸರ್ವರೂ ಕವಿಗಳಾಗಬೇಕು; ನಮ್ಮ ಕರ್ಣಾಟಕ ದೇಶವು ಭೋಜರಾಜನ ರಾಜ್ಯವಾಗಬೇಕು; ನಾವು ನಿಯಮಗಳನ್ನು ಮೂಲೆಗೊತ್ತಿ ಭಾವಗಳೆಂಬ ಗರಿಗಳನ್ನು ಕಟ್ಟಿಕೊಂಡು ಆಕಾಶಕ್ಕೆ ಭುರ್ರೆಂದು ಹಾರಲೇಬೇಕು. ನೋಡುವ! 'ಏಕದಂ' ಎಲ್ಲರೂ ಪ್ರಯತ್ನಿಸಿರಿ.

ಸಂಪ್ರದಾಯವನ್ನನುಸರಿಸಿ ನಮ್ಮ ಪೂರ್ವ ಕವಿಗಳು ಮತ್ತು ಈಗಿನವರು ಬರೆದಿರುವ ಕೆಲವು ಉದಾಹರಣೆಗಳನ್ನು ವಾಚಕರ ಅವಗಾಹನೆಗಾಗಿ ತೋರಿಸುವೆನು.—

ನುಡಿ ತಡವಪ್ಪುದೊಂದು ಮೊಗದೊಳ್ ಮುಱುಕಂ ದೊರೆಕೊಳ್ವುದೊಂದು ನಾ ।
ಣ್ಗಿಡೆಗುಡದಿರ್ಪುದೊಂದು ನುಡಿಗಳ್ ಮೊಱೆಯಂ ಮಱೆಯಿಪ್ಪುದೊಂದು ಕ ॥
ಳ್ಗುಡಿದವರಂದಮಿಂತು ಸಿರಿ ಸಾರ್ತರೆ ಸಾರ್ವುದದರ್ಕೆ ಸಂದೆಯಂ ।
ಬಡದೆ ಜಲಕ್ಕನೀಗಳಱಿದೆಂ ಸಿರಿ ಕಳ್ವೊಡವುಟ್ಟಿತೆಂಬುದಂ ॥ [ಆದಿ ಪಂಪ]

ಇದು ಲಾಕ್ಷಾ ಗೇಹ ದಾಹಕ್ಕಿದು ವಿಷಮ ವಿಷಾನ್ನಕ್ಕಿದಾ ನಾಡ ಜೂದಿಂ ।
ಗಿದು ಪಾಂಚಾಲೀ ಪ್ರಪಂಚಕ್ಕಿದು ಕೃತಕ ಸಭಾಲೋಕನ ಭ್ರಾಂತಿಗೆಂದೋ ॥
ವದೆ ಪೊಯ್ದಂ ಕಾಲ್ಗಳಂ ತೋಳ್ಗಳನಗಲ್ದುರಮಂ ಕೆನ್ನೆಯಂ ನೆತ್ತಿಯಂ ಕೋ ।
ಪದಿನುಯ್ದಂ ದುರ್ನಯಕ್ಕಯ್ದೊಡೆಯನುರು ಗದಾ ದಂಡದಿಂ ಭೀಮಸೇನಂ ॥ [ಕವಿ ರನ್ನ]

ಕಳಹಂಸಾಲಸ ಯಾನೆಯಂ ಮೃಗ ಮದಾಮೋದಾಸ್ಯ ನಿಶ್ವಾಸೆಯಂ ।
ತಳಿರೇ ತಾವರೆಯೇ ಮದಾಳಿ ಕುಳಮೇ ಕರ್ನೆಯ್ದಿಲೇ ಮತ್ತ ಕೋ ॥
ಕಿಳಮೇ ಕಂಡಿರೆ ಪಲ್ಲವಾಧರೆಯನಂಭೋಜಾಸ್ಯೆಯಂ ಭೃಂಗ ಕುಂ ।
ತಳೆಯಂ ಕೈರವ ನೇತ್ರೆಯಂ ಪಿಕ ರವ ಪ್ರಖ್ಯಾತೆಯಂ ಸೀತೆಯಂ ॥ [ಅಭಿನವ ಪಂಪ]

ಪಂಪ-ಕಂತಿಯರ ಸಮಸ್ಯೆ—

ಪಂಪ.—ದನವಂ ಕಡಿ ಕಡಿದು ಬಸದಿಗೆಳೆಯುತ್ತಿರ್ದರ್.

ಕಂತಿ.—

ಕಂ|| ವನದೊಳಗೆ ಪುಟ್ಟಿ ಬೆಳೆಯುತೆ ।
ತನಿಗಂಪಂ ಪತ್ತು ದೆಸೆಗೆ ಬೀಱುತ್ತಿರ್ಪಾ ।
ಘನತರ ಸುರುಚಿರ ಸಚ್ಚಂ ।
ದನಮುಂ ಕಡಿಕಡಿದು ಬಸದಿಗೆಳೆಯುತ್ತಿರ್ದರ್ ॥

ಮೂಱು ದಿವಸಕ್ಕೆ ಖಂಡುಗ ।
ದಾಱುಂ ಕೊಳಗಂಗಳೆರಡು ಬಳ್ಳಂ ಮಾನಂ ।
ನೂಱಾಗಲ್ ಬರಿಸದ ಮೇ ।
ಲಾಱುಂ ದಿವಸಕ್ಕೆ ಭತ್ತ ತಾನೆನಿತಕ್ಕುಂ ॥ [ರಾಜಾದಿತ್ಯ]

ವೃ|| ಕರವೆಸೆದತ್ತು ಕೌಮುದಿಯ ಬಿತ್ತು ಚಕೋರಿಯ ತುತ್ತು ನೀರಜೋ ।
ತ್ಕರದ ವಿಪತ್ತು ತಾರೆಗಳ ತೊತ್ತು ಸುಧಾಂಬುಧಿಯೊತ್ತು ಮತ್ತಮಂ ।
ಬರದ ಪುಳಿಂದಿ ತಾಳ್ದಿಸೆವ ಮೂಗಿನ ಮುತ್ತು ಮಗುಳ್ದು ನೋಡಲ ।
ಚ್ಚರಿಯೆನಿಸಿತ್ತು ಮೂಡ ದೆಸೆಯಿಂದೊಗೆತರ್ಪ ಹಿಮಾಂಶು ಮಂಡಲಂ ॥ [ಹರಿಹರ]

ವಾ|| ಷ|| ಪೊಸಮಾವಶೋಕೆಯೊಳ್ ಮುರಿದುಂಬಿ ಕೋಗಿಲೆಯೊ ।
ಳೆಸೆವ ಸಂಪಗೆ ಪೊಚ್ಚ ಪೊಂದಾವರೆಯೊಳೊಳ್ಪ ।
ಡಸಿದ ಮಲ್ಲಿಗೆಯಲರ್ಬೆಳತ ಬೆಳ್ದಿಂಗಳೊಳ್ಗಿಳಿವಿಂಡು ಬನ ಸಿರಿಯೊಳು ॥
ಮಸೆದುವೊಂದೊಂದರೊಳ್ ಮಧು ಮಾಸಕಂಗಜನ ।
ದೆಸೆಯಂತೆ ಖತಿಯಂತೆ ಧನದಂತೆ ಜಸದಂತೆ ।
ಪಸುರ್ವೆಳಸಿನಂತೆ ಕೆಂಪಸಿತಂ ಪಳದಿ ಪಳುಕು ಪಚ್ಚೆಗಳ ಬಣ್ಣದಿಂದೆ ॥ [ಲಕ್ಷ್ಮೀಶ]

ಕಂ|| ಇವನೀವುದಣ್ಣ ! ನೀಂ ಮೆ ।
ಟ್ಟುವ ಪಾದುಗೆಗಳನೊಱಲ್ದು ಮಣಿವೆನಗೀಗಳ್ ॥
ಅವನತನಾಗಿರ್ದಪೆನಾ ।
ನಿವರ್ಕ್ಕೆ ನೀಂ ಕಾರ್ಯಭರದೆ ತೊಡಗುವ ವರೆಗಂ ॥ [ಪ್ರತಿಮಾನಾಟಕ : ಸೀತಾರಾಮಶಾಸ್ತ್ರಿಗಳು]

ಈಶನೇ ! ನೀ ಅಲ್ಲದಿಲ್ಲೈ, ಇಂಗುಂ ಅಂಗುಂ ಎಣ್ಬದುಂ ।
ಪೇಶಿರೇನ್ ಓರ್ ಬೇದಂ ಇನ್ನೈ ಪೇದೈಯೇನ್ ಎನೆಂಬಿರಾನ್ ॥
ನೀಶನೇನ್ನೈ ಆಂಡ್ಕೊಂಡ ನಿನ್ಮಲಾ ! ಓರ್ ನಿನ್ ಅಲಾಲ್ ।
ತೇಶನೇ ! ಓರ್ ದೇವರ್ ಉಣ್ಮೈ ಚಿಂದಿಯಾದ್ ಚಿಂದಯೇ ॥ [ತಮಿಳು]

ಕೋಲಕಂಜಾಳಿಲ್ ವನಾಯಿಟ್ಟು ।
ಕೋಲಂಕೆಟ್ಟಿ ಇಳಿಲೆಳಿಯುನ್ನಿದು ಶಿಲರ್ ॥ [ಮಲೆಯಾಳ]

ಶುಭ ಚರಿತ್ರುನಿ ಶುಕ್ಲ ವರ್ಣುನಿ ಶುಭ್ರ ವಸ್ತ್ರ ವಿರಾಜಿತುನ್ ।
ವಿಭವಮೊಪ್ಪಗ ವಿಘ್ನ ನಾಯಕ ವೇತ್ರ ಹಸ್ತು ಜತುರ್ಭುಜನ್ ।

ಸುಭಗ ರೂಪು ನುತಿಂತು ವಿಷ್ಣುನಿ ಜೂಡ ವಿಘ್ನಮುಲೇಗಗಾ।
ನಭಯುಮಿಚ್ಚುಚು ಗಾವುಗಾತ ದಯಾರ್ದ್ರ ಮಾನಸುಡೆಲ್ಲೆಡನ್ ॥ [ತೆಲುಗು]

ಮುನಿ ಕೇಣ್ಣೆ ಪಣ್‌ಪೆಯೆಂಕುಳಮ್ಮೆ ಸಿದ್ಯಮ್ಮೆರಾ ।
ಬನಪಂಚವಟಿಟಾನಿದಾನೆ ಮಳ್ತಿರಿಯೆ ಸೂ ।
ರ್ಪನಕಿ ಬುಕ್ಕೊಂಜಿ ಪೋಯಳಯಿನ್ ಮೂಂತಯಿಾರೆಂಕುಳಿಗ್‌ಪಣೊಡೆಂದ್ ತ್ ॥
ಮುನಿಕಾರ್ ಗಡ್ಡಬೂರ್‌ದ್ ಕೇಂಡಿ ಕುಶಲವೆರ್ ।
ಪಣ್‌ಪಿಂಚಿನಾಕುಳೆನ್‌ಲೆರ್‌ತ್ತ ಕುಳ್ಯಾರ್ ವಾಲ್ಮೀಕಿ ।
ಮುನಿ ರಾಮದೇವೆರ್‌ನ್ ನೆನೆತ್ ಸಂತೋಷಟಾರಂಭಿತೆರ್ ಕತೆ ಪಣಿಯೆರೆ॥ [ತುಳು]

ಪ್ರತಿಯೊಬ್ಬನೂ ಕವಿಯಾದಾಗ ಮಾಡುವ ಪದ್ಯಗಳು.—

ಕೆರೆಯ ಏರಿಗೆ ಹೋಗಿದ್ದೆ ।
ಏರಿಯ ಕೆಳಗೆ ಗದ್ದೆ ।
ಗದ್ದೆಯ ನೋಡುತ ಬಿದ್ದೆ ।
ಹುಸ್ಸಪ್ಪಾ ಎನುತ ಮೆಲ್ಲಗೆ ಎದ್ದೆ, ಮೈ ಎಲ್ಲ ಒದ್ದೆ ।




ನಾನೆಂದರೆ ನಾನೇ
ನೀನೆಂದರೆ ನೀನೇ
ನಾನು ನೀನು ಎಂಬುವುದನ್ನು ಬಿಟ್ಟು
ಜ್ಞಾನಿಯಾಗೈ ಮಾನವಾ ।

ಮಂಗ್ಳೂರಿಂದ ಉಳ್ಳಾಲ ।
ಉಳ್ಳಾಲದಿಂದ ಮುಂದೆ ಮಂಜೇಶ್ವರವು ॥
ಮಂಜೇಶ್ವರದಿಂದಾಚೆಗೆ ಕುರ್ಚಿಪೊಳ್ಳಾ ।
ಅದರಿಂದಾಮೇಲೆ ಕುಂಬ್ಳಾ ॥

ಹಳ್ಳಿ ಹೆಂಗಸಿನ ಕವಿತೆ.—

ತಾರಮ್ಮಯ್ಯಾ, ರಘುಕುಲ ರಾಮಚಂದಿರನೇ ।
ಚಂದಿರ ಮಂದಿರನೆ ಯಿಂದೀರ ಮಂದಿರನೇ ॥

ಹುಡುಗನ ಕವಿತೆ.—

ಚಂದ್ರಾ ದೇವ್ರು ಬನ್ನಿ ಬನ್ನಿ ।
ಶಟ್ಟೆ ಹಾಲ ಕುಡಿಯುತ ಬನ್ನಿ ।
ಕಬ್ಬಿನ ಕೋಲ ಊರುತ ಬನ್ನಿ ।
ಬನ್ನಿ ಬನ್ನಿ ನಮ್ಮಪ್ಪನ ಮೇಲೆ ಡುಂ ಬೀಳ್ರಿ ॥

ನನಗಿಂದು ಶಾಲೆ ಇಲ್ಲ ಪಾಠವ ನಾನಿಂದೋದಿಲ್ಲ ।
ಶಾಲೆಯಲಿ ಮಾಸ್ತರು ಬಯ್ಯುವರು ।
ಅದಕಿಂದೂ ನಾ ಹೋಗೋದಿಲ್ಲ ॥

ಹಳ್ಳಿ ಗೌಡನ ಕವಿತೆ.—

ಮುಂದೆ ಬರೋದು ಕಂಬ್ಳಾವು ।
ಅದ್ಲಿ ನಾ ಕೋಣ ಗೆಲ್ಬೇಕು ।
ನೋಡ್ವಾರೆಲ್ಲ ನಗಬೇಕು ।
ಅಲ್ಲಿ ನಾ ಗೊನೆ ಪಡಿಬೇಕು ॥

ತನಗೆ ಗೊತ್ತಿರುವ ಭಾಷೆಗಳಲ್ಲಿ ಒಬ್ಬನ ಕವಿತಾ ಚಾತುರ್ಯ.—

ನೀಕೇಮಿ ತೆಲುಸು ।
ವಂಕಾಯಿ ಪುಲುಸು ।
ಟೆಂಕಾಸಿಲೋನುನ್ನ ವೆಂಕಾಟದಾಸು ॥ [ತೆಲುಗು]

ಉನಕೆನ್ನಾ ತೆರಿಯೂ ।
ಎನಕೆಲ್ಲಾ ತೆರಿಯೂ ।
ಉಲಗತ್ತಿಲ್ ಮಾಯಾವಿ ಎಂಡ್ರ್ ।
ಯನಕ್ ತಾನ್ ಪೇರಿರ್ಕ್॥ [ತಮಿಳು]

(ರಾಗ, ಅಸಾವೇರಿ, ಆದಿ)

ದಿಸ್ ಈಸ್ ಮಯ್ ಬಾಯಾಗ್ರಫೀ ।
ಓ ರಾಘವಾ ! ದಿಸ್ ಈಸ್ ಮಯ್ ಬಾಯಾಗ್ರಫೀ ॥
ಆಯೀಮ್ ದಿ ಸನ್ನ್ ಓಫ್ ಫೇಮಸ್ ವಾಯು ।
ಆಂಜನೇಯ ಈಸ್ ಮಯ್ ನೇಮ್ ॥

ಒಬ್ಬ ನೊನ್ನೆ ನೊನ್ನೆಯ ಕವಿಯು ಸಂಸ್ಕೃತ ಪದ್ಯವನ್ನು ಸಂಸ್ಕೃತದಲ್ಲಿರುವ ರಸಾವಿರ್ಭಾವದೊಡನೆ ಪ್ರಾಸವನ್ನು ಬಿಡದೆ ಎಷ್ಟು ಚೆಲುವಿಂದ ಕನ್ನಡಿಸಿರುವನು !—

(ಶಾರ್ದೂಲ ವಿಕ್ರೀಡಿತ)

ಏನಾಹಂ ಕೃತಮಂಗಲ ಪ್ರತಿಸರೋ ಭದ್ರಾಸನಾರೋಪಿತೋಽ ।
ಪ್ಯಂಬಾಯಾಃ ಪ್ರಿಯಮಿಚ್ಛತಾ ನೃಪತಿನಾ ಭಿನ್ನಾಭಿಷೇಕಃ ಕೃತಃ ॥
ವ್ಯಕ್ತಂ ದೈವ ಗತಿಂ ಗತೇನ ಗುರುಣಾ ಪ್ರತ್ಯಕ್ಷತಃ ಸಾಂಪ್ರತಂ ।
ತೇನೈವಾದ್ಯ ಪುನಃ ಪ್ರಹೃಷ್ಟ ಮನಸಾ ಪ್ರಾಪ್ತಾಭಿಷೇಕಃ ಕೃತಃ ॥

( ಮತ್ತೇಭ ವಿಕ್ರೀಡಿತ )

ಮುಡಿನೂಲ್ಗಟ್ಟಿಸಿ ಮಂಗಳಾರ್ಥಮೊಲವಿಂ ಭದ್ರಾಸನಂ ಮೆಟ್ಟಿಪಾ ।
ಯೆಡೆ ತಾಯ್ನಲ್ಮೆಗೆನತ್ತು ಮೇಲ್ಮೆಯೆಸಗಕ್ಕಾಗಳ್ ತೊಡರ್ವಂದನೋ ॥
ಒಡಲಂ ತೆತ್ತನೊ ದೈವಕಾ ದಶರಥಂ ತಾನಿಂದು ಮೆಯ್ದೋರ್ದು ಮು ।
ಮ್ಮಡಿ ಸುಮ್ಮಾನದೆ ಮಾಡಿದಂ ಮಗುಳ್ದು ಪಟ್ಟಂಗಟ್ಟಿಪುದ್ಯೋಗಮಂ ॥

(ಶಾರ್ದೂಲ ವಿಕ್ರೀಡಿತ)

ಬ್ರಹ್ಮಾತೇ ಹೃದಯಂ ಜಗತ್ತ್ರಯಪತೇ ! ರುದ್ರಶ್ಚ ಕೋಪಸ್ತವ ।
ನೇತ್ರೇ ಚಂದ್ರ ದಿವಾಕರೌ ಸುರಪತೇ ! ಜಿಹ್ವಾಚ ತೇ ಭಾರತೀ ॥
ಸಬ್ರಹ್ಮೇಂದ್ರ ಮರುದ್ಗಣಂ ತ್ರಿಭುವನಂ ಸೃಷ್ಟಂ ತ್ವಯೈವ ಪ್ರಭೋ ।
ಸೀತೇಯಂ ಜಲಸಂಭವಾಲಯ ರತಾ ವಿಷ್ಣುರ್ಭವಾನ್ ಗೃಹ್ಯತಾಮ್ ॥

(ಮತ್ತೇಭ ವಿಕ್ರೀಡಿತ)

ಬಿದಿ ತಾಂ ನಿನ್ನೆರ್ದೆ ಮೇದಿನೀ ತ್ರಯ ವಿಭೂ ! ರುದ್ರಂ ನಿನತ್ಯಾಗ್ರಹಂ ।
ಬಿದು ನೇಸರ್ ನಿನತಚ್ಚಿಗಳ್ ಸುರಪತೀ ! ತ್ವಜ್ಜಿಹ್ವೆ ವಾಗ್ದೇವಿ ನೀಂ ।
ತ್ರಿದಶ ಜ್ಯೇಷ್ಠ ಸುರೇಂದ್ರ ನಿರ್ಜರರುಮಾ ಮೂಲೋಕಮುಂ ಗೆಯ್ದುವಂ ।
ಸದಯಾ ! ಸೀತೆಯಿವಳ್ ಸರೋಜಗೃಹೆ ನೀಂ ಶ್ರೀಶಂ ಗಡಾ ನಿಕ್ಕುವಂ ॥

[ಅಭಿಷೇಕ ನಾಟಕ]

ಕನ್ನಡದಲ್ಲಿರುವ ಕೃಷ್ಣಸಂಧಾನದ ಪದ್ಯವನ್ನು ತುಳುವಿನಲ್ಲಿ ಸಂಪ್ರದಾಯವನ್ನು ಬಿಡದೆ ಕವಿಯು ಎಷ್ಟು ಮನೋಹರವಾಗಿ ರಚಿಸಿರುವನೆಂದು ಈ ಕೆಳಗಿನ ಪದ್ಯದಿಂದ ತಿಳಿಯುತ್ತದೆ:—

ವಾ॥ ಷ॥ ಬಗೆ ಬಗೆಯ ವೃಕ್ಷ ಸಂತತಿಗಳಿಂ ಲತೆಗಳಿಂ ।
ಚಿಗುರೆಲೆಯ ಚೂತ ದಾಡಿಂಬದಿಂ ರಂಭದಿಂ ।
ಮಘಮಘಿಪ ವರ ಸುಮಾವಳಿಗಳಿಂ ಫಲಗಳಿಂ ಸವಿವ ಶುಕ ಪಿಕಗಳಿಂದ ॥
ಮಿಗಿಲೆನಿಸಿ ಪಾಡುತಿಹ ಸ್ವರಗಳಿಂ ಹರಿಗಳಿಂ ।
ಸುಗುಣತರಮಾದ ಸುಸ್ಥಲಗಳಿಂ ಜಲಗಳಿಂ ।
ಮುಗುಳಬ್ಜಕೆರಗುವ ಮಿಳಿಂದಮುಂ ಚಂದಮುಂ ಕಂಡರತ್ಯಾನಂದದಿಂ ॥

(ತುಳು)

ಬಗೆಬಗೆತ ಬೂರು ಮರದೈಕುಳೆಡ್ ಕೈಕುಳೆಡ್ ।
ತೆಗ್‌ಳ್‌ದಿರೆ ಕುಕ್ಕು ಪೆಜ ತಾರೆಲೆಡ್ ಬಾರೆಲೆಡ್ ।
ಮುಗುರು ಪೂ ಕಮ್ಮೆನದ ಕಾಯಿ ಪೆಲಕಾಯಿ ಪಲತಿನ್ಪಿ ಗಿಳಿ ಕೋಗಿಲೆಗುಳೂ ॥
ಲಿಗಿಲೆಗಿತ್ ಪಾಡುಸರ ಕೇಕೆಲೆಡ್ ಕೋಕೆಲೆಡ್ ।
ಬಿಗುಬಿಗುತ ಬಾಗೆಲೆನ ತಾರುಳೆಡ್ ನೀರುಳೆಡ್ ।
ಮುಗುರುತಮರೆಗ್ ಬೂರು ತುಂಬಿಲೆನದಂಬುಲೆನಪೊರ್ಲುನಾಕುಳು ತೂಯೆರ್ ॥

(ಶ್ರೀಯುತ ಬಡಕಬೈಲು ಪರಮೇಶ್ವರಯ್ಯ)

'ಹಳಗನ್ನಡ ಸಾಯುಲೇ ಬೇಕು, ಹೊಸಗನ್ನಡ ಬದುಕಲೇ ಬೇಕು' ಎಂದು ಕೆಲವರ ಮತ. ಹಾಗಿದ್ದರೆ, ಕವಿತ್ವವನ್ನು ಮಾಡಬೇಕೆಂದು ಒಬ್ಬಾನೊಬ್ಬ ಆಧುನಿಕನಿಗೆ ಅಭಿಲಾಷೆಯುಂಟಾದರೆ ತನಗೆ ತಿಳಿದಿರುವ ಎಲ್ಲ ಭಾಷೆಗಳಲ್ಲಿಯೂ ಒಂದೇ ವಿಧವಾದ ರಸಾವಿರ್ಭಾವಗಳನ್ನೂ ಪದ್ಯ ರಚನೆಯನ್ನೂ ಈ ರೀತಿಯಾಗಿ ಮಾಡಬಹುದು ; ಆದರೆ,

ಸಂಪ್ರದಾಯ ಇತ್ಯಾದಿಗಳನ್ನು ಮಾತ್ರ ಬಿಟ್ಟುಬಿಡಬೇಕಾಗುವುದು: ಅದು ಹೇಗೆಂದರೆ—

ಹೋಗಬೇಕ್ ಹೋಗಬೇಕ್ ಮನೆಗೀಗ ।
ಮಾಡಬೇಕ್ ಮಾಡಬೇಕ್ ಊಟವಾಗ ॥
ಮಾಡಬೇಕ್ ಮಾಡಬೇಕ್ ಕೂಟವನ್ನು ।
ಜೈಸಬೇಕ್ ಜೈಸಬೇಕ್ ಆಟವನ್ನು ॥ (ಕನ್ನಡ)

ಪೋವೊಡು ಪೋವೊಡು ಯಿಲ್ಲಾಡೆ ।
ಕುಳ್ಳೊಡು ಕುಳ್ಳೊಡು ಉಣ್ಕೇರೆ ॥
ಮಳ್ಪೊಡು ಮಳ್ಪೊಡು ಕೂತೋನು ।
ಆಕೊಡು ಆಕೊಡು ಆಟೋನು ॥ (ತುಳು)

ಗಚ್ಛೇದ್ ಗಚ್ಛೇದ್ ಗೃಹಮದ್ಯ ।
ಭಕ್ಷ್ಯಾದ್ ಭಕ್ಷ್ಯಾದ್ ಭೋಜ್ಯಂಚ ॥
ಕುರ್ಯಾತ್ ಕುರ್ಯಾತ್ ಕೂಟಂಚ ।
ಜೀಯಾಜ್ಜೀಯಾತ್ ಕ್ರೀಡಾಂಚ ॥ (ಸಂಸ್ಕೃತ)

ಪೋಹಲಾಂ ಪೋಹಲಾಂ ವೀಟಿಕಿಪ್ಪೊ ।
ಪಣ್ಣಲಾಂ ಪಣ್ಣಲಾಂ ಶಾಪಟಿಪ್ಪೊ ॥
ಶೆಯ್ಯಲಾಂ ಶೆಯ್ಯಲಾಂ ಕೂಟಮುಪ್ಪೊ ।
ಜೈಕಲಾಂ ಜೈಕಲಾಂ ಆಟಮುಪ್ಪೊ ॥ (ತಮಿಳು)

ವೆಳ್ಳವಚ್ಚು ವೆಳ್ಳವಚ್ಚು ಯಿಂಟಿಕಿಪ್ಪುಡು ।
ಚೆಯ್ಯವಚ್ಚು ಚೆಯ್ಯವಚ್ಚು ಭೋಜನಪ್ಪುಡು ॥
ಚೆಯ್ಯವಚ್ಚು ಚೆಯ್ಯವಚ್ಚು ಕೂಟಮುಪ್ಪುಡು ।
ಜೆಯ್ಯವಚ್ಚು ಜೆಯ್ಯವಚ್ಚು ಆಟಮುಪ್ಪುಡು ॥ (ತೆಲುಗು)

Go home go home we should now
Should have should have meals then we
Must do must do meeting then
Get we get we cheacting (?) then. (ಇಂಗ್ಲಿಷು)

ಏಕೆ ಹೀಗೆಲ್ಲ ಮಾಡಕೂಡದು? ಹೀಗೆ ಮಾಡಲಿಕ್ಕೆ ಅಭ್ಯಾಸವನ್ನು ಮಾಡುವುದು ಸುಲಭ. ಎಲ್ಲವೂ ಹೊಸಗನ್ನಡ, ಹೊಸ ತುಳು, ಹೊಸ ಸಂಸ್ಕೃತ, ಹೊಸ ತಮಿಳು, ಹೊಸ ತೆಲುಗು, ಹೊಸ ಇಂಗ್ಲೀಷು; ಎಲ್ಲವೂ ಹೊಸ ಕ್ರಮ. ಸಂಪ್ರದಾಯವನ್ನು ಅನುಸರಿಸುವುದಾದರೆ, ಅಂತಹ ಪದ್ಯಗಳಿಗೆ ಅಸ್ಪೃಶ್ಯತೆಯು ಬಂದೀತು. ಕೆಲವರು ಮಾತ್ರ ಮಾಡಲಾಪರು, ಆಧುನಿಕ ರೀತಿಯನ್ನನುಸರಿಸಿದರೆ, ಪದ್ಯ ರಚನೆಯಲ್ಲಿದ್ದ ಅಸ್ಪೃಶ್ಯತೆಯು ನಿವಾರಣೆ ಹೊಂದಿ ಅಸ್ಪೃಶ್ಯತೆಯೇ ಸಾಯುವುದು, ಹೊಸಗನ್ನಡವು ಬದುಕುವುದು.

ಪಾಶ್ಚಾತ್ಯ ರೀತಿಯಿಂದ ದೊಡ್ಡ ದೊಡ್ಡ ಉಪನ್ಯಾಸಗಳನ್ನು ಮಾಡುವಾಗ, ಕೆಲಸಮಯದ ವರೆಗೆ ಉಚ್ಚ ಸ್ವರದಿಂದ ಭಾಷಣ ಮಾಡುವಾಗ, ಶ್ವಾಸಕೋಶವು

(Lungs) ಕಟ್ಟಿಕೊಳ್ಳುವುದು. ಕೊನೆಗೆ, ಆ ಭಾಷಣವನ್ನು ಬಹು ಮೆಲ್ಲನೆ ಮಾಡಬೇಕಾಗಿಬೀಳುತ್ತದೆ. ಭಾಷಣದ ಪ್ರತಿಭಾ ಯುಕ್ತವಾದ ಸ್ಫೂರ್ತಿಯನ್ನು ಒಂದೇ ರೀತಿಯಾಗಿ ಜನರ ಮುಂದಿಡಬೇಕಾದರೆ, ಶ್ವಾಸಕೋಶಗಳ ಏರಿಳಿತ ರೂಪವಾದ ಸ್ವರಗಳನ್ನು (Pitch accent and stress accent) ಒಂದೇ ರೀತಿಯಾಗಿ ಇಟ್ಟು ಕೊಂಡು ಬಂದರೆ, ಬಹು ದೀರ್ಘ ಕಾಲ ಭಾಷಣವನ್ನು ಮಾಡಬಹುದು. ಇದನ್ನು ಇತ್ತೀಚೆಗೆ ಪಾಶ್ಚಾತ್ಯರು ಕಲಿತಿರುವರು. ಇಂತಹ ದೀರ್ಘ ಭಾಷಣಗಳು ನಮ್ಮ ಪೂರ್ವದ ವೇದಗಳಲ್ಲಿಯೂ ಕಂಡುಬರುವುವು. ಒಂದೇ ರೀತಿಯಾಗಿ ಎಷ್ಟೋ ಗಂಟೆಗಳ ವರೆಗೆ ಶ್ವಾಸಕೋಶಕ್ಕೆ ದೌರ್ಬಲ್ಯವನ್ನುಂಟುಮಾಡದೆ, ಪೂರ್ವದ ಋಷಿಗಳು ಋಕ್ಕುಗಳನ್ನು ಹೇಳುತ್ತಿದ್ದರು. ಅದು ಹೇಗೆ? ಆ ವೇದದಲ್ಲಿಯೂ, ನಾನಾ ಛಂದಸ್ಸು, ನಾನಾ ವೃತ್ತಗಳು ಮತ್ತು ಉದಾತ್ತಾನುದಾತ್ತ ಸ್ವರಿತಗಳೂ ಇದ್ದುದ ರಿಂದ ಶ್ವಾಸಕೋಶಗಳಿಗೆ (Lungs) ಸರಿಯಾದ ವ್ಯಾಯಾಮವಾಗುತ್ತ, ಹೆಚ್ಚು ಶ್ರಮವಾಗದುದರಿಂದ, ದೀರ್ಘ ಸಮಯದ ವರೆಗೆ ಋಕ್ಕುಗಳನ್ನು ಹೇಳಲು ಶಕ್ತರಾಗು ತ್ತಿದ್ದರು. ಆಫ್ರಿಕಾದಲ್ಲಿ ಸ್ವಯಂಸೇವಕ ದಳದ ಪ್ರಯಾಣವನ್ನು (Scout march) ಒಂದು ವಿಧವಾಗಿ ಮಾಡುತ್ತಿದ್ದಾರಂತೆ: ತಂತಿ ಮತ್ತು ಪ್ರಯಾಣ ಸೌಕರ್ಯ ಗಳಿಲ್ಲದಿರುವಲ್ಲಿ ಆ ದಳದವರು ಇಪ್ಪತ್ತು ಹೆಜ್ಜೆಗಳನ್ನು ಒಂದೇ ರೀತಿ ಒಂದೆರಡೆಂದು ಸಂಖ್ಯೆಗಳ ವಿಚಾರಣಾ ಪೂರ್ವಕ ನಡೆದು, ಆಮೇಲೆ ಅಷ್ಟೇ ಸಂಖ್ಯೆಯನ್ನು ಉಚ್ಚರಿಸುವ ಸಮಯದಲ್ಲಿ ಕ್ರಮವಾಗಿ ಓಡಿ, ಆಮೇಲೆ ತಿರುಗಿ ಇಪ್ಪತ್ತು ಹೆಜ್ಜೆ ನಡೆದು, ಉದ್ದಿಷ್ಟ ವಾದ ಸ್ಥಳಕ್ಕೆ ನಿಯಮಿತ ಕಾಲದಲ್ಲಿ, ಓಡಿಹೋಗಿ ತಲುಪುವ ಮುಂಚೆಯೇ, ಸೇರುತ್ತಿ ದ್ದಾರಂತೆ. ಕಾರಣ, ಅವಯವಗಳಿಗೆ ಏಕ ರೀತಿಯಾದ ಕೆಲಸವನ್ನು ಕೊಡುವುದರಿಂದ ಅವರು ಹಾಗೆ ಮಾಡಲು ಶಕ್ತರಾಗುತ್ತಾರೆ; ಶ್ರಮವೂ ಕಡಿಮೆಯಾಗುತ್ತದೆ. ಇದೇ ರೀತಿಯಂತೆ ಪದ್ಯಗಳಲ್ಲಿ ಪ್ರಾಸ ಮತ್ತು ವೃತ್ತಗಳ ನಿಯಮವಿರಿಸಿದರೆ ಓದು ವಾಗಲೂ ಶಾರೀರಿಕ ದೃಷ್ಟಿಯಿಂದ ಶ್ವಾಸಕೋಶಗಳಿಗೆ ವಿಶೇಷ ಶ್ರಮ ಕೊಡದೆ ಏಕ ರೀತಿಯಾಗಿ ಹೇಳಲು ಸುಲಭ. ಈ ರೀತಿಯನ್ನು ನಾವು ಗಮನಿಸಿದರೂ, ಪ್ರಾಸಗಳೂ ವೃತ್ತಗಳೂ ನಿಯಮಾನುಸಾರವಾಗಿ ಬೇಕೇ ಬೇಕು. ಈ ಮೇಲೆ ಹೇಳಿದ ವಿಷಯಗಳು ಶಾಸ್ತ್ರೀಯ ಶೋಧದಿಂದ ಕಂಡರೂ (Scientists' view) ಶರೀರಕ್ಕೂ ಉಚ್ಚರಿಸುವ ಸೌಲಭ್ಯಕ್ಕೂ ಹಿತವಾಗುವುದು.

ಮಹನೀಯರೇ, ಪ್ರತಿಯೊಬ್ಬನೂ ಕವಿಯಾಗಬೇಕೆಂಬ ಆಸೆಯುಳ್ಳವನಾದರೆ ಹೀಗೆ ಮಾಡಬೇಕಾಗಿ ಬರಬಹುದು. ಸಂಪ್ರದಾಯವಾಗಿ ಬಂದಿರುವ ಮಾರ್ಗವನ್ನು ಬಿಡುವುದು ಉಚಿತವಲ್ಲವೆಂದು ನಾವು ಹೇಳಿದರೂ ಜಾಗ್ರತ ಪ್ರಪಂಚದ ಧ್ಯೇಯವು ಹಿಂದೆ ಹೇಳಿರುವಂತೆಯೇ ಮುಂದುವರಿಯುತ್ತಿರುವುದು. ಹೀಗೆಂದರೆ, "ವಾಕಿಂಗ್ ಡಿಕ್ಷನರಿ"ಗಳಂತಿರುವ ಪಂಡಿತರಿಗೆ ಹೊರಗಣ ಪ್ರಪಂಚವೇನು ಗೊತ್ತಿದೆ ಎಂದು ಕೆಲವರು ಹೇಳಬಹುದು; ಖರೆ. "ಡಿಕ್ಷನರಿ ರೆಫರರ್ಸರ" ಅಭಿಪ್ರಾಯಕ್ಕೂ ಇವರ ಅಭಿಪ್ರಾಯಕ್ಕೂ ಭೇದವಿರಬಹುದು. ಒಂದಾನೊಂದು ವೇಳೆ 'ರೆಫರ್' ಮಾಡಲಿಕ್ಕೂ

ಬೇಕಾಗುತ್ತದೆಯಷ್ಟೆ! ಅಂತಹ ಕಾಲದಲ್ಲಿ ರಗಳೆಗೆ ಬೀಳುವುದು. ಇತರ ಭಾಷೆಗಳಲ್ಲಿರುವ ರಸ, ಭಾವ ಇತ್ಯಾದಿಗಳನ್ನು ಸ್ವೀಕರಿಸಿ ಸಾಂಪ್ರದಾಯಿಕವಾಗಿ ಬರೆಯಬಾರದೇಕೆ? ಶ್ರೀಮಾನ್ ಕವಿಚರಿತೆಕಾರರಾದ ನರಸಿಂಹಾಚಾರ್ಯರು ಬರೆಯಲಿಲ್ಲವೆ? ಶ್ರೀಮಾನ್ ತಾತಾಚಾರ್ಯರವರು ಬರೆಯಲಿಲ್ಲವೆ? ಇವರಿಗೇನು ಇತರ ಭಾಷೆಗಳ ಸಂಪರ್ಕವಿಲ್ಲವೆ? ಹೆಚ್ಚೇಕೆ? ಈ ವಿಷಯದಲ್ಲಿ ಶ್ರೀಮಾನ್ ತಾತಾಚಾರ್ಯರೂ, ಶ್ರೀಮಾನ್ ನರಸಿಂಹಾಚಾರ್ಯರೂ, ಬ್ರಹ್ಮಶ್ರೀ ಮೈಸೂರು ಸೀತಾರಾಮಶಾಸ್ತ್ರಿಗಳೂ, ಮಂಗಳೂರಿನ ಬ್ರಹ್ಮಶ್ರೀ ಮುಳಿಯ ತಿಮ್ಮಪ್ಪಯ್ಯನವರೂ ಹಿಂದಿನಿಂದಲೂ ಕೆಲಸಮಾಡಿದ್ದರು, ಈಗಲೂ ಮಾಡುತ್ತಿದ್ದಾರೆ. ಇವರು ನಾಲ್ವರೂ ನಮ್ಮ ಕನ್ನಡ ನಾಡಿನ ರತ್ನಗಳೆಂದೇ ಹೇಳಬೇಕು. ಉಳಿದವರು ಮಾಡಲಿಲ್ಲವೆಂದಲ್ಲ; ಈ ಮಾರ್ಗದಲ್ಲಿ ಇವರೇ ಶ್ರೇಷ್ಠರೆಂದು ಮಾತ್ರ ಹೇಳುವೆನು.

ಇನ್ನು, ಗದ್ಯ ಕವಿತೆಯ ವಿಷಯದಲ್ಲಿ, ಆಡುವಂತೆ ಬರೆಯಬೇಕೆಂಬ ಕುತೂಹಲವು ಹಲವರಲ್ಲಿರುವುದು. ಮಲೆಯಾಳದಲ್ಲಿ ರಾಜ ರಾಜವರ್ಮರಂತಹರೂ, ತೆಲುಗಿನಲ್ಲಿ ರಾವ್ ಸಾಹೆಬ್ ಗಿಡುಗು ರಾಮಮೂರ್ತಿಗಳಂತಹರೂ ಹಾಕಿಕೊಟ್ಟ ತಳಹದಿ ಇದು ಎನ್ನಬೇಕು. ಅವರನ್ನನುಸರಿಸಲಿಕ್ಕೆ ಅವರೇನು ವಾಲ್ಮೀಕಿಗಳೇ? ಅವರ ಭಾಷೆಗಳಲ್ಲಿ ಮಾಡಿಕೊಳ್ಳಲಿ; ನಾವೇಕೆ ಅನುಸರಿಸಬೇಕು? ನಮ್ಮಲ್ಲಿ, ದೇಶ ಭೇದದಿಂದ, ಕನ್ನಡದ ಭಾಷೆಯ ಭೇದವಿರುವುದರಿಂದ ಅದು ನಮಗೆ ಹೇಗೆ ಸರಿಹೋದೀತು? ಆದುದರಿಂದ, ನಮಗೆಲ್ಲರಿಗೂ ಸರಿಹೋಗಲಿಕ್ಕೆ ಅನುಕೂಲವಾಗುವಂತಹ ಭಾಷೆಯಲ್ಲಿ ಬರೆಯುವುದು ಒಳ್ಳಿತು. ಮರಾಠಿಯಲ್ಲಿ ಇತ್ತೀಚೆಗೆ ರಂಗೀತ ನಾಟಕಗಳು ತಲೆದೋರಿದಂತೆ, ನಮ್ಮ ಕನ್ನಡದಲ್ಲಿಯೂ ಬರೆಯುವುದಾದರೆ, ಸಂಸ್ಕೃತದ ಉಚ್ಚ ನೀಚ ಪಾತ್ರಗಳ ಭಾಷಾ ಭೇದವಿರುವಂತೆ, ಇನ್ನುಮುಂದೆ ಕನ್ನಡದಲ್ಲಿ ಬರೆಯಲ್ಪಡುವ ರಂಗೀತ ನಾಟಕಗಳಲ್ಲಿ ನೀಚ ಪಾತ್ರಗಳ ಭಾಷೆಯನ್ನಾಗಿ ಆಡುವ ಭಾಷೆಯನ್ನು ಬರೆಯಲಿ. ಎಲ್ಲ ಗದ್ಯ ಗ್ರಂಥಗಳನ್ನೂ ಹಾಗೆ ಬರೆಯುವುದು ಅಷ್ಟು ಸರಿಯಲ್ಲ. ನಮಗೆಲ್ಲರಿಗೂ ಸಮಾನವಾಗಿರುವ ಒಂದು ರೀತಿಯಾದ ಗ್ರಂಥಗಳು ಉಂಟಾಗಬೇಕಾದುದೇ ಮುಖ್ಯ.

'ಸ್ವಧರ್ಮೇ ನಿಧನಂ ಶ್ರೇಯಃ' ಎಂಬ ಗೀತೋಕ್ತಿಯಂತೆ, ನಮ್ಮ ಭಾಷೆಯ ಸಂಪ್ರದಾಯ ಮರ್ಯಾದೆಗಳನ್ನು ಬಿಡದೆ ಗ್ರಂಥಗಳನ್ನು ಬರೆಯುವುದೇ ನಮ್ಮ ಧರ್ಮವಾಗಬೇಕು.

ಈ ವಿಷಯದಲ್ಲಿ ನಾಗವರ್ಮನು—

**ಕಂ|| ಛಂದಮನಱಿಯದೆ ಕವಿತೆಯ।**
**ದಂದುಗದೊಳ್ ತೊಳಲಿ ಸುಳಿವ ಕುಕವಿಯೆ ಕುರುಡಂ॥**
**ಮುಂದೆ ಕವಲ್ವಟ್ಟೆಯಿರ।**
**ಲ್ಕಂದುಮಣಂ ಪದಮನಿಡಲದೇಂ ಗೆಯ್ದಪನೋ॥**

**ಕೊಳಕೆ ಪರಮೇಶ್ವರಯ್ಯ.**

---

# ಜೈಮಿನಿ ಭಾರತ (ಆಶ್ವಮೇಧಿಕ ಪರ್ವ)

## * ಸಂಸ್ಕೃತ ಜೈಮಿನಿ ಭಾರತದ ಕನ್ನಡದ ಅನುವಾದ

### ಇಪ್ಪತ್ತೆಂಟನೆಯ ಅಧ್ಯಾಯ

ಕಮಲಮುಖಿಯಾದ ಸೀತೆಯು ವನ ಪ್ರಯಾಣ ಮಾಡುವುದನ್ನು ನೋಡಿ ಅಯೋಧ್ಯಾ ಪಟ್ಟಣವು ಬಹು ದುಃಖಾಕ್ರಾಂತವಾಗಿ, ಗಾಳಿಯ ಹೊಡೆತದಿಂದ ಚಲಿಸುತ್ತಿರುವ ಧ್ವಜಪಟಗಳ ತುದಿಯಿಂದ ಸೀತಾದೇವಿಯನ್ನು ತಡೆಯುತ್ತಿರುವುದೋ ಎಂಬಂತಿದ್ದಿತು. ಬಳಿಕ, ಸೀತೆಯು ರಥದಲ್ಲಿ ಕುಳಿತು ಹೋಗುತ್ತಿರುವಾಗ, ದಾರಿಯಲ್ಲಿ ಕ್ರೂರವಾದ ಅನೇಕ ಅಪಶಕುನಗಳು ಕಾಣಿಸಿಕೊಂಡುವು: ನರಿಗಳು ಎದುರಿಗೆ ಬಂದು ಭಯಂಕರವಾಗಿ ಕೂಗಿದುವು; ಜಿಂಕೆಗಳು ದಾರಿಯಲ್ಲಿ ಹಾರುತ್ತ ದಿಕ್ಕುದಿಕ್ಕುಗಳಿಗೂ ಓಡಿದುವು; ಸೀತೆಯ ಬಲಗಣ್ಣು ಹಾರಿತು.

ಹೀಗೆ ವಿಪರೀತಗಳಾದ ದುಶ್ಶಕುನಗಳನ್ನು ನೋಡಿ ಆಕೆಯು ವಿಸ್ಮಿತಳಾಗಿ, ವೀರನಾದ ಲಕ್ಷ್ಮಣನನ್ನು ಕುರಿತು, "ಎಲೈ ಲಕ್ಷ್ಮಣನೇ! ಈಗ ಆಗುತ್ತಿರುವ ನಿಮಿತ್ತಗಳನ್ನು ನೋಡು: ನರಿಗಳೂ ಇತರ ಮೃಗಗಳೂ ದಾರಿಗಡ್ಡಲಾಗಿ ನಿಂತು ಭಯಂಕರವಾಗಿ ಕೂಗುತ್ತಿವೆ. ಯಾವನ ತೀಕ್ಷ್ಣಗಳಾದ ಬಾಣಗಳಿಂದ ಭಯಂಕರಗಳಾದ ರಾಕ್ಷಸ ಸಮೂಹಗಳು ನೆಲಕ್ಕುರುಳಿದುವೋ ಆ ರಾಮನಿಗೆ ಸರ್ವದಾ ಶುಭವಾಗಲಿ; ಕೌಸಲ್ಯೆಗೆ ಹರ್ಷಪ್ರದನಾದ ಆ ರಾಮನಿಗೆ ಮಂಗಳವಾಗಲಿ; ಅವನ ಬಾಹುಗಳಿಗೆ ಬಲವುಂಟಾಗಲಿ; ಅವನು ದೀರ್ಘಾಯುವಾಗಿರಲಿ. ಜನಸ್ಥಾನದಲ್ಲಿ ಖರ ದೂಷಣ ತ್ರಿಶಿರರೆಂಬ ರಾಕ್ಷಸರನ್ನು ಯಮ ಸದನಕ್ಕೆ ಕಳುಹಿಸಿದ ಆತನು ಶಾಶ್ವತವಾಗಿ ರಾಜ್ಯವನ್ನಾಳಲಿ. ಯಾರಿಂದ ಅಗಾಧವಾದ ಸಮುದ್ರವೂ ವಾನರರಿಗೆ ದಾಟುವುದಕ್ಕೆ ಸಾಧ್ಯವಾಯಿತೋ, ಯಾವನು ವಿಭೀಷಣನನ್ನು ಭಯದಿಂದ ಕಾಪಾಡಿದನೋ ಆ ಅಯೋಧ್ಯಾಧಿಪನಾದ ರಾಮನು ಸುಖಿಯಾಗಿರಲಿ. ಪಾಪವೇ ಮೂರ್ತೀಭವಿಸಿದಂತೆ, ಲೋಕಪ್ರಸಿದ್ಧರಾಗಿ ಲಂಕಾಧಿಪತಿಗಳಾಗಿದ್ದ ಮಹಾ ಬಲಶಾಲಿಗಳಾದ ರಾವಣ ಕುಂಭಕರ್ಣರನ್ನು ಯುದ್ಧದಲ್ಲಿ ತೀಕ್ಷ್ಣಗಳಾದ ಬಾಣಗಳಿಂದ ಯಾವನು ಭೇದಿಸಿದನೋ, ಮಂಡೋದರಿಯ ಕಣ್ಣೀರುಗಳಿಂದ ಲಂಕೆಯನ್ನು ಸಾರಿಸುವಂತೆ ಮಾಡಿ ಯಾವನು ನನಗಾಗಿಯೇ ವಾಯು ಪುತ್ರನಾದ ಆಂಜನೇಯನನ್ನು ಮುಂದಾಗಿ ಕಳುಹಿಸಿದನೋ ಆ ರಾಘವನು ಸರ್ವರಿಗೂ ಸುಖಪ್ರದನಾಗಲಿ" ಎಂದು ಹೇಳುತ್ತ ಆ ಜಾನಕಿಯು ಪ್ರಯಾಣ ಮಾಡಿದಳು.

---

* ಕ. ಸಾ. ಪರಿಷತ್ಪತ್ರಿಕೆಯ ೧೭ನೆಯ ಸಂಪುಟದ ೩ನೆಯ ಸಂಚಿಕೆಯ ೨೩೪ನೆಯ ಪುಟದಿಂದ ಮುಂದುವರಿದುದು.

ತ್ರಿಪಥಗೆಯೆನಿಸಿಕೊಂಡು ಜನರ ಪಾಪವನ್ನು ನಾಶಮಾಡುವುದಾಗಿಯೂ, ಆಕಾಶದವರೆಗೂ ಅಲೆಗಳ ಸಾಲನ್ನು ಎಬ್ಬಿಸುತ್ತಿರುವುದಾಗಿಯೂ, ಪರಿಶುದ್ಧವಾದ ಶುಭ್ರಜಲವುಳ್ಳುದಾಗಿಯೂ, ನೇರಿಳೆ ಮಾವು ಸಂಪಗೆ ಕುಲಿಂದಪಟ ಅಶ್ಮಸಾರ ಖರ್ಜೂರ ಅಡಕೆ ಬಾಳೆ ಹಲಸು ಮೊದಲಾದ ಫಲವೃಕ್ಷಗಳಿಂದ ಕೂಡಿದ ತೀರ ಪ್ರದೇಶವುಳ್ಳುದಾಗಿಯೂ, ದ್ರಾಕ್ಷೆಯ ಹಣ್ಣಿನ ಗೊಂಚಲುಗಳಿಂದ ಶೋಭಿಸುತ್ತಿರುವ ಲತಾಮಂಟಪಗಳನ್ನೂ, ಸುವರ್ಣ ಕೇತಕೀ ವೃಕ್ಷಗಳ ವನವನ್ನೂ ಹೊಂದಿರುವುದಾಗಿಯೂ, ಶ್ರೀರಾಮನ ಕೀರ್ತಿಯಂತೆ ಶುಭ್ರವರ್ಣದಿಂದ ಕೂಡಿ ತನ್ನ ಪ್ರವಾಹಗಳಿಂದ ಜಗತ್ತಿನ ಪಾಪವನ್ನು ನಾಶಪಡಿಸುತ್ತಿರುವುದಾಗಿಯೂ ಇರುವ ದೇವ ನದಿಯಾದ ಗಂಗೆಯನ್ನು ನೋಡಿ ಸೀತಾದೇವಿಯು ತನ್ನ ಜನ್ಮವು ಸಫಲವಾಯಿತೆಂದು ಸಂತುಷ್ಟಳಾದಳು.

ಲಕ್ಷ್ಮಣನು ರಥದಿಂದ ನೆಲಕ್ಕಿಳಿದು ಸೀತೆಯೊಡನೆ ನಾವಿಕಸಹಿತವಾದ ನಾವೆಯನ್ನು ಹತ್ತಿ ಭಯಂಕರವಾದ ಆಚೆಯ ದಡವನ್ನು ಸೇರಿ ನಾವೆಯಿಂದಿಳಿಯಲು, ಸೀತೆಯೂ ಇಳಿದಳು. ಇಬ್ಬರೂ ಗಂಗೆಯಲ್ಲಿ ಸ್ನಾನಮಾಡಿ ವಸ್ತ್ರವನ್ನುಟ್ಟು ಅರಣ್ಯ ಮಧ್ಯವನ್ನು ಹೊಕ್ಕರು. ನಂದಿ, ಕಗ್ಗಲಿ, ನೆಲ್ಲಿ, ಎಲಚಿ, ಪಗಡೆ, ಪೊಟ್ಟರೆಗಳುಳ್ಳ ಒಣಗಿದ ಅರಳಿ, ತೀಕ್ಷ್ಣಗಳಾದ ಮುಳ್ಳುಗಳುಳ್ಳ ಕುಶಗಳು, ಹಿಪ್ಪಲಿ, ಬೇವು ಮೊದಲಾದ ಗಿಡಗಳಿಂದ ಕೂಡಿ ಕ್ರೂರವಾದ ಪಕ್ಷಿಗಳುಳ್ಳ ಆ ಕಾಡು ಭಯಂಕರವಾಗಿದ್ದಿತು. ಶಿಥಿಲವಾದ ಅರಳಿಯ ಮರಗಳಲ್ಲಿ ಕಾಗೆಗಳು ಕ್ರೇಂಕಾರ ಶಬ್ದದಿಂದ ಕೂಗುತ್ತಿದ್ದುವು. ಪೊಟ್ಟರೆಗಳಲ್ಲಿ ಸರ್ಪಗಳು ಫೂತ್ಕಾರಮಾಡುತ್ತಿದ್ದುವು. ಚಿರತೆ, ಕಾಡು ಕೋಣ, ದಪ್ಪವಾದ ಕೋರದಾಡೆಯುಳ್ಳ ಹಂದಿ, ಮೇಲಕ್ಕೆತ್ತಿದ ಕೊಂಡಿಯುಳ್ಳ ಕರಿಯ ಚೇಳು—ಇವುಗಳು ಬಹಳವಾಗಿದ್ದುವು. ಹುಲಿಗಳು ಮೃಗಗಳನ್ನು ಹಿಡಿಯುವುದಕ್ಕಾಗಿ ಯೋಗಿಗಳಂತೆ ನಿಶ್ಚಲವಾಗಿ ನಿಂತಿದ್ದುವು. ಬೆಕ್ಕುಗಳು ಇಲಿಗಳ ಬಿಲವನ್ನು ಹೊಕ್ಕು ಕೂಗುತ್ತಿದ್ದುವು. ಈ ರೀತಿಯಾಗಿದ್ದ ವನವನ್ನು ನೋಡಿ ಸೀತಾದೇವಿಯು ದುಶ್ಶಕುನ ದರ್ಶನದಿಂದ ಭೀತಿಯುಳ್ಳವಳಾಗಿ, ಶ್ರೀರಾಮ ಕೀರ್ತಿಯೆಂಬ ಸ್ತ್ರೀಯು ಕಂಟಕಾವೃತಳಾದಂತೆ, ರೋಮಾಂಚವನ್ನು ಹೊಂದಿ, ಲಕ್ಷ್ಮಣನನ್ನು ಕುರಿತು, "ಎಲೈ ಲಕ್ಷ್ಮಣನೇ! ನಾನು ಇಲ್ಲಿ ಋಷ್ಯಾಶ್ರಮಗಳನ್ನೂ, ಪವಿತ್ರವೇಷವುಳ್ಳ ಸಾಧ್ವಿಯರಾದ ತಪಸ್ವಿನಿಯರನ್ನೂ, ಮೌಂಜೀ ಕೃಷ್ಣಾಜಿನಗಳನ್ನು ಧರಿಸಿ ಹನ್ನೆರಡು ವರ್ಷಗಳಿಂದ ಜಟೆಯನ್ನು ಬೆಳೆಯಿಸಿಕೊಂಡಿರುವ ಮುನಿಪುತ್ರರನ್ನೂ, ನಾರು ಬಟ್ಟೆಯನ್ನುಟ್ಟ ಋಷಿಗಳನ್ನೂ ಕಾಣಲಿಲ್ಲವಲ್ಲಾ! ಅಗ್ನಿಹೋತ್ರದ ಹೊಗೆಯು ಎಲ್ಲಿಯೂ ಕಾಣಬರಲಿಲ್ಲ. ಎಲ್ಲಿ ನೋಡಿದರೂ ಹುಲ್ಲು ಕಡ್ಡಿಗಳು ತುಂಬಿರುವ ಕಾಡೇ ಕಾಣಬರುತ್ತಿರುವುದು. ವೇದಧ್ವನಿಯು ಕೇಳಬರುವುದಿಲ್ಲ; ಪಕ್ಷಿಗಳ ಶಬ್ದವೇ ಕೇಳಿಸುತ್ತಿದೆ. ಶ್ರೀರಾಮನನ್ನು ಬಿಟ್ಟುಬಂದ ನನಗೆ ವೇದಘೋಷವು ಕೇಳಬರುವುದು ಹೇಗೆ? ನಾನು ಬುದ್ಧಿಪೂರ್ವಕವಾಗಿ ಶ್ರೀರಾಮನನ್ನು ಬಿಟ್ಟುಬಂದುದರಿಂದ ಮುನಿಗಳೂ ಮುನಿಪತ್ನೀ ಪುತ್ರರೂ ನನಗೆ ಕಾಣಿಸುವಂತಿಲ್ಲ.

ಪರಿಶುದ್ಧರಾದ ಆಶ್ರಮವಾಸಿಗಳು ಶುದ್ಧರಿಗಲ್ಲವೇ ಕಾಣಿಸುವುದು! ರಾಮನಲ್ಲಿ ವಿಮುಖಳಾಗಿ ಕುರೂಪಿಣಿಯಾಗಿ ಬಂದಿರುವ ನನಗೆ ಮುನಿಗಳ ಅಗ್ನಿಹೋತ್ರಗಳು ಹೇಗೆ ಕಾಣಬರುವುವು?" ಎಂದಳು.

ಆ ಮಾತನ್ನು ಕೇಳಿ ಲಕ್ಷ್ಮಣನು ದುಃಖಾಕ್ರಾಂತನಾಗಿ ಕಣ್ಣೀರನ್ನು ಸುರಿಸುತ್ತ ಮುಖವನ್ನು ಬಗ್ಗಿಸಿ ಅಧೋದೃಷ್ಟಿಯುಳ್ಳವನಾಗಿ ಸೀತಾದೇವಿಯನ್ನು ಕುರಿತು, "ಎಲೌ ದೇವಿಯೇ! ಆ ಋಷ್ಯಾಶ್ರಮವು ಇನ್ನೂ ದೂರದಲ್ಲಿರುವುದು; ಮೆಲ್ಲ ಮೆಲ್ಲಗೆ ನಡೆ. ಶ್ರೀರಾಮನು ಲೋಕಾಪವಾದಕ್ಕಾಗಿ ಸತ್ಯವಾಗಿಯೂ ನಿನ್ನನ್ನು ತ್ಯಜಿಸಿರುವನು. ನಿನಗೂ ಗಂಗಾನದಿಯನ್ನು ನೋಡಬೇಕೆಂಬ ಬಯಕೆ ಯುಂಟಾಯಿತು. ಆದಕಾರಣ, ಆತನು ನಿನ್ನನ್ನು ಕಾಡಿನಲ್ಲಿ ಬಿಟ್ಟುಬರುವಂತೆ ನನಗೆ ನೇಮಿಸಿದನು. ಅಮ್ಮಾ! ನಾನು ಆತನ ಆಜ್ಞಾಧಾರಕನು; ಏನುಮಾಡಲಿ?" ಎಂದು ಹೇಳಲು, ಅದನ್ನು ಕೇಳಿ ಸೀತಾದೇವಿಯು ಮೂರ್ಛಿತಳಾಗಿ, ಆಕಾಶದಿಂದ ರೋಹಿಣೀ ನಕ್ಷತ್ರವು ಬಿದ್ದುಹೋದಂತೆ ನೆಲಕ್ಕೆ ಬಿದ್ದಳು. ಬುಡವು ಕತ್ತರಿಸಿದ ಬಳ್ಳಿ ಯಂತೆಯೂ, ಶೂಲಕ್ಕೆ ಹಾಕಿದ ಹಸುವಿನಂತೆಯೂ, ಸರ್ಪದಷ್ಟಳಾದ ಕನ್ಯೆ ಯಂತೆಯೂ ನೆಲದಮೇಲೆ ಬಿದ್ದುಹೋದ ಆಕೆಯನ್ನು ನೋಡಿ ಲಕ್ಷ್ಮಣನು ಹೆದರಿ, ಆಕೆಯ ಮುಖಕಮಲಕ್ಕೆ ತನ್ನ ಕೈಯ ಮರೆಯಿಂದ ನೆಳಲಾಗುವಂತೆ ಮಾಡಿ, ಸೆರಗಿ ನಿಂದ ಬೀಸುತ್ತ, "ನಾನು ಸಾಕ್ಷಾತ್ತಾಗಿ ರಾಮನ ಸೇವೆಯನ್ನು ಮಾಡಿರುವುದು ಸತ್ಯವಾಗಿದ್ದ ಪಕ್ಷದಲ್ಲಿ ಜಾನಕಿಯು ಬೇಗನೆ ಎಚ್ಚರಗೊಳ್ಳಲಿ" ಎಂದು ಹೇಳುತ್ತಿರಲು, ಅಷ್ಟರಲ್ಲಿ ಆಕೆಯು ಎಚ್ಚತ್ತು ಕಣ್ಣನ್ನು ತೆರೆಯುತ್ತ ತನ್ನೆದುರಿಗಿರುವ ಲಕ್ಷ್ಮಣನನ್ನು ಕಂಡು ಮೆಲ್ಲಗೆ ಮಾತನಾಡಲಾರಂಭಿಸಿದಳು:—

"ಎಲೈ ಲಕ್ಷ್ಮಣನೇ! ನೀನು ನನ್ನನ್ನು ಹಿಂದೆ ಜನಸ್ಥಾನದಲ್ಲಿ ಬಿಟ್ಟುಹೋದಂತೆ, ಈ ಕ್ರೂರವಾದ ಕಾಡಿನಲ್ಲಿ ಹೇಗೆ ಬಿಟ್ಟುಹೋಗುವೆ? ನನ್ನ ಮೈದುನರಲ್ಲೆಲ್ಲ ನೀನು ಪೂಜ್ಯನೆಂದು ಭಾವಿಸಿರುವೆನು. ದಂಡಕಾರಣ್ಯದಲ್ಲಿ ವಿರಾಧನ ಕೈಗೆ ಸಿಕ್ಕಿದ ನನ್ನನ್ನು ನೀನು ಹಿಂದೆ ರಕ್ಷಿಸಿದೆಯಲ್ಲವೆ! ನನಗಾಗಿ ನೀನು ವಿಚಿತ್ರವಾದ ಪರ್ಣಶಾಲೆಗಳನ್ನು ನಿರ್ಮಿಸಿ ಶುದ್ಧವಾದ ಕಂದ ಮೂಲ ಫಲ ಜಲಾದಿಗಳಿಂದ ನನ್ನನ್ನು ಸೇವಿಸಲಿಲ್ಲವೆ! ಈಗ ನಿನ್ನನ್ನು ಬಿಟ್ಟು ಅಂತಹ ಸೇವೆಯನ್ನು ಮಾಡುವವರು ಯಾರು? ಆಗ ನನ್ನ ಮುಂಭಾಗ ದಲ್ಲಿ ರಾಮನೂ, ಹಿಂದೆ ನೀನೂ ಇದ್ದು ನನ್ನನ್ನು ರಕ್ಷಿಸಲಿಲ್ಲವೆ! ನಾನು ಯಾವ ಅಪರಾಧವನ್ನೂ ಮಾಡದಿದ್ದರೂ ರಾಜೀವಲೋಚನನಾದ ಆ ಶ್ರೀರಾಮನು ನನ್ನನ್ನು ಪರಿತ್ಯಾಗ ಮಾಡಿದುದರಿಂದ ನಾನು ದುಃಖಭಾಜನಳಾದೆನು. ಆ ನನ್ನ ಪತಿಗೆ ನಾನು ಕರಣತ್ರಯದಿಂದಲೂ ಅಪರಾಧ ಮಾಡಲಿಲ್ಲ; ಮನೋಹರಗಳಾದ ಆತನ ಪಾದ ಗಳನ್ನು ಸರ್ವದಾ ಮನಸ್ಸಿನಲ್ಲಿ ಧ್ಯಾನಿಸುತ್ತಿರುವೆನು. ಕಮಲದಂತೆ ವಿಸ್ತಾರವಾದ ಕಣ್ಣುಗಳಿಂದ ಕೂಡಿದುದಾಗಿಯೂ, ಚಂದ್ರಬಿಂಬದಂತೆ ನಿರ್ಮಲವಾಗಿಯೂ, ಮನೋಹರವಾದ ಕಪೋಲಗಳಿಂದಲೂ ಶ್ಮಶ್ರುರೇಖೆಯಿಂದಲೂ ಕರ್ಣಕುಂಡಲ

ಗಳಿಂದಲೂ ಪ್ರಕಾಶಮಾನವಾಗಿಯೂ, ಮುತ್ತುಗಳಿಂದಲೂ ರತ್ನಗಳಿಂದಲೂ ಹೊಳೆವ ಕಿರೀಟದಿಂದ ಶೋಭಿಸುತ್ತಿರುವ ಆತನ ಮುಖವನ್ನು ಈ ಕ್ರೂರವಾದ ಅರಣ್ಯದಲ್ಲಿ ನಾನು ನೋಡುವ ಬಗೆ ಹೇಗೆ? ಹಿಂದೆ ರಾಮನು ಜುಲುಪಿಯನ್ನು ಧರಿಸಿದ್ದಾಗ, ವಿಶ್ವಾಮಿತ್ರನೊಡನೆ ನಿನ್ನನ್ನೂ ಕರೆದುಕೊಂಡು ಮಿಥಿಲೆಗೆ ಬಂದು ನನ್ನನ್ನು ಮದುವೆಯಾಗುವುದಕ್ಕಾಗಿ ಶೈವ ಧನುವನ್ನು ಎರಡು ತುಂಡಾಗಿ ಮುರಿದನು. ಯಾವನು ನನಗಾಗಿ ಕಪಿಗಳೊಡನೆ ಸ್ನೇಹವನ್ನು ಬೆಳೆಯಿಸಿದನೋ, ನನ್ನನ್ನಗಲಿರಲು ಯಾವನು ಅರಣ್ಯದಲ್ಲಿಯ ವೃಕ್ಷಗಳನ್ನಾಲಿಂಗಿಸಿದನೋ, ಅಂತಹ ರಾಮನು ಸೀತೆಯನ್ನು ಪರಿತ್ಯಾಗ ಮಾಡಲು ದೈವವೇ ಕಾರಣವು. ಈ ವಿಷಯದಲ್ಲಿ ನನ್ನದೂ ತಪ್ಪಲ್ಲ, ಆ ರಾಮನದೂ ತಪ್ಪಲ್ಲ ಎಂದು ಭಾವಿಸುವೆನು. ಅಥವಾ, ನನ್ನ ಜನ್ಮಾಂತರ ಕರ್ಮ ಪಾಕವಿರಬಹುದು. ಎಲೈ ಮಹಾ ಬಲಶಾಲಿಯಾದ ಲಕ್ಷ್ಮಣನೇ! ನೀನೂ ಆ ರಾಘವನೂ ನಿರ್ದೋಷಿಗಳು. ನೀನು ಪರಾಧೀನನಾಗಿರುವುದರಿಂದ ಬೇಗನೆ ಅಯೋಧ್ಯೆಗೆ ತೆರಳು. ನನ್ನನ್ನು ಗರ್ಭದಲ್ಲಿಯೂ ಲಂಕೆಯಲ್ಲಿದ್ದಾಗಲೂ ರಕ್ಷಿಸಿದ ದೈವವೇ ಈಗಲೂ ನನಗೆ ರಕ್ಷಕವಾಗಿರುವುದು. ನೀನು ದುಃಖಿಸಬೇಡ. ಕಾಡಿನಲ್ಲಿ ಅಲೆಯುತ್ತ ಅವರ ಪಾದ ಸ್ಮರಣೆಯನ್ನು ನಾನು ಮಾಡುತ್ತಿರುವೆನೆಂದು ನಾನು ಹೇಳಿದಂತೆ ನಮ್ಮ ಅತ್ತೆಯರಿಗೆ ತಿಳಿಸು. ವಿವೇಕಿಯಾಗಿದ್ದರೂ, ರಾಮನು ನನ್ನನ್ನು ಬದುಕಿರುವಾಗಲೇ ಕಾಡಿನಲ್ಲಿ ಬಿಟ್ಟನು'' ಎಂದು ಆ ಘೋರಾರಣ್ಯದಲ್ಲಿ ಗೋಳಾಡುತ್ತಿರುವ ಸದಾಚಾರ ಸಂಪನ್ನಳಾದ ಸೀತೆಯು ಪುನಃ ಲಕ್ಷ್ಮಣನನ್ನು ಕುರಿತು, ''ರಾಮನು ಈ ಕಾರ್ಯಕ್ಕೆ, ಕರುಣಾಳುವಾದ ನಿನ್ನನ್ನು ಹೇಗೆ ನೇಮಿಸಿದನು? ಕಠಿನನಾಗಿಯೂ ಭ್ರಾತೃ ಘಾತುಕನಾಗಿಯೂ ಇರುವ ಸುಗ್ರೀವನನ್ನಾಗಲಿ, ರಾವಣ ದ್ರೋಹಿಯಾದ ವಿಭೀಷಣನನ್ನಾಗಲಿ ನೇಮಿಸಬೇಕಾಗಿದ್ದಿತು. ಯಾವನು ಯಾವ ಕಾರ್ಯದಲ್ಲಿ ಸಮರ್ಥನೋ ಅವನನ್ನು ಅಂತಹ ಕಾರ್ಯದಲ್ಲಿ ಪ್ರೇರಿಸಬೇಕು. ರಘೂದ್ವಹನು ನನ್ನ ತ್ಯಾಗ ವಿಷಯದಲ್ಲಿ ಅನ್ಯಾಯವಾಗಿ ನಿನ್ನನ್ನು ನೇಮಿಸಿದನು. ಎಲೈ ಲಕ್ಷ್ಮಣನೇ! ನಿಮ್ಮಣ್ಣನು ನಿನ್ನ ಮೇಲೆ ಕೋಪಿಸಿಕೊಳ್ಳುವನು. ನೀನು ಅಯೋಧ್ಯೆಗೆ ಹಿಂದಿರುಗು; ನಿನಗೆ ಮಂಗಳವಾಗಲಿ'' ಎಂದು ಹೇಳಿದಳು.

ಆ ಮಾತನ್ನು ಕೇಳಿ ಲಕ್ಷ್ಮಣನು ಬಹಳವಾಗಿ ದುಃಖಪಡುತ್ತ, ಸೀತಾದೇವಿಗೆ ಪ್ರದಕ್ಷಿಣೆ ಮಾಡಿ ಮುಖವನ್ನು ಬಗ್ಗಿಸಿಕೊಂಡು ನಮಸ್ಕರಿಸಿ, ಅಲ್ಲಿಂದ ಹೊರಟು, ''ಎಲೌ ತಾಯೇ! ವನಾಭಿಮಾನ ದೇವತೆಗಳು ನಿನ್ನನ್ನು ರಕ್ಷಿಸಲಿ. ಶ್ರೀರಾಮನ ಅಧೀನನಾದ ನಾನು ಹೊರಡುವೆನು'' ಎಂದು ಹೇಳಿ ಹಿಂದಿರುಗಿ ಸೀತಾದೇವಿಯನ್ನು ನೋಡುತ್ತ ಹೊರಟನು. ಅವನ ಕಾಲುಗಳು ಮುಂದಕ್ಕೆ ಸಾಗದೆ ಹೋಗಲು, ಬಹು ಕಷ್ಟತರವಾಗಿ ನಡೆದನು. ಸೀತೆಯು ಸ್ತಬ್ಧಳಾಗಿ ನಿಂತು ಲಕ್ಷ್ಮಣನನ್ನು ನೋಡುತ್ತಿರಲು, ಅವನು ಕಣ್ಮರೆಯಾದುದನ್ನು ಕಂಡು ಮೂರ್ಛಿತಳಾಗಿ ಒಂದು ಮುಹೂರ್ತ ಕಾಲ ನೆಲಕ್ಕೆ ಬಿದ್ದಳು. ಬಳಿಕ ಶೂರನಾದ ಲಕ್ಷ್ಮಣನು ಗಂಗಾ ನದಿಯನ್ನು ದಾಟಿ ಮುಂದಕ್ಕೆ ಹೊರಟನು.

ಬಾಲೆಯಾದ ಸೀತೆಯು ಒಂಟಿಯಾಗಿ ಆ ಕಾಡಿನಲ್ಲಿ, "ನಾನು ಜನಕ ರಾಜನ ವಂಶದಲ್ಲಿ ಹುಟ್ಟಿ ರಘು ವಂಶಕ್ಕೆ ಸೇರಿ ಈ ಘೋರ ಕಾನನದಲ್ಲಿ ತ್ಯಜಿಸಲ್ಪಡಲು ಯಾವ ಪಾಪವನ್ನು ಮಾಡಿದ್ದೆನೋ!" ಎಂದು ಹರಿಣಿಯಂತೆ ವಿಲಾಪಿಸುತ್ತಿದ್ದಳು. ಶೂನ್ಯವಾಗಿರುವ ದಿಕ್ಕುಗಳನ್ನೂ ವಿದಿಕ್ಕುಗಳನ್ನೂ ನೋಡಿ, "ಲಕ್ಷ್ಮಣನು ಬಂದು ನೋಡಿ ನಗುವನೋ ಏನೊ!" ಎಂದು ಹೇಳಿಕೊಳ್ಳುತ್ತ ಭಯಾಕ್ರಾಂತಳಾಗಿ, ಪುನಃ ಮೂರ್ಛೆಯನ್ನು ಹೊಂದಿದಳು. ಆಕೆಯ ದುಃಖವನ್ನು ಸಹಿಸಲಾರದೆ ಅಲ್ಲಿದ್ದ ಒಂದು ಹಂಸೆಯು ತಾವರೆಯ ದಂಟನ್ನು ಬಿಟ್ಟು ಭಯಂಕರವಾದ ಧ್ವನಿಯಿಂದ ಅಳುತ್ತಿದ್ದಿತು. ಜಿಂಕೆಯ ಮರಿಗಳೂ ಹೆಣ್ಣು ಜಿಂಕೆಗಳೂ, ಹೆಚ್ಚಾಗಿ ಕೃಷ್ಣಸಾರಗಳೂ, ಸೀತಾದೇವಿಯ ಆ ದುರವಸ್ಥೆಯನ್ನು ನೋಡಿ ಹುಲ್ಲುಗರಿಕೆಯನ್ನು ಬಿಟ್ಟುಬಿಟ್ಟು ಆಕೆಯನ್ನು ನೋಡುತ್ತಿದ್ದುವು. ನವಿಲುಗಳು ಕುಣಿವುದನ್ನು ಬಿಟ್ಟು ಓಡುತ್ತಿದ್ದುವು. ಪಕ್ಷಿಗಳು ಆಹಾರವನ್ನು ಬಿಟ್ಟು ಬಂದು ತಮ್ಮ ರೆಕ್ಕೆಗಳಿಂದ ಆಕೆಗೆ ನೆಳಲನ್ನುಂಟುಮಾಡುತ್ತಿದ್ದುವು. ಜಲಚರಗಳಾದ ಪಕ್ಷಿಗಳು ಆಕೆಯ ಮೇಲೆ ನೀರನ್ನು ಚಿಮುಕಿಸುತ್ತಿದ್ದುವು. ಚಮರೀಮೃಗಗಳು ತಮ್ಮ ಬಾಲದ ಚಾಮರದಿಂದ ಆಕೆಯನ್ನು ಬೀಸುತ್ತಿದ್ದುವು. ಗಂಗಾ ತೀರದಲ್ಲಿದ್ದ ವಾಯುವು ನದಿಯಲ್ಲಿ ಮಿಂದು ಹೂಗಳನ್ನು ತಂದು ಸುವಾಸನೆಯಿಂದ ಕೂಡಿ ಆಕೆಯನ್ನು ಪೂಜಿಸಿದನು. ಆಗ ಸೀತಾದೇವಿಯು, "ರಾಮ ! ರಾಮ !" ಎಂದು ಹಂಬಲಿಸುತ್ತ, ಬಿಟ್ಟ ಮಂಡೆಯನ್ನು ನೆಲದ ಧೂಳಿ ಮುಚ್ಚಿಕೊಂಡಿರಲು, ನಿಶ್ಚೇಷ್ಟಿತಳಾಗಿ ಬಿದ್ದು, "ಪ್ರಾಣಗಳನ್ನಾದರೂ ಕಳೆದುಕೊಳ್ಳುವೆನೆಂದರೆ ಭ್ರೂಣ ಹತ್ಯೆಯುಂಟಾಗುವುದು, ಏನು ಮಾಡಲಿ? ಎಲ್ಲಿ ಹೋಗಲಿ? ನನ್ನನ್ನು ರಕ್ಷಿಸುವವರು ಯಾರು?" ಎಂದು ಹೇಳುತ್ತ, ಅಲ್ಲಿ ಇಲ್ಲಿ ಓಡಾಡುತ್ತ, ಹೆಜ್ಜೆ ಹೆಜ್ಜೆಗೂ ಎಡವಿ ಮುಗ್ಗರಿಸುತ್ತಿದ್ದಳು. ತೀಕ್ಷ್ಣಗಳಾದ ದರ್ಭೆಯ ಮುಳ್ಳುಗಳು ಕಾಲುಗಳಲ್ಲಿ ನಟ್ಟು ವ್ಯಥೆಯನ್ನುಂಟುಮಾಡಿದುವು. ಕಾಲುಗಳಿಂದ ರಕ್ತವು ಸುರಿಯುತ್ತಿದ್ದಿತು. ಹೀಗೆ ಸೀತೆಯು ದುಃಖಾಕ್ರಾಂತಳಾಗಿ ಆ ಕಾಡಿನಲ್ಲಿರುವಾಗ, ಬಹು ಮಂದಿ ಶಿಷ್ಯರೊಡನೆ ಹೊರಟು ಯಜ್ಞಕ್ಕೆ ಯೂಪಸ್ತಂಭಗಳನ್ನು ಹುಡುಕಿ ಕಡಿದುಕೊಂಡು ಹೋಗುವುದಕ್ಕಾಗಿ ಅಲ್ಲಿ ಬರುತ್ತಿದ್ದ ಮಹಾ ತಪಸ್ವಿಯಾದ ವಾಲ್ಮೀಕಿಯು ದುಃಖಿತೆಯಾಗಿದ್ದ ಆಕೆಯನ್ನು ಕಂಡನು.

ಇಂತು ವಾಲ್ಮೀಕಿ ಸಮಾಗಮವೆಂಬ ಇಪ್ಪತ್ತೆಂಟನೆಯ ಅಧ್ಯಾಯವು.

---

## ಇಪ್ಪತ್ತೊಂಬತ್ತನೆಯ ಅಧ್ಯಾಯ

ಬಳಿಕ ವಾಲ್ಮೀಕಿಯು, ಅಲಕ್ಷ್ಯಮಾಡೋಣದರಿಂದ ದೂಷಿತವಾದ ತನ್ನ ತಪಸ್ಸಿದ್ಧಿಯಂತೆ, ದುಃಖಿಸುವವಳೂ ದೀನಳೂ ಆಗಿದ್ದ ಸೀತೆಯನ್ನು ನೋಡಿ, "ಎಲೌ ಕಲ್ಯಾಣಿ! ನೀನು ಯಾರು? ಯಾರ ಮಗಳು? ಯಾರ ಹೆಂಡತಿ? ಈ ವಿಜನವಾದ ವನದಲ್ಲಿರಲು ಕಾರಣವೇನು? ವಿವರವಾಗಿ ಹೇಳು" ಎಂದು ಕೇಳಿದನು. ಆಗ ಸೀತೆಯು ನಮಸ್ಕರಿಸಿ, ಬಹು ದುಃಖದಿಂದ—"ಎಲೈ ಬ್ರಾಹ್ಮಣನೇ! ನಾನು

ಜನಕನ ಮಗಳು, ದಶರಥನ ಸೊಸೆ, ಶ್ರೀರಾಮನ ಹೆಂಡತಿ. ನಾನು ಸರ್ವದಾ ಪತಿ ಪರಾಯಣಳಾಗಿರುವೆನು. ಆ ರಾಮನು ನನ್ನನ್ನು ತ್ಯಾಗ ಮಾಡಿರುವನು. ಕಾರಣ ವೇನೋ ನನಗೆ ತಿಳಿಯದು'' ಎಂದು ಹೇಳಿದಳು. ಅದನ್ನು ಕೇಳಿ ವಾಲ್ಮೀಕಿಯು ಆಕೆಯನ್ನು ಸಮಾಧಾನಗೊಳಿಸಿ ಹೀಗೆ ಒಳ್ಳೆಯ ಮಾತನ್ನಾಡಿದನು:—

"ಎಲೌ ಸುವ್ರತೆಯೇ! ನೀನು ದುಃಖಿಸಬೇಡ; ಇಬ್ಬರು ಮಕ್ಕಳನ್ನು ಪಡೆಯುವೆ. ನಾನು ಜನಕನ ಗೌರವಕ್ಕೆ ಪಾತ್ರನಾದ ವಾಲ್ಮೀಕಿ ಮುನಿಯು. ನನ್ನ ಆಶ್ರಮವು ಫಲ ಪತ್ರ ಪುಷ್ಪಗಳಿಂದ ಮನೋಹರವಾಗಿರುವುದು. ನಿನಗಾಗಿ ಒಂದು ಪರ್ಣಶಾಲೆಯನ್ನು ಕಲ್ಪಿಸಿಕೊಡುವೆನು. ಅಲ್ಲಿ ನಿನ್ನ ಪ್ರಸವವು ಅನುಕೂಲವಾಗಿ ನಡೆಯುವುದು'' ಎಂದು ಹೇಳಲು, ಜಾನಕಿಯು ಆ ಮುನಿಯ ಮಾತನ್ನು ಕೇಳಿ, ಬೇಸಗೆಯ ತಾಪದಿಂದ ಬಳಲಿದ್ದ ಹೆಣ್ಣು ನವಿಲು ಗುಡುಗಿನ ಶಬ್ದವನ್ನು ಕೇಳಿದಂತೆ ಹರ್ಷಿತಳಾಗಿ, ಹಾಗೆಯೇ ಆಗಲಿ ಎಂದು ಒಪ್ಪಿ, ಆ ಋಷಿಯ ಹಿಂದೆ ಹೋದಳು. ಮಹಾ ಭಾಗನಾದ ವಾಲ್ಮೀಕಿಯು ಆಕೆಯೊಡನೆ ತನ್ನ ಆಶ್ರಮವನ್ನು ಸೇರಿದನು.

ಅಲ್ಲಿ ಹುಲಿಗಳೂ ಸಿಂಹಗಳೂ ಗೋವುಗಳೊಡನೆ ಸಂತೋಷದಿಂದ ಕ್ರೀಡಿಸು ತ್ತಿದ್ದುವು; ಇಲಿಗಳು, ತಮ್ಮ ಬಿಲದಲ್ಲಿ ಸೇರಿಕೊಳ್ಳುವಂತೆ, ಬೆಕ್ಕುಗಳ ಬಾಯಿಯಲ್ಲಿ ಅಡಗಿಕೊಳ್ಳುತ್ತಿದ್ದುವು; ಮುಂಗುಸಿಗಳೂ ಸರ್ಪಗಳೂ ನವಿಲುಗಳೂ ಒಟ್ಟಿಗೆ ಸೇರಿ ಆಟವಾಡುತ್ತಿದ್ದುವು; ಹುಲಿಗಳು ಇತರ ಮೃಗಗಳ ಮೇಲೆ ಮತ್ಸರವಿಲ್ಲದೆ ಕ್ರೀಡಿಸು ತ್ತಿದ್ದುವು; ಸರೋವರಗಳಲ್ಲಿ ಬಕ ಪಕ್ಷಿಗಳು ಮೀನುಗಳನ್ನು ಕೊಲ್ಲುತ್ತಿರಲಿಲ್ಲ. ಸೀತೆಯು ಇಂತಹ ಆ ವಾಲ್ಮೀಕಿಯ ಆಶ್ರಮವನ್ನೂ ಅಲ್ಲಿದ್ದ ಮುನಿಗಳನ್ನೂ ಸುವ್ರತೆಯರಾದ ಮುನಿಪತ್ನಿಯರನ್ನೂ ಶುಭಕರರಾದ ಮುನಿಪುತ್ರರನ್ನೂ ನೋಡಿ ಬಹು ಸಂತೋಷದಿಂದ ಅಡಿಗಡಿಗೆ ನಮಸ್ಕರಿಸುತ್ತಿದ್ದಳು. ಶುಭ ಲಕ್ಷಣೆಯಾದ ಆ ಜಾನಕಿಯು ಮುನಿಪತ್ನಿಯರ ಆಶೀರ್ವಾದವನ್ನು ಪಡೆದು, ಮುನಿಪುತ್ರರು ರಚಿಸಿದ ಪರ್ಣಶಾಲೆಯನ್ನು ಸೇರಿದಳು; ಮುನಿಪತ್ನಿಯರು ಕೊಟ್ಟ ಹಣ್ಣುಗಳನ್ನು ತಿಂದು ಅವರು ಕೊಟ್ಟ ನಿರ್ಮಲೋದಕವನ್ನು ಪಾನ ಮಾಡಿ ಪರ್ಣಶಾಲೆಯಲ್ಲಿದ್ದು ಪ್ರತಿ ದಿನವೂ ವಾಲ್ಮೀಕಿ ಮುನಿಯ ಪಾದಗಳಿಗೆ ನಮಸ್ಕರಿಸಿ ಆತನಿಂದ ಪುಣ್ಯ ಕಥೆಗಳನ್ನು ಕೇಳುತ್ತ ಕಾಲವನ್ನು ಕಳೆಯುತ್ತಿದ್ದಳು. ಫಲ ವೃಕ್ಷಗಳಿಂದ ಶೋಭಿಸುತ್ತಿರುವ ವಾಲ್ಮೀಕಿಯ ಆಶ್ರಮದಲ್ಲಿ ಸೀತೆಯು ಹೀಗಿರುತ್ತಿರಲು, ಆಕೆಗೆ ಒಂಬತ್ತನೆಯ ತಿಂಗಳು ಪ್ರಾಪ್ತ ವಾಯಿತು. ಅದು ಕಳೆದ ಮೇಲೆ, ಒಂದು ದಿನ ಅರ್ಧ ರಾತ್ರಿಯಲ್ಲಿ ಶುಭ ಮುಹೂರ್ತದಲ್ಲಿ ಆಕೆಯು ಅವಳಿ ಮಕ್ಕಳನ್ನು ಹೆತ್ತಳು. ತಿಳಿವಳಿಕೆಯುಳ್ಳ ಮುನಿ ಪತ್ನಿಯರು ಬಂದು ಆಕೆಗೆ ತಕ್ಕ ಉಪಚಾರವನ್ನು ಮಾಡಿದರು. 'ಸೀತೆಯು ಅವಳಿ ಮಕ್ಕಳನ್ನು ಪಡೆದಳು' ಎಂದು ಹೇಳಿಕೊಂಡು ಅವರೆಲ್ಲರೂ ಸಂತೋಷದಿಂದ ಹಾಡು ಗಳನ್ನು ಹೇಳಿದರು. ಈ ಮಕ್ಕಳ ತೇಜಸ್ಸಿನಿಂದ ಪರ್ಣಶಾಲೆಯೆಲ್ಲ ಬೆಳಗುತ್ತಿದ್ದಿತು. ದಿಕ್ಕುಗಳು ನಿರ್ಮಲವಾದುವು; ಸುವಾಸನೆಯುಳ್ಳ ಗಾಳಿಯು ಬೀಸಿತು; ಅಗ್ನಿಯು ಪ್ರದಕ್ಷಿಣಾಕಾರವಾಗಿ ಉರಿಯುತ್ತಿದ್ದಿತು.

ಬಳಿಕ, ಶಿಷ್ಯರು ಈ ವೃತ್ತಾಂತವನ್ನು ತಿಳಿಸಲು ವಾಲ್ಮೀಕಿಯ ಬಳಿಗೆ ಓಡಿ ಬಂದರು. "ಎಲೈ ಬ್ರಹ್ಮನೇ! ಸೀತಾದೇವಿಯು ಅವಳಿ ಮಕ್ಕಳನ್ನು ಹೆತ್ತಳು; ಇದು ಆಶ್ಚರ್ಯವು" ಎಂದು ಹೇಳಲು, ಋಷಿಯು ಒಂದು ಹಿಡಿ ಕುಶಗಳನ್ನೂ ಲವವೆಂಬ ಛೇದಿಸಿದ ದರ್ಭೆಯ ಬುಡಗಳನ್ನೂ ತೆಗೆದುಕೊಂಡು ಆ ಮಕ್ಕಳಿದ್ದೆಡೆಗೆ ಸಂತೋಷದಿಂದ ಮುನಿಗಳೊಡಗೂಡಿ ಬಂದು, ಆ ಮಕ್ಕಳಿಗೆ ಲವ ಕುಶಗಳಿಂದ ಪ್ರೋಕ್ಷಣೆ ಮಾಡಿ ಕುಶ, ಲವ, ಎಂದು ಅದೇ ಹೆಸರನ್ನೇ ಆ ಮಕ್ಕಳಿಗೆ ಇಟ್ಟನು. ಅವರಿಬ್ಬರೂ ಉದಯುವನ್ನು ಪಡೆದ ಚಂದ್ರ ಸೂರ್ಯರಂತೆ ದಿನ ದಿನಕ್ಕೆ ಬೆಳೆಯುತ್ತಿದ್ದರು. ಆ ಮುನಿಶ್ರೇಷ್ಠನು ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿ, ಇಬ್ಬರಿಗೂ ಹನ್ನೆರಡನೆಯ ವರ್ಷದಲ್ಲಿ ಉಪನಯನ ಮಾಡಿದನು. ಋಷಿಶ್ರೇಷ್ಠನಾದ ವಾಲ್ಮೀಕಿಯು ವಸಿಷ್ಠ ಮುನಿಯನ್ನು ಕೇಳಿ ಕಾಮಧೇನುವನ್ನು ಕರೆತಂದು, ವನ ವಾಸಿಗಳಾದ ಬ್ರಾಹ್ಮಣರಿಗೆ ಭೋಜನ ಮಾಡಿಸಿದನು. ಕಾಮಧೇನುವು ವಿಚಿತ್ರ ವಾದ ಹೆಸರುಕಾಳಿನ ತೊವ್ವೆ, ಬಗೆ ಬಗೆಯ ಕಾಯಿಪಲ್ಯಗಳು, ಚಂದ್ರಬಿಂಬದಂತಿರುವ ಸಹಸ್ರ ಅಪೂಪಗಳು, ತುಪ್ಪದಲ್ಲಿ ಕರಿದ ಪೂರಿ, ಬಿರಿದು ಅಮೃತಕ್ಕೆ ಸಮಾನವಾಗಿರುವ ಅತ್ತಿಯ ಹಣ್ಣುಗಳು, ಕರಜಿಕಾಯಿ, ಕಡುಬು, ಸೇವಗೆ; ಉಜ್ಜಿದ ಎಳ್ಳು, ತೆಂಗಿನ ಕಾಯಿ, ಚಾರಪಪ್ಪು—ಇವುಗಳ ಎಣ್ಣೆ, ಗಿಡದ ರಸಗಳು, ಸಾವಿರ ಪದರವುಳ್ಳ ಫೇಣಿ, ಉದ್ದಿನ ಹಪ್ಪಳ, ಅಕ್ಕಿಯ ಹಿಟ್ಟಿನ ಹಪ್ಪಳ ಮೊದಲಾದ ಅನೇಕ ಪಕ್ವಾನ್ನಗಳನ್ನೂ ಫಲಗಳನ್ನೂ ಸಿದ್ಧಪಡಿಸಲು, ವಾಲ್ಮೀಕಿ ಮುನಿಯು ಅವುಗಳಿಂದ ಬ್ರಾಹ್ಮಣರನ್ನು ತೃಪ್ತಿಪಡಿಸಿದನು.

ಹೀಗೆ ಉಪನೀತರಾದ ಆ ಕುಮಾರಕರಿಬ್ಬರೂ ವಾಲ್ಮೀಕಿಯಿಂದ ಉಪದೇಶ ವನ್ನು ಪಡೆದು ಸಾಂಗವಾಗಿ ವೇದಾಧ್ಯಯನ ಮಾಡಿದರು; ಹಾಗೆಯೇ, ಸುಸ್ವರದಿಂದ ರಾಮ ಚರಿತ್ರೆಯನ್ನೂ ಹಾಡಿದರು. ಲವನು ತಾಳವನ್ನೂ ಕುಶನು ವೀಣೆಯನ್ನೂ ಬಾರಿಸುತ್ತ, ಇಬ್ಬರೂ ಗಾನ ಮಾಡಿ ಆಲಾಪದಿಂದ ಅಂತರಿಕ್ಷವನ್ನೂ, ಕೇಳುವವರ ಮನಸ್ಸನ್ನೂ ಆಕ್ರಮಿಸಿದರು. ವಾಲ್ಮೀಕಿಯು ಅವರಿಗೆ ಮೌರ್ವೀ ಸಹಿತವಾಗಿ ಗಟ್ಟಿಯಾಗಿದ್ದ ಧನುಸ್ಸುಗಳನ್ನು ಕೊಟ್ಟನು; ಆತನ ಸ್ನೇಹಿತನಾದ ರೈಭ್ಯನು ಎರಡು ಅಕ್ಷಯ ಬಾಣಗಳುಳ್ಳ ಬತ್ತಳಿಕೆಯನ್ನು ಕೊಟ್ಟನು. ಬಳಿಕ, ಉಳಿದ ಎಲ್ಲ ಮುನಿಗಳೂ ತಂತಮ್ಮ ತಪೋಬಲದಿಂದ ಅಸ್ತ್ರ ಸಮೂಹವನ್ನು ಕೊಟ್ಟರು. ಕೆಲವರು ಕಿರೀಟ ಕವಚಗಳನ್ನೂ ಕತ್ತಿ ಗುರಾಣಿಗಳನ್ನೂ ಕೊಟ್ಟರು. ಹೀಗೆ ಆ ಕುಮಾರರಿಬ್ಬರೂ ಧನುವನ್ನೂ ಕವಚವನ್ನೂ ಧರಿಸಿ ಕಾಕಪಕ್ಷ (ಜುಲುಪಿ) ಧರರಾಗಿ ಆಶ್ರಮದಲ್ಲಿ ಸಂಚರಿಸುತ್ತಿದ್ದರು. ಇಬ್ಬರೂ ಸೀತಾದೇವಿಗೆ ಕಾಲು ಹಿಸುಕುವುದು, ಕಂದ ಮೂಲ ಫಲಾದಿಗಳನ್ನು ತಂದು ಕೊಡುವುದು ಮೊದಲಾದ ಉಪಚಾರಗಳನ್ನು ಮಾಡುತ್ತ, ಆಕೆಯ ಪ್ರೀತಿಗೆ ಪಾತ್ರರಾದರು.

ಇತ್ತ, ಶ್ರೀರಾಮನು ಅಯೋಧ್ಯೆಯಲ್ಲಿ ರಾಜ್ಯವಾಳುತ್ತ, ಬ್ರಹ್ಮಹತ್ಯಾ ದೋಷದಿಂದ ಪೀಡಿತನಾಗಿ ಸೌಖ್ಯವಿಲ್ಲದೆ, ಆ ದೋಷ ನಿವಾರಣೆಗಾಗಿ ಅಶ್ವಮೇಧ

ವನ್ನು ಮಾಡಲಪೇಕ್ಷೆಯುಳ್ಳವನಾಗಿ ವಸಿಷ್ಠ, ವಿಶ್ವಾಮಿತ್ರ, ಗಾಲವ, ವಾಮದೇವ, ಜಾಬಾಲಿ ಮೊದಲಾದ ಋಷಿಗಳನ್ನು ಕರೆಯಿಸಿಕೊಂಡು, "ಎಲೈ ಮುನಿಗಳಿರಾ! ನಾನು ಅಶ್ವಮೇಧ ಯಾಗವನ್ನು ಮಾಡುವೆನು; ಅದಕ್ಕೆ ವಿಧಿಯೇನು? ಕುದುರೆಯು ಎಂಥದಾಗಬೇಕು? ಯಾವ ಬಗೆಯ ದಾನಗಳು? ನಾನು ಯಾವ ವ್ರತಾಚರಣೆ ಮಾಡಬೇಕು? ಎಲ್ಲವನ್ನೂ ವಿವರವಾಗಿ ತಿಳಿಸಿರಿ" ಎಂದು ಕೇಳಿದನು. ಅದಕ್ಕೆ ವಸಿಷ್ಠ ಮುನಿಯು, "ಎಲೈ ರಾಮನೇ! ಈ ಯಜ್ಞವು ಬಹು ಕಷ್ಟ ಸಾಧ್ಯ ವಾದುದು: ಕುದುರೆಯು ನೈದಿಲೆ ಮತ್ತು ಚಂದ್ರ—ಇವುಗಳ ಮೈ ಬಣ್ಣವುಳ್ಳ ದಾಗಿಯೂ, ಬಾಲದಲ್ಲಿ ಹಳದಿಯ ಬಣ್ಣವೂ ಕಿವಿಯಲ್ಲಿ ಕಪ್ಪು ಬಣ್ಣವೂ ಉಳ್ಳ ದಾಗಿಯೂ ಇರಬೇಕು. ಇಂತಹ ಕುದುರೆಯನ್ನು ಒಂದು ವರ್ಷ ಕಾಲ ರಕ್ಷಿಸಿ ಕೊಂಡಿರಬೇಕು. ಶೂರರು ಯಾರಾದರೂ ಅದನ್ನು ಹಿಡಿದು ಕಟ್ಟಿದರೆ ಅವರಿಂದ ಬಿಡಿಸಿ ತರಬೇಕು. ಕುದುರೆಯನ್ನು ಬಿಡುವುದೇ ಯಜ್ಞಕ್ಕೆ ಆರಂಭವು. ವೇದ ಪಾರಗರಾದ ಸಹಸ್ರ ಬ್ರಾಹ್ಮಣರಿಗೆ ಒಬ್ಬೊಬ್ಬರಿಗೂ ಒಂದು ಆನೆ, ಒಂದು ರಥ, ಹತ್ತು ಉತ್ತಮವಾದ ಕುದುರೆಗಳು, ಒಂದು ಭಾರದ ತೂಕ ಚಿನ್ನ, ಸುವರ್ಣಾಭರಣ ಯುಕ್ತವಾದ ನೂರು ಗೋವುಗಳು, ಒಂದು ಸೇರು ಮುತ್ತು, ಕೆಲಸದಲ್ಲಿ ಗಟ್ಟಿಗ ರಾದ ನಾಲ್ಕು ಮಂದಿ ಸೇವಕರು—ಈ ಪ್ರಕಾರವಾಗಿ ಕೊಟ್ಟು ಅವರನ್ನು ಪೂಜಿಸ ಬೇಕು. ಯಜ್ಞ ಕರ್ಮದಲ್ಲಿ ನೀನು ಸಹ ಧರ್ಮಿಣಿಯಾದ ಪತ್ನಿಯೊಡನೆ ಅಸಿಪತ್ರ ವ್ರತವನ್ನು ಮಾಡುವುದು ಹೇಗೆ? ಪತ್ನಿಯಿಲ್ಲದುದರಿಂದ ಇದು ವ್ಯರ್ಥವೆನಿಸು ವುದು" ಎಂದನು.

ಶ್ರೀರಾಮನು ಅದನ್ನು ಕೇಳಿ, "ಎಲೈ ಪ್ರಭುವೇ! ಜಾನಕಿಗೆ ಸಮಾನವಾದ ಸುವರ್ಣ ಪ್ರತಿಮೆಯನ್ನು ಮಾಡಿಸಿ ಆ ಸೀತೆಯೊಡನೆ ಆ ಉತ್ತಮ ವ್ರತವನ್ನಾಚರಿ ಸುವೆನು. ಋಷಿ ಶ್ರೇಷ್ಠರೊಡಗೂಡಿ ಅಶ್ವಮೇಧದ ಏರ್ಪಾಡನ್ನು ಮಾಡು. ಅಶ್ವ ಶಾಲೆಯಲ್ಲಿರುವ ಕುದುರೆಗಳಲ್ಲಿ ಲಕ್ಷಣ ಯುಕ್ತವಾಗಿಯೂ ಮನೋಹರವಾಗಿಯೂ ಇರುವ ಕುದುರೆಯನ್ನು ನೋಡಿ ನನಗೆ ದೀಕ್ಷೆಯನ್ನು ಕೊಡುವವನಾಗು" ಎಂದು ಹೇಳಿದನು. ಆ ಮಾತನ್ನು ಕೇಳಿ ವಸಿಷ್ಠಮುನಿಯು ಋಷಿಗಳೊಡನೆ ಸೇರಿ, ಅಶ್ವ ಶಾಲೆಗಳಲ್ಲಿ ಬಿಳಿಯ ಕುದುರೆಯನ್ನು ಹುಡುಕಿರೆಂದು ಜನರಿಗೆ ಹೇಳಿ ಹುಡುಕಿಸಿ ತರಿಸಿ, ಅವರು ತಂದ ಕುದುರೆಗೆ ಹಸುವಿನ ಹಾಲಿನಂತೆ ಶುಭ್ರ ಮುಖವೂ, ಕುಂಕುಮದಂತೆ ಕೆಂಪಾದ ಕೇಸರಗಳೂ, ಒಂದು ಕಿವಿಯಲ್ಲಿ ಕಪ್ಪು ಬಣ್ಣವೂ ಇರುವುದನ್ನು ನೋಡಿ ಆಶ್ಚರ್ಯ ಯುಕ್ತನಾಗಿ, ದಿವ್ಯವಾದ ವಸ್ತ್ರಾಲಂಕಾರಗಳಿಂದಲೂ, ಮನೋವೇಗವುಳ್ಳ ಕುದುರೆಗಳಿಂದಲೂ, ರಥಗಳಿಂದಲೂ, ಮದ ಗಜಗಳಿಂದಲೂ, ಚಿನ್ನದಂತಿರುವ ಶುಭ ಕರಗಳಾದ ಕರೆಯುವ ಹಸುಗಳಿಂದಲೂ ಸಹಸ್ರ ಬ್ರಾಹ್ಮಣರನ್ನು ಪೂಜಿಸಿದನು. ಬಳಿಕ, ಶ್ರೀರಾಮನು ಸ್ವರ್ಣ ಪ್ರತಿಕೃತಿಯಾದ ಸೀತೆಯೊಡನೆ ಯಜ್ಞ ದೀಕ್ಷಿತನಾಗಿ ಆ ಕುದುರೆಯನ್ನು ಪರಿಮಳ ಗಂಧ ಪುಷ್ಪ ಮಾಲಿಕೆಗಳಿಂದ ಪೂಜಿಸಿ ಚಾಮರದಿಂ ದಲಂಕರಿಸಿ, "ಈಗ ಕೌಸಲ್ಯೆಯು ಏಕವೀರಳಾಗಿರುವಳು. ಆಕೆಯ ಮಗನಾದ

ರಾಮನು ಮಹಾ ಬಲಶಾಲಿಯಾಗಿರುವನು. ದಶರಥ ಪುತ್ರನಾದ ಆ ರಾಮನು ಈ ಕುದುರೆಯನ್ನು ಬಿಟ್ಟಿರುವನು. ಬಲಿಷ್ಠನಾದ ರಾಜನು ಇದನ್ನು ಹಿಡಿದು ಕಟ್ಟಲಿ" ಎಂಬ ಅಭಿಪ್ರಾಯವುಳ್ಳ ಚಿನ್ನದ ಪತ್ರವೊಂದನ್ನು ಬರೆಯಿಸಿ ಆ ಕುದುರೆಯ ಹಣೆಗೆ ಕಟ್ಟಿ, ಅದರ ರಕ್ಷಣೆಗಾಗಿ ಶತ್ರುಘ್ನನನ್ನು ನೇಮಿಸಿ, ಕುದುರೆಯನ್ನು ಬಿಟ್ಟನು. ಬಲಿಷ್ಠನಾದ ಶತ್ರುಘ್ನನು ಮೂರು ಅಕ್ಷೌಹಿಣೀ ಸೇನೆಯೊಡನೆ ಹೊರಟನು.

ಆ ಕುದುರೆಯು ಶತ್ರುಘ್ನನೊಡನೆ ಹೊರಟು ಸ್ವಲ್ಪ ಕಾಲದಲ್ಲಿಯೇ ನಾನಾ ದೇಶಗಳನ್ನೂ ಪಟ್ಟಣಗಳನ್ನೂ ಉಪವನಗಳನ್ನೂ ದಾಟಿ ವಿನೋದದಿಂದ ಸಂಚರಿಸುತ್ತಿದ್ದಿತು. ದೊರೆಗಳೆಲ್ಲರೂ ಅದನ್ನು ನೋಡಿ ನಮಸ್ಕರಿಸುತ್ತ ವಿಮುಖರಾದರು. ಶೂರರೂ ಬಲಿಷ್ಠರೂ ಆಗಿದ್ದವರು ಅದನ್ನು ಹಿಡಿಯುತ್ತಿದ್ದರು. ಶೂರನಾದ ಶತ್ರುಘ್ನನು ಅವರನ್ನು ಜಯಿಸಿ ಕುದುರೆಯನ್ನು ಬಿಡಿಸುತ್ತ ಬಂದನು. ಬಳಿಕ ಆ ಕುದುರೆಯು ಶುಭಕರವಾದ ವಾಲ್ಮೀಕಿಯ ಆಶ್ರಮವನ್ನು ಹೊಕ್ಕಿತು. ಆಗ ವಾಲ್ಮೀಕಿಯನ್ನು ವರುಣನು ಯಜ್ಞಾರ್ಥವಾಗಿ ಕರೆದಿದ್ದುದರಿಂದ ಆತನು ವರುಣ ಲೋಕಕ್ಕೆ ಹೋಗಿದ್ದನು. ಕುದುರೆಯು ರಮ್ಯವಾದ ಆಶ್ರಮದ ಉಪವನವನ್ನು ಪ್ರವೇಶಿಸಿತು. ಆ ವನದಲ್ಲಿ ಫಲಭರಿತವಾದ ದಾಳಿಂಬೆಯ ಗಿಡಗಳೂ, ಚಿಗುರಿದ ಮಾವಿನ ಗಿಡಗಳೂ ತುಂಬಿದ್ದುವು. ಅಗಸೆಯ ಗಿಡಗಳಲ್ಲಿ ಹೂಗಳು ತುಂಬಿರಲು, ಅವು ಬೆಳ್ದಿಂಗಳಿಂದ ಕೂಡಿದ ರಾತ್ರಿಯಂತೆ ಪ್ರಕಾಶಿಸುತ್ತಿದ್ದುವು. ಅನೇಕ ಪುಷ್ಪ ಜಾತಿಗಳು ಅರಳಿ, ದೇವತೆಗಳಂತೆ ಹೊಳೆಯುತ್ತಿದ್ದುವು. ದ್ರಾಕ್ಷಾ ಮಂಟಪಗಳು ಘಟಯಂತ್ರಗಳಿಂದ ಶೋಭಿಸುತ್ತಿದ್ದುವು. ಗೊನೆಗಳುಳ್ಳ ಬಾಳೆಯ ಗಿಡಗಳು ಸ್ವರ್ಗ ಲೋಕದಿಂದ ಬಂದಿವೆಯೋ ಎಂಬಂತಿದ್ದುವು. ಆ ವನದ ರಕ್ಷಣೆಯನ್ನು ಮಾಡುತ್ತ ಧನುಷ್ಪಾಣಿಯಾಗಿಯೂ ಬಲಿಷ್ಠನಾಗಿಯೂ ಇದ್ದ ಲವನು ತನ್ನೆದುರಿಗೆ ಗರಿಕೆಯ ಹುಲ್ಲನ್ನು ಮೇಯುತ್ತಿದ್ದ ಕುದುರೆಯನ್ನು ಕಂಡು ಮುನಿಪುತ್ರರನ್ನು ಕರೆದು ಅವರೊಡನೆ ಅದರ ಬಳಿಗೆ ಬಂದು, ಕುದುರೆಯ ಹಣೆಯಲ್ಲಿ ಕಟ್ಟಿದ್ದ ಪತ್ರವನ್ನೋದಿಕೊಂಡನು. "ಈಗ ಕೌಸಲ್ಯೆಯು ಏಕವೀರಳಾಗಿರುವಳು. ಆಕೆಯ ಮಗನು ರಘೂದ್ವಹನಾದ ರಾಮನು. ಆತನು ಈ ಕುದುರೆಯನ್ನು ಬಿಟ್ಟಿರುವನು. ಬಲಿಷ್ಠನು ಇದನ್ನು ಹಿಡಿದು ಕಟ್ಟಲಿ" ಎಂದು ಬರೆದಿದ್ದ ಆ ಪತ್ರದ ಅಭಿಪ್ರಾಯವನ್ನು ನೋಡಿ ಬೇಗನೆ ಗ್ರಹಿಸಿ, "ನಮ್ಮ ತಾಯಿ ಬಂಜೆಯೇ! ಅವಳು ಏಕವೀರಳಲ್ಲವೇ!" ಎಂದು ಹೇಳಿ ಆ ಕುದುರೆಯನ್ನು ಹಿಡಿದನು. ಅದರ ಕೊರಲಿಗೆ ತಾನು ಹೊದೆದಿದ್ದ ಬಟ್ಟೆಯನ್ನು ತೆಗೆದು ಕಟ್ಟಿ ಬಂದು ಬಾಳೆಯ ಗಿಡಕ್ಕೆ ಬಿಗಿದನು. ಮುನಿಕುಮಾರಕರು ಇದನ್ನು ನೋಡಿ ಹೆದರಿ, ಬೇಡವೆಂದು ತಡೆದು, "ಎಲೈ ಲವನೇ! ಈ ರಾಮನ ಕುದುರೆಯನ್ನು ವೃಥಾ ಬಲಾತ್ಕಾರದಿಂದ ಹಿಡಿದು ಕಟ್ಟುತ್ತೀಯೆ. ಅಶ್ವ ರಕ್ಷಕರು ನಿನ್ನನ್ನು ಹಿಡಿದುಕೊಂಡು ಹೋಗುವರು; ಬೇಡ, ಇದನ್ನು ಬಿಟ್ಟುಬಿಡು" ಎಂದು ಹೇಳಿದರು. ಲವನು ಅವರ ಮಾತನ್ನು ನಿರಾಕರಿಸಿ ಕೋಪದಿಂದ, "ನೀವು ಮುನಿ ಸ್ತ್ರೀಯರ ಹೊಟ್ಟೆ

ಯಲ್ಲಿ ಹುಟ್ಟಿದವರು; ನಾನು ಸೀತೆಯ ಹೊಟ್ಟೆಯಲ್ಲಿ ಹುಟ್ಟಿದವನು. ಈ ಕುದುರೆಯನ್ನು ಕಟ್ಟಿ, ಈಗ ಹೆದರಿಕೆಯಿಂದ ಅದನ್ನು ಬಿಟ್ಟು ಬಿಡುವುದಕ್ಕೆ ಸೀತೆಯ ಹೊಟ್ಟೆಯಲ್ಲಿ ಹುಟ್ಟಿದ ಕ್ರಿಮಿಯೇ ನಾನು! ಸಂದೇಹಕ್ಕೆ ಕಾರಣವಿಲ್ಲ. ಮರಣವೇ ನನಗೆ ಶ್ರೇಯಸ್ಕರವಾದುದು; ನಾನು ನಾಚಿಕೆಗೀಡಾಗಲಾರೆನು" ಎಂದನು.

ಇಂತು ತುರಗ ಗ್ರಹಣವೆಂಬ ಇಪ್ಪತ್ತೊಂಬತ್ತನೆಯ ಅಧ್ಯಾಯವು.

---

## ಮೂವತ್ತನೆಯ ಅಧ್ಯಾಯ

ಬಳಿಕ, ಕುದುರೆಗಳು, ಮದಿಸಿದ ಆನೆಗಳು, ಪದಾತಿಗಳು—ಇವುಗಳಿಂದ ಕೂಡಿದ ದೊಡ್ಡ ಸೇನೆಯು ಅಲ್ಲಿಗೆ ಬಂದಿತು. ಶತ್ರುಘ್ನನ ಕಡೆಯವರಾದ ಮಹಾಬಲಶಾಲಿಗಳಾದ ಶತ ಸಹಸ್ರ ಸಂಖ್ಯೆಯುಳ್ಳ ರಥಿಕರು, "ಕುದುರೆಯೆಲ್ಲಿ? ಕುದುರೆಯೆಲ್ಲಿ?" ಎಂದು ಹೇಳುತ್ತ ಬಂದು, ಬಾಳೆಯ ಗಿಡದ ಬುಡದಲ್ಲಿ ಕಟ್ಟಿದ್ದ ಕುದುರೆಯನ್ನು ಕಂಡರು. ಮಹಾರಥಿಕರು, "ಇದನ್ನು ಕಟ್ಟಿದವರು ಯಾರು?" ಎಂದು ಅಲ್ಲಿದ್ದ ಚಿಕ್ಕ ಚಿಕ್ಕ ಬ್ರಹ್ಮಚಾರಿಗಳನ್ನು ಕೇಳಿದರು. ಅದಕ್ಕೆ ಅವರು, "ಇದೋ! ಆ ಮಾವಿನ ಮರದ ಕೆಳಗೆ ನಿರ್ಭಯದಿಂದ ನಿಂತಿರುವ, ಲವನೆಂದು ಪ್ರಸಿದ್ಧನಾದ ಆ ಹುಡುಗನೇ ಕುದುರೆಯನ್ನು ಹಿಡಿದನು" ಎಂದು ಹೇಳಿದರು. ಅದಕ್ಕೆ ಆ ರಥಿಗಳು ನಸು ನಕ್ಕು, ಈ ಹುಡುಗನು ಮೂರ್ಖನಾಗಿದ್ದಾನೆ. "ಇವನು ಅಶ್ವ ರಕ್ಷಣಾರ್ಥವಾಗಿ ಬಂದಿರುವ ನಮ್ಮ ಬಲವನ್ನು ಕಾಣನು. ಕುದುರೆಯು ಮುಂದಕ್ಕೆ ಹೊರಡುವಂತೆ ಬೇಗನೆ ಅದನ್ನು ಬಿಟ್ಟುಬಿಡಿ" ಎಂದು ಹೇಳುತ್ತಿರುವಷ್ಟರಲ್ಲಿ, ಮಹಾಬಾಹುವೂ ಬಲಶಾಲಿಯೂ ಆದ ಲವನು ಧನುಷ್ಪಾಣಿಯಾಗಿ ಅಲ್ಲಿಗೆ ಬಂದು, "ಇದೇನು! ಗರ್ವಿಷ್ಠರಾಗಿ ಈ ಶೂರರು ಕುದುರೆಯನ್ನು ಬಿಡಿಸುವಂತಿದೆ; ನನ್ನನ್ನು ಜಯಿಸಿ ಅದನ್ನು ಬಿಡಿಸಲಿ; ನಾನಿರುವಾಗ ಅದಾಗದು" ಎಂದು ಹೇಳುತ್ತಿರಲು, ಆ ಮಾತನ್ನು ಕೇಳದೆ ಕುದುರೆಯನ್ನು ಬಿಚ್ಚುವುದಕ್ಕೆ ಬಂದವರ ಕೈಗಳನ್ನು ಹರಿತವಾದ ಬಾಣಗಳಿಂದ ಲವನು ಕತ್ತರಿಸಿಹಾಕಿದನು.

ಕತ್ತರಿಸಿ ಹೋದ ಕೈಗಳುಳ್ಳ ಆ ಯೋಧರು, "ಹೊಡೆದು ಕೆಡಹಿರಿ!" ಎಂದು ಹೇಳುತ್ತಿರಲು, ಅವರೆಲ್ಲರೂ ಬಂದು ಲವನ ಮೇಲೆ ಬಾಣದ ಮಳೆಯನ್ನು ಸುರಿಸಿದರು. ಕೆಲವರು ಬಲವಾಗಿ ಸಾವಿರಾರು ಶಕ್ತ್ಯಾಯುಧಗಳನ್ನೂ ಪಾಶಾಯುಧಗಳನ್ನೂ ಪ್ರಯೋಗಿಸಿದರು. ಅವರು ಪ್ರಯೋಗಿಸಿದ ಬಾಣ ಸಮೂಹಗಳು, ಗೌತಮೀ ನದಿಯಲ್ಲಿ ಸ್ನಾನ ಮಾಡಿದವನನ್ನು ಪಾಪ ರಾಶಿಯು ಸೋಕದಂತೆ, ಲವನನ್ನು ಮುಟ್ಟಲಾರದೆ ಹೋದುವು; ಯೋಗಿಯು ಸಂಸಾರ ಬಂಧವನ್ನು ಕಡಿದುಹಾಕುವಂತೆ ಲವನು ಆ ಬಾಣಗಳನ್ನು ಕತ್ತರಿಸಿದನು. ಅವನು ಅಕ್ಷಯ ತೂಣೀರಗಳಿಂದ ಬಾಣಗಳನ್ನು ತೆಗೆದುಕೊಂಡು, ಒಬ್ಬೊಬ್ಬನ ಎದೆಗೆ ಐದೈದರಂತೆ ಹೊಡೆದನು. ಬಾಣಗಳಿಂದ ಸೊಂಡಿಲಗಳು ಕತ್ತರಿಸಿಹೋಗಿ ಆನೆಗಳು ಎರಡೆರಡು ತುಂಡುಗಳಾಗಿ ಬಿದ್ದುವು.

ಹಾಗೆಯೇ ಮಾವಟಿಗರ ತಲೆಗಳನ್ನೂ ಹರಿತವಾದ ಬಾಣಗಳಿಂದ ಕತ್ತರಿಸಿಹಾಕಿ, ಬಲಿಷ್ಠನಾದ ಲವನು ಆನೆಗಳ ಮೇಲೆ ಹೊದಿಸಿದ್ದ ಕಾಶ್ಮೀರದ ಕಂಬಳಿಗಳನ್ನೂ, ಜೋಲಾಡುತ್ತಿರುವ ಗಂಟೆಗಳನ್ನೂ, ಆನೆಗಳ ಮೇಲಣ ಗದ್ದುಗೆಗಳನ್ನೂ, ಧ್ವಜಗಳನ್ನೂ ಕತ್ತರಿಸಿಹಾಕಿದನು; ಸ್ವರ್ಣಖಚಿತವಾದ ರಥಗಳನ್ನೂ ಚಕ್ರಗಳನ್ನೂ ಕಡಾಣಿಗಳನ್ನೂ ಮೂಕೀ ಮರಗಳನ್ನೂ ಸಾರಥಿಗಳನ್ನೂ ಕತ್ತರಿಸಿ, ಕುದುರೆಗಳನ್ನೂ ಸಾರಥಿಗಳನ್ನೂ ಬಾಣಗಳಿಂದ ಹೊಡೆದು ನೋಯಿಸಿದನು. ಚಾಮರಗಳನ್ನೂ ಧ್ವಜಸ್ತಂಭಗಳನ್ನೂ ಗಟ್ಟಿಯಾದ ಬಿಲ್ಲುಗಳನ್ನೂ ಬತ್ತಳಿಕೆಗಳನ್ನೂ ಹರಿತವಾದ ಬಾಣಗಳಿಂದ ಕತ್ತರಿಸಿಹಾಕಿದನು; ಅಶ್ವಾರೋಹಕರನ್ನು ಆ ಅಶ್ವಗಳ ಸಹಿತವಾಗಿ ಕೊಂದನು; ಪದಾತಿಗಳನ್ನು ಪ್ರಾಸಾದ್ಯಾಯುಧ ಸಹಿತವಾಗಿ ಎಳ್ಳುಕಾಳಿನಂತೆ ಚೂರುಚೂರಾಗಿ ಕತ್ತರಿಸಿದನು.

ಹೀಗೆ ಲವನು ರಣಭೂಮಿಯಲ್ಲಿ ಬಹು ಸಾಹಸ ಕಾರ್ಯವನ್ನು ಮಾಡುತ್ತಿರುವಲ್ಲಿ, ಶೂರನಾದ ಶತ್ರುಘ್ನನು, ಪದಾತಿಯಾದ ಬಾಲಕನಿಂದ ತನ್ನ ಸೈನ್ಯವೆಲ್ಲವೂ ನಾಶವಾದುದನ್ನು ಕಂಡು ಕೋಪಗೊಂಡು, ರಥಾರೂಢನಾಗಿ ಧನುಷ್ಟಂಕಾರಮಾಡುತ್ತ, 'ನಿಲ್ಲು ನಿಲ್ಲು' ಎಂದು ಕೂಗುತ್ತ ಬಂದನು. ಹೀಗೆ ಹೇಳುತ್ತಿರುವ ಶತ್ರುಘ್ನನನ್ನು ಲವನು ಹತ್ತು ಬಾಣಗಳಿಂದ ಹೊಡೆದು, ಮಹೇಶ್ವರ ಸ್ಥಾನವನ್ನಾಶ್ರಯಿಸಿ, ನಿರ್ಭಯದಿಂದ ಅವನ ಎದೆಗೆ ಒಂದು ಬಾಣವನ್ನೂ, ನಾಲ್ಕು ಕುದುರೆಗಳಿಗೂ ನಾಲ್ಕು ಬಾಣಗಳನ್ನೂ ಹೊಡೆದು, ಒಂದು ಬಾಣದಿಂದ ಧ್ವಜವನ್ನೂ, ನಾಲ್ಕು ಬಾಣಗಳಿಂದ ಕಡಾಣಿಗಳನ್ನೂ, ಒಂದು ಬಾಣದಿಂದ ಧನುಸ್ಸಿನ ಮೌರ್ವಿಯನ್ನೂ ಕತ್ತರಿಸಿದನು. ಶತ್ರುಘ್ನನು ಬಿಲ್ಲಿಗೆ ಮತ್ತೊಂದು ಹುರಿಯನ್ನು ಕಟ್ಟಿ, ನಲ ಯಂತ್ರದಿಂದ ಬಾಣಗಳನ್ನೂ ಭಲ್ಲಗಳನ್ನೂ ಪ್ರಯೋಗಿಸಿ, ಮೂರು ಬಾಣಗಳಿಂದಲವನ ಹಣೆಗೆ ಹೊಡೆದನು. ಬಾಲಕನಾದ ಲವನು ಆ ಏಟಿಗೆ ನಕ್ಕು, "ಎಲೈ ಶೂರನೇ! ನನ್ನ ಹಣೆಯ ಮೇಲೆ ಬಿದ್ದುವು ಕಮಲ ಪುಷ್ಪಗಳೇನು? ನಿನ್ನ ಸಂಪೂರ್ಣ ಶಕ್ತಿಯು ಇಷ್ಟೇ ಎಂದು ತೋರುತ್ತದೆ" ಎಂದು ಹೇಳುತ್ತ, ನಾಲ್ಕು ಹರಿತವಾದ ಬಾಣಗಳನ್ನು ಹೊಡೆದು ನಾಲ್ಕು ಕುದುರೆಗಳನ್ನೂ ಯಮಪುರಕ್ಕೆ ಕಳುಹಿಸಿದನು; ಒಂದು ಬಾಣದಿಂದ ಸಾರಥಿಯ ತಲೆಯನ್ನಪಹರಿಸಿದನು; ಎತ್ತರವಾದ ಧ್ವಜವನ್ನು ಎರಡು ಬಾಣಗಳಿಂದ ಕತ್ತರಿಸಿದನು; ಶತ್ರುಘ್ನನ ಗಟ್ಟಿಯಾದ ಬಿಲ್ಲನ್ನು ಎರಡು ತುಂಡಾಗಿ ಕತ್ತರಿಸಿದನು. ಶತ್ರುಘ್ನನು ಕುದುರೆಗಳು, ಸಾರಥಿ, ಬಿಲ್ಲು, ತೇರು—ಇವುಗಳನ್ನು ಕಳೆದುಕೊಂಡು ಕುಪಿತನಾಗಿ, ಮತ್ತೊಂದು ಬಿಲ್ಲನ್ನು ತೆಗೆದುಕೊಂಡು ಹೆದೆಯನ್ನೇರಿಸಿ, ಹಳದಿಯ ಬಣ್ಣವಾಗಿ ಹರಿತವಾಗಿಯೂ ಹದ್ದಿನ ಗರಿಗಳಿಂದಲಂಕೃತವಾಗಿಯೂ ಇರುವ ಬಾಣವೊಂದನ್ನು ಸಂಧಾನ ಮಾಡಿ, "ಎಲೈ ಶಿಶುವೇ! ಈಗ ಓಡಿಹೋಗು; ಇಲ್ಲದಿದ್ದರೆ ನೀನು ಮೃತನಾಗುವೆ; ನನಗೆ ನಿನ್ನಲ್ಲಿರುವ ದಯೆಯು ನನ್ನನ್ನು ಬಾಧಿಸುತ್ತಿರುವುದು" ಎಂದು ಹೇಳಲು, ಅದನ್ನು ಕೇಳಿ, ಬಲಶಾಲಿಯಾದ ಲವನು ಕುಪಿತನಾಗಿ, ಆ ಬಾಣವನ್ನು ಎರಡು ತುಂಡಾಗಿ ಕತ್ತರಿಸಲು, ಹಿಂದಣಿಂದಲೂ ಸ್ವರ್ಗದಲ್ಲಿದ್ದವರು

ಪಾಪ ಶೇಷಕ್ಕಾಗಿ ಸ್ವರ್ಗದ ದೆಸೆಯಿಂದ ಹೇಗೆ ಬಿದ್ದು ಹೋಗುವರೋ, ಕೂಟ ಸಾಕ್ಷ್ಯ ನುಡಿದವರು ವ್ಯವಹಾರದಿಂದ ಹೇಗೆ ಬಿದ್ದುಹೋಗುವರೋ ಹಾಗೆ ಅದು ನೆಲಕ್ಕೆ ಬಿದ್ದುಹೋಯಿತು. ಅದನ್ನು ನೋಡಿ ಶತ್ರುಘ್ನನು ಆಶ್ಚರ್ಯ ಯುಕ್ತನಾಗಿ ಮತ್ತೊಂದು ಬಾಣವನ್ನು ತೆಗೆದುಕೊಂಡನು. ಯಮುನಿಗೆ ಸಮಾನವಾದ ಆ ಬಾಣವನ್ನು ಅವನು ಆರೋಪಿಸುವಷ್ಟರಲ್ಲಿಯೇ ಲವನು ಕೋಪದಿಂದ ಅದನ್ನು ಕತ್ತರಿಸಿಹಾಕಿದನು.

ಬಳಿಕ ಶತ್ರುಘ್ನನು, ಹಿಂದೆ ಲವಣಾಸುರನನ್ನು ಸಂಹರಿಸಿದ ಸೂರ್ಯಾಗ್ನಿಗಳಿಗೆ ಸಮಾನವಾದ ಕಾಂತಿಯುಳ್ಳ ಧನುವನ್ನೂ ಬಾಣವನ್ನೂ ತೆಗೆದುಕೊಂಡು ಹೂಡಿ, "ನೀನು ಸಾಯುತ್ತೀಯೆ!" ಎಂದು ಹೇಳುತ್ತ ಲವನ ಮೇಲೆ ಅದನ್ನು ಪ್ರಯೋಗಿಸಿದನು. ಲವನು ಆ ಬಾಣವು ಅಮೋಘವಾದುದೆಂದು ತಿಳಿದು ಕುಶನನ್ನು ನೆನೆದು, "ಈಗ ನಮ್ಮ ಅಣ್ಣನಾದ ಕುಶನು ಇಲ್ಲಿದ್ದಿದ್ದರೆ ನನಗೆ ಈ ಬಾಣದ ಭಯವಿರುತ್ತಿರಲಿಲ್ಲ" ಎಂದು ಹೇಳುತ್ತ, "ಜಾನಕಿಯ ಸತ್ಯ ಪ್ರಭಾವದಿಂದಲೂ, ಪಾತಿವ್ರತ್ಯ ಮಹಿಮೆಯಿಂದಲೂ ಈ ಬಾಣವನ್ನು ಕತ್ತರಿಸುವೆನು; ಅದರಿಂದ ನನಗೆ ಕೀರ್ತಿಯುಂಟಾಗುವುದು" ಎಂದು ಹೇಳಿ, ತಾನು ಒಂದು ಬಾಣವನ್ನು ಬಿಡಲು, ಅದು ಶತ್ರುಘ್ನನು ಪ್ರಯೋಗಿಸಿದ ಬಾಣವನ್ನು ಮಧ್ಯಕ್ಕೆ ಕತ್ತರಿಸಿತು: ಅದರ ತುದಿಯ ಅರ್ಧ ಭಾಗವು ಕತ್ತರಿಸಿ ನೆಲಕ್ಕೆ ಬಿದ್ದಿತು; ಉಳಿದ ಅರ್ಧ ಭಾಗವು ಕೆಳಕ್ಕೆ ಬೀಳದೆ ಲವನ ಧನುವನ್ನೂ ಎದೆಯನ್ನೂ ಭೇದಿಸಿತು. ಜುಲುಪಿಗಳಿಂದ ಮನೋಹರವಾದ ವೇಷವುಳ್ಳ ಆ ಲವನು ಧನುಸ್ಸು ಮುರಿದುಹೋದುದರಿಂದಲೂ, ಎದೆಗೆ ಏಟು ಬಿದ್ದುದರಿಂದಲೂ ರಕ್ತದಿಂದ ನೆನೆದ ದೇಹವುಳ್ಳವನಾಗಿ ಪ್ರಜ್ಞೆ ತಪ್ಪಿ, ಚೇತನ ಶೂನ್ಯನಾದನು. ಬಳಿಕ, ಶತ್ರುಘ್ನನ ಸೈನ್ಯದಲ್ಲಿ ಸತ್ತುಳಿದ ಯೋಧರು ಸಂತೋಷದಿಂದ ಭೇರಿ ಶಂಖಗಳನ್ನು ಬಾರಿಸುತ್ತ ಆರ್ಭಟಿಸಿದರು. ಶತ್ರುಘ್ನನ ಕಡೆಯ ಶೂರರು, ಹೆದರಿದ ಲವನನ್ನು ನೋಡಿ ಕುದುರೆಯನ್ನು ಬಿಡಲು, ಅದು ಉಪವನದಲ್ಲಿ ಸುತ್ತಾಡುತ್ತಿದ್ದಿತು. ಕೃಪಾಶಾಲಿಯಾದ ಶತ್ರುಘ್ನನು ಲವನನ್ನು ಕೈಯಿಂದ ಹಿಡಿದೆಬ್ಬಿಸಿ, "ಈ ಬಾಲಕನು ರಾಮನಂತೆ ಆಕಾರವುಳ್ಳವನಾಗಿರುವನು; ಇವನಿಗೆ ನೀರನ್ನು ತಟ್ಟಿರಿ" ಎಂದು ಹೇಳಿದನು. ಆಗ ಶತ್ರುಘ್ನನ ಸೇವಕರು ಬೇಗನೆ ನೀರನ್ನು ತಂದು ಲವನ ಮೇಲೆ ಚಿಮುಕಿಸಿ, ಚೇತರಿಸಿಕೊಂಡ ಅವನನ್ನು ರಥದ ಮೇಲೆ ಕುಳ್ಳಿರಿಸಿಕೊಂಡು ಕುದುರೆಯ ಹಿಂದೆ ತಾವೂ ಹೊರಟುಹೋದರು.

ಇಂತು ಲವ ಮೂರ್ಛಾ ಪ್ರಾಪ್ತಿಯೆಂಬ ಮೂವತ್ತನೆಯ ಅಧ್ಯಾಯವು.

---

# ಪತ್ರ ವ್ಯವಹಾರ

## **ಪಿರಿಯಕ್ಕರಂ** (ಕನ್ನಡ); **ಮಹಾಕ್ಕರ** (ತೆಲುಗು)

೧. ಕನ್ನಡದಲ್ಲಿಯೂ ತೆಲುಗಿನಲ್ಲಿಯೂ **ಅಕ್ಕರ**ಗಳೆಂಬ ಜಾತೀಯಚ್ಚಂದೋವಿಶೇಷಗಳುಂಟು. ದ್ರಾವಿಡ ಭಾಷೆಗಳಲ್ಲಿ, ಇವು ಈ ಎರಡು ಭಾಷೆಗಳಲ್ಲಿ ಮಾತ್ರವೇ ಇರುವುವು. ಕನ್ನಡದಲ್ಲಿರುವ **ಪಿರಿಯಕ್ಕರ**ಕ್ಕೆ ಸರಿಯಾಗಿ ತೆಲುಗಿನಲ್ಲಿ **ಮಹಾಕ್ಕರ**ವೆಂಬುದುಂಟು. ಈ ಪದ್ಯಲಕ್ಷಣದ ವಿಷಯದಲ್ಲಿ ಕೆಲವು ಕ್ಲಿಷ್ಟವಾದ ಸಂದರ್ಭಗಳಿರುವುದರಿಂದ ಅದರ ವಿಚಾರವನ್ನು ಇಲ್ಲಿ ಮಾಡಬೇಕಾಯಿತು.

೨. ಈ ವಿಚಾರಕ್ಕೆ ಉಪೋದ್ಘಾತವಾಗಿ, **ಅಕ್ಕರ**ಗಳಲ್ಲಿ ಬರುವ ಗಣಗಳನ್ನು ವಿಚಾರಿಸಬೇಕು. ಈ ಗಣಗಳ ವಿಷಯದಲ್ಲಿ ಕನ್ನಡಕ್ಕೂ ತೆಲುಗಿಗೂ ಕೆಲವು ಭೇದಗಳಿವೆ.—

| ಕರ್ಣಾಟಕ | | ತೆಲುಗಿನ |
|---|---|---|
| ಬ್ರಹ್ಮ ಗಣಗಳು | | ಸೂರ್ಯ ಗಣಗಳು |
| ೧. ಗಗ —— | .. | ೧. ಇಲ್ಲ |
| ೨. ಸ ∪∪— | .. | ೨. ಇಲ್ಲ |
| ೩. ಗಲ —∪ | .. | ೩. ಗಲ —∪ |
| ೪. ನ ∪∪∪ | .. | ೪. ನ ∪∪∪ |
| ವಿಷ್ಣು ಗಣಗಳು | | ಇಂದ್ರ ಗಣಗಳು |
| ೧. ಮ ——— | .. | ೧. ಇಲ್ಲ |
| ೨. ಸಗ ∪∪—— | .. | ೨. ಇಲ್ಲ |
| ೩. ರ —∪— | .. | ೩. ರ —∪— |
| ೪. ನಗ ∪∪∪— | .. | ೪. ನಗ ∪∪∪— |
| ೫. ತ ——∪ | .. | ೫. ತ ——∪ |
| ೬. ಸಲ ∪∪—∪ | .. | ೬. ಸಲ ∪∪—∪ |
| ೭. ಭ —∪∪ | .. | ೭. ಭ —∪∪ |
| ೮. ನಲ ∪∪∪∪ | .. | ೮. ನಲ ∪∪∪∪ |
| ರುದ್ರ ಗಣಗಳು | | ಚಂದ್ರ ಗಣಗಳು |
| ೧. ಮಗ ———— | .. | ೧. ಇಲ್ಲ |
| ೨. ಸಗಗ ∪∪——— | .. | ೨. ಇಲ್ಲ |

| ರುದ್ರ ಗಣಗಳು | | ಚಂದ್ರ ಗಣಗಳು |
|---|---|---|
| ೩. ರಗ – ᴗ – – | .. | ೩. ರಗ – ᴗ – – |
| ೪. ನಗಗ ᴗᴗᴗ – – | .. | ೪. ನಗಗ ᴗᴗᴗ – – |
| ೫. ತಗ – – ᴗ – | .. | ೫. ತಗ – – ᴗ – |
| ೬. ಸವ ᴗᴗ – ᴗ – | .. | ೬. ಸವ ᴗᴗ – ᴗ – |
| ೭. ಭಗ – ᴗᴗ – | .. | ೭. ಭಗ – ᴗᴗ – |
| ೮. ನವ ᴗᴗᴗᴗ – | .. | ೮ ನವ ᴗᴗᴗᴗ – |
| ೯. ಮಲ – – – ᴗ | .. | ೯. ಮಲ – – – ᴗ |
| ೧೦. ಸಹ ᴗᴗ – – ᴗ | .. | ೧೦. ಸಹ ᴗᴗ – – ᴗ |
| ೧೧. ರಲ – ᴗ – ᴗ | .. | ೧೧. ರಲ – ᴗ – ᴗ |
| ೧೨. ನಹ ᴗᴗᴗ – ᴗ | .. | ೧೨. ನಹ ᴗᴗᴗ – ᴗ |
| ೧೩. ತಲ – – ᴗᴗ | .. | ೧೩. ತಲ – – ᴗᴗ |
| ೧೪. ಸಲಲ ᴗᴗ – ᴗᴗ | .. | ೧೪. ಸಲಲ ᴗᴗ – ᴗᴗ |
| ೧೫. ಭಲ – ᴗᴗᴗ | .. | ೧೫. ಭಲ – ᴗᴗᴗ |
| ೧೬. ನಲಲ ᴗᴗᴗᴗᴗ | .. | ೧೬. ನಲಲ ᴗᴗᴗᴗᴗ |

೩. ನಾಗವರ್ಮನು ತನ್ನ ಛಂದಸ್ಸಿನಲ್ಲಿ **ಪಿರಿಯಕ್ಕರಕ್ಕೆ** ಕೊಟ್ಟಿರುವ ಲಕ್ಷಣ.—

ಪ್ರಥಮ ತೃತೀಯ ಪಾದಗಳಲ್ಲಿ ಕ್ರಮವಾಗಿ—ಒಂದು ಅಜ ಗಣ, ಐದು ವಿಷ್ಣು ಗಣಗಳು, ಒಂದು ರುದ್ರ ಗಣ;

ದ್ವಿತೀಯ ಚತುರ್ಥ ಪಾದಗಳಲ್ಲಿ ಕ್ರಮವಾಗಿ—ಒಂದು ಅಜ ಗಣ, ನಾಲ್ಕು ವಿಷ್ಣು ಗಣಗಳು, ಒಂದು ಅಜ ಗಣ, ಒಂದು ರುದ್ರ ಗಣ.

ಕಿಟ್ಟೆಲ್ (Kittel) ಅವರು ಸಂಪಾದಿಸಿದ ಮುದ್ರಿತ ಗ್ರಂಥದಲ್ಲಿರುವ ಪಾಠಾಂತರಗಳಲ್ಲಿ, ಮೊದಲೆರಡರಲ್ಲಿಯೂ ಲಕ್ಷಣವು ಮೇಲಿನ ಹಾಗೆ ಇದ್ದರೂ, ಆ ಪಾಠಾಂತರಗಳಾದ ಪದ್ಯಗಳು ಆ ಲಕ್ಷಣಕ್ಕೆ ಸರಿಯಾಗಿಲ್ಲ. ಮಿಕ್ಕ ಪಾಠಾಂತರ ಪದ್ಯಗಳಲ್ಲಿ ಅಜ ಗಣಗಳೆಂಬುದಕ್ಕೆ ಜಗಣಗಳೆಂದೂ, ಎರಡನೆಯ ಪಾದದ ಆರನೆಯ ಸ್ಥಾನದಲ್ಲಿ ಅಜ ಗಣವಿರುವುದೆಂಬುದಕ್ಕೆ ನಾಲ್ಕನೆಯ ಸ್ಥಾನದಲ್ಲಿರುವುದೆಂದೂ ಇದೆ.

೪. ಕವಿ ರತ್ನ ತ್ರಯವಾದ ಪಂಪ, ರನ್ನ, ಪೊನ್ನ—ಇವರ ಗ್ರಂಥಗಳಲ್ಲಿ, ರನ್ನನು ಪಿರಿಯಕ್ಕರವನ್ನು ಉಪಯೋಗಿಸಿದಹಾಗಿಲ್ಲ. ಪಂಪ ಭಾರತದಲ್ಲಿ ಏಳು, ಆದಿ ಪುರಾಣದಲ್ಲಿ ಮೂರು, ಪೊನ್ನನ ಶಾಂತಿಪುರಾಣದಲ್ಲಿ ಐದು ಪಿರಿಯಕ್ಕರಗಳಿವೆ. ಅವುಗಳಲ್ಲಿ, ನಾಗವರ್ಮನು ಕೊಟ್ಟಿರುವ ಪಿರಿಯಕ್ಕರದ ಲಕ್ಷಣಕ್ಕೆ ಸರಿಯಾಗಿರುವ ಪದ್ಯವೊಂದಾದರೂ ಇಲ್ಲ. ಆ ಪದ್ಯಗಳನ್ನು ಸಮಷ್ಟಿ ದೃಷ್ಟಿಯಿಂದ ನೋಡಿದರೆ, ಅಕ್ಕರದ ಲಕ್ಷಣವು, ನಾಲ್ಕು ಪಾದಗಳಲ್ಲಿಯೂ ಒಂದು ಅಜ, ಐದು ವಿಷ್ಣು, ಒಂದು ರುದ್ರ

ಗಣಗಳಿರಬೇಕಾದ ಹಾಗೆ ತೋರುತ್ತದೆ. ಈ ಹೊಸ ಲಕ್ಷಣಕ್ಕೆ ಸರಿಯಾಗಿ ಈ ಕೆಳಗಿನ ಪದ್ಯಗಳಿವೆ:—

ಪಂಪ ಭಾರತ, V. ೪೧

(೧) ಆಡ। ಲಾಡಿಸಲ್। ಪಾಱುಯಂ। ನಿಱಿಸಲುಂ। ಪರಿಗೊಳಲ್। ತೊವಲಿಕ್ಕ। ಲೊಳಗಂ। ಬರಲ್ ।
ಕಾಡ। ಬೇಲಿಯಂ। ವಾರ್ಕಾಡ। ನಱುಯಲುಂ। ಮೂಡಿಗೆ। ಕಕ್ಕುಂಬಂ। ಸುಱುಸಿ ಜೊಂಪಂ ॥
ಬೀಡು। ಬಿಡುವಿಂಬು। ಕದಳಿ ತೆಂ। ಗಿನ ತಾಣಂ। ಜಾಣಿಂ ನೀ। ದಾರ್ಣಮೆಂ। ದೆಡೆಯುಱುದುಂ ।
ಮಾಡಲ್। ಮಾಡಿಸಲ್। ಪಡೆ ಮೆಚ್ಚೆ। ನೀಂ ಬಲ್ಲೆ। ನೀಂ ಮೆಚ್ಚೆ। ಹರಿಗ ಕೇ। ಳಾನೆ ಬಲ್ಲೆಂ ॥

ಪೊನ್ನನ ಶಾಂತಿ ಪುರಾಣ, X. ೬೬

(೨) ಎಳೆಯೊ। ಳಬ್ಬಿದು। ಸಾಸಿರ। ಯೋಜನಂ। ಗಗನಕ್ಕೆ। ತೊಂಬತ್ತೊಂ। ಭಯ್ನಾಸಿರಂ ।
ಬಳೆದು। ದಂತಿದಂ। ಚಂದ್ರಾದಿ। ತ್ಯ ಗ್ರಹ। ನಕ್ಷತ್ರ। ತಾರಕಾ। ನಿಕರಮೆಂದುಂ ॥
ಬಳಸು। ತ್ತಿರ್ಪುದು। ನಾಲ್ಕುವ। ವನಗಳೊಳ್। ಪದಿನಾಱು। ಕೃತ್ರಿಮ। ಜಿನ ಗೃಹಂಗಳ್ ।
ಕುಳ ನ। ಗಂಗಳ। ಕುಲ ದೈವ। ಮಧಿರಾಜಂ। ತಾಯ್ಗಿರಿ। ಮೇರು ಮ। ಹೀಧರೇಂದ್ರಂ ॥

ಈ ಕೆಳಗಣ ಪದ್ಯಗಳಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿದರೆ ಹಿಂದೆ ಹೇಳಿದ ಲಕ್ಷಣವನ್ನು ಹೊಂದುತ್ತವೆ:—

ಪಂಪ ಭಾರತ, XIII. ೧೨೮

(೩) ಬಿಳಿಯ। ತಾವರೆ। ಯೆಸಱೊಳ್ [1]। ಮಾಡಿದ। ಬೆಳ್ಗೊಡೆ। ರಯ್ಯಮಾ। ಗೆಡದ ಕೆಯ್ಯೊಳ್ ।
ಪೊಳೆವ। ಚೆಂಬೊನ್ನ। ಕಾವಿನ। ಚಾಮರ। ಮಮರ್ದಿರೆ [2]। ಭೇರಿ ಸಿಂ। ಹಾಸನ[ಮುಂ] ॥
ಬಱುಯೊಳ್। ಜವಂ ಮಿ [3]। ಳಿರೆ ರಾಜ್ಯ। ಚಿಹ್ನಂಗಳ್। ವೆರಸಿಂತು। ನಡೆತಂದು। ರಾಜ್ಯಲಕ್ಷ್ಮಿ ।
* ಬಳೆದ। ಸಂತೋಷ। ದಂತಮ। ನೆಯ್ದೆ ಪ। ತ್ತಿದಳ್. ಮ [4]। ನೋಜನಂ। ನಾಡೋಜನಂ ॥

ಪಂಪ ಭಾರತ, XIV. ೫೫

(೪) ತುಡುಗೆ। ನಿಚ್ಚಲುಂ। ಪಂಚ ರ। ತ್ನಂಗಳುಂ। ಪೊಱಮಡೆ। ತನ್ನುಡು। ಪುಪ್ಪಟಂಗಳ್ ।
ಮಡಿಯೊ। ಳಾಗೆಯು। ಮೞ್ಕರಿಂ। ಕಂಡಾಗಳ್। ಪಿರಿಯ ಬಿ। ತ್ತರಿಗೆಯಂ। ಕೆಲದೊಳಿಕ್ಕಿ ॥
ಕೊಡುವ। ಬಾಡಕ್ಕಂ। ಜೀವ ಧ। ನಂಗಳ್ಗಂ [5]। ಬಿಡುವೆಣ್ಗಂ [6]। ಲೆಕ್ಕಮಿ। ಲ್ಲೆನಿಸಿ ರಾಗಂ ।
ಗಿಡದೆ ಕೊಂಡಾಡಿ ದಂ। ಬಲ್ಲಹ [7]। ನಱುಯೆ ಗು। ಣಾರ್ಣವಂ। ಕವಿತಾ ಗು। ಣಾರ್ಣವನಂ ॥

ಆದಿ ಪುರಾಣ, XI. ೧೦೯

(೫) ಸೊಡರ। ಬೆಳಗಿನೊಳ್। ಕೊರಗುವ। ಜಾಜಿಯಂ। ತುಂಬಿಯೊಳ್। ಪಗೆಗೊಂಡ। ಸಂಪಗೆಯಂ ।
ಮುಡಿಯೆ। ಸೊಗಯಿಸಿ। ದದಿರ್ಮುತ್ತೆ। ಯಲರಂ ಮ। ಸಿಯೊಳೆ ಸ। ವನಾದ [8]। ಗೊಜ್ಜಗೆಯಂ ॥
ನುಡಿಯ। ಲಕ್ಕುಮೆ। ಪೂಗಳ। ಲೆಕ್ಕಮ। ನೆಂದೆಯ್ದೆ। ಕಾಮನೊ। ಡ್ಡೋಲಗದೊಳ್ ।
ಮುಡಿಗೆ। ಯಿಕ್ಕಿಯುಂ। ಕೈಯುನೆ। ತ್ತಿ ಪೊಗಳ್ವಂ [9]। ತಣಿಯನೆ। ಮದನನುಂ। ಮಲ್ಲಿಗೆಯಂ ॥

* ಈ ಪಾದವು ತಪ್ಪು: "ಬಳೆದ ಸಂತೋಷದಂತಮನೆಯ್ದೆ ಪತ್ತಿದಳ್ ಸಹಜ ಮನೋಜನಂ ನಾಡೋಜನಂ" ಎಂದಿರಬೇಕು.—ಸಂಪಾದಕ.

(1) ಯೆಸಱೊಳ್ಸ್ತ್ರ, (2) ಶಿಥಿಲ ಗಣ, (3) ಜವಮುಮಿಮ್ಮ, (4) ತ್ತಿದಳುಮ, (5, 6) ಶಿಥಿಲ ಗಣಗಳು, (7) 'ಹ' ಲೋಪ, (8) ವನವಾದ, (9) ಶಿಥಿಲ ಗಣ—ಇರಬೇಕು.

ಶಾಂತಿ ಪುರಾಣ, X. ೯

(೬) ನಿಡಿಯ| ಬಳ್ಳಿಯ| ತುಱುಗೆವೆ| ಗಣ್ಗಳಂ| ಕೆಸ್ನೆಯ| ನೆಯ್ದಿದ| ಪುರ್ವುಗಳಂ |
ಪೊಡವಿ| ಷಟ್ಪಂಡ| ಕ್ಕಡಿಯಿಡು| ವಡಿಗಳಂ| ತೊಳಗಿ [1]| ಬೆಳಗುವ| ಪೆಱ ನೊಸಲಂ ||
ಪಡೆದ| ಕಾಮದೇ| ವತ್ವಮ| ನವಗ್ಯಿ| ಸ್ಸವಂತಿರ್ದ [2]| ರೂಪಿನ| ಬಾಲಕನಂ |
ಬಡವಂ| ಮಾಣಿಕಂ| ಬೆತ್ತಂತೆ| ರಾಗದಿ| ನೆತ್ತಿಕೊಂ| ಡಿಂದ್ರನ| ದೇವಿ ಬಂದಳ್ ||

ಶಾಂತಿ ಪುರಾಣ, X. ೬೭

(೭) ಇದಱ| ತಪನೀಯ| ಸಾನುಗಳ್| ಜಿನ ಸವ| ಗಂಧೋದ| ಕಂಗಳಿಂ| ಪೂವಲಿಯಂ |
ಮುದದೆ| ತಲೆಯೊಳ್ [3]| ಪೊತ್ತಂ [4]| ತಿರ್ಪುವು [5]| ಮೇರುವೆಂ| ತಂತತಿ| ವಿಭಕ್ತಂಗಳ್ [6] ||
ಮದನ| ವೈರಿಗಾ| ಸಂದಿಯಾ| ದುದು ಯಥಾ| ರಾಜಾ ತ| ಥಾ ಪ್ರಜಾಃ| ಎಂಬ ಪಡೆ|
ದಿದನೆ| [ಪಡೆವಾತಂ]| ನುಡಿವುತ್ತು| ಮಮರೇಂದ್ರ| ನೆಯ್ದಿದಂ| ಹಸ್ತಿನ| ಪುರವರಮಂ ||

ಶಾಂತಿ ಪುರಾಣ, X. ೮೭

(೮) ನಡೆಯೆ| ನಡೆದುಂ [7]| ಕುಳ್ಳಿರೆ| ಕುಳ್ಳಿರ್ದುಂ| ನಿಲೆ ನಿಂದುಂ| ಪವಡಿಸೆ| ಪಕ್ಕದಿರ್ದುಂ |
ನುಡಿಯೆ| ಜೀಯೆಂದುಂ| ಬಾಯ್ಗಳಂ| ಮುಚ್ಚಿರ್ದು| ದಿವ್ಯ ನಿ| ನಾದಮ| ನಾಲಿಸಿಯುಂ ||
ಮಿಡುಕ| ದುಸಿರದೆ| ನುಡಿಯದೆ| ವೋ ನಂಗೊಂ| ಡಿನಿಸಿರ್ದ| ಧಿಪತಿಗೆ| ನಿಚ್ಚಂ [ಮೆಚ್ಚಂ] |
ಪಡೆದು| ನಚ್ಚಿನ| ನಾಕಿ ನಿ| ಕಾಯಮು| ಮಗಲವ| ಹೋರಾತ್ರ| ಮೋಲಗಿಕುಂ ||

ಈ ಕೆಳಗಣ ಪದ್ಯಗಳಲ್ಲಿ ಕೆಲವು ಪಾದಗಳಲ್ಲಿ ಹೆಚ್ಚಾದ ಮಾರ್ಪಾಡನ್ನು ಮಾಡಬೇಕು:—

ಪಂಪ ಭಾರತ, V. ೪೩

(೯) ಮೃಗಮಂ| ಗಾಳಿಯಂ| ನಿರ್ಕೆಯಂ| ಪಕ್ಕೆಯಂ| ಗಣಿದನುಂ| ಕಂಡಿಯಂ| ಮಾರ್ಕಂಡಿಯಂ |
ಪುಗಿಲಂ| ಪೋಗಂ| ಬಾ| ರಿಯಂ| ಸ| ನ್ನೆಯಂ| ನೂ| ಱುವರುಚರ್ಚ್ರ ವ [8]| ನಿಲ್ವೆಡೆಯಂ ||
ಬಗೆಯಂ| ತೆಗೆಯನ| ಲ್ಲಾಟಮಂ| ಕಾಟಮಂ| ನೋವುದಂ| ಸಾವುದ| ನೆಲ್ಲಂದದಿಂ |
ಬಗೆದಾ| ಗಳರಸ| ರೊಳೆಲ್ಲ [9] ಕೇಳ್| ನೀಂ ಬಲ್ಲೆ| ಜೀಂಟಿಕಾ| ಱರೊಳೆಲ್ಲ| ಮಾನೆ ಬಲ್ಲೆಂ ||

ಪಂಪ ಭಾರತ, V. ೪೬

(೧೦) ನೆಲಸಂ| ನಿಱುಗೆಯಂ| ನಡೆಪೊಂದು| ಪದಮುಮಂ| ಸೋವಳಿ| ಮೋವಳಿ| ಬಿಸುವಳಿಯಂ |
ಬಲಮಂ| ಶಕುನನು| ನೊಳ್ಳಿತ್ತು| ಪಾಯಮಂ| ಪಿಡಿವಂದೀ| ತನೆ ವಂದಿ| ಕುರುಡು ಕುಂಟೆಂ ||
ದಲಸ| ದಱಿದಿಂತು| ಬಲ್ಮೆಗೆ| ಬೆರಲೆತ್ತಿ| ಪಜ್ಜೆಯಂ| ನೆಲೆಗಳಂ| ಕಿಡಲೀಯದೆ |
ಸಿಲೆಯ| ಮೇಲಾದೊ| ಡಂ| ಶಕುನ [10]| ಮಂ| ನಿಱಿಪಂ [11]| ತೆನಿ ಱಿಸುವೆಂ [12]| ಪಂದಿಯಂ|
ನೀಂ ಮೆಚ್ಚಲುಂ||

ಇದರಲ್ಲಿ ನಾಲ್ಕನೆಯ ಪಾದವು ಕೆಟ್ಟುಹೋಗಿದೆ.

(1) ತೊಳಗಿಯುಂ, (2) ಶಿಥಿಲ ಗಣ, (3) ತಲೆಯೊಳಂ, (4) ಪೊತ್ತಂತೆ, (5) ಯಿಂಪುರ್ಪುವು, (6) ಭಕ್ತಂಗಳು—ಇರಬೇಕು, (7) 'ನಡೆಯುತುಂ' ಎಂದಿರಬೇಕು. (8) 'ವ(ಸಲುವ?)' ಎಂದಿರಬೇಕೊ ಏನೊ? (9) 'ಲ್ಲ' ಶಿಥಿಲಾಕ್ಷರ, (10) ಡೆ ಶಕುನ, (11) ಮನಿಱಿಪಂ, (12) ತೆ ನಿಱಿಪೆ—ಎಂದಿರಬೇಕೊ ಏನೊ?

ಪಂಪ ಭಾರತ, V. ೪೭

(೧೧) ಪಸಿವು। ದೊರೆಕೊಳ್ಗು। ಮುಣಿಸುಗ। ಳಿನಿಕೆಯ್ಯು್ಗ। ಮಾವಂದ। ದೊಳ್ ಕನ। ಲ್ದಾದ ಮೆಯ್ಯ।
ನಸಿಯ। ನಾಗಿಪು। ದುಳಿದುವ। ಪ್ಪುವು ಬಗೆ। ಗೊಳಲಪ್ಪು ದು। ಮೃಗದ ಮೆಯ್ಯೊಳ್ ॥
ನಿಸದ। ಮೆಸೆವುದು। ಬಲ್ಲಾಳ। ಬಿಲ್ಬಲ್ಮೆ। ತನ್ನೊಳ। ಮಿಸುತೆ। ಲೇಸಪ್ಪುದು।
ಬಸನ। ಮೆಂದಜ಼। ಯದೇಳಿ। ಸುನರ್ ಬೇಂ। ಟೆಯುಂ ಬೇಂ। ಟೆಯೆ ಬಿನ। ದಂ। ಗಳರಸಲ್ತೇ ॥

ಈ ಪದ್ಯದ ಪಾಠಾಂತರವು ರೈಸ್ ಅವರು ಪ್ರಕಟಿಸಿರುವ ಮುದ್ರಣದಿಂದ—

ಪಸಿವು। ದೊರೆಕೊಳ್ಗು। ಮುಣಿಸುಗ। ಳಿನಿಕೆಯ್ಯು್ಗ। ಮಾವಂದ। ದೊಳ್ಕನ। ಲ್ದಾದಮೆಯ್ಯುಂ।
ಮಸಿಯ। ನಾಗಿಪ। ದುಳಿದುವ। ಪ್ಪುವು ಬಗೆ। ಗೊಳಲಪ್ಪು। ದು ಮೃಗದ। ಮೆಯ್ಯೊಳ್ನಿಸದ॥
ಮೆಸೆವು। ದಂ ಬಲ್ಲಾ। ಳ ಬಿಲ್ಬ। ಲ್ಮೆ ತನ್ನೊ। ಳಮಿಸುತೆ। ಲೇಸಪ್ಪುದು।
ಬಸನ। ಮೆಂದಜ಼। ಯದೆಳಸು। ವರ್ಬೇಂಟೆ। ಯಂ ಬೇಂಟೆ। ಯ ಬಿನದಂ। ಗಳರಸಲ್ತೆ ॥

ಈ ಪದ್ಯವನ್ನು ಹೀಗೆ ತಿದ್ದಬೇಕೊ ಏನೊ!

ಪಸಿವು। ದೊರೆಕೊಳ್ಗು। ಮುಣಿಸುಗ। ಳಿನಿಕೆಯ್ಯು್ಗ। ಮಾವಂದ। ದೊಳ್ಕನ।ಲ್ದಾದ ಮೆಯ್ಯ।
ನಸಿಯ। ನಾಗಿಪು। ದುಳಿದುವ। ಪ್ಪುವು ಬಗೆ। ಗೊಳಲಪ್ಪು। ದು ಮೃಗದ। ಮೆಯ್ಯೊಳ್ನಿಸದ[1] ॥
ಮೆಸೆದ। ಪುದು (ವಲಂ)[2]। ಬಲ್ಲಾಳ। ಬಿಲ್ಬಲ್ಮೆ। ತನ್ನೊಳ। ಮಿಸುತ(ಲು)[3]। ಲೇಸಪ್ಪುದು।
ಬಸನ। ಮೆಂದಜ಼। ಯ್ಮದೆಳಸು। ವರ್ಬೇಂಟೆ। ಯಂ ಬೇಂಟೆ। ಯೆ ಬಿನದಂ। ಗಳರಸಲ್ತೇ ॥

ಪಂಪ ಭಾರತ, VII. ೨೮

(೧೨) ಪಿರಿಯ। ಮರಂಗಳ್[4]। ಮಾಡಮಾ[ಗೆ ಪೊಳೆವೆ। ಳದಳಿರ್ಗ೯ಳೆ। ಸೆಜ್ಜೆಯಾಗೆ।
ಪಿರಿಯ। ಮಡುಗಳೆ। ಮಜ್ಜನ। ಮಾಗೆ। ಪೊಸ ಸಾರೆ। ದೇವಾಂಗ। ವಸ್ತ್ರಮಾಗೆ ॥
ಪರೆದ। ತಱಿಗೆಲೆ। ಯೆ ಪರಿಯ। ಣಮಾಗೆ। ಪಣ್ಪಲ। ಮೆತ್ತಿದ। ಬೋನಮಾಗೆ।
ಸಿರಿಯ। ಮಹಿಮೆಯುಂ। ಮೆಱೆಯಲೇ। ನಾತೃ್ರ್ದೊ। ಬನದೊಳಿರ್। ಪಿರವಾ। ಪಾಂಡವರಾ ॥

ಈ ಪದ್ಯವನ್ನು ಹೀಗೆ ತಿದ್ದಿಕೊಳ್ಳಬಹುದೋ ಏನೊ!

ಪಿರಿಯ। ಮರಂಗಳೆ। ಮಾಡಮಾ। ಗೆ ಪೊಳೆಯಿ। ಪೆಳದಳಿ। ರ್ಗಳೆ (ಸಲೆ)। ಸೆಜ್ಜೆಯಾಗೆ।
ಪಿರಿಯ। ಮಡುಗಳೆ। ಮಜ್ಜನ। ಮಾಗಿಯುಂ। ಪೊಸ ಸಾರೆ। ದೇವಾಂಗ। ವಸ್ತ್ರಮಾಗೆ ॥
ಪರೆದ। ತಱಿಗೆಲೆ। ಯೆ ಪರಿಯ। ಣಮುವಾಗೆ। ಪಣ್ಪಲ। ಮೆತ್ತಿದ। ಬೋನಮಾಗೆ।
ಸಿರಿಯ। ಮಹಿಮೆಯುಂ। ಮೆಱೆಯಲೇ। ನಾತೃ್ರ್ದೊ। ಬನದೊಳಿರ್। ಪಿರವ(ರ)। ಪಾಂಡವರಾ ॥

ಆದಿ ಪುರಾಣ, II. ೪೪

(೧೩) ಈಗಳ್। ನೀನಿರ್ದು। ನೋನಿಸೆ। ನೋಂತು ಮ। ಹಾಬಳಂ। ಲಲಿತಾಂಗಂ। ವಜ್ರ ಜಂಘಂ।
ಭೋಗ। ಭೂಮಿಜಂ। ಶ್ರೀಧರ। ದೇವಂ। ಸುಽವಿಧಿ। ಸರಾ್ಧಿಪ। ನಚ್ಯುತೇಂದ್ರಂ॥
ಸಾಗ। ರಾಂತರ। ನೆಽಲನೆ ನಿತೆ. ನಿತುಮಂ। ಚಕ್ರದಿಂ। ಬೆಸಕೆಯ್ಸಿ। ವಜ್ರನಾಭಿ।
ಯಾಗಿ। ಸರ್ವಾರ್ಥ। ಸಿದ್ಧಿಯೊಳ್। ಪುಟ್ಟಿ। ಭ। ರತದೊಳಿ। ನ್ನಾದಿ। ದೇವನಪ್ಪೆಂ ॥

ಈ ಪದ್ಯದ ಎರಡನೆಯ ಪಾದದಲ್ಲಿ, 'ಧಿಪನು। ಮಚ್ಯುತೇಂದ್ರಂ।' ಎಂದೂ, ಮೂರನೆಯ ಪಾದದಲ್ಲಿ, ಆದಿ ಪುರಾಣ XVI. ೫೮ರಲ್ಲಿರುವ ಹಾಗೆ—

(1) ಶಿಥಿಲ ಗಣ, (2, 3) ಈ ಲೇಖಕರು ಸೇರಿಸಿದುದು, (4) ಶಿಥಿಲ ಗಣ.

'ಸಾಗ। ರಾಂತಂ ನೆ। ಲನನಿತು। ಮಂ ಚಕ್ರ। ದಿಂ ಬೆಸ। ಕೈಸಿದ। ವಜ್ರನಾಭಿ।'
ಎಂದೂ ತಿದ್ದಿಕೊಂಡರೆ, ನಾಗವರ್ಮನು ಕೊಟ್ಟಿರುವ ಪಿರಿಯಕ್ಕರದ ಲಕ್ಷಣಕ್ಕೆ ಸರಿಯಾಗುವುದು. ಆದರೂ, ಅಧಿಕ ಸಂಖ್ಯೆಯಾಗಿರುವ ಮಿಕ್ಕ ಪಿರಿಯಕ್ಕರಗಳ ಹಾಗೆ ಮಾಡುವುದಕ್ಕೆ, ಎರಡನೆಯ ಪಾದದಲ್ಲಿ, 'ಧಿಪನುಮ। ನಚ್ಯುತೇಂದ್ರಂ।' ಎಂದೂ, ಮೂರನೆಯ ಪಾದದಲ್ಲಿ, ಮೇಲೆ ಹೇಳಿದಂತೆಯೂ, ನಾಲ್ಕನೆಯ ಪಾದ ದಲ್ಲಿ, 'ಸಿದ್ಧಿಯೊ। ಳಂ ಪುಟ್ಟಿ।' ಎಂದೂ ತಿದ್ದಿಕೊಳ್ಳಬಹುದು.

ಆದಿ ಪುರಾಣ, XVI. ೫೮

(೧೪) ಭೋಗ। ಕಾಂಕ್ಷೆಯೊಳ್। ಜಯವರ್ಮಂ। ಬಜ್ರಕೀ ಮ। ಹಾಬಳಂ। ಲಲಿತಾಂಗಂ। ವಜ್ರಜಂಘಂ।
ಭೋಗ। ಭೂಮಿಜಂ। ಶ್ರೀಧರ। ದೇವಂ.ಸು। ವಿಧಿ ನ್ಪರಾ। ಧಿಪ। ನಚ್ಯುತೇಂದ್ರಂ ॥
ಸಾಗ। ರಾಂತಂ ನೆ। ಲನಿತು। ಮಂ ಚಕ್ರ। ದಿಂ ಬೆಸ। ಕೈಸಿಧ। ವಜ್ರನಾಭ।
ಯಾಗಿ। ಸರ್ವಾರ್ಥ। ಸಿದ್ಧಿಯೊಳ್। ಪುಟ್ಟಿ। ಬಂದಿಲ್ಲಿ। ತಾನಾದಿ। ದೇವನಾದಂ ॥

ಈ ಪದ್ಯದ ಎರಡನೆಯ ಪಾದದಲ್ಲಿ, 'ಧಿಪನುಮ। ನಚ್ಯುತೇಂದ್ರಂ।' ಎಂದೂ, ನಾಲ್ಕನೆಯ ಪಾದದಲ್ಲಿ, 'ಸಿದ್ಧಿಯೊ। ಳಂ ಪುಟ್ಟಿ।' ಎಂದೂ ತಿದ್ದಿಕೊಂಡರೆ, ಇದು ಮಿಕ್ಕ ಪಿರಿಯಕ್ಕರಗಳ ಲಕ್ಷಣವನ್ನು ಹೊಂದುತ್ತದೆ.

ಶಾಂತಿ ಪುರಾಣ, IX. ೨೧೩

(೧೫) ಬಸಿಜ। ತೆಳ್ಪುಮಂ। ತ್ರಿವಳಿಗ। ಳೊಳ್ಪುಮಂ। ಕುಚ ಚೂಚ। ಕಂಗಳ। ಬಣ್ಣಮುಮಂ।
ನಸಿಯ। ಬಾಸೆಯ। ಮುನ್ನಿನ। ರುಚಿಯುಮಂ। ಮುಖ ಪೂರ್ವ। ಚ್ಛವಿಯುಮಂ। ಕಿಡಲೀಯದೆ ॥
ನೆಸೆದು। ಸೊಗಯಿಸಿ। ತೋರಿತೋ। ಜಗದೀಶ। ನಿರೆ ಗರ್ಭಂ। ಬಳೆದು ಹಾ। ರದ ನೀರದ।
ಪ್ರಸರ। ದೊಳಗಣ। ಚಂದ್ರಬಿಂ। ಬದವೋಲ್। ಚೆಲ್ವುವೆತ್ತು। ವೈರಾಮ। ಹಾದೇವಿಯ ॥

ಇದರ ಮೂರನೆಯ ಪಾದದಲ್ಲಿ, 'ನಿರೆಗರ್ಭಂ' ಎಂಬುದು ಶಿಥಿಲ ಗಣವಾಗಿಯೂ, ನಾಲ್ಕನೆಯ ಪಾದದಲ್ಲಿ 'ಬದವೋಲ್' ಎಂಬುದು 'ಬದವೊಲುಂ' ಎಂದೂ, 'ಚೆಲ್ವುವೆತ್ತು' ಎಂಬುದು ಶಿಥಿಲ ಗಣವಾಗಿಯಾಗಲಿ, ಅಥವಾ 'ಚೆಲುವುವೆತ್ತು' ಎಂದಾಗಲಿ ಇರಬಹುದು.

ಮೇಲೆ ಮಾಡಿದ ಮಾರ್ಪಾಡುಗಳಿಗೆ, ಓಲೆಯ ಪುಸ್ತಕಗಳಲ್ಲಿ ಪಾಠಾಂತರ ಗಳು ಸಿಕ್ಕುವುವೋ ಏನೊ ನೋಡಬೇಕು.

೫. ಮೇಲೆ ಮಾಡಿದ ವಿಚಾರದಿಂದ, ನಾಲ್ಕು ಪಾದಗಳಲ್ಲಿಯೂ ಒಂದು ಅಜ, ಐದು ವಿಷ್ಣು, ಒಂದು ರುದ್ರ ಗಣಗಳೇ ಇರಬೇಕೆಂಬ ಸಿದ್ಧಾಂತಕ್ಕೆ ಆಧಾರವು ಸಿಕ್ಕಿತೆಂದು ತೋರುತ್ತದೆ. ಪೊನ್ನನ ಅನಂತರ, ಅಕ್ಕರಗಳ ಪ್ರಚಾರವು ಇಲ್ಲವೆಂದು ಕಾಣುವುದು. ಪಂಪನ ಕಾಲದಲ್ಲಿಯೇ ಅವುಗಳ ಪ್ರಚಾರವು ಮಂದವಾಯಿತು. ಆದರೂ, ಪಂಪನ ಮೇಲಿರುವ ಪ್ರಾಮಾಣಿಕ ಬುದ್ಧಿಯಿಂದ, ಕೆಲವರು ಅವನ್ನು ಉಪಯೋಗಿಸುತ್ತಬಂದಿದ್ದಾರೆ. ಕವಿ ರತ್ನ ತ್ರಯದ ಗ್ರಂಥಗಳ ಈಚಿನ ಬರೆಹ ಕಾರರಿಗೆ ಆ ಪದ್ಯಗಳ ಲಕ್ಷಣವು ತಿಳಿಯದಿದ್ದುದರಿಂದ, ಅವಕ್ಕೆ ಬಹಳ ಪಾಠ ಭೇದ ಗಳು ಹುಟ್ಟಿರಬಹುದು. ಲಕ್ಷಣಕಾರನಾದ ನಾಗವರ್ಮನು ಯಾವುದೋ ಒಂದು

ವಿಧವಾಗಿ ಪಿರಿಯಕ್ಕರದ ಲಕ್ಷಣವನ್ನೇರ್ಪಡಿಸಿದ್ದಾನೆ. ಅವನು ಕೊಟ್ಟಿರುವ ಲಕ್ಷಣ ಪದ್ಯಕ್ಕೂ ಕೆಲವು ಪಾಠಾಂತರಗಳು ಹುಟ್ಟಿವೆ. ಇದಕ್ಕೆ ಕಾರಣವು, ಲಕ್ಷ್ಯಗಳಿಗೂ ನಾಗವರ್ಮನು ಕೊಟ್ಟಿರುವ ಲಕ್ಷಣಕ್ಕೂ ಸಂಬಂಧವಿಲ್ಲವೆಂಬುದೇ ಆಗಿರಬಹುದು. ನಾಗವರ್ಮನು ಬರೆದ ಪದ್ಯವನ್ನು ಸ್ವಲ್ಪ ಮಾರ್ಪಡಿಸಿ ಮೇಲೆ ಹೇಳಿದ ಲಕ್ಷಣಕ್ಕೆ ತರಬಹುದು:—

ಮೊದಲೊ| ಳ ಜ ಗಣಂ| ಕುಂದದೆ| ಬಕ್ಕತ್ತ| ಮೆಯ್ಪ್ಪುಗ| ಳಂಗಳೆ| ವಿಷ್ಣುವಕ್ಕುಂ |
ತುದಿಯೊ| ಳೆಂಬ| ತಾ| ಇದ್ರೊಳಿಲ್ಲಿ| ಯುಂ| ಕಂದ| ಪರಿಪುಗ| ಣಂ| ನೆ| ಲಸಿ ನಿಲಕ್ಕೆ ||
ಪದದೊ| ಳೆರಡೆಂಬ| ಸಂಖ್ಯೆಯೊ| ಳಾ ಜಜೊ| ಳಜಗಣಂ| ಸಮವಾಯ| ಮಪ್ಪೊಡಕ್ಕುಂ |
ಸದಮು| ಳೇಂದು ನಿ| ಭಾನನೆ| ಕರ್ತೃವಿ| ನಿಷ್ಟದಿ| ನರಿದು| ಪಿರಿಯಕ್ಕರಂ ||

ಇದರ ಎರಡನೆಯ ಪಾದದಲ್ಲಿ 'ಣಂನೆ' ಎಂಬುದನ್ನು 'ಣಮುಮಂನೆ' ಎಂದೂ, ನಾಲ್ಕನೆಯ ಪಾದದಲ್ಲಿ 'ನರಿದು' ಎಂಬುದನ್ನು 'ನಿಂತಿದು' ಎಂದೂ ತಿದ್ದಿಕೊಳ್ಳಬಹುದು.

೬. ನಾಗವರ್ಮನ ಲಕ್ಷಣವನ್ನು ತಿದ್ದುವುದು ಸಾಹಸವೇ ಸರಿ. ಆದರೂ, ಹಾಗೆ ಮಾಡುವುದಕ್ಕೆ ಎರಡು ಕಾರಣಗಳಿವೆ: (೧) ಕವಿ ರತ್ನತ್ರಯ ರಚಿತ ಪಿರಿಯಕ್ಕರಂಗಳಿಗೆ ಆತನ ಲಕ್ಷಣವು ಸರಿಹೊಂದುವುದಿಲ್ಲ. ಪದ್ಯಗಳ ನಡೆಯೂ ಹೊಂದಿಕೆಯೂ, ನಾನು ಕೊಟ್ಟಿರುವ ಲಕ್ಷಣಕ್ಕೆ ಅನುಕೂಲವಾಗಿದೆ. (೨) ಮಿಕ್ಕ ಅಕ್ಕರಗಳಲ್ಲಿ ನಾಲ್ಕು ಪಾದಗಳೂ ಒಂದೇ ರೀತಿಯಾಗಿದ್ದು, ಪಿರಿಯಕ್ಕರದಲ್ಲಿ ಮಾತ್ರ ಬೇರೆಯಾಗಿರುವುದಕ್ಕೆ ಕಾರಣ ತೋರುವುದಿಲ್ಲ.

೭. ಕವಿ ರತ್ನತ್ರಯವು ಪಿರಿಯಕ್ಕರಗಳನ್ನೇ ಬರೆದಿದ್ದಾರೆ; ಇತರ ಅಕ್ಕರಗಳಿಗೆ ಅವರ ಗ್ರಂಥಗಳಲ್ಲಿ ಉದಾಹರಣೆಗಳಿಲ್ಲ. ರೈಸ್ ಅವರು ಪಂಪ ಭಾರತಕ್ಕೆ ಬರೆದಿರುವ ಉಪೋದ್ಘಾತದಲ್ಲಿ, ಆ ಗ್ರಂಥದೊಳಗೆ ಅಕ್ಕರವೆಂದೂ ಪಿರಿಯಕ್ಕರವೆಂದೂ ಎರಡು ಕನ್ನಡ ಪದ್ಯಗಳಿವೆಯೆಂದು ಹೇಳುವುದನಾವಶ್ಯಕ.

೮. ತೆಲುಗಿನಲ್ಲಿ, ಕನ್ನಡದ ಪಿರಿಯಕ್ಕರಕ್ಕೆ ಸರಿಹೋಲುವುದು ಮಹಾಕ್ಕರ. ಇದಕ್ಕೆ, ಕವಿತ್ರಯವೆಂದು ಪ್ರಸಿದ್ಧರಾದ ತೆಲುಗು ಕವಿಗಳು—ನನ್ನಯ, ಎಱ್ಱನ, ತಿಕ್ಕನ—ರಚಿಸಿದ ಆಂಧ್ರ ಮಹಾಭಾರತದಲ್ಲಿ ಉದಾಹರಣವಿಲ್ಲ. ಅವರು ಉಪಯೋಗಿಸಿರುವುದು ಮಧ್ಯಾಕ್ಕರ ಮತ್ತು ಮಧುರಾಕ್ಕರ. ಇವು ಕನ್ನಡದ ದೊರೆಯಕ್ಕರ, ನಡುವಣಕ್ಕರಗಳಿಗೆ ಸರಿಹೋಗುವುವು. ನಾಗವರ್ಮನು ಹೇಳಿರುವ ದೊರೆಯಕ್ಕರ, ನಡುವಣಕ್ಕರ, ಎಡೆಯಕ್ಕರ, ಕಿಱಿಯಕ್ಕರ—ಇವುಗಳಿಗೆ ಕನ್ನಡ ವಿದ್ವಾಂಸರು ಕಾವ್ಯಗಳಿಂದ ಪ್ರಯೋಗಗಳನ್ನು ನನಗೆ ಬರೆದು ಕಳುಹಿಸಿದರೆ ಕೃತಜ್ಞನಾಗಿರುವೆನು. ಅಪ್ಪಕವಿ ಹೇಳಿದ ತೆಲುಗಿನ ಮಹಾಕ್ಕರ, ಅಂತರಾಕ್ಕರ, ಅಲ್ಪಾಕ್ಕರ—ಇವುಗಳನ್ನು ತೆಲುಗು ಕಾವ್ಯಗಳಲ್ಲಿ ನಾನು ಕಂಡಿಲ್ಲ; ಅವುಗಳ ವಿಚಾರವೂ ಈ ವ್ಯಾಸದಲ್ಲಿ ಅನಾವಶ್ಯಕ.

೯. ಅಪ್ಪಕವಿಯು ತೆಲುಗಿನ ಮಹಾಕ್ಕರಕ್ಕೆ ಕೆಳಗಣ ಲಕ್ಷಣವನ್ನು ಕೊಟ್ಟಿದ್ದಾನೆ:—

ಸೂರು। ಡೊಕಡುನು। ಮುನ್ನಾಗಾ೯। ದರ್ಪಾತ।–ಸುತ್ರಾಮ್೯। ಲೇವುರು। ಪಿಜು।ದನೊಕ್ಕ ।
ತಾರ। ಕೇಶುಂಡು। ಜತಯ್ಯೆನ। ನಿಟ್ಟಿಸ।–ಪ್ತಗಣಂಬು। ಲೊಕ್ಕಪಾ। ದಂಬುನಕು೯ ॥
ಜೇರು। ರೆಂಡವ। ಚೋಟ ನಾ। ಲವ ಚೋಟ೯–ಚಿತ್ರಭಾ। ನು ಗಣಂಬು। ಗದಿಯುಚುಂಡು ।
ನೋರ। ಸಿಲು ನಾಲ। ವಗಣಂಬು! ಪೈ ಶ್ರಾಂತಿ।–ಯುತ್ಪಲಾಂ। ಗ ಮಹಾಕ್ಕ। ರಂಬುನಕು ॥

ಕನ್ನಡದ ಅಜ ಗಣಕ್ಕೆ ತೆಲುಗಿನ ಸೂರ್ಯ ಗಣ, ವಿಷ್ಣು ಗಣಕ್ಕೆ ಇಂದ್ರ ಗಣ, ರುದ್ರ ಗಣಕ್ಕೆ ಚಂದ್ರ ಗಣ—ಇವು ಸರಿಹೋಲುವುವೆಂದು ತಿಳಿಯತಕ್ಕದ್ದು. ಮೇಲಿನ ಪದ್ಯದ ಮೊದಲನೆಯ ಎರಡು ಪಾದಗಳಿಗೆ ಅರ್ಥವೇನೆಂದರೆ:—

'ಒಂದು ಪಾದಕ್ಕೆ ಒಂದು ಸೂರ್ಯ ಗಣ (ಅಜ ಗಣ), ಐದು ಇಂದ್ರ ಗಣಗಳು (ವಿಷ್ಣು ಗಣಗಳು), ಒಂದು ಚಂದ್ರ ಗಣ (ರುದ್ರ ಗಣ) ಸೇರುತ್ತವೆ.

ಮೂರನೆಯ ಪಾದದ ಅರ್ಥವು ವಿಚಾರಾರ್ಹವಾಗಿದೆ: "ರೆಂಡವ ಚೋಟ, ನಾಲವ ಚೋಟ" ಎಂದರೆ, ಪ್ರತಿ ಪಾದದಲ್ಲಿಯೂ, ಎರಡನೆಯ ನಾಲ್ಕನೆಯ ಗಣ ಗಳೆಂದಾದರೂ, ಎರಡನೆಯ ಪಾದದಲ್ಲಿ ನಾಲ್ಕನೆಯ ಗಣವೆಂದಾದರೂ ಹೇಳ ಬಹುದು. "ಚಿತ್ರಭಾನು" ಗಣಕ್ಕೂ ಸೂರ್ಯ ಗಣಕ್ಕೂ ಅಪ್ಪ ಕವಿಯೇನಾದರೂ ಭೇದವನ್ನು ತನ್ನ ಮನಸ್ಸಿನಲ್ಲಿಟ್ಟುಕೊಂಡಿದ್ದಾನೆಯೋ ಇಲ್ಲವೋ ತಿಳಿಯದು. ಮೇಲಿನ ಪದ್ಯದ ಅರ್ಥವನ್ನು ಹೇಗೆ ಹೇಳಿದರೂ, ಅಪ್ಪ ಕವಿ ಬರೆದ ಲಕ್ಷಣಕ್ಕೂ, ತಾನೇ ರಚಿಸಿದ ಲಕ್ಷಣ ಪದ್ಯಕ್ಕೂ ಹೊಂದಿಕೆಯೇನೂ ಇಲ್ಲ. ಆ ಪದ್ಯದ ಗಣ ವಿಭಜನೆ ಮಾಡಿದರೆ, ನಾಲ್ಕು ಪಾದಗಳಲ್ಲಿಯೂ ಒಂದು ಸೂರ್ಯ, ಐದು ಇಂದ್ರ, ಒಂದು ಚಂದ್ರ ಗಣಗಳಿವೆ. ಹೀಗೆಯೇ, ಕನ್ನಡ ಪಿರಿಯಕ್ಕರಕ್ಕೂ ನಾಲ್ಕು ಪಾದ ಗಳಲ್ಲಿಯೂ ಕ್ರಮವಾಗಿ ಒಂದು ಅಜ, ಐದು ವಿಷ್ಣು, ಒಂದು ರುದ್ರ ಗಣಗಳಿರ ಬೇಕೆಂಬ ಸಿದ್ಧಾಂತವು ತಪ್ಪಾಗದೆಂದು ತೋರುತ್ತದೆ.

೧೦. ಅಪ್ಪ ಕವಿಯು ತನ್ನ ಮಹಾಕ್ಕರ ಲಕ್ಷಣಕ್ಕೆ ಒಂದಾನೊಂದು ಕನ್ನಡ ಲಕ್ಷಣದ ತಪ್ಪು ಪಾಠಾಂತರವನ್ನು ತೆಗೆದುಕೊಂಡು ಬರೆದ ಹಾಗೆ ತೋರುತ್ತದೆ. ಕಿಟ್ಟೆಲ್ ಅವರು ಕೊಟ್ಟಿರುವ ಎರಡು ಪಾಠಾಂತರಗಳಲ್ಲಿ, "ಪದಾಂತ್ಯದೊಳೆರಡೆಂಬ ಸಂಖ್ಯೆಯೊಳಂ ನಾಲ್ಕುಂ ಜಗಣಂ" ಎಂದೂ, "ಪದದೊಳೆರಡೆಂಬ ಸಂಖ್ಯೆಯೊಳ್ ನಾಲ್ಕಜಿಕೊಳಜ ಗಣಂ" ಎಂದೂ ಇದೆ. ಈ ತೆರದ ಪಾಠಾಂತರವೇ ಅಪ್ಪ ಕವಿಗೆ ಮೂಲವಾಗಿರಬಹುದು.

ಈ ವಿಚಾರವನ್ನು ನಾನು ಮಾಡುವುದಕ್ಕೆ ಕಾರಣಭೂತರಾದ ಮ|| ರಾ|| ಬಿ. ಎಂ. ಶ್ರೀಕಂಠಯ್ಯನವರಿಗೆ ಕೃತಜ್ಞನಾಗಿದ್ದೇನೆ. ನನಗೆ ಕನ್ನಡ ಸಾರಸ್ವತ ದಲ್ಲಿ ಪರಿಚಯವು ಬಹಳ ಕಡಿಮೆಯಾದರೂ, ನಾಗವರ್ಮನ ಲಕ್ಷಣವನ್ನು ತಿದ್ದುವ ನನ್ನ ಸಾಹಸವನ್ನು ಕನ್ನಡ ವಿದ್ವಾಂಸರು ಕ್ಷಮಿಸಬೇಕೆಂದು ಪ್ರಾರ್ಥಿಸುತ್ತೇನೆ.

**ಡಾಕ್ಟರ್ ಸಿ. ನಾರಾಯಣರಾವ್, ಎಂ.ಎ., ಪಿಎಚ್.ಡಿ.**

---

## ಸಂಪಾದಕರ ಸೂಚನೆ

ಈ ವ್ಯಾಸದ ಲೇಖಕರು ಉದಾಹರಣೆಗಾಗಿ ಕೊಟ್ಟಿರುವ ಪದ್ಯಗಳಲ್ಲಿ ಮಾಡಿರುವ ಅನೇಕ ಮಾರ್ಪಾಡುಗಳು ಅಷ್ಟು ತೃಪ್ತಿಕರವಾಗಿ ತೋರುವುದಿಲ್ಲ. ಇವರು ಮಾಡಿರುವ ಮಾರ್ಪಾಡುಗಳಿಗೆ ಪಂಪ ಭಾರತದ ಮೂಲ ಪ್ರತಿಗಳಲ್ಲಿ ಯಾವ ಆಧಾರವೂ ದೊರೆಯುವುದಿಲ್ಲ. ಅಕ್ಕರಗಳು, ನಾವು ಹೇಳಿರುವಂತೆ (ಪಂ. ಭಾ. ಉಪೋದ್ಘಾತ ಪುಟ, XXXVI) ಹಾಡುಗಬ್ಬಗಳಾದುದರಿಂದ, ಹಾಡುವ ಧಾಟಿಗೆ ಹೊಂದಿಕೆಯಾಗಿರಬೇಕಾದುದು ಆವಶ್ಯಕ; ಗಣಗಳು ಮಾತ್ರ ಸರಿಹೋಗುವಂತೆ ಹೊಂದಿಸುವುದರಿಂದ ಫಲವಿಲ್ಲವೆಂದು ತೋರುವುದು. ಶಿಥಿಲತ್ವವು, ಹಾಡುವಾಗ ತಾನಾಗಿಯೇ ಬರುವುದು. ನಾವು ನಮಗೆ ತೋರಿದ ಸಲಹೆಗಳು ಕೆಲವನ್ನು ಇಲ್ಲಿ ಕೊಡುವೆವು. ನಾವು ಮಾಡಿರುವ ಮಾರ್ಪಾಡುಗಳನ್ನು ಕಂಸದಲ್ಲಿ ತೋರಿಸಿದೆ.—

(೩) ಪಂಪ ಭಾರತ, XIII. ೧೦೮

ಮೂರನೆಯ, ನಾಲ್ಕನೆಯ ಪಾದಗಳು.—

*ಬಿಳಿಯ। ಧ್ವಜಮುಂ ಪಿ। ಳಿರೆ ರಾಜ್ಯ। ಚಿಹ್ನಂಗಳ್। ವೆರಸಿಂತು। ನಡೆತಂದು। ರಾಜ್ಯಲಕ್ಷ್ಮಿ।
ಬಳೆದ। [ತೋಷದಂ]। ತಮನೆಯ್ದಿ। ಪತ್ತಿದಳ್। ಸಹಜ ಮ। ನೋಜನಂ। ನಾಡೋಜನಂ ॥

ಲೇಖಕರು ಮೊದಲನೆಯ ಪಾದದಲ್ಲಿ ಮಾಡಿರುವ ಮಾರ್ಪಾಡು ಸರಿಯೆಂದು ತೋರುವುದು; ನಾಲ್ಕನೆಯ ಪಾದದಲ್ಲಿ, ಮೂಲದಲ್ಲಿಯ ಕೆಲವು ಅಕ್ಷರಗಳನ್ನು ಬಿಟ್ಟುಬಿಟ್ಟಿರುತ್ತಾರೆ. ಇವರು ವಿಂಗಡಿಸಿರುವಂತೆ ಓದಿದರೆ ಕಿವಿಗಿಂಪಾಗಿರುವುದಿಲ್ಲ.

(೪) ಪಂಪ ಭಾರತ, XIV. ೫೫

ಮೂರು ನಾಲ್ಕನೆಯ ಪಾದಗಳು.—

ಕೊಡುವ। ಬಾಡಕ್ಕಂ। ಜೀವಧ। ನಂಗಳ್ಗಂ। ಬಿಡುವೆಣ್ಗಂ। ಲೆಕ್ಕಮಿ। ಲ್ಲೆನಿಸಿ ರಾಗಂ।
[ಗಿಡೆಕೊಂ]। ಡಾಡಿದಂ।ಬಲ್ಲಹ। ನಱಿಯೆ ಗು। ಣಾರ್ಣವಂ। ಕವಿತಾ ಗು।ಣಾರ್ಣವನಂ ॥

ರಾಗಂಗಿಡೆ=ಆಶೆಯು ಅಳಿವಂತೆ (?)

ಮೂರನೆಯ ಪಾದದಲ್ಲಿ, ಲೇಖಕರು ಹೇಳಿರುವ ಶಿಥಿಲತ್ವಕ್ಕೆ ಕಾರಣವಿಲ್ಲ. ನಾಲ್ಕನೆಯ ಪಾದದಲ್ಲಿ ಲೇಖಕರು ಸೂಚಿಸುವ ಮಾರ್ಪಾಡು ಸರಿದೋರುವುದಿಲ್ಲ.

(೫) ಆದಿ ಪುರಾಣ, XI. ೧೦೯

ಎರಡನೆಯ ಪಾದ.—

ಮುಡಿಯೆ। ಸೊಗಯಿಸಿ। ದದಿರ್ಮುತ್ತೆ। ಯಲ[ರುಮಂ]। ಮಸಿಯೊಳೆ। ಸವನಾದ। ಗೊಜ್ಜಗೆಯಂ।

ನಾಲ್ಕನೆಯ ಪಾದ.—

ಮುಡಿಗೆ। ಯಿಕ್ಕಿಯಪಂ। [ಕೈಯೆತ್ತಿ]। ಪೊಗಳ್ದು[ತಾಂ]। ತಣಿಯನೆ। ಮದನನುಂ। ಮಲ್ಲಿಗೆಯಂ ॥

---

* ಮೂಲ ಪ್ರತಿಗಳಲ್ಲಿ "ಬಿಳಿಯೊ....'' ಎಂದಿದೆ.

ಎರಡನೆಯ ಪಾದದಲ್ಲಿ ಲೇಖಕರು ಮಾಡಿರುವ ಮಾರ್ಪಾಡಿಗೆ ಅರ್ಥವಾಗುವುದಿಲ್ಲ; ನಾಲ್ಕನೆಯ ಪಾದದಲ್ಲಿ ಶಿಥಿಲತ್ವಕ್ಕೆಡೆಯಿಲ್ಲ.

(೬) ಶಾಂತಿ ಪುರಾಣ, X. ೮

ಎರಡು ಮೂರನೆಯ ಪಾದಗಳು.—

ಪೊಡವಿ| ಷಟ್ಖಂಡ| ಕ್ಕಡಿಯಿಡು| ವಡಿಗಳಂ| ತೊಳಗಿ [ಯೆ]| ಬೆಳಗುವ| ಪೆಱ ನೊಸಲಂ ||
ಪಡೆದ| ಕಾಮದೇ| ವತ್ವಮ| ನವಗ[ಯ್ಯು]| ವಂತಿರ್ದ| ರೂಪಿನ| ಬಾಲಕನಂ |

(೭) ಶಾಂತಿ ಪುರಾಣ, X. ೬೭

ಎರಡನೆಯ ಪಾದ.—

ಮುದದೆ| ತಲೆಯೊ[ಳು]| ಪೊತ್ತಂತಿ| [ರಿ]ರ್ಪವು| ಮೇರುವೆಂ| ತಂತ[ವಿ|ಭಕ್ತಂಗಳು]

(೮) ಪಂಪ ಭಾರತ, V. ೪೩

ಎರಡನೆಯ ಪಾದ.—

ಪುಗಿಲಂ| ಪೋಗು[ಮಂ]| ಬಾರಿಯಂ| ಸನ್ನೆಯಂ| ನೂಱುವ| ಮರ್ಚುವ| ನಿಲ್ಪೆಡೆಯಂ ||

ನಾಲ್ಕನೆಯ ಪಾದ.—

ಬಗೆದಾ|[ಳರಸರೊ]| ಳಿಲ್ಲ ಕೇಳ್| ನೀಂ ಬಲ್ಲೆ| ಬೇಂಟೆಕಾ| ಱಱೊಳಿಲ್ಲ| ಮಾನೆ ಬಲ್ಲೆಂ ||

ಆಳರಸ=ಶಕ್ತಿವಂತನಾದ ದೊರೆ (?)

ಲೇಖಕರು ಮಾಡಿರುವ ಗಣ ವಿಭಾಗವೂ ಮಾರ್ಪಾಡೂ ರಾಗಕ್ಕೆ ಹೊಂದುವಂತಿಲ್ಲ; ಅರ್ಥವೂ ಆಗುವುದಿಲ್ಲ.

(೧೦) ಪಂಪ ಭಾರತ, V. ೪೬

ನಾಲ್ಕನೆಯ ಪಾದ.—

ಸಿಲೆ[ಯೊ| ಳಾ] ದೊಡಂ| ಶಕುನಮಂ| ನಿಱಿಸಂತೆ| ನಿಱಿಸುವೆಂ| ಪಂದಿಯಂ| ನೀಂ ಮೆಚ್ಚಲುಂ ||

"ನಾಲ್ಕನೆಯ ಪಾದವು ಕೆಟ್ಟುಹೋಯಿತು" ಎಂದು ಲೇಖಕರು ಹೇಳುವುದಕ್ಕೆ ಕಾರಣವಿಲ್ಲ.

(೧೧) ಪಂಪ ಭಾರತ, V. ೪೭

ಎರಡು, ಮೂರು, ನಾಲ್ಕನೆಯ ಪಾದಗಳು.—

ನಸಿಯ| ನಾಗಿಪು| ದುಳಿದುವ| ಪ್ಪುವು ಬಗೆ| ಗೊಳಲಪ್ಪು| ದು ಮೃಗದ| ಮೆಯ್ಯೊ [ಳಿಂತು] ||
ನಿಸದ| ಮೆಸೆವುದು| ಬಲ್ಲಾಳ| ಬಿಲ್ಬಲ್ಮೆ| ತನ್ನೊಳ| ಮಿಸುತೆಲೇ| ಸಪ್ಪು [ದಲ್ತೆ] |
ಬಸನ| ಮೆಂದಱ| [ದೇಳಿಸು]| ವ [ರು] ಬೇಂಟೆ| ಯಂ ಬೇಂಟೆ| ಬಿನದಂಗ| ಳರಸಲ್ತೆ [ಪೇಳ್] ||

ನಾಲ್ಕನೆಯ ಪಾದದಲ್ಲಿ, ಮೂಲದಲ್ಲಿರುವಂತೆಯಾಗಲಿ, ಇಲ್ಲಿ ತಿದ್ದಿರುವಂತೆಯಾಗಲಿ, ಅರ್ಥ ಹೇಳಬಹುದೆಂದು ತೋರುತ್ತದೆ.—

ಮೂಲ.—ಬೇಟೆಯನ್ನು, ವ್ಯಸನವೆಂಬ ತಪ್ಪು ತಿಳಿವಳಿಕೆಯಿಂದ ಏಳಿಸುವರು.

ಮಾರ್ಪಾಡು.—ಬೇಟೆಯನ್ನು ವ್ಯಸನವೆಂದರಿತು, ಏಳಿಸುವರು.

ಈ ಪದ್ಯವನ್ನು ಲೇಖಕರು ತಿದ್ದಿರುವುದು ಸಮರ್ಪಕವಾಗಿ ತೋರುವುದಿಲ್ಲ.

(೧೨) ಪಂಪ ಭಾರತ, VII. ೨೮

ಪಿರಿಯ। [ತರು] ಗಳೆ। ಮಾಡಮಾ। ಗೆ ಪೊಳೆ [ವು। ತಿರ್ಪೆ] ಳ। ದಳಿರ್ಗಳೆ। ಸೆಜ್ಜೆಯಾಗೆ।
ಪಿರಿಯ। ಮಡುಗಳೆ। ಮಜ್ಜನ। ಮಾಗೆ [ತಾನ್]। ಪೊಸ ನಾರೆ। ದೇವಾಂಗ। ವಸ್ತ್ರಮಾಗೆ ॥
ಪರೆದ। [ತಱಗೆಲೆ]। [ಪರಿಯಣ]। ಮಾಗೆ [ಮೇಣ್]। ಪಣ್ಪಲ। ಮೆತ್ತಿದ। ಬೋನಮಾಗೆ ।
ಸಿರಿಯ। ಮಹಿಮೆಯಂ। ಮೆರೆಯಲೇ। ನಾರ್ತುದೊ। ಬನದೊ [ಳ। ಗಿರ್ಪಿರವು]। ಪಾಂಡವರಾ ॥

(೧೩) ಆದಿ ಪುರಾಣ, II. ೪೪

ಎರಡು, ಮೂರು, ನಾಲ್ಕನೆಯ ಪಾದಗಳು.—

ಭೋಗ। ಭೂಮಿಜಂ। ಶ್ರೀಧರ। [ಮಾ] ದೇವಂ। ಸುವಿಧಿನ। ರಾಧಿಪ। ನಚ್ಯುತೇಂದ್ರಂ ॥
ಸಾಗ। ರಾಂತ [ಮ]। ನೆಲನೆನಿ। ತನಿತುಮಂ। ಚಕ್ರದಿಂ। ಬೆಸೆಕೆಯ್ಸಿ। ವಜ್ರನಾಭಿ ।
ಯಾಗಿ। ಸರ್ವಾರ್ಥ। ಸಿದ್ಧಿಯೊಳ್। ಪುಟ್ಟಿ [ತಾಂ]। ಭರತದೊ। ಳಿನ್ನಾದಿ। ದೇವನಪ್ಪೊಂ ॥

ಇಲ್ಲಿ, ಲೇಖಕರು ಹೇಳಿರುವಂತೆ, ನಾಗವರ್ಮನ ಪಿರಿಯಕ್ಕರದ ಲಕ್ಷಣಕ್ಕೆ ಈ ಪದ್ಯವನ್ನು ಮಾತ್ರ ಹೊಂದಿಸಲು ಏಕೆ ಪ್ರಯಾಸಪಡಬೇಕು?

(೧೪) ಆದಿ ಪುರಾಣ, XVI. ೫೮

ಎರಡು, ಮೂರು, ನಾಲ್ಕನೆಯ ಪಾದಗಳು.—

ಭೋಗ। ಭೂಮಿಜಂ। ಶ್ರೀಧರ। [ಮಾ] ದೇವಂ। ಸುವಿಧಿ ನ। ರಾಧಿಪ। ನಚ್ಯುತೇಂದ್ರಂ ॥
ಸಾಗ। ರಾಂತಂ ನೆ। ಲನನಿತು। ಮಂ ಚಕ್ರ। ದಿಂ ಬೆಸ। ಕೈಸಿದ। ವಜ್ರನಾಭಿ ।
ಯಾಗಿ। ಸರ್ವಾರ್ಥ। ಸಿದ್ಧಿಯೊಳ್। ಪುಟ್ಟಿ [ಮೇಣ್]। ಬಂದಿಲ್ಲಿ। ತಾನಾದಿ। ದೇವನಾದಂ ॥

(೧೫) ಶಾಂತಿ ಪುರಾಣ, IX. ೨೧೩

ಮೂರನೆಯ ಪಾದ.—

ನೆಸೆದು। ಸೊಗಯಿಸಿ। ತೋರಿತೋ। ಜಗದೀಶ। ನಿರೆ ಗರ್ಭಂ। ಬಳೆದು ಶಾ। ರದ ನೀರದ ।

ಲೇಖಕರು ಹೇಳುವಂತೆ, ಇಲ್ಲಿ 'ನಿರೆಗರ್ಭಂ' ಎಂಬಲ್ಲಿ ಶಿಥಿಲತ್ವವು ಆವಶ್ಯಕವಿಲ್ಲ.

ನಾಲ್ಕನೆಯ ಪಾದ.—

ಪ್ರಸರ। ದೊಳಗಣ। ಚಂದ್ರಬಿಂ। ಬದ [ವೋಲು]। ಚೆ [ಲ್ವಾ ದು। ದೈ]ರಾ ಮ। ಹಾದೇವಿಯಾ ॥

**ಬೆಳ್ಳಾವೆ ವೆಂಕಟನಾರಾಯಣಪ್ಪ**
ಸಂಪಾದಕ

---

# ವಿವಿಧ ವಿಷಯಗಳು

---

**ಪ್ರಸಿದ್ಧ ಕನ್ನಡ ಭಾಷಾ ವಿಶಾರದರ ನಿಧನ.**—ಪ್ರಸಿದ್ಧರಾದ ಕನ್ನಡ ಭಾಷಾ ವಿಶಾರದರು ಶ್ರೀಮಾನ್ ರಾಜಕವಿ ತಾತಾಚಾರ್ಯ, ಎಂ.ಎ., ಎಲ್.ಟಿ. ಅವರು ಮದರಾಸಿನಲ್ಲಿ, ೧೯೩೨ನೆಯ ಇಸವಿ ಡಿಸೆಂಬರು ೩೦ನೆಯ ತಾರೀಖಿನಲ್ಲಿ, ತಮ್ಮ ೫೬ನೆಯ ವಯಸ್ಸಿನಲ್ಲಿ, ವಿಷಮಶೀತ ಜ್ವರದಿಂದ ದೈವಾಧೀನರಾದುದು ಕನ್ನಡ ದೇಶಕ್ಕೆಲ್ಲ ಬಹಳ ನಷ್ಟವನ್ನುಂಟುಮಾಡಿದೆ. ಈ ಮಹನೀಯರು ಮದರಾಸು ಸರ್ಕಾರದ ಶಿಕ್ಷಣ ಶಾಖೆಯಲ್ಲಿ ಇನ್‌ಸ್ಪೆಕ್ಟರು ಪದವಿಯಲ್ಲಿದ್ದು, ಸುಮಾರು ಒಂದು ವರುಷದ ಹಿಂದೆ ಸರಕಾರದ ಸೇವಾ ಶೃಂಖಲದಿಂದ ನಿವೃತ್ತರಾಗಿ, ಮದರಾಸಿನಲ್ಲಿಯೇ ವಾಸಮಾಡುತ್ತಿದ್ದರು.

ಇವರು ಪ್ರಸಿದ್ಧ ನಾಟಕ ಕಲಾ ನಿಪುಣರಾದ ಮೈಸೂರಿನ ವರದಾಚಾರ್ಯರಿಗೆ ಅನೇಕ ನಾಟಕಗಳನ್ನು ಕನ್ನಡದಲ್ಲಿ ಬರೆದುಕೊಟ್ಟ ಮೈಸೂರಿನ ರಾಜಕವಿ ಶ್ರೀಮಾನ್ ತಿರುಮಲೆ ಶ್ರೀನಿವಾಸಯ್ಯಂಗಾರ್ಯರ ಪುತ್ರರು; ಕನ್ನಡ ಭಾಷೆಯಲ್ಲಿ ಕೇವಲ ಪ್ರೀತಿಯೂ ಪಾಂಡಿತ್ಯವೂ ಇದ್ದವರು. ಇವರು ಕನ್ನಡದಲ್ಲಿ ಕೆಲವು ಕವಿತೆಗಳನ್ನೂ ಗ್ರಂಥಗಳನ್ನೂ ಬರೆದಿರುವುದಲ್ಲದೆ, ಕನ್ನಡ ಜೈನ ಸಾಹಿತ್ಯದಲ್ಲಿ ಬಹಳ ಪರಿಶ್ರಮವನ್ನು ಪಡೆದಿದ್ದರು; ಮಂಗಳೂರಿನಲ್ಲಿ ನೆರೆದ ೧೩ನೆಯ ಕರ್ಣಾಟಕ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರಾಗಿದ್ದರು. ಇಂತಹ ಮಹನೀಯರು ಕರ್ಣಾಟಕ ಭಾಷಾಭಿವೃದ್ಧಿಗೆ ಮತ್ತೂ ಹೆಚ್ಚಾಗಿ ಸಹಾಯ ಮಾಡಬಹುದಾದ ಆನುಕೂಲ್ಯವೊದಗಿದ್ದ ಸಂದರ್ಭದಲ್ಲಿ ಅಂತರಿಸಿದುದು ಕನ್ನಡಿಗರ ದೌರ್ಭಾಗ್ಯವೆಂದೇ ಹೇಳಬೇಕು.

**ಪ್ರಬಂಧ ರಚನೆಗಾಗಿ ಬಹುಮಾನ.**—'ಕನ್ನಡ ನಾಟಕದ ಬೆಳೆವಣಿಗೆ' (The Evolution of the Kannada Drama) ಯ ವಿಚಾರವಾಗಿ ಒಂದು ಪ್ರಬಂಧವನ್ನು ಇಂಗ್ಲಿಷು ಭಾಷೆಯಲ್ಲಿ ಬರೆದು ಕಳುಹಿಸಿ ಬಂದ ಪ್ರಬಂಧಗಳಲ್ಲಿ ಉತ್ತಮವಾದುದಕ್ಕೆ ೫೦ ರೂಪಾಯಿಗಳ ಬಹುಮಾನವನ್ನು ಕೊಡುವೆವೆಂದು ಗೂಢನಾಮರಾಗಿರುವ ಒಬ್ಬರು ಭಾಷಾಭಿಮಾನಿಗಳು ತಿಳಿಸಿರುತ್ತಾರೆ. ಅದರ ನಿಯಮಗಳು ಈ ರೀತಿ ಇರುವುವು:—ಕರ್ಣಾಟಕ ದೇಶದಲ್ಲಿದ್ದಿರಬಹುದಾದ ದೇಶೀಯ ನಾಟಕಗಳ ವಿಚಾರ, ಅದರ ವಿಕಸನ, ಸದ್ಯದ ಅದರ ಕಲಾ ನೈಪುಣ್ಯ ಸ್ಥಿತಿ—ಇವುಗಳನ್ನು, ಈ ವಿಷಯಕವಾದ ಆಧಾರಗಳು ಯಾವುವಾದರೂ ಇದ್ದಲ್ಲಿ, ಅಂಥವುಗಳ ಸಹಾಯದಿಂದ ವಿಮರ್ಶಿಸತಕ್ಕದ್ದು. ಈ ಉಪನ್ಯಾಸ ಸ್ಪರ್ಧೆಗೆ ಯಾರಾದರೂ ಪ್ರವೇಶಿಸಬಹುದು. ಉಪನ್ಯಾಸವು ಫುಲಿಸ್ಕೇಪು ಪತ್ರದ ಪೂರಾ ಅಳತೆಯ ೨೫ ಪುಟಗಳಲ್ಲಿ ಅಡಕವಾಗುವಷ್ಟು ಕೈ ಬರೆಹ, ಅಥವಾ ಟೈಪು ಬರೆಹವಾಗಿರತಕ್ಕದ್ದು. ಬರೆವಣಿಗೆಯು ಕಾಗದದ ಒಂದೇ ಕಡೆ ಇರಬೇಕು. ಈ ಪ್ರಬಂಧದ ಪ್ರತಿಯನ್ನು, ೧೯೩೩ನೆಯ ಮೇ ೧೫ನೆಯ

ತಾರೀಖಿನೊಳಗಾಗಿ ತಲಪುವಂತೆ, ಎರಡು ರೂಪಾಯಿಗಳ ರುಸುಮಿನೊಡನೆ, ಬೆಂಗಳೂರು ಮಿಥಿಕ್ ಸೊಸೈಟಿಯ ಜನರಲ್ ಸೆಕ್ರಿಟರಿಯವರಿಗೆ ಕಳುಹಿಸಿಕೊಡಬೇಕು. ಬಹುಮಾನ ಪ್ರದಾನದ ವಿಷಯವನ್ನು ಜಯಶೀಲನಾದ ಸ್ಪರ್ಧಿಗೆ ತಿಳಿಯಪಡಿಸಿ, ೧೯೩೩ನೆಯ ಜೂಲೈ ತಿಂಗಳ ಮೊದಲನೆಯ ವಾರದಲ್ಲಿ ಪ್ರಕಟಿಸಲಾಗುವುದು. ಅದೇ ಜೂಲೈ ತಿಂಗಳಿನಲ್ಲಿ ನಡೆಯಬೇಕಾಗಿರುವ ಮಿಥಿಕ್ ಸೊಸೈಟಿಯ ವಾರ್ಷಿಕಾಧಿವೇಶನದಲ್ಲಿ ಈ ಬಹುಮಾನವನ್ನು ಕೊಡಲಾಗುವುದು. ಸಮ್ಮತಿ ಪಡೆದ ಪ್ರಬಂಧವು ಎಲ್ಲ ವಿಷಯಗಳಲ್ಲಿಯೂ ಮಿಥಿಕ್ ಸೊಸೈಟಿಯ ಸಂಪೂರ್ಣ ಸ್ವತ್ತಾಗುವುದು.

[*The Quarterly Journal of the Mythic Society* for October 1932.

**ಕನ್ನಡಕ್ಕೆ ತಕ್ಕ ಮಾನ್ಯತೆ ದೊರೆಯಬೇಕು.**—ನಂಜನಗೂಡಿನ ಕರ್ಣಾಟಕ ಸಂಘದ ದ್ವಿತೀಯ ವಾರ್ಷಿಕೋತ್ಸವದಲ್ಲಿ ಅಧ್ಯಕ್ಷತೆ ವಹಿಸಿದ್ದ ಅರ್ಥಶಾಸ್ತ್ರ ವಿಶಾರದ ಡಾ॥ ಶಾಮಶಾಸ್ತ್ರೀ, ಬಿ.ಎ., ಪಿಎಚ್.ಡಿ. ಅವರು ಕನ್ನಡ ಭಾಷೆಯ ಅಭಿವೃದ್ಧಿಗಾಗಿ ಅನೇಕ ಕಾರ್ಯಗಳನ್ನು ಮಾಡಬೇಕಾಗಿದೆಯೆಂದು ಹೇಳುತ್ತ, ಈ ಸಲಹೆಗಳನ್ನು ಕೊಟ್ಟರು:—

(೧) ಕನ್ನಡವು ರಾಜ್ಯಕಾರ್ಯ ಭಾಷೆಯಾಗಬೇಕು; ಇಂಗ್ಲಿಷಿಗೆ ಈಗ ಇರುವ ಸ್ಥಾನವು ನ್ಯಾಯವಾಗಿ ಕನ್ನಡಕ್ಕೇ ದೊರೆಯಬೇಕು.

(೨) ಸಂಸ್ಕೃತ ಇಂಗ್ಲಿಷುಗಳಲ್ಲಿರುವಂತೆಯೇ ಕನ್ನಡದಲ್ಲೂ ಸ್ವತಂತ್ರ ಪ್ರೌಢ ಗ್ರಂಥಗಳಿದ್ದಿದ್ದರೆ, ಇತರ ದೇಶದವರೂ ಕನ್ನಡವನ್ನು ಗೌರವಿಸುತ್ತಿದ್ದರು.

(೩) ಸಂಸ್ಕೃತ ಪದಗಳಿಗೆ ಕನ್ನಡ ವಿಭಕ್ತಿ ಪ್ರತ್ಯಯಗಳನ್ನು ಹಚ್ಚಿ ಅವನ್ನು ಕನ್ನಡಕ್ಕೆ ತೆಗೆದುಕೊಳ್ಳುವಂತೆ, ವಿಧಿಯಿಲ್ಲದಿರುವ ಸಂದರ್ಭದಲ್ಲಿ ಇಂಗ್ಲಿಷು ಪದಗಳಿಗೂ ಅದೇ ರೀತಿ ಮಾಡಲು ಹಿಂದೆಗೆಯಬಾರದು.

(೪) 'ಪೂರ್ವಾಚಾರವೇ ಇರಬೇಕು, ಹೊಸ ಪದ್ಧತಿಗಳು ಬೇಡವೇ ಬೇಡ' ಎಂದು ನಾವೇನೂ ಹೇಳುವುದಿಲ್ಲ; ಸ್ವಾತಂತ್ರ್ಯ ವಹಿಸಲಿ.

(೫) ನಮಗೆ ಬೇಕಾದುದು ಪದ್ಯ ಗ್ರಂಥಗಳು ಮಾತ್ರವೇ ಅಲ್ಲ; ಗದ್ಯ ಗ್ರಂಥಗಳೇ ಈಗ ಹೆಚ್ಚಾಗಿ ಬೇಕು; ಅವುಗಳಲ್ಲಿ ಶಾಸ್ತ್ರ ಗ್ರಂಥಗಳೂ ಇರಬೇಕು.

['ವಿಶ್ವಕರ್ಣಾಟಕ'ದ ೬ನೆಯ ಸಾಹಿತ್ಯ ಸಂಚಿಕೆ.

**ಜ್ಞಾನಶಕ್ತಿಯು ಪರಂಪರಾ ಪ್ರಾಪ್ತವಾದುದು.**—'ಕೀಳ್ಮನುಷ್ಯನ ದೆಸೆಯಿಂದ ಭೀತಿ' (The Menace of the Under-Man) ಎಂಬ ಹೆಸರುಳ್ಳ ಗ್ರಂಥವನ್ನು 'ಲೋತ್ರಾಪ್ ಸ್ಟಾಡರ್ಡ್' ಎಂಬ ಲೇಖಕರು ಲಂಡನ್ನಿನಲ್ಲಿ ಪ್ರಕಟಿಸಿರುತ್ತಾರೆ. ಇದು ಕೇವಲ ಕೌತುಕಾವಹವಾಗಿರುವ ಗ್ರಂಥವಾಗಿದೆ. ಗ್ರಂಥದ ಆದಿಯಲ್ಲಿಯೇ ಲೇಖಕರು ಅವರ ಮುಖ್ಯಾಭಿಪ್ರಾಯವನ್ನು ವಿಶದಪಡಿಸಿರುತ್ತಾರೆ: "ನಾಗರಿಕತೆಯು ಕಾರಣಭೂತವಾದುದಲ್ಲ; ತೊಡಕುಗಳಿಂದ ಕೂಡಿದ್ದರೂ, ಅದು ಬರೀ ಕಾರ್ಯಭೂತವಾದುದು; ಮನುಷ್ಯ ಜಾತಿಯಲ್ಲಿ, ಅಥವಾ, ಅದರ ಕೆಲವು ಶಾಖೆಗಳಲ್ಲಿಯಾದರೂ ಸ್ವಾಭಾವಿಕವಾಗಿ ನೆಲಸಿರತಕ್ಕ ಉತ್ಕೃಷ್ಟತೆ, ಅಥವಾ

ಮೇಲ್ಮೆಯ ಫಲ. ನಾಗರಿಕತೆಯೂ ಬೆಳೆಯಬೇಕಾದರೆ, ಮೊದಲು ಉತ್ಕೃಷ್ಟವಾದ ಮಾನವ ಬೀಜ ಜಾತಿಯು ಆವಶ್ಯಕ. ಈ ನಾಗರಿಕತೆಯನ್ನು ಪರಿಪೂರ್ಣಗೊಳಿಸುವುದಕ್ಕಾಗಲಿ, ಅಥವಾ ಇದ್ದ ಸ್ಥಿತಿಯಲ್ಲಿಯೇ ಉಳಿಸಿಕೊಂಡಿರುವುದಕ್ಕಾಗಲಿ, ಮಾನುಷ ಬೀಜ ಜಾತಿಯನ್ನು ಉತ್ಕೃಷ್ಟತೆಯಲ್ಲಿಟ್ಟುಕೊಂಡಿರಬೇಕು. ನಾಗರಿಕತೆಯು ಸಂಪೂರ್ಣವಾಗಿ ಗುಣಪ್ರಧಾನವಾದುದು; ಗುಣವು ಸಂಪೂರ್ಣವಾಗಿ ಪರಂಪರೆಯನ್ನವಲಂಬಿಸಿರುವುದು.'' ಈ ಅಭಿಪ್ರಾಯವನ್ನು ಸಮರ್ಥನಮಾಡುವುದಕ್ಕಾಗಿ, ಲೇಖಕರು ಜೀವ ವಿಜ್ಞಾನ ವಿಷಯವಾಗಿಯೂ ಮನೋವಿಜ್ಞಾನ ವಿಷಯವಾಗಿಯೂ ಪಂಡಿತರು ಸಂಶೋಧನೆಯ ಫಲವಾಗಿ ಕಂಡುಹಿಡಿದಿರುವ ವಿಚಾರಗಳನ್ನು ಸಾಕ್ಷ್ಯವಾಗಿ ತೆಗೆದುಕೊಂಡು ತಮ್ಮ ಅಭಿಪ್ರಾಯಗಳನ್ನು ಸಮರ್ಥನಪಡಿಸಿರುತ್ತಾರೆ; ಮನುಷ್ಯನು ವರ್ಚಸ್ವಿಯಾಗಬೇಕಾದರೆ ಸನ್ನಿವೇಶಗಳು ಅಷ್ಟು ಸಹಾಯ ಮಾಡಲಾರವೆಂದೂ, ಕ್ರಮವಾಗಿ ಮನುಷ್ಯನ ಪುರೋಭಿವೃದ್ಧಿಗಾಗಬೇಕಾದ ಶಕ್ತಿಚಾಲನಕ್ಕೂ ಸಮಾಜದ ನಿರಂತರವಾದ ಏಳಿಗೆಗೂ ಪರಂಪರಾ ಪ್ರಾಪ್ತವಾದ ಶಕ್ತಿಯೇ ಕಾರಣವಾದುದೆಂದೂ ಸಾಧಿಸಿರುತ್ತಾರೆ.

[*The Mysore Economic Journal* for January 1933.




---

# ಗ್ರಂಥ ವಿಮರ್ಶೆ

## ೧. ಕರ್ಣಾಟಕ ಕವಿರಾಜಮಾರ್ಗಂ

ಸಂಪಾದಕರು.—ಎ. ವೆಂಕಟರಾಯರು, ಬಿ.ಎ., ಎಲ್.ಟಿ. ಮತ್ತು
ಪಂಡಿತ ಎಚ್. ಶೇಷಯ್ಯಂಗಾರ್ಯರು, ಮದರಾಸು.
ಪ್ರಕಾಶಕರು.—ಮದರಾಸು ಯೂನಿವರ್ಸಿಟಿ.
ಮುದ್ರಣಕಾರರು.—ಆನಂದ ಪ್ರೆಸ್, ಮದರಾಸು.

**ಡೆಮ್ಮೈ ಅಷ್ಟಪತ್ರ ಪುಟಗಳು XVIII+XXIV+೧೮೭ ; ಬೆಲೆ ರೂ. ೧—೮—೦ ; ೧೯೩೦.**

ಕವಿರಾಜಮಾರ್ಗವು ನಮಗೆ ದೊರೆತಿರುವ ಕನ್ನಡ ಗ್ರಂಥಗಳಲ್ಲೆಲ್ಲ ಅತಿ ಪ್ರಾಚೀನವಾದುದು. ಇದು ಅಲಂಕಾರ ಗ್ರಂಥ. ಇದರಲ್ಲಿ, ಕಾವ್ಯದೋಷ, ಶಬ್ದಾಲಂಕಾರ, ಅರ್ಥಾಲಂಕಾರ—ಎಂಬ ಮೂರು ವಿಷಯಗಳನ್ನು ಹೇಳುತ್ತ, ಪ್ರಾಸಂಗಿಕವಾಗಿ, ಆಗಿನ ಕಾಲದಲ್ಲಿಯ ಕನ್ನಡ ನಾಡು, ಕನ್ನಡದ ಭೇದಗಳು, ಕನ್ನಡ ಕಬ್ಬಿಗರು ಮುಂತಾದವುಗಳನ್ನು ಕುರಿತು ಪ್ರಸ್ತಾವಿಸಿದೆ. ಕನ್ನಡ ಸಾಹಿತ್ಯದಲ್ಲಿ ಹೊಸದೊಂದು ತರಂಗಮಾಲೆಯೆದ್ದು ಉರುಳುತ್ತಿರುವಾಗ, ಒಂದು ಸಾವಿರ ವರ್ಷಕ್ಕಿಂತ ಹಿಂದಿನ ಕನ್ನಡ ನಾಡು, ನುಡಿ, ಕಬ್ಬಗಳನ್ನು ಕುರಿತು ಹೇಳುವ ಈ ಗ್ರಂಥವನ್ನು ಪರಿಶೋಧಿಸಿ ಪುನರ್ಮುದ್ರಣ ಮಾಡಿಸಿದುದಕ್ಕಾಗಿ ಮದರಾಸು ವಿಶ್ವವಿದ್ಯಾನಿಲಯಕ್ಕೂ ಅಲ್ಲಿಯ ಕನ್ನಡ ಭಾಷಾಧಿಕಾರಿಗಳಾದ ಗ್ರಂಥ ಸಂಪಾದಕರಿಗೂ ಕನ್ನಡಿಗರೆಲ್ಲರೂ ಕೃತಜ್ಞರಾಗಿರಬೇಕು.

ಈ ಗ್ರಂಥವು ಸುಮಾರು ೩೫ ವರುಷಗಳ ಹಿಂದೆ ಶ್ರೀಮಾನ್ ಕೆ. ಬಿ. ಪಾಠಕರವರ ಸಂಪಾದಕತ್ವದಲ್ಲಿ ಮೈಸೂರು ಸರಕಾರಕ್ಕಾಗಿ ಪ್ರಕಟವಾಯಿತು. ಗ್ರಂಥಕರ್ತೃವು ನೃಪತುಂಗನೇ ಅಹುದೇ ಅಲ್ಲವೇ ಎಂಬ ವಿಚಾರದಲ್ಲಿ ಸಾಕಾದಷ್ಟು ಮಟ್ಟಿಗೆ ವಾದವಿವಾದಗಳು ನಡೆದಿವೆ. ಪ್ರಕೃತ ಗ್ರಂಥದ ಸಂಪಾದಕರು ಅವುಗಳನ್ನೆಲ್ಲ ಪರಿಶೀಲಿಸಿ, ನೃಪತುಂಗನ ಆಸ್ಥಾನದಲ್ಲಿದ್ದ **ಕವೀಶ್ವರ**ನೆಂಬ ಕವಿಯು **ಶ್ರೀವಿಜಯ**ನ **ಕವಿಮಾರ್ಗ**ವೆಂಬ ಗ್ರಂಥವನ್ನನುಸರಿಸಿ ಈ ಕವಿರಾಜಮಾರ್ಗವನ್ನು ಬರೆದನೆಂದೂ, ಹೀಗೆ ಬರೆಯುವಲ್ಲಿ ಆ ವಿದ್ವನ್ನೃಪನ ಅಭಿಪ್ರಾಯಗಳನ್ನೂ ತೆಗೆದುಕೊಂಡಿರಬಹುದೆಂದೂ ಹೇಳುತ್ತಾರೆ.

ಗ್ರಂಥದ ಜೊತೆಗೆ ೨೪ ಪುಟಗಳ ಪೀಠಿಕೆಯೂ, ೭ ಪರಿಶಿಷ್ಟಗಳೂ ಇವೆ. ಇದು ಪ್ರಾಚೀನ ಗ್ರಂಥವಾದುದರಿಂದ ಇದರಲ್ಲಿಯ ಅನೇಕ ಪದಗಳಿಗೆ ಅರ್ಥವಾಗುವುದಿಲ್ಲ. ಆದುದರಿಂದ ಕ್ಲಿಷ್ಟಪದಗಳ ಒಂದು ಕೋಶವನ್ನು ಇದಕ್ಕೆ ಸೇರಿಸಬೇಕಾ

ಗಿದ್ದಿತು. ಅಲ್ಲದೆ, ಈ ಗ್ರಂಥದಲ್ಲಿ ಬಂದಿರುವ ಕೆಲವು ವಿಚಿತ್ರ ವೃತ್ತಗಳನ್ನು ಕುರಿತು ಮತ್ತೊಂದು ಪರಿಶಿಷ್ಟವನ್ನು ಸೇರಿಸಬಹುದಾಗಿದ್ದಿತು (ಪುಟ ೬೬ರಿಂದ ೩೦ರ ವರೆಗೆ ನೋಡಿರಿ).

ಪೀಠಿಕೆಯಲ್ಲಿ ಸಂಪಾದಕರು ತಮ್ಮ ಅಭಿಪ್ರಾಯಗಳನ್ನು ಸಮರ್ಥಿಸಲು ಹೊರಟಿರುವ ಮಾರ್ಗವು ಅಷ್ಟು ಸುಪಥವಾಗಿರುವಂತೆ ಕಾಣುವುದಿಲ್ಲ. ಓದಿದರೆ ಅಭಿಪ್ರಾಯವು ಮನಸ್ಸಿಗೆ ಥಟ್ಟನೆ ಹೊಳೆಯುವಂತಿಲ್ಲ.

ಕವಿರಾಜಮಾರ್ಗದ ಕರ್ತೃವು ಯಾರೆಂಬ ವಾದಗ್ರಸ್ತ ವಿಷಯವನ್ನು ಬರೆಯುವಾಗ, ಉಭಯ ಪಕ್ಷದವರ ಹೆಸರುಗಳನ್ನೂ ಅಭಿಪ್ರಾಯಗಳನ್ನೂ ಸೂಕ್ಷ್ಮವಾಗಿ ತಿಳಿಸಿಬಿಟ್ಟುಬಿಡುವುದಕ್ಕಿಂತ ಆಯಾ ಲೇಖನಗಳೆಲ್ಲಿವೆಯೆಂಬುದನ್ನೂ ತಿಳಿಸಿದ್ದರೆ ಹೆಚ್ಚು ಉಪಯೋಗವಾಗುತ್ತಿದ್ದಿತು.

ಸಂಪಾದಕರು ಹಿಂದಣ ಮುದ್ರಣ ಗ್ರಂಥದಲ್ಲಿಯ ಪಾಠಗಳನ್ನು ಅನೇಕ ಕಡೆ ತಿದ್ದಿರುತ್ತಾರೆ: ಕೆಲವು ಸಮರ್ಪಕವಾಗಿ ಕಾಣುವುವು; ಮತ್ತೆ ಕೆಲವು ಹಾಗೆ ಕಾಣುವುದಿಲ್ಲ. ಏನೇ ಆಗಲಿ, ಮೊದಲ ಮುದ್ರಣ ಗ್ರಂಥದಲ್ಲಿ ಕೊಟ್ಟಿರುವಂತೆ, ಇಲ್ಲಿಯೂ ಇತರ ಮೂರು ಪ್ರತಿಗಳ ಪಾಠಾಂತರಗಳನ್ನು ಅಡಿ ಟಿಪ್ಪಣದಲ್ಲಿ ಕೊಟ್ಟಿರಬಹುದಾಗಿದ್ದಿತು. ಇವನ್ನು ಕೊಡದಿರುವುದು ಒಂದು ನ್ಯೂನತೆಯೆಂದೇ ಹೇಳಬೇಕು.

ಉದಾ.—ಆರಂಭ ಪದ್ಯದಲ್ಲಿ ಈ ಸಂಪಾದಕರು ಮಾಡಿರುವ ಬದಲಾವಣೆಯು ಅಷ್ಟು ತೃಪ್ತಿಕರವಾಗಿ ಕಾಣುವುದಿಲ್ಲ: ಇವರು ಕೊಟ್ಟಿರುವಂತೆ, "ಸಂಪ್ರೀತಿಯಿನಾವಗಮುಗಲಳ್" ಎಂಬ ಪಾಠಾಂತರವೊಂದಿದ್ದರೂ, "ಸಂಪ್ರೀತಿಯಿನಾವನನಗಲಳ್" ಎಂದು ಪ್ರಥಮ ಮುದ್ರಣದ ಪ್ರತಿಯಲ್ಲಿ ಕೊಟ್ಟಿರುವ ಪಾಠವೇ ಉತ್ತಮವೆಂದು ತೋರುತ್ತದೆ.

I. ೧೦—"ನೋದುವುದಲ್ತೆ ಗಿಳಿಗಳುಂ ಪುರುಳಿಗಳುಂ" ಎಂಬುದನ್ನು, ಅಡಿ ಟಿಪ್ಪಣದಲ್ಲಿ ಕೊಟ್ಟಿರುವಂತೆ, "ನೋದುವುವಲ್ತೆ......" ಎಂದು ತಿದ್ದಬಹುದಾಗಿದ್ದಿತ್ತು.

ಗೀತಿಕೆ॥ ಕಾಣೆ[1]ಗೆಯ್ದುಂ ತಂನ ದೋಷಮಂ ।
ಕಾಣದಂತೆಂದುಂ ಕಣ್ಗಳ್ತಂಮ ಕಾಡಿಗೆಯಂ ॥
ಪೂಣಿಗನಾದುದಜಂ ಪೆಜರಿಂ ।
ಜಾಣರಿಂ ನೋ[2]ಡಿಸಿ ಪೇಳ್ವುದು ಕಬ್ಬಮಂ ॥ I. ೪೫.

ಇದು ಪ್ರಥಮ ಮುದ್ರಣದ ಪ್ರತಿಯ ಪಾಠ; ಇದು ಸಮರ್ಪಕವಾಗಿಲ್ಲ. ಅಡಿ ಟಿಪ್ಪಣದಲ್ಲಿ "1—C. ಕಾಣೆನೆಗೆಯ್ದುಂ", "2—C. ಜಾಣರಿವೋದಿಸಿ" ಎಂದು ಕೊಟ್ಟಿದೆ. ಈ ಸಂಪಾದಕರು, ಮುಂದೆ ಕೊಡುವಂತೆ ತಿದ್ದಿರುವುದು ಸರಿಯೆಂದು ತೋರುವುದು :—

(ಕಾಣನೇ)ಗೆಯ್ದುಂ ತನ್ನ ದೋಷಮಂ ।
ಕಾಣದಂತೆಂದುಂ ಕಣ್ಗಳ್ ತಮ್ಮ ಕಾಡಿಗೆಯಂ ॥
ಪೂಣಿಗನಾದುದಱಂ ಪೆಱರಿಂ ।
ಜಾಣ(ರಿನೋದಿಸಿ) ಪೇೞ್ವುದು ಕಬ್ಬಮಂ ॥

ಇಲ್ಲಿ ಕೊಟ್ಟಿರುವ ಕಂಸಗಳಿಗೆ ಅರ್ಥವೇನು? ಇನ್ನೂ ಅನೇಕ ಕಡೆಗಳಲ್ಲಿ ಹೀಗೆಯೇ ಇರುವುದು. ಈ ವಿಷಯವಾಗಿ ಎಲ್ಲಿಯೂ ತಿಳಿಸಿರುವಂತಿಲ್ಲ.

ಪ್ರಕೃತ ಗ್ರಂಥದಲ್ಲಿ, ಸಂಪಾದಕರು ಅಕ್ಷರ ಸಂಯೋಜನದಲ್ಲಿ ಮಾಡಿರುವ ಬದಲಾವಣೆಗಳು ಸಾಮಾನ್ಯವಾಗಿ ಸಮರ್ಪಕವಾಗಿರುವುವು:

ಉದಾ.—" ಸಭಾಸದಮ್ಮ್ರಂನಿಸುವರ್ " (I. 5)=ಸಭಾಸದರ್ ಮನ್ನಿಸುವರ್ "

ಕಿಱುವಕ್ಕಳ್ಮಾಮೂಗರು । ಮಱಪಲ್ಕಱವರ್ವ್ವಿವೇವಕಮಂ . . . . I. ೩೯ "

ಎಂಬುದನ್ನು

" ಕಿಱುವಕ್ಕಳ್ ಮಾಮೂಗರು । ಮರಿಪಲ್ಕಱವರ್ ವಿವೇಕಮಂ . . . ."

ಎಂದು ತಿದ್ದಿದೆ. ಆದರೆ ಇದು ಹೀಗಿರಬೇಕೆಂದು ತೋರುತ್ತದೆ:—

" ಕಿಱುವಕ್ಕಳುಮಾಮೂಗರು ।ಮರಿ. . . ."

ಪದ ವಿಭಾಗ ಮಾಡುವುದರಲ್ಲಿ, ಸಂಪಾದಕರು ಒಂದು ಕ್ರಮವನ್ನನುಸರಿಸಿಲ್ಲ; ಕೆಲವು ಪಾದಗಳಲ್ಲಿ ಸ್ಥಳವನ್ನೇ ಬಿಡದೆ ಅಕ್ಷರಗಳನ್ನು ಸೇರಿಸಿಬಿಟ್ಟಿರುವರು; ಇದು ಪಾಠಕರಿಗೆ ಕೆಲವು ಸಂದರ್ಭಗಳಲ್ಲಿ ತೊಂದರೆಯಾಗುವುದು. ಉದಾ.—

(೧) " ಜರದ್ವಧೂವಿಷಯಸುರತರಸರಸಿಕತೆವೋಲ್ " (I. ೫೦); (೨) " ಮೃದಂಗಸಂಗೀತಕಾದಿ ಮಧುರರವಂಬೋಲ್ " (I. ೫೫)

" ಮದಿರಾಪರವಶ। ಶರೀರನುಂ ಪೇೞ್ಗು ಮಾವನಱವಂ ಪೇೞ್ಗುಂ ॥ " I. ೮೦—

ಎಂಬಲ್ಲಿ, ಗುರುತುಮಾಡಿರುವ ಕಡೆ ಸ್ಥಳ ಬಿಟ್ಟಿರುವುದು ತಪ್ಪು.

ಹಿಂದಿನ ಮುದ್ರಿತ ಗ್ರಂಥದಲ್ಲಿಲ್ಲದ ಒಂದು ಪದ್ಯವು (ಪುಟ ೧೧, ಪದ್ಯ ೫೨) ಈ ಪುಸ್ತಕದಲ್ಲಿದೆ. ಇದರ ವಿಚಾರವಾಗಿಯೂ, ಪ್ರಕೃತ ಗ್ರಂಥದಲ್ಲಿ ಯಾವ ಮಾತೃಕೆಯನ್ನು ಯಾವ ಕಾರಣದಿಂದ ಉಪಯೋಗಿಸಿಕೊಂಡಿರುವರೆಂಬ ವಿಚಾರವಾಗಿಯೂ, ಅಲ್ಲಲ್ಲಿ ಕಂಸಗಳ ಮಧ್ಯೇ ಕೊಟ್ಟಿರುವ ಪಾಠಗಳು ಯಾವುವೆಂಬುದಾಗಿಯೂ, ಅವತರಣಿಕೆಯಲ್ಲಿ ಸ್ಪಷ್ಟವಾಗಿ ಹೇಳಬೇಕಾಗಿದ್ದಿತು. ಪದ್ಯಗಳಲ್ಲಿ ಕೆಲವು ಅಕ್ಷರಗಳನ್ನು ಕಪ್ಪಕ್ಷರಗಳಲ್ಲಿ ಕೊಟ್ಟಿರುವುದು ಒಂದು ಕ್ರಮವನ್ನವಲಂಬಿಸಿರುವಂತೆ ತೋರುವುದಿಲ್ಲ.

ವಿಶ್ವವಿದ್ಯಾನಿಲಯದ ಯೋಗ್ಯತೆಗೆ ತಕ್ಕಂತೆ ಪುಸ್ತಕದ ಮುದ್ರಣವೂ ರೂಪವೂ ಅಂದವಾಗಿರಬೇಕು; ಯಾವ ತಪ್ಪುಗಳೂ ಇರಬಾರದು. ಇವಕ್ಕೆ ಸಂಪಾದಕರು ಅಷ್ಟು ಗಮನಕೊಟ್ಟಂತಿಲ್ಲ; ೧೮೭ ಪುಟಗಳಿಗೆ ೮ ಪುಟಗಳಷ್ಟು ಶುದ್ಧಿ ಪತ್ರಿಕೆಯನ್ನು ಕೊಟ್ಟಿರುವರಲ್ಲದೆ, ಅನೇಕ ತಪ್ಪುಗಳನ್ನು ಹಾಗೆಯೇ ಬಿಟ್ಟಿರುವರು. ಅವತರಣಿಕೆಯ

ಮುದ್ರಣದ ತಪ್ಪುಗಳನ್ನು ಶುದ್ಧಿ ಪತ್ರಿಕೆಯಲ್ಲಿ ತೋರಿಸಿಯೇ ಇಲ್ಲ: ಇದರಲ್ಲಿ ಅನೇಕ ಪ್ರಬಲವಾದ ತಪ್ಪುಗಳಿರುವುವು.

ನಾವು ಈ ವಿಷಯವನ್ನು ಇಷ್ಟು ಒತ್ತಿ ಹೇಳಲು ಕಾರಣವೇನೆಂದರೆ, ಕನ್ನಡಕ್ಕೆ ಪ್ರೋತ್ಸಾಹವನ್ನು ಕೊಡಲು ಸರಕಾರದವರು ಈಗೀಗ ಪ್ರಾರಂಭ ಮಾಡಿರುವಲ್ಲಿ, ಆ ಸಹಾಯವು ಜನರಲ್ಲಿ ಹೆಚ್ಚು ಹೆಚ್ಚಾಗಿ ಸಾರ್ಥಕ್ಯ ಹೊಂದುವಂತೆ ಮಾಡುವುದು ಭಾಷಾಭಿಮಾನಿಗಳ ಕರ್ತವ್ಯವಾದುದರಿಂದ, ಪಂಡಿತರಾದ ಸಂಪಾದಕರು ಎಷ್ಟು ಶ್ರಮವನ್ನಾದರೂ ಸಹಿಸಿಕೊಂಡು ತಪ್ಪುಗಳು ಬೀಳದಂತೆ ಮಾಡಿದಲ್ಲಿ, ಕನ್ನಡ ಭಾಷಾಭ್ಯಾಸಿಗಳಿಗೆ ಉತ್ಸಾಹವು ಹೆಚ್ಚಾಗಿ ಮೂಡಿ, ಇಂತಹ ಗ್ರಂಥಗಳು ಹೆಚ್ಚು ಹೆಚ್ಚಾಗಿ ಪ್ರಕಟವಾಗಲು ಅವಕಾಶ ದೊರೆಯುವುದೆಂದು ನಮ್ಮ ನಂಬಿಕೆ.

---

## ೨. ಶ್ರೀಕೃಷ್ಣ ಗಾರುಡಿ; ೩. ಶ್ರೀಕೃಷ್ಣ ಪಾರಿಜಾತ

ಲೇಖಕರು.—ಬೆಳ್ಳಾವೆ ನರಹರಿಶಾಸ್ತ್ರಿಗಳು, ಬೆಂಗಳೂರು.

ಪ್ರಕಾಶಕರು.—ಬೆಳ್ಳಾವೆ ಬುಕ್ ಡಿಪೊ, ಬೆಂಗಳೂರು ಸಿಟಿ.

ಮುದ್ರಣಕಾರರು.—ಮೋದಿ ಪವರ್ ಪ್ರಿಂಟಿಂಗ್ ವರ್ಕ್ಸ್, ಬೆಂಗಳೂರು ಸಿಟಿ.

ಕ್ರೌನ್ ಅಷ್ಟಪತ್ರ ಪುಟಗಳು ೧೩೮+೧೨; ೧೧೦; ಬೆಲೆ ೧ ರೂ.; ೧೨ ಆಣೆ; ೧೯೩೨.

ಇವೆರಡೂ ಶ್ರೀಕೃಷ್ಣ ಪರಮಾತ್ಮನ ಮಹಿಮೆಯನ್ನೂ, ಗರ್ವಿಗಳ ಮದವನ್ನು ತಗ್ಗಿಸಿ ವಿವೇಕಿಗಳನ್ನಾಗಿ ಪರಿಣಾಮಗೊಳಿಸುವುದರಲ್ಲಿ ಆತನ ಕೌಶಲವನ್ನೂ ತೋರಿಸುವ ಉದ್ದೇಶದಿಂದ ಬರೆದಿರುವ ನಾಟಕಗಳು. ಇವೆರಡರಲ್ಲಿಯೂ, "ಮಮ ಮಾಯಾ ದುರತ್ಯಯಾ—ಎಂದು ಹೇಳಿರುವ ಶ್ರೀಕೃಷ್ಣ ಪರಮಾತ್ಮನ ಮಹಿಮೆಯನ್ನು ವ್ಯಂಗ್ಯವಾಗಿ ತೋರ್ಪಡಿಸಬೇಕೆಂಬುದೇ" ಮುಖ್ಯವಾದ ಉದ್ದೇಶವೆಂದು ಗ್ರಂಥಕರ್ತರೇ **ಶ್ರೀಕೃಷ್ಣ ಪಾರಿಜಾತ** ನಾಟಕದ ಮುನ್ನುಡಿಯಲ್ಲಿ ಹೇಳಿದ್ದಾರೆ. ಈ ಉದ್ದೇಶವು ಚೆನ್ನಾಗಿ ಸಿದ್ಧಿಸಿದೆ. ಈ ಗ್ರಂಥಗಳೆರಡರ ಅಂತ್ಯದಲ್ಲಿಯೂ, ನಾಟಕದಲ್ಲಲ್ಲಲ್ಲಿ ಬರಬೇಕಾದ ರಾಗಗಳನ್ನು ಅನುಬಂಧವಾಗಿ ಕೊಟ್ಟಿದೆ.

**ಶ್ರೀಕೃಷ್ಣ ಗಾರುಡಿ** ನಾಟಕವು ಜನರಲ್ಲಿ ಪ್ರಚಾರದಲ್ಲಿರುವ—ಆದರೆ ಮಹಾಭಾರತದಲ್ಲಿಲ್ಲದ—ಕಥೆಯೊಂದರ ಆಧಾರದ ಮೇಲೆ ವಿರಚಿತವಾಗಿದ್ದಂತೆ ತೋರುತ್ತದೆ. ಭೀಮಾರ್ಜುನರಿಗೆ ಭಾರತ ಯುದ್ಧದ ವಿಜಯಪ್ರಾಪ್ತಿಗೆ ತಾವೇ ಕಾರಣರೆಂಬ ಹೆಮ್ಮೆಯುಂಟಾದ ಕಾಲದಲ್ಲಿ ಶ್ರೀಕೃಷ್ಣನು ಗಾರುಡಿಗನ ವೇಷದಿಂದ ಬಂದು ತನ್ನ ಮಾಯಾ ಕೌಶಲದಿಂದ ಅವರ ಸೊಕ್ಕನ್ನಡಗಿಸಿ ಬುದ್ಧಿಗಲಿಸಿದನೆಂಬುದೇ ಆ ಕಥೆ. ಶ್ರೀಮಾನ್ ಶಾಸ್ತ್ರಿಗಳವರು ಆದರ ಆಧಾರದ ಮೇಲೆ ಗ್ರಂಥವನ್ನು ರಚಿಸುವುದರಲ್ಲಿ ತಮ್ಮ ಕೌಶಲವನ್ನು ಚೆನ್ನಾಗಿ ತೋರಿಸಿದ್ದಾರೆ.

ಪ್ರಥಮಾಂಕದಲ್ಲಿ, ಭೀಮಾರ್ಜುನರ ದುರಹಂಕಾರದ ದೆಸೆಯಿಂದ ಅವರಿಗೂ ಯುಧಿಷ್ಠಿರನಿಗೂ ವೈಮನಸ್ಯವುಂಟಾಗುವುದು. ಅದನ್ನು ತಿಳಿದ ಶ್ರೀಕೃಷ್ಣನು, ತಾನು ಗಾರುಡಿಗನ ವೇಷವನ್ನು ಧರಿಸಿ,

ಮಾಯಾ ಸರ್ಪ ರೂಪವನ್ನು ಧರಿಸಿದ ಬಲರಾಮನೊಡನೆಯೂ, ಮಾಯಾ ತುರಗವಾದ ಗರುಡನೊಡನೆಯೂ ಯುಧಿಷ್ಠಿರನ ಆಸ್ಥಾನಕ್ಕೆ ಹೋಗಿ ಅವರ ಮದನನ್ನಿಳಿಸುವುದಾಗಿ ದ್ವಿತೀಯಾಂಕದಲ್ಲಿ ನಿರ್ಧರಿಸುವನು. ಮೂರನೆಯ ಅಂಕದಲ್ಲಿ, ಮಾಯಾ ಸರ್ಪವನ್ನೆತ್ತುವ ವಿಚಾರದಲ್ಲಿ ಭೀಮನೊಡನೆಯೂ, ಮಾಯಾ ತುರುಗವನ್ನೇರಿ ಸಂಚರಿಸಿ ಬರುವ ವಿಚಾರದಲ್ಲಿ ಅರ್ಜುನನೊಡನೆಯೂ ಗಾರುಡಿಗನು ಪಂಥವನ್ನು ಹೂಡುವನು. ಭೀಮನು ಹಾವನ್ನು ಎತ್ತುವ ಪ್ರಯತ್ನದಲ್ಲಿ ಅದರ ಹೊಟ್ಟೆಯ ಕೆಳಕ್ಕೆ ಕೈಚಾಚಿ ಅದರ ಭಾರದಿಂದ ಮುಕ್ಕಿರಿದು ಬಾಧೆಪಡುವನು. ಅರ್ಜುನನು ಮಾಯಾಶ್ವವನ್ನೇರಿ ಹೊರಟುಹೋಗುವನು. ನಾಲ್ಕನೆಯ ಅಂಕದಲ್ಲಿ ಕುದುರೆಯು ಅರ್ಜುನನನ್ನು ಅರಣ್ಯದಲ್ಲಿ ಕೆಡಹಿ ಹಾರಿಹೋಗುವುದು. ಮೂರ್ಛಿತನಾಗಿದ್ದ ಅರ್ಜುನನು, ಮೋಹನಾಕಾರವನ್ನು ಧರಿಸಿ ಬಂದ ಮಾಯಾ ಮೋಹಿನಿಯೆಂಬ ರಾಕ್ಷಸಿಯ ಉಪಚಾರದಿಂದ ಎಚ್ಚೆತ್ತು ಅವಳನ್ನು ಮೋಹಿಸಿ, ಅವಳೊಡನೆ ಅವಳ ಶೃಂಗಾರ ವನಕ್ಕೆ ಹೋಗಿ, ಅಲ್ಲಿ ಅವಳ ಘೋರ ರೂಪವನ್ನು ಕಂಡು, ಅವಳ ಅಸಾಧಾರಣ ಶಕ್ತಿ ಸಾಮರ್ಥ್ಯಗಳ ಮೇಲೆ ತನ್ನ ದೇನೂ ಸಾಗದೆ, ಅವಳ ವಶವರ್ತಿಯಾಗುವನು. ಅಲ್ಲಿಗೆ ನಾಲ್ಕನೆಯ ಅಂಕವು ಮುಗಿಯುವುದು. ಅವಳಿಗೆ ಅನೇಕ ಮಕ್ಕಳಿರುವುವು. ಹೆಂಡತಿಯ ಹಿಂಸೆಯನ್ನೂ ಮಕ್ಕಳ ಕಾಟವನ್ನೂ ಸಹಿಸಲಾರದೆ ಅರ್ಜುನನು ತಲ್ಲಣಿಸುವನು. ಐದನೆಯ ಅಂಕದಲ್ಲಿ, ಆತನು ಅವರಿಗೆ ಆಹಾರವನ್ನು ಹುಡುಕಿ ತರಲು ಹೋಗಿರುವಲ್ಲಿ, ಶ್ರೀಕೃಷ್ಣನ ಕೋರಿಕೆಯಂತೆ ಮಾಯಾಶ್ವವು ಅವನಿಗೆ ಗೋಚರವಾಗುವುದು. ಆಗ ತನ್ನ ಬೆನ್ನನ್ನೇರಿದ ಅರ್ಜುನನನ್ನು ಅದು ಯುಧಿಷ್ಠಿರನ ಆಸ್ಥಾನಕ್ಕೆ ಸುರಕ್ಷಿತವಾಗಿ ಕರೆದೊಯ್ಯುವುದು.

ಅಷ್ಟರಲ್ಲಿ, ತನ್ನ ಮೈಗೆ ಸುತ್ತಿಕೊಂಡಿದ್ದ ಹಾವನ್ನು ಎಳೆದೆತ್ತಿ ಎಸೆಯಲಾರದೆ ಭೀಮಸೇನನು ಬಾಧೆಪಡುತ್ತಿರುವನು. ಶ್ರೀಕೃಷ್ಣನನ್ನು ಪ್ರಾರ್ಥಿಸಿ, ಸಹದೇವನು ಅತಿ ಸುಲಭನಾಗಿಯೇ ಆ ಕಾರ್ಯ ವನ್ನು ಮಾಡಿ ಹಾವನ್ನು ದೂರವಾಗಿ ಬಿಸುಡುವನು. ಭೀಮನ ಗರ್ವವು ಪರಿಹಾರವಾಗುವುದು. ಗಾರುಡಿಗನಿಗೆ ಅರ್ಧ ರಾಜ್ಯವನ್ನು ಕೊಡಬೇಕಾಗುತ್ತಿದ್ದುದು ತಪ್ಪುವುದು. ಅರ್ಜುನನು ಬಾರದಿರುವುದ ಕ್ಕಾಗಿ ಯುಧಿಷ್ಠಿರನು ವ್ಯಾಕುಲಪಡುತ್ತಿರುವಲ್ಲಿ ಅರ್ಜುನನು ಬರುವನು. ಅವನು ವಿಜಯಿಯಾಗಿ ಬಂದನೆಂದೂ, ಈ ಸಂಬಂಧದಲ್ಲಿ ಅರ್ಧ ರಾಜ್ಯವು ಗಾರುಡಿಗನಿಗೆ ಹೋಗಬೇಕಾಗಿದ್ದುದೂ ತಪ್ಪಿತೆಂದೂ ಯುಧಿಷ್ಠಿರನೇ ಮುಂತಾದವರು ಸಂತೋಷಿಸುತ್ತಿರುವಾಗಲೇ ಮಾಯಾ ಮೋಹಿನಿಯು ಮಕ್ಕಳೊಡನೆ ಬಂದು, ಅರ್ಜುನನು ಮರೆಮಾಜಿದ್ದ ಸಂಗತಿಗಳನ್ನೆಲ್ಲ ಹೊರಗೆಡಹುವಳು. ಅರ್ಜುನನು ಪಂಥದಲ್ಲಿ ಸೋತುದಕ್ಕಾಗಿ ಅರ್ಧ ರಾಜ್ಯವನ್ನು ಕೊಡುವ ಅಪಮಾನವನ್ನು ಸಹಿಸಲಾರದೆ, ನಕುಲನು ಶ್ರೀಕೃಷ್ಣ ನನ್ನು ಧ್ಯಾನಿಸಿ ಮಾಯಾ ತುರಗವನ್ನೇರಿ ವಿಹರಿಸಿ ಪಂಥವನ್ನು ಗೆಲ್ಲುವನು. ಅರ್ಜುನನಿಗೆ ಅಪಮಾನ ವಾಗುವುದು. ಭೀಮಾರ್ಜುನರ ಮದವಿಳಿದು ಕೃಷ್ಣದರ್ಶನಕ್ಕಾಗಿ ಅವರು ತವಕಪಡುವರು. ಪಾಂಡವರೂ ದ್ರೌಪದಿಯೂ ಕೃಷ್ಣ ಪರಮಾತ್ಮನನ್ನು ಪ್ರಾರ್ಥಿಸುವರು. ಆತನು ರುಕ್ಮಿಣೀ ಸತ್ಯಭಾಮಾ ಬಲರಾಮ ಗರುಡ ಮಕರಂದರೊಡನೆ ಪ್ರತ್ಯಕ್ಷನಾಗುವನು; ಅಲ್ಲದೆ, ತಾನೂ ತನ್ನ ಮಿತ್ರ ಮಕರಂದನೂ ಗಾರುಡಿಗರಾಗಿ ವೇಷವನ್ನು ಧರಿಸಿ ಬಂದುದೇ ಮುಂತಾದ ಸಂಗತಿಗಳನ್ನು ತಿಳಿಸಿ ಭೀಮಾರ್ಜುನರ ಅಪರಾಧವನ್ನು ಮನ್ನಿಸುವನು.

**ಶ್ರೀಕೃಷ್ಣ ಪಾರಿಜಾತ.**—ನಾಟಕವು ಶ್ರೀಮದ್ಭಾಗವತ ದಶಮ ಸ್ಕಂಧದಲ್ಲಿ ಹೇಳಿರುವ ಪಾರಿಜಾತಾಪಹರಣದ ಕಥಾಭಾಗದ ಮತ್ತು ರುದ್ರಭಟ್ಟನ ಜಗನ್ನಾಥ ವಿಜಯದ ಆಧಾರದ ಮೇಲೆ ರಚಿತವಾಗಿದೆ. ಆದರೆ ನಾಟಕಕ್ಕೆ ಅನುಕೂಲವಾಗು

ನಂತೆ, "ಕೆಲವು ಪಾತ್ರ ಸಂದರ್ಭ ಸಂವಿಧಾನ"ಗಳನ್ನು ಕಲ್ಪಿಸಿಕೊಂಡು ಗ್ರಂಥ ಕರ್ತರು ನಾಟಕವನ್ನು ರಂಗಪ್ರದರ್ಶನಕ್ಕೆ ತಕ್ಕಂತೆ ರಚಿಸಿರುವರು. ನಾಟಕವು ಮೊದಲಿನಿಂದ ಕೊನೆಯವರೆಗೂ ಬಹಳ ಸ್ವಾರಸ್ಯವಾಗಿ ಸೊಗಸಾಗಿದೆ.

ದೇವೇಂದ್ರ ಭವನದಲ್ಲಿ ಉಮಾ ಮಹೇಶ್ವರ ಪ್ರತಿಮೆಗಳ ಪೂಜೆಯು ನಡೆಯುತ್ತಿರುವ ದೃಶ್ಯದಿಂದ ಗ್ರಂಥಾರಂಭವಾಗುವುದು. ವಿಭವಮತ್ತನಾದ ದೇವೇಂದ್ರನು ತನಗಿಂತಲೂ ಶ್ರೇಷ್ಠರಾದವರನ್ನು ತೋರಿಸುವೆನೆಂಬ ನಾರದನ ಮಾತಿಗೆ ಕೆರಳಿ ನಾರದನನ್ನು ಅಲಕ್ಷ್ಯವಾಗಿ ಕಾಣುವನು; ಆ ಬಳಿಕ, ಬೃಹಸ್ಪತಿಯ ಬುದ್ಧಿವಾದವನ್ನು ಕೇಳಿ ನಾರದನಿಗೆ ದೇವತಾಪ್ರಸಾದವಾದ ಪಾರಿಜಾತ ಪುಷ್ಪವನ್ನು ಕೊಟ್ಟು ಅವನನ್ನು ಬೀಳ್ಕೊಳ್ಳುವನು. ನಾರದನು ದ್ವಾರಕಾ ನಗರಕ್ಕೆ ಬಂದು, ಪುಣ್ಯಕ ವ್ರತವನ್ನಾಚರಿಸುತ್ತಿರುವ ರುಕ್ಮಿಣಿಯ ಅಂತಃಪುರಕ್ಕೆ ಬಾರದಿರುವ ಸತ್ಯಭಾಮಾ ದೇವಿಯ ಮಾತ್ಸರ್ಯ ಸ್ವಭಾವವನ್ನು ಹಳಿದು, ಪಾರಿಜಾತ ಪುಷ್ಪವನ್ನು ರುಕ್ಮಿಣೀದೇವಿಗೆ ಕೃಷ್ಣನಿಂದ ಕೊಡಿಸುವನು. ಇದನ್ನು ಕೇಳಿ ಸತ್ಯಭಾಮೆಯು ಕುಪಿತಳಾಗುವಳು.

ಅತ್ತ ಬಲರಾಮನು ಮದ್ಯಪಾನರತನಾಗಿ ನಾರದನಿಗೆ ಮದ್ಯವನ್ನು ಕೊಡಹೋಗುವನು. ನಾರದನು ಮಹೇಂದ್ರನಿಗೂ ಸತ್ಯಭಾಮೆಗೂ ಬಲರಾಮನಿಗೂ ಬುದ್ಧಿಗಲಿಸುವ ಯೋಚನೆ ಮಾಡುವನು. ಶ್ರೀ ಕೃಷ್ಣನು ಕುಪಿತಳಾದ ಸತ್ಯಭಾಮೆಗೆ ಸಮಾಧಾನ ಹೇಳಿ ಪಾರಿಜಾತ ವೃಕ್ಷವನ್ನೇ ತಂದುಕೊಡುವುದಾಗಿ ವಾಗ್ದಾನ ಮಾಡಿ, ಅದನ್ನು ಕಳುಹಿಸುವಂತೆ ನಾರದನು ಮಹೇಂದ್ರನಿಗೆ ತಿಳಿಸಬೇಕೆಂದು ಕೋರುವನು.

ಎರಡನೆಯ ಅಂಕವು ನಾರದನ ದೌತ್ಯದಿಂದ ಪ್ರಾರಂಭವಾಗುವುದು. ಇಂದ್ರನಿಂದ ಪಾರಿಜಾತ ವೃಕ್ಷವು ದೊರೆಯದೆ ಹೋಯಿತೆಂದು ಶ್ರೀ ಕೃಷ್ಣನು ಕುಪಿತನಾಗಿ, ಸತ್ಯಭಾಮಾ ದೇವಿಯಿಂದ ಕೂಡಿ ಇಂದ್ರನ ಮೇಲೆ ಯುದ್ಧಕ್ಕೆ ಹೋಗಿ, ಇಂದ್ರನನ್ನು ಮಲ್ಲಯುದ್ಧದಲ್ಲಿ ಸೋಲಿಸಿ, ಪಾರಿಜಾತ ವೃಕ್ಷವನ್ನು ದ್ವಾರಕೆಗೆ ಕಳುಹಿಸುವಂತೆ ಅಪ್ಪಣೆ ಮಾಡಿ, ಭೂಲೋಕಕ್ಕೆ ಪ್ರಯಾಣ ಮಾಡುವನು. ಈ ಹಗರಣಕ್ಕೆ ಕಾರಣನಾದ ನಾರದನಿಗೆ ಪ್ರತೀಕಾರವನ್ನೆಸಗಲು ದೇವೇಂದ್ರನು ಮನ್ಮಥನ ಸಹಾಯವನ್ನು ಕೋರುವನು.

ಮೂರನೆಯ ಅಂಕದಲ್ಲಿ, ಮನ್ಮಥ ಬಾಣ ಪೀಡಿತನಾದ ನಾರದನು ವಿವಾಹೇಚ್ಛೆಯನ್ನು ಸೂಚಿಸಿದುದನ್ನು ಕಂಡು ಶ್ರೀ ಕೃಷ್ಣನು, ತಾನಿಲ್ಲದಿರುವಾಗ ತನ್ನ ಮಡದಿಯರಾರಲ್ಲಿ ಯಾಚಿಸಿದರೂ ಅವರು ಯೋಗ್ಯ ಕನ್ನೆಯನ್ನು ಆತನಿಗೆ ಕೊಡಿಸಿ ವಿವಾಹ ಮಾಡಿಸುವರೆಂದು ಮುನಿಗೆ ತಿಳಿಸುವನು. ತಾನು ಕಂಡ ಶ್ರೀಕೃಷ್ಣ ಮಡದಿಯರೆಲ್ಲರ ಅಂತಃಪುರದಲ್ಲಿಯೂ ಕೃಷ್ಣನಿದ್ದುದನ್ನು ಕಂಡು, ಮಕರಂದನ ಸಲಹೆಯಂತೆ, ನಾರದನು ಕೊನೆಗೆ ರುಕ್ಮಿಣಿಯ ಉಪವನಕ್ಕೆ ಹೋಗುವ ಯೋಚನೆ ಮಾಡುವನು. ಅತ್ತ, ರುಕ್ಮಿಣೀ ದೇವಿಗೆ ಶ್ರೀ ಕೃಷ್ಣನು ರಾಮಾಯಣದ ಕಥೆಯನ್ನು ಹೇಳುತ್ತಿರುವನು. ಸೀತಾಪಹರಣ ಸನ್ನಿವೇಶದ ಕಥಾಭಾಗವು ಬಂದಾಗ್ಗೆ ಸುವರ್ಣ ಮೃಗವೇ ಸುಳಿದಂತೆ ಆಕೆಯ ಮನಸ್ಸಿಗೆ ಬೋಧೆಯಾಗುವುದು. ಶ್ರೀ ಕೃಷ್ಣನು ಹೊರಟುಹೋಗುವನು. ನಾರದನು ಪ್ರವೇಶಿಸಿದುದನ್ನು ಕಂಡು ರುಕ್ಮಿಣೀ ದೇವಿಯು ಅವನೇ ತಾಪಸ ವೇಷದ ರಾವಣನೆಂದು ಭಾವಿಸಿ, ರಾವಣನು ಬಂದನೆಂದು ಕೂಗಿಕೊಳ್ಳುವಳು. ಕಾವಲುಗಾರರು ನಾರದನನ್ನು ಓಡಿಸಿಕೊಂಡು ಹೋಗುವರು. ನಾರದನು ಬೆಚ್ಚಿ ಓಡಿಹೋಗಿ ಶಿಲಾ ಮಂಟಪವನ್ನು ಪ್ರವೇಶಿಸಿ ಬಾಗಿಲನ್ನು ಹಾಕಿಕೊಳ್ಳುವನು. ಆ ಬಳಿಕ ಬಲರಾಮನು ರಾವಣನನ್ನು ಕೊಲ್ಲುವುದಾಗಿ ಹೇಳುತ್ತ ಓಡಿಬರುವನು. ಕೊನೆಗೆ, ಶ್ರೀ ಕೃಷ್ಣನು ಬಂದು ಕೂಗಿದಾಗ

ನಾರದನು ಈಚೆಗೆ ಬರುವನು. ಮದ್ಯಪಾನ ಮತ್ತನಾದ ಬಲರಾಮನು ಆತನೇ ರಾವಣನೆಂದು ಆಗಲೂ ನಂಬಿ ಆತನನ್ನು ಪ್ರಹರಿಸಲುದ್ಯುಕ್ತನಾಗುವನು; ಕೊನೆಗೆ, ಕೃಷ್ಣ ರುಕ್ಮಿಣಿಯರಿಂದ ನಿಜಸ್ಥಿತಿಯನ್ನರಿತು, ತನ್ನ ವಿಪರೀತ ವರ್ತನೆಗೆ ತಾನೇ ನಾಚಿ ತಲೆ ತಗ್ಗಿಸುವನು. ನಿಷ್ಕಾರಣವಾಗಿ ಕಲಹವನ್ನು ತಂದುಹಾಕಿದುದಕ್ಕಾಗಿ ತನಗೆ ತಕ್ಕ ಶಾಸ್ತಿಯಾಯಿತೆಂದು ಬಗೆದು ನಾರದನೂ ನಾಚುವನು. ದೇವೇಂದ್ರನೇ ಮುಂತಾದವರೆಲ್ಲರೂ ಶ್ರೀಕೃಷ್ಣನನ್ನು ಸ್ತೋತ್ರ ಮಾಡುವರು.

ಶ್ರೀಮಾನ್ ಶಾಸ್ತ್ರಿಗಳವರು ಈ ಎರಡು ನಾಟಕಗಳನ್ನೂ ವಿಶೇಷ ಸ್ವಾರಸ್ಯವಾಗಿರುವಂತೆ ಕಥಾ ವಸ್ತುವನ್ನಳವಡಿಸಿ ರಂಗಪ್ರದರ್ಶನಕ್ಕೆ ತಕ್ಕಂತೆ ರಚಿಸಿದ್ದಾರೆ. ಶೈಲಿಯು ಶುದ್ಧವಾಗಿಯೂ ಮುದ್ರಣವು ಅಂದವಾಗಿಯೂ ಇವೆ. ಅಚ್ಚಿನ ತಪ್ಪು ಅಲ್ಲಲ್ಲಿ ಒಂದೊಂದು ಇದ್ದರೂ, ಒಟ್ಟಿನ ಮೇಲೆ ಮುದ್ರಣವು ಸೊಗಸಾಗಿದೆ. ಎರಡು ನಾಟಕಗಳಲ್ಲಿಯೂ, ಮಕರಂದನ ಮಾತುಗಳು ತಿಳಿಯಾದ ಹಾಸ್ಯದಿಂದ ಕೂಡಿ ಚಿತ್ತಾಕರ್ಷಕವಾಗಿವೆ; ರುಕ್ಮಿಣೀ ದೇವಿಯ ಮನಸ್ಸಿನಲ್ಲಿ ನಾರದನೇ ರಾವಣನೆಂಬ ಭ್ರಾಂತಿಯುಂಟಾಗುವ ಸನ್ನಿವೇಶವನ್ನಂತು ಗ್ರಂಥಕರ್ತರು ಹಾಸ್ಯರಸ ಭರಿತವಾಗಿ ಮನೋಹರವಾಗಿರುವಂತೆ ಚಿತ್ರಿಸಿದ್ದಾರೆ. ರಂಗಯೋಗ್ಯವಾಗಿ ಮನೋರಂಜಕವಾಗುವಂತೆ ನಾಟಕಗಳನ್ನು ಬರೆಯುವುದರಲ್ಲಿ ಶ್ರೀಮಾನ್ ಶಾಸ್ತ್ರಿಗಳು ಪ್ರಸಿದ್ಧರು. **ಶ್ರೀಕೃಷ್ಣ ಗಾರುಡಿ** ನಾಟಕವು ಏಕಪ್ರಕಾರವಾಗಿ ಇಪ್ಪತ್ತೆರಡು ಸಲ ಪ್ರದರ್ಶಿಸಲ್ಪಟ್ಟುದೇ ಇದಕ್ಕೆ ನಿದರ್ಶನ. ಸಂಭಾಷಣಗಳು ಪ್ರೇಕ್ಷಕರ ಮನಸ್ಸಿಗೆ ಪ್ರಿಯವಾಗಿರುವಂತೆ ಚಮತ್ಕಾರವಾಗಿಯೂ ಸ್ವಾರಸ್ಯವಾಗಿಯೂ ವಾಕ್ಯಗಳನ್ನು ಅಳವಡಿಸುವುದರಲ್ಲಿ ಶ್ರೀಮಾನ್ ಶಾಸ್ತ್ರಿಗಳಿಗೆ ವಿಶೇಷ ಸಾಮರ್ಥ್ಯವುಂಟು. (**ಶ್ರೀಕೃಷ್ಣ ಪಾರಿಜಾತ** ನಾಟಕವು ಮದರಾಸು ವಿಶ್ವವಿದ್ಯಾನಿಲಯದ ಇಂಟರ್ಮೀಡಿಯೆಟ್ ಪರೀಕ್ಷೆಗೆ ಪಠ್ಯ ಗ್ರಂಥವಾಗಿದೆ.)

ಪುರಾಣ ಕಥೆಯಾದುದರಿಂದ, ಐತಿಹಾಸಿಕ ಸಾಮಾಜಿಕ ಭಾವಗಳನ್ನು ಬಹುಮಟ್ಟಿಗೆ ನಿರೀಕ್ಷಿಸಲಾಗದೆಂದೂ, ಸಾಮಾಜಿಕ ನಾಗರಿಕ ಸಂದರ್ಭಗಳ ದೃಷ್ಟಿಯಿಂದ ವಿಮರ್ಶಕರು ಪರಿಶೀಲಿಸಕೂಡದೆಂದೂ ಗ್ರಂಥಕರ್ತರು ತಿಳಿಸಿದ್ದಾರೆ. ಇದಕ್ಕೇನು ಕಾರಣವೆಂಬುದು ಸ್ಪಷ್ಟವಾಗುವುದಿಲ್ಲ. ಅಲ್ಪಸ್ವಲ್ಪ ಇಂಗ್ಲಿಷ್ ಭಾಷಾ ವ್ಯಾಸಂಗ ಮಾಡಿ, ಇಂಗ್ಲಿಷ್ ಸಾಹಿತ್ಯದ ತಿರುಳನ್ನೂ ಅರಿಯದೆ, ನಮ್ಮ ಪುರಾಣಗಳಲ್ಲಿಯೂ ಅನಾದರವನ್ನು ತೋರಿಸಿ ಆಕ್ಷೇಪಿಸುವಂತಹವರನ್ನೇನಾದರೂ ಗುರಿಯಲ್ಲಿಟ್ಟುಕೊಂಡು ಗ್ರಂಥಕರ್ತರು ಈ ರೀತಿ ಮಾಡಿರಬಹುದೇ ಎಂದು ಶಂಕೆಯುಂಟಾಗುತ್ತದೆ. ಈ ಬಗೆಯ ಆಕ್ಷೇಪಕರ ಮಾತುಗಳನ್ನು ಯಾರೂ ಲಕ್ಷಿಸಬೇಕಾದುದಿಲ್ಲ. ಇಂಗ್ಲಿಷರು, ಅಮೆರಿಕನರು ಮುಂತಾದವರಿಗೆ ನಮ್ಮ ದೇಶದವರಿಗಿರುವಂತೆ ತಮ್ಮ ತಮ್ಮ ದೇಶದ ಪ್ರಾಚೀನ ಪೌರಾಣಿಕ ಸಾಹಿತ್ಯಸಿಧಿಯಿದ್ದಿದ್ದ ಪಕ್ಷಕ್ಕೆ ಆ ಮೇಧಾವಿಗಳೆಂದಿಗೂ ಅದ್ಭುತವಾದ ಪೌರಾಣಿಕ ನಾಟಕಗಳನ್ನು ಬರೆಯದೆ ಸುಮ್ಮನಿರುತ್ತಿರಲಿಲ್ಲ. ಪ್ರಾಚೀನ ಜನಾಂಗಗಳ ಗುಂಪಿಗೆ ಸೇರಿದ ಗ್ರೀಕರಲ್ಲಿ ಏಸ್ಕಲೀಸ್, ಸೋಫೋಕ್ಲೀಸ್, ಯೂರಿಪಿಡೀಸ್ ಮುಂತಾದವರು ಅದ್ಭುತವಾದ ಪೌರಾಣಿಕ ನಾಟಕಗಳನ್ನು ಬರೆದಿದ್ದೂ

ಕೂಡ, ಈಚಿನ ಪಾಶ್ಚಾತ್ಯ ಲೇಖಕರು ಕೆಲವರು ಗ್ರೀಕರ ಪೌರಾಣಿಕ ಕಥಾ ಭಾಗಗಳ ಮೇಲೆ ಯಥಾ ಶಕ್ತಿಯಾಗಿ ನಾಟಕಗಳನ್ನು ಬರೆದಿರುವುದೇ ಅದಕ್ಕೆ ನಿದರ್ಶನ. ಆದಕಾರಣ, ಪೌರಾಣಿಕ ನಾಟಕಗಳನ್ನು ಬರೆಯಲು ಯಾರೂ ಲಜ್ಜೆಪಡಬೇಕಾಗಿಲ್ಲ. ಪ್ರಸಿದ್ಧ ಪಾಶ್ಚಾತ್ಯ ಲೇಖಕರು ಕೂಡ ರಾಮಾಯಣ ಮಹಾಭಾರತಾದಿ ಗ್ರಂಥ ಗಳನ್ನು ಮನವಾರೆ ಕೊಂಡಾಡಿ, ವಿಶ್ವ ಸಾಹಿತ್ಯ ಪಙ್ಕ್ತಿಯಲ್ಲಿ ಅವಕ್ಕೆ ಶ್ರೇಷ್ಠ ಸ್ಥಾನ ವನ್ನು ಕೊಟ್ಟಿರುವಲ್ಲಿ, ಪೌರಾಣಿಕ ನಾಟಕಗಳನ್ನು ಬರೆಯುವುದೂ, ಇತರ ವರ್ಗಗಳ ನಾಟಕಗಳನ್ನು ಬರೆಯುವಂತೆಯೇ, ಶ್ಲಾಘ್ಯತರವಾದ ಕಾರ್ಯವೇ ಸರಿಯೆನ್ನಲು ಅಡ್ಡಿಯಿಲ್ಲ.

ಆದಾಗ್ಯೂ, ದೇವತಾ ವರ್ಗಕ್ಕೆ ಸೇರಿದ ಮಹಾ ವ್ಯಕ್ತಿಗಳಿಗೂ ಮಾನವ ಸಾಮಾನ್ಯವಾದ ತುಚ್ಛ ವ್ಯಾಪಾರಗಳ ಮೊಗವಾಡವನ್ನು ತೊಡಿಸಿ ತೂಕವನ್ನಿಳಿ ಸಿರುವ ಕೆಲವು ಪೌರಾಣಿಕ ನಾಟಕಗಳೂ ಉಂಟು. ಆದಕಾರಣ, ಇಂತಹವುಗಳ ಪಡಿಯಚ್ಚುಗಳಲ್ಲಿ ನಾಟಕಗಳನ್ನು ಎರಕವೆರೆಯದಂತೆ ಎಚ್ಚರಿಕೆಯಿಂದಿರುವುದು ಆವಶ್ಯಕ. ಈ ದೃಷ್ಟಿಯಿಂದ ನೋಡಿದರೆ, **ಭಕ್ತ ಮಾರ್ಕಂಡೇಯ** ನಾಟಕದಲ್ಲಿಯೂ, **ಬಲಿಚಕ್ರವರ್ತಿ** ನಾಟಕದಲ್ಲಿಯೂ ಬಹು ಮಟ್ಟಿಗೆ ಉದಾತ್ತ ಭಾವಗಳಿಂದ ಕೂಡಿದ ನಾರದ ಪಾತ್ರವನ್ನು ಎರಕ ಹೊಯ್ದಿರುವ ಶ್ರೀಮಾನ್ ಶಾಸ್ತ್ರಿಗಳು, **ಶ್ರೀ ಕೃಷ್ಣ ಪಾರಿಜಾತ** ನಾಟಕದಲ್ಲಿ ದೇವರ್ಷಿ ನಾರದನು ಕಾಮ ವಿಕಾರಕ್ಕೊಳಗಾದಂತೆ ಚಿತ್ರಿ ಸಿರುವುದು ಅಷ್ಟೇನೂ ಹಿತಕರವಾಗಿಲ್ಲ. ಈ ಸನ್ನಿವೇಶವು ರಂಗಸ್ಥಳದ ಮೇಲೆ ಚಿತ್ತಾ ಕರ್ಷಕವಾಗಿದ್ದರೂ, ಹೃದಯವೇಕೋ ಅದನ್ನಭಿನಂದಿಸಲಾರದು. ಜಿತೇಂದ್ರಿಯರೂ ತಪಸ್ವಿಗಳೂ ಆದ ಮಹಾಪುರುಷರೂ ಸಹ ದೈವ ಮಾಯೆಗೊಳಗಾದಮೇಲೆ ಸಾಮಾನ್ಯರ ಪಾಡೇನೆಂಬುದನ್ನು ತೋರಿಸುವುದೇ ಅದರ ಉದ್ದೇಶವೆಂದು ಅವರು ಸಮಾಧಾನ ಹೇಳಿದ್ದರೂ, ಅದು ನಮ್ಮ ಮನಸ್ಸಿಗೆ ಪೂರ್ತಿಯಾಗಿ ತೃಪ್ತಿಯನ್ನುಂಟು ಮಾಡುವುದಿಲ್ಲ. ಶ್ರೀ ಕೃಷ್ಣನ ಪಾತ್ರವನ್ನು ಚಿತ್ರಿಸುವುದರಲ್ಲಿ ಶ್ರೀಮಾನ್ ಶಾಸ್ತ್ರಿ ಗಳು, ಇತರರು ರಚಿಸಿರುವ ಕೆಲವು ನಾಟಕಗಳಲ್ಲಿರುವಂತೆ, ಹೇಡಿಯೂ ಕಾಮ ಲೋಲುಪನೂ ಆದ ಶ್ರೀ ಕೃಷ್ಣನನ್ನು ನಮ್ಮೆದುರಿಗೆ ನಿಲ್ಲಿಸದೆ, ವೀರನೂ ಮೇಧಾವಿಯೂ ಕುಶಲಿಯೂ ಆದ ಶ್ರೀ ಕೃಷ್ಣಮೂರ್ತಿಯನ್ನು ಕಡೆದು ನಿಲ್ಲಿಸಿದ್ದಾರೆ; ಆತನು ಗಾಂಭೀರ್ಯದ ಮೇರೆಗೆ ಲೇಶ ಮಾತ್ರವೂ ಭಂಗಬಾರದಂತೆ ವರ್ತಿಸುವುದು ಮತ್ತೂ ವಿಶೇಷ.

ಮಹಾಜನರಲ್ಲಿ ನಾಟಕಾವಲೋಕನದ ಅಭಿರುಚಿಯು ಹುಟ್ಟಿ ಬಳೆದು ರಂಗ ಭೂಮಿಯು ಈಗಿನ ಸ್ಥಿತಿಗೆ ಬರುವಂತೆ ಮಾಡಿದ ಮಹನೀಯರಲ್ಲಿ ಶ್ರೀಮಾನ್ ಬೆಳ್ಳಾವೆ ನರಹರಿಶಾಸ್ತ್ರಿಗಳೂ ಒಬ್ಬರು. ರಂಗಭೂಮಿಯ ಸೇವೆಗಾಗಿಯೇ ಸಂತತವೂ ಶ್ರಮಿ ಸುತ್ತ ಬಂದಿರುವ ಪುಣ್ಯವೂ ಯಶಸ್ಸೂ ಅವರವು. ವಿಶೇಷ ಸ್ವಾರಸ್ಯವಾಗಿರುವ ಅನೇಕ ನಾಟಕಗಳನ್ನು ಬರೆದು ರಂಗಭೂಮಿಗೆ ಅವರು ಶ್ಲಾಘ್ಯ ರೀತಿಯಲ್ಲಿ ಸೇವೆ ಯನ್ನು ಸಮರ್ಪಿಸಿದ್ದಾರೆ. ಇದಕ್ಕಾಗಿ ಕನ್ನಡಿಗರೆಲ್ಲರೂ ಅವರಿಗೆ ವಿಶೇಷ ಕೃತಜ್ಞ

ರಾಗಿರಬೇಕು. ಅವರು ಇನ್ನೂ ಅನೇಕ ನಾಟಕಗಳನ್ನು ರಚಿಸಿ ಇತೋಪ್ಯಧಿಕವಾದ ಕೀರ್ತಿಯನ್ನು ಗಳಿಸಲೆಂಬುದೇ ನಮ್ಮ ಹಾರೈಕೆ.

ಸಿ. ಕೆ. ವೆಂಕಟರಾಮಯ್ಯ

---

## ೪. ದೇವರ ಬಾಗಿಲು

ಲೇಖಕರು.—ಟೇಂಗ್ಸೆ ಗೋವಿಂದರಾಯರು, ಬಿ.ಎ., ಎಲ್‌ಎಲ್.ಬಿ., ಧಾರವಾಡ.

ಪ್ರಕಾಶಕರು.—ಜಯಕರ್ನಾಟಕ ಗ್ರಂಥ ಮಾಲೆ, ಧಾರವಾಡ.

ಮುದ್ರಣಕಾರರು.—ಜಯಕರ್ನಾಟಕ ಮುದ್ರಣಾಲಯ, ಧಾರವಾಡ.

ಕ್ರೌನ್ ಅಷ್ಟಪತ್ರ ಪುಟಗಳು ೮+೯೬; ಬೆಲೆ ೮ ಆಣೆ; ೧೯೩೨.

ಈ ಐದು ಅಂಕಗಳ ಸಾಮಾಜಿಕ ನಾಟಕವು ಜಯಕರ್ನಾಟಕ ಗ್ರಂಥ ಮಾಲೆಯ ಒಂಬತ್ತನೆಯ ಪುಷ್ಪ.

ಊರಿನ ಜನರಿಗೆಲ್ಲ ಸಾಲಕೊಟ್ಟು "ದುಡ್ಡಿಗೆ ದುಗ್ಗಾಣಿ ಬಡ್ಡಿ" ತೆಗೆದು ಕೊಂಡು ಅವರ ರಕ್ತವನ್ನೇ ಹೀರುತ್ತಿರುವ ನಾಸಪ್ಪನಾಯಕ, ಮುಂದಕ್ಕೆ ಸೌಖ್ಯ ವಾಗಲೆಂದು ಇಲ್ಲಿ ದಾನಾದಿಗಳನ್ನು ಮಾಡುತ್ತಿರುವ ಇವನ ಹೆಂಡತಿ ಲಕ್ಷ್ಮೀಬಾಯಿ, ಇಲ್ಲಿಯ ಸುಖಕ್ಕಾಗಿ ದುಡ್ಡನ್ನೆಲ್ಲ ಖರ್ಚು ಮಾಡುತ್ತಿರುವ ಇವರ ಮಗ ವೆಂಕಪ್ಪ ನಾಯಕ, ಅಣ್ಣನಿಂದ ಹೊರದೂಡಿಸಿಕೊಂಡಿದ್ದರೂ ಅವನಿಗೆ ಹಿತವಾಗಲೆಂದು ಮನಃ ಪೂರ್ವಕವಾಗಿ ಕೆಲಸ ಮಾಡುವ ಲಚ್ಚಪ್ಪನಾಯಕ, ಸೂಳೆಯಾಗಿ ಹುಟ್ಟಿ ಆ ವೃತ್ತಿಗೆ ಹೇಸಿ ಸತಿಯಾಗಬೇಕೆಂದು ಹಂಬಲಿಸಿ ವೆಂಕಪ್ಪನಾಯಕನಿಗೆ ಹೃದಯವನ್ನೊಪ್ಪಿ ಸಿರುವ ಚಂದ್ರಾಸಾನಿ, ಹೇಗಾದರೂ ಬಾಳನ್ನೆಳೆದುಕೊಂಡುಹೋದರೆ ಸರಿಯೆಂದು ಕೊಂಡು ಬದುಕುತ್ತಿರುವ ಕುಂಠಿಣಿ ನೀಲಿ, ಇವಳ ಪ್ರಿಯನಾದ ಬೀರ, ಗ್ಯಾನಬಾ ಎಂಬ ಸಾಧುವಾದ ಹರಿಭಕ್ತ, ಅವನ ತಮ್ಮ, ನಾಯಕರಲ್ಲಿ ಸಾಲ ಪಡೆದಿರುವವರು ಕೆಲವರು—ಇಷ್ಟು ಪಾತ್ರಗಳನ್ನಿಟ್ಟುಕೊಂಡು ಕಟ್ಟಿರುವ ನಾಟಕವಿದು.

ನಾಸಪ್ಪನಾಯಕರ ಲೋಭ ದುರಾಶೆಗಳು, ವೆಂಕಪ್ಪನಾಯಕನ ಕಾಮ ಪ್ರವೃತ್ತಿ—ಇವು ಒಂದು ಕಡೆ; ಹೊಟ್ಟೆ ಹೊರೆಯುವುದಕ್ಕಾಗಿ ಮಹದಾಶ್ರಯ ಮಾಡಿರುವ ತಮ್ಮಣ್ಣಾಚಾರ್ಯ, ಬೀರ, ನೀಲಿಯರು, ಇನ್ನೊಂದು ಕಡೆ; ಮಿಕ್ಕ ವರು ಹೇಗಾದರೂ ಇರಲಿ, ತಾನು ಸರಿಯಾಗಿದ್ದೇ ತೀರಬೇಕೆಂಬ ಗ್ಯಾನಬಾ, ನಾಯಕರ ಮನೆಯನ್ನು ಕೊಳ್ಳೆಹೊಡೆದು ಊರ ಜನರಿಗೆ ಒದಗಿರುವ ವಿಪತ್ತನ್ನು ಕಡೆಗಾಣಿಸಬೇಕೆಂಬ ಹೊಟ್ಟೆಯುರಿದವರ ತಂಡವೊಂದು ಕಡೆ; ನಾಯಕರುಗಳಿಗೆ ಬಂದಿರುವ ಆಪತ್ತನ್ನು ನಿವಾರಿಸಲು ಯತ್ನಿಸಿರುವ ಚಂದ್ರಾಸಾನಿ, ಲಚ್ಚಪ್ಪನಾಯಕ, ಇವರು ಒಂದು ಕಡೆ—ಇವು ನಾಟಕದಲ್ಲಿ ತೋರಿಬರುವ ಅಂಶಗಳು.

ಪುರಂದರ ದಾಸರು ಪರಮ ಲೋಭಿಗಳಾಗಿದ್ದು ಕೊನೆಗೆ ಶ್ರೀ ಪರಮಾತ್ಮನ ಕೃಪೆಯಿಂದ ಜ್ಞಾನಿಗಳಾದುದನ್ನು ವರ್ಣಿಸುವ ಕಥೆಯನ್ನೇ, ಆ ಮೇಲಿನ ಮೆಟ್ಟಿಲಿಂದಿಳಿಸಿ, ಈಗಿನ ಹೈತುಕ ಪ್ರಪಂಚಕ್ಕೆ ಸಮ್ಮತವಾಗುವಂತೆ ಚಿತ್ರಿಸಿರುವುದು ಈ ನಾಟಕದ ಒಂದು ಗುಣ. ನಾಟಕವು ಚೆನ್ನಾಗಿ ಇಳಿದಿದೆ; ರಂಗಭೂಮಿಯ ಮೇಲೆ ಚೆನ್ನಾಗುವುದರಲ್ಲಿ ಸಂದೇಹವಿಲ್ಲ. ಧಾರವಾಡದ ಮನೆಮಾತಿನಲ್ಲಿ ಬರೆದಿರುವುದೆಂದ ಮಾತ್ರಕ್ಕೇ ನಾವು ಬೇಸರಪಡಬೇಕಾದುದಿಲ್ಲ. ತುಂಗಭದ್ರೆಯ ಆಚೆಯ ತಡಿಯ ಬಂಧುಗಳಿಗೆ ಬೆಂಗಳೂರಿನ ಕೈಲಾಸಂ ಅವರ ನಾಟಕಗಳು ಆಗುವಂತೆ, ಇದೂ ನಮಗೆ ಆಗುವುದರಲ್ಲಿ ಸಂದೇಹವಿಲ್ಲ. ಆದರೂ, ಬೆಳೆಯುತ್ತಿರುವ ಬಾಂಧವ್ಯದ ಗಂಟು ಬಲವಾಗುತ್ತಿರುವಾಗ, ಇಂತಹ ಅಲ್ಲಿಯ ಭಾಷೆಯು ಇತರ ಕರ್ಣಾಟಕ ಪ್ರಾಂತ್ಯಗಳವರಿಗೆ ಹಿಡಿಯುವುದು.

ಈ ನಾಟಕವನ್ನು ಇದ್ದಂತೆ ರಂಗಭೂಮಿಗೆ ತರುವುದಕ್ಕೆ ಕೆಲವು ಲೋಪಗಳಿವೆ: ನಾಟಕವೆಲ್ಲ ಇರುವುದು ಮುದ್ರಿತವಾದ ೯೬ ಪುಟಗಳು. ಅದರಲ್ಲಿ ೩೦ ದೃಶ್ಯಗಳು. ಹೀಗೆ ದೃಶ್ಯಗಳು ತೀರ ಸಣ್ಣವಾಗುವುದರಿಂದ ನಾಟಕಕ್ಕೆ ಒಂದು ಲೋಪವಾಗುತ್ತದೆ. ನಾಟಕದಲ್ಲಿ ನೋಡುವವರಿಗೆ ಒಂದು ಭಾವವು ಮೂಡಿ ಬಲಿತು ಸ್ಥಿರವಾಗುವುದರೊಳಗಾಗಿ ದೃಶ್ಯವು ಬದಲಿಸುತ್ತ ಹೋದರೆ, ನಾಟಕ ವೃತ್ತಿಯು ಮೂಡಿ ನಿಲ್ಲುವುದು ಕಷ್ಟವಾಗಿ ಜನರಿಗೆ ಸ್ವಾರಸ್ಯವು ಹಿಡಿಯದೆ ಹೋಗುವುದು. ಓದುವಾಗ ಈ ಕಷ್ಟವು ಬರುವುದಿಲ್ಲ; ಆಡುವಾಗ ಬಾರದೆ ಇರುವುದಿಲ್ಲ. 'ಷೇಕ್ಸ್‌ಪಿಯರಿನ ನಾಟಕಗಳಲ್ಲಿಯೂ ಇಂತಹ ಸ್ಥಿತಿಯನ್ನು ಕಾಣುವೆವಲ್ಲ' ಎಂದರೆ, ಪ್ರಪಂಚವು ಅಲ್ಲಿಂದ ಮುಂದೆ ಸುಮಾರು ನಾಲ್ಕು ಶತಮಾನಗಳು ಬೆಳೆದಿದೆ. ಅಂದಿನ ರೀತಿಯನ್ನು ಇಂದೇಕೆ ಅರ್ಥವಿಲ್ಲದೆ, ಗುರಿಯರಿಯದೆ ಅನುಕರಣ ಮಾಡಬೇಕು? 'ನಾಟಕಕರ್ತನು ತನ್ನ ನಾಟಕವನ್ನು ಆಡುವುದು ಯಾರ ಮುಂದೆ?' ಎಂಬುದನ್ನು ಮೊದಲು ಗಮನಿಸಬೇಕು. ಅವರಿಗೆ ತಾನು ಹೇಳಬೇಕೆಂದಿರುವುದನ್ನು ಆದಷ್ಟು ಚೆನ್ನಾಗಿ ಅಲ್ಪಾವಕಾಶದಲ್ಲಿ ಮನಸ್ಸಿನಲ್ಲಿ ನಿಲ್ಲುವಂತೆ ತೋರಿಸಬೇಕು. ಆದರೆ, ಈಗಿನ ನಾಟಕಗಳು ಈ ನಿಯಮವನ್ನು ಅಷ್ಟಾಗಿ ಪಾಲಿಸದೆ ಇವೆಯಾಗಿ ನಾವೀ ದೋಷವನ್ನು ಮಹತ್ತರವೆಂದು ಭಾವಿಸದೆ, ಆಡುವಾಗ ತಿದ್ದಬೇಕಾಗುವುದೆಂದು ಮಾತ್ರ ಸೂಚಿಸಿ ಸುಮ್ಮನಾಗುತ್ತೇವೆ.

ಈ ನಾಟಕದಲ್ಲಿ, ವಾಸ್ತವಿಕ ಮಾರ್ಗದಲ್ಲಿರಬೇಕಾದ ಬಹುನಾಯಕ ಪ್ರಾಧಾನ್ಯವು ಚೆನ್ನಾಗಿ ಚಿತ್ರಿತವಾಗಿದೆ. ಈಗ ಇರುವಂತೆ ಸಂಭಾಷಣೆಯು ಬಹುವಾಗಿ ಸಮರ್ಪಕವಾಗಿದೆ. ಶ್ರೀ ಗೋವಿಂದರಾಯರು ತಮ್ಮ ಈ ಪ್ರಥಮ ಪ್ರಯತ್ನ (?) ದಲ್ಲಿಯೇ ತಮ್ಮ ದಕ್ಷತೆ ವಿಚಕ್ಷಣತೆಗಳನ್ನು ಚೆನ್ನಾಗಿ ತೋರಿಸಿದ್ದಾರೆ.

ಭಾಷೆಗೆ ಉದಾಹರಣೆ.—

**ಪುಟ ೭೨.**—"ನಿವು ಅದಕ ಮತ್ತ ಮಂತ್ರಾ ಕಲತಃ ಆದೀರಲ್ಲಾ! ಸಾವಕಾರ ಗಂಟೆ ನೆಗವಬೇಕ ಅಂತೀರಿಲ್ಲೋ! ಮತ್ತ ಸೈಯಃ ಇಲ್ಲಿದ್ರ ಬಡೂರು ಬಾಳೇವಂತ್ರು ಆಗೋದ ಹ್ಯಾಂಗ?

ನೋಡತೀರಿಲ್ಲೊ ನೀವು ! ಸೊಟ್ಟ ಚ್ಯಾಕರೀ ಸಂಬಳದಿಂದ ಏನಾಕ್ಕೈತಿ? ನಮ್ಮ ಸೀಲಿಗೊಂದ ಚಲೋ ಕುಬಸಾ ತೊಡಸೋಣಾಗಿಲ್ಲಾ. ಬರ್ರಿ ನೀವೂ ನಮ್ಮದರಾಗು. ಇಲ್ಲಾ, ನಿಮ್ಮ ಹಾದೀನು ಜ್ಯಾರೆ ಕಾಣತೈತಿ ಬಿಡರಿ. ಲೆಕ್ಕದವೈ ನಿಮ್ಮ ಕೈಯಾಗು ಇರತಾವು.

**ದೇವುಡು.**

---

## ೫. ಲಕ್ಷ್ಮೀಬಾಯಿ

ಲೇಖಕರು.—ಜೈನ ಮಹಿಳೆ, ನೆಲ್ಲಿಕಾರಪೇಟೆ.

ಪ್ರಕಾಶಕರು.—ಶ್ರೀಮತಿ ಪಣಿಪಿಲ ಅರಮನೆ ದೇಜಮ್ಮನವರು.

ಮುದ್ರಣಕಾರರು.—ಮಾರುತಿ ಪ್ರೆಸ್, ಕಾರ್ಕಳ.

ಡೆಮ್ಮಿ ೧೬ ಪತ್ರ ಪುಟಗಳು ೪+೨೬; ಬೆಲೆ—ಸದುಪಯೋಗ; ೧೯೩೧.

ಈ ಸಣ್ಣ ಕವಿತೆಯಲ್ಲಿ ಲಲಿತವಾದ ೮೬ ಚೌಪದಿಗಳಿವೆ. "ಸಚ್ಚರಿತೆಯಪ್ಪ ಪತ್ನಿಯೊಳು ಪ್ರೀತಿಯನುಳಿದು । ತುಚ್ಛ ನೋಡುವನಿದಕೊ ಬಯಸಿ ವೇಶ್ಯೆಯನು ॥" (೬೫) ಎಂಬ ಕಥೆಯನ್ನು, "ಮರುಳಾಗಿ ರೂಪ ಯೌವನಕೆ ಕಲುಷದಿ ನಿಚ್ಚ । ಬೆರೆತಿರ್ಪಳನು ಕೂಡೆ ತೃಷ್ಣೆಯಡಗುವುದೆ?" (೭೬) ಎಂಬ ನೀತಿಯು ಪ್ರಕಟವಾಗಬೇಕೆಂಬ ಸದಿಚ್ಛೆಯಿಂದ ಹೇಳುವ ಕವಿತೆಯಿದು.

ಬರಿಯ ಚೆಲ್ವಿಕೆಗೆ ಬಿನ್ನಣಕೆ ಬೆಡಗಿಗೆ ಸೋತು ।
ಮರುಳಾಗಿ ಕಪಟ ಪ್ರೇಮದ ನೆಚ್ಚಿ ಜನರು ॥
ಪರ ಸತಿಯನಾಶಿಸದೆ ತಂತಮ್ಮ ಕೈವಿಡಿದ ।
ವರ ಪತ್ನಿಯರ ಕೂಡಿ ಸುಖವಿರಲಿ ಸತತಂ ॥ ೮೪ ॥

ಇದು ಫಲಶ್ರುತಿ.

ಕಥೆಯು ಬಹಳ ಸಹಜವಾಗಿ ಹೇಳಿದೆ; ಶೈಲಿಯು ಮನೋಹರವಾಗಿದೆ. ಶ್ರೀಯುತ ಗೋವಿಂದ ಪೈ ಅವರು ಇದಕ್ಕೆ ಬರೆದಿರುವ ಮುನ್ನುಡಿಯಲ್ಲಿ, "ಇದು ಒಂದೇ ಸವನೆ ಸರಳವೂ ಸುಗಮವೂ ಮನೋಜ್ಞವೂ ಆಗಿದೆ. ಕಥೆ ಕಿರಿದಾದರೂ ಈ ಕವಿತೆಯಲ್ಲಿ, ಒಂದೆಡೆ ವಾರಾಂಗನೆಯ ಧರ್ಮಬುದ್ಧಿ, ಇನ್ನೊಂದೆಡೆ ಬ್ರಾಹ್ಮಣಿಯ ಪತಿಭಕ್ತಿ, ಇವಲ್ಲಿ ಯಾವುದು ಮೇಲೆಂದು ತಿಳಿಯಬಾರದಂತೆ ವಾಚಕರ ಮನಸ್ಸನ್ನು ಚಮತ್ಕಾರದಿಂದ ಅತ್ತಿತ್ತ ಆಡಿಸುತ್ತಿರುವ ಕವಿತಾ ಶಕ್ತಿ ಮಾತ್ರ ಕಿರಿದಲ್ಲ. ಇದರಿಂದ ಇವರು ಹುಟ್ಟುಕವಿ ಎಂಬುದು ತುಂಬ ವ್ಯಕ್ತವಾಗುತ್ತದೆ" ಎಂದು ಹೇಳಿರುವರು. ಈ ಅಭಿಪ್ರಾಯವನ್ನು ನಾವು ಅನುಮೋದಿಸುತ್ತೇವೆ.

---

ರಸದಿರುಕನ

## ೬. ಕರೇ ಹಾಡು

ಲೇಖಕರು.—'ಜೋಗಿರಾಯ'.

ಸಂಪಾದಕ ಪ್ರಕಾಶಕರು.—ರಾಷ್ಟ್ರೀಯ ಶಾಲಾ ಸಂಘ, ಕುಕನೂರು.

ಮುದ್ರಣಕಾರರು.—ಬೆಂಗಳೂರು ಪ್ರೆಸ್.

ಕ್ರೌನ್ ಅಷ್ಟಪತ್ರ ಪುಟಗಳು ೭; ಬೆಲೆ (?); ೧೯೩೨.

ಈ ಕವಿತೆಯು ಸಾಂಗತ್ಯದಲ್ಲಿ ಬರೆದ ೩೬ ಪದ್ಯಗಳಿಂದ ಕೂಡಿದೆ.

ಎಲ್ಲ ಬಣ್ಣಗಳಲ್ಲಿ ಶಾಂತವು ಕಣ್ಣಿಗೆ।
ಎಲ್ಲ ಬಣ್ಣಗಳಲ್ಲಿ ಶ್ರೇಷ್ಠ॥
ಎಲ್ಲ ಬಣ್ಣಗಳಲ್ಲಿ ಶೋಭಿಸುವುದು ತಾ।
ನಲ್ಲವೆ ನೀಲಿಯ ಬಣ್ಣ?॥

ಇದನ್ನು ಸಮರ್ಥಿಸುವುದೇ ಈ ಹಾಡಿನ ಉದ್ದೇಶ.—

ಕರಿ ಮಣಿ ಕರಿ ಬಳಿ ಕರಿ ಜಡಿ ಕರಿ ಬಟ್ಟೆ।
ಕರಿಯ ಕಾಡಿಗೆಗಳಿಂ ಹೊಳೆವ॥
ವರ ಕುಮಾರಿಯರೆ ಎದುರಿನೊಳು ಬಂದರೆ।
ಒರಿದೊಳ್ಳೆ ಶಕುನವೆನ್ನುವರು ॥ ೩೩ ॥

---

## ೭. ಭಕ್ತಿಭಾಂಡಾರಿ ಬಸವಣ್ಣನವರು

ಲೇಖಕರು.—ಎಂ. ಆರ್. ಶ್ರೀನಿವಾಸಮೂರ್ತಿಗಳು, ಬಿ.ಎ., ಬೆಂಗಳೂರು.

ಪ್ರಕಾಶಕರು.—ಕರ್ಣಾಟಕ ಸಂಘ, ಸೆಂಟ್ರಲ್ ಕಾಲೇಜು, ಬೆಂಗಳೂರು.

ಮುದ್ರಣಕಾರರು.—ಬೆಂಗಳೂರು ಪ್ರೆಸ್.

ಕ್ರೌನ್ ಅಷ್ಟಪತ್ರ ಪುಟಗಳು ೮+೧೪೦; ಬೆಲೆ (?); ೧೯೩೧.

ವಿಜಾಪುರ ಜಿಲ್ಲೆಯ ನಕ್ಷೆಯೂ, ೫ ಛಾಯಾ ಚಿತ್ರಗಳೂ ಇವೆ.

ಈ ಲೇಖಕರು ವೀರಶೈವ ಪುರಾಣ ಪ್ರಸಿದ್ಧರಾದ ಬಸವಣ್ಣನವರ ಜೀವನ ಚರಿತ್ರೆಯನ್ನು ಆಧುನಿಕ ರೀತಿಗೆ ಸರಿಹೋಗುವಂತೆ ಬರೆಯಲು ಪ್ರಯತ್ನಿಸಿದ್ದಾರೆ. ಇತರ ಮತಗಳ ಆಚಾರ್ಯ ಪುರುಷರಂತೆಯೇ ಬಸವಣ್ಣನವರೂ ವೀರಶೈವ ಮತದ ಆಚಾರ್ಯ ಪುರುಷರಾಗಿ ಪ್ರಸಿದ್ಧಿವಡೆದು, ಜನ ಸಾಮಾನ್ಯಕ್ಕೆ ಸುಲಭವಾಗಿ ಬೋಧೆಯಾಗುವಂತೆ ತಮ್ಮ ತತ್ತ್ವವನ್ನು ಜನರಾಡುವ ಭಾಷೆಯಲ್ಲಿಯೇ ನಿರೂಪಿಸಿ, ಇತರ ಆಚಾರ್ಯ ಪುರುಷರಿಗಿಂತಲೂ ಜನ ಸಾಮಾನ್ಯದಲ್ಲಿ ಹೆಚ್ಚು ಬಳಕೆಯನ್ನು ಪಡೆದಿರುತ್ತಾರೆ. ಇಂತಹ ಆದರ್ಶ ಪುರುಷರ ಚರಿತ್ರೆಯನ್ನು ಕನ್ನಡಿಗರಿಗೆ ತಿಳಿಸು

ವುದಕ್ಕಾಗಿ ಅನೇಕ ಗ್ರಂಥಗಳನ್ನು ಪರಿಶೀಲಿಸಿ, ವೀರಶೈವ ಮತಾನುಯಾಯಿಗಳಾದ ಪಂಡಿತರ ಅಭಿಪ್ರಾಯಗಳನ್ನು ಪಡೆದು, ಕೆಲವು ವೀರಶೈವ ಕ್ಷೇತ್ರಗಳನ್ನು ಸಂದರ್ಶಿಸಿ ಶ್ರಮ ವಹಿಸಿರುವುದಕ್ಕಾಗಿ ಕನ್ನಡಿಗರು ಮ॥ ರಾ॥ ಶ್ರೀ ಶ್ರೀನಿವಾಸಮೂರ್ತಿಗಳಿಗೆ ಕೃತಜ್ಞರಾಗಿರಬೇಕು. ತಮ್ಮ ನಾಯಕನ ಕಾಂತಿಯನ್ನು ಪ್ರಕಾಶಗೊಳಿಸುವುದರಲ್ಲಿ ಈ ಲೇಖಕರ ಉದ್ಯಮವು ಅಸಾಧಾರಣವಾಗಿರುವುದು. ಇವರ ಭಾಷೆಯು ಲಲಿತ ವಾಗಿಯೂ, ವಿಷಯ ನಿರೂಪಣೆಯಲ್ಲಿ ಓಜಸ್ಸುಳ್ಳದಾಗಿಯೂ ಇದೆ.

ಗ್ರಂಥ ವಿಷಯವು ಕೇವಲ ಮತ ಸಂಬಂಧವಾಗಿರುವುದರಿಂದ ಅದರ ವಿಮರ್ಶೆಯು ಪರಿಷತ್ಪತ್ರಿಕೆಗೆ ಸಂಬಂಧಪಟ್ಟುದಲ್ಲ. ಇಷ್ಟು ಮಾತ್ರ ಹೇಳಬಹುದು : (೧) ಜೀವನ ಚರಿತ್ರೆಯನ್ನು ಬರೆಯುವುದರಲ್ಲಿ ಎಲ್ಲ ಅಭಿಪ್ರಾಯಗಳಿಗೂ ಸಮ ತೂಕ ವನ್ನು ಕಟ್ಟಿ, ಪಕ್ಷಪಾತವನ್ನು ವಹಿಸದಿರುವುದು ; (೨) ಮತ ವಿಚಾರ ಮಾಡುವಲ್ಲಿ, ಇತರ ಮತಗಳವರ ಮನಸ್ಸನ್ನು ನೋಯಿಸದಂತೆ ತಮ್ಮ ಪಕ್ಷವನ್ನು ಸಾಧಿಸಲು ಪ್ರಯತ್ನಿಸುವುದು—ಇವೆರಡೂ ಚರಿತ್ರಕಾರನ ಮುಖ್ಯ ಕರ್ತವ್ಯಗಳೆಂದು ನಾವು ಭಾವಿಸುತ್ತೇವೆ. ಪ್ರಕೃತ ಗ್ರಂಥದಲ್ಲಿ ಲೇಖಕರು ಇವಕ್ಕೆ ಅಷ್ಟು ಗಮನ ಕೊಟ್ಟಿರುವಂತೆ ತೋರುವುದಿಲ್ಲ. 'ಅನ್ಯ ಮತ ವಿಡಂಬನೆ' ಎಂಬ ಐದನೆಯ ಪ್ರಕರಣದಲ್ಲಿ ಇವಕ್ಕೆ ಅನೇಕ ಉದಾಹರಣೆಗಳು ದೊರೆಯುವುವು.

---

ಮೂಢ ಭಕ್ತನ

## ೮. ಶೌರ್ಯದೇವಿ

ಸಂಪಾದಕ ಪ್ರಕಾಶಕರು.—ವಿದ್ಯಾರ್ಥಿ ಸಂಘ, ರಾಯಚೂರು.

ಮುದ್ರಣಕಾರರು.—ಬೆಂಗಳೂರು ಪ್ರೆಸ್.

ಕ್ರೌನ್ ಅಷ್ಟಪತ್ರ ಪುಟಗಳು ೧೨ ; ಬೆಲೆ (?) ; ೧೯೩೨.

ಮಾರ್ಕಂಡೇಯ ಪುರಾಣದಲ್ಲಿ ಬರುವ ನಾರಾಯಣೀದೇವಿಯ ಕಥೆಯನ್ನು ಮೂಲವಾಗಿಟ್ಟುಕೊಂಡು ಈ ಸಣ್ಣ ಕಥೆಯು ರಚಿತವಾಗಿದೆ. ಯುವ ಜನೋಚಿತ ವಾದ ಉತ್ಸಾಹದ ಭರದಲ್ಲಿ ಉಕ್ಕಿಬರುವ ವೀರ ಭಾಷಣಗಳೂ, ಉದ್ರಿಕ್ತ ವಚನ ಗಳೂ, ಆಶಾ ವಾದಗಳೂ ಅಲ್ಲಲ್ಲಿ ಬಂದು ಕಥೆಗೊಂದು ಸೊಬಗನ್ನು ತಂದಿವೆ.

ಭಾಷೆಯು ಪ್ರೌಢವಾಗಿಯೂ ಲಲಿತವಾಗಿಯೂ ಇದೆ. ಕೆಲವು ಪದ ಪ್ರಯೋಗ ಗಳು ಮಾತ್ರ ಅಷ್ಟು ಸಮರ್ಪಕವಾಗಿ ತೋರುವುದಿಲ್ಲ.—

(ಪುಟ ೧) ಅಚ್ಛೇಮಾಡಬೇಕೋ—ಪ್ರೇಮ ಮಾಡಬೇಕೋ ; (೩) ಅವಶ್ಯಕತೆ, ಸುಳುವು ; (೯) ಮುಸಿಗಿಹೋಯಿತು, ಉರಿಯಗಿಂತ, ಮಡವುಗಳೂ, ಕೆಂಡವನ್ನುಗಳುತ್ತ ; (೧೦) ತಿಳುವಳಿಕೆ ಇವತ್ತಿಲ್ಲ ; (೧೧) ಪಾಪಿಷ್ಟ ; (೧೨) ಕಮಂಡಲ, ವಡ್ಯಾಣ.

---

## ೯. ಲೋ. ಬೋ. ಲೋ. ಬೋ.

ಲೇಖಕರು.—ಭರತ, ಬೆಳಗಾವಿ.

ಪ್ರಕಾಶಕರು.—ತುಂಟರ ತಂಡ, ಬೆಳಗಾವಿ.

ಮುದ್ರಣಕಾರರು.—ಸೀತಾರಾಮ ಮುದ್ರಣಾಲಯ, ಬೆಳಗಾವಿ.

ಕ್ರೌ ಅಷ್ಟಪತ್ರ ಪುಟಗಳು ೨೬ ; ಬೆಲೆ ೧ ಆಣೆ.

ತುಂಟರ ತಂಡದವರು ಹೊರಡಿಸಿರುವ ಒಂದಾಣೆಯ ಮಾಲೆಯ ಹತ್ತನೆಯ ಪುಷ್ಪವಿದು. "ಹಾಳು ಲೋಕಲ್ ಬೋರ್ಡವೇ, ನನ್ನಂಥ ಬಡವರನ್ನು ಗೋಳಾಡಿಸುವ ನೀನು ಪ್ರಜಾ ಸಂಸ್ಥೆಯೇ? ಬೋರ್ಡು ಬಂದು ಏನು ಲಾಭ ನನಗೆ? 'ಲೋಬೋ ಲೋಬೋ' ಬೊಬ್ಬೆಯೇ!" ಎಂಬಂಶವನ್ನು ಮನಗಾಣಿಸುವುದು ಈ ಪುಸ್ತಕದ ಉದ್ದೇಶ. ಉದ್ದೇಶವು ನೆರವೇರಿದೆ.

ಕಥೆಯನ್ನು ಮನಸ್ಸಿಗೆ ಹತ್ತುವಂತೆ ಸಹಜವಾಗಿ ಹೇಳಿದೆ; ಭಾಷೆಯು ಆ ಪ್ರಾಂತದ ಜನರು ಮಾತನಾಡುವ ಭಾಷೆ.

---

## ೧೦. ಜ್ಯೋತಿಷ ವಿಚಾರ ಸಾಗರ

(ಮಾಸ ಪತ್ರಿಕೆ, ಸಂಪುಟ ೧, ತರಂಗ ೬–೭)

ಸಂಪಾದಕರು.—ಸಿ. ಲಿಂಗಾಜೋಯ್ಸ್, ಜ್ಯೋತಿಶ್ಶಾಸ್ತ್ರ ವಿಶಾರದರು, ಶಿವಮೊಗ್ಗ.

ಮುದ್ರಣಕಾರರು.—ಶ್ರೀಕೃಷ್ಣ ಮುದ್ರಾಕ್ಷರ ಶಾಲಾ, ಶಿವಮೊಗ್ಗ.

ವಾರ್ಷಿಕ ಚಂದಾ.—ಸ್ಥಳದವರಿಗೆ ರೂ. ೧–೮–೦ ; ಪರ ಸ್ಥಳದವರಿಗೆ ರೂ. ೨ ;

ಪೋಷಕರಿಗೆ ರೂ. ೫ ; ೧೯೩೨.

ಜ್ಯೋತಿಶ್ಶಾಸ್ತ್ರ ವಿಚಾರಗಳನ್ನು ವಿಚಾರ ವಿನಿಮಯಾದಿಗಳಿಂದ ಜನರಲ್ಲಿ ಪ್ರಚಾರ ಮಾಡುವುದು ಈ ಪತ್ರಿಕೆಯ ಉದ್ದೇಶ. ಬರೆದಿರುವ ವಿಷಯಗಳು ಶಾಸ್ತ್ರಾಧಾರ ಸಹಿತವಾಗಿ ಸಮರ್ಪಕವಾಗಿವೆ.

---






ಶ್ರೀಃ

## ಕರ್ಣಾಟಕ ಸಾಹಿತ್ಯ ಪರಿಷತ್ತು, ಬೆಂಗಳೂರು

---

# ಪ್ರಜೋತ್ಪತ್ತಿ ಸಂವತ್ಸರದ ವರದಿ

---

೧. ಕರ್ಣಾಟಕ ಸಾಹಿತ್ಯ ಪರಿಷತ್ತಿನ ಹದಿನೇಳನೆಯ ಸಮ್ಮೇಳನವು ಹೋದ ವರ್ಷ ಡಿಸೆಂಬರು ತಿಂಗಳಲ್ಲಿ ಉತ್ತರ ಕನ್ನಡ ಜಿಲ್ಲೆಯ ಮುಖ್ಯ ಪಟ್ಟಣವಾದ ಕಾರವಾರ ದಲ್ಲಿ ಕೇವಲ ಉತ್ಸಾಹದಿಂದ ನಡೆಯಿತು. ಇದಕ್ಕೂ, ಅದೇ ಸಮಯದಲ್ಲಿ ಅಲ್ಲಿ ನಡೆದ ತರುಣ ಕವಿ ಸಮ್ಮೇಳನಕ್ಕೂ ಬಹು ಮಂದಿ ಕನ್ನಡ ಭಾಷಾಭಿಮಾನಿಗಳು ಕರ್ಣಾಟಕದ ನಾನಾ ಪ್ರಾಂತಗಳಿಂದ ಬಂದು ಭಾಷಾ ಸೇವೆಯನ್ನು ಭಕ್ತಿಯಿಂದ ನಡೆಯಿಸಿದರು. ಈ ಸಲದ ಸಮ್ಮೇಳನವನ್ನು ಪರಿಷತ್ತಿನ ಹೊಸ ಕಟ್ಟಡದಲ್ಲಿಯೇ ನಡೆಯಿಸಬೇಕೆಂಬ ಕುತೂಹಲದಿಂದ ಅದರ ಪ್ರವೇಶೋತ್ಸವವನ್ನು ಕಾರ್ತಿಕ ಮಾಸ ದಲ್ಲಿಯೇ ನೆರವೇರಿಸಬೇಕೆಂದು ಪ್ರಯತ್ನ ಮಾಡುತ್ತಿರುವಲ್ಲಿ ಕೊಡಗಿನಿಂದ ಆಹ್ವಾನವು ಬಂದಿತು. ಪರಿಷತ್ಸಮ್ಮೇಳನವು ಕರ್ಣಾಟಕದ ನಾನಾ ಪ್ರಾಂತಗಳಲ್ಲಿ ನಡೆದು, ಕೊಡಗಿನಲ್ಲಿ ನಡೆಯಬೇಕಾದುದು ಮಾತ್ರ ಉಳಿದಿದ್ದುದರಿಂದ ಈ ಸಲದ ಸಮ್ಮೇ ಳನವು ಮಡಿಕೇರಿಯಲ್ಲಿ ನಡೆಯುವಂತೆ ಅಲ್ಲಿಯ ಕನ್ನಡ ಭಾಷಾಭಿಮಾನಿಗಳು ಏರ್ಪಡಿ ಸಿದುದು ಬಹಳ ಸಂತೋಷಕರವಾದ ವಿಷಯವೇ ಸರಿ.

೨. **ಕಾರ್ಯನಿರ್ವಾಹಕ ಮಂಡಲಿ.**—ಕಳೆದ ವರ್ಷದ ಡಿಸೆಂಬರು ತಿಂಗಳಲ್ಲಿ ಕಾರವಾರದಲ್ಲಿ ನೆರೆದಿದ್ದ ಕರ್ಣಾಟಕ ಸಾಹಿತ್ಯ ಸಮ್ಮೇಳನದ ಕೊನೆಯ ದಿವಸ (೩೦-೧೨-೧೯೩೧) ನಡೆದ ಪರಿಷತ್ತಿನ ವಾರ್ಷಿಕಾಧಿವೇಶನದಲ್ಲಿ ಪ್ರಜೋತ್ಪತ್ತಿ ಸಂವತ್ಸರಕ್ಕೆ ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರುಗಳನ್ನು ಚುನಾಯಿಸ ಲಾಯಿತು. ಆಯಾ ಪ್ರಾಂತಕ್ಕೆ ಆಯಾ ಪ್ರಾಂತದ ಸದಸ್ಯರು ಚುನಾಯಿಸಿದ ಸದಸ್ಯರ ಹೆಸರನ್ನು ಇಲ್ಲಿ ಕೊಟ್ಟಿದೆ:—

### ಮೈಸೂರು ಪ್ರಾಂತಕ್ಕೆ

| | | |
|---|---|---|
| ೧ | ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ. | ಬೆಂಗಳೂರು |
| ೨ | ,, ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ. | ಮೈಸೂರು |
| ೩ | ,, ಮಾಸ್ತಿ ವೆಂಕಟೇಶ ಐಯಂಗಾರ್ಯರು, ಎಂ.ಎ. | ಬೆಂಗಳೂರು |
| ೪ | ,, ಎಂ. ಆರ್. ಶ್ರೀನಿವಾಸಮೂರ್ತಿಗಳು, ಬಿ.ಎ. | ,, |
| ೫ | ,, ಕೋ. ಸಂಪದ್ಗಿರಿರಾಯರು, ಎಂ.ಎ. | ,, |
| ೬ | ,, ತಿರುಮಲೆ ತಾತಾಚಾರ್ಯ ಶರ್ಮರು | ,, |

೭ ಶ್ರೀಮಾನ್ ನಿಟ್ಟೂರು ಶ್ರೀನಿವಾಸರಾಯರು, ಬಿ.ಎಸ್‌ಸಿ., ಬಿ.ಎಲ್. ಬೆಂಗಳೂರು
೮ ,, ವಿ. ಸೀತಾರಾಮಯ್ಯನವರು, ಎಂ.ಎ. ,,
೯ ,, ಟಿ. ಅಪ್ಪೂರಾಯರು, ಬಿ.ಎ., ಬಿ.ಎಲ್. ,,
೧೦ ,, ಕೆ. ಕೃಷ್ಣಯ್ಯಂಗಾರ್ಯರು, ಬಿ.ಎ. ,,
೧೧ ,, ಬಿ. ಶಿವಮೂರ್ತಿಶಾಸ್ತ್ರಿಗಳು ತುಮಕೂರು
೧೨ ,, ಸಂ. ವೆಂಕಟೇಶಯ್ಯಂಗಾರ್ಯರು, ಬಿ.ಎ. ಬೆಂಗಳೂರು

## ಮುಂಬಯಿ ಪ್ರಾಂತಕ್ಕೆ

೧ ಶ್ರೀಮಾನ್ ಗುರುಶಿದ್ಧಪ್ಪ ಮಹಾಲಿಂಗಪ್ಪ ಮಿರ್ಜಿ, ಬಿ.ಎ., ಎಲ್‌ಎಲ್.ಬಿ. ಹುಬ್ಬಳ್ಳಿ
೨ ,, ಎಚ್. ಚೆನ್ನಕೇಶವಯ್ಯಂಗಾರ್ಯರು ಧಾರವಾಡ
೩ ,, ದತ್ತಾತ್ರೇಯ ರಾಮಚಂದ್ರ ಬೇಂದ್ರೆ, ಬಿ.ಎ. ,,
೪ ,, ನಾರಾಯಣ ವೆಂಕಟೇಶ ಕುರಡಿ ,,
೫ ,, ಭೀಮಾಜಿ ಬೆಟಗೇರಿ ಬೆಳಗಾಂವಿ
೬ ,, ರಂಗಪ್ಪ ಪೋತ್ದಾರ್, ಬಿ.ಎ. ಕಾರವಾರ
೭ ,, ರಾಘವೇಂದ್ರರಾವ್ ಸುಬ್ಬರಾವ್ ಮೂಡಕಟ್ಟಿ, ಬಿ.ಎ. ,,
೮ ,, ಆಲೂರ ವೆಂಕಟರಾಯರು, ಬಿ.ಎ., ಎಲ್‌ಎಲ್.ಬಿ. ಧಾರವಾಡ
೯ ರಾವ್ ಸಾಹೆಬ್ ಶ್ರೀಮಾನ್ ಪಿ. ಜಿ. ಹಳಕಟ್ಟಿ, ಬಿ.ಎ., ಎಲ್‌ಎಲ್.ಬಿ. ಬಿಜಾಪುರ

## ಮದರಾಸು ಪ್ರಾಂತಕ್ಕೆ

೧ ಶ್ರೀಮಾನ್ ಬಿ. ರಾಮರಾಯರು, ಎಂ.ಎ., ಎಲ್‌ಎಲ್.ಬಿ. ಮದರಾಸು
೨ ,, ಎಚ್. ತಿಮ್ಮಕೃಷ್ಣರಾಯರು, ಬಿ.ಎ., ಬಿ.ಎಲ್. ಬಳ್ಳಾರಿ
೩ ,, ಎನ್. ರಾಜಗೋಪಾಲಕೃಷ್ಣರಾಯರು ಉಡಿಪಿ

## ಹೈದರಾಬಾದು ಪ್ರಾಂತಕ್ಕೆ

೧ ಶ್ರೀಮಾನ್ ಗರುಡ ಸದಾಶಿವರಾಯರು ಹೈದರಾಬಾದು
೨ ,, ನಾರಾಯಣಶಾಸ್ತ್ರೀ ಭಾವೂಶಾಸ್ತ್ರೀ ಕೊಪ್ಪಳ

ಕೊಡಗು ಮತ್ತು ಉತ್ತರಕರ್ಣಾಟಕ ಸಂಸ್ಥಾನಗಳ ಪ್ರತಿನಿಧಿಗಳು ಯಾರೂ ಬರಲಿಲ್ಲವಾದುದರಿಂದ ಹಿಂದಣ ವರ್ಷದ ಸದಸ್ಯರೇ ಈ ವರ್ಷವೂ ಸದಸ್ಯರಾಗಿರತಕ್ಕುದೆಂದು ತೀರ್ಮಾನಿಸಲಾಯಿತು.—

## ಉತ್ತರ ಕರ್ಣಾಟಕ ಸಂಸ್ಥಾನಗಳಿಗೆ

೧ ಶ್ರೀಮಾನ್ ತಮ್ಮಪ್ಪ ಸತ್ಯಪ್ಪ ಚಿಕ್ಕೋಡಿ ಬನಹಟ್ಟಿ
೨ ,, ಕೆ. ಜಿ. ಕುಂದಣಗಾರ, ಎಂ.ಎ. ಕೊಲ್ಹಾಪುರ

## ಕೊಡಗು ಪ್ರಾಂತಕ್ಕೆ

೧ ಶ್ರೀಮಾನ್ ಎನ್. ಆರ್. ಸುಬ್ಬಣ್ಣಯ್ಯನವರು ನಿಡತ

ಮೈಸೂರು ಅರಮನೆಯ ಪರವಾಗಿ, ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಇಂಗ್ಲಿಷು ಪ್ರೊಫೆಸರಾದ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರು ನಿಯಮಿತರಾದರು (ತಿದ್ದಿದ ೯ನೆಯ ನಿಬಂಧನೆಯ ಮೇರೆಗೆ).

**೩. ಅಧಿವೇಶನಗಳು.**—ಪ್ರಜೋತ್ಪತ್ತಿ ಸಂವತ್ಸರದಲ್ಲಿ ನಡೆದ ಕಾರ್ಯ ನಿರ್ವಾಹಕಮಂಡಲಿಯ ಅಧಿವೇಶನಗಳು ೬ (೧೯೩೧ನೆಯ ಮೇ ೪, ಜೂಲೈ ೧೯, ಆಗಸ್ಟು ೨, ನವೆಂಬರು ೧, ಡಿಸೆಂಬರು ೧೩; ೧೯೩೨ನೆಯ ಜನವರಿ ೨೪). ೧೯೩೦ನೆಯ ಅಕ್ಟೋಬರು ತಿಂಗಳಲ್ಲಿ ನಡೆದ ವಾರ್ಷಿಕಾಧಿವೇಶನದಲ್ಲಿ ಗೊತ್ತಾದ ಮೇರೆಗೆ, ಕಾರ್ಯ ನಿರ್ವಾಹಕಮಂಡಲಿಯ ಅಧಿವೇಶನವೊಂದನ್ನು ೧೯೩೧ನೆಯ ಮೇ ೪ರಲ್ಲಿ ಧಾರವಾಡ ದಲ್ಲಿ ನಡೆಯಿಸಲಾಯಿತು. ಕಾರ್ಯನಿರ್ವಾಹಕ ಮಂಡಲಿಯ ಅಧಿವೇಶನಗಳಿಗೆ ಬಂದಿದ್ದ ಸದಸ್ಯರ ಹೆಸರು ಮತ್ತು ಅಧಿವೇಶನಗಳ ಸಂಖ್ಯೆ:—

ಗೌರವ ಕಾರ್ಯದರ್ಶಿಗಳು ೪, ಗೌರವ ಕೋಶಾಧ್ಯಕ್ಷರು ೫, ಮ॥ ರಾ॥ ಗಳಾದ ತಿರುಮಲೆ ತಾತಾಚಾರ್ಯಶರ್ಮರು ೬, ಟಿ. ಅಪ್ಪೂರಾಯರು ೫, ನಿಟ್ಟೂರು ಶ್ರೀನಿವಾಸರಾಯರು ೪, ನಂ. ವೆಂಕಟೇಶ ಐಯಂಗಾರ್‍ಯರು ೩, ಕೆ. ಕೃಷ್ಣಯ್ಯಂ ಗಾರ್‍ಯರು ೩, ಮಾಸ್ತಿ ವೆಂಕಟೇಶಯ್ಯಂಗಾರ್‍ಯರು ೩, ಕೋ. ಸಂಪದ್ಗಿರಿರಾಯರು ೩, ಆಲೂರ ವೆಂಕಟರಾಯರು ೧, ನಾರಾಯಣಸ್ವಾಮಿ ಲೋಕೂರರು ೧, ಬಿ. ಎಸ್. ಬೆಟಗೇರಿಯವರು ೧, ರಂಗಪ್ಪ ಪೋತ್ದಾರರು ೧, ನಾರಾಯಣ ಶ್ರೀನಿವಾಸ ರಾಜಪುರೋ ಹಿತರು ೧, ದತ್ತಾತ್ರೇಯ ರಾಮಚಂದ್ರ ಬೇಂದ್ರೆಯವರು ೧, ಎಚ್. ಚೆನ್ನಕೇಶವಯ್ಯಂ ಗಾರ್‍ಯರು ೧, ವಿ. ಸೀತಾರಾಮಯ್ಯನವರು ೧, ಎ. ಆರ್. ಕೃಷ್ಣಶಾಸ್ತ್ರಿಗಳು ೧.

**೪. ಸದಸ್ಯರು.**—ಪ್ರಜೋತ್ಪತ್ತಿ ಸಂವತ್ಸರಾಂತ್ಯದಲ್ಲಿದ್ದ ಸದಸ್ಯರ ಸಂಖ್ಯೆ ಮೊದಲಾದುವು:—

| ತರಗತಿ | ಸದಸ್ಯರ ಸಂಖ್ಯೆ | ಈ ವರ್ಷ ವಸೂಲಾದ ಚಂದಾ ಹಣ ರೂ. ಆ. ಪೈ | ಬಾಕಿ ಬರಬೇಕಾದ ಚಂದಾ ಹಣ ರೂ. ಆ. ಪೈ |
|---|---|---|---|
| ಪ್ರದಾತೃಗಳು | ೧ | .. | .. |
| ಸಹಾಯಕರು | ೪ | .. | .. |
| ಆಜೀವ ಸದಸ್ಯರು | ೭೭ | ೧೧೬–೯–೦ | ೩೧೦–೩–೦ |
| ಸಾಧಾರಣ ಸದಸ್ಯರು | ೪೨ | ೧೮೫–೦–೦ | ೫೨೧–೦–೦ |
| ಒಟ್ಟು | ೧೨೪ | ೩೦೧–೯–೦ | ೮೩೧–೩–೦ |

ಪ್ರಜೋತ್ಪತ್ತಿ ಸಂವತ್ಸರದಲ್ಲಿ ಸಹಾಯಕರೊಬ್ಬರು ದೈವಾಧೀನರಾದರು; ಆಜೀವ ಸದಸ್ಯರಲ್ಲಿ ಇಬ್ಬರು ದೈವಾಧೀನರಾದರು; ಐದು ಮಂದಿ ಹೊಸದಾಗಿ ಸೇರಿದರು. ಸಾಧಾರಣ ಸದಸ್ಯರಲ್ಲಿ ಇಬ್ಬರು ಬಿಟ್ಟುಹೋದರು, ಒಬ್ಬರು ದೈವಾಧೀನ ರಾದರು, ಮೂರು ವರ್ಷಗಳಿಂದ ಚಂದಾ ಬಾಕಿ ಕೊಡದೆಯೂ ನಾವು ಬರೆದ ಪತ್ರ ಗಳಿಗೆ ಉತ್ತರ ಕೊಡದೆಯೂ ಇದ್ದ ಮೂವರನ್ನು ನಿಯಮಾನುಸಾರವಾಗಿ ತೆಗೆದು ಹಾಕಲಾಯಿತು, ನಾಲ್ವರು ಹೊಸದಾಗಿ ಸೇರಿದರು. ಸದಸ್ಯರ ಸಂಖ್ಯೆಯು ಮಾತ್ರ

ಹಿಂದೆ ಇದ್ದಂತೆಯೇ ಇದೆ. ಬಾಕಿ ಇರುವ ಚಂದಾ ಹಣವನ್ನು ಕೊಟ್ಟು ಸಹಾಯ ಮಾಡಬೇಕೆಂದು ಎಷ್ಟು ಪತ್ರಗಳನ್ನು ಬರೆದರೂ ಅನೇಕ ಮಂದಿ ಸದಸ್ಯರು ಉತ್ತರ ವನ್ನು ಕೂಡ ಕೊಡದೆ ಇರುತ್ತಾರೆ. ಇದು ಅತ್ಯಂತ ಶೋಚನೀಯವಾದ ವಿಷಯ.

**೫. ಸಂಪಾದಕ ಮಂಡಲಿ.**—ಪ್ರಮೋದ ಸಂವತ್ಸರದಲ್ಲಿದ್ದ ಮಂಡಲಿಯೇ ಈ ವರ್ಷವೂ ಕಾರ್ಯಭಾರವನ್ನು ನಡೆಯಿಸಿತು. ಈ ಮಂಡಲಿಯು ಈ ವರ್ಷ ೫ ಸಲ ಸಭೆ ಸೇರಿದ್ದಿತು.

ಸದಸ್ಯರು.—

| | | |
|---|---|---|
| ೧ | ಮ॥ ರಾ॥ ಶ್ರೀ ತಿರುಮಲೆ ತಾತಾಚಾರ್ಯ ಶರ್ಮರು | (ಬೆಂಗಳೂರು) |
| ೨ | ,, ಕೆ. ಕೃಷ್ಣಯ್ಯಂಗಾರ್ಯರು, ಬಿ.ಎ. | ,, |
| ೩ | ,, ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್‌ಎಲ್.ಬಿ. | ,, |
| ೪ | ,, ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ. | ,, |
| ೫ | ,, ಬೆಳ್ಳಾವೆ ವೆಂಕಟನಾರಾಯಣಪ್ಪನವರು, ಎಂ.ಎ. | ,, |
| ೬ | ,, ನಂ. ವೆಂಕಟೇಶಯ್ಯಂಗಾರ್ಯರು, ಬಿ.ಎ. | ,, |
| ೭ | ,, ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ. | (ಮೈಸೂರು) |
| ೮ | ,, ದತ್ತಾತ್ರೇಯ ರಾಮಚಂದ್ರ ಬೇಂದ್ರೆ, ಬಿ.ಎ. | (ಧಾರವಾಡ) |
| ೯ | ರಾವ್ ಸಾಹೆಬ್ ಮ॥ ರಾ॥ ಶ್ರೀ ಪಿ. ಜಿ. ಹಳಕಟ್ಟಿ, ಬಿ.ಎ., ಎಲ್‌ಎಲ್.ಬಿ. | (ಬಿಜಾಪುರ) |
| ೧೦ | ಮ॥ ರಾ॥ ಶ್ರೀ ಆರ್ಕಾಟು ಭೀಮಾಚಾರ್ಯರು, ಎಂ.ಎ. | (ಬಳ್ಳಾರಿ) |

**೬. ಪರಿಷತ್ತಿನ ವಾಙ್ಮಯ ಕಾರ್ಯ ವಿಚಾರ.—**

**ಪರಿಷತ್ಪತ್ರಿಕೆ.**—ಈ ಪತ್ರಿಕೆಯನ್ನು ಸಕಾಲದಲ್ಲಿ ಹೊರಡಿಸುವ ಪ್ರಯತ್ನವು, ಲೇಖನಗಳ ಅಭಾವದಿಂದ, ಇನ್ನೂ ಫಲಕಾರಿಯಾಗಿಲ್ಲ. ಈ ಪ್ರಜೋತ್ಪತ್ತಿ ಸಂವತ್ಸರದಲ್ಲಿ ಪ್ರಮೋದ ಸಂವತ್ಸರದ ಆಶ್ವಯುಜ, ಪುಷ್ಯ ಮಾಸಗಳ ಸಂಚಿಕೆಗಳೆರಡನ್ನೂ, ಪ್ರಜೋತ್ಪತ್ತಿ ಸಂವತ್ಸರದ ಚೈತ್ರ, ಆಷಾಢ, ಆಶ್ವಯುಜ ಮಾಸದ ಸಂಚಿಕೆಗಳು ಮೂರನ್ನೂ ಪ್ರಕಟಿಸಲಾಯಿತು.

**ಜ್ಯೋತಿರ್ವಿನೋದಿನಿಯು** ೧೯೩೦ನೆಯ ನವೆಂಬರು ತಿಂಗಳಲ್ಲಿಯೂ, ಪಂಪ ಭಾರತವು ೧೯೩೧ನೆಯ ಮಾರ್ಚಿ ತಿಂಗಳಲ್ಲಿಯೂ ಪ್ರಕಟವಾದುವು. ದೇವಕವಿಯ **ಕುಸುಮಾವಳೀ** ಕಾವ್ಯದ ಮೂಲವು ಮುದ್ರಣವಾಗಿ ಬಹಳ ದಿನಗಳಾದುವು. ಅದಕ್ಕೆ ಬರೆದಿರುವ ನಿಘಂಟುವನ್ನು ಈಗ ಸರಿನೋಡುತ್ತಿರುವೆವು. ಇದಾದನಂತರ ಉಪೋದ್ಘಾತವನ್ನು ಬರೆದು, ಉಳಿದಿರುವ ಮುದ್ರಣ ಕಾರ್ಯವನ್ನು ಬೇಗನೆ ಪೂರಯಿಸಿ, ಪುಸ್ತಕವನ್ನು ಪ್ರಕಟಿಸಲಾಗುವುದು.

ದ್ರವ್ಯಾಭಾವದಿಂದ, ಇತರ ಯಾವ ಪ್ರಕಟನೆಯ ಕಾರ್ಯವನ್ನೂ ಕೈಕೊಳ್ಳಲು ಸಾಧ್ಯವಿಲ್ಲದಿದೆ.

**೭. ವಾಚನ ಮಂದಿರ.**—ಈ ಮಂದಿರವು ಎಂದಿನಂತೆ ಶಂಕರಪುರ, ಬಸವನಗುಡಿ—ಈ ಪ್ರಾಂತಗಳಲ್ಲಿರುವ ವಿದ್ಯಾರ್ಥಿಗಳಿಗೂ, ಪೆನ್‌ಷನ್ ನೌಕರರಿಗೂ ಹೆಚ್ಚಿನ ಉಪಯೋಗವಾಗುತ್ತಲಿದೆ.

ಈ ವಾಚನ ಮಂದಿರದಲ್ಲಿ ವಾಚಕರಿಗೆ ದೊರೆಯುವ ಪತ್ರಿಕೆಗಳು.—

**ಕನ್ನಡ.**—ಕಂಠೀರವ, ರಾಜಹಂಸ, ರಾಷ್ಟ್ರಬಂಧು, ಶ್ರೀ ಧನ್ವಂತರೀ, ಸ್ವದೇಶಾಭಿಮಾನಿ, ವಿಶ್ವಕರ್ಣಾಟಕ, ವಿಶ್ವಬಂಧು, ವೃತ್ತಾಂತ ಪತ್ರಿಕೆ, ಒಕ್ಕಲಿಗನೂ ಒಕ್ಕಲತನವೂ, ಕನ್ನಡ ಸಹಕಾರ, ಕಾದಂಬರೀ ಸಂಗ್ರಹ, ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, ಜಯಕರ್ನಾಟಕ, ದೇಶೀಯ ವಿದ್ಯಾಶಾಲಾ ಪತ್ರಿಕೆ, ಪ್ರಬುದ್ಧ ಕರ್ಣಾಟಕ, ರಂಗಭೂಮಿ, ಮೈಸೂರು ವ್ಯಾವಸಾಯಿಕ ಮತ್ತು ಪರೀಕ್ಷಕ ಸಂಘದ ಪತ್ರಿಕೆ, ಕಥಾಂಜಲಿ, ಪ್ರಬೋಧಕ, ಕಲಾ, ಸುಬೋಧ, ಮಕ್ಕಳ ಪುಸ್ತಕ.

**ತೆಲುಗು.**—ಆಂಧ್ರ ಸಾಹಿತ್ಯ ಪರಿಷತ್ಪತ್ರಿಕೆ.

**ಮರಾಠಿ.**—ವಿವಿಧ ಜ್ಞಾನ ವಿಸ್ತಾರ.

**ಇಂಗ್ಲಿಷು.**—The Daily Post, The Hindu, The Mysore Observer, The Mysore Gazette, The Indian Antiquary, The Modern Review, School Folk, The Volunteer, The Quarterly Journal of the Mythic Society, The Andhra Historical Research Institute Magazine.

೮. **ಪುಸ್ತಕ ಭಾಂಡಾಗಾರ.**—ವಿಮರ್ಶೆಗಾಗಿ ಬಂದ ಪುಸ್ತಕಗಳಲ್ಲದೆ, ೧೦ ಪುಸ್ತಕಗಳನ್ನು ಒಟ್ಟು ರೂ. ೭೩–೨–೦ಗೆ ಕೊಂಡುಕೊಂಡು ಭಾಂಡಾಗಾರಕ್ಕೆ ಸೇರಿಸಲಾಯಿತು. ಇವುಗಳ ಜೊತೆಗೆ, ಬೆಂಗಳೂರಿನ ರಿಟೈರ್ಡ್ ಅಸಿಸ್ಟೆಂಟ್ ಕಮಿಷನರ್ ಮ॥ ರಾ॥ ಶ್ರೀ ಬಿ. ವಿ. ಲಕ್ಷ್ಮಣರಾಯರವರು ಪರಿಷತ್ತಿಗೆ ದಾನ ಮಾಡಿದ ೧೪೦ ವೇದಾಂತ ಗ್ರಂಥಗಳನ್ನು ಸೇರಿಸಲಾಗಿದೆ. (ಈ ಪುಸ್ತಕಗಳ ಪಟ್ಟಿಯನ್ನು ೨೦ನೆಯ ಪುಟ ಮೊದಲ್ಗೊಂಡು ಕೊಟ್ಟಿದೆ.) ಮ॥ ರಾ॥ ಲಕ್ಷ್ಮಣರಾಯರವರು ಕೊಟ್ಟಿರುವ ಗ್ರಂಥಗಳಲ್ಲಿ ಕೆಲವು ಸುಲಭವಾಗಿ ಬೆಲೆಗೆ ದೊರೆಯತಕ್ಕವುಗಳಲ್ಲ. ಉತ್ತಮ ತೆರದ ಇಷ್ಟು ಪುಸ್ತಕಗಳನ್ನು ದಾನ ಮಾಡಿದುದಕ್ಕಾಗಿ ಪರಿಷತ್ತು ಮ॥ ರಾ॥ ಲಕ್ಷ್ಮಣರಾಯರವರಿಗೆ ಬಹಳ ಕೃತಜ್ಞವಾಗಿರಬೇಕು. ಹೀಗೆಯೇ ಇತರ ಮಹನೀಯರೂ ಪರಿಷತ್ತಿಗೆ ಗ್ರಂಥ ದಾನ ಮಾಡಿ, ಪರಿಷತ್ತಿನ ಪುಸ್ತಕ ಭಾಂಡಾಗಾರವನ್ನು ಅಭಿವೃದ್ಧಿಗೊಳಿಸಿ, ತನ್ಮೂಲಕ ಜನರಲ್ಲಿ ಜ್ಞಾನಾಭಿವೃದ್ಧಿಯಾಗಲು ಸಹಾಯ ಮಾಡುವರೆಂದು ಹಾರೈಸುತ್ತೇವೆ.

೯. **ಬಹುಮಾನಗಳು.**—ಪರಿಷತ್ತಿನ ಆರ್ಥಿಕ ಸ್ಥಿತಿಯು ಸಮರ್ಪಕವಾಗಿಲ್ಲದುದರಿಂದ ಈ ಸಾಲಿನಲ್ಲಿ ಗ್ರಂಥಕರ್ತೃಗಳಿಗಾಗಲಿ, ಇತರ ಕನ್ನಡ ಭಾಷಾ ಸೇವಕರಿಗಾಗಲಿ ಯಾವ ಬಹುಮಾನವನ್ನು ಕೊಡಲೂ ಸಾಧ್ಯವಾಗಲಿಲ್ಲ.

೧೦. **ಪ್ರಚಾರ ಕಾರ್ಯ.**—ಪ್ರಸಿದ್ಧ ಗಮಕಿಗಳಾದ ಮ॥ ರಾ॥ ಶ್ರೀ ಎಸ್. ಜಿ. ಬಿಂದೂರಾಯರವರು ಈಗ ಕೆಲವು ವರ್ಷಗಳಿಂದ (೧೯೨೫ರಿಂದ) ಪರಿಷತ್ತಿನ

ಪರವಾಗಿ ಕರ್ಣಾಟಕದ ನಾನಾ ಭಾಗಗಳಲ್ಲಿ ಸುತ್ತುತ್ತ, ಅಲ್ಲಲ್ಲಿ ಕನ್ನಡ ಭಾರತ ಪಠನ ಮಾಡಿ, ಕರ್ಣಾಟಕದಲ್ಲಿ ಕನ್ನಡ ಭಾಷಾಭಿಮಾನವನ್ನು ಅಭಿವೃದ್ಧಿಗೊಳಿಸುತ್ತಿರುವರು. ಇದಕ್ಕಾಗಿ ಮ॥ ರಾ॥ ಬಿಂದೂರಾಯರವರಿಗೆ ಕನ್ನಡಿಗರು ಬಹಳ ಕೃತಜ್ಞರಾಗಿರಬೇಕು. ಇವರಿಗೆ ಸಾಮಾನ್ಯವಾದ ಪ್ರಯಾಣದ ವೆಚ್ಚಕ್ಕೆ ಮಾತ್ರ ಪರಿಷತ್ತಿನಿಂದ ಸಹಾಯವು ದೊರೆಯುವುದು. ಈ ಸಾಲಿನಲ್ಲಿ ಇವರು ಮುಂದೆ ಹೇಳುವ ಸ್ಥಳಗಳಿಗೆ ಹೋಗಿ ಭಾರತ ಪಠನ ಮಾಡಿರುವರು. ಇದಕ್ಕಾಗಿ ಈ ಸಾಲಿನಲ್ಲಿ ಪರಿಷತ್ತಿನಿಂದ ವೆಚ್ಚವಾದ ವೊಬಲಗು ೪೫ ರೂಪಾಯಿಗಳು.—

> ಚಿತ್ರದುರ್ಗ, ದಾವಣಗೆರೆ, ಹೊಳಲ್ಕೆರೆ, ಹೊಸದುರ್ಗ, ಜಗಳೂರು, ಮೊಳಕಾಲ್ಮುರು, ಚಳ್ಳಕೆರೆ, ತರೀಕೆರೆ, ಗಡೀಹಳ್ಳಿ (ಅಜ್ಜಂಪುರದ ಹೋಬಳಿ), ಬಗ್ಗುವಳ್ಳಿ (ಅಜ್ಜಂಪುರದ ಹೋಬಳಿ), ಶಿವಮೊಗ್ಗ, ಹರಿಹರ, ಹರಪನಹಳ್ಳಿ, ಹಡಗಲಿ, ಚಿಕ್ಕಮಗಳೂರು, ಕಡೂರು, ಬೀರೂರು.

೧೧. **ಸಮ್ಮೇಳನ.**—ಹಿಂದೆ ಹೇಳಿದಂತೆ, ಪರಿಷತ್ತಿನ ಹದಿನೇಳನೆಯ ಸಾಹಿತ್ಯ ಸಮ್ಮೇಳನವು ೧೯೩೧ನೆಯ ಡಿಸೆಂಬರು ತಿಂಗಳಲ್ಲಿ ಕಾರವಾರದಲ್ಲಿ ನಡೆಯಿತು. ಇದಕ್ಕೆ ಕರ್ಣಾಟಕದ ನಾನಾ ಪ್ರಾಂತಗಳಿಂದ ಕನ್ನಡ ಭಾಷಾಭಿಮಾನಿಗಳು ಬಂದಿದ್ದರು: ಮೈಸೂರು ಪ್ರಾಂತದಿಂದ ೧೨ ಮಂದಿಯೂ, ಧಾರವಾಡ ಪ್ರಾಂತದಿಂದ ೬ ಮಂದಿಯೂ, ಮಂಗಳೂರು ಪ್ರಾಂತದಿಂದ ನಾಲ್ವರೂ, ಹೈದರಾಬಾದಿನಿಂದ ಒಬ್ಬರೂ, ಉತ್ತರ ಕರ್ಣಾಟಕ ಪ್ರಾಂತದಿಂದ ೫೩ ಮಂದಿಯೂ ಪ್ರತಿನಿಧಿಗಳಾಗಿ ಬಂದಿದ್ದರು. ಇವರಲ್ಲದೆ, ಪ್ರೇಕ್ಷಕರಾಗಿಯೂ ಕೆಲವರಿದ್ದರು. ಪ್ರತಿನಿಧಿಗಳಾಗಿದ್ದ ಕಾರವಾರದ ಸ್ಥಳೀಯರು ೧೦೯ ಮಂದಿ.

**೧೨. ಹದಿನೇಳನೆಯ ಸಮ್ಮೇಳನದಲ್ಲಿ ಆದ ತೀರ್ಮಾನಗಳ ವಿಚಾರ.—**

೧ನೆಯ ತೀರ್ಮಾನ.—ಮೈಸೂರು ಶ್ರೀಮನ್ಮಹಾರಾಜರವರು ಕನ್ನಡ ಭಾಷೆಯ ಏಳಿಗಾಗಿ ಅನುಗ್ರಹಿಸುತ್ತಿರುವ ಉದಾರಾಶ್ರಯಕ್ಕಾಗಿ ಭಕ್ತಿ ವಿಶ್ವಾಸ ಸಮರ್ಪಣೆ.

೨. ಕೆಲವು ಮಂದಿ ಪ್ರಸಿದ್ಧ ಕನ್ನಡಿಗರ ಅಕಾಲ ಮರಣಕ್ಕಾಗಿ ದುಃಖ ಪ್ರದರ್ಶನ.

೩, ೪. ಹೈದರಾಬಾದಿನ ಪ್ರಾಕ್ತನ ಸಂಶೋಧನ ಖಾತೆಯವರ ಶಾಸನ ಸಂಶೋಧನ ಕಾರ್ಯ ವಿಚಾರ.—

> ಈ ಇಲಾಖೆಯ ಡೈರೆಕ್ಟರವರ ೩೦–೧೧–೧೯೩೨ರ ೧೧೧೪ನೆಯ ನಂಬರು ಪತ್ರದಲ್ಲಿ, ಈ ಇಲಾಖೆಯು ಹೈದರಾಬಾದು ಸಂಸ್ಥಾನದ ಕನ್ನಡ ಶಾಸನಗಳನ್ನು ಸಾಧ್ಯವಾದಷ್ಟು ಬೇಗನೆ ಪ್ರಕಟಿಸಲು ಏರ್ಪಾಡು ಮಾಡುತ್ತಿರುವುದಾಗಿಯೂ, ಚಾಲ್ತಿ ವರುಷದಲ್ಲಿ ಕೊಪ್ಪಳದ ಕನ್ನಡ ಶಾಸನಗಳ ಗ್ರಂಥವು ಪ್ರಕಟವಾಗಬಹುದೆಂಬ ಸಂತೋಷ ವಾರ್ತೆಯನ್ನು ತಿಳಿಸಿಯೂ ಬರೆದಿರುತ್ತಾರೆ.

೫. ಕರ್ಣಾಟಕದಲ್ಲಿರುವ ಪರಭಾಷಾ ಶಾಲೆಗಳನ್ನು ಕನ್ನಡದವುಗಳನ್ನಾಗಿ ಮಾಡುವ, ಅಥವಾ ಅವುಗಳಲ್ಲಿ ಕನ್ನಡವನ್ನು ನಿರ್ಬಂಧವಾಗಿ ಕಲಿಸುವ ವಿಚಾರ.—

ಈ ತೀರ್ಮಾನವನ್ನು ವಿದ್ಯಾ ಖಾತೆಯ ಅಧಿಕಾರವುಳ್ಳ ಬೋರ್ಡುಗಳಿಗೆ ತಿಳಿಸಲಾಗಿದೆ.

೬. ಮುಂಬಯಿ ವಿಶ್ವವಿದ್ಯಾ ಪೀಠದವರು ದೇಶಭಾಷೆಗಳ ವಿಷಯವಾಗಿ ತೋರಿಸುತ್ತಿರುವ ಆಸಕ್ತಿಗಾಗಿ ಅಭಿನಂದನ; ಮುಂಬಯಿ ಸರಕಾರದವರು ಆ ದೇಶ ಭಾಷೆಗಳ ಪ್ರೊಫೆಸರರ ಸ್ಥಾನಗಳಿಗೆ ಮಾಡಿರುವ ಅವಮರ್ಯಾದೆಯ ವಿಚಾರ.—

ಈ ತೀರ್ಮಾನವನ್ನು ಮುಂಬಯಿ ವಿಶ್ವವಿದ್ಯಾ ನಿಲಯದ ರೆಜಿಸ್ಟ್ರಾರರಿಗೂ, ಮುಂಬಯಿ ಸರಕಾರದ ಛೀಫ್ ಸೆಕ್ರೆಟೆರಿಯವರಿಗೂ ತಿಳಿಸಲಾಗಿದೆ. ಮುಂಬಯಿ ಸರಕಾರದ ವಿದ್ಯಾ ಖಾತೆಯ ಅಸಿಸ್ಟೆಂಟು ಸೆಕ್ರೆಟೆರಿಯವರಿಂದ, ನಮ್ಮ ಪತ್ರವು ತಲಪಿತೆಂದೂ, ಅದಕ್ಕೆ ಗಮನಕೊಡುತ್ತಿರುವುದೆಂದೂ ಪತ್ರ ಬಂದಿದೆ.

೭. ಮೈಸೂರು ವಿಶ್ವವಿದ್ಯಾ ನಿಲಯದವರು ಕನ್ನಡಕ್ಕೆ ಉತ್ತೇಜನ ಕೊಟ್ಟಿದ್ದರೂ ಉರ್ದು ಭಾಷೆಗೂ ಅದೇ ಪ್ರಾಶಸ್ತ್ಯಕೊಟ್ಟಿರುವುದು ನ್ಯಾಯವಲ್ಲವೆಂಬ ವಿಚಾರ.—

ಈ ತೀರ್ಮಾನವನ್ನು ಮೈಸೂರು ವಿಶ್ವವಿದ್ಯಾ ನಿಲಯದ ರೆಜಿಸ್ಟ್ರಾರರಿಗೆ ತಿಳಿಸಲಾಯಿತು; ನಮ್ಮ ಪತ್ರವು ತಲಪಿತೆಂದು ಮಾತ್ರ ಉತ್ತರ ಬಂದಿದೆ.

೮. ಅಖಿಲ ಕರ್ಣಾಟಕದಲ್ಲಿ ಒಂದೇ ತೆರದ ಪಠ್ಯ ಪುಸ್ತಕಗಳಾಗಬೇಕಾದ ಆವಶ್ಯಕದ ವಿಚಾರ.—

ಈ ತೀರ್ಮಾನವನ್ನು ವಿದ್ಯಾ ಖಾತೆಯ ಅಧಿಕಾರವುಳ್ಳ ಬೋರ್ಡುಗಳಿಗೂ, ಮದರಾಸು, ಮುಂಬಯಿ, ಹೈದರಾಬಾದು, ಮೈಸೂರು—ಈ ಪ್ರಾಂತಗಳ ವಿದ್ಯಾ ಖಾತೆಯ ಅಧ್ಯಕ್ಷರಿಗೂ ತಿಳಿಸಲಾಯಿತು. ಮೈಸೂರು ವಿದ್ಯಾಖಾತೆಯ ಅಧ್ಯಕ್ಷರು ಬರೆದಿರುವ ೧೭–೧೨–೩೨ರ L. Dis. 2306—55 ನಂಬರಿನ ಪತ್ರದಲ್ಲಿ:— ೧೯೩೧ನೆಯ ಸೆಪಟಂಬರು ೧೨ನೆಯ ತಾರೀಖಿನಲ್ಲಿ ನಡೆದ ಟೆಕ್ಸ್ಟ್‌ಬುಕ್ ಕನ್ನಡ ಉಪ ಸಮಿತಿಯ ಅಧಿವೇಶನದಲ್ಲಿ ಈ ವಿಚಾರವನ್ನು ಚರ್ಚಿಸಿ, ಈ ಅಭಿಪ್ರಾಯವು ಸ್ತೋತ್ರಾರ್ಹವಾದುದೆಂದೂ, ಇದರಲ್ಲಿ ಸಮಿತಿಯವರ ಸಂಪೂರ್ಣ ಸಹಾನುಭೂತಿಯಿರುವುದೆಂದೂ, ಆದರೆ ಇದನ್ನು ಕಾರ್ಯಕಾರಿಯಾಗಿ ಮಾಡಲು ಮಾತ್ರ ಬಹಳ ಕಷ್ಟವೆಂದೂ—ಸಮಿತಿಯವರು ಸೂಚಿಸಿರುವರೆಂಬ ವಿಷಯವನ್ನು ತಿಳಿಸಿರುತ್ತಾರೆ.

೯. ಮೈಸೂರು ಶಿಕ್ಷಣ ಶಾಖೆಯವರು ಕನ್ನಡದ ಮೂಲಕ ಶಿಕ್ಷಣವನ್ನು ಕೊಡಿಸುತ್ತಿರುವುದಕ್ಕಾಗಿ ಅಭಿನಂದನೆ. ಕನ್ನಡವನ್ನೇ ಹೈಸ್ಕೂಲಿನ ಎಲ್ಲ ತರಗತಿಗಳಲ್ಲಿಯೂ ಎರಡನೆಯ ಭಾಷೆಯನ್ನಾಗಿಡಬೇಕೆಂದೂ, ಉರ್ದು ಭಾಷೆಯನ್ನು ಐಚ್ಛಿಕ ವಿಷಯಗಳ ಗುಂಪಿನಲ್ಲಿ ಸೇರಿಸಬೇಕೆಂದೂ ಅಭಿಪ್ರಾಯ.

ಇದನ್ನು ಮೈಸೂರು ಸರಕಾರದ ಛೀಫ್ ಸೆಕ್ರೆಟೆರಿಯವರಿಗೂ, ವಿದ್ಯಾಭ್ಯಾಸದ ಇಲಾಖೆಯ ಅಧ್ಯಕ್ಷರಿಗೂ ತಿಳಿಸಲಾಯಿತು. ಈ ಅಧ್ಯಕ್ಷರಿಂದ ಬಂದಿರುವ ೧೬ನೆಯ ಡಿಸೆಂಬರು L. Dis. 2308—253 ನಂಬರಿನ ಪತ್ರದಲ್ಲಿ—ಪ್ರಜೆಗಳ ಯಾವ ಪಂಗಡದವರಿಗೂ ಅನಾನುಕೂಲತೆಯನ್ನುಂಟುಮಾಡಲಾಗದೆಂದೂ, ಆದುದರಿಂದ ದೇಶಭಾಷೆಗಳೆಲ್ಲಕ್ಕೂ ಒಂದೇ ಸಮವಾದ ಸ್ಥಾನವನ್ನು ಕೊಡಬೇಕೆಂದೂ, ಈ ಕಾರಣದಿಂದ ಸಮ್ಮೇಳನದ ಈ ತೀರ್ಮಾನವನ್ನು ಮಾನ್ಯಮಾಡಲು ಸಾಧ್ಯವಿಲ್ಲವೆಂದೂ ತಿಳಿಸಿದೆ.

೧೦. ಉತ್ತರ ಕನ್ನಡ ಜಿಲ್ಲೆಯಲ್ಲಿ ದೊರೆಯುವ ತಾಮ್ರ ಶಾಸನಗಳನ್ನೂ, ತಾಳೆಯೋಲೆಯ ಅನೇಕ ಕನ್ನಡ ಗ್ರಂಥಗಳನ್ನೂ ಸಂಗ್ರಹ ಮಾಡಿ ವಿವರಣ ಪಟ್ಟಿಕೆಯನ್ನು ಸಿದ್ಧಪಡಿಸತಕ್ಕ ವಿಚಾರ.—

ಈ ವಿಚಾರವಾಗಿ ನಮ್ಮ ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರಾದ ಕಾರವಾರದ ಮ॥ ರಾ॥ ಶ್ರೀ ರಂಗಪ್ಪ ಪೋತ್ದಾರರವರಿಗೆ ಕಳೆದ ಮಾರ್ಚಿ ತಿಂಗಳಲ್ಲಿ ಬರೆದುದಕ್ಕೆ ಅವರು ಈ ಕಾರ್ಯವನ್ನು ೧೯೩೩ನೆಯ ಬಿಸಿಲು ಕಾಲದ ರಜಾ ದಿನಗಳಲ್ಲಿ ಮಾಡುವುದಾಗಿ ತಿಳಿಸಿದರು. ಈಚೆಗೆ ಉತ್ತರವೇನೂ ಬಂದಿಲ್ಲ.

೧೧. ಬಹಳ ಪ್ರಾಚೀನ ಭಾಷೆಯಾದ ಹಳಗನ್ನಡವನ್ನು ಮೈಸೂರು ವಿಶ್ವವಿದ್ಯಾನಿಲಯದವರು (Classical Languages) ಸಂಸ್ಕೃತಿ ಹೊಂದಿದ ಪ್ರೌಢ ಭಾಷೆಗಳ ಗುಂಪಿನಲ್ಲಿ ಸೇರಿಸಿರುವಂತೆಯೇ ಮುಂಬಯಿ ವಿಶ್ವವಿದ್ಯಾನಿಲಯದವರೂ ಸೇರಿಸಬೇಕೆಂದು ಸೂಚನೆ.—

ಈ ತೀರ್ಮಾನವನ್ನು ಮುಂಬಯಿ ವಿಶ್ವವಿದ್ಯಾನಿಲಯದ ರೆಜಿಸ್ಟ್ರಾರವರಿಗೆ ತಿಳಿಸಲಾಗಿದೆ.

೧೨. ಮದರಾಸು ವಿಶ್ವವಿದ್ಯಾನಿಲಯದ 'ಓರಿಯಂಟಲ್ ಟೈಟಲ್' ಪರೀಕ್ಷೆಯಲ್ಲಿ ಕನ್ನಡಕ್ಕೆ ತಮಿಳಿನಂತೆಯೇ ಏಕಭಾಷಾ ಗೌರವವನ್ನು ಕೊಡುವಂತೆ ಸೂಚನೆ.—

ಈ ತೀರ್ಮಾನವನ್ನು ಮದರಾಸು ವಿಶ್ವವಿದ್ಯಾನಿಲಯದ ರೆಜಿಸ್ಟ್ರಾರರಿಗೆ ತಿಳಿಸಲಾಗಿದೆ.

೧೩. ಕರ್ಣಾಟಕದ ನಾನಾ ಪ್ರಾಂತಗಳಲ್ಲಿ ಸ್ಥಾಪಿತವಾಗಿರುವ ಮತ್ತು ಸ್ಥಾಪಿತವಾಗುವ ಕರ್ಣಾಟಕ ಸಂಘಗಳನ್ನು ಪರಿಷತ್ತಿಗೆ ಜೋಡಿಸಲು ಮಾಡಬೇಕಾದ ನಿಯಮಗಳ ವಿಚಾರ.—

ಇದಕ್ಕಾಗಿ ಏರ್ಪಟ್ಟ ಉಪ ಸಮಿತಿಯ ಅಧಿವೇಶನದಲ್ಲಿ ಮಾಡಿದ ನಿಯಮಗಳ ಮಸೂದೆಯನ್ನು ಆ ಸಮಿತಿಯ ಸದಸ್ಯರೆಲ್ಲರಿಗೂ ಅಭಿಪ್ರಾಯಕ್ಕಾಗಿ ಕಳುಹಿಸಲಾಗಿದೆ; ಕರ್ಣಾಟಕದಲ್ಲಿರುವ ಇಂತಹ ಸಂಘಗಳ ವಿಚಾರವನ್ನು ತಿಳಿಸಬೇಕೆಂದು ಆಯಾ ಪ್ರಾಂತದ ಸದಸ್ಯರಿಗೆ ಬರೆದಿರಲಾಗಿ, ಅನೇಕರಿಂದ ಉತ್ತರಗಳು ಬಂದಿವೆ. ಈ ವಿಷಯವನ್ನು ಉಪ ಸಮಿತಿಯವರು ಬೇಗನೆ ತೀರ್ಮಾನಮಾಡುವುದರಲ್ಲಿದ್ದಾರೆ.

೧೪. ಪ್ರತಿ ವರ್ಷವೂ ಸಾಹಿತ್ಯ ಸಮ್ಮೇಳನದ ಜೊತೆಯಲ್ಲಿ ನಾಟಕ ಸಮ್ಮೇಳನವೂ ನಡೆಯುವಂತೆ ಏರ್ಪಾಡು ಮಾಡುವ ವಿಚಾರ.—

ಈ ತೀರ್ಮಾನವನ್ನು ಮಡಿಕೇರಿಯ ಸ್ವಾಗತ ಮಂಡಲಿಗೆ ತಿಳಿಸಲಾಗಿದೆ.

೧೫. ೧೯೩೬ನೆಯ ಇಸವಿಯಲ್ಲಿ, ವಿಜಯನಗರದ ಸಾಮ್ರಾಜ್ಯ ಸ್ಥಾಪನೆಯ ದಿವಸ, ವಿಜಯನಗರದಲ್ಲಿ ಷಟ್‌ಶತತಮ ಸಾಂವತ್ಸರಿಕೋತ್ಸವವನ್ನು ಜರುಗಿಸುವ ವಿಚಾರ.—

ಈ ತೀರ್ಮಾನವನ್ನು, ಯುಕ್ತ ಕಾಲದಲ್ಲಿ, ಎಲ್ಲ ಪ್ರಾಂತಗಳ ಕನ್ನಡ ಪತ್ರಿಕೆಗಳಲ್ಲಿಯೂ ಪ್ರಕಟಿಸಲಾಗುವುದು.

**೧೩. ಆಯ ವ್ಯಯ.**—ಇದರ ಪಟ್ಟಿಯನ್ನು ೧೨, ೧೩ನೆಯ ಪುಟಗಳಲ್ಲಿ ಕೊಟ್ಟಿದೆ. ಆಂಗೀರಸ ಸಂವತ್ಸರಾದಿಯಲ್ಲಿ ನಮ್ಮಲ್ಲಿದ್ದ ಮೊಬಲಗು ರೂ. ೧೭,೦೨೨–೫–೨. ಈ ವರ್ಷ ವಸೂಲಾದುದು ರೂ. ೮,೧೩೭–೪–೩; ಒಟ್ಟು ರೂ. ೨೫,೧೫೯–೯–೫. ಈ ವರ್ಷ ವೆಚ್ಚವಾದ ಮೊಬಲಗು ರೂ. ೧೯,೫೯೧–೫–೯. ಆಯಕ್ಕಿಂತಲೂ ವ್ಯಯವು ರೂ. ೧೧,೪೫೪–೧–೬ ಹೆಚ್ಚಾಗಿದೆ. ಪರಿಷನ್ಮಂದಿರದ ಕಟ್ಟಡಕ್ಕಾಗಿ ೧೬,೦೦೦ ರೂಪಾಯಿಗಳನ್ನು ಕೊಟ್ಟುದೇ ಇದಕ್ಕೆ ಕಾರಣ. ಈಗ ಶಿಲ್ಕು ನಿಂತಿರುವ ಮೊಬಲಗಿನಲ್ಲಿ (೫,೫೬೮–೩–೮) ೫,೨೫೫ ರೂಪಾಯಿಗಳು ಜೀವಾವಧಿ ಸದಸ್ಯರಿಂದ ಬಂದಿರುವ ಚಂದಾ ಮೊಬಲಗು.

ಪ್ರಜೋತ್ಪತ್ತಿ ಸಂವತ್ಸರದ ಪರಿಷತ್ತಿನ ಲೆಕ್ಕಗಳನ್ನು ಪರಿಶೀಲಿಸಿ ಅಭಿಪ್ರಾಯ ಕೊಟ್ಟಿರುವುದಕ್ಕಾಗಿ ಅಸಿಸ್ಟೆಂಟು ಕಂಟ್ರೋಲರ್ ಮ॥ ರಾ॥ ಶ್ರೀ ವೈ. ಸುಬ್ರಹ್ಮಣ್ಯಂ, ಎಂ.ಎ. ಅವರಿಗೆ ಪರಿಷತ್ತು ಕೃತಜ್ಞತಾ ಪೂರ್ವಕವಾದ ವಂದನೆಗಳನ್ನು ಅರ್ಪಿಸಬೇಕು.

**೧೪. ಪರಿಷತ್ತಿನ ಕಟ್ಟಡ.**—ಮೈಸೂರು ಶ್ರೀಮನ್ಮಹಾರಾಜರವರ ಉದಾರವಾದ ಸಹಾಯದಿಂದ ಕಟ್ಟಡವನ್ನು ಪ್ರಾರಂಭಿಸಲಾಯಿತು. ಈ ಅಮೂಲ್ಯವಾದ ಸಹಾಯದಿಂದಲೂ, ನಮ್ಮ ಅಧ್ಯಕ್ಷರು ಮೈಸೂರು ಶ್ರೀಮದ್ಯುವರಾಜರವರ ಮತ್ತು ಹಿಂದೆ ನಮ್ಮ ಅಧ್ಯಕ್ಷರಾಗಿದ್ದ ದಿವಂಗತ ಸರದಾರ್ ಸರ್ ಎಂ. ಕಾಂತರಾಜ ಅರಸಿನವರ ಉದಾರ ಸಹಾಯ ಪ್ರೋತ್ಸಾಹಗಳಿಂದಲೂ ಮೈಸೂರು ಶ್ರೀಮನ್ಮಹಾರಾಜರವರ ಸರಕಾರದ ಉದಾರ ಸಹಾಯದಿಂದಲೂ, ಮೈಸೂರು ದಿವಾನರು ಶ್ರೀಮಾನ್ ಮಿರ್ಜಾ ಮಹಮ್ಮದ್ ಇಸ್ಮೈಲ್ ಅವರ ಅನನ್ಯವಾದ ಅಭಿಮಾನದಿಂದಲೂ ಪರಿಷತ್ತಿಗೆ ಒಂದು ಸ್ಥಿರವಾದ ನೆಲೆಯಾಗಲು ಅವಕಾಶವಾಯಿತು. ಆರಂಭದಿಂದಲೂ ಇದರ ಯೋಜನೆಯೆಲ್ಲವೂ ಸಂಪೂರ್ಣವಾಗಿ ನಮ್ಮ ಉಪಾಧ್ಯಕ್ಷರಾಗಿದ್ದ ದಿವಂಗತ ರಾಜಸಭಾಭೂಷಣ, ವಿದ್ಯಾಭೂಷಣ ಕರ್ಪೂರ ಶ್ರೀನಿವಾಸರಾಯರದೇ ಆಗಿದೆ. ಇವರು ಕಳೆದ ಜೂನ್ ೨ನೆಯ ತಾರೀಖಿನಲ್ಲಿ ದೈವಾಧೀನರಾದುದು ಕನ್ನಡ ದೇಶಕ್ಕೆಲ್ಲ ವ್ಯಥೆಯನ್ನುಂಟುಮಾಡಿದೆ. ಈ ಮಹನೀಯರು ದೀರ್ಘಕಾಲದ ತಮ್ಮ ದುಸ್ಸಹವಾದ ದೇಹಾಲಸ್ಯವನ್ನೂ ಲಕ್ಷಿಸದೆ ಈ ಕಟ್ಟಡವನ್ನು ಆರಂಭಿಸಿ ಪೂರೈಸುವುದರಲ್ಲಿ ವಿಶೇಷ ಆಸಕ್ತಿಯನ್ನು ವಹಿಸಿದರು. ಈ ಮಹನೀಯರು ಪರಿಷತ್ತಿನ ತಮ್ಮ ಉಪಾಧ್ಯಕ್ಷತೆಯ ೧೩ ವರ್ಷಗಳ ಕಾಲದಲ್ಲಿ ಪರಿಷತ್ತಿಗಾಗಿ ವಿಶೇಷ ಶ್ರಮಪಟ್ಟು ಈ ಸಂಸ್ಥೆಯನ್ನು ಪ್ರಕೃತ ಸ್ಥಿತಿಗೆ ತಂದುದಕ್ಕಾಗಿ ಕನ್ನಡಿಗರೆಲ್ಲರೂ ಇವರಿಗೆ ಅತ್ಯಂತ ಕೃತಜ್ಞರಾಗಿರಬೇಕು.

ಪರಿಷತ್ತಿನ ಮುಖ್ಯವಾದ ಕಟ್ಟಡದ ಕೆಲಸವು ಮುಗಿದು ಕೆಲವು ಕಾಲವಾಗಿದ್ದರೂ ಆವರಣದಲ್ಲಿರಬೇಕಾದ ಸಣ್ಣ ಕಟ್ಟಡ ಮೊದಲಾದ ಕೆಲಸಗಳಿಗೆ ಹಣವಿಲ್ಲದೆ ಮುಗ್ಗಟ್ಟಾಗಿರುವುದರಿಂದ ಕಟ್ಟಡವನ್ನು ಇನ್ನೂ ನಮ್ಮ ಸ್ವಾಧೀನಕ್ಕೆ ವಹಿಸಿಕೊಂಡಿಲ್ಲ. ಇದುವರೆಗೆ ಈ ಕಟ್ಟಡಕ್ಕಾಗಿ ವೆಚ್ಚವಾಗಿರುವ ಮೊಬಲಗು ಸುಮಾರು ಮೂವತ್ತೊಂದು ಸಾವಿರ ರೂಪಾಯಿಗಳು.

ಕಟ್ಟಡದ ಪ್ರವೇಶೋತ್ಸವವನ್ನು ಇಷ್ಟರಲ್ಲಿಯೇ ಬಹಳ ವಿಜೃಂಭಣೆಯಿಂದ ನಡೆಯಿಸಬೇಕೆಂದು ಕಾರ್ಯನಿರ್ವಾಹಕ ಮಂಡಲಿಯವರು ಕುತೂಹಲಿಗಳಾಗಿದ್ದಾರೆ.

**೧೫. ಉಪಸಂಹಾರ.**—ಈ ಸಲ ಮಡಿಕೇರಿಯಲ್ಲಿ ನಡೆಯುವ ಸಮ್ಮೇಳನದೊಂದಿಗೆ ಕರ್ಣಾಟಕ ಸಾಹಿತ್ಯ ಪರಿಷತ್ತು ಒಟ್ಟು ಕರ್ಣಾಟಕದಲ್ಲೆಲ್ಲ ಒಂದು ಬಾರಿ ಸಂಚಾರವಮಾಡಿದಂತಾಯಿತು. ಕರ್ಣಾಟಕದಲ್ಲೆಲ್ಲ ಕನ್ನಡ ಭಾಷಾ ಜಾಗ್ರತಿಯನ್ನುಂಟುಮಾಡಲು ಭಾರತ ವಾಚನಾದಿಗಳ ಮೂಲಕವೂ, ಗ್ರಂಥ ಪ್ರಕಟನದ ಮೂಲಕವೂ ಪರಿಷತ್ತು ಪ್ರಯತ್ನಿಸುತ್ತಿರುವುದು. ಎಲ್ಲೆಲ್ಲಿಯೂ ಭಾಷಾಭಿಮಾನವೇನೋ ದಿನೇ ದಿನೇ ಹೆಚ್ಚುತ್ತಿರುವ ಸಂಗತಿಯು ಉತ್ಸಾಹಪ್ರದವಾದುದೇ ಸರಿ. ಆದರೆ ಪರಿಷತ್ತಿಗೆ ಪ್ರೋತ್ಸಾಹವು ಮಾತ್ರ ದಿನೇ ದಿನೇ ಕುಗ್ಗುತ್ತಿರುವ ವಿಷಯವು ಅತ್ಯಂತ ಶೋಚನೀಯವಾಗಿದೆ. ಒಂದೂವರೆ ಕೋಟಿ ಕನ್ನಡಿಗರಿರುವ ಕರ್ಣಾಟಕದಲ್ಲಿ, ಪರಿಷತ್ತಿನ ಜೀವಾವಧಿ ಸದಸ್ಯರಾಗಿರುವವರು ೮೨ ಮಂದಿಯೆಂದೂ, ಸಾಧಾರಣ ಸದಸ್ಯರಾಗಿರುವವರು ೪೨ ಮಂದಿಯೆಂದೂ, ಪರಿಷತ್ಪತ್ರಿಕೆಗೆ ಚಂದಾದಾರರಾಗಿರುವವರು ೩೮ ಮಂದಿಯೆಂದೂ, ಈ ಸದಸ್ಯರಲ್ಲಿಯೂ ಚಂದಾದಾರರಲ್ಲಿಯೂ ಅನೇಕ ಮಂದಿ ತಮ್ಮ ಚಂದಾ ಹಣವನ್ನು ಕೊಡದೆ ನಿರ್ಲಕ್ಷ್ಯದಿಂದಿರುವರೆಂದೂ ಹೇಳುವಂತಾಗಿರುವುದು ಕನ್ನಡದ ದೌರ್ಭಾಗ್ಯವೆನ್ನಬೇಕು. ಪರಿಷತ್ತಿನ ಕಾರ್ಯಕಲಾಪಗಳು ಸುಸೂತ್ರವಾಗಿ ನಡೆದು ಕನ್ನಡ ಭಾಷಾಭಿವೃದ್ಧಿಗೂ, ಈ ಮೂಲಕ ಕರ್ಣಾಟಕ ದೇಶಾಭಿವೃದ್ಧಿಗೂ ವಿಶೇಷ ಸಹಾಯವಾಗುವಂತೆ ಜಗದೀಶ್ವರನು ಅನುಗ್ರಹಿಸಬೇಕೆಂಬುದೇ ನಮ್ಮೆಲ್ಲರ ಪ್ರಾರ್ಥನೆ.

ಬೆಂಗಳೂರು,
೨೦ನೆಯ ಡಿಸೆಂಬರು ೧೯೩೨.

**ಸಿ. ಕೆ. ವೆಂಕಟರಾಮಯ್ಯ,**
ಗೌರವ ಕಾರ್ಯದರ್ಶಿ.

# ಕರ್ಣಾಟಕ ಸಾಹಿತ್ಯ ಪರಿಷತ್ತು

## ಆಸ್ತಿ ಋಣಗಳ ಪಟ್ಟಿ

(೧೯೩೨ನೆಯ ಏಪ್ರಿಲ್ ೧ನೆಯ ತಾರೀಖಿನಲ್ಲಿದ್ದಂತೆ)

| ಆಸ್ತಿ | ರೂ. ಆ. ಪೈ |
|---|---|
| ಪರಿಷತ್ತಿನ ಕಟ್ಟಡ | ೨೫,೦೦೦—೦—೦ |
| ಸರ್ಕಾರದ ಗ್ರಾಂಟು | ೧೫೦—೦—೦ |
| ಬರಬಹುದಾದ ಚಂದಾ ಮೊಬಲಗು | ೬೦೦—೦—೦ |
| ಡಿಪಾಜಿಟ್ಟುಗಳು | ೫,೫೦೮—೯—೯ |
| ನಗದು ಹಣ | ೫೯—೯—೧೧ |
| ಡಿಪಾಜಿಟ್ಟುಗಳ ಬಡ್ಡಿ (ಸುಮಾರು) | ೯೧—೦—೦ |
| ಕೈಯಲ್ಲಿರುವ ಅಚ್ಚಿನ ಕಾಗದ (ಸುಮಾರು) | ೧೦—೦—೦ |
| ಕೈಯಲ್ಲಿರುವ ಪುಸ್ತಕಗಳ ಬೆಲೆ (ಸುಮಾರು) | ೩,೨೦೦—೦—೦ |
| ಪುಸ್ತಕ ಭಾಂಡಾಗಾರ (ಸುಮಾರು) | ೪,೫೫೦—೦—೦ |
| ಪರಿಷತ್ಪತ್ರಿಕೆಯ ಹಳೆಯ ಸಂಚಿಕೆಗಳಿಗಾಗಿ ಬರಬೇಕಾದುದು | ೧೦—೧೦—೦ |
| ಸಾಮಾನುಗಳು ವಗೈರೆ (ಸುಮಾರು) | ೧,೩೫೦—೦—೦ |
| ಒಟ್ಟು ರೂ. .. | ೪೦,೫೨೯—೧೩—೮ |

| ಋಣ | ರೂ. ಆ. ಪೈ |
|---|---|
| ಸಿಬ್ಬಂದಿಯ ವೆಚ್ಚ | ೬೭—೦—೦ |
| ಮನೆಯ ಬಾಡಿಗೆ | ೩೦—೦—೦ |
| ದೀಪದ ವೆಚ್ಚ | ೩—೪—೬ |
| ಜೀವಾವಧಿ ಸದಸ್ಯರ ಚಂದಾ ಮೊಬಲಗು | ೫,೨೨೫—೦—೦ |
| ವೈಜ್ಞಾನಿಕ ಗ್ರಂಥ ಪ್ರಕಟನೆಯ ಹಣ (ಸುಮಾರು) | ೧,೩೦೦—೦—೦ |
| ಋಣಕ್ಕಿಂತಲೂ ಆಸ್ತಿಯ ಹೆಚ್ಚು | ೩೩,೯೦೪—೯—೨ |
| ಒಟ್ಟು ರೂ. .. | ೪೦,೫೨೯—೧೩—೮ |

ಕರ್ಣಾಟಕ ಸಾಹಿತ್ಯ

ಪ್ರಜೋತ್ಪತ್ತಿ ಸಂವತ್ಸರದ

## ಆಯ

| | | | ರೂ. ಆ. ಪೈ |
|---|---|---|---|
| ೧. | ಹೋದ ವರುಷದ ಶಿಲ್ಕು | .. | ೧೭,೦೨೨–೫–೨ |
| ೨. | ತಿಂಗಳುಗಟ್ಟಲೆ ಸರ್ಕಾರದಿಂದ ಬಂದ ಸಹಾಯ ದ್ರವ್ಯ | .. | ೧,೮೦೦–೦–೦ |
| ೩. | ಪರಿಷತ್ತಿನ ಸದಸ್ಯರಿಂದ ಬಂದ ಚಂದಾ ಹಣ | .. | ೩೦೧–೯–೦ |
| ೪. | ಪರಿಷತ್ಪತ್ರಿಕೆಯ ಚಂದಾ ಹಣ | .. | ೧೩೧–೦–೦ |
| ೫. | ಪರಿಷತ್ತಿನ ಪುಸ್ತಕಗಳ ಮಾರಾಟದಿಂದ ಬಂದ ಹಣ | | ೧೬೩–೫–೬ |
| ೬. | ಡಿಪಾಜಿಟ್ಟುಗಳ ಮೇಲೆ ಬಂದ ಬಡ್ಡಿ | .. | ೬೦೦–೯–೯ |
| ೭. | ಅಂಚೆಯ ಹಾಸಲು ವಗೈರೆ ವಸೂಲಾದದ್ದು | .. | ೫–೫–೦ |
| ೮. | ಕೊಠಡಿಯ ಬಾಡಿಗೆ | .. | ೩೦–೦–೦ |
| ೯. | ಪಂಪ ಭಾರತದ ಪ್ರತಿಗಾಗಿ ಅಡವಿಟ್ಟಿದ್ದ ಹಣ ಹಿಂದಕ್ಕೆ ಬಂದದ್ದು | .. | ೧೦೦–೦–೦ |
| ೧೦. | ಪರಿಷನ್ಮಂದಿರಕ್ಕಾಗಿ ಶ್ರೀಮನ್ಮಹಾರಾಜರವರ ಸಹಾಯ ದ್ರವ್ಯ | .. | ೫,೦೦೦–೦–೦ |
| ೧೧. | ಇತರ ಬಾಬು | .. | ೫–೭–೦ |
| | ಒಟ್ಟು | .. | ೨೫,೧೫೯–೯–೫ |

I have verified the accounts and certify that the above Statement of Receipts and Expenses is correct.

(Sd.) Y. SUBRAHMANYAM, M.A.,
*Auditor.*

**ಪರಿಷತ್ತು, ಬೆಂಗಳೂರು**

ಆಯ ವ್ಯಯದ ಪಟ್ಟಿ

## ವ್ಯಯ

| | | ರೂ. ಆ. ಪೈ |
|---|---|---|
| ೧. | ಪರಿಷತ್ತಿನ ಆಫೀಸಿನ ಸಿಬ್ಬಂದಿಗಾಗಿ .. .. | ೭೨೪–೧೦–೦ |
| ೨. | ಪರಿಷನ್ಮಂದಿರದ ಬಾಡಿಗೆ .. .. | ೩೬೦–೦–೦ |
| ೩. | ದೀಪದ ವೆಚ್ಚ .. .. | ೪೨–೧೨–೦ |
| ೪. | ಬರೆವಣಿಗೆಯ ಸಾಮಗ್ರಿ .. .. | ೩೬–೧೦–೬ |
| ೫. | ಅಂಚೆಯ ಮತ್ತು ಟೆಲಿಗ್ರಾಫು ಹಾಸಲು .. | ೧೭೦–೧೪–೦ |
| ೬. | ಕಾಗದ, ಮುದ್ರಣ ಮತ್ತು ಬೈಂಡಿಗಾಗಿ .. | ೧,೩೯೩–೧೩–೦ |
| ೭. | ಪುಸ್ತಕ ಭಾಂಡಾಗಾರಕ್ಕಾಗಿ .. .. | ೧೦೪–೧೦–೦ |
| ೮. | ವಾಚನ ಮಂದಿರದ ಪತ್ರಿಕೆಗಳ ಚಂದಾ .. | ೯೮–೮–೦ |
| ೯. | ಪರಿಷನ್ಮಂದಿರದ ತಳಹದಿಯ ಕಲ್ಲಿನ ಸಂಬಂಧದ ವೆಚ್ಚ | ೧೨೭–೧೨–೩ |
| ೧೦. | ಪರಿಷನ್ಮಂದಿರದ ಕಟ್ಟಡಕ್ಕಾಗಿ .. .. | ೧೬,೦೦೦–೦–೦ |
| ೧೧. | ಮಾರಾಟಕ್ಕಾಗಿ ಕೊಂಡುಕೊಂಡ ಶಬ್ದಮಣಿದರ್ಪಣ | ೧೧೨–೮–೦ |
| ೧೨. | 'ಜ್ಯೋತಿರ್ವಿನೋದಿನಿ'ಯ ಬ್ಲಾಕುಗಳಿಗಾಗಿ .. | ೩೭–೨–೦ |
| ೧೩. | ಸಮ್ಮೇಳನದ ವೆಚ್ಚ .. .. .. | ೧೫೨–೦–೦ |
| ೧೪. | ಪ್ರಚಾರ ಕಾರ್ಯಕ್ಕಾಗಿ .. .. | ೧೮೫–೦–೦ |
| ೧೫. | ಇತರ ವೆಚ್ಚಗಳಿಗಾಗಿ .. .. .. | ೪೫–೨–೦ |
| | ಒಟ್ಟು .. | ೧೯,೫೯೧–೫–೯ |
| | * ಶಿಲ್ಕು ನಿಂತಿರುವುದು .. | ೫,೫೬೮–೩–೮ |
| | ಒಟ್ಟು .. | ೨೫,೧೫೯–೯–೫ |

* ಶಿಲ್ಕಿಗೆ ತಪಸೀಲು :—

ಬೆಂಗಳೂರು ಸಿಟಿ ಕೋ॥ ಸೊಸೈಟಿಯಲ್ಲಿ

| | |
|---|---|
| ಫಿ॥ ಡಿಪಾಜಿಟ್ಟು | ೪,೦೦೦–೦–೦ |
| ಸೇವಿಂಗ್ಸ್ ಬ್ಯಾಂಕು ಡಿ॥ | ೧,೫೦೮–೯–೯ |
| ಗೌ॥ ಕಾರ್ಯದರ್ಶಿಯವರ ಬಳಿ ನಗದು | ೫೯–೯–೧೧ |
| ಒಟ್ಟು ರೂ. | ೫,೫೬೮–೩–೮ |

(Sd.) C. K. VENKATARAMAIYA, M.A., LL.B.,
*Honorary Secretary.*

(Sd.) B. VENKATANARANAPPA, M.A.,
*Honorary Treasurer.*

# ಪ ರಿ ಶಿ ಷ್ಟ ೧

## ಕರ್ಣಾಟಕ ಸಾಹಿತ್ಯ ಪರಿಷತ್ತಿನ

## ಸದಸ್ಯರ ಪಟ್ಟಿ

(೧೯೩೨ನೆಯ ಇಸವಿ ಏಪ್ರಿಲ್ ಮೊದಲನೆಯ ತಾರೀಖಿನಲ್ಲಿದ್ದಂತೆ)

---

### ಪ್ರ ದಾ ತೃ ಗ ಳು

*೧. ರಾಜಸಭಾ ಭೂಷಣ ಮ|| ರಾ|| ಕರ್ಪೂರ ಶ್ರೀನಿವಾಸರಾಯರು, ಬಿ.ಎಸ್‌ಸಿ., ಎಲ್.ಸಿ.ಇ., ರಿ|| ಛೀಫ್ ಎಂಜನಿಯರ್, ಬೆಂಗಳೂರು.

### ಸಹಾಯಕರು

*೨. ಮ|| ರಾ|| ನಾರಾಯಣಸ್ವಾಮಿರಾವ್ ಲೋಕೂರ, ಬೆಳಗಾಂವಿ.

೩. ರಾಜಸಭಾ ಭೂಷಣ ದಿವಾನ್ ಬಹಾದ್ದೂರ್ ಸರ್ ಕೆ. ಪಿ. ಪುಟ್ಟಣ್ಣಸೆಟ್ಟರು, ಕೆಟಿ., ಸಿ.ಐ.ಇ., ರಿ|| ಕೌನ್ಸಿಲರ್, ಬೆಂಗಳೂರು.

೪. ಮ|| ರಾ|| ಶ್ರೀನಿವಾಸರಾವ್ ಕೌಜಲಗಿ, ಬಿ.ಎ., ಎಲ್‌ಎಲ್.ಬಿ., ಬಿಜಾಪುರ.

೫. ರಾಜಕಾರ್ಯ ಪ್ರಸಕ್ತ ದಿವಾನ್ ಬಹಾದ್ದೂರ್ ಮ|| ರಾ|| ಎಂ. ಎನ್. ಕೃಷ್ಣರಾಯರು, ಬಿ.ಎ., ಬೆಂಗಳೂರು.

### ಆಜೀವ ಸದಸ್ಯರು

(ಮೈಸೂರು ದೇಶದ ಸದಸ್ಯರು)

ಮ|| ರಾ|| ಗಳಾದ

೬. ಎಸ್. ಎ. ಅಪ್ಪಣ್ಣಯ್ಯಂಗಾರ್ಯರು, ಬಿ.ಎ., ಬಿ.ಎಲ್., ಅ|| ಕ|| ಬೆಂಗಳೂರು.

೭. ಪಿ. ಅಪ್ಪಾಜೀರಾಯರು, ಬಿ.ಎಸ್‌ಸಿ., 11 B, ಆರ್ಪ್ರತಿ ಲೇನ್, ಕಲ್ಕತ್ತ.

*೮. ಟಿ. ಅಪ್ಪೂರಾಯರು, ಬಿ.ಎ., ಬಿ.ಎಲ್., ಅಡ್ವೊಕೇಟ್, ಬೆಂಗಳೂರು.

೯. ಡಿ. ಆದೆಪ್ಪನವರು, ಸಾಹುಕಾರರು, 'ಚೂಡಾಮಣಿ', ಬಸವನಗುಡಿ, ಬೆಂಗಳೂರು.

೧೦. ಮಾಗಡಿ ಕರಣಿಕ ಕೃಷ್ಣಮೂರ್ತಿರಾಯರು, ಜಮೀನ್ದಾರರು, ಬಸವನಗುಡಿ.

೧೧. ಸಿ. ಕೃಷ್ಣರಾಯರು, ಬಿ.ಎ., ವಿದ್ಯಾ|| ರಿ|| ಡೆ|| ಇನ್|| ಜನರಲ್, ತುಮಕೂರು.

*೧೨. ಎ. ಆರ್. ಕೃಷ್ಣಶಾಸ್ತ್ರಿಗಳು, ಎಂ.ಎ., ಕನ್ನಡ ಅ|| ಪ್ರೊ|| ಬೆಂಗಳೂರು.

೧೩. ಎ. ಕೇಶವಯ್ಯನವರು, ರಿ|| ಸ್ಕೂಲ್ ಮಾಸ್ಟರು, ಚಿಕ್ಕಬಳ್ಳಾಪುರ.

೧೪. ಲೋಕಸೇವಾನಿರತ ಡಿ. ಕೊಂಗಾಡಿಯಪ್ಪನವರು, ರಿ|| ಹೆ|| ಮಾಸ್ಟರ್, ದೊಡ್ಡಬಳ್ಳಾಪುರ.

೧೫. ಎಂ. ಎನ್. ಗೋಪಾಲರಾಯರು, ಎಲೆಕ್ಟ್ರಿಕಲ್ ಡಿಪಾರ್ಟ್‌ಮೆಂಟ್, ಮಲ್ಲೇಶ್ವರ.

೧೬. ವಿ. ಆರ್. ತ್ಯಾಗರಾಜ ಅಯ್ಯರವರು, ಎಂ.ಎ., ರಿ|| ಎ|| ಕಮಿಷನರ್, ಬಸವನಗುಡಿ.

೧೭. ವೈ. ನರಸಿಂಗರಾಯರು, ಬಿ.ಎ., ಬಿ.ಎಲ್., ರಿ|| ಅ|| ಕ|| ಬೆಂಗಳೂರು.

೧೮. ಸಿ. ಆರ್. ನರಸಿಂಹಯ್ಯಂಗಾರ್ಯರು, ಬಿ.ಎ., ಜಿಯಾಲೊಜಿಸ್ಟ್, ಕಡಕೊಳ.

---

* ಈ ಗುರುತು ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರ ಹೆಸರನ್ನು ತೋರಿಸುತ್ತದೆ.

ಮ॥ ರಾ॥ ಗಳಾದ

೧೯. ಪ್ರಾಕ್ತನ ವಿಮರ್ಶ ವಿಚಕ್ಷಣ ರಾವ್ ಬಹಾದ್ದೂರ್ ಆರ್. ನರಸಿಂಹಾಚಾರ್ಯರು, ಎಂ.ಎ., ರಿ॥ ಡೈರೆಕ್ಟರು, ಶಾಸನದ ಇಲಾಖೆ, ಮಲ್ಲೇಶ್ವರ.

೨೦. ಬಿ. ನರಹರಿ ಶಾಸ್ತ್ರಿಗಳು, ಹೆ॥ ಮಾಸ್ಟರ್, ಬಸವನಗುಡಿ.

೨೧. ಡಿ. ಕೆ. ಭಾರದ್ವಾಜರು, ವಿದ್ಯಾಭೂಷಣ, ಬಸವನಗುಡಿ.

೨೨. ವೈ. ಕೆ. ರಾಮಚಂದ್ರರಾಯರು, ಬಿ.ಎ., ಎಲ್.ಸಿ.ಇ., ರೈಲ್ವೆ ಎಂಜಿ॥ ಮೈಸೂರು.

೨೩. ರಾವ್ ಸಾಹೆಬ್ ಎಂ. ರಾಮರಾಯರು, ರಿ॥ ಫಾರೆಸ್ಟ್ ಆಫಿಸರ್, ಬಸವನಗುಡಿ.

೨೪. ಎಂ. ಎ. ರಾಮಾನುಜಯ್ಯಂಗಾರ್ಯರು, "ಕಾವ್ಯಕಲಾನಿಧಿ"ಯ ಸಂ॥ ಮೈಸೂರು.

೨೫. ವೀಣೆ ರಂಗಸ್ವಾಮಯ್ಯಂಗಾರ್ಯರು, ಜಮಿಾನ್‌ದಾರರು, ಶ್ರೀರಂಗಪಟ್ಟಣ.

೨೬. ರಾಜ ಕವಿ ಭೂಷಣ ಎಚ್. ಲಿಂಗರಾಜ ಅರಸಿನವರು, ಮೈಸೂರು.

೨೭. ಎಚ್. ಕೆ. ವೀರಬಸವಯ್ಯನವರು, ಬಿ.ಎ., ಬಿ.ಎಲ್., ಸ॥ ಜಡ್ಜ್, ಬೆಂಗಳೂರು.

೨೮. ಎಂ. ವೆಂಕಟಕೃಷ್ಣಯ್ಯನವರು, ಮೈಸೂರು.

*೨೯. ಬಿ. ವೆಂಕಟನಾರಾಯಣಪ್ಪನವರು, ಎಂ.ಎ., ರಿ॥ ಕಾಲೇಜು ಪ್ರೊ॥ ಬಸವನಗುಡಿ.

*೩೦. ಎನ್. ವೆಂಕಟೇಶ ಅಯ್ಯಂಗಾರ್ಯರು, ಬಿ.ಎ., ರಿ॥ ಮಿಾಟಿಯೊರೊಲಾಜಿಕಲ್ ರಿಪೋರ್ಟರು, ಚಾಮರಾಜಪೇಟೆ, ಬೆಂಗಳೂರು.

೩೧. ರಾವ್ ಬಹಾದ್ದೂರ್ ಬಿ. ವೆಂಕಟೇಶಾಚಾರ್ಯರು, ಎಂ.ಎ., ಪ್ರೊಫೆಸರ್, ಸೆಂಟ್ರಲ್ ಕಾಲೇಜು, ಬೆಂಗಳೂರು.

೩೨. ಕೆ. ಶಂಕರನಾರಾಯಣರಾಯರು, ಎಂ.ಎ., ಬಿ.ಎಲ್., ಡಿ॥ ಜಡ್ಜ್, ಮೈಸೂರು.

*೩೩. ಬಿ. ಶಿವಮೂರ್ತಿ ಶಾಸ್ತ್ರಿಗಳು, ಹೊರಪೇಟೆ, ತುಮಕೂರು.

*೩೪. ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್., ಪ್ರೊಫೆಸರ್, ಸೆಂ॥ ಕಾ॥ ಬೆಂಗಳೂರು.

೩೫. ಕೆ. ಶ್ರೀನರಸಿಂಹಯ್ಯನವರು, ಎಂ.ಎ., ಎಲ್.ಟಿ., ವಿದ್ಯಾಭ್ಯಾಸದ ಇಲಾಖಾ ಡೆಪ್ಯುಟಿ ಡೈರೆಕ್ಟರು, ಮೈಸೂರು.

೩೬. ಟಿ. ಶ್ರೀನಿವಾಸರಾಘವಾಚಾರ್ಯರು, ರಿ॥ ಕನ್ನಡ ಪಂಡಿತರು, ಮೈಸೂರು.

೩೭. ಎಂ. ಶ್ರೀನಿವಾಸರಾಯರು, ಬಿ.ಎ., ರಿ॥ ಸರ್ಕಲ್ ಇನ್‌ಸ್ಪೆಕ್ಟರು, ಮೈಸೂರು.

೩೮. ಎ. ಸದಾಶಿವನ್, ಬಿ.ಎ., ಬಿ.ಎಲ್., ಮೈಸೂರು ರೈಲ್ವೆ ಛೀಫ್ ಸ್ಟೋರು-ಕೀಪರು, ಮೈಸೂರು.

*೩೯. ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ., ಕನ್ನಡ ಪ್ರೊಫೆಸರು, ಮೈಸೂರು.

(ಮುಂಬಯಿ ಪ್ರಾಂತದ ಸದಸ್ಯರು)

ಮ॥ ರಾ॥ ಗಳಾದ

೪೦. ದಿವಾನ್ ಬಹಾದ್ದೂರ್ ಅಣ್ಣಾರಾವ್ ಬಿ. ಲಠ್ಠೆ, ಎಂ.ಎ., ಎಲ್‌ಎಲ್.ಬಿ., ಕೊಲ್ಹಾಪುರ.

೪೧. ಆನಂದರಾವ್ ಶೇಷಗಿರಿ ಮುಂಡಕೂರ್, ಬಿ.ಎ., ಡೆಪ್ಯುಟಿ ಕಲೆಕ್ಟರ್, ಕಾರವಾರ.

೪೨. ಬಿ. ಪಿ. ಆಲತಗಿ, ಸ್ಕೂಲ್ಮಾಸ್ಟರು, ರಬಕವಿ.

*೪೩. ವಿ. ಬಿ. ಆಲೂರ್, ಬಿ.ಎ., ಎಲ್‌ಎಲ್.ಬಿ., ಸಾಧನಕೇರಿ, ಧಾರವಾಡ.

ಮ॥ ರಾ॥ ಗಳಾದ

*೪೪. ಎಚ್. ಚೆನ್ನಕೇಶವಯ್ಯಂಗಾರ್‍ಯರು, ಕನ್ನಡ ಪ್ರೊಫೆಸರ್, ಧಾರವಾಡ.

೪೫. ಆರ್. ಎ. ಜಹಗೀರ್‌ದಾರ್, ಎಂ.ಎ., ಎಲ್‌ಎಲ್.ಬಿ., ಹೈ॥ ವಕೀಲ್, ಮುಂಬಯಿ.

೪೬. ರಾವ್ ಬಹಾದ್ದೂರ್ ವಿ. ಬಿ. ಜೋಶಿ, ಬಿ.ಎ., ರಿ॥ ಪ್ರಿನ್ಸಿಪಾಲ್, ಧಾರವಾಡ.

೪೭. ಎನ್. ಆರ್. ದೇಶಪಾಂಡೆ, ಬಿ.ಎ., ಎಲ್‌ಎಲ್.ಬಿ., ಪ್ಲೀಡರು, ಧಾರವಾಡ.

೪೮. ನಾರಾಯಣ ಗುರುರಾವ್ ಜೋಷಿ, ಬಿ.ಎ., ಎಲ್‌ಎಲ್.ಬಿ., ವಕೀಲ್, ಬೆಳಗಾಂವಿ.

೪೯. ನಾರಾಯಣ ಶ್ರೀನಿವಾಸ ರಾಜಪುರೋಹಿತರು, ಶುಕ್ರವಾರ ಪೇಟೆ, ಧಾರವಾಡ.

*೫೦. ನಾರಾಯಣ ವೆಂಕಟೇಶ ಕುರಡಿ, ಟ್ರೈನಿಂಗ್ ಸ್ಕೂಲ್, ಧಾರವಾಡ.

*೫೧. ಆರ್. ಬಿ. ಪೋತ್ದಾರ್, ಬಿ.ಎ., ಹೈ ಸ್ಕೂಲ್ ಮಾ॥ ಕಾರವಾರ.

೫೨. ಎಸ್. ಆರ್. ಪೋತ್ದಾರ್, ಮಾಳಮಡ್ಡಿ, ಧಾರವಾಡ.

೫೩. ಬಿ. ಬಿ. ಬಾಗಿ, ಲೆಕ್ಚರರ್, ಕರ್ನಾಟಕ ಕಾಲೇಜು, ಧಾರವಾಡ.

*೫೪. ಬಿ. ಎಸ್. ಬೆಟಿಗೇರಿ, ಥಳಕವಾಡಿ, ಬೆಳಗಾಂವಿ.

೫೫. ವಿ. ಎನ್. ಮುಗದಾಳ್, ಬಿ.ಎ., ಹೆ॥ ಮಾ॥ ಟ್ರೈ॥ ಸ್ಕೂ॥ ಧಾರವಾಡ.

೫೬. ವೆಂಕಟೇಶ ತಿರಕೋ ಕುಲಕರಣಿ ಗಳಗನಾಥರು, ಹಾವೇರಿ.

೫೭. ಶಾಸ್ತ್ರಿ ಶಿವರಾವ್, ವಕೀಲರು, ಹೊನ್ನಾವರ.

೫೮. ಶ್ರೀನಿವಾಸ ಪಾಂಡುರಂಗ ಕೋಟೀ, ರೇಂಜು ಫಾರೆಸ್ಟ್ ಆಫಿ॥, ಕಿರಿವತ್ತಿ (ಉ. ಕನ್ನಡ).

೫೯. ಶ್ರೀನಿವಾಸ ರಾಜೇರಾವ ಮಂಗಳವೇಡೆ, ಪತ್ರಿಕಾ ಕರ್ತರು, ಬಾಗಲಕೋಟೆ.

೬೦. ಸಣ್ಣಪ್ಪನಾಯಿಕ ರಾಮಚಂದ್ರನಾಯಿಕ ಪಡಕೂಟ, ಹಲಸಿಗೆ (ಬೆಳಗಾಂ ಡಿ॥).

*೬೧. ರಾವ್ ಸಾಹೆಬ್ ಪಿ. ಜಿ. ಹಳಕಟ್ಟಿ, ಬಿ.ಎ., ಎಲ್‌ಎಲ್.ಬಿ., ಪಬ್ಲಿಕ್ ಪ್ರಾಸಿಕ್ಯೂಟರ್ ಮತ್ತು ಪ್ಲೀಡರ್, ಬಿಜಾಪುರ.

(ಉತ್ತರ ಕರ್ಣಾಟಕ ಸಂಸ್ಥಾನಗಳ ಸದಸ್ಯರು)

ಮ॥ ರಾ॥ ಗಳಾದ

*೬೨. ಕೆ. ಜಿ. ಕುಂದಣಗಾರ, ಎಂ.ಎ., ಪ್ರೊಫೆಸರ್, ಕೊಲ್ಹಾಪುರ.

*೬೩. ತಮ್ಮಣ್ಣಪ್ಪ ಸತ್ಯಪ್ಪ ಚಿಕ್ಕೋಡಿ, ವರ್ತಕರು, ಬನಹಟ್ಟಿ (ಬೆಳಗಾಂ ಡಿ॥).

೬೪. ಮಾಧವರಾವ್ ತಿರುಮಲರಾವ್ ದೇಶಪಾಂಡೆ, ಹುನ್ನೂರು (ಜಮಖಂಡಿ).

೬೫. ರಾಮಚಂದ್ರ ಶಂಕರ ಮಂಗಸೂಳಿ, ಶಿರಹಟ್ಟಿ (ಧಾರವಾಡ ಡಿ॥).

(ಹೈದರಾಬಾದು ಪ್ರಾಂತದ ಸದಸ್ಯರು)

ಮ॥ ರಾ॥ ಗಳಾದ

*೬೬. ಕರ್ಣಾಟಕ ನಾಟಕಾಲಂಕಾರ, ಅಭಿನಯ ಕೇಸರಿ, ಗರುಡ ಸದಾಶಿವರಾಯರು, ಹೈದರಾಬಾದು.

*೬೭. ನಾರಾಯಣಶಾಸ್ತ್ರಿ ಭಾವೂಶಾಸ್ತ್ರೀ, ಕೊಪ್ಪಳ.

೬೮. ರಾಘವೇಂದ್ರರಾವ್ ಚಾಕಲಬ್ಬಿ, ವಕೀಲರು, ಕೊಪ್ಪಳ.

೬೯. ಟಿ. ಆರ್. ರಾಮರಾಯರು, ಬಿ.ಎ., ಕನ್ನಡ ಪ್ರೊಫೆಸರ್, ಹೈದರಾಬಾದು.

೭೦. ಎಂ. ಎಸ್. ಲಕ್ಷ್ಮೀನಾರಾಯಣರಾಯರು, ಬಿ.ಎ., ಎಲ್‌ಎಲ್.ಬಿ., ಹೈಕೋರ್ಟು ವಕೀಲರು, ಹೈದರಾಬಾದು.

ಮ॥ ರಾ॥ ಗಳಾದ

೭೧. ಕೆ. ವೆಂಕಟರಾಯರು, ಕೋ-ಆಪರೇಟಿವ್ ಸೊಸೈಟಿಗಳ ಇನ್ಸ್‌ಪೆಕ್ಟರು, C/o
ಕೆ. ರಾಮರಾಯರು ಕುಲಕರ್ಣಿ, ಮಾಲ್ಖೂಲ್ ಪೋಸ್ಟು, ಎನ್. ಜಿ. ಎಸ್. ರೈಲ್ವೆ.

೭೨. ಶಂಕರರಾವ್ ಗೋಪಾಲರಾಯರು, ಮನ್ಸಬ್ದಾರ್, ಗುಲ್ಬರ್ಗ.

(ಮದರಾಸು ಪ್ರಾಂತದ ಸದಸ್ಯರು)

ಮ॥ ರಾ॥ ಗಳಾದ

೭೩. ಆರ್. ತಾತಾಚಾರ್ಯರು, ಎಂ.ಎ., ಎಲ್.ಟಿ., ಡಿಸ್ಟ್ರಿಕ್ಟು ಎಜ್ಯುಕೇಷನಲ್ ಆಫಿಸರು, ಮಂಗಳೂರು.

*೭೪. ಎಚ್. ತಿಮ್ಮಕೃಷ್ಣರಾಯರು, ಬಿ.ಎ., ಬಿ.ಎಲ್., ಹೈ॥ ವಕೀಲ್, ಬಳ್ಳಾರಿ.

*೭೫. ಎನ್. ರಾಜಗೋಪಾಲ ಕೃಷ್ಣರಾಯರು, ಜವಿನ್ದಾರರು, ಉಡಿಪಿ.

*೭೬. ಬಿ. ರಾಮರಾಯರು, ಎಂ.ಎ., ಎಲ್‌ಎಲ್.ಬಿ., ರಿ॥ ಸೀ॥ ಟ್ರಾನ್ಸ್॥ ಮದರಾಸು.

೭೭. ಪತ್ತಿಕೊಂಡ ವೆಂಗಣ್ಣನವರು, ವರ್ತಕರು, ಹೊಸಪೇಟೆ.

(ಸದಸ್ಯತ್ವಕ್ಕೆ ದರಖಾಸ್ತು ಕಳುಹಿಸದಿರುವವರು)

ಮ॥ ರಾ॥ ಗಳಾದ

೭೮. ಜಾವಳಿ ಗಣೇಶರಾಯರು, ಜಾವಳಿ (ಕಡೂರು ಡಿಸ್ಟ್ರಿಕ್ಟು).

೭೯. ತಿಮ್ಮೇಗೌಡರು, ಎಕ್ಸೈಸ್ ಕಂಟ್ರಾಕ್ಟರು, ಚಿಕ್ಕಮಗಳೂರು.

೮೦. ಪುರದಪ್ಪನವರು, ಪಟೇಲರು, ಶಿವನೆ (ಕಡೂರು ಡಿಸ್ಟ್ರಿಕ್ಟು).

೮೧. ರಾಮಸ್ವಾಮಯ್ಯನವರು, ಎಕ್ಸೈಸ್ ಕಂಟ್ರಾಕ್ಟರು, ಚಿಕ್ಕಮಗಳೂರು.

೮೨. ಹನುಮಾ ಬೋಯಿಯವರು, ಕಂಟ್ರಾಕ್ಟರು, ಲಕ್ಕವಳ್ಳಿ (ಕಡೂರು ಡಿಸ್ಟ್ರಿಕ್ಟು).

## ಸಾಮಾನ್ಯ ಸದಸ್ಯರು

(ಮೈಸೂರು ಪ್ರಾಂತದ ಸದಸ್ಯರು)

ಮ॥ ರಾ॥ ಗಳಾದ

*೮೩. ಕೆ. ಕೃಷ್ಣಯ್ಯಂಗಾರ್ಯರು, ಬಿ.ಎ., ನ್ಯಾಷನಲ್ ಹೈ ಸ್ಕೂಲ್, ಬೆಂಗಳೂರು.

೮೪. ಎಂ. ಚೆನ್ನಕೃಷ್ಣಯ್ಯನವರು, ಕನ್ನಡ ಪಂಡಿತರು, ಹೈ ಸ್ಕೂಲ್, ಚಿಕ್ಕಮಗಳೂರು.

*೮೫. ತಿರುಮಲೆ ತಾತಾಚಾರ್ಯ ಶರ್ಮರು, ಸಂ॥ "ವಿಶ್ವಕರ್ಣಾಟಕ", ಬೆಂಗಳೂರು.

೮೬. ಕೆ. ದುಗ್ಗಪ್ಪಯ್ಯನವರು, ರಿಟೈರ್ಡ್ ರೆವಿನ್ಯೂ ಇನ್ಸ್‌ಪೆಕ್ಟರ್, ಅಗ್ರಹಾರ, ಸಾಗರ.

೮೭. ಎನ್. ನರಸಿಂಹಮೂರ್ತಿಯವರು, ಎಂ.ಎ., ಬಿ.ಎಲ್., ಯೂನಿವರ್ಸಿಟಿ ಲೈಬ್ರೇರಿಯನ್, ಮೈಸೂರು.

೮೮. ಎ. ಎನ್. ನರಸಿಂಹಯ್ಯನವರು, ಎಂ.ಎ., ಎಲ್.ಟಿ., ಸೆಕ್ರೆಟರಿ, ಟೆಕ್ಸ್ಟ್‌ಬುಕ್ ಕಮಿಟಿ, ಬೆಂಗಳೂರು (ಈಗ ಲಂಡನ್ನಿನಲ್ಲಿರುತ್ತಾರೆ).

೮೯. ಆರ್. ಎಲ್. ನರಸಿಂಹಯ್ಯನವರು, ಎಂ.ಎಸ್‌ಸಿ., ಲೆಕ್ಚರರ್, ಸೆಂಟ್ರಲ್ ಕಾಲೇಜು, ಬೆಂಗಳೂರು.

೯೦. ಪಿ. ಪದ್ಮನಾಭಯ್ಯನವರು, ಕನ್ನಡ ಪಂಡಿತರು, ಹೈ ಸ್ಕೂಲ್, ಮಲ್ಲೇಶ್ವರ, ಬೆಂಗಳೂರು.

೯೧. ಬಿ. ಪುಟ್ಟಯ್ಯನವರು, ಬಿ.ಎ., ಸೂಪರಿಂಟೆಂಡೆಂಟರು, ಗೌ॥ ಪ್ರೆಸ್, ಬೆಂಗಳೂರು.

ಮ॥ ರಾ॥ ಗಳಾದ

೯೨. ಎಸ್. ಜಿ. ಬಿಂದೂರಾಯರು, ಮೈಸೂರು.

೯೩. ರಾವ್ ಬಹಾದ್ದೂರ್ ಡಾ॥ ಸಿ. ಬಿ. ರಾಮರಾಯರು, ಬಿ.ಎ., ಎಂ.ಡಿ., ಬಸವನಗುಡಿ.

೯೪. ಕೆ. ಲಕ್ಷ್ಮೀನರಸಿಂಹಯ್ಯನವರು, ಪೋಸ್ಟು ಮಾಸ್ಟರು, ಅಹಮ್ಮದಾಬಾದು.

೯೫. ಸಿ. ವಾಸುದೇವಯ್ಯನವರು, ವಿದ್ಯಾಭ್ಯಾಸದ ಇಲಾಖೆಯ ರಿ॥ ಅಸಿಸ್ಟೆಂಟರು, ಮಲ್ಲೇಶ್ವರ.

೯೬. ಎಂ. ವೆಂಕಟನಾರಣಪ್ಪನವರು, ಬಿ.ಎ., ಕಬ್ಬಿಣದ ಕಾರ್ಖಾನೆ, ಭದ್ರಾವತಿ.

೯೭. ಸಿ. ವೆಂಕಟರಮಣಶಾಸ್ತ್ರಿಗಳು, "ಕಾದಂಬರೀ ಸಂಗ್ರಹ"ದ ಸಂಪಾದಕರು, ಚಾಮರಾಜನಗರ.

*೯೮. ಮಾಸ್ತಿ ವೆಂಕಟೇಶ ಐಯಂಗಾರ್ಯರು, ಎಂ.ಎ., ಸೆನ್ಸಸ್ ಸೂಪರಿಂಟೆಂಡೆಂಟರು, ಬೆಂಗಳೂರು.

೯೯. ಬಿ. ಐ. ಶಾಮರಾಯರು, ರಿ॥ ಫಾರೆಸ್ಟ್ ಆಫಿಸರ್, ಬಸವನಗುಡಿ.

೧೦೦. ರಾಜಕಾರ್ಯ ಪ್ರಸಕ್ತ ರಾವ್ ಬಹಾದ್ದೂರ್ ಎಂ. ಶಾಮರಾಯರು, ಎಂ.ಎ., ವಿದ್ಯಾಭ್ಯಾಸದ ರಿ॥ ಇ॥ ಜನರಲ್, ಚಾಮರಾಜಪೇಟೆ, ಬೆಂಗಳೂರು.

*೧೦೧. ಎಂ. ಆರ್. ಶ್ರೀನಿವಾಸಮೂರ್ತಿಗಳು, ಬಿ.ಎ., ಹೆ॥ ಮಾ॥ ಡಿ॥ ನಾರ್ಮಲ್ ಸ್ಕೂಲ್ ಬೆಂಗಳೂರು.

*೧೦೨. ನಿಟ್ಟೂರು ಶ್ರೀನಿವಾಸರಾಯರು, ಬಿ.ಎಸ್‌ಸಿ., ಬಿ.ಎಲ್., ಅಡ್ವೋಕೇಟ್, ಬಸವನಗುಡಿ.

೧೦೩. ತಿರುಮಲೆ ಶ್ರೀನಿವಾಸಾಚಾರ್ಯರು, ಹೆ॥ ಕ್ಲಾ॥ ಸ್ಪೆಷಲ್ ಕೋರ್ಟು, ಹಾಸನ.

೧೦೪. ಸಿ. ಶೇಷಾಚಾರ್ಯರು, ಎಂ.ಎ., ಮಿಾಟಿಯೊರೊಲಾಜಿಕಲ್ ರಿಪೋರ್ಟರು, ಬಸವನಗುಡಿ.

*೧೦೫. ವಿ. ಸೀತಾರಾಮಯ್ಯನವರು, ಎಂ.ಎ., ಇಂಟರ್‌ಮಿಾಡಿಯೆಟ್ ಕಾಲೇಜು, ಚಾಮರಾಜಪೇಟೆ, ಬೆಂಗಳೂರು.

*೧೦೬. ಕೆ. ಸಂಪದ್ಗಿರಿರಾಯರು, ಎಂ.ಎ., ನ್ಯಾಷನಲ್ ಹೈಸ್ಕೂಲ್, ಬೆಂಗಳೂರು.

೧೦೭. ಎಚ್. ಹನುಮಂತರಾಯರು, ಹೈಸ್ಕೂಲ್ ರಿ॥ ಕನ್ನಡ ಪಂಡಿತರು, ಕೋಲಾರ.

೧೦೮. ಎಸ್. ಹಿರಿಯಣ್ಣಯ್ಯನವರು, ಎಂ.ಎ., ಬಿ.ಎಲ್., ರೆ॥ ಕಮಿಷನರ್, ಬೆಂಗಳೂರು.

*೧೦೯. ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್‌ಎಲ್.ಬಿ., ಗೌ॥ ಕನ್ನಡ ಟ್ರಾನ್ಸ್‌ಲೇಟರ್, ವಿಶ್ವೇಶ್ವರಪುರ, ಬೆಂಗಳೂರು.

(ಮುಂಬಯಿ ಪ್ರಾಂತದ ಸದಸ್ಯರು)

ಮ॥ ರಾ॥ ಗಳಾದ

೧೧೦. ಪಂಡಿತ ಕೇಶವಶರ್ಮ ಗಲಗಲಿ, ಗಲಗಲಿ (ಬಿಜಾಪುರ ಡಿ॥).

*೧೧೧. ದತ್ತಾತ್ರೇಯ ರಾಮಚಂದ್ರ ಬೇಂದ್ರೆ, ಬಿ.ಎ., ಧಾರವಾಡ.

*೧೧೨. ಜಿ. ಮಹಾಲಿಂಗಪ್ಪ ನಿರ್ಜಿ, ಬಿ.ಎ., ಎಲ್‌ಎಲ್.ಬಿ., ಹೈ॥ ವಕೀಲ್, ಹುಬ್ಬಳ್ಳಿ.

*೧೧೩. ಆರ್. ಎಸ್. ಮೂಡಕಟ್ಟಿ, ಬಿ.ಎ., ಮಾಮಲತ್‌ದಾರರು, ಕಾರವಾರ.

೧೧೪. ಎಂ. ಡಿ. ರಂಗಣ್ಣನವರು, ನರೇಂದ್ರ (ಧಾರವಾಡ ಡಿ॥).

೧೧೫. ಎ. ಕೆ. ಹುಯಿಲ್‌ಗೋಳ್, ಬಿ.ಎ., ಎಲ್‌ಎಲ್.ಬಿ., ಪ್ಲೀಡರ್, ಗದಗ.

೧೧೬. ಮೊಹರೆ ಹನುಮಂತರಾಯರು, 'ಕರ್ಣಾಟಕ ವೈಭವ'ದ ಸಂಪಾದಕರು, ಬಿಜಾಪುರ.

(ಮದರಾಸು ಪ್ರಾಂತದ ಸದಸ್ಯರು)

ಮ|| ರಾ|| ಗಳಾದ

೧೧೭. ಮುಳಿಯ ತಿಮ್ಮಪ್ಪಯ್ಯನವರು, ಕನ್ನಡ ಪಂಡಿತರು, ಮಂಗಳೂರು.

೧೧೮. ರಾವ್ ಬಹಾದ್ದೂರ್ ಎಚ್. ನಾರಾಯಣರಾಯರು, ಎಂ.ಎ., ರಿ|| ಪ್ರೊಫೆಸರ್, 'ಶಂಕರಬಾಗ್', ಕೀಲ್ಪಾಕ್, ಮದರಾಸು.

೧೧೯. ಕಡೆಂಗೋಡ್ಲು ಶಂಕರಭಟ್ಟರು, ಕನ್ನಡ ಪಂಡಿತರು, ಮಂಗಳೂರು.

(ಕೊಡಗಿನ ಸದಸ್ಯರು)

ಮ|| ರಾ|| ಗಳಾದ

೧೨೦. ಸಿ. ಎಸ್. ವೆಂಕಪ್ಪಯ್ಯನವರು, ಬಿ.ಎ., ಬಿ.ಎಲ್., ಅಡ್ವೊಕೇಟ್, ಮಡಿಕೇರಿ.

*೧೨೧. ಎಸ್. ಆರ್. ಸುಬ್ಬಣ್ಣಯ್ಯನವರು, ಕಾಫೀ ಪ್ಲಾಂಟರ್, ನಿಡತ (ಕೊಡಗು).

೧೨೨. ಎಂ. ಎಸ್. ಸುಬ್ಬರಾಯರು, ಹೆ|| ಮಾ|| ಪೊನ್ನಂಪೇಟೆ (ಕೊಡಗು).

(ಹೈದರಾಬಾದು ಪ್ರಾಂತದ ಸದಸ್ಯರು)

ಮ|| ರಾ|| ಗಳಾದ

೧೨೩. ರೆ|| ಕೆ. ನಾನಪ್ಪ ದೇಸಾಯಿ, ಸುರಪುರ (ಹೈದರಾಬಾದು).

೧೨೪. ಎಂ. ಸಿ. ರಂಗಯ್ಯಂಗಾರ್ಯರು, ಅಸಿಸ್ಟೆಂಟು ಸೂ|| ಪಿ.ಡಬ್ಬ್ಯು. ಡಿ., ಹೈದರಾಬಾದು.

# ಪರಿಶಿಷ್ಟ ೨

---

## ಪ್ರಜೋತ್ಪತ್ತಿ ಸಂವತ್ಸರದಲ್ಲಿ ಕರ್ಣಾಟಕ ಸಾಹಿತ್ಯ ಪರಿಷತ್ತಿನ

# ಪುಸ್ತಕ ಭಾಂಡಾಗಾರಕ್ಕೆ ಸೇರಿಸಿದ ಪುಸ್ತಕಗಳ ಪಟ್ಟಿ

| ನಂಬರು | ಪುಸ್ತಕದ ಹೆಸರು | ಲೇಖಕರು, ಸಂಪಾದಕರು, ಇತ್ಯಾದಿ | ಗ್ರಂಥವಿಷಯ ಮೊದಲಾದುವು |
|---|---|---|---|
| | **I. ಬೆಲೆಗೆ ಕೊಂಡ ಪುಸ್ತಕಗಳು** | | |
| ೧ | ದುರ್ಗೇಶನಂದಿನಿ .. | ಬಿ. ವೆಂಕಟಾಚಾರ್ಯರು, ಮೈಸೂರು | ಬಂಗಾಲಿ ಕಾದಂಬರಿಯ ಕನ್ನಡದ ಪರಿವರ್ತನೆ ; ಡೆಮ್ಮೈ 8°, ಪುಟ ೧೮೪ ; ೧೯೩೦. |
| ೨ | ಹಳ್ಳಿಯ ಚಿತ್ರಗಳು .. | ಗೊರೂರು ರಾಮಸ್ವಾಮಯ್ಯಂಗಾರ್ಯರು, ಬೆಂಗಳೂರು | ಸಾಮಾಜಿಕ ಕಥೆಗಳು (೧೦); ಕ್ರೌನ್ 8°, ೧೯೧ ; ೧೯೩೧. |
| ೩ | ಕೋಟಿ—ಚೆನ್ನಯ .. | ಪಂಜೆ ಮಂಗೇಶರಾಯರು, ಬಿ.ಎ., ಎಲ್.ಟಿ., ಮಂಗಳೂರು | "ಭೂತದ ಸಂಧಿ"ಯ ಕಥೆ; ಕ್ರೌನ್ 8°, (೮) + ೬೪ ; ೧೯೩೦. |
| ೪ | ಬಾಲಿಕಾ ಗೀತ ಮುಕ್ತಾಕಲಾಪ. | ಪರಿಷ್ಕಾರಕರ್ತರು.—ಎಚ್. ಪಿ. ಕೃಷ್ಣರಾಯರು, ಬಿ.ಎ., ಬೆಂಗಳೂರು | ಹಾಡುಗಳು (ಸ್ವರ ಸಹಿತ) ; ಡೆಮ್ಮೈ 8°, (೨೩) + ೯೮ ; ೧೯೨೩. |
| ೫ | पाण्डव-पुराण<br>ಪಾಂಡವ ಪುರಾಣ, ಅಥವಾ ಜೈನ ಮಹಾಭಾರತ | ಅನುವಾದಕರು.—ಘನಶ್ಯಾಮದಾಸಜೀ, ನ್ಯಾಯತೀರ್ಥ<br>ಪ್ರಕಾಶಕರು.—ಜೈನ ಸಾಹಿತ್ಯ ಪ್ರಸಾರಕ ಕಾರ್ಯಾಲಯ, ಮುಂಬೈ | ಹಿಂದೀ ಗದ್ಯ ; ರಾಯಲ್ 8°, ೩೯೨. |
| ೬ | Beginnings of Vijayanagara History | Rev. H. Heras, S.J., M.A. Bombay | Subject of two lectures delivered at the Mysore University in 1928 ; Demy pp. 144 ; 1929. |
| ೭ | The Kadamba Kula .. | George M. Moraes, M.A. .. | "A history of ancient and mediæval Karnataka ; with 56 Pictures ; Royal 8°, (23) +504; 1931. |
| ೮ | Sandford and Merton .. | Thomas Day ; Corrected and revised by Cecil Hartley, M.A. | Illustrated Story ; Cr. 8°, (7)+448. |
| ೯ | The Indian Antiquary, Vol. 9 | Editor.—Jas. Burgess, M.R.A.S., F.R.G.S. | A Journal of Oriental Research; Demy 4°, (6)+336 ; 1880. |
| ೧೦ | Do. Vol. 44 | Editors.—Sir Richard C. Temple, etc., etc. | Demy 4°, (5)+251+(94) ; 1925. |

| ನಂಬರು | ಪುಸ್ತಕದ ಹೆಸರು | ಲೇಖಕರು, ಸಂಪಾದಕರು, ಇತ್ಯಾದಿ | ಗ್ರಂಥ ವಿಷಯ ಮೊದಲಾದುವು |
|---|---|---|---|

## II. ವಿಮರ್ಶೆಗಾಗಿ ಬಂದ ಪುಸ್ತಕಗಳು

### ೧. ಕಥೆಗಳು

| ನಂಬರು | ಪುಸ್ತಕದ ಹೆಸರು | ಲೇಖಕರು, ಸಂಪಾದಕರು, ಇತ್ಯಾದಿ | ಗ್ರಂಥ ವಿಷಯ ಮೊದಲಾದುವು |
|---|---|---|---|
| ೧೧ | ವಿಷವೃಕ್ಷ .. | ಬಿ. ವೆಂಕಟಾಚಾರ್ಯರು, ಮೈಸೂರು | ಬಂಗಾಲಿ ಕಾದಂಬರಿಯ ಕನ್ನಡದ ಪರಿವರ್ತನೆ; ಡೆಮ್ಮೈ 8°, (೪)+೧೯೩; ೧೯೩೧. |
| ೧೨ | ಆರ್ಯಕೀರ್ತಿ (ಪ್ರಥಮ ಖಂಡ) | ಚ. ವಾಸುದೇವಯ್ಯನವರು, ಬೆಂಗಳೂರು | ರಾಜಸ್ಥಾನದ ಚರಿತ್ರ ಸಂಬಂಧವಾದ ಕಥೆಗಳು; ಕ್ರೌನ್ 8°, (೮)+೧೫೪; ೧೯೩೧. |
| ೧೩ | ಮಂಗನ ಮೆರೆವಣಿಗೆ .. | ಸಂಪಾದಕರು.—ಶ್ರೀ ಕೃಷ್ಣ ಕುಮಾರ ಕಲ್ಲೂರ, ಬಿ.ಎ. ಶ್ರೀ ಕೃಷ್ಣ ಶರ್ಮ ಬೆಟಗೇರಿ, ಧಾರವಾಡ | ಐದು ಸಣ್ಣ "ಕತೆ"ಗಳು; ಕ್ರೌನ್ 8°, ೧೧೨; ೧೯೩೦. |
| ೧೪ | ತಿರಕರ ಪಿಡುಗು .. | ಡಿಟ್ಟೊ. | ಮೂರು "ಸಾಮಾಜಿಕ ಹುಚ್ಚಾಟಗಳ ನಾಟಕಗಳು"; ಹಾಸ್ಯ; ಕ್ರೌನ್ 8°, ೮೬; ೧೯೩೦. |
| ೧೫ | ಕೆಲವು ಕಥೆಗಳು .. | 'ಆನಂದ', ಬೆಂಗಳೂರು .. | ಐದು ಕಥೆಗಳು; ಕ್ರೌನ್ 8°, ೧೩೧; ೧೯೩೦. |
| ೧೬ | ಭಾರ್ಗವೀ .. | ದೇವುಡು ನರಸಿಂಹ ಶಾಸ್ತ್ರಿಗಳು, ಎಂ.ಎ., ಬೆಂಗಳೂರು | 'ತುಂಟರ ತಂಡ'ದ ಒಂದಾಣೆಯ ಮಾಲೆ; ಕ್ರೌನ್ 8°, ೬೩; ೧೯೩೦. |
| ೧೭ | ಪುನರುಜ್ಜೀವನ .. | ಅ. ನ. ಕೃಷ್ಣರಾಯರು, ಬೆಂಗಳೂರು | 'ತುಂಟರ ತಂಡ'ದ ಒಂದಾಣೆಯ ಮಾಲೆ; ಕ್ರೌನ್ 8°, ೧೬; ೧೯೩೦. |
| ೧೮ | ಎಚ್ಚಮ (ಕನ್ನಡ ವೀರಾಗ್ರಣಿ) | ಗೋ. ಮ. ದೇಶಪಾಂಡೆ, ಬೆಳಗಾಂವಿ | 'ತುಂಟರ ತಂಡ'ದ ಒಂದಾಣೆಯ ಮಾಲೆ; ಕ್ರೌನ್ 8°, ೧೯; ೧೯೩೦. |
| ೧೯ | ಸ್ವಾರ್ಥ ತ್ಯಾಗ .. | ಸಿಂಪಿ ಲಿಂಗಣ್ಣ, ಬೆಳಗಾಂವಿ .. | ಒಂದಾಣೆ ಮಾಲೆ; ಕ್ರೌನ್ 8°, ೧೭. |
| ೨೦ | ಎಂ.ಎ. .. | ಬಂಡೆಪ್ಪ ಕೌಜಲಗಿ, ಧಾರವಾಡ .. | ಒಂದಾಣೆಯ ಮಾಲೆ; ಕ್ರೌನ್ 8°, ೨೪; ೧೯೩೦. |
| ೨೧ | ಶಿಷ್ಯನ ಪರೀಕ್ಷೆ .. | ಅನುವಾದಕರು.—ಇನಾಮತಿ ಕೃಷ್ಣರಾಯರು, ಅಣ್ಣಿಗೇರಿ | ಕದಂಬ ರಾಜ್ಯದ ಯುವರಾಜ ಜೈತ್ರಸಿಂಹನ ಕಥೆ; ಕ್ರೌನ್ 8°, ೧೩. |
| ೨೨ | ಕಿಟ್ಟು ಬಿಟ್ಟ ಎತ್ತಿದ .. | ಪ್ರ. ಗೋ. ಕುಲಕರಣಿ, ಬೆಳಗಾಂವಿ | ಶ್ರೀ ಕೃಷ್ಣನ ಬಾಲ ಲೀಲೆಯ ಕಥೆ (ಬಾಲಕರಿಗೆ); ೫ ಚಿತ್ರಗಳು; ಕ್ರೌನ್ 8°, ೧೬; ೧೯೩೧. |

| ನಂಬರು | ಪುಸ್ತಕದ ಹೆಸರು | ಲೇಖಕರು, ಸಂಪಾದಕರು, ಇತ್ಯಾದಿ | ಗ್ರಂಥವಿಷಯ ಮೊದಲಾದುವು |
|---|---|---|---|
| | **೨. ದೃಶ್ಯ ಪ್ರಬಂಧಗಳು** | | |
| ೨೩ | ಕೃಷ್ಣಾ ಕುಮಾರಿ .. | ಬೆನಗಲ್ಲ ರಾಮರಾಯರು, ಎಂ.ಎ., ಎಲ್‌ಎಲ್.ಬಿ., ಮದರಾಸು | ರಾಜಸ್ಥಾನದ ಇತಿಹಾಸದಲ್ಲಿಯ ಕಥಾನಕ; ಗದ್ಯ; ವಂಗ ನಾಟಕದ ಪರಿವರ್ತನೆ; ಕ್ರೌ 8°, ೧೧೮; ೧೯೩೧. |
| ೨೪ | ಮನೋರಮಾ .. | ನಾಗವಾರ ನಾರಾಯಣರಾಯರು, ಬಿ.ಎ., ಬೆಂಗಳೂರು | ಕಲ್ಪಿತ ಕಥಾ ನಾಟಕ; ಪದ್ಯ, ರಾಗಗಳಿಂದ ಕೂಡಿದೆ; ಕ್ರೌ 8°, (೧೦)+೮೪; ೧೯೩೧. |
| ೨೫ | ಆಷಾಢಭೂತಿ .. | ಎ. ಎನ್. ಮೂರ್ತಿರಾಯರು, ಎಂ.ಎ., ಮೈಸೂರು | ಸಾಮಾಜಿಕ; ಗದ್ಯ; ಫ್ರೆಂಚು ನಾಟಕದ ಆಧಾರ; ಕ್ರೌ 8°, (೧೨)+೮೦; ೧೯೩೧. |
| ೨೬ | ತಪಸ್ವಿನೀ .. | 'ಭಾರತೀ', ಬೆಂಗಳೂರು .. | ಊರ್ಮಿಳಾದೇವಿಯ ವಿಷಯವಾದ ಸಣ್ಣ ರೂಪಕ; "ಸರಳರಗಳೆ"; ಕ್ರೌ 8°, (೧೧)+೧೮; ೧೯೩೦. |
| ೨೭ | ಸೊಂಪಿನ ಸಾಗರ .. | ಚಿ. ಸದಾಶಿವಯ್ಯನವರು, ಬೆಂಗಳೂರು | ಸಣ್ಣ ರೂಪಕ; ಹೊಸ ಮಾದರಿಯ ಪದ್ಯಗಳಿವೆ; ಫೂಲ್॥ 4°, ೧೦; ೧೯೩೦. |
| | **೩. ಪದ್ಯಕಾವ್ಯಗಳು, ಆಧುನಿಕ ಕವಿತೆಗಳು** | | |
| ೨೮ | ಕನ್ನಡ ಮೇಘ ಸಂದೇಶ .. | ಪಂಡಿತ ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿಗಳು, ಶಿವಮೊಗ್ಗ | ಕಾಳಿದಾಸನ ಕಾವ್ಯದ ಪರಿವರ್ತನ; ಕುಸುಮ ಷಟ್ಪದಿ ೧೫೬; ಕ್ರೌ 8°, ೪೮; ೧೯೩೧. |
| ೨೯ | ಶಿಶು ಚಂದ್ರಿಕೆ .. | ಬಿ. ಶ್ರೀಕಂಠಯ್ಯನವರು, ಹಾಸನ .. | ಬಾಲಪಾಲನ ಲಾಲನಾದಿ ವಿಷಯ ವರ್ಣನೆ; ಕಂದ ೧೩೯; ಕೆಲವು ಇಂಗ್ಲಿಷು ಪದ್ಯಗಳೂ ಇವೆ; ಕ್ರೌ 8°, ೫೯; ೧೯೨೯. |
| ೩೦ | ಗೀತಗಳು .. | ವಿ. ಸೀತಾರಾಮಯ್ಯನವರು, ಎಂ.ಎ., ಬೆಂಗಳೂರು | ಆಧುನಿಕ ಕವನಗಳು ೬೮; ೬ ಸುಂದರವಾದ ಚಿತ್ರಗಳು; ಕ್ರೌ 8°, (೧೪)+೧೨೨; ೧೯೩೧. |
| ೩೧ | ತಾವರೆ .. | 'ಶ್ರೀನಿವಾಸರು', ಬೆಂಗಳೂತು .. | ಆಧುನಿಕ ಕವಿತೆಗಳು ೧೪; ಕ್ರೌ 8°, (೬)+೬೨; ೧೯೩೦. |
| ೩೨ | ಗಿಳಿವಿಂಡು .. | ಗೋವಿಂದ ಪೈಗಳು, ಮಂಗಳೂರು .. | ಆಧುನಿಕ ಕವಿತೆಗಳು ೪೫; ಕ್ರೌ 8°, ೧೧೦; ೧೯೩೦. |

| ನಂಬರು | ಪುಸ್ತಕದ ಹೆಸರು | ಲೇಖಕರು, ಸಂಪಾದಕರು, ಇತ್ಯಾದಿ | ಗ್ರಂಥ ವಿಷಯ ಮೊದಲಾದುವು |
|---|---|---|---|
| ೩೩ | ಸೇವಾದಲ ಗೀತಾವಳಿ .. | ಪ್ರಕಾಶಕರು.—ಶ್ರೀ. ಶೂಲ ಪಾಣಿ, ಹುಬ್ಬಳ್ಳಿ | ಹಿಂದೀ ಗೀತಗಳು (ಕನ್ನಡ ಲಿಪಿ)೧೫; ಕನ್ನಡ ಗೀತಗಳು ೨೧; ಡೆಮ್ಮೈ 16°, ೪೪; ೧೯೩೦. |

## ೪. ಹರಿ ಕೀರ್ತನೆಗಳು (ಪ್ರಾಣೇಶ ವಿಟ್ಠಲ ವಿರಚಿತ)

ಭಕ್ತಿ, ಜ್ಞಾನ, ವೈರಾಗ್ಯ—ಇವು ಬೋಧೆಯಾಗುವಂತೆ ರಚಿಸಿದ ಕೀರ್ತನೆಗಳು, ಯಕ್ಷಗಾನಗಳು, ಪದಗಳು, ಹಾಡುಗಳು, ಷಟ್ಪದಿ, ಆರ್ಯೆ, ಸೀಸಪದ್ಯ, ಉಗಾಭೋಗ, ಸಂಸ್ಕೃತ ಶ್ಲೋಕಗಳೂ ಇವುಗಳಲ್ಲಿವೆ.

| ನಂಬರು | ಪುಸ್ತಕದ ಹೆಸರು | ಲೇಖಕರು, ಸಂಪಾದಕರು, ಇತ್ಯಾದಿ | ಗ್ರಂಥ ವಿಷಯ ಮೊದಲಾದುವು |
|---|---|---|---|
| ೩೪ | ಗಾಲವ ಚರಿತ್ರೆ ಮೊದಲಾದುವು (೫) | ಪ್ರಕಾಶಕರು.—ಜಿ. ಹನುಮಂತ ರಾಯರು, ಲಿಂಗಸ್ಯೂಗೂರು | ಡೆಮ್ಮೈ 8°, (೩)+೪೦; ೧೯೨೬. |
| ೩೫ | ಮುಯ್ಯದ ಪದ .. | ,, | ಹಾಡುಗಳು; ಫೂ॥ 8°, (೧೦)+೫೬; ೧೯೨೬. |
| ೩೬ | ವಾಯು ಸ್ತುತಿ .. | ,, | ಭಾಮಿನೀ ಷಟ್ಪದಿಗಳು ೮೭; ಫೂ॥ 8°, ೪೧; ೧೯೨೬. |
| ೩೭ | ಸೀತಾ ಸ್ವಯಂವರ .. | ,, | ಫೂ॥ 8°, (೫)+೨೦; ೧೯೨೬. |
| ೩೮ | ಶ್ರೀ ಪ್ರಾಣೇಶ ವಿಠಲರ ಕೀರ್ತನೆಗಳು | ,, | ಕೀರ್ತನೆಗಳು ೨೮೪; ಕ್ರೌ॥ 8°, ೨೩+೨೦೪; ೧೯೨೬. |
| ೩೯ | ಕಾಳೀ ಸ್ವಯಂವರ .. | ,, | ಫೂ॥ 8°, ೧೩+೧೫; ೧೯೨೬. |
| ೪೦ | ಹನುಮದ್ವಿಲಾಸ .. | ,, | ಗರುಡ ಗರ್ವ ಹರಣ; ಫೂ॥ 8°, (೭)+೧೯; ೧೯೨೬. |
| ೪೧ | ಭೀಮಸೇನ ವಿಲಾಸ .. | ,, | ಕೀಚಕ ವಧಾ; ಫೂ॥ 8°, ೧೯+೧೭; ೧೯೨೬. |
| ೪೨ | ವೀರಭದ್ರ ವಿಲಾಸ .. | ,, | ದಕ್ಷಾಧ್ವರ ಧ್ವಂಸ ಕಥಾ; ಫೂ॥ 8°, ೩೨+೧೬; ೧೯೨೬. |
| ೪೩ | ಪಾರ್ಥ ವಿಲಾಸ .. | ,, | ಸುಭದ್ರಾ ಹರಣ ಕಥಾ; ಫೂ॥ 8°, ೧೪+೨೬; ೧೯೨೭. |
| ೪೪ | ಅನಿರುದ್ಧ ವಿಲಾಸ .. | ,, | ಉಷಾ ಹರಣ ಕಥಾ; ಫೂ॥ 8°, ೨೦+೧೨; ೧೯೨೭. |
| ೪೫ | ವಶಿಷ್ಠ ವಿಶ್ವಾಮಿತ್ರಾಖ್ಯಾನ .. | ,, | ವಾರ್ಧಿಕ ಷಟ್ಪದಿ ೭೨; ಫೂ॥ 8°, ೧೩+೨೫; ೧೯೨೭. |
| ೪೬ | ಕುಣಿಕೆ .. | ,, | ಪ್ರಾಕೃತ ಶ್ರೀ ರಾಘವೇಂದ್ರ ಸ್ತೋತ್ರ; ವಾರ್ಧಿಕ, ಭಾಮಿನೀ ಷಟ್ಪದಿಗಳು ೩೧ (ದೇವನಾಗರಿ ಲಿಪಿ); ಫೂ॥ 8°, ೬+೧೩; ೧೯೨೮. |

| ನಂಬರು | ಪುಸ್ತಕದ ಹೆಸರು | ಲೇಖಕರು, ಸಂಪಾದಕರು, ಇತ್ಯಾದಿ | ಗ್ರಂಥ ವಿಷಯ ಮೊದಲಾದುವು |
|---|---|---|---|
| ೪೭ | ಶ್ರೀ ಕೃಷ್ಣಜಯಂತಿ ಕಥಾ .. | ಪ್ರಕಾಶಕರು.—ಜಿ. ಹನುಮಂತ ರಾಯರು, ಲಿಂಗಸ್ಸೂಗೂರು | ವಾರ್ಧಿಕ ಷಟ್ಪದಿ ೧೦೦ ; ಪೂ॥ 8°, ೨೨+೪೨; ೧೯೨೮. |
| ೪೮ | ಮನ್ಮಥ ವಿಲಾಸ .. | ,, | ಭೋಗ ಷಟ್ಪದಿ ೧೯೭; ಪೂ॥ 8°, ೨೩+೩೮ ; ೧೯೨೮. |

## ೫. ಇತರ ಕನ್ನಡ ಗ್ರಂಥಗಳು

| ನಂಬರು | ಪುಸ್ತಕದ ಹೆಸರು | ಲೇಖಕರು, ಸಂಪಾದಕರು, ಇತ್ಯಾದಿ | ಗ್ರಂಥ ವಿಷಯ ಮೊದಲಾದುವು |
|---|---|---|---|
| ೪೯ | ಮಹಾಭಾರತಾಮೃತ (ಸಚಿತ್ರ) | ವೆಂಕಟೇಶ ತಿರಕೋ ಕುಲಕರಣಿ ಗಳಗನಾಥರು, ಹಾವೇರಿ | ಆದಿಪರ್ವ (ರಹಸ್ಯಗಳೊಡನೆ); ಗದ್ಯ; ೨೪ ಚಿತ್ರಪಟಗಳು; ಕ್ರೌ 8°, (೪೯)+೫೩೨; ೧೯೩೧. |
| ೫೦ | ಹರಿಪಾಠ ಅಭಂಗಗಳ ಕನ್ನಡ ವ್ಯಾಖ್ಯಾನವು | ಶ್ರೀನಿವಾಸ ಕೃಷ್ಣ ಕುಲಕರ್ಣಿ, ಸುನಗ, ಬಾಗಲಕೋಟೆ | ಭಕ್ತಿ, ವೈರಾಗ್ಯ ವಿಷಯಗಳು; ಶ್ರೀ ಜ್ಞಾನೇಶ್ವರರ ಮರಾಠಿ ಗ್ರಂಥದ ಕನ್ನಡ ವ್ಯಾಖ್ಯಾನ; ಮರಾಠಿ ಮೂಲ ಸಹಿತ; ಪುಟ (೧೦)+೧೭೩ ; ೧೯೨೬. |
| ೫೧ | ಪಂಢರಿ ಮಹಾತ್ಮೆ .. | ,, | ಮರಾಠಿ ಮೂಲ, ಕನ್ನಡದ ಅರ್ಥ, ಟಿಪ್ಪಣಿ; ಪುಟ (೧೦)+ ೧೨೩ ; ೧೯೩೦. |
| ೫೨ | ದಿಗಂಬರ ಮುದ್ರೆಯ ಸರ್ವಮಾನ್ಯತೆ | ಕೆ. ಭುಜಬಲಿ ಶಾಸ್ತ್ರಿಗಳು, ಆರಾ | ಜೈನ ದಿಗಂಬರತ್ವದ ಸರ್ವ ಮಾನ್ಯತೆಯ ವಿಷಯವಾಗಿ ಕೆಲವು ಪುರಾಣಗಳು, ಉಪನಿಷತ್ತುಗಳು ಮೊದಲಾದುವುಗಳಿಂದ ಆಧಾರ; (ದೇವನಾಗರ ಲಿಪಿ); ಪೂ॥ 8°, (೩)+೩೩. |
| ೫೩ | ಅಹಿಂಸಾ ತತ್ತ್ವ, ಅಥವಾ ಶಾಸ್ತ್ರೀಯ ಯಜ್ಞ | ತಿರುಮಲ ಕೃಷ್ಣಮಾಚಾರ್ಯರು, ಹಾಸನ | ಪ್ರಾಣಿ ದಯಾ ಪ್ರಚಾರಕ ಸಂಘದ ಪತ್ರಿಕೆಯ ಖಂಡನ ಪ್ರಬಂಧ; ಡೆಮ್ಮೈ 8°, (೨)+೭; ೧೯೩೦. |
| ೫೪ | ಪ್ರತ್ಯಕ್ಷ ಚಮತ್ಕಾರ ಚಂದ್ರಿಕೆ | ಟಿ. ಎಚ್. ಎಂ. ಸಿದ್ಧಾಂತಿ ವಿರೂಪಾಕ್ಷ ಶಾಸ್ತ್ರಿಗಳು, ಹರಪನಹಳ್ಳಿ | ಧರ್ಮಶಾಸ್ತ್ರ, ಜ್ಯೋತಿಶ್ಶಾಸ್ತ್ರ, ವೈದ್ಯಶಾಸ್ತ್ರ, ಪಾಕ ಶಾಸ್ತ್ರ, ಕೈಗಾರಿಕೆ ಮೊದಲಾದ ಪ್ರಾಚೀನ ಮತ್ತು ಆಧುನಿಕ ಶಾಸ್ತ್ರ ವಿದ್ಯೆಗಳು ೧೮ನ್ನು ಬೋಧಿಸುವ ಗ್ರಂಥ; ಡೆಮ್ಮೈ 8°, (೧೮)+೫೮೨ ; ೧೯೩೧. |

| ನಂಬರು | ಪುಸ್ತಕದ ಹೆಸರು | ಲೇಖಕರು, ಸಂಪಾದಕರು, ಇತ್ಯಾದಿ | ಗ್ರಂಥವಿಷಯ ಮೊದಲಾದುವು |
|---|---|---|---|
| ೫೫ | ಆರ್ಯ ಮಹಿಳಾ ಕೀರ್ತಿ .. | ಜಿ. ಆರ್ ಜೋಸ್ಯರ್, ಎಂ.ಎ., ಎಫ್.ಆರ್.ಇ.ಎಸ್., ಮೈಸೂರು | ಭರತಖಂಡದ ೧೪ ಮಂದಿ ವೀರ ರಮಣಿಯರ ಪ್ರತಾಪ ವರ್ಣನೆ; ಕ್ರೌನ್ 8°, (೬)+೧೦೪; ೧೯೩೦. |
| ೫೬ | ಆಂಡ್ರೂ ಕಾರ್ನೆಗಿ .. | ,, | ಜಗತ್ಪ್ರಸಿದ್ಧನಾದ ಅಮೆರಿಕದ ಕೋಟೀಶ್ವರನ ಕಥೆ; ಕ್ರೌನ್ 8°, ೬೦. |
| ೫೭ | ವ್ಯಾಪಾರ ಅಂದರೇನು? .. | ,, | ವ್ಯಾಪಾರ ಸಂಬಂಧವಾದ ಕೆಲವು ಇಂಗ್ಲಿಷು ಉಪನ್ಯಾಸಗಳ ಆಧಾರದ ಮೇಲೆ ಬರೆದುದು; ಕ್ರೌನ್ 8°, ೪೬; ೧೯೨೭. |
| ೫೮ | ಆಕಾಶದೊಳಗಿನ ಅದ್ಭುತ ಚಮತ್ಕಾರಗಳು | ಪ್ರೊ॥ ಪಾಟೀಲ ತಿರುಮಲ ರಾಯರು, ಎಂ.ಎ., ಧಾರವಾಡ | ಆಧುನಿಕ ಜ್ಯೋತಿಷ ಗ್ರಂಥ; ಚಿತ್ರಪಟಗಳು ೩; ಕ್ರೌನ್ 8°, (೭)+೧೦೨; ೧೯೩೧. |
| ೫೯ | ಮನಸ್ಸಿನ ಆರೋಗ್ಯ .. | ಡಾ॥ ಫ್ರಾಂಕ್ ನೊರೋನ್ಹಾ, ಎಂ.ಬಿ.ಸಿ.ಎಂ., ಡಿ.ಪಿ.ಎಂ., ಬೆಂಗಳೂರು | ಡೆಮ್ಮೈ 16°, ೩೫; ೧೯೩೧. |
| ೬೦ | ಸಹಕಾರ ಮತ್ತು ವಿದ್ಯಾಭ್ಯಾಸ | ಎಂ. ವೆಂಕೋಬಾಚಾರ್ಯರು, ಬಿ.ಎ., ಬೆಂಗಳೂರು | ಫೂ॥ 8°, ೫೯; ೧೯೩೦. |
| ೬೧ | ಶಾಲಾ ನೀತ್ಯನುಶಾಸನ .. | ಬೆಳ್ಳಾವೆ ನರಹರಿಶಾಸ್ತ್ರಿಗಳು, ಬೆಂಗಳೂರು | ಫೂ॥ 8°, ೮೬; ೧೯೩೦. |

## III. ದಾನವಾಗಿ ಬಂದ ಪುಸ್ತಕಗಳು

### ೧. ವಾಲ್ಮೀಕಿ ರಾಮಾಯಣ

| | | | |
|---|---|---|---|
| ೬೨ | The Ramayana of Valmiki | Ralph T. H. Griffith, M.A., C.I.E., Benares | English verse: Cr. 4°, 24+607+67, 1915. |
| ೬೩–೬೪ | Do. Vol. I (2 Parts) (Balakanda) | C. R. Srinivasa Ayyangar, B.A., Trichinopoly | English prose; Royal 8°, 31 (Preface) +116 (Introduction) +219 (Text) +696 (Notes) 1910. |
| ೬೫ | The Ramayana of Valmiki, Vol. II (Ayodhyakanda) | Do. | English prose: Royal 8°, 8+477 (Text)+233 (Notes); 1914. |
| ೬೬ | The Ramayana of Valmiki, Vol. III (Aranyakanda) | Do. | English prose; Royal 8°, 190 (Text, incomplete); 1914. |

| ನಂಬರು | ಪುಸ್ತಕದ ಹೆಸರು | ಲೇಖಕರು, ಸಂಪಾದಕರು, ಇತ್ಯಾದಿ | ಗ್ರಂಥವಿಷಯ ವೊದಲಾದುವು |
|---|---|---|---|

## ೨. ಭಗವದ್ಗೀತೆ

| ನಂಬರು | ಪುಸ್ತಕದ ಹೆಸರು | ಲೇಖಕರು, ಸಂಪಾದಕರು, ಇತ್ಯಾದಿ | ಗ್ರಂಥವಿಷಯ ವೊದಲಾದುವು |
|---|---|---|---|
| ೬೭–೬೮ | ಶ್ರೀಮದ್ಭಗವದ್ಗೀತಾ ಗೂಢಾರ್ಥ ದೀಪಿಕಾ, ೨ ಸಂಪುಟ (ಪೂರ್ವ ಭಾಗ, ಉತ್ತರಭಾಗ) | ಶಿವಾನಂದ ಸುಬ್ರಹ್ಮಣ್ಯ, ಮೈಸೂರು | "ಸಟಿಪ್ಪಣ, ಸಾನ್ವಯ, ಪದಚ್ಛೇದಾದಿ ಕನ್ನಡ ಟೀಕಾ ಸಮಲಂಕೃತ;" ಕ್ರೌನ್ 4°, (೧) ೧೪+೫೫೬; ೧೯೧೩; (೨) ೨೦+೬೫೨; ೧೯೧೬. |
| ೬೯ | ಗೀತಾರ್ಥ ವಿವರಣೆ .. | ಹೊಸಕೆರೆ ಚಿದಂಬರಯ್ಯನವರು, ಬೆಂಗಳೂರು | ಅವಯವಾರ್ಥ, ವಿಶೇಷಾರ್ಥಗಳಿಂದ ಕೂಡಿದೆ; ಡೆಮ್ಮೈ 8°, ೪೮+೪೩೯; ೧೯೧೭. |
| ೭೦ | ಭಗವದ್ಗೀತಾ ಸಾರ ವಿಚಾರ.. | ,, .. | ಕುರ್ತಕೋಟಿ ಶ್ರೀ ಮಹಾಭಾಗವತರಿಂದ ಕೊಡಲ್ಪಟ್ಟ ಐದು ಉಪನ್ಯಾಸಗಳು; ಕ್ರೌನ್ 8°, ೪೫+೩೫೪; ೧೯೧೭. |
| ೭೧–೭೩ | ಗೀತಾರ್ಥ ಸಾರ (ಪ್ರಥಮ, ದ್ವಿತೀಯ, ತೃತೀಯ ಷಟ್ಕಗಳು) | ತೂಪ್ಪುಲ್ ವೆಂಕಟಾಚಾರ್ಯರು, ಬೆಂಗಳೂರು | ಮೂಲ, ಪದವಿಭಾಗ, ಅರ್ಥವಿವರಣೆ, ಮೂವರು ಆಚಾರ್ಯರುಗಳ ಭಾಷ್ಯಾರ್ಥಗಳಿಂದಲೂ ಕೂಡಿದೆ; ಡೆಮ್ಮೈ 8°, (೧) ೨೨+೪೮೮; (೨) ೨೦+೨೬೪+೪; (೩) ೨೪+೪೯೬; ೧೯೦೧. |
| ೭೪–೭೬ | ಶ್ರೀಮದ್ಭಗವದ್ಗೀತಾ ರಹಸ್ಯ, ಅಥವಾ ಕರ್ಮಯೋಗ ಶಾಸ್ತ್ರ | ಮೂಲ ಲೇಖಕ.—ಲೋಕಮಾನ್ಯ ಬಾಳಗಂಗಾಧರ ಟಿಳಕ<br>ಭಾಷಾಂತರಕಾರರು.—ವೆಂಕಟೇಶ ಭೀಮರಾವ ಆಲೂರ, ವಾಸುದೇವಾಚಾರ್ಯ ಶ್ರೀನಿವಾಸಾಚಾರ್ಯ ಕೆರೂರ | "ಗೀತೆಯ ಬಹಿರಂಗ ಪರೀಕ್ಷಣ; ಮೂಲ ಸಂಸ್ಕೃತ ಶ್ಲೋಕ (ದೇವನಾಗರಿ ಲಿಪಿ), ಕನ್ನಡ ಭಾಷಾಂತರ, ಅರ್ಥ ನಿರ್ಣಾಯಿಕ ಟಿಪ್ಪಣಿ, ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ಮತಗಳ ತುಲನೆ ಮುಂತಾದುವುಗಳ ಸಹಿತ"; ಡೆಮ್ಮೈ 8°, ೫೧ + ೫೮೫ (ವಿಚಾರ); ೫೯೯ರಿಂದ ೮೫೮ರ ವರೆಗೆ ಮೂಲ (ದೇವನಾಗರಿ ಲಿಪಿ), ಅರ್ಥ, ಟಿಪ್ಪಣಿ; ೧೯೧೯. |
| ೭೭ | ಶ್ರೀಮದ್ಭಗವದ್ಗೀತಾ ಮತ್ತು ಶ್ರೀ ವಿಷ್ಣು ಸಹಸ್ರನಾಮ ಸ್ತೋತ್ರ (ಮೂಲ) | ಮೈಸೂರು ಸೀತಾರಾಮಶಾಸ್ತ್ರಿಗಳು, ಮೈಸೂರು | ಡೆಮ್ಮೈ 16°, ೨೪೪; ೧೯೦೯. |
| ೭೮ | ಸಟೀಕಾ ಉತ್ತರ ಗೀತೆಯು | ವಿಚಾರದರ್ಪಣ ಮುದ್ರಾಕ್ಷರಶಾಲೆ, ಬೆಂಗಳೂರು | ಡೆಮ್ಮೈ 16°; ೧೪೨; ೧೮೮೫. |

| ನಂಬರು | ಪುಸ್ತಕದ ಹೆಸರು | ಲೇಖಕರು, ಸಂಪಾದಕರು, ಇತ್ಯಾದಿ | ಗ್ರಂಥವಿಷಯ ಮೊದಲಾದುವು |
|---|---|---|---|
| ೭೯ | Gita and Gospel .. | J. N. Farquhar, M.A., Pub.—The Christian Literature Society for India, Madras. | Critical Essay, summed up in the words, "What the Jew and the Indian, the Greek and the Roman dreamed of as the unattainable, that Jesus actually accomplished in this work-a-day world of ours"; Cr. 8°, 106 ; 1917. |
| ೮೦ | Hints on the Study of the Bhagavad-Gita | Annie Besant, Madras .. | Theosophical Society Lectures (4) delivered in Dec. 1905; Cr. 8°, 129; 1908. |
| ೮೧ | Sannyasa (Studies in the Bhagavad-Gita) | F. T. Brookes, Madras .. | Cr. 8°, 18+188; 1911. |
| ೮೨ | Kuru Kshetra .. | Do. | A Lecture on the Holy War; Cr. 8°, 52; 1910. |
| ೮೩ | The Gospel of Life, Vol. I | Do. | Essays: An Introduction to the Study of the Bhagavad-Gita and the Upanishads; with a Foreword by Mrs. Annie Besant; F.'cap 8°, 55+337; 1910. |

## ೩. ವೇದಗಳು

| ನಂಬರು | ಪುಸ್ತಕದ ಹೆಸರು | ಲೇಖಕರು, ಸಂಪಾದಕರು, ಇತ್ಯಾದಿ | ಗ್ರಂಥವಿಷಯ ಮೊದಲಾದುವು |
|---|---|---|---|
| ೮೪ | ಋಗ್ವೇದ ಸನ್ಮಾರ್ಥ್ಯರ್ಥ ವಿಚಾರ | ದೊಡ್ಡಬೆಲೆ ನಾರಾಯಣ ಶಾಸ್ತ್ರಿಗಳು, ಬೆಂಗಳೂರು | ಡೆಮ್ಮಿ 8°, ೧೭೭; ೧೯೧೨. |
| ೮೫ | Sandhyavandanam of Rig, Yajus and Sama Vedins | B. V. Kameswara Aiyar, M.A., Madras | With a literal translation, explanation and commentary; Cr. 8°, 132; 1898. |
| ೮೬–೮೭ | The Hymns of the Rigveda (Vols. I, II.) | Ralph T. H. Griffith, M.A., C.I.E., Benares | "Translated with a Popular Commentary"; Cr. 8°, (1) 16+707; (2) pp. 672; 1896. |
| ೮೮ | The Texts of the White Yajurveda | Do. | "Translated with a Popular Commentary"; Cr. 8°, 20+345; 1899. |
| ೮೯ | The Hymns of the Samaveda | Do. | "Translated with a Popular Commentary"; Cr. 8°, 5+338+37; 1907. |
| ೯೦–೯೧ | The Hymns of the Atharvaveda, Vols. I & II | Do. | "Translated with a Popular Commentary"; Cr. 8°, (1) 18+521, (2) pp. 484; 1916. |
| ೯೨ | The Message of the Vedas | Gokul Chand, M.A., Lahore | Hymns in Devanagari characters, Cr. 8°, 45+248; 1906. |

## ೪. ಉಪನಿಷತ್ತುಗಳು

| ನಂಬರು | ಪುಸ್ತಕದ ಹೆಸರು | ಲೇಖಕರು, ಸಂಪಾದಕರು, ಇತ್ಯಾದಿ | ಗ್ರಂಥವಿಷಯ ಮೊದಲಾದುವು |
|---|---|---|---|
| ೯೩ | ಶ್ರೀಮದ್ವಶೋಪನಿಷದಃ .. | ಪರಿಷ್ಕಾರಕರ್ತರು.—ದೊಡ್ಡಬೆಲೆ ನಾರಾಯಣಶಾಸ್ತ್ರಿಗಳು, ಬೆಂಗಳೂರು | ಡೆಮ್ಮಿ 8°, ೨೩೩; ೧೯೧೨. |

| ನಂಬರು | ಪುಸ್ತಕದ ಹೆಸರು | ಲೇಖಕರು, ಸಂಪಾದಕರು, ಇತ್ಯಾದಿ | ಗ್ರಂಥವಿಷಯ ಮೊದಲಾದುವು |
|---|---|---|---|
| ೯೪ | ಕಠೋಪನಿಷತ್ ; ಈಶಾವಾಸ್ಯ, ಕೇನ, ಕಠ—ಉಪನಿಷತ್ತಾತ್ಪರ್ಯ ಸಾರ | ಪರಿಷ್ಕಾರಕರು.—ದೊಡ್ಡಬೆಲೆ ನಾರಾಯಣ ಶಾಸ್ತ್ರಿಗಳು, ಬೆಂಗಳೂರು | ಡೆಮ್ಮೈ 8°, ೧೯೦; ೧೯೧೭. |
| ೯೫ | ದಶೋಪನಿಷದಃ (ತೆಲುಗು) . . | ಪರಿಷ್ಕಾರಕರು.—ಶಾತ್ತನೂರು ಕಲ್ಯಾಣ ಸುಂದರ ಶಾಸ್ತ್ರಿಗಳು, ಮದರಾಸು | ಶ್ರೀ ಭಗವದ್ಗೀತಾ ಬ್ರಹ್ಮ ಸೂತ್ರ ಸಹಿತಾಃ ; ಡೆಮ್ಮೈ 8°, ೧೯೨+೭೦ ; ೧೯೦೩. |
| ೯೬ | ಆತ್ಮಬೋಧೋಪನಿಷತ್ತು (ತೆಲುಗು) | ಪ್ರಕಾಶಕರು.—ವಾವಿಳ್ಳ ರಾಮಸ್ವಾಮಿ ಶಾಸ್ತ್ರುಲು, ಮದರಾಸು | ಆಂಧ್ರ ತಾತ್ಪರ್ಯ ಸಹಿತ; ಫೂ॥ 16°, ೩೧; ೧೯೨೫. |
| ೯೭ | Upanishads—Part I (Sacred Books of the East, Vol. I) | Editor.—F. Max Müller, Oxford | Demy 8°, 101+320; 1900. |
| ೯೮ | The Twelve Principal Upanishads | Publisher.—Rajaram Tukaram Tatya, Bombay | English translation, with notes ; Demy 8°, 9+710 ; 1906. |
| ೯೯ | The Upanishads (9) .. | Translator.—Dr. E. Roer<br>Editor.—Manmatha Nath Dutt (Shastri), M.A., Calcutta | Demy 8°, 9+200. |
| ೧೦೦ | The Upanishads—Aitareya and Taittiriya | Translator.—S. Sitarama Sastri, B.A.<br>Publisher.—V.C. Seshacharri, B.A., B.L., M.R.A.S., Madras | With Sri Sankara's Commentary; Cr. 8°, 192 ; 1923. |
| ೧೦೧ | Vidyaranya's Introduction to the Study of Upanishads | A. Mahadeva Sastri, B.A., Mysore | Cr. 8°, 72 ; 1899. |
| ೧೦೨ | Taittiriya Upanishad .. | Swami Sharvananda, Madras .. | With Sanskrit Text, Paraphrase, English rendering and comments ; Cr. 8°, 134 ; 1921. |
| ೧೦೩ | The Taittiriya Upanishad .. | Translator.—A. Mahadeva-Sastri, B.A., Mysore | With the commentaries of Sankara, Suresvara and Sayana ; Cr. 8°, 24+791 ; 1903. |
| ೧೦೪ | Mundaka and Mandukya Upanishads | Swami Sharvananda, Madras .. | With Sanskrit Text, Paraphrase, English rendering and comments; Cr. 8°, 72+19 ; 1920. |
| ೧೦೫ | The Mandukyopanishad .. | Translator.—Manilal N. Dvivedi, Baroda | With Gaudapada's Karikas and Sankara's Bhashya ; Demy 8°, 46+137+5 ; 1909. |
| ೧೦೬ | Chhandogya Upanishad .. | Publisher.—V.C. Seshacharri, B.A., B.L., M.R.A.S., Madras | Sanskrit Text, with Sankara's Commentary ; Cr. 8°, 309 ; 1923. |
| ೧೦೭ | Prasna Upanishad .. | Swami Sharvananda, Madras .. | With Sanskrit Text, Paraphrase, English rendering and comments ; Cr. 8°, 75 ; 1918. |
| ೧೦೮ | Brhadaranyakopanishad (Part I) | Translator.—M. Hiriyanna, M.A., Mysore | With Sankara's Commentary ; Cr. 8°, 20+123 ; 1919. |
| ೧೦೯ | Isavasyopanishad .. | Do. do. .. | With Sankara's Commentary ; Cr. 8°, 5+33 ; 1911. |

| ನಂಬರು | ಪುಸ್ತಕದ ಹೆಸರು | ಲೇಖಕರು, ಸಂಪಾದಕರು, ಇತ್ಯಾದಿ | ಗ್ರಂಥವಿಷಯ ಮೊದಲಾದುವು |
|---|---|---|---|
| ೧೧೦ | Kenopanishad .. | Translator.—M. Hiriyanna, M.A., Mysore | With Sankara's Commentary; Cr. 8°, 8+65; 1912. |
| ೧೧೧ | Kathakopanishad .. | Do. do. | With Sankara's Commentary; Cr. 8°, 16+137; 1915. |
| ೧೧೨ | Amritabindu and Kaivalya Upanishads .. | Translator.—A. Mahadeva Sastri, B.A., Mysore | Sanskrit Text and Commentaries; F.'cap, 8°, 16+16+94; 1898. |
| ೧೧೩–೧೧೪ | The Minor Upanishads (Parts I & II) | Pub.—Advaita Ashrama, Mayavati | With Sanskrit Text, Introduction, English rendering and comments; Cr. 8°, (1) 67, (2) 57; 1913, 1917. |
| ೧೧೫ | The Wisdom of the Upanishads | Annie Besant, Madras | Four Theosophical Society Lectures, 1906; Cr. 8°, 6+96; 1919. |

## ೫. ವೇದಾಂತ

| ನಂಬರು | ಪುಸ್ತಕದ ಹೆಸರು | ಲೇಖಕರು, ಸಂಪಾದಕರು, ಇತ್ಯಾದಿ | ಗ್ರಂಥವಿಷಯ ಮೊದಲಾದುವು |
|---|---|---|---|
| ೧೧೬ | ಶ್ರೀಮದ್ವೇದಾಂತ ಪಂಚದಶಿಯು | ಶ್ರೀಮದ್ವಿದ್ಯಾರಣ್ಯಮುನಿ ಕೃತ; ಸಹಜಾನಂದ ಸ್ವಾಮಿಗಳು, ಬೆಂಗಳೂರು | ಕನ್ನಡ ಟೀಕಾ ತಾತ್ಪರ್ಯ ಸಹಿತ: ಡೆಮ್ಮೈ 4°, ೧೪+೬೯೧. |
| ೧೧೭ | ವಿಚಾರಸಾಗರ .. | ಸಾಧು ನಿಶ್ಚಲ ದಾಸಜಿಯವರ ಹಿಂದೀ ಗ್ರಂಥ; ಕನ್ನಡಿಸಿದವರು.—ವೇಲೂರು ಜಯಕೃಷ್ಣ ಮೊದಲಿಯಾರರು, ಹುಬ್ಬಳ್ಳಿ | ವೇದಾಂತಸಾರ ಸಂಗ್ರಹ; ರಾಯಲ್ 8°, ೩೬+೪೦೦; ೧೮೯೬. |
| ೧೧೮ | ವಿಚಾರಸಾಗರ .. | ಸಾಧು ನಿಶ್ಚಲ ದಾಸಜಿಯವರ ಹಿಂದೀ ಗ್ರಂಥ; ಕನ್ನಡಿಸಿದವರು.—ಭೀಮಾಚಾರ್ಯ ಸುಬ್ರಹ್ಮಣ್ಯಾಚಾರ್ಯ, ಕಿತ್ತೂರ | ಹಿಂದೀ ಮೂಲ ಸಹಿತ; ಡೆಮ್ಮೈ 8°, ೬೭೫; ೧೯೧೭. |
| ೧೧೯ | ಕರ್ಣಾಟಕವೃತ್ತಿ ಪ್ರಭಾಕರಂ .. | ಶ್ರೀ ಸಚ್ಚಿದಾನಂದ ಸಹಜಾನಂದ ಭಾರತೀ ಸ್ವಾಮಿ, ಮೈಸೂರು | ರಾಯಲ್ 8°, ೨೩+೪೭೨; ೧೯೧೪. |
| ೧೨೦ | ವೇದಾಂತಯುಕ್ತಿ ಪ್ರಕಾಶ .. | ಹಿಂದೀ ಗ್ರಂಥದ ಕನ್ನಡ ಭಾಷಾಂತರಕಾರರು.—ಶಿವಾನಂದ ಸುಬ್ರಹ್ಮಣ್ಯ, ಮೈಸೂರು | ಡೆಮ್ಮೈ 8°, ೧೦+೧೮೨; ೧೯೨೨. |
| ೧೨೧ | ಸಿದ್ಧಾಂತ ಬಿಂದು ಪ್ರಕಾಶ (ಅದ್ವೈತ ಸಿದ್ಧಾಂತ) | ಆದಿ ಶಂಕರಾಚಾರ್ಯ ವಿರಚಿತ; ಕನ್ನಡ ಭಾಷಾಂತರಕಾರರು.—ಶಿವಾನಂದ ಸುಬ್ರಹ್ಮಣ್ಯ, ಮೈಸೂರು | ಡೆಮ್ಮೈ 8°, ೧೯೬; ೧೯೧೦. |
| ೧೨೨ | ವೇದಾಂತ ಮುಕ್ತಿಮಾರ್ಗ ಪ್ರದೀಪಿಕೆ | ಮೈಸೂರು ವೇದಾಂತ ಶಿವರಾಮಶಾಸ್ತ್ರಿಗಳು, ಬೆಂಗಳೂರು | ಸಂಸ್ಕೃತ ಮೂಲ, ಕನ್ನಡ ಟೀಕೆ, ಡೆಮ್ಮೈ 8°, ೯೬; ೧೯೨೨. |
| ೧೨೩ | ಅಧ್ಯಾತ್ಮ ವಿಚಾರ .. | ಹಳಿಗೇರಿ ಕೃಷ್ಣರಾಯರು, ಮಂಗಳೂರು | ಡೆಮ್ಮೈ 8°, ೧೪+೨೪೨; ೧೯೦೯. |
| ೧೨೪ | ಶ್ರೀ ವಿಚಾರದೀಪಿಕ .. | ಕನ್ನಡಿಸಿದವರು.—ಶಿವಾನಂದ ಸುಬ್ರಹ್ಮಣ್ಯ, ಮೈಸೂರು | ಸಂಸ್ಕೃತ ಮೂಲ, ಕನ್ನಡ ಟೀಕೆ; ಡೆಮ್ಮೈ 8°, ೧೭+೨೧೪; ೧೯೦೨. |

| ನಂಬರು | ಪುಸ್ತಕದ ಹೆಸರು | ಲೇಖಕರು, ಸಂಪಾದಕರು, ಇತ್ಯಾದಿ | ಗ್ರಂಥ ವಿಷಯ ಮೊದಲಾದುವು |
|---|---|---|---|
| ೧೨೫ | ವಿಜ್ಞಾನ ನೌಕಾ .. | ಶ್ರೀಮಚ್ಛಂಕರ ಭಗವತ್ಪಾದಾಚಾರ್ಯ ವಿರಚಿತ; ಕನ್ನಡಿಸಿದವರು.—ಶಿವಾನಂದ ಸುಬ್ರಹ್ಮಣ್ಯ, ಮೈಸೂರು | ಸಂಸ್ಕೃತ ಮೂಲ, ಕನ್ನಡ ಟೀಕೆ; ಡೆಮ್ಮೈ 8°, ೪+೨೦೦ ; ೧೯೨೨. |
| ೧೨೬ | ಜೀವನ್ಮುಕ್ತಿ ವಿವೇಕ .. | ವಿದ್ಯಾರಣ್ಯ ವಿರಚಿತಂ ; ಕನ್ನಡಿಸಿದವರು.—ಹೊಸಕೆರೆ ಚಿದಂಬರಯ್ಯನವರು, ಬೆಂಗಳೂರು | ಡೆಮ್ಮೈ 8°, ೮+೧೩೬ ; ೧೯೧೮. |
| ೧೨೭ | ವಾಸುದೇವ ಮನನ .. | ವಾಸುದೇವಯತಿ ವಿರಚಿತಂ ; ಕನ್ನಡಿಸಿದವರು.—ದೊ॥ ನಾರಾಯಣ ಶರ್ಮ | ಡೆಮ್ಮೈ 8°, ೧೧೭ . |
| ೧೨೮ | ಶ್ರೀವಿಚಾರ ಚಂದ್ರೋದಯ .. | ಶ್ರೀ ಪೀತಾಂಬರಜಿಯವರ ಹಿಂದೀ ಗ್ರಂಥದ ಕನ್ನಡ ಭಾಷಾಂತರ; ಭೀಮಾಚಾರ್ಯ ಸುಬ್ರಹ್ಮಣ್ಯಾಚಾರ್ಯ, ಕಿತ್ತೂರ | ಪೂ॥ 8°, ೮+೩೬೮ ; ೧೯೧೫. |
| ೧೨೯ | ವೇದಾಂತ ಜ್ಞಾನ ರತ್ನ ಪ್ರಭಾ .. | ಮೈಸೂರು ವೇದಾಂತ ಶಿವರಾಮ ಶಾಸ್ತ್ರಿಗಳು, ಬೆಂಗಳೂರು | ಕನ್ನಡ; ಡೆಮ್ಮೈ 8°, ೪೦; ೧೯೧೧. |
| ೧೩೦ | ತತ್ವಾನುಭವ ಪ್ರಕಾಶ .. | ಸ್ವಾಮಿ ಬ್ರಹ್ಮಾನಂದ, ಬೆಂಗಳೂರು | ಕನ್ನಡ; ಡೆಮ್ಮೈ 8°, ೧೭೫. |
| ೧೩೧ | ಪಂಚೀಕರಣ .. | ಕನ್ನಡಿಸಿದವರು.—ಜೀಡರಹಳ್ಳಿ ಸೂರಪ್ಪನವರು | ಡೆಮ್ಮೈ 8°, ೩೯ ; ೧೮೯೨. |
| ೧೩೨ | ಪಂಚೀಕರಣ .. | ಕನ್ನಡಿಸಿದವರು.—ಭೀಮಾಚಾರ್ಯ ಸುಬ್ರಹ್ಮಣ್ಯಾಚಾರ್ಯ, ಕಿತ್ತೂರ | ಕ್ರೌನ್ 8°, ೨೨೭; ೧೯೧೬. |
| ೧೩೩ | ವೇದಾಂತ ದೀಪಿಕೆ .. | ಮೈಸೂರು ಶಿವಾನಂದ ಸುಬ್ರಹ್ಮಣ್ಯ | ಕ್ರೌನ್ 8°, ೭೨; ೧೮೯೬. |
| ೧೩೪ | ಚೂಡಾಲಿ .. | ಕಡಬ ತಿರುಮಲಾಚಾರ್ಯ | ಕನ್ನಡ ಗದ್ಯ; ಡೆಮ್ಮೈ 8°, ೮೪; ೧೯೧೩. |
| ೧೩೫ | ಶ್ರೀ ಗೌಡಪಾದೀಯ ಕಾರಿಕೆ (ವೈತಥ್ಯ ಪ್ರಕರಣ) | ಕನ್ನಡಿಸಿದವರು.—ವೈ. ಸುಬ್ಬರಾಯರು, ಬೆಂಗಳೂರು | ಡೆಮ್ಮೈ 8°, ೮+೬೬; ೧೯೨೩. |
| ೧೩೬ | ಅಧ್ಯಾತ್ಮ ರಾಮಾಯಣ .. | ಭಾಗವತ ಕೃಷ್ಣ, ಮೈಸೂರು | ಕನ್ನಡ ಟೀಕಾ ತಾತ್ಪರ್ಯ ಸಹಿತ; ಡೆಮ್ಮೈ 8°, ೬೫೬+೧೨೮. |
| ೧೩೭ | ವೇದಾಂತ ತತ್ತ್ವಬೋಧೆ .. | ಪ್ರಕಾಶಕರು.—ವೈದಿಕ ಧರ್ಮ ಸಭಾ | ಪ್ರಶ್ನೋತ್ತರ, ಸಂಸ್ಕೃತ—ಕನ್ನಡ; ಕ್ರೌನ್ 8°, ೪೦; ೧೯೧೫. |
| ೧೩೮ | ಜೀವನ್ಮುಕ್ತಿ ಗೀತಾ .. | ಶ್ರೀಮಚ್ಛಂಕರಾಚಾರ್ಯ ಕೃತ; ಶಿವಾನಂದ ಸುಬ್ರಹ್ಮಣ್ಯ ರಚಿತ | ಸಟೀಕಾ; ಡೆಮ್ಮೈ 16°, ೬೪; ೧೯೦೪. |
| ೧೩೯ | ಆತ್ಮಬೋಧ ಪ್ರಕರಣಂ .. | ಶ್ರೀ ಶಂಕರಾನಂದರು ; ಕನ್ನಡಿಸಿದವರು.—ವೇದಾಂತ ಸುಬ್ಬಯ್ಯನವರು, ಮೈಸೂರು | ಸಂಸ್ಕೃತ ಮೂಲ, ಕನ್ನಡ ತಾತ್ಪರ್ಯ; ಪೂ॥ 8°, ೫೨. |
| ೧೪೦ | ಸಟೀಕಾ ಅನುಭವ ಸಾರ .. | ಶ್ರೀಮನ್ನಿಜಗುಣ ಶಿವಯೋಗಿ ವಿರಚಿತಂ; ಕೆ. ಯಂ. ಕರಿಬಸವ ಶಾಸ್ತ್ರಿಗಳಿಂದ | ಕನ್ನಡ ಟೀಕಾ ತಾತ್ಪರ್ಯ ಸಹಿತ; ಡೆಮ್ಮೈ 8°, ೧೧೫ ; ೧೯೦೬. |

| ನಂಬರು | ಪುಸ್ತಕದ ಹೆಸರು | ಲೇಖಕರು, ಸಂಪಾದಕರು, ಇತ್ಯಾದಿ | ಗ್ರಂಥ ವಿಷಯ ಮೊದಲಾದುವು |
|---|---|---|---|
| ೧೪೧ | ಅನುಭವಾಮೃತ .. | ಮಹಲಿಂಗ ರಂಗ ಪರಮಹಂಸ ವಿರಚಿತಂ: ತಿರುಮಲೆ ಶ್ರೀನಿವಾಸಾಚಾರ್ಯರು, ಬೆಂಗಳೂರು | ಟೀಕಾ ತಾತ್ಪರ್ಯ ಸಹಿತ; ಡೆಮ್ಮೈ ೮°, ೨೮೨; ೧೮೭೪. |
| ೧೪೨ | ಪರಮಾರ್ಥ ಗೀತೆ .. | ಶ್ರೀ ನಿಜಗುಣಾರಾಧ್ಯ ವಿರಚಿತಂ; ಸಿದ್ಧಾಂತಿ ಸುಬ್ರಹ್ಮಣ್ಯ ಶಾಸ್ತ್ರಿಗಳು | ಟೀಕಾ ತಾತ್ಪರ್ಯ ಸಹಿತ; ಡೆಮ್ಮೈ 8°, ೭೮; ೧೮೭೩. |
| ೧೪೩ | ಶಂಕರಾನಂದ ತತ್ತ್ವ .. | ಮೈಸೂರು ವೇದಾಂತ ಶಿವರಾಮ ಶಾಸ್ತ್ರಿಗಳು, ಬೆಂಗಳೂರು .. | ಕನ್ನಡ ಗೀತಗಳು; ಫೂ। 8°, ೫೯; ೧೯೨೬. |
| ೧೪೪ | ನೈಷ್ಕರ್ಮ್ಯ ಸಿದ್ಧಿ .. | ಶ್ರೀ ಸುರೇಶ್ವರಾಚಾರ್ಯ ಕೃತ; ಶ್ರೀ ನಾಗಪೂಡಿ ಕುಪ್ಪುಸ್ವಾಮಯ್ಯ, ಚೆನ್ನಪುರಿ | ಆಂಧ್ರ ಟೀಕಾ ತಾತ್ಪರ್ಯ ಸಹಿತ· ಡೆಮ್ಮೈ 8°, ೫೦೪; ೧೯೨[illegible]. |
| ೧೪೫ | ಆತ್ಮಬೋಧಮು (ತೆಲುಗು) .. | ಶ್ರೀ ಪ್ರಜ್ಞಾನಂದ ಘನೇಂದ್ರಸ್ವಾಮಿ | ಆಂಧ್ರ ಟೀಕಾ ತಾತ್ಪರ್ಯ ಸಹಿತ, ಫೂ॥ 8°, ೭೨; ೧೯೧೮. |
| ೧೪೬ | ಬ್ರಹ್ಮಸೂತ್ರಮುಲು .. | ವೆನ್ನೆಲಕಂಟಿ ಸುಂದರರಾಮ ಶರ್ಮ, ಚೆನ್ನಪುರಿ | ಆಂಧ್ರ ಟೀಕಾ ತಾತ್ಪರ್ಯ ಸಹಿತ; ಡೆಮ್ಮೈ 8°, ೨೮+೪೪೮, ೧೯೧೭. |
| ೧೪೭ | ಆತ್ಮ ಪೂಜ .. | ಶ್ರೀಮಚ್ಛಂಕರಾಚಾರ್ಯ ಕೃತ | ಆಂಧ್ರ ಟೀಕಾ ತಾತ್ಪರ್ಯ ಸಹಿತ; ಕ್ರೌ॥ 16°, ೧೯; ೧೯೨೫. |
| ೧೪೮ | ಅದ್ವೈತೋಪದೇಶ ಪಂಚರತ್ನಮು | ಡಿಟ್ಟೊ. | ಆಂಧ್ರ ಟೀಕಾ ತಾತ್ಪರ್ಯ ಸಹಿತ; ಕ್ರೌ॥ 16°, ೫೯; ೧೯೧೪. |
| ೧೪೯ | ಉಪದೇಶ ಸಾಹಸ್ರಿ ಮತ್ತು ವಿವೇಕ ಚೂಡಾಮಣಿ | — | (ದೇವನಾಗರಿ ಲಿಪಿ) |
| ೧೫೦ | Science of the Conquest of Mind | Translator.—K. R. Ayyar, B.A.. Madras | Cr. 8°, 12+12 ; 1925. |
| ೧೫೧ | The Advaitasiddhi of Madhusudana Sarasvati (Vol. I, Part I) | Translator.— Ganganatha Jha, M.A., D.Litt., Allahabad | Royal 8°, 530 ; 1917. |
| ೧೫೨ | Jivanmukti-Viveka .. | Swami Sri Vidyaranya Sarasvati; Translator—Manilal N. Dvivedi, B.A. | Demy 8°, 13+204 ; 1897. |
| ೧೫೩ | Vedanta Sutras (Sacred Books of the East, Vol. XXXIV) | F. Max Müller, Oxford .. | With Sankara's Bhashya; Demy 8°, 128+448; 1890. |
| ೧೫೪ | The Secret of the Vedanta (Part I) | English Translation by K. R. Aiyar, B.A., of Sri Sachithananda Yogeswarar's work in Tamil | "The Identity of Jiva and Brahma"; Cr. 8°, 40+498; 1925. |
| ೧೫೫ | Aspects of the Vedanta | M. Vythinatha Aiyar, M.A. G. A. Natesan & Co., Madras | A Lecture delivered at Madras; Cr. 8°, 1-24 and "Veda and the Vedanta" of F. Max Müller, from "India: What can it teach us?" pp. 25-188. |

